ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಜೆ.ಹೆಚ್. ಪಟೇಲ್

*ಲೇಖನ ಮತ್ತು ಸಂಗ್ರಹ:*
ಶೇಷಣ್ಣಾ

*ಪ್ರಕಟಣೆ:*
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನ ಸೌಧ, ಬೆಂಗಳೂರು - 560 001

**J.H. PATEL** Prathibhavantha Sumsadiya Patugala Baduku Baraha Malike (Eminent Parliamentarian Series) written by **Seshanna** (S.K. Sesha Chandrika), Journalist, Published by Karnataka Legislature Library Committee, Vidhana Soudha, Bangalore-1.

Pages - 441+15
Rupees - 30/-



First Edition - October 2004
Number of Copies - 2000



***Printed & Designed by:***
Director,
Government Printing Press, Bangalore

ಜೆ.ಹೆಚ್. ಪಟೇಲ್ ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ: ಲೇಖಕ - ಶೇಷಣ್ಣ (ಎಸ್.ಕೆ. ಶೇಷ ಚಂದ್ರಿಕ), ಪತ್ರಕರ್ತರು; ಪ್ರಕಟಣೆ: ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ, ವಿಧಾನಸೌಧ, ಬೆಂಗಳೂರು

ಪುಟ ಸಂಖ್ಯೆ - **441 + 15**
ಬೆಲೆ ರೂ - **30/-**



ಮೊದಲನೆ ಮುದ್ರಣ - ಅಕ್ಟೋಬರ್ **2004**
ಪ್ರತಿಗಳು - **2000**

ಮುಖಪುಟದ ವಿನ್ಯಾಸ ಮತ್ತು ಮುದ್ರಣ:
ನಿರ್ದೇಶಕರು
ಸರ್ಕಾರಿ ಮುದ್ರಣಾಲಯ, ಬೆಂಗಳೂರು

# ಪ ರಿ ವಿ ಡಿ

ಪುಟ ಸಂಖ್ಯೆ

# ಪೀಠಿಕೆ

ನಾಡಿನ ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹ ಮಾಲಿಕೆಗೆ ಸೇರುತ್ತಿರುವ ಮತ್ತೊಂದು ಕುಸುಮ ಶ್ರೀ ಜೆ.ಹೆಚ್. ಪಟೇಲರನ್ನು ಕುರಿತ ಈ ಪುಸ್ತಕ. ನಾಡಿನ ಸಂಸದೀಯ ಕ್ಷೇತ್ರಕ್ಕೆ ಅಮೋಘ ಸೇವೆ ಸಲ್ಲಿಸಿದ ಮಹನೀಯರಿಗೆ ಕೃತಜ್ಞತೆ ಸಲ್ಲಿಸುವುದು ನಮ್ಮ ಕರ್ತವ್ಯ. ಇದರೊಂದಿಗೆ ಈ ಗಣ್ಯರ ಜೀವನ ಸಂದೇಶ, ದೇಶ ಸೇವೆ, ಜನಹಿತ ಕಾರ್ಯಗಳಲ್ಲಿ ತೊಡಗಿಸಿಕೊಂಡ ಅವರ ಶ್ರದ್ಧೆ, ದಕ್ಷತೆ ಮತ್ತು ಕರ್ತವ್ಯಪ್ರಜ್ಞೆ ಕುರಿತಂತೆ ಇಂದಿನ ಮತ್ತು ಮುಂದಿನ ಜನಾಂಗಕ್ಕೆ ಮಾಹಿತಿ ನೀಡುವುದು ನಮ್ಮ ಹಿರಿಯಾಸೆ.

ಈವರೆಗೆ ಈ ಮಾಲಿಕೆಯಲ್ಲಿ ಅನೇಕ ಮಹನೀಯರನ್ನು ಕುರಿತ ಹೊತ್ತಿಗೆಗಳು ಪ್ರಕಟವಾಗಿವೆ.

ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿಯು ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ವಿಧಾನ ಮಂಡಲದ ಕಲಾಪಗಳ ವರದಿ ಮಾಡುವ ಅನುಭವಿ ಪತ್ರಕರ್ತರನ್ನು ಈ ಮಾಲಿಕೆಗಾಗಿ ಬರೆಯುವಂತೆ ಮನವಿ ಮಾಡಿಕೊಂಡಿತು. ಇದಕ್ಕೆ ಒಳ್ಳೆಯ ಪ್ರತಿಕ್ರಿಯೆ ಸಹಿತ ಸಿಕ್ಕಿದೆ. ಸಂಸದೀಯಪಟುಗಳ ಸೇವೆಯನ್ನು ಸಮೀಪದಿಂದ ವೀಕ್ಷಿಸುವ ವರದಿಗಾರರ ಲೇಖನ ಹೆಚ್ಚು ಪ್ರಭಾವಶಾಲಿ ಮತ್ತು ಆಕರ್ಷಕ ಅಂಶಗಳಿಂದ ಕೂಡಿರುವುದು ಸಹಜ.

ಸಂಸತ್ತು ಮತ್ತು ವಿಧಾನಮಂಡಲದ ಸದಸ್ಯರಾಗಿ ದೇಶಕ್ಕೆ ಹಲವು ವರುಷಗಳ ಸೇವೆ ಸಲ್ಲಿಸಿದವರು ಶ್ರೀ ಜೆ.ಹೆಚ್. ಪಟೇಲರು. ಪಟೇಲರ ಬಗೆಗೆ ಪುಸ್ತಕ ಬರೆಯಲು ವರದಿಗಾರ ಶ್ರೀ ಎಸ್.ಕೆ. ಶೇಷಚಂದ್ರಿಕರವರನ್ನು ನಿಯೋಜಿಸಲಾಯಿತು. ದಿಲ್ಲಿ ಮತ್ತು ಬೆಂಗಳೂರುಗಳಲ್ಲಿ ವರದಿಗಾರರಾಗಿ ಪಾರ್ಲಿಮೆಂಟ್ ಮತ್ತು ವಿಧಾನ ಮಂಡಲಗಳ ಕಲಾಪದ ವರದಿಯ ಅನುಭವ ಪಡೆದ ಇವರನ್ನು ಮಾನ್ಯ ಪಟೇಲರು "ಶೇಷಣ್ಣ" ಎಂದೇ ಆತ್ಮೀಯವಾಗಿ ಕರೆಯುತ್ತಿದ್ದ ಹಿನ್ನೆಲೆಯಲ್ಲಿ, ಲೇಖಕರು ಅದನ್ನೇ ತಮ್ಮ ಕಾವ್ಯನಾಮವಾಗಿ ಬಳಸಿಕೊಂಡಿದ್ದಾರೆ. ಸಂಸದೀಯ ಕಾರ್ಯವಿಧಾನ, ನಡವಳಿಕೆಗಳು, ನಿಯಮಾವಳಿ, ಕಲಾಪಗಳ ಸಮೀಕ್ಷೆ, ವಿಧಿವಿಧಾನಗಳು ಕಾನೂನು ರಚನೆ, ವಿತ್ತೀಯ ಕಲಾಪ - ಇವುಗಳ ಒಳನೋಟವನ್ನೊಳಗೊಂಡ ಈ ಪುಸ್ತಕ ಹೊಸತನದ ಶೈಲಿಯಿಂದ ಕೂಡಿದೆ.

ಶ್ರಮವಹಿಸಿ ಉತ್ತಮ ಕೃತಿ ಹೊರತಂದ ಲೇಖಕರಿಗೆ ಅಭಿನಂದನೆಗಳು.

ಎ.ಆರ್. ಸುದರ್ಶನ್
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಕೃಷ್ಣ
ಸಭಾಧ್ಯಕ್ಷರು
ಕರ್ನಾಟಕ ವಿಧಾನಸಭೆ

ಬೆಂಗಳೂರು
1ನೇ ಅಕ್ಟೋಬರ್ 2004

# ಅರಿಕೆ

ರಾಷ್ಟ್ರ ಮತ್ತು ಕರ್ನಾಟಕದ ರಾಜಕಾರಣದಲ್ಲಿ ನಾಲ್ಕು ದಶಕಗಳಿಗೂ ಹೆಚ್ಚು ಕಾಲ ಎದ್ದು ಕಾಣುವ ಸೇವೆಸಲ್ಲಿಸಿದವರು ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಕಾರಿಗನೂರಿನ ಶ್ರೀ ಜಯದೇವಪ್ಪ ಹಾಲಪ್ಪ ಪಟೇಲ. 1960 ರಿಂದ 2001 ರವರೆಗೆ ನಾಡು ಕಂಡ ಅಪರೂಪದ ಬಹು ಪ್ರತಿಭೆಯ ರಾಜಕಾರಣಿ ಇವರು. "ಜೆ.ಹೆಚ್." ಮೊದಲಕ್ಷರಗಳೊಂದಿಗೆ ಸಮಾಜ ಇವರನ್ನು ಸಮಾಜವಾದಿ ಪಟೇಲ್ ಎಂಬ ಅನ್ವರ್ಥನಾಮದಿಂದಲೇ ಕರೆಯಿತು.

ಆರು, ಏಳು, ಎಂಟು ಮತ್ತು ಹತ್ತನೆಯ ಕರ್ನಾಟಕ ವಿಧಾನಸಭೆಯ ಸದಸ್ಯರಾಗಿ ಜನಮತ ಇವರನ್ನು ಆರಿಸುವುದಕ್ಕೂ ಮುನ್ನ ನಾಲ್ಕನೆಯ ಲೋಕಸಭೆ ಸದಸ್ಯರಾಗಿ ಶಿವಮೊಗ್ಗ ಕ್ಷೇತ್ರವನ್ನು ಪ್ರತಿನಿಧಿಸಿ ಸಂಸತ್ತಿನ ಕಲಾಪಗಳ ಅನುಭವ ಗಳಿಸಿ ಬಂದವರು ಪಟೇಲರು. ಚುನಾವಣೆಗಳಲ್ಲಿ ಇವರಿಗೆ ಗೆಲುವಿಗಿಂತ, ಸೋತ ಅನುಭವವೇ ಹೆಚ್ಚು. ಜನರಾಡುವ ಭಾಷೆಯಲ್ಲಿ ಸರ್ಕಾರದ ಆಡಳಿತ ನಡೆದಲ್ಲಿ ಮಾತ್ರ ಪ್ರಜಾತಂತ್ರ ಅರ್ಥಪೂರ್ಣ ಎನ್ನುವ ದಿಟ್ಟಹೆಜ್ಜೆ ಇಟ್ಟವರು ಇವರು.

ಸಂಸದೀಯ ವೇದಿಕೆಯಲ್ಲಿ ಪಟೇಲರ ಸಮಕಾಲೀನರು ಮತ್ತು ಸ್ವತಃ ಪಟೇಲರು ಆಡಿದ ಮಾತುಗಳನ್ನು ಆಯ್ದು ಅವರ ಚಿಂತನೆಯನ್ನು ಪರಿಚಯಿಸುವುದು - ಈ ಸಮೀಕ್ಷೆಯ ಉದ್ದೇಶ. ಸಂಸದೀಯ ಕಲಾಪಗಳ ವರದಿಯೇ ಕ್ಲಿಷ್ಟತಮ. ಇದನ್ನು ಸಂಗ್ರಹಿಸಿ ಸಮೀಕ್ಷಿಸುವುದಂತೂ ಮತ್ತಷ್ಟು ಕಠಿಣ. ಹೀಗಾಗಿ ಪಟೇಲರ ಕಾಲದ ಹಲವಾರು ಘಟನೆ ಮತ್ತು ಕಲಾಪಗಳನ್ನು ಪುಸ್ತಕದಲ್ಲಿ ಅಳವಡಿಸಿಕೊಳ್ಳಲಾಗಿಲ್ಲ.

## "ಬದುಕು - ಬರಹ" ಮಾಲಿಕೆ

ಸಂವಿಧಾನದ ಆದೇಶದಂತೆ ನಮ್ಮ ದೇಶದ ಎಲ್ಲ ಸಂಸದೀಯ ಕಲಾಪಗಳೂ ಅಧಿಕೃತ ದಾಖಲೆಯಾಗುತ್ತವೆ. ಪ್ರಜಾತಂತ್ರ ವ್ಯವಸ್ಥೆಯ ಆಯಾಕಾಲದ ಮೌಲ್ಯಾಂಕನಕ್ಕೆ ಇದೇ ಮಾಹಿತಿ (data). ದಾಖಲೆ ಎಂದು ಈ ಕಲಾಪಗಳನ್ನು ಇತಿಹಾಸದ ಪುಟಗಳಿಗೆ ಸೇರಿಸಿದ ಮಾತ್ರಕ್ಕೆ ನಮ್ಮ ಜವಾಬ್ದಾರಿ ಮುಗಿಯುವುದಿಲ್ಲ.

ಪಟೇಲರನ್ನು ಕುರಿತು ಗ್ರಂಥ-ಸಮೀಕ್ಷೆ ಬರೆದ ಹಿನ್ನೆಲೆಯಲ್ಲಿ ನಮ್ಮ ಶಾಸಕರಿಗೆ, ಅದರಲ್ಲಿಯೂ ಮುಖ್ಯವಾಗಿ ಯುವಪೀಳಿಗೆಯ ಜನನಾಯಕರಿಗೆ ಅತ್ಯಂತ ವಿನಯದಿಂದ ಸಲಹೆಯೊಂದನ್ನು ತಿಳಿಸಬಯಸುತ್ತೇನೆ.

ನೀವು ಇತಿಹಾಸದ ಮೈಲಿಗಲ್ಲು. ಸಂಸದೀಯ ಪರಿಶ್ರಮ ಆರಂಭಿಸುವ ಮುನ್ನ ಹಿಂದಿನ ಕಲಾಪಗಳನ್ನು ಪರಿಚಯಿಸಿಕೊಳ್ಳಿ. ಪ್ರತಿ ಅಧಿವೇಶನದ ಪೂರ್ವದಲ್ಲಿ, ಆಯಾ ಸಂದರ್ಭದ ಕಲಾಪಗಳ ಕಾರ್ಯಸೂಚಿಗೆ ಅನ್ವಯಿಸಿದಂತೆ ಹಿಂದಿನ ಸದನಗಳ ಫ್ಲಾಷ್‌ಬ್ಯಾಕ್ ಸಿಗುತ್ತದೆ. ಹಿಂದಿನ ಶಾಸಕರ ಅನುಕರಣೀಯ ಅನುಭವದ ಹೆಜ್ಜೆಗಳನ್ನು ಗುರುತಿಸಿ. ಸುಂದರ ಸಮಾಜ ರಚಿಸಲು ಸ್ಫೂರ್ತಿ, ಮಾರ್ಗದರ್ಶನ, ತಪ್ಪು-ಒಪ್ಪುಗಳ ಸರಿ ಹೆಜ್ಜೆ ನಿಮಗೆ ಇಲ್ಲಿ ಕಾಣುತ್ತದೆ. ಆದರ್ಶ ಶಾಸಕರಾಗುವ ಅವಕಾಶ ಇಲ್ಲಿದೆ. ಕಡ್ಡಾಯವಾಗಿ ಸಂಶೋಧನಾ ವಿಭಾಗವನ್ನು ಸಂದರ್ಶಿಸುವ ಸಂಪ್ರದಾಯ ಬೆಳೆಸಿ.

ಹಿರಿಯ ಶಾಸಕರುಗಳು ಸಹಿತ, ಸಮಯಾಭಾವದಿಂದ, ಇತ್ತೀಚಿನ ವರುಷಗಳಲ್ಲಿ ಸಂಶೋಧನಾ ವಿಭಾಗವನ್ನು ಸಂದರ್ಶಿಸುವುದು ಕಡಿಮೆಯಾಗಿದೆ. ನಿಮ್ಮ ಅನುಭವ ನಾಡಿಗೆ ಅಮೃತವಾಗಲಿ.

ಅನುಭವಿಗಳ ಮಾರ್ಗದರ್ಶನ ನಾಡಿಗೆ ಸಿಗಲಿ ಎನ್ನುವ ಹಿರಿಯಾಸೆಯಿಂದ ಸನ್ಮಾನ್ಯ ಸಭಾಪತಿ ಮತ್ತು ಸನ್ಮಾನ್ಯ ಸಭಾಧ್ಯಕ್ಷರು ಪ್ರತಿಭಾವಂತ ಸಂಸದೀಯಪಟುಗಳ ಬದುಕು-ಬರಹ ಮಾಲಿಕೆಯನ್ನು ಹೊರತರುತ್ತಿರುವುದು ಸ್ತುತ್ಯಾರ್ಹ.

## ಕನಸುಗಾರ ಪಟೇಲರ ಬದುಕು

ಪುಸ್ತಕದ ಒಂದೆರಡು ಅಂಶಗಳನ್ನು ಪರಿವಿಡಿಯಲ್ಲಿ ಪ್ರಸ್ತಾಪಿಸಿ ಪಟೇಲರ ನಡೆ - ನುಡಿಯ ವಿಶೇಷಣಗಳನ್ನು ತಿಳಿಸುವ ಅಭಿಲಾಷೆ ನಮ್ಮದು.

ಸಮಾಜವಾದ ಪಟೇಲರ ಕನಸು. ತಮ್ಮ ಜೀವಿತ ಕಾಲದ ಸಮಾಜದಲ್ಲಿ ಈ ಚಿಂತನೆ ಸುಲಭವಾಗಿ ನನಸಾಗುವುದಿಲ್ಲವೆಂಬ ವಾಸ್ತವ ಪ್ರಜ್ಞೆ ಇವರಿಗಿತ್ತು. ಇಷ್ಟಿದ್ದರೂ ತಾವು ಪೋಷಿಸಿಕೊಂಡು ಬಂದ ಸಮಾಜವಾದವನ್ನು ಜನಮನದಲ್ಲಿ ಬಿತ್ತಬೇಕೆಂಬ ಪ್ರಾಮಾಣಿಕ ಪ್ರೇರಣೆ (genuine impulse) ಇವರಲ್ಲಿ ಸದಾಕಾಲ ಜಾಗೃತವಾಗಿತ್ತು.

ದೇವರಾಜ ಅರಸರು ಮತ್ತು ಗುಂಡೂರಾಯರಂತಹ ಮುಖ್ಯಮಂತ್ರಿಗಳೊಂದಿಗೆ ಪಟೇಲರು ನಡೆಸುತ್ತಿದ್ದ ಸಂವಾದದ ಕೆಲವು ನೆನಪನ್ನು ಇಲ್ಲಿ ತರಲಾಗಿದೆ. ಹೋಲಿಕೆ ಇದರ ಉದ್ದೇಶವಲ್ಲ. ಜನನಾಯಕನಾಗಿ ಪಟೇಲರಲ್ಲಿದ್ದ ಒಂದೆರಡು ಅಪೂರ್ವ ಗುಣಗಳನ್ನು ಒತ್ತಿ ಹೇಳುವುದೇ ಇದರ ಗುರಿ.

ಇತರರಿಗೆ ತಾವು ಮಾಡಿದ ಉಪಕಾರವನ್ನು ಸ್ಮರಿಸಲು ಪಟೇಲರು ಎಂದೆಂದೂ ಸಂಸದೀಯ ವೇದಿಕೆಯನ್ನು ಬಳಸಲಿಲ್ಲ. ಅಂತೆಯೇ ಕರ್ತವ್ಯ ನಿರ್ವಹಣೆಯಲ್ಲಿ ವಿನಯ ತೋರಿದವರು, ಕೀರ್ತಿಶನಿಯನ್ನು ದೂರವಿಟ್ಟವರು, ಸಾಧ್ಯವಿದ್ದಷ್ಟು ಇತರರನ್ನು ಹಳಿಯದವರು ಎಲ್ಲಕ್ಕಿಂತ ಮಿಗಿಲಾಗಿ ರಾಜಕಾರಣದಲ್ಲಿ ವೈಷಮ್ಯವನ್ನು ಮರೆಯಲು ಅರಿತ ಸದ್ಗುಣಿ.

ಕೊನೆಯದಾಗಿ - ಸಮೀಕ್ಷೆಯುದ್ದಕ್ಕೂ ಹರಿಯುವ ಹಾಸ್ಯಪ್ರಜ್ಞೆ. ಜೀವ ತುಂಬಿದ ಇವರ ಸರಸದಲ್ಲಿ, ನವಿರು ಹಾಸ್ಯದಲ್ಲಿ ಪ್ರತಿಪಕ್ಷವನ್ನು ಗೌರವದಿಂದ ಕಾಣುವ ಮತ್ತು ಶಾಸಕರನ್ನು ಪ್ರೀತಿಯಿಂದ ನೋಡುವ ಯುಕ್ತತೆ ಇತ್ತು. ಸರ್ವಜ್ಞ ಹೇಳಿದಂತೆ "ಸರಸನಿಂದೆ" ಮಾಡದ ಸಂಯಮ; ದಾಸರು ಎಚ್ಚರಿಸುವ "ಪರರ ದೋಷಗಳೆಣಿಸಿ ನಗದಿರುವ" ತಿಳುವಳಿಕೆ ಮತ್ತು ಶರಣರು ಅರುಹಿದ "ಅಡಿ ಅಳುಪದ" ಸಂಸದೀಯ ಹಿರಿತನ ಪಟೇಲರಲ್ಲಿತ್ತು.

## ದಾಖಲೆಗಳ ಕೊರತೆ

ಗ್ರಂಥ ತಯಾರಿಕೆ ತಡವಾಗಿದೆ. ಮನ್ನಿಸಿ. ಉಭಯ ಸದನಗಳ ಕಲಾಪದ ಅವಲೋಕನ, ಸಂಗ್ರಹ ಮತ್ತು ವಿಷಯಕ್ಕೆ ಅನುಗುಣವಾಗಿ ಕಲಾಪಗಳ ಜೋಡಣೆಗೆ ಸುಮಾರು ಒಂದೂವರೆ ವರ್ಷ ಹಿಡಿಸಿತು. ಕಲಾಪದ ಕೆಲವು ಅಧಿಕೃತ ವರದಿಗಳು ಇನ್ನೂ ಸಿಕ್ಕಿಲ್ಲ. ಉದಾಹರಣೆಗೆ: ಆಡಳಿತದ ಸುವ್ಯವಸ್ಥೆ ಸಲುವಾಗಿ ಪಟೇಲರು ಹೊಸದಾಗಿ ಏಳು ಜಿಲ್ಲೆಗಳ ರಚನೆಗೆ ಶ್ರಮಿಸಿದ

ದಾಖಲೆಗಳು ಸಿಗಲಿಲ್ಲ. ಹಳೆಯ ಕಡತಗಳನ್ನು ವಾಪಸು ಕೊಡುವುದಾಗಿ ಸಂಶೋಧನಾ ವಿಭಾಗವನ್ನು ನಂಬಿಸಿ ಕೊಂಡುಹೋದ ಮೂಲ ವರದಿಗಳ ಪ್ರತಿಯನ್ನು ಹಲವು ಮಹನೀಯರು ಇನ್ನೂ ಹಿಂದಿರುಗಿಸಿಲ್ಲ. ಈ ದೃಷ್ಟಿಯಿಂದ ಸಮೀಕ್ಷೆ ಅಪೂರ್ಣ.

ಒಂದು ವಿನ್ನಪ: ಓದಲು ಅನುಕೂಲವಾಗಲೆಂಬ ಏಕೈಕ ಕಾರಣಕ್ಕಾಗಿ ಸನ್ಮಾನ್ಯ ಶಾಸಕರ ಹೆಸರಿನ ಮುಂದೆ ಶ್ರೀ, ಶ್ರೀಯುತ, Sri. Smt. Mr, Ms ಇವೇ ಮೊದಲಾದ ಗುಣವಾಚಕಗಳನ್ನು ಬಳಸಲಾಗಿಲ್ಲ. ಅನ್ಯಥಾ ಭಾವಿಸದಿರಲು ವಿನಂತಿಸಿಕೊಳ್ಳುತ್ತೇನೆ.

## ಕೃತಜ್ಞತೆ

ವಿಧಾನ ಮಂಡಲದ ಸಂಶೋಧನಾ ವಿಭಾಗದ ಸಿಬ್ಬಂದಿಯ ಆದರ, ಸಹಕಾರ ಮತ್ತು ಆಸಕ್ತಿ ಅಭಿನಂದನಾರ್ಹ. ಅಧಿಕಾರಿಗಳಾದ ಎಸ್.ಬಿ. ಪಾಟೀಲ, ಎಚ್.ಎಸ್. ಜಗನ್ನಾಥ, ಸಂತೋಷ ತಿಕೋಟಿಕರ, ಮಲ್ಲಪ್ಪಕಾಳೆ, ಎಂ.ಕೆ. ವಿಶಾಲಾಕ್ಷಿ - ಮತ್ತಿತರರ ಸಹಾಯವನ್ನು ಸ್ಮರಿಸುತ್ತೇನೆ. ಸರ್ಕಾರಿ ಮುದ್ರಣಾಲಯದ ಡಿ.ಟಿ.ಪಿ. ವಿಭಾಗದ ಮೇಲ್ವಿಚಾರಕರಾದ ಎಸ್. ವಿಶ್ವನಾಥ್‌ರವರು ಎಲ್ಲಾ ರೀತಿಯಲ್ಲೂ ಸಹಕರಿಸಿದ್ದಾರೆ. ಕಂಪ್ಯೂಟರ್ ಆಪರೇಟರ್‌ರಾದ ಹೆಚ್.ಬಿ. ಜಯದೇವ್ ತಾಳ್ಮೆಯಿಂದ ಅಕ್ಷರ ಜೋಡಿಸಿದ್ದಾರೆ ಹಾಗೂ ಕರಡು ಓದುಗರಾದ ಬಿ.ಎ. ಅಶೋಕ್‌ಬಾಬು ಮತ್ತು ಸಿ. ಸಂಪತ್‌ಕುಮಾರ್‌ರವರು ಶ್ರದ್ಧೆಯಿಂದ ಪುಟಗಳನ್ನು ಸಿದ್ಧಗೊಳಿಸಿದ್ದಾರೆ. ಸರ್ಕಾರಿ ಮುದ್ರಣಾಲಯದ ನಿರ್ದೇಶಕರಾದ ಹೆಚ್. ಗಂಗಯ್ಯನವರು ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಡುವಲ್ಲಿ ನೆರವಾಗಿರುತ್ತಾರೆ.

ವಿಧಾನ ಮಂಡಲದ ಸುದ್ದಿ ವರದಿ ಮಾಡುವ ಸಹೋದ್ಯೋಗಿಗಳು ಸಮಯೋಚಿತ ಸಲಹೆ ಕೊಟ್ಟು ಹಾಗೂ ನೋಟ್ಸ್ ಮತ್ತಿತರ ದಾಖಲೆ ನೀಡಿ ಸಹಕರಿಸಿದ್ದಾರೆ. ಹಿರಿಯ ಪತ್ರಕರ್ತ ಪಿ. ರಾಮಯ್ಯ, ವಿ.ಎನ್. ಸುಬ್ಬರಾವ್, ಈಶ್ವರ ದೈತೋಟ, ಇಮ್ರಾನ್ ಖುರೇಷಿ, ಎಂ.ಕೆ. ವಿದ್ಯಾರಣ್ಯ, 'ಕನ್ನಡಮ್ಮ' ವರದಿಗಾರ ಪಿ.ಎ. ಹಿರೇಮಠ, ದಿಲ್ಲಿಯ ಯು.ಎನ್.ಐ. ವರದಿಗಾರ ಚೆನ್ನಾ ನಾಗರಾಜ, ಬೆಂಗಳೂರು ಯುಎನ್‌ಐ ವರದಿಗಾರ ಬಿ.ಎಸ್. ಶಾಂತಾರಾಮ್, ಆಕಾಶವಾಣಿ ಸುದ್ದಿ ವಿಭಾಗದ ವಿ.ಎಸ್. ಸೂರ್ಯನಾರಾಯಣ, ಬಿ.ಎಸ್. ಸತ್ಯನಾರಾಯಣ, ಆರ್.ಕೆ. ದಿವಾಕರ, ಕೆ.ಆರ್. ಪ್ರಹ್ಲಾದ್, ಬಿ.ಕೆ. ಕಿರಣ್ಮಯಿ, ದೂರದರ್ಶನದ ಮೈ.ಸಿ. ಪಾಟೀಲ, ಮಾಧ್ಯಮ ತಜ್ಞ ಡಾ: ಎಂ.ಎಲ್. ಶಂಕರಲಿಂಗಪ್ಪ, ಮಾಜಿ ಶಾಸಕ - ಲೇಖಕ ಕೋಣಂದೂರು ಲಿಂಗಪ್ಪ - ಇವರೆಲ್ಲರೂ ಪುಸ್ತಕ ರಚನೆಗೆ ನೆರವಾದವರು.

ಪ್ರತಿ ಹಂತದಲ್ಲಿಯೂ ಮಾರ್ಗದರ್ಶನ ನೀಡಿದ ಶಾಸಕ ಬಿ.ಬಿ. ಶಿವಪ್ಪನವರ ನೆರವಂತೂ ಅಪಾರ - ಅನಂತ.

ಶೇಷಣ್ಣ

(ಎಸ್.ಕೆ. ಶೇಷ ಚಂದ್ರಿಕ)

ಜುಲೈ 2003

"ದಿ ಟ್ರಿಬ್ಯೂನ್" ವಿಶೇಷ ವರದಿಗಾರ

18, ಖಾದಿ ಬಡಾವಣೆ, ಬನಶಂಕರಿ 3ನೇ ಹಂತ,

ಬೆಂಗಳೂರು-560 085.

# ಶ್ರೀ ಜೆ.ಹೆಚ್. ಪಟೇಲ್ : ಪರಿಚಯ

| | | |
|---|---|---|
| ಜನನ | : | 1ನೇ ಅಕ್ಟೋಬರ್ 1930 |
| ತಂದೆ | : | ಶ್ರೀ ಹಾಲಪ್ಪ ಪಟೇಲ್ |
| ತಾಯಿ | : | ಶ್ರೀಮತಿ ಮಹದೇವಮ್ಮ |
| ಊರು | : | ಕಾರಿಗನೂರು |
| ಪ್ರಾಥಮಿಕ ವಿದ್ಯಾಭ್ಯಾಸ | : | ಕತ್ತಲಗೆರೆ, ಕುಂದೂರು |
| ಪ್ರೌಢಶಿಕ್ಷಣ | : | ದಾವಣಗೆರೆ |
| ಪದವಿ | : | ಬಿ.ಎ. (ಮೈಸೂರು) |
| ಕಾನೂನು ಪದವಿ | : | ಎಲ್.ಎಲ್.ಬಿ (ಬೆಳಗಾವಿ) |
| ರಾಜಕೀಯ ಕುಟುಂಬ | : | ತಂದೆ ಹಾಲಪ್ಪ ಪಟೇಲರು ಹಿಂದಿನ ಮೈಸೂರು ಸಂಸ್ಥಾನದಲ್ಲಿ ಎಮ್.ಆರ್.ಎ. ಆಗಿ ಚನ್ನಗಿರಿ ಕ್ಷೇತ್ರ ಪ್ರತಿನಿಧಿಸಿದ್ದರು.<br><br>ಶ್ರೀ ಜೆ.ಹೆಚ್. ಪಟೇಲರು 1947 ರ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಂಡಿದ್ದು ಚನ್ನಗಿರಿಯಲ್ಲಿ ಬಂಧಿತರಾದರು. ಸಾಗರ ಕಾರಾಗೃಹದಲ್ಲಿ ವಾಸ. ತೀವ್ರ ಅಸ್ವಸ್ಥತೆ (ಜ್ವರ) ಯಿಂದ ಬಳಲುತ್ತಿದ್ದ ಸಮಯದಲ್ಲಿ ಆರೈಕೆ ಮಾಡಿದ ಪರಿಶಿಷ್ಟ ಜಾತಿಯ ಹನುಮಂತಪ್ಪನವರ ಬಗ್ಗೆ ಜೀವನವಿಡೀ ಸ್ಮರಣೆ.<br><br>1947 ರಿಂದ 1983 ರವರೆಗೆ ಬಹುತೇಕ ಪ್ರತಿವರ್ಷ ಅನ್ಯಾಯಗಳ ವಿರುದ್ಧ ಪ್ರತಿಭಟಿಸಿ ಜೈಲುವಾಸ.<br><br>ಶಿವಮೊಗ್ಗ ಜಿಲ್ಲೆಯಲ್ಲಿದ್ದ ಅತಿದೊಡ್ಡ ಎರಡು ಶ್ರೀಮಂತ ಕುಟುಂಬಗಳ ಪೈಕಿ ಜೆ.ಹೆಚ್. ಪಟೇಲರ ಕುಟುಂಬವೂ ಒಂದು. |
| ಸಮಾಜವಾದ | : | ರಾಮ ಮನೋಹರ ಲೋಹಿಯಾ ಅವರ ಸಿದ್ಧಾಂತ, ಆದರ್ಶಗಳಿಗೆ ಮಾರುಹೋಗಿ ಗುರುವೆಂದು ಸ್ವೀಕರಿಸಿದವರು. ಶಾಂತವೇರಿ ಗೋಪಾಲಗೌಡ, ಜಾರ್ಜ್ ಫರ್ನಾಂಡೀಸ್, ಮಧುಲಿಮಯೆ, ಮೊದಲಾದವರ ನಿಕಟವರ್ತಿ. |

| | | |
|---|---|---|
| ಕಾಗೋಡು ಸತ್ಯಾಗ್ರಹ | : | ಕಾಗೋಡು ಸತ್ಯಾಗ್ರಹದಲ್ಲಿ ನೇರವಾಗಿ ಭಾಗವಹಿಸಿದ್ದಕ್ಕಾಗಿ ಜೈಲು ವಾಸ. |
| | | ವಿದ್ಯಾರ್ಥಿಯಾಗಿದ್ದಾಗ ಯು.ಆರ್. ಅನಂತಮೂರ್ತಿ, ಗೋಪಾಲಕೃಷ್ಣ ಅಡಿಗರು, ಕೆ.ವಿ. ಸುಬ್ಬಣ್ಣ ಮೊದಲಾದ ಸಾಹಿತಿ ಸಹೃದಯ ಮಿತ್ರರ ಗೆಳೆತನದಿಂದ ಸಾಹಿತ್ಯದಲ್ಲಿ ಆಸಕ್ತಿ. ಬೀಚಿ, ಕಾಳಿಂಗರಾವ್ ಅವರ ಒಡನಾಟದಿಂದ ಹಾಸ್ಯ, ಸಂಗೀತದ ಅಭಿರುಚಿ. |
| ಸಂಸತ್ತಿನಲ್ಲಿ ಪಟೇಲರು | : | 1967ರಲ್ಲಿ ಶಿವಮೊಗ್ಗ ಜಿಲ್ಲೆಯಿಂದ ಲೋಕಸಭೆ ಸದಸ್ಯರಾಗಿ ಆಯ್ಕೆ. ಸಂಸತ್ತಿನಲ್ಲಿ ಕನ್ನಡ ಭಾಷೆಯಲ್ಲಿ ಕಲಾಪ ಮಾಡಿ ದೇಶಾದ್ಯಂತ ಖ್ಯಾತಿ ಪಡೆದರು. ಸಂಸದೀಯಪಟು, ವಾಗ್ಮಿಯಾಗಿ ಕರ್ನಾಟಕದ ಜನಮನವನ್ನು ಪ್ರತಿಬಿಂಬಿಸಿದರು. |
| ತುರ್ತು ಪರಿಸ್ಥಿತಿ | : | 26 ನೆಯ ಜೂನ್, 1975 ರಲ್ಲಿ ತುರ್ತು ಪರಿಸ್ಥಿತಿ ಘೋಷಣೆ, ಮಾನವ ಹಕ್ಕುಗಳ ಪ್ರತಿಬಂಧನದ ವಿರುದ್ಧ ಹೋರಾಟ. ಪುತ್ರ ಸಮೇತರಾಗಿ ಜೈಲು ವಾಸ - ಶಿವಮೊಗ್ಗ (3 ತಿಂಗಳು), ಗುಲ್ಬರ್ಗಾ (6 ತಿಂಗಳು), ಬೆಂಗಳೂರು ಸೆಂಟ್ರಲ್ ಜೈಲು (1 ವರ್ಷ). |
| ವಿಧಾನಸಭೆಯಲ್ಲಿ ಪಟೇಲರು | : | 1978 - ಚನ್ನಗಿರಿ ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆ. ವಿರೋಧಪಕ್ಷದ ಧುರೀಣರಾಗಿ, ಹಿಂದುಳಿದವರು, ದಲಿತರಿಗಾಗಿ ಹೋರಾಟ. |
| | | 1983 -ವಿಧಾನಸಭೆಗೆ ಚನ್ನಗಿರಿಯಿಂದ ಪುನರಾಯ್ಕೆ. ಮಂತ್ರಿಯಾಗಿ ಆಡಳಿತ ನಿರ್ವಹಣೆ. |
| | | 1985 - ಚುನಾವಣೆಗೆ ಮುನ್ನ ಪಕ್ಷ ಬಲವರ್ಧನೆಗಾಗಿ ಮಂತ್ರಿಸ್ಥಾನ ತ್ಯಾಗ. |
| | | 1985 ರಲ್ಲಿ ಚನ್ನಗಿರಿ ಕ್ಷೇತ್ರದಿಂದ ಪುನರಾಯ್ಕೆ. ಮಂತ್ರಿಯಾಗಿ ಕಾರ್ಯನಿರ್ವಹಣೆ |

| | | |
|---|---|---|
| ಜನತಾದಳಕ್ಕಾಗಿ | : | 1989 ರಿಂದ ಪಕ್ಷ ಕಟ್ಟಿ, ಬೆಳೆಸಿ, ಜನತಾದಳವನ್ನು ಅಧಿಕಾರಕ್ಕೆ ತರುವಲ್ಲಿ ಸತತ ಪರಿಶ್ರಮ.<br><br>1994 ರ ನವೆಂಬರ್ - ಡಿಸೆಂಬರ್ ತಿಂಗಳಲ್ಲಿ ನಡೆದ ಸಾರ್ವತ್ರಿಕ ವಿಧಾನಸಭಾ ಚುನಾವಣೆಯಲ್ಲಿ ಜನತಾದಳ ಬಹುಮತ ಪಡೆದ ಪಕ್ಷವಾಯಿತು. |
| ಉಪ ಮುಖ್ಯಮಂತ್ರಿಯಾಗಿ ಪಟೇಲರು | : | ಉಪ ಮುಖ್ಯಮಂತ್ರಿಯಾಗಿ ಡಿಸೆಂಬರ್ 11, 1994 ರಂದು ಅಧಿಕಾರ ಸ್ವೀಕಾರ. |
| ಮುಖ್ಯಮಂತ್ರಿ ಜೆ.ಹೆಚ್. ಪಟೇಲ್ | : | ಕರ್ನಾಟಕದ 15 ನೆಯ ಮುಖ್ಯಮಂತ್ರಿಯಾಗಿ 1996 ರ ಮೇ 31 ರಂದು ಪ್ರತಿಜ್ಞಾವಿಧಿ ಸ್ವೀಕಾರ. |
| ಮಾದರಿ ಕುಟುಂಬ | : | ಶ್ರೀಮತಿ ಸರ್ವಮಂಗಳಮ್ಮ ಗೃಹಿಣಿಯಾಗಿ, ಮೂವರು ಗಂಡು ಮಕ್ಕಳ ತಾಯಿಯಾಗಿ ಪತಿಯ ಶ್ರೇಯೋಭಿವೃದ್ಧಿಗಾಗಿ ದುಡಿದ ಸಾಧ್ವಿ. |
| ಅಸ್ಪೃಶ್ಯತೆ ವಿರುದ್ಧ ಚಳುವಳಿ | : | ಅಸ್ಪೃಶ್ಯತೆಯನ್ನು ಮೊದಲು ತಮ್ಮ ಮನ, ಮನೆಯಲ್ಲಿಯೇ ಇಲ್ಲವಾಗಿಸಿದವರು. ಸರ್ವರಿಗೂ ಮನೆಯೊಳಗೆ ಪ್ರವೇಶ. |
| ನಿಧನ | : | 12.12.2000. |

1

# ನವಿರು ಹಾಸ್ಯ : ಪಟೇಲರ ಹೆಗ್ಗಳಿಕೆ

ಮೊದಲು ಲೋಕಸಭೆಯ ಸದಸ್ಯರಾಗಿ ಸಂಸದೀಯ ಕಲಾಪಗಳ ಅನುಭವಗಳಿಸಿ, ನಂತರ ವಿಧಾನಸಭೆಗೆ ಆಯ್ಕೆಯಾಗಿ ಬಂದವರು ಪಟೇಲರು. ಸಂಸತ್ತಿನಲ್ಲಿ ಕನ್ನಡ ಮಾತನಾಡಿ ಹಿಂದಿಯೇತರ ಭಾರತೀಯ ಭಾಷೆಗಳ ಕಂಪನ್ನು ರಾಷ್ಟ್ರಮಟ್ಟದಲ್ಲಿ ಹರಡಿದವರು. ಆಯಾ ಪ್ರಾಂತ್ಯದ ಜನರಾಡುವ ಭಾಷೆಯಿಂದ ಸಂಸದೀಯ ಕಲಾಪಗಳು ನಡೆಯದಿದ್ದರೂ ಚಿಂತಿಲ್ಲ. ಹಿಂದಿಯನ್ನು ಹೊರತುಪಡಿಸಿ ಉಳಿದ ಭಾರತೀಯ ಭಾಷೆಗಳಿಗೆ ಕನಿಷ್ಠ ಗೌರವ ಸಿಗಲಿ ಮತ್ತು ಅವರ ದನಿ ಮುಟ್ಟಲಿ ಎಂದು ಬಹುವಾಗಿ ಶ್ರಮಿಸಿದವರು.

ಪ್ರತಿಪಕ್ಷದ ಶಾಸಕರಾಗಿ, ಮಂತ್ರಿಯಾಗಿ, ಉಪಮುಖ್ಯಮಂತ್ರಿಯಾಗಿ ಕೊನೆಗೆ ಮುಖ್ಯಮಂತ್ರಿಯಾಗಿ – ಹೀಗೆ ವಿವಿಧ ಜವಾಬ್ದಾರಿ ಸ್ಥಾನಗಳಿಂದ ಪಟೇಲರು ಸಂಸದೀಯ ಕಲಾಪಗಳಲ್ಲಿ ಪರಿಣಾಮಕಾರಿ ಹಾಗೂ ಪ್ರಭಾವಶಾಲಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಸದನಕ್ಕೆ ಸುಲಭ ಮತ್ತು ಹಿತವೆನಿಸುವ ರೂಢಿಮಾತು ಹಾಗೂ ಆಡುಮಾತುಗಳಿಂದ ವಿಷಯ ನಿರೂಪಿಸುವಲ್ಲಿ ಇವರು ಸಿದ್ಧಹಸ್ತರು. ಗ್ರಾಮೀಣ ಪರಿಸರದಿಂದಷ್ಟೇ ಏಕೆ, ನಗರ ಪ್ರದೇಶಗಳಿಂದ ಆಯ್ಕೆಯಾಗಿ ಬರುವ ಎಲ್ಲ ಶಾಸಕರಿಗೂ ಪಟೇಲರ ಮಾತಿನ ಮೋಹಕ ಮೋಡಿ ಮುದವೆನಿಸುತ್ತಿತ್ತು. ಕನ್ನಡ–ಇಂಗ್ಲೀಷ್ ಎರಡರಲ್ಲೂ ಅಸಾಧಾರಣ ಪ್ರಭುತ್ವ ಇವರಿಗೆ. ರಾಜಕೀಯ ಸಿದ್ಧಾಂತಗಳನ್ನು ಆಳವಾಗಿ ಅಭ್ಯಸಿಸಿದ್ದರು. ಬಿಚ್ಚು ಮಾತಿನ ವಿಚಾರಶೀಲ ಈತ.

ನವಿರು ಹಾಸ್ಯ ಪಟೇಲರ ಸಂಸದೀಯ ಜೀವನದ ಅವಿಭಾಜ್ಯ ಅಂಗ. ಉಲ್ಲಾಸ ತುಂಬಿದ ವಿಶ್ಲೇಷಣೆ, ಬೇರೆಯವರನ್ನು ನೋಯಿಸದ ರಸಪ್ರಜ್ಞೆ ಮತ್ತು ಕಾದಾಡುವ ಮನಸ್ಸಿಲ್ಲದ ಪರಿಹಾಸಶೀಲತೆ ಇವರಲ್ಲಿ ಎದ್ದು ಕಾಣುತ್ತಿದ್ದ ಗುಣ. ಒಂಟಿತನ ಇವರಿಗೆ ಹಿಡಿಸದ ಹವ್ಯಾಸ.

ಇಪ್ಪತ್ತು ವರ್ಷಗಳಿಗೂ ಹೆಚ್ಚು ಸಮಯ ಸಂಸದೀಯ ಕಲಾಪಗಳಲ್ಲಿ ತೊಡಗಿಸಿಕೊಂಡವರು ಪಟೇಲರು. ಲೋಕಸಭೆಯಲ್ಲಿ ಐದು ವರ್ಷ (1967-71) ಮತ್ತು ಕರ್ನಾಟಕ ವಿಧಾನಸಭೆಯಲ್ಲಿ 15 ವರ್ಷ 3 ತಿಂಗಳು (ಜನವರಿ 1983 ರಿಂದ ಅಕ್ಟೋಬರ್ 1999 ರ ಒಳಗಿನ ವರ್ಷಗಳು) ಸೇವೆ ಸಲ್ಲಿಸಿದ ಅನುಭವ ಇವರದು. ಈ ಅವಧಿಯಲ್ಲಿ ಅವರಿಗೆ ಹೆಚ್ಚು ಪ್ರಿಯವೆನಿಸಿದ ಸಂಸದೀಯ ಕಲಾಪ ಚರ್ಚೆ ಮತ್ತು ತತ್ಸಂಬಂಧದ ಉತ್ತರ. ಪ್ರತಿಪಕ್ಷದ ಶಾಸಕನಾಗಿದ್ದಾಗಲಂತೂ ಪಟೇಲರು ಚರ್ಚೆಯ ಸಮಯದಲ್ಲಿ ಖಾಯಂ ಭಾಗಿ ಇಲ್ಲವೇ ಸಾಥಿ.

ಪಟೇಲರ ಸಂಸದೀಯ ಚಟುವಟಿಕೆಗಳನ್ನು ಅವಲೋಕಿಸಿದಾಗ ಸ್ಪಷ್ಟವಾಗಿ ಒಂದು ಅಂಶ ಗೋಚರಿಸುತ್ತದೆ. ಪ್ರತಿಪಕ್ಷದ ಶಾಸಕನಾಗಿದ್ದಾಗ ಅವರಲ್ಲಿದ್ದ ಗುರಿಮುಟ್ಟುವ ಛಲ, ಇದಕ್ಕೆ ಮಾಡಿಕೊಂಡ ಸಿದ್ಧತೆ, ಪ್ರಗತಿಶೀಲ ಮುನ್ನೋಟ, ವಸ್ತು ನಿಷ್ಠೆ, ಅಖಾಡವನ್ನು ಮುಕ್ಕಾಗದಂತೆ ವಹಿಸುತ್ತಿದ್ದ ಎಚ್ಚರಿಕೆ - ಇವು ಅಧಿಕಾರದಲ್ಲಿದ್ದ ಪಟೇಲರಲ್ಲಿ ತೀವ್ರವಾಗಿ ಮತ್ತು ಸಾಂದ್ರವಾಗಿ ಕಾಣಲಿಲ್ಲ. ಆದರೆ ಸಂಸದೀಯ ಕಲಾಪಗಳಲ್ಲಿ ಭಾಗವಹಿಸುವಾಗ ಎರಡೂ ಸಂದರ್ಭದಲ್ಲಿ ಶಾಸಕನೆಂಬ ಗರ್ವ, ಸಿಡುಕು, ಅಸಹನೆ ಮತ್ತು ಅಸೂಯೆ ಕಾಡಿದ್ದಿಲ್ಲ. ಪರಿಶುದ್ಧ ಮನಸ್ಸಿನ ಸಂಸದೀಯಪಟು ಈತ.

ಪ್ರತಿ ಪಕ್ಷದಲ್ಲಿದ್ದ ದಿನಗಳಿಗೆ ಹೋಲಿಸಿದರೆ ಅಧಿಕಾರಕ್ಕೆ ಬಂದ ಬಳಿಕ ಪಟೇಲರು ಮಾತನಾಡಿದ್ದು ಕಡಿಮೆ. ಹಾಗೆಂದು ಸದನದ ಕಲಾಪಗಳನ್ನು ಪಟೇಲರು ತಪ್ಪಿಸಿಕೊಂಡವರಲ್ಲ. ಒಮ್ಮೆಯೂ ಸದನದಲ್ಲಿ ಅವರು ಆಕಳಿಸಿದ್ದಾಗಲೀ, ತೂಕಡಿಸಿದ್ದಾಗಲೀ ಇಲ್ಲ. ಜೀವನವನ್ನು ಎಂದೂ ಬೋರ್ ಎಂದು ಪರಿಗಣಿಸದ ಲವಲವಿಕೆಯ ವ್ಯಕ್ತಿ. ಮತ್ತೊಂದು ದೊಡ್ಡ ಗುಣ ಉಳಿದ ಕೆಲವು ರಾಜಕಾರಣಿಗಳಂತೆ ಅತಿರೇಕದ ಮಾತಾಗಲೀ, 'ಭಾವುಕ' ಇಲ್ಲವೇ 'ಬೋರ್'ತನವಾಗಲೀ ಇವರಲ್ಲಿರಲಿಲ್ಲ.

ಸದನದ ಪ್ರತಿಕ್ರಿಯೆಗೆ ಅಥವಾ ಶಾಸಕರು ಮುಜುಗರಪಟ್ಟುಕೊಂಡಾರು ಎಂಬ ಚಿಂತೆಗೆ ಅಳುಕದೆ ಸಮಾಜಕ್ಕಂಟಿದ ಕಹಿಸತ್ಯ, ಅಶ್ಲೀಲ, ಕೊಳಕು, ಕೃತ್ರಿಮವನ್ನು ಮುಚ್ಚುಮರೆ ಇಲ್ಲದೆ ಹೊರಗಿಡುತ್ತಿದ್ದವರು ಇವರು. ಭಾಷೆ, ಭಾವ, ಆಚಾರ, ಸಂವಾದ, ಥಾಟಿ, ಏಟು - ಇವಾವುದರಲ್ಲಿಯೂ ಮಡಿವಂತಿಕೆಯನ್ನು ಸಹಿಸದವರು.

ಸಮಾಜದ ಓರೆಕೋರೆ, ಸರ್ಕಾರದ ತಪ್ಪುಒಪ್ಪುಗಳು, ರಾಜಕಾರಣಿಗಳ ಇಷ್ಟಾನಿಷ್ಟ ಮತ್ತು ವ್ಯವಸ್ಥೆಯ ಇತಿಮಿತಿ ಈ ಎಲ್ಲ ಅಂಶಗಳನ್ನು ತರ್ಕಬದ್ಧ ವಿಶ್ಲೇಷಣೆ, ಪ್ರೌಢಿಮೆ, ಸತ್ಯಕ್ಕೆ ಸಮೀಪವಾದ ನಿಷ್ಠೆ, ಮಣ್ಣಿನ ವಾಸನೆಯ ಪ್ರಾಮಾಣಿಕ ಹೋಲಿಕೆಗಳಿಂದ, ಅರ್ಥವಾಗುವಂತೆ, ರಂಜನೀಯವಾಗಿ ವಿವರಿಸುವುದಕ್ಕೆ ಪಟೇಲರಿಗೆ ಇನ್ನಿಲ್ಲದ ಆಸಕ್ತಿ. ತಾವಿದ್ದಷ್ಟು ಕಾಲವೂ ಸದನವನ್ನು ಜೀವತುಂಬಿ ಇಡುತ್ತಿದ್ದ ರಮ್ಯಜೀವಿ.

ಇವರ ಚಿಂತನೆಯ ಚೀಲದಿಂದ ಜಿಗಿದು ಬರುತ್ತಿದ್ದ ಬಹುತೇಕ ಪ್ರಸಂಗಗಳು, ಪ್ರಕರಣ, ಇತಿಹಾಸದ ಅಧ್ಯಾಯ, ಪುರಾಣ, ಪುಣ್ಯಕಥೆ,

ಜೋಕ್ಸ್, ವಿಡಂಬನೆ, ನೋವು-ನಲಿವಿನ ಅನುಭವಗಳನ್ನು ಸದನ ಕುತೂಹಲ, ತದೇಕಚಿತ್ತ ಮತ್ತು ವಿಶ್ವಾಸಾಭಿಮಾನಗಳಿಂದ ಕೇಳುತ್ತಿದ್ದುದು ನೂರಕ್ಕೆ ನೂರು ನಿಜ. ವಿಧಾನಮಂಡಲದ ಕಣ್ಣು-ಕಿವಿಯಾದ ಸುದ್ದಿಗಾರರ ಗ್ಯಾಲರಿಯಂತೂ ಪಟೇಲರು ನಗೆಹೊನಲನ್ನು ಚಿಮ್ಮಿಸಿದಾಗ ಸದನದಲ್ಲಿದ್ದ ಶಾಸಕರಿಗಿಂತಲೂ ದೊಡ್ಡ ದನಿಯಲ್ಲಿ ನಕ್ಕಿದ್ದುಂಟು.

ಸದನದಲ್ಲಿ ಗಂಭೀರ ವಾತಾವರಣ ಮೂಡಿತ್ತು ಎನ್ನಿ. ಅರೆ ಮಲೆನಾಡಿನ ಮಣ್ಣಿನ ಕಂಪನ್ನು ಅಂಟಿಸಿಕೊಂಡ ಇವರ ಆಡುಭಾಷೆಯ ಹಾಸ್ಯ, ಆಳವಾದ ಜೀವನಾನುಭವದ ಇಂಪುದನಿ, ನಗು ಚಿಮ್ಮಿಸುವ ಲಹರಿ, ಕೀಟಲೆ, --ಇವರಲ್ಲಿದ್ದ ಈ ಎಲ್ಲ ಸಂಸದೀಯ ಪರಿಕರಗಳು ಎಂತಹ ಗಂಭೀರ ಸನ್ನಿವೇಶವನ್ನೂ ತಿಳಿಗೊಳಿಸುತ್ತಿತ್ತು. ಇತ್ತೀಚಿನ ವರ್ಷಗಳಲ್ಲಿ ಕರ್ನಾಟಕ ವಿಧಾನ ಮಂಡಲ ಕಂಡ ಸಂಸದೀಯ ಗಾರುಡಿಗ ಜೆ.ಹೆಚ್. ಪಟೇಲ್.

## ಭ್ರಷ್ಟಾಚಾರ ಮುಚ್ಚಲು ಬೇಕು--ಜಾತಿ?

**ಜೆ.ಹೆಚ್. ಪಟೇಲ್: (ವಿದ್ಯುತ್ ಮತ್ತು ಅಬ್ಕಾರಿ) ಸಚಿವರು** ..... ಮಾನ್ಯ ಸಭಾಧ್ಯಕ್ಷರೇ ನಮ್ಮ ಸರ್ಕಾರ ಆಡಳಿತಕ್ಕೆ ಬಂದು, ನಾನು ಮಂತ್ರಿಯಾಗಿ ಸುಮಾರು ಆರು ತಿಂಗಳಾಗುತ್ತಾ ಬಂದಿದೆ. ಒಂದು ಘಟನೆ ಹೇಳ್ತೀನಿ.

ಇದು ವಿದ್ಯುತ್ ಮಂಡಲಿಗೆ ಸೇರಿದ್ದು. ಕರ್ನಾಟಕದ ಜನತೆ ನಮಗೆ ಅನ್ನಕೊಡುತ್ತಿದ್ದಾರೆ, ಅವರ ಸುಖದುಃಖ ವಿಚಾರಿಸಿ, ಪ್ರಾಮಾಣಿಕವಾಗಿ ಕೆಲಸ ಮಾಡಿ ಅಂತ ಹೇಳ್ತಾ ಬಂದೀದೀನಿ ಈ ಕೆ.ಇ.ಬಿ. ಸಿಬ್ಬಂದಿಗೆ.

ಒಬ್ಬ ಅಸಿಸ್ಟೆಂಟ್ ಎಕ್ಸಿಕ್ಯುಟೀವ್ ಇಂಜಿನಿಯರ್ ಸಿಕ್ಕಿಬಿದ್ದ. ಕೋಲಾರದಲ್ಲಿ. ವಿದ್ಯುತ್ ಪ್ರವಹಿಸುವ ತಾಮ್ರದ ತಂತಿಗಳನ್ನು ಮಾರಿದ ಎಂಬ ದೂರಿನ ವಿಚಾರಣೆಗಾಗಿ ಈತನನ್ನು ಬೇರೆ ಕಡೆಗೆ ವರ್ಗಾಯಿಸಿದ್ದರು. ಆತ ಹೋಗಿರಲಿಲ್ಲ. ಕರೆಸಿ ಅವನನ್ನು ಕೇಳಿದೆ. ಏನಯ್ಯಾ ಟ್ರಾನ್ಸ್‌ಫರ್ ಮಾಡಿ ಎರಡು ತಿಂಗಳಾಯ್ತು ಯಾಕಯ್ಯಾ ಹೋಗಲಿಲ್ಲ.

ಅವನಂದ.. ಸ್ವಾಮಿ, ಇದು ಅನ್ಯಾಯ ಸ್ವಾಮಿ.. ನಾನು ಪರಿಶಿಷ್ಟ ಜಾತಿಗೆ ಸೇರಿದ್ದೀನಿ ಅಂತ ಹೇಳಿ ಇವ್ರೆಲ್ಲಾ ಹೀಗೆ ಕಂಪ್ಲೆಂಟ್ ಮಾಡಿದ್ದಾರೆ.

ಇವರುಗಳು ಎಂದರೆ ಯಾರಪ್ಪ ಎಂದೆ.

ಅದೇ ಸ್ವಾಮಿ.. ಬೇರೆ ಬೇರೆ ಜಾತಿಯೋರು. ಅವ್ರೆಲ್ಲಾ ಬೇಕಾದ್ದು ಮಾಡ್ಕೊಂಡವ್ರೆ, ಲಿಂಗಾಯಿತ ಕಂಬ ತಿಂದ, ಒಕ್ಕಲಿಗ ಬೋಲ್ಟು ತಿಂದ, ಬ್ರಾಹ್ಮಣ ಇನ್ನೇನೋ ತಿಂದ, ನಾನ್ಯಾಕ್ ಸ್ವಾಮಿ ವೈರ್ ತಿನ್ನಬಾರ್‍ದು.

**ವೀರಪ್ಪ ಮೊಯಿಲಿ (ಪ್ರತಿಪಕ್ಷದ ನಾಯಕ):** ಸನ್ಮಾನ್ಯ ಸಭಾಧ್ಯಕ್ಷರೇ, ಮಾನ್ಯ ಸಚಿವರು ಹೇಳ್ತಿರೋ ಘಟನೆಯಲ್ಲಿ ಇರುವ ಅಂಶಗಳನ್ನು ಗಮನಿಸಬೇಕು. ಯಾಗೆ ಕಂಬ ತಿಂದಾ

ಇಲಾಖೆ ಸುಮ್ಮನಿತ್ತು. ವೈರ್ ತಿಂದಾಗ್ಲೂ ಸುಮ್ಮನಿತ್ತು. ಬೋಲ್ಟ್ ಹೋದಾಗ್ಲೂ ಎಚ್ಚರ ಆಗಲಿಲ್ಲ. ಈಗ ಒಮ್ಮೆಲೇ ಎಚ್ಚರವಾಯ್ತು ಅಂದರೇ..

ಜೆ.ಹೆಚ್. ಪಟೇಲ್: ಮಾನ್ಯ ಮೊಯಿಲಿಯವರೇ, ನಿಮ್ಮ ಮಾತು ಒಪ್ತೀನಿ, ನಿಜ.. ಈ ಅವ್ಯವಹಾರಗಳು ಜಾತ್ಯಾತೀತ. ಲಿಂಗಾಯಿತರೂ ಇದ್ದಾರೆ, ಒಕ್ಕಲಿಗರೂ ಇದ್ದಾರೆ. ಎಲ್ಲಾ ಸಮಸ್ತಜಾತಿಗಳೂ ಈ ಅವ್ಯವಹಾರದಲ್ಲಿವೆ.

ಇನ್ನೊಂದು ಇಂತಹದೇ ಪ್ರಸಂಗ ಹೇಳ್ತೀನಿ.

ಮತ್ತೊಂದು ಕೆ.ಇ.ಬಿ. ಕಛೇರಿಯಿಂದ ಇನ್ನೊಂದು ರೀತಿ ದೂರು ಬಂದಿತ್ತು. ವಿಚಾರಣೆ ನಡೆಸಿದೆ. ತಪ್ಪಿತಸ್ಥ ಅಧಿಕಾರಿ ತನ್ನ ತಪ್ಪನ್ನು ಸಮರ್ಥಿಸಿಕೊಂಡ ರೀತಿ ನಿಜಕ್ಕೂ ಅಚ್ಚರಿ ಎನಿಸುವಂತಿತ್ತು.

ಅವನಂದ, ಸ್ವಾಮಿ ನನ್ನ ಮೇಲೇನೋ ದೂರು ಕೊಟ್ಟವ್ರೆ. ಒಪ್ಕೋತೀನಿ ಸ್ವಾಮಿ, ಇವ್ರಾ್ಯವ ಹರಿಶ್ಚಂದ್ರ ಸ್ವಾಮಿ. ನಮ್ಮ ಕಛೇರಿಯ ಅಕೌಂಟ್ಸ್ ಆಫೀಸರೊಬ್ಬರು ಬಿದರು ಕುರ್ಚಿಗೆ 500 ರೂಪಾಯಿ ಅಂತ ಲೆಖ್ಖಬರೆದು ಸಾವಿರಾರು ರೂಪಾಯಿ ನುಂಗವ್ರೆ. ಒಕ್ಕಲಿಗರು ತಿಂದರೆ ಎಲ್ಲರಿಗೂ ಗೊತ್ತಾಗುತ್ತೈತೆ. ಲಿಂಗಾಯಿತರು ತಿಂದ್ರೂ ಗೊತ್ತಾಗುತ್ತೈತೆ. ಆದರೆ ಈ ಬುದ್ಧಿವಂತ ಬ್ರಾಹ್ಮಣರು ತಿಂದದ್ದು ಕೊನೇಗಂಟ ಗೊತ್ತಾಕ್ಕೇಯಿಲ್ವಲ್ಲಾ ಸ್ವಾಮಿ.

ಅವನಿಗೇನು ಉತ್ತರಿಸಲಿ. ಹೇಳಿ?

ಲೇ ಕೇಳೋ ಇಲ್ಲಿ, ಬ್ರಾಹ್ಮಣರು ತಿನ್ನೋ ಹಾಗೆ ನೀನೂ ಕಲಿತ್ಕೋಳೋ ಅಯೋಗ್ಯ. ಇಲ್ದಿರಾ ಹೋದ್ರೇ ತಿನ್ನೋದನ್ನೇ ಬಿಟ್ಟುಬಿಡು.

ಇದನ್ನೆಲ್ಲಾ ಯಾಕೆ ಹೇಳ್ತಿದೀನಿ ಅಂದ್ರೆ, ತಮ್ಮ ಭ್ರಷ್ಟಾಚಾರವನ್ನು ಮುಚ್ಚಿಕೊಳ್ಳಲು ಈ ಜನ ಅತಿ ಸುಲಭವಾಗಿ, ಸಮರ್ಪಕವಾಗಿ ತಮ್ಮ ಜಾತಿಗಳನ್ನು ಉಪಯೋಗಿಸಿಕೊಳ್ಳುತ್ತಾರೆ.

ಸಮಾಜದಲ್ಲಿ ಜಾತೀನ ಬಳಸಿಕೊಳ್ಳವವರಲ್ಲಿ ಎರಡು ವರ್ಗವಿರುತ್ತಾರೆ. ಒಂದು ಚುನಾವಣೆಗೆ ಹೋಗುವವರು. ಎರಡನೆಯವರು ಅಧಿಕಾರಿಗಳು.

ಈ ಅಧಿಕಾರಿಗಳು ಅಥವಾ ಸಿಬ್ಬಂದಿ ತಾವೇನಾದರೂ ಸಿಕ್ಕಿಹಾಕ್ಕೊಂಡು ಸಸ್ಪೆಂಡ್ ಆಗುವ ಸಂದರ್ಭ ಬಂದಿದೆ ಎಂದು ಗೊತ್ತಾಗುತ್ತಿದ್ದಂತೆ ಜಾತಿ ಹೆಸರು ಎತ್ತಿ ಬಚಾವಾಗಲು ಯತ್ನಿಸುತ್ತಾರೆ.

ಚುನಾವಣೆಗೆ ಹೋಗುವ ಮಂದಿಯೂ ಅಷ್ಟೆ. ಓಟು ಸಿಗುವುದಿಲ್ಲ ಎಂದು ತಿಳಿದಾಗ ಜಾತಿ ವರಸೆ ತೆಗೀತಾರೆ. ನಾನು ನಿಮ್ಮ ಜಾತಿನೋನೇ ಎನ್ನುತ್ತಾರೆ. ಹೀಗಿರುವ ಸಮಾಜದಲ್ಲಿ, ಅದು ಕೆ.ಇ.ಬಿ. ಆಗಲಿ ಕೆ.ಎಸ್.ಆರ್.ಟಿ.ಸಿ. ಆಗಲಿ ಜಾತಿ ಹೆಸರಿನಿಂದ ನಷ್ಟ ಕಟ್ಟಿಟ್ಟ ಬುತ್ತಿ.

(ವಿಧಾನ ಸಭೆ ಕಲಾಪ, ಸಪ್ಟೆಂಬರ್ 14, 1983)

## ಉಡುಪರ ಲೆಖ್ಖ...!

**ಜೆ.ಹೆಚ್. ಪಟೇಲ್ (ಬೃಹತ್ ಕೈಗಾರಿಕೆ ಖಾತೆ ಸಚಿವರು)** ... ಮಾನ್ಯ ಅಧ್ಯಕ್ಷರೇ ನಮ್ಮ ದೇಶದಲ್ಲಿ ಬಡತನ ಹೇಗಿದೆ, ಇದನ್ನು ಸಮೀಕ್ಷಿಸುವುದು ಎಷ್ಟು ಕಷ್ಟ, ಯಾವುದನ್ನು ಲೆಖ್ಖಕ್ಕೆ ತೆಗೆದುಕೊಳ್ಳಬಹುದು, ಯಾವುದನ್ನು ಬಿಡಬೇಕು ಎಂದು ಹೇಳುವುದು ಕಠಿಣ... ಇದಕ್ಕೊಂದು ಉದಾಹರಣೆ ಕೊಡುತ್ತೇನೆ.

ನಮ್ಮ ಹೊಸನಗರ ತಾಲ್ಲೂಕಿನಲ್ಲಿ ಉಡುಪರು ಅಂತ ಇದ್ದಾರೆ. ಸಮಾಜ ಸೇವಕರು ಇವರು. ಅವರಿಗೂ ಕೊಂಚ ಜಮೀನಿದೆ. ಹೇಳಿಕೊಳ್ಳುವಷ್ಟು ಜಮೀನೇನೂ ಇಲ್ಲ. ಆದರೂ ಇದೆ.

ಏನು ಉಡುಪರೇ, ನಿಮ್ಮ ಜಮೀನು ಒಟ್ಟು ಎಷ್ಟಿದೆ ಎಂದು ಕೇಳಿದೆವು ಎಂದು ಭಾವಿಸಿ.

ನಮ್ಮದು ಮತ್ತು ನಮ್ಮವರೇ ಆದ ಸೀರನಾಳಿ ಭಟ್ಟರದೂ ಸೇರಿ ಸುಮಾರು 1200 ಎಕರೆ ಆಗುತ್ತೆ- ಎನ್ನುತ್ತಾರೆ ಉಡುಪರು.

ಇಲ್ಲಿ ಒಂದು ಮಜಾ ಇದೆ. ಇವರ ಹತ್ತಿರ ಇರುವುದು ಒಂದೇ ಎಕರೆ, ಇನ್ನು ಲೆಖ್ಖಾಚಾರದಂತೆ ಉಳಿದ 1199 ಎಕರೆ ಇವರು ಹೇಳಿದರಲ್ಲಾ ಸೀರನಾಳಿಯವರು, ಅವರಿಗೆ ಸೇರಿದ್ದು.

ಹೀಗೆ ಯಾರ ಆಸ್ತಿಯನ್ನೋ, ಬಂಡವಾಳವನ್ನೋ ಸೇರಿಸಿಕೊಂಡು ಸರ್ಕಾರದ ಬಂಡವಾಳ ಹಾಕುವುದಕ್ಕಾಗಲೀ ಲೆಖ್ಖಕೊಡುವುದಕ್ಕಾಗಲೀ ಬರುವುದಿಲ್ಲ.

ನಮ್ಮಲ್ಲಿರುವ ಬಂಡವಾಳ ಸ್ಪಷ್ಟವಾಗಿ ಎಷ್ಟಿದೆ ಎಂದು ನಿರ್ಧರಿಸಿದ ಬಳಿಕವಷ್ಟೇ ಸರ್ಕಾರ ಹೊಸ ಉದ್ದಿಮೆಗಳಲ್ಲಿ ಹಣ ತೊಡಗಿಸಬೇಕಾಗುತ್ತದೆ.

(ಜೆ.ಹೆಚ್. ಪಟೇಲ್ (ಕೈಗಾರಿಕಾ ಸಚಿವ) ವಿಧಾನಸಭೆ : ಆಗಸ್ಟ್ 22, 1985)

## "ಆಫ್ರಿಕಾದಲ್ಲಿತ್ತು ... ಹಂಪಿ"

**ಕೆ. ನರಹರಿ:** ಸನ್ಮಾನ್ಯ ಸಭಾಪತಿಗಳೇ .. ನಿನ್ನೆಯ ಪಿ.ಯು.ಸಿ. ಪರೀಕ್ಷೆಯಲ್ಲಿ ಒಂದು ವಿಚಿತ್ರವಾದ ಪ್ರಶ್ನೆ ಕೇಳಲಾಗಿದೆ. ಪ್ರಶ್ನ ಪತ್ರಿಕೆಯಲ್ಲಿ ಒಂದು ಭೂಪಟ (ಮ್ಯಾಪ್) ತೋರಿಸಿ ಅದರಲ್ಲಿ ಕೃಷ್ಣದೇವರಾಯನ ಸಂಸ್ಥಾನ ಹುಡುಕಿ ಗುರುತು ಮಾಡಿ ಎಂದಿದ್ದಾರೆ. ನೀವೇ ನೋಡಿ.

(ಮಾನ್ಯ ಸದಸ್ಯರು ಭೂಪಟದ ಪ್ರತಿಯನ್ನು ಸದನಕ್ಕೆ ತೋರಿಸಿದರು)

ಜೆ.ಹೆಚ್. ಪಟೇಲ್: (ಭಾರಿ ಕೈಗಾರಿಕೆ ಮಂತ್ರಿ) ಭೂಪಟವೇನೋ ದಕ್ಷಿಣ ಭಾರತವನ್ನು ಹೋಲುತ್ತದೆ.. ಯಾರೋ ಬುದ್ಧಿವಂತ ಮಾಸ್ತರು ಈ ಪ್ರಶ್ನೆ ಕೇಳಿದಾತ...

ಕೆ. ನರಹರಿ: ಇಂತಹ ಪ್ರಶ್ನೆ ಕೇಳಿದರೆ ವಿದ್ಯಾರ್ಥಿಗಳು ಹೇಗೆ ತಾನೆ ಉತ್ತರ ಕೊಡಲು ಸಾಧ್ಯ.. ನಾಳೆ ಮಕ್ಕಳಿಗೆ ತೊಂದರೆ ಆಗಬಾರದು.. ಎಚ್ಚರಿಸುತ್ತಿದ್ದೇನೆ.

ಜೆ.ಹೆಚ್. ಪಟೇಲ್ : ಈ ಮ್ಯಾಪನ್ನು ಅರ್ಧಕ್ಕೆ ಮಡಿಸಿದರೆ ಆಫ್ರಿಕಾ ದೇಶದ ಭೂಪಟದಂತೆ ಕಾಣಿಸುತ್ತದೆ... ಅದೇನಾದರೂ ಇರಲಿ. ಮಕ್ಕಳಿಗೆ ಯಾವ ರೀತಿಯಲ್ಲಿಯೂ ಅನ್ಯಾಯವಾಗದಂತೆ ತತ್‌ಕ್ಷಣ ಸರ್ಕಾರ ಕ್ರಮ ಕೈಗೊಳ್ಳುತ್ತದೆ. ಈ ಬಗ್ಗೆ ತಂದೆ-ತಾಯಿಗಳಿಗೆ ಮತ್ತು ಶಿಕ್ಷಕರಿಗೆ ಚಿಂತೆ ಬೇಡ.

ಡಾ: ಎಂ.ಆರ್. ತಂಗಾ: ಸನ್ಮಾನ್ಯ ಸಭಾಪತಿಗಳೇ, ಇವತ್ತಿನ ದಿವಸ ಒಂದು ಹೊಸ ಪಾಠ ಕಲಿತೆ. ಅದೇನೆಂದರೆ ವಿಜಯನಗರದ ಸಾಮ್ರಾಜ್ಯ ಆಫ್ರಿಕಾದಲ್ಲಿತ್ತು...

(ವಿಧಾನಪರಿಷತ್ತಿನ ಕಲಾಪ : ಮಾರ್ಚ್ 23, 1989)

## ತಲೆ ಒಳಗೆ ಸೊಂಪು

ಕೆ.ಹೆಚ್. ಶ್ರೀನಿವಾಸ್ : ಮಾನ್ಯ ಅಧ್ಯಕ್ಷರೇ... ಸಹನೆ ಮತ್ತು ಕಠಿಣ ಪರಿಶ್ರಮಕ್ಕೆ ಹೆಸರಾಗಿದ್ದ, ಮಾನ್ಯ ಪಟೇಲರು ಮಂತ್ರಿಗಳಾದ ಮೇಲೆ ಕೊಂಚ ಉತ್ಸಾಹ ಕಳೆದುಕೊಂಡಂತೆ ಭಾಸವಾಗುತ್ತೆ...ಎಲ್ಲೋ ವೋಲ್ಟೇಜ್ ಕಡಿಮೆ ಆದಂತೆ ತೋರುತ್ತೆ...

ಜೆ.ಹೆಚ್. ಪಟೇಲರು (ಕೈಗಾರಿಕೆ ಸಚಿವರು) : ವೋಲ್ಟೇಜ್ ಕಡಿಮೆ ಆದರೆ ನನ್ನಂತಹ ಬಲ್ಬುಗಳು ಹೇಗೋ ಹತ್ತುತ್ತವೆ. ನಿಮ್ಮ ಪಕ್ಷದಲ್ಲಿನ ಟ್ಯೂಬ್ ಲೈಟ್‌ಗಳ ಸ್ಥಿತಿ ಹೇಳಿ...

ಎಸ್. ಬಂಗಾರಪ್ಪ (ಪ್ರತಿ ಪಕ್ಷದ ನಾಯಕರು) : ನಿಜ. ನಮ್ಮ ಪಕ್ಷದಲ್ಲಿ ಒಂದೋ, ಎರಡೋ ಟ್ಯೂಬ್‌ಲೈಟ್‌ಗಳಿರಲಿಕ್ಕೆ ಸಾಕು.. ನಿಮ್ಮ ಕಡೆ ಇರುವ ಸಾರಾಸಗಟು ಟ್ಯೂಬ್‌ಲೈಟ್‌ಗಳ ಸ್ಥಿತಿ ಬಗ್ಗೆ ಹೇಳಿ...

ಕೆ.ಹೆಚ್. ಶ್ರೀನಿವಾಸ್ : ನಾವು ಏನೇ ಹೇಳಿದರೂ, ಅದು ಮಾನ್ಯ ಪಟೇಲರ ತಲೆಯಲ್ಲಿ ರಿಫ್ಲೆಕ್ಟ್ ಆಗುತ್ತದೆ.

ಜೆ.ಹೆಚ್. ಪಟೇಲ್ : ನನಗೂ ಸಹ ಒಂದಾನೊಂದು ಕಾಲದಲ್ಲಿ ನಿಮ್ಮ ಥರನೇ ತಲೆ ತುಂಬಾ ಸುಂದರವಾದ ಕೂದಲಿತ್ತು. ಈಗಿಲ್ಲ ಅಷ್ಟೆ. ನನ್ನ ತಲೆ ಈ ರೀತಿ ಕಂಡರೂ ಒಳಗಡೆ ಸೊಂಪಾಗಿದೆ.. ಎಚ್ಚರ...

(ವಿಧಾನಸಭೆ ಕಲಾಪ : ಆಗಸ್ಟ್ 22, 1985)

## ರಂಭೆ ಸೀತೆ ಬಗ್ಗೆ ಮಾತಾಡಿದಂತೆ

ಸ್ವಾಮಿ, ಕರ್ನಾಟಕ ರಾಜ್ಯದಲ್ಲಿರುವಷ್ಟು ಭ್ರಷ್ಟ ಆಡಳಿತ ಬೇರೆಲ್ಲಿಲ್ಲೂ ಇಲ್ಲ. ಮಿತಿ ಮೀರಿ ಹೋಗಿದೆ. ಭ್ರಷ್ಟ ಸರ್ಕಾರವನ್ನು ತಮ್ಮಲ್ಲೇ ಇಟ್ಟುಕೊಂಡು ಇವರು ಬೇರೆಯವರಿಗೆ ಉಪದೇಶ ಮಾಡ ಹೊರಟಿದ್ದಾರೆ. ರಂಭೆ-ತಿಲೋತ್ತಮೆಯವರು ಸೀತೆ ಬಗ್ಗೆ ವ್ಯಾಖ್ಯಾನ ಮಾಡಿದ ಹಾಗೆ ಆಗಿದೆ ಇವರಾಡುವ ಮಾತುಗಳು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಮೇ 30 1979)

## ಕಾನೂನು ಒಂದು ಕತ್ತೆ

ಕೆಲವು ಸಾರಿ ಕಾನೂನು ಕತ್ತೆ ಇದ್ದ ಹಾಗೆ, ಕತ್ತೆಗೆ ಸುಮ್ಮನೆ ಒದೆಯುವುದು ಒಂದು ಗೊತ್ತು. ಆ ರೀತಿ ಕೆಲವು ಸಾರಿ ಯಾರಿಗೆ ನಿಜವಾಗಿ ಒದೆಯಬೇಕೋ ಅವರಿಗೆ ಒದೆಯುವುದಿಲ್ಲ. ಸುಮ್ಮನೆ ಅಕಸ್ಮಾತ್ ಯಾರಾದರೂ ನಿರಾಪರಾಧಿಗಳು ಹಿಂದೆ ಬಂದರು ಅಂದರೆ ಒದ್ದುಬಿಡುತ್ತದೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ ಮಾರ್ಚ್ 30, 1981)

## ಟೋಪಿ ... ತಲೆ

ಜೆ.ಬಿ. ಶಂಕರರಾವ್ (ಶಿಕ್ಷಣ ಸಚಿವರು) ... ಪ್ರತಿ ಪಕ್ಷದ ಶಾಸಕರಲ್ಲಿ ಕೆಲವರು ಬಹಳ ಬುದ್ಧಿವಂತಿಕೆಯಿಂದ ಪ್ರಶ್ನೆಗಳನ್ನು ಕೇಳುತ್ತಿದ್ದಾರೆ.

**ಕೆ.ಹೆಚ್. ಶ್ರೀನಿವಾಸ್** : ಅದು ನಮ್ಮ ಕರ್ತವ್ಯ.

**ಜೆ.ಬಿ. ಶಂಕರರಾವ್**: ಟೋಪಿ ಇಲ್ಲದಿದ್ದರೂ ತಲೆ ಇದೆ.

(ಗೊಂದಲ)

ಜೆ. ಹೆಚ್. ಪಟೇಲ್ : ಮಾನ್ಯ ಉಪಾಧ್ಯಕ್ಷರೇ, ಕೆಲವರಿಗೆ ತಲೆ ಇರೋದು ಯೋಚನೆ ಮಾಡುವುದಕ್ಕೆ, ಇನ್ನು ಕೆಲವರಿಗೆ ತಲೆ ಇರೋದು ಕೇವಲ ಟೋಪಿ ಹಾಕಿಕೊಳ್ಳುವುದಕ್ಕೆ.

(ವಿಧಾನಸಭೆ ಕಲಾಪ : ಫೆಬ್ರವರಿ 13, 1982)

## ಓಟು ಕೇಳಕ್ಕೆ ಬರ್ತೀಯಲ್ಲಾ.. ಬಾ.. ಬಾ.. ಆಗ ನೋಡ್ಕೋತೀವಿ

ಮಾನ್ಯ ಸಭಾಧ್ಯಕ್ಷರೇ, ಸನ್ಮಾನ್ಯ ಶಾಸಕರುಗಳಾದ ಟಿ.ಬಿ. ಜಯಚಂದ್ರ, ಮಲ್ಲಿಕಾರ್ಜುನ ಖರ್ಗೆ, ಕೆ.ಎಸ್. ಪುಟ್ಟಣ್ಣಯ್ಯ ಮತ್ತಿತರರು ಟೊಮೊಟೋ ಮೊದಲಾದ ಬೆಳೆಗಳ ಹತಾಶ ಮಾರಾಟ - ಡಿಸ್ಟ್ರೆಸ್ ಸೇಲ್ ಬಗೆಗೆ ಮಾತನಾಡಿದ್ದಾರೆ. ನೀವುಗಳು ಸಹಿತ ಸರಕಾರ ನಡೆಸಿದ ಅನುಭವ ಇರುವವರು.

ಪೆರಿಷಬಲ್ ಗೂಡ್ಸ್ ಅಂದರೆ ಶೀಘ್ರ ಕೊಳೆತು ಹೋಗುವ ಆಹಾರ ವಸ್ತುಗಳನ್ನು ಜೋಪಾನದಿಂದಡಲು ಭಾರತ ದೇಶದಲ್ಲಿ ಕಳೆದ 50 ವರ್ಷಗಳಲ್ಲಿ ಯಾವುದಾದರೂ ಒಂದು ರಾಜ್ಯ ಏನಾದರೂ ಒಂದು ನಿಶ್ಚಿತ ಕಾರ್ಯಕ್ರಮ ಹಾಕಿಕೊಂಡಿದೆಯಾ ದಯಮಾಡಿ ತಿಳಿಸಿ. ಇದನ್ನು ನಾವೂ ಜಾರಿಗೆ ತರೋಣ.

ಇನ್ನು ಕ್ರಾಪ್ ಪ್ಯಾಟರನ್ - ಬೆಳೆ ವಿಧಾನದ ವಿಷಯ, Crop-pattern should be a national formula and it should be enforced.

ಬರೀ ಇದನ್ನು ಬೆಳೆಯಿರಿ ಎಂದರೆ ಆಗೋಲ್ಲ. ಇದನ್ನು ಬೆಳೆಯದಿದ್ದರೆ ನಿಮಗೆ ಶಿಕ್ಷೆ ಎಂದು ಹೇಳುವ ಯಾವುದಾದರೂ ಸರ್ಕಾರ ದೇಶದಲ್ಲಿ ಎಲ್ಲಿಯಾದರೂ ಇದ್ದರೆ ತೋರಿಸಿ. ಇದೇ ಕಾನೂನನ್ನು ನಾನೂ ಅನುಸರಿಸುತ್ತೇನೆ.

ರೈತನಿಗೆ 'ನೀನು ಕಬ್ಬು ಬೆಳೀಬೇಡ, ಭತ್ತ ಬೆಳೀಬೇಡ ಎಂದು ಜೋರು ಮಾಡಿದೆವು ಎಂದು ಇಟ್ಟುಕೊಳ್ಳಿ.

ಬಾ... ಬಾ.. ನೀನು ಓಟಿಗೆ ಬರ್ತೀಯಲ್ಲಾ ಆಗ ನೋಡ್ಕೋತೀವಿ ಬಾ ಅಂತ ಹೇಳ್ತಾನೆ ರೈತ. ಇದಕ್ಕೆ ನಾವೂ ಹೆದರುತ್ತೇವೆ. ನೀವೂ ಹೆದರಿಕೊಳ್ಳುತ್ತೀರಾ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನ ಸಭೆ ಆಗಸ್ಟ್ 4, 1997)

## ಪ್ರಚಂಡ ಜಡ್ಜ್ ಸಾಹೇಬ!

ಸನ್ಮಾನ್ಯ ಅಧ್ಯಕ್ಷರೇ, ಚಿಕ್ಕಪುಟ್ಟ ಪ್ರಮಾಣದಲ್ಲಿ ಸಣ್ಣಪುಟ್ಟ ಗುಮಾಸ್ತರು, ಲೈನ್‌ಮೆನ್‌ಗಳು, ಕಂಡಕ್ಟರು ಇತ್ಯಾದಿ ಇವರು ಮಾಡುವ ಅಕ್ರಮಗಳನ್ನು ನಾವು ದೊಡ್ಡ ದೊಡ್ಡ ಪದಗಳಲ್ಲಿ ವರ್ಣಿಸುತ್ತೇವೆ. ಸಮಾಜದ ದೊಡ್ಡ ವ್ಯಕ್ತಿಗಳು ಅಂತ ಏನಿದ್ದಾರೆ ಅವರು ಸಹಿತ ಈ ದೋಷಗಳಿಂದ ಮುಕ್ತರಾಗಿಲ್ಲ. ಇದಕ್ಕೆ ಒಂದು ಕಥೆ ಹೇಳ್ತೀನಿ.

ನಮ್ಮ ದೇಶದ ಯಾವುದೋ ಒಂದು ರಾಜ್ಯದಲ್ಲಿ ಒಬ್ಬ ಚೀಫ್ ಜಡ್ಜ್ ಇದ್ದ. ಸರ್ಕಾರಿ ವಕೀಲರ ಹುದ್ದೆಗೆ ನೇಮಕಾತಿ ಆಗಬೇಕಾಗಿತ್ತು. ಸರಿ. ಇಂಟರ್‌ವ್ಯೂ ನಡೆದಿತ್ತು. ಅದೇ ನೌಕರಿಗೆ ಮಾನ್ಯ ಜಡ್ಜ್ ಸಾಹೇಬರ ಮಗನೂ ಅರ್ಜಿಹಾಕಿದ್ದ. ಸಂದರ್ಶನಕ್ಕೂ ಬಂದಿದ್ದ.

ಇನ್ನೇನು ಮೂರು ನಾಲ್ಕು ಜನ ಆದ ಮೇಲೆ ತನ್ನ ಮಗ ಒಳಗೆ ಬರುತ್ತಾನೆಂದು ಜಡ್ಜ್ ಸಾಹೇಬನಿಗೆ ಗೊತ್ತಾಯಿತು. ಸಮಯ ನೋಡಿ ಜಡ್ಜ್ ಸಾಹೇಬ ಎದ್ದ. ಇನ್ನು ಸ್ವಲ್ಪ ಸಮಯ ನಾನು ಇಲ್ಲಿರುವುದು ಸರಿಯಲ್ಲ. ಯಾಕೆಂದರೆ ಮೂವರು ಅಭ್ಯರ್ಥಿಗಳಾದ ಬಳಿಕ ಬರುವವನು ನನ್ನ ಮಗ. ಆದ್ದರಿಂದ ಅವನ ಅರ್ಹತೆ ತೀರ್ಮಾನ ಆಗುವಾಗ ನಾನು ಇಲ್ಲಿ ಇರಬಾರದು ಎಂದು ಸತ್ಯಹರಿಶ್ಚಂದ್ರನ ರೀತಿ ಹೇಳಿ ಹೊರಗೆ ನಡೆದ.

ಸಾಕಲ್ಲ. ತಾನೇ ಆ ಕೆಲಸವನ್ನು ಮಾಡುವ ಬದಲು ನೀವೇ ಮಾಡಿ ಎಂದು ಉಳಿದವರಿಗೆ ಹುಕುಂ ಮಾಡಿ ಈ ಪ್ರಚಂಡ ನ್ಯಾಯಾಧೀಶ ಪರೋಕ್ಷವಾಗಿ ಉಳಿದವರಿಂದ ತನ್ನ ಕೆಲಸ ಮಾಡಿಸಿಕೊಂಡ.

ಹೀಗಾಗಬಾರದು. ಬುದ್ಧಿವಂತ ಜನ ಇನ್ನಷ್ಟು ಪ್ರಾಮಾಣಿಕವಾಗಿ, ಪಾರದರ್ಶಕ ವೆನಿಸುವಂತೆ, ಆದರ್ಶತನದಿಂದ ನಡೆದುಕೊಳ್ಳಬೇಕು.

(ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ) ವಿಧಾನ ಸಭೆ ಫೆಬ್ರವರಿ 6, 1986)

## ಜೀಪ್ ಬೇಡ - ಕುದುರೆ ಕೊಡ್ರಿ

ಬಿಡಿಓಗಳಿಗೆ ಜೀಪ್ ಕೊಟ್ಟಿದೆ ಸರ್ಕಾರ. ಆದರೆ ಪೆಟ್ರೋಲಿಗೆ ತಿಂಗಳಿಗೆ 400 ರೂಪಾಯಿ ಮಾತ್ರ. ಈಗಿರುವ ಸ್ಥಿತಿಯಲ್ಲಿ ಒಂದು ವಾರಕ್ಕೆ ಈ ಹಣ ಸಾಕಾಗೋಲ್ಲ. ಮುಖ್ಯಮಂತ್ರಿಗಳಿಗೆ ನನ್ನ ಸಲಹೆ, ಜೀಪ್ ಬದಲು ಒಂದು ಕುದುರೆ ಕೊಡಿಸಿಬಿಡಿ ಸ್ವಾಮಿ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಮೇ 25, 1979)

## ಮಗನಿಗೆ ಮೀಸೆ ... 18ಕ್ಕೆ

ತಮ್ಮ ಕಾಲದಲ್ಲಿ ಏನೇನೂ ಆಗಿಲ್ಲ ಎನ್ನುವುದಕ್ಕೆ ಸಾಕಷ್ಟು ಕಾರಣಗಳಿವೆ ಅರಸುರವರೇ ... 1960-61 ರಲ್ಲಿ ಒಟ್ಟು ರಾಷ್ಟ್ರೀಯ ಉತ್ಪಾದನೆಯ ಶೇಕಡ 5 ರಷ್ಟು ಕರ್ನಾಟಕದಲ್ಲಿತ್ತು. ತಾವು ಬಂದ ಮೇಲೆ 1973-74 ಮತ್ತು 77-78ಕ್ಕೆ 4.5 ಮತ್ತು 3.5ಕ್ಕೆ ಇಳೀತು. ಕರ್ನಾಟಕ ರಾಜ್ಯದ ನ್ಯಾಷನಲ್ ಇನ್‌ಕಂ ಸ್ಥಿತಿ ಇದು... ತಮ್ಮ ಮಗನಿಗೆ 18 ವರ್ಷಕ್ಕೆ ಮೀಸೆ ಬಂದರೆ ಅದಕ್ಕೆ ತಾವು ಕಾರಣರಲ್ಲ. ಸ್ವಾಭಾವಿಕವಾಗಿ ಬೆಳೆಯುವಂತಾದ್ದು. ಬೆಳೆದೇ ಬೆಳೆಯುತ್ತೇ. ಅದಕ್ಕೆ ನಿಮ್ಮ ಶ್ರಮವೇನೂ ಇಲ್ಲ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ, ಮೇ 25, 1979)

## ದೊಡ್ಡ ಮೀನು - ಸೀಗಡಿ

ಸಾಧನೆ ಜೊತೆಗೆ, ಪರಿಸರವೂ ಒಬ್ಬ ವ್ಯಕ್ತಿಯ ಹಿರಿಮೆ ಅಳೆಯುವುದರಲ್ಲಿ ಮುಖ್ಯವಾಗುತ್ತದೆ ಎಂಬುದಕ್ಕೆ ಒಂದು ಮಾತಿದೆ. ಹೇಳ್ತೀನಿ, ಕೇಳಿ.

ಬಹಳ ದೊಡ್ಡ ಸಮುದ್ರದಲ್ಲಿ ಈಜಿದರೆ ದೊಡ್ಡ ಮೀನು ಎನ್ನುತ್ತಾರೆ. ಒಂದು ಸಣ್ಣ ಕೊಳದಲ್ಲಿ ಈಜಾಡಿದರೆ ಅದು ಸೀಗಡಿ ಎಂದು ಕರೆಯಲ್ಪಡುತ್ತದೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಮಾರ್ಚ್ 23, 1979)

# ಹೋತ ಸಗಟು .. ಮರಿ ಚಿಲ್ಲರೆ

ಸಂದರ್ಭ: ಕೃಷಿ ಉತ್ಪನ್ನಗಳ ನಿಯಂತ್ರಿತ ಮಾರುಕಟ್ಟೆ (ತಿದ್ದುಪಡಿ) ವಿಧೇಯಕ 1980ರ ಮೇಲಿನ ಚರ್ಚೆಯ ಒಂದು ಹಂತದಲ್ಲಿ ಸಭಾಧ್ಯಕ್ಷ ಸ್ಥಾನದಲ್ಲಿದ್ದ ಮಾನ್ಯ ಎಚ್.ಟಿ. ಕೃಷ್ಣಪ್ಪನವರು)

ಉಪ ಸಭಾಧ್ಯಕ್ಷರು: ಎಪಿಎಂಸಿ ಕಾನೂನು ಬಂದ ಮೇಲೆ ದಳ್ಳಾಳಿಗಳಿಂದ ರೈತರ ಮೇಲೆ ಆಗುತ್ತಿದ್ದ ಶೋಷಣೆ ತಪ್ಪಿ, ಈಗ ಅಧಿಕಾರಿಗಳಿಂದ ಶೋಷಣೆ ಆಗಿದೆ ಎಂದು ಹಲವಾರು ಶಾಸಕರು ಅಭಿಪ್ರಾಯಪಡುತ್ತಿದ್ದಾರೆ. ಸರ್ಕಾರ ಇದಕ್ಕೆ ಏನನ್ನುತ್ತದೆ?

ಎ.ಬಿ. ಜಕನೂರ್ (ಮಾರುಕಟ್ಟೆ ಸಚಿವರು): ಮಾನ್ಯ ಅಧ್ಯಕ್ಷರೇ ಅದು ಹಾಗಲ್ಲ. ರೈತರಿಗೆ ಎಲ್ಲಿಯೂ ಶೋಷಣೆ ಆಗದಂತೆ ನಿಗಾವಹಿಸಲು ಈ ಕಾನೂನಿಗೆ ತಿದ್ದುಪಡಿ ತರಲಾಗುತ್ತಿದೆ.

ಹೆಚ್. ಗಂಗಾಧರನ್: ಎಪಿಎಂಸಿ ಗೆ ಬರುವ ಎಲ್ಲ ರೈತರಿಗೂ ತೆರಿಗೆ ಕೊಡುವ ಶಕ್ತಿ ಇದೆಯೇ? ಈ ಪಟ್ಟಿಯಲ್ಲಿ ಪ್ರಕಟಿಸಿರುವ ಪದಾರ್ಥ ಮಾರುವವರೆಲ್ಲರೂ ನಿಜವಾಗಿ ತೆರಿಗೆ ಕೊಡಲು ಶಕ್ತರೇ. ಹೋಗಲಿ? ಅಂತಹ ಉತ್ಪನ್ನದಿಂದ ಬರುವ ತೆರಿಗೆಯಾದರೂ ಎಷ್ಟು? ಅವರಿಗೆ ಯಾವ ಸೌಲಭ್ಯವನ್ನೂ ಕೊಡದಿರುವಾಗ ತೆರಿಗೆ ಏತಕ್ಕೆ?

ಎ.ಬಿ. ಜಕನೂರ್: ತೆರಿಗೆ ಬೀಳುವುದು ಸಗಟು ವ್ಯಾಪಾರದ ಮೇಲೆ ಮಾತ್ರ, ಚಿಲ್ಲರೆ ವ್ಯಾಪಾರದ ಮೇಲೆ ಬೀಳುವುದಿಲ್ಲ. ಒಂದು ವೇಳೆ ಅಧಿಕಾರಿಗಳು ತಪ್ಪು ಮಾಡಿದರೆ, ಅದನ್ನು ನಿಲ್ಲಿಸೋಣ.

ಗಂಗಾಧರನ್: ಉದಾಹರಣೆಗೆ, ನಾನೊಂದು ಬುಟ್ಟಿ ಹೂವನ್ನು ಮಾರಲು ಹೋಗುತ್ತೇನೆ. ಇದೇ ಬುಟ್ಟಿಯನ್ನು ಒಬ್ಬ ಮನುಷ್ಯ ಖರೀದಿ ಮಾಡುತ್ತಾನೆ ಎಂದಿಟ್ಟುಕೊಳ್ಳಿ. ಹಾಗಾದರೆ ಇದನ್ನು ತಾವು ಸಗಟು ವ್ಯಾಪಾರವೆನ್ನುತ್ತೀರೋ ಅಥವಾ ಚಿಲ್ಲರೆ ವ್ಯಾಪಾರವೆನ್ನುತ್ತೀರೋ.

ಎಚ್.ಡಿ. ದೇವೇಗೌಡ: ಹೋತದ ಮರಿ ಮಾರಿದರೆ ಅದು ಚಿಲ್ಲರೆ ವ್ಯಾಪಾರವೋ ಸಗಟು ವ್ಯಾಪಾರವೋ?

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಹೋತದ ಮರಿ ಚಿಲ್ಲರೆ; ದೊಡ್ಡ ಹೋತ ಸಗಟು.

ಕೆ.ಹೆಚ್. ರಂಗನಾಥ್: ದೊಡ್ಡ ಹಬ್ಬದ ಸಂದರ್ಭದಲ್ಲಿ ಕೊಯ್ಯಲಿಕ್ಕೆ ಹೋತವನ್ನು ತಂದರೆ ಅದು ಸಗಟು. ಅದು ಹೊರತು ಬೇರೆ ಸಂದರ್ಭದಲ್ಲಿ ತಂದರೆ ಅದು ಚಿಲ್ಲರೆ.

ಸಭಾಧ್ಯಕ್ಷರು: ಸಗಟು ಮತ್ತು ಚಿಲ್ಲರೆ ವ್ಯಾಪಾರಗಳ ವ್ಯಾಖ್ಯಾನವಿದ್ದರೆ ಮಾನ್ಯ ಸಚಿವರು ಅದನ್ನು ಸದನಕ್ಕೆ ತಿಳಿಸಿ.

ಎ.ಜಿ. ಕೊಡಗಿ: ಮಾರ್ಕೆಟ್ ಸಮಿತಿ ಒಂದು ಪ್ರಮಾಣ ನಿಗದಿ ಮಾಡಿರುತ್ತೆ. ಹತ್ತಕ್ಕಿಂತ ಮೇಲೆ ಸಗಟು; ಹತ್ತಕ್ಕಿಂತ ಕಡಿಮೆ ಇದ್ದರೆ ಅದು ಚಿಲ್ಲರೆ. ಹತ್ತು ತೆಂಗಿನ ಕಾಯಿ ಮಾರಿದರೆ ಅದು ಚಿಲ್ಲರೆ, ಹನ್ನೊಂದು ಕಾಯಿಗಳನ್ನು ಮಾರಿದರೆ ಅದು ಸಗಟು.

ಜೆ.ಹೆಚ್. ಪಟೇಲ್: ಎಪ್ಪತ್ತೋ ಎಂಭತ್ತೊ ಜನ ಒಂದೇ ಸಲ ಅಥವಾ ಒಟ್ಟೊಟ್ಟಿಗೆ ಪಕ್ಷಾಂತರ ಮಾಡಿದರೆ ಅದು ಸಗಟು. ದಿವಸಕ್ಕೆ ಒಬ್ಬರೋ ಅಥವಾ ಇಬ್ಬರೋ ಪಕ್ಷಾಂತರ ಮಾಡಿದರೆ ಅದು ಚಿಲ್ಲರೆ.

(ವಿಧಾನಸಭೆ ಕಲಾಪ ಮಾರ್ಚಿ 28, 1980)

## ದೇವರು (?) -ಒಂದು ಪ್ರಶ್ನಾರ್ಥಕ ಚಿಹ್ನೆ

ಡಾ: ಹೆಚ್. ನರಸಿಂಹಯ್ಯ: ನಮ್ಮ ದೇಶದಲ್ಲಿ ದೇವರನ್ನು ಬಲು ಚೀಪ್ ಆಗಿ ಕಾಣುತ್ತಿದ್ದೇವೆ. ಬಹುಷಃ ಬೇರೆ ಯಾವ ಸಮಾಜದಲ್ಲಿಯೂ ಹೀಗಿಲ್ಲ. ಫುಟ್‌ಬಾತ್‌ನಿಂದ ಹಿಡಿದು ವಿಧಾನಸೌಧದವರೆಗೂ ದೇವರೇ ದೇವರು.. ದೇವರು ಎಂದು ಹೇಳಿದ ಕೂಡಲೇ ಲಂಗುಲಗಾಮಿಲ್ಲದೆ ಬ್ಲಫ್ ಮಾಡುತ್ತೇವೆ. 'ಸರ್ಕಾರಿ ಕೆಲಸ ದೇವರ ಕೆಲಸ' ಎಂದು ಏಕೆ ಕರೆದರೋ ನನಗಿನ್ನೂ ಈ ಚಿಂತೆ ಕೊಶ್ಚನ್ ಮಾರ್ಕ್ ಆಗಿಯೇ ಉಳಿದಿದೆ.

ಎ.ಕೆ. ಸುಬ್ಬಯ್ಯ: ಅಧ್ಯಕ್ಷರೇ, ಕೆಲವರು ದೇವರಿಗೂ, ತಮಗೂ ನಾಮಹಾಕಿಕೊಳ್ಳುತ್ತಾರೆ. ಮಾನ್ಯ ನರಸಿಂಹಯ್ಯನವರು ದೇವರಿಗೆ ಹಾಕುವ ನಾಮ ತೆಗೆದು ಕೊಶ್ಚನ್ ಮಾರ್ಕ್‌ನ್ನು (ಪ್ರಶ್ನಾರ್ಥಕ ಚಿಹ್ನೆ) ನಾಮವಾಗಿ ಹಾಕಿಕೊಳ್ಳಬೇಕು ಎಂದು ಸಲಹೆ ನೀಡುತ್ತಿದ್ದಾರೆಯೇ?

ಹೆಚ್. ನರಸಿಂಹಯ್ಯ: ನಾನೂ ಅದನ್ನೇ ಹೇಳುತ್ತಿದ್ದೆ. ಈ ಸ್ಪಿರಿಟ್ ಆಫ್ ಪವರ್ ಏನಿದೆ- ಕೊಶ್ಚನ್ ಮಾರ್ಕ್ - ತಮಾಷೆಯಾಗಿ ಕಂಡರೂ ಹೆಚ್ಚು ಅರ್ಥಪೂರ್ಣವಾಗಿದೆ. ಸಾಮಾನ್ಯವಾಗಿ ರಿಲಿಜಿಯಸ್ ಸಿಂಬಲ್ ಎಂದು ನಾಮವನ್ನೋ, ಗಂಧವನ್ನೋ, ವಿಭೂತಿಯನ್ನೋ, ಕುಂಕುಮವನ್ನೋ ಹಚ್ಚಿಕೊಳ್ಳುತ್ತಾರೆ. ಅದರ ಬದಲಾಗಿ ಪ್ರಶ್ನಾರ್ಥಕ ಚಿಹ್ನೆ ಹಚ್ಚಿಕೊಂಡಲ್ಲಿ, ಖಂಡಿತಾ ತಪ್ಪಾಗಲಾರದು.

ಜೆ.ಹೆಚ್. ಪಟೇಲ್ (ಭಾರಿ ಕೈಗಾರಿಕೆ ಮಂತ್ರಿ): ಮಾನ್ಯ ಸಭಾಪತಿಯವರೇ, ಮಾನ್ಯ ನರಸಿಂಹಯ್ಯನವರು ಹೇಳಿದ ಕೊಶ್ಚನ್ ಮಾರ್ಕ್‌ನ್ನು ನಾನು ಬೆಂಬಲಿಸುತ್ತಾ ಹೇಳುತ್ತಿದ್ದೇನೆ.

ಪೋಲೆಂಡಿನ ಕ್ರಾಂತಿಕಾರ ನಾಯಕ ವಲೇಶಾ, ಮಾರ್ಕಿಸ್ಟ್ ಸಿದ್ಧಾಂತಿ. ಅವನು ದೇವರ ಬಗ್ಗೆ ಮಾತನಾಡಲೂ ಇಲ್ಲ; ನಂಬಲೂ ಇಲ್ಲ. ಈತ ಶಾಂತಿಯನ್ನು ಹುಡುಕುತ್ತಾ ಇಟಲಿಯ ಪೋಪ್ ಬಳಿ ಹೋದ. ವಲೇಶಾ ಪೋಪ್‌ರವರ ಬಳಿ ಹೋದಾಗ, ಪೋಪರ ಸುತ್ತಮುತ್ತ ಇಟಲಿಯಲ್ಲೂ ಕಮ್ಯುನಿಸಂ ಬೆಳೆಯುತ್ತಿತ್ತು. ಇದನ್ನು ಕಂಡು ವಲೇಶಾ ಆಶ್ಚರ್ಯಪಟ್ಟ. ಇವೆಲ್ಲವನ್ನು ನೋಡಿದರೆ ಮಾನ್ಯ ನರಸಿಂಹಯ್ಯನವರು ಹೇಳಿದ ಪ್ರಶ್ನಾರ್ಥಕ ಚಿಹ್ನೆಯೇ ಸರಿ ಎಂದು ತೋರುತ್ತೆ.

(ವಿಧಾನ ಪರಿಷತ್ ಕಲಾಪ: ಏಪ್ರಿಲ್ 20, 1985)

## ಸಾಮ್ರಾಜ್ಯಶಾಹಿ ಅವಶೇಷ

ಸರ್ಕಾರಕ್ಕೆ ನನ್ನದೊಂದು ಸಲಹೆ ಹೀಗಿದೆ. ನಮ್ಮ ರಾಜ್ಯದ ಕೆಲವು ನಗರಗಳಲ್ಲಿ ಸಾಮ್ರಾಜ್ಯ ಶಾಹಿಯ ಅವಶೇಷಗಳು ಇನ್ನೂ ಉಳಿದುಕೊಂಡಿವೆ. ಉದಾಹರಣೆಗೆ ಬೆಂಗಳೂರು ನಗರದಲ್ಲಿ ವಿಕ್ಟೋರಿಯಾ ರಾಣಿ ಜಗತ್ತನ್ನೇ ಕೈಯಲ್ಲಿ ಹಿಡಿದುಕೊಂಡಿರುವ ಒಂದು ಪ್ರತಿಮೆ ಇದೆ. ಸ್ವತಂತ್ರ ಭಾರತದಲ್ಲಿ ನಮ್ಮನ್ನು ದಾಸ್ಯಕ್ಕೀಡುಮಾಡಿದಂತಹವರ ಪ್ರತಿಮೆಗಳನ್ನು ಇನ್ನೂ ಇಟ್ಟುಕೊಳ್ಳುವುದು ಸರಿಯಲ್ಲ. ಇಂತಹ ಹಳೆಯ ಸಾಮ್ರಾಜ್ಯಶಾಹಿ ಸಂಕೇತಗಳನ್ನು ನಮ್ಮ ಇತಿಹಾಸದಿಂದಲೇ ತೆಗೆದುಹಾಕಬೇಕು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ - ಜುಲೈ 8 1978)

## ರ್‍ಯಾಗಿಂಗ್

ಶ್ರೀಮತಿ ಪ್ರಮೀಳ : ರ್‍ಯಾಗಿಂಗ್ ಅಂದರೆ ಕನ್ನಡದಲ್ಲಿ ಏನು?

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ):** ದುರ್ಯೋಧನನ ಆಸ್ಥಾನದಲ್ಲಿ ದ್ರೌಪತಿಗೆ ಆದದ್ದೇ ರ್‍ಯಾಗಿಂಗ್.

(ವಿಧಾನ ಸಭೆ : ಜೂನ್ 18, 1982)

## ಸೌಂದರ್ಯ ಪ್ರಜ್ಞೆ

ಸೌಂದರ್ಯಕ್ಕೆ ಬಣ್ಣ ಮುಖ್ಯವಲ್ಲವೆಂದು ವಿಜ್ಞಾನಿಗಳು ಹೇಳಿದ್ದಾರೆ. ಶ್ರೀ ಕೃಷ್ಣ ಕಪ್ಪಗಿದ್ದರೂ ಆತನನ್ನು 'ಶ್ಯಾಮ ಸುಂದರ' ಎನ್ನುತ್ತೇವೆ. ಸೌಂದರ್ಯ ಇರುವುದು 'ಪ್ರಪೋರ್ಷನ್' ನಲ್ಲಿ ಮಾನ್ಯ ಆರ್ಮುಗಂರವರು (ಆರನೆ ವಿಧಾನಸಭೆ ಸದಸ್ಯರು) ಕಪ್ಪಗಿದ್ದರೂ ಚೆನ್ನಾಗಿ ಕಾಣುತ್ತಾರೆ.

(ಜೆ.ಹೆಚ್.ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ : ಜುಲೈ 10, 1980)

## ಎಲ್‌ಹೆಚ್‌ನಲ್ಲೇಕೆ ಓಡಾಟ?

ವಿರೋಧ ಪಕ್ಷದವರ ಕಾರ್ಯಚಟುವಟಿಕೆ ವಿಧಾನಸಭೆಯಲ್ಲಿ ನಾವು ಮಾಡಿರತಕ್ಕ ಕೆಲಸಗಳಲ್ಲಿನ ದೋಷಗಳನ್ನು ಎತ್ತಿ ತೋರಿಸುವಲ್ಲಿರುವುದೇ ವಿನಃ ಶಾಸಕರ ಭವನಕ್ಕೆ ಹೋಗಿ ವಿಧಾನಸಭಾ ಸದಸ್ಯರ ಕಾಲಿಗೆ ಬೀಳುವುದರಲ್ಲಿ ಅಲ್ಲ.

(ಜೆ.ಹೆಚ್. ಪಟೇಲ್ (ವಿದ್ಯುತ್, ಅಬಕಾರಿ ಮಂತ್ರಿ) ವಿಧಾನ ಸಭೆ: ಜನವರಿ 17, 1984)

## ಷಾಕ್ ಮತ್ತು ಕಿಕ್‌ಗಳ ಮಂತ್ರಿ

ವೀರಪ್ಪಮೊಯಿಲಿ (ವಿರೋಧ ಪಕ್ಷದ ನಾಯಕರು) : ಸನ್ಮಾನ್ಯ ಸಚಿವ ಜೆ.ಹೆಚ್. ಪಟೇಲರಿಗೆ ಮೊದಲು ಪವರ್ ಇಲಾಖೆ ಬಂತು. ನಂತರ ಅಬ್ಕಾರಿ ಇಲಾಖೆ

ಸೇರಿತು. ಅವರು ಈಗೀಗ ಐಡಿಯಲ್ ಪವರ್ ಪ್ಲಾಂಟ್, ನ್ಯೂಕ್ಲಿಯರ್ ಪವರ್ ಪ್ಲಾಂಟ್ ಮತ್ತು ಥರ್ಮಲ್ ಪವರ್ ಪ್ಲಾಂಟ್ ಬಗ್ಗೆ ಹೇಳುತ್ತಿದ್ದಾರೆ. ಇದರಿಂದ ಸಚಿವರು ಎರಡೂ ಇಲಾಖೆಗಳ ಪವರನ್ನು ತೂಗಿಸಬಲ್ಲರೇ...?

**ಜೆ.ಹೆಚ್. ಪಟೇಲ್**: ಎರಡೂ ಪವರ್‌ಫುಲ್. ಒಂದು ಷಾಕ್ ಹೊಡೆಯುತ್ತೆ, ಇನ್ನೊಂದು ಕಿಕ್ ಹೊಡೆಯುತ್ತೆ. ಸ್ವಲ್ಪ ಹುಷಾರಾಗಿರಿ.

(ವಿಧಾನಸಭೆ ಕಲಾಪ : ಮಾರ್ಚ್ 18, 1983)

## ಚಿಕ್ಕಮಗಳೂರು ರೈಲ್ವೆ ಆಕ್ಸಿಡೆಂಟ್

ಸದನದಲ್ಲಿ ಯಾವುದೇ ಸದಸ್ಯರಿಗೆ ಯಾವುದೇ ವಿಷಯ ಪ್ರಸ್ತಾಪಿಸಲು ಹಕ್ಕಿದೆ. ರೈಟ್ಸ್ ಇದೆ. ಆದರೂ ಯಾವುದಾದರೊಂದು ವಿಷಯ ಪ್ರಸ್ತಾಪಿಸುವಾಗ ಅದು ಕನಿಷ್ಠ ಮೇಲ್ನೋಟಕ್ಕಾದರೂ ಸರಿ ಇರಬೇಕು. ಅಲ್ಲವೇ?

ಚಿಕ್ಕಮಗಳೂರಿನ ಹತ್ತಿರ ರೈಲು ಅಪಘಾತವಾಯಿತು ಎಂದು ಯಾರಾದರೂ ಬರೆದರು ಅಂದುಕೊಳ್ಳಿ. ಅಲ್ಲಿ ರೈಲ್ವೆ ಲೈನ್ ಇಲ್ಲ, ಸ್ಟೇಷನ್ ಇಲ್ಲ. ರೈಲ್ವೆ ಅಪಘಾತ ಅಲ್ಲಿ ಹೇಗೆ ಆಗಲು ಸಾಧ್ಯ ಎಂದಾದರೂ ಕನಿಷ್ಠ ಯೋಚಿಸಿದರೆ ಸಾಕು. ಯಾವ ವಿಷಯವಾದರೂ ಅದನ್ನು ಪರಿಶೀಲಿಸಿ ನಂತರ ಕ್ರಮಯೋಚಿಸಬೇಕು.

(ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ) ವಿಧಾನಪರಿಷತ್ತು: ಸೆಪ್ಟೆಂಬರ್ 3, 1985)

## ಕುಡಿತದ ಫಿಲಾಸಫಿ

**ಜೆ.ಹೆಚ್. ಪಟೇಲ್ (ಬೃಹತ್ ಕೈಗಾರಿಕೆ ಮಂತ್ರಿ)**: ಕುಡಿತದ ಚಟ ಹೆಚ್ಚಾಗಿರುವವರಲ್ಲಿ ಒಂದು ಮಾತಿದೆ. ಏನೆಂದರೆ, ಕುಡಿಯುವುದು ದ್ರೋಹವಲ್ಲ, ಕುಡಿಸುವುದು ದ್ರೋಹವಲ್ಲ, ಕುಡಿದ ಮೇಲೆ ಎಚ್ಚರ ತಪ್ಪದ ಹಾಗಿದ್ದರೆ ಅದು ದ್ರೋಹ.

(ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ) ವಿಧಾನ ಸಭೆ: ಆಗಸ್ಟ್ 9, 1985)

## ನನ್ನದೇ ಮುಳ್ಳಾದ ನನ್ನ ವ್ಯಂಗ್ಯ : ಪಟೇಲ್

ನನ್ನ ಬಹುದೊಡ್ಡ ಸಮಸ್ಯೆ ಎಂದರೆ ನನ್ನ ಹಾಸ್ಯದೃಷ್ಟಿ. ಅದು ಮೊದಲಿನಿಂದ ಬಂದುಬಿಟ್ಟಿದೆ, ಅಂದರೆ ಹಾಸ್ಯ ಮಾಡುವುದು. ಅದರ ಬಗ್ಗೆ ಏನು ಹೇಳುತ್ತೇನೆಂದರೆ ನಗುವುದು ಸ್ವಧರ್ಮ, ನಗಿಸುವುದು ಪರಧರ್ಮ, ಆ ರೀತಿಯಲ್ಲಿ ಅದನ್ನು ನೋಡಿಕೊಳ್ಳಬೇಕೆ ವಿನಃ ಅದನ್ನು ತಿಳಿದುಕೊಳ್ಳದೇ ಸಂಕುಚಿತಭಾವನೆಯಿಂದ ನ್ಯಾರೋ ಇಂಟ್ರಪ್ರಿಟ್ ಮಾಡುವುದಾಗಲೀ ಇಲ್ಲವೇ ಅದನ್ನೇ ಒಂದು ಸೆನ್ಸೇಶನ್ ಮಾಡುವುದಕ್ಕೆ ಹೋಗುವುದಾಗಲೀ ಅದು ಸರಿಯಲ್ಲ.

ಈ ಸಮಯದಲ್ಲಿ ಬೀಚಿಯವರು ಹೇಳಿದ್ದು ಒಂದು ಜೋಕ್ ಜ್ಞಾಪಕಕ್ಕೆ ಬರುತ್ತದೆ. ನಾನು, ಖಾದ್ರಿ ಶಾಮಣ್ಣ, ಬೀಚಿ ಮತ್ತು ಶೇಷಪ್ಪ ಒಟ್ಟಿಗೆ ಹೊರಟಿದ್ದೆವು. ಮಾತಿನ ಮಧ್ಯೆ

ನಮ್ಮ ಪೈಕಿ ಒಬ್ಬರು ಬೀಚಿಗೆ ಹೇಳಿದರು. ಒಂದು ಊರಿನಲ್ಲಿ ಒಬ್ಬ ಬಡ ಬ್ರಾಹ್ಮಣನಿದ್ದ ಎಂದರು. ಕೂಡಲೇ ಹಾಗೆ ಹೇಳಬಾರದಪ್ಪ ಅದರ ಬದಲು ಬರೇ ಬ್ರಾಹ್ಮಣ ಎಂದರೆ ಸಾಕು ಆತ ಬಡವನೇ ಎಂದರ್ಥ ಎಂದರು ಬೀಚಿ.

ಅದೇ ರೀತಿಯಲ್ಲಿ ಒಂದು ಊರಿನಲ್ಲಿ ಒಬ್ಬ ಸುಳ್ಳುಗಾರ ವಕೀಲನಿದ್ದ ಎಂದಾಗ ಆ ರೀತಿ ಅನ್ನಬಾರದಪ್ಪ ಬರೇ ವಕೀಲ ಎಂದರೆ ಸಾಕು ಆತ ಸುಳ್ಳುಗಾರ ಎಂದರ್ಥ ಎಂದರು.

ಅದೇ ರೀತಿಯಲ್ಲಿ ಒಂದು ಊರಿನಲ್ಲಿ ಒಬ್ಬ ಕುಡುಕ ಪತ್ರಕರ್ತ ಇದ್ದ ಎಂದಾಗ, ಕೂಡಲೇ ಬೀಚಿ ಹೇಳಿದ್ದು ಆ ರೀತಿ ಹೇಳಲೇಬಾರದು ಬರೇ ಪತ್ರಕರ್ತ ಎನ್ನು. ಪತ್ರಕರ್ತನಿಗೆ ನೀನು ಕುಡುಕ ಎಂಬುದನ್ನು ಪ್ರತ್ಯೇಕವಾಗಿ ಹೇಳುವುದು ಅನಗತ್ಯ.

ಈಗಲಾದರೂ ನೀವು ಅರ್ಥಮಾಡಿಕೊಳ್ಳಿ, ಇದನ್ನು ಹೇಳಿದ್ದು ಬೀಚಿ. ಈಗ ಇದನ್ನು ನಾನು ಹೇಳಿದರೆ ಅದನ್ನೇ ಮೂಲವಾಗಿಟ್ಟುಕೊಂಡು 'ಪತ್ರಕರ್ತರೆಲ್ಲ ಕುಡುಕರು, ಜೆ.ಹೆಚ್. ಪಟೇಲ್ ಹೇಳಿದ ಮಾತು' ಎಂದು ತಲೆಬರಹದಲ್ಲಿ ಬರೆಯುತ್ತಾರೆ. ಈ ರೀತಿ ಬರೆದರೆ ಹೇಗೆ? ಇದರ ಬಗ್ಗೆ ಒಂದು ಸ್ಕೂಲ್ ಓಪನ್ ಮಾಡಿ ಪತ್ರಕರ್ತರಿಗೆ ಯಾವ ರೀತಿಯಲ್ಲಿ ಯಾವ್ಯಾವುದನ್ನು ಬರೆಯಬೇಕು ಎಂಬ ಬಗ್ಗೆ ಹೇಳಬೇಕು. ಬರೆಯಲಿ. ನಾನೇನೂ ಬೇಡ ಎನ್ನುವುದಿಲ್ಲ. ವಾಸ್ತವಿಕವಾಗಿ ಬರೆಯಲಿ. ನಮ್ಮ ನೀತಿಯನ್ನು ವಿಮರ್ಶೆ ಮಾಡಲಿ. ನಮ್ಮ ಪಕ್ಷದ ಬಗ್ಗೆ ವಿಮರ್ಶೆ ಮಾಡಲಿ. ಆದರೆ ವರದಿಯಲ್ಲಿ ವಾಸ್ತವಿಕತೆ ಇರಬೇಕು.

ಅಧ್ಯಕ್ಷರು (ಮಾನ್ಯ ರಮೇಶ್‌ಕುಮಾರ್): ನೀವು ಹೇಳಿದ ಒಗಟು ಇವೊತ್ತು ಕ್ಲಿಯರ್ ಆಯಿತು ಬಿಡಿ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಜನವರಿ 27, 1998)

## ಜಿಲ್ಲಾಧಿಕಾರಿ ಅಂಚೆ ಕಚೇರಿಯಾದ

ನನ್ನ ಅನುಭವದಲ್ಲಿ ಹೇಳುವುದಾದರೆ, 20 ವರ್ಷದ ಕೆಳಗೆ ಇದ್ದ ಜಿಲ್ಲಾಧಿಕಾರಿಗಳ ಪರಿಸ್ಥಿತಿಗೂ, ಈಗಿರುವ ಸ್ಥಿತಿಗೂ ಬಹಳ ವ್ಯತ್ಯಾಸವಿದೆ. ಈಗ ಜಿಲ್ಲಾಧಿಕಾರಿ ಒಬ್ಬ ಪೋಸ್ಟ್ ಮಾಸ್ಟರ್ ಎನ್ನುವ ಸ್ಥಿತಿಗೆ ಬಂದಿದ್ದಾನೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ ಜುಲೈ 25, 1980)

## ಅಪರಾಧಕ್ಕೂ ಗುರಿ ಉಂಟೇ?

ವೀರಪ್ಪ ಮೊಯಿಲಿ (ವಿರೋಧಪಕ್ಷದ ನಾಯಕ): Motive in an offence is an important component ಅಫೆನ್ಸ್‌ನಲ್ಲಿ ಮೋಟಿವ್ ಪ್ರೂವ್ ಮಾಡುವ ಸಾಧ್ಯತೆ ಇಲ್ಲದಿದ್ದರೆ ಅಂತಹ ಕೇಸು ಸಾಬೀತು ಆಗುವುದಿಲ್ಲ.

ಜೆ.ಹೆಚ್. ಪಟೇಲ್ (ಅಬಕಾರಿ ಸಚಿವರು): ನಾನು ಲಾ ಓದಿದ್ದೇನೆ. ಪ್ರಾಕ್ಟೀಸ್ ಮಾತ್ರ ಬಗೆಹರಿಯಲಿಲ್ಲ. ಮಾನ್ಯ ಶ್ರೀ ವೀರಪ್ಪಮೊಯಿಲಿಯವರು ಚೆನ್ನಾಗಿ ಪ್ರಾಕ್ಟೀಸ್ ಮಾಡಿದ್ದಾರೆ. ಅವರಲ್ಲಿ ನಾನು ಒಂದು ವಿಚಾರ ತಿಳಿಯಲಿಕ್ಕೆ ಇಷ್ಟಪಡುತ್ತೇನೆ. ರೇಪ್‌ಗೆ ಕೆಲವು ಅಪರಾಧಿಗಳಿಗೆ ಮೋಟೀವ್ ಇರುತ್ತದಂತೆ. ಅದರ ಅರ್ಥ ಏನು ಎಂದು ಗೊತ್ತಾಗಲಿಲ್ಲ.

**M. Veerappa Moili:** Possession of passion is itself a motive to commit the offence.

**Ramakrishna Hegde (Chief Minister):** That is not a motive. That can be driving force.

(ವಿಧಾನಸಭೆ ಕಲಾಪ: ಮಾರ್ಚ್ 15, 1983)

## ಪೂರ್ವಗ್ರಹ ಪೀಡಿತ ಚಿಂತನೆ

ಎಸ್.ಆರ್. ಬೊಮ್ಮಾಯಿ (ಕೈಗಾರಿಕಾ ಮಂತ್ರಿ): ಮಾನ್ಯ ವಿರೋಧ ಪಕ್ಷದ ನಾಯಕರು ಪದೇ ಪದೇ ದಕ್ಷಿಣ ರಾಜ್ಯಗಳ ಮುಖ್ಯಮಂತ್ರಿಗಳ ಸಭೆ, ಅಲ್ಲಿ ನಡೆದ ಚರ್ಚೆ ವಿಷಯಗಳ ಬಗ್ಗೆ ಪ್ರಸ್ತಾಪಿಸುತ್ತಿದ್ದಾರೆ. ನಾವು ಈ ಸಭೆಯಲ್ಲಿ ವಿದ್ಯುಚ್ಛಕ್ತಿ ಬಗ್ಗೆ ಚರ್ಚಿಸಿದೆವು. ನೀರಿನ ಬಗ್ಗೆಯೂ ಚರ್ಚೆಯಾಯಿತು. ಭಾಷೆ ಬಗ್ಗೆ ಚರ್ಚೆಯಾಗಿದೆ. ನಿಮಗೆ ಏನಾದರೂ ಕನಸು ಕಾಣುತ್ತಿದೆಯೋ ಏನೋ? ನಿಮ್ಮ ಪಕ್ಷದೊಳಗೆ ಏನಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಿ.

ಟಿ.ಎನ್. ನರಸಿಂಹಮೂರ್ತಿ (ವಿರೋಧ ಪಕ್ಷದ ನಾಯಕರು): ನಾವೆಲ್ಲ ಶಿಸ್ತಿನಿಂದ ಕೆಲಸ ಮಾಡುತ್ತಿದ್ದೇವೆ. ನಮ್ಮದು ಒಂದೇ ಪಕ್ಷ ಎಂಬುದನ್ನು ಪ್ರದರ್ಶನ ಮಾಡಿದ್ದೇವೆ.

ಎಸ್.ಆರ್. ಬೊಮ್ಮಾಯಿ: ನಿಮ್ಮ ಲೀಡರ್‌ಷಿಪ್ ಬಗ್ಗೆ ತೊಂದರೆಯಾಗಿದೆಯೋ ಏನೋ?

ಟಿ.ಎನ್. ನರಸಿಂಹಮೂರ್ತಿ: ನಾವು ಸಮರ್ಥ ರೀತಿಯಲ್ಲಿ ಒಗ್ಗೊಟ್ಟಾಗಿ ಕೆಲಸ ಮಾಡುತ್ತಿದ್ದೇವೆ. ನಿಮ್ಮ ಮನೆಗೆ ಬೆಂಕಿ ಬಿದ್ದಿದೆ. ಬೇರೆಯವರ ಬಗ್ಗೆ ಏಕೆ ಮಾತನಾಡುತ್ತೀರಿ?

ಜೆ.ಹೆಚ್. ಪಟೇಲ್ (ಅಬಕಾರಿ ಮತ್ತು ವಿದ್ಯುತ್ ಸಚಿವರು): ಕತ್ತಲೆಯಲ್ಲಿ ಹೋಗುವಂತಹ ಮನುಷ್ಯನಿಗೆ ಭೂತ, ಪೀಡೆ ಎಂಬ ಭಯ ಇರುತ್ತದೆ. ಆದರೂ ಮನಸ್ಸು ಗಟ್ಟಿ ಮಾಡಿಕೊಳ್ಳುವುದಕ್ಕೋಸ್ಕರ ಆತ ಹಾಡು ಹೇಳಿಕೊಂಡು ಹೋಗುತ್ತಾನೆ. ಅದೇ ರೀತಿ ನಮ್ಮ ಮಾನ್ಯ ನರಸಿಂಹಮೂರ್ತಿಯವರೂ ನೆನಪಿಟ್ಟುಕೊಂಡು ಈ ಒಂದು ಹಾಡು ಹೇಳುವುದಕ್ಕೆ ಹೊರಟಿದ್ದಾರೆ.

(ವಿಧಾನ ಪರಿಷತ್ತಿನ ಕಲಾಪ: ಮಾರ್ಚ್ 19, 1984)

## ಕೋಗಿಲೆ-ನರಿ ಕಥೆ

ಕೆ.ಹೆಚ್. ಶ್ರೀನಿವಾಸ: ಯಾವುದೇ ಪ್ರಮುಖ ವಿಷಯ ಪ್ರಸ್ತಾಪಿಸಿದರೂ ಪಟೇಲರು ಕೇಂದ್ರದ ಕಡೆ ಕೈ ತೋರಿಸುತ್ತಾರೆ. ಸಮಸ್ಯೆ ಎತ್ತಿಕೊಂಡು ಯಾರ್ಯಾರೂ ಬಂದರೆ, ಅವರನ್ನು ಸೇರಿಸಿಕೊಂಡು ಕೇಂದ್ರದ ಮೇಲೆ ಮೇಲೆ ಧಾಳಿಗೆ ಸಿದ್ಧವಾಗುತ್ತಾರೆ. ನಿಮ್ಮ ಕೈಲಿ ಆಗೊಲ್ಲ ಎಂದ ಮೇಲೆ ಅಧಿಕಾರಕ್ಕೆ ಯಾಕೆ ಇಷ್ಟೊಂದು ಅಂಟಿಕೊಂಡಿದ್ದೀರಿ. ಬಾಟ್ಲಿಂಗ್ ವ್ಯವಹಾರದ ಮೇಲೆ ಶ್ರೇಷ್ಠ ನ್ಯಾಯಾಲಯದ ತೀರ್ಪು ಹೊರಬಿದ್ದಿದೆ. ಹೀರೋಗಳ ತರಹ ರಾಜೀನಾಮೆ ಬಿಸಾಕಿ, ಹೊರಗೆ ಹೋಗುವುದನ್ನು ಬಿಟ್ಟು ಏತಕ್ಕೆ ಕುರ್ಚಿಗೆ ಅಂಟಿಕೊಂಡಿದ್ದೀರಿ.

ಜೆ.ಹೆಚ್. ಪಟೇಲ್ (ಕೈಗಾರಿಕಾ ಖಾತೆ ಮಂತ್ರಿ): ಮಾನ್ಯ ಶ್ರೀನಿವಾಸ್‌ರವರು ನಮ್ಮ ಮುಖ್ಯಮಂತ್ರಿಗಳಿಗೆ ಏನು ಹೇಳಿದರು ಎಂದರೆ - ಕ್ಷುದ್ರವಾದ ಈ ಮಂತ್ರಿ ಪದವಿ ಯಾಕೆ, ಅದನ್ನು ಬಿಟ್ಟುಕೊಡಿ - ಅಂತ. ಉದಾಹರಣೆಗೆ ಇಂತಹದೇ ಒಂದು ಸಂದರ್ಭ ಹೇಳುತ್ತೇನೆ: ಮರದ ಮೇಲಿದ್ದ ಕೋಗಿಲೆ ಬಾಯಲ್ಲಿ ಹಣ್ಣು ಇತ್ತು. ಅದರ ಹತ್ತಿರ ಒಂದು ನರಿ ಬಂದು, ಕೋಗಿಲೆ, ನೀನು ಎಷ್ಟು ಚೆನ್ನಾಗಿ ಹಾಡು ಹೇಳ್ತಿದೀಯಾ, ಹಾಡು ನೋಡೋಣ ಎಂದಿತು. ನರಿಗೆ ಕೋಗಿಲೆಯ ಹಾಡಿನ ಮೇಲೆ ಯಾವ ಆಸಕ್ತಿಯೂ ಇರಲಿಲ್ಲ. ಅದರ ಗಮನವೆಲ್ಲಾ ಕೋಗಿಲೆ ಬಾಯಲ್ಲಿದ್ದ ಹಣ್ಣಿನ ಮೇಲೆ. ನಮ್ಮ ಕೋಗಿಲೆಗೆ ಇದು ನರಿ ಎಂದು ಸ್ಪಷ್ಟವಾಗಿ ತಿಳಿದಿದೆ.

ಕೆ.ಹೆಚ್. ಶ್ರೀನಿವಾಸ: ಪಟೇಲರೇ ನೀವು ತಪ್ಪು ಅರ್ಥ ಮಾಡಿಕೋತಿದೀರಿ. ಸತ್ಯ ಹೇಳಿದರೂ ನಂಬೋದು ಕಷ್ಟವೇ. ಒಂದು ಮಾತಿದೆ. I can take care of my enemies. Please save me from my friends. ನಮ್ಮ ಮಾತು ಕೇಳಿದ್ದಲ್ಲಿ ಮಾನ್ಯ ರಾಮಕೃಷ್ಣ ಹೆಗಡೆಯವರ ವ್ಯಕ್ತಿತ್ವ ಇಡೀ ಭಾರತ ದೇಶದಲ್ಲಿ ಹಬ್ಬುತ್ತಿತ್ತು. ಇಂತಹ ಹತ್ತು ಚೀಫ್ ಮಿನಿಸ್ಟರ್ ಪದವಿಗಳು ಅವರನ್ನು ಹುಡಿಕಿಕೊಂಡು ಬರುವ ವ್ಯಕ್ತಿತ್ವಕ್ಕೆ ಅವರು ಬೆಳೆಯುತ್ತಿದ್ದರು. ಆದರೆ ನಿಮ್ಮಂತಹವರು ಮಿಸುಗಾಡದಂತೆ ಅಡ್ವೈಸ್ ಮಾಡಿಬಿಟ್ಟಿದ್ದೀರಿ.

(ವಿಧಾನಸಭೆ ಕಲಾಪ : ಫೆಬ್ರವರಿ 7, 1986)

## ಯಾರಿಗೆ ಯಾರುಂಟು; ರಾಜಕೀಯ ಸಂಸಾರ!

ಮಾನ್ಯ ಅಧ್ಯಕ್ಷರೇ, ಈ ಬಿಜೆಪಿಯವರಿಗೆ ಒಂದು ಮಾತು ಹೇಳಲು ಇಷ್ಟಪಡುತ್ತೇನೆ. ನಿಮ್ಮ ಸಹಕಾರದಿಂದ ನಾವು ಸರ್ಕಾರ ನಡೆಸಿದ್ದೂ ಉಂಟು; ನಮ್ಮ ಸಹಕಾರದಿಂದ ನೀವೂ ಇದ್ದದ್ದು ಉಂಟು. ನಾವೂ, ನೀವೂ ಜೊತೆಯಲ್ಲಿ ಬೆಳೆದ, ಬಾಳಿದ ದಿನಗಳೂ ಉಂಟು.

ನೀವೂ ನಾವೂ ಜೈಲಿನಲ್ಲಿ ಜೊತೆಯಲ್ಲಿದ್ದಾಗ ಇದ್ದಂಥ ಭಾರತದ ನಕ್ಷೆಯೇ ಬೇರೆ. ಕಾಲಾನಂತರ ಇರುವ ಸ್ಥಿತಿಯೇ ಬೇರೆ.

ನೀವು ನಮಗೆ ಮುಳ್ಳಾದರೋ ಅಥವಾ ನಾವು ನಿಮಗೆ ಮುಳ್ಳಾದವೋ ಇದು ಸಹಿತ ಇನ್ನೂ ಅರ್ಥವಾಗದ ಒಗಟು.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ಆಗಸ್ಟ್ 7, 1996)

## ಮಹಿಳಾ ಮೀಸಲಾತಿ

**ಪ್ರಫುಲ್ಲ ಮಧುಕರ್:** ಮಾನ್ಯ ಸಭಾಪತಿಗಳೆ, ಕೆಇಬಿಯಲ್ಲಿ ಹುದ್ದೆಗಳನ್ನು ತುಂಬುವಾಗ ಶೇ. 33 ರಷ್ಟು ಮಹಿಳೆಯರಿಗೆ ಮೀಸಲಾತಿ ಕೊಡುತ್ತಾರೆಯೇ? ಲೈನ್‌ಮೆನ್ ಹುದ್ದೆಗೆ ಇಲ್ಲವೇ?

**ಜೆ.ಹೆಚ್. ಪಟೇಲ್:** ಮಾನ್ಯ ಸಭಾಪತಿಗಳೆ, ಮಹಿಳೆಯರು ಲೈನ್‌ಮೆನ್‌ಗಳಾಗಿ ಕೆಲಸ ಮಾಡುವುದಕ್ಕಾಗುವುದಿಲ್ಲ. ಅದು ಕಷ್ಟವಾಗುತ್ತದೆ. ಈ ಕೆಲಸವನ್ನು ಸಹ ನಾವು ಮಾಡುತ್ತೇವೆಂದು ಮಹಿಳೆಯರು ಹೇಳಿದರೆ ನಮ್ಮದೇನು ಅಭ್ಯಂತರವಿಲ್ಲ. ಕಂಬ ಹತ್ತುವುದು ಮಹಿಳೆಯರಿಗೆ ಕಷ್ಟವಾಗುತ್ತದೆ. ಮಹಿಳೆಯರಿಗೆ ಶೇ. 33 ಮೀಸಲಾತಿ ಕೊಡಬೇಕಾದರೆ ಅದಕ್ಕೆ ಅವೈಲಬಿಲಿಟಿ ಇರಬೇಕಲ್ಲಾ. ಈಗ ನಮಗೆ ಕೂಡಲೇ ಮೀಟರ್ ರೀಡರ್ಸ್ ಬೇಕಾಗಿದೆ. ಇದಕ್ಕೆ ಮಹಿಳೆಯರು ಟ್ರೇನ್‌ಅಪ್ ಆಗಿಲ್ಲ. ಇನ್ನು ಮೇಲೆ ಗಮನದಲ್ಲಿಟ್ಟುಕೊಂಡು ಟ್ರೇನಿಂಗ್ ಕೊಡಬಹುದು.

**ಟಿ.ಎನ್. ನರಸಿಂಹಮೂರ್ತಿ:** ಮಾನ್ಯ ಸಭಾಪತಿಗಳೆ, ಮಹಿಳೆಯರು ವಿಮಾನ ಹಾರಿಸುತ್ತಿದ್ದಾರೆ ಆದ್ದರಿಂದ ಈ ಕಂಬ ಹತ್ತುವುದು ಏನೂ ಅಂತಹ ಕಷ್ಟ ಆಗುವುದಿಲ್ಲ.

**ಜೆ.ಹೆಚ್. ಪಟೇಲ್:** ಮಾನ್ಯ ಸಭಾಪತಿಗಳೇ ವಿಮಾನ ಹಾರಿಸುವುದಕ್ಕೂ ತಾವೇ ಸ್ವತಃ ಹಾರುವುದಕ್ಕೂ ವ್ಯತ್ಯಾಸ ಇದೆ.

(ವಿಧಾನ ಪರಿಷತ್ ಕಲಾಪ, ಆಗಸ್ಟ್ 8, 1996)

## ಅಟ್ಲಾಂಟಾ ಒಲಂಪಿಕ್ಸ್‌ನಲ್ಲಿ ನಾವು ಕಲಿತ ಪಾಠ

ಸನ್ಮಾನ್ಯ ಅಧ್ಯಕ್ಷರೇ, ಚರ್ಚೆಯ ಮಧ್ಯೆ ಒಂದು ಮಾತು ಹೇಳುತ್ತೇನೆ. ಬರೇ ಮಾತಿನಿಂದ ಏನೂ ಆಗುವುದಿಲ್ಲ; ಸತತ ಪ್ರಯತ್ನ ಮತ್ತು ನಿರಂತರ ಅಭ್ಯಾಸ ಇದ್ದರೆ ಮಾತ್ರ ನಾವು ಏನಾದರೊಂದು ಸಾಧಿಸಲು ಸಾಧ್ಯ ಎನ್ನುವುದಕ್ಕೆ ಈ ಉದಾಹರಣೆ.

ಅಟ್ಲಾಂಟಾದಲ್ಲಿ ಒಲಂಪಿಕ್ ಕ್ರೀಡೆಗಳು ನಡೆದವು. ಭಾರತವೂ ಇದರಲ್ಲಿ ಭಾಗವಹಿಸಿತ್ತು. ಒಂದೇ ಒಂದು ಚಿನ್ನದ ಪದಕವೂ ನಮ್ಮ ಪಾಲಿಗೆ ಸಿಗಲಿಲ್ಲ. 95 ಕೋಟಿ ಜನರಿರುವ ಈ ದೇಶಕ್ಕೆ ಒಂದು ಬಂಗಾರ ತರುವ ಚೈತನ್ಯ ಇಲ್ಲವೇ? ಇಂತಹ ಜನರನ್ನು ನಾವು ಬೆಳಸಬೇಕಿತ್ತು; ಬೆಳಸಲಿಲ್ಲ. ನಮ್ಮ ಕ್ರೀಡಾಪಟುಗಳನ್ನು ಶಕ್ತಿವಂತರನ್ನಾಗಿ ಮಾಡಬೇಕಿತ್ತು; ಮಾಡಲಿಲ್ಲ.

ಬರೇ ಮಾತನಾಡಿ ಹಾಳಾಗಿದ್ದೇವೆ. ಈಗಲಾದರೂ ಎಚ್ಚೆತ್ತುಕೊಳ್ಳೋಣ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಆಗಸ್ಟ್ 7, 1996)

## ನಂಜೇಗೌಡರ ಇಸ್ಪೀಟ್ ಸಾಲ

(ಸದನದಲ್ಲಿ ಕೊನೆ ದಿನದ ತಿಳಿ ಹಾಸ್ಯ)

ಐದು ವರ್ಷ ನಾವೆಲ್ಲಾ ಒಟ್ಟಾಗಿ ಕಾಲಕಳೆದದ್ದು ನಿಜ, ಕೊನೆಯಲ್ಲಾದರೂ ಚಿಂತಿಲ್ಲ; ಹೊಸ ಶಾಸಕರಿಗೆ ಒಂದು ಮಾತು ಹೇಳ್ತೀನಿ. ನಿಮಗೆ ಅರ್ಥವಾಗುವಂತೆ ಹಾಸ್ಯ ಬೆರೆಸಿ ಹೇಳ್ತೀನಿ.

ಸದನದಲ್ಲಿ ಪಟ್ಟಾಗಿ ಕುಳಿತುಕೊಳ್ಳಿ. ಸದನದ ಕಲಾಪಗಳನ್ನು ಎಚ್ಚರಿಕೆಯಿಂದ ಗಮನಿಸಿ. ಜನರ ಸಮಸ್ಯೆಗಳ ಬಗೆಗೆ ನಿಮಗೆ ನಿಜವಾದ ಕಳಕಳಿ ಇರುವುದಾದರೆ, ಅಂತಹ ಸಮಸ್ಯೆಗಳ ಬಗ್ಗೆ ಸದನದ ಗಮನ ಸೆಳೆಯಿರಿ. ಇದಕ್ಕೆ ಹಲವಾರು ಸಾಂವಿಧಾನಿಕ ವಿಧಾನಗಳಿವೆ.

ಹುಷಾರ್. ಸದನ ನಡೆಯುವಾಗ ಶಾಸಕರ ಭವನದಲ್ಲಿ ಸೀರಿಯಸ್ ಆಗಿ ಇಸ್ಪೀಟ್ ಆಡಬೇಡಿ. ಈ ಮಾತು ಎಲ್ಲ ಪಕ್ಷದ ಶಾಸಕರಿಗೂ ಅನ್ವಯಿಸುತ್ತೆ. ಸದನ ನಡೆಯುವಾಗಂತೂ ಖಂಡಿತಾ ಬೇಡ.

ನಾನೂ ಕೂಡ ಜೀವನದಲ್ಲಿ ಸಾಕಷ್ಟು ಇಸ್ಪೀಟಾಡಿದ್ದೀನಿ. ರಜೆ ಇದ್ದಾಗ, ಸ್ನೇಹಿತರು ಕೂಡಿದಾಗ, ಪಾರ್ಟಿ ಸೇರಿದಾಗ - ಹೀಗೆ ವಿಶ್ರಾಂತಿ ಇದ್ದಾಗ ಆಡಿದ್ದೇನೆಯೇ ವಿನಃ ಸದನ ಸೇರಿದಾಗ ಇಲ್ಲ. ಸದನ ನಡೀಬೇಕಾದಾಗ ನನಗೆ ಬೇರೆಡೆ ಮನಸೇ ಹೋಗಲ್ಲ.

ಇಸ್ಪೀಟ್ ವಿಷಯದಲ್ಲಿ ಇನ್ನೂ ಒಂದು ಗುಟ್ಟು ಹೇಳ್ತೀನಿ. ಇಲ್ಲಿದ್ದಾರಲ್ಲ ನನ್ನ ಶಾಸಕಮಿತ್ರ ನಂಜೇಗೌಡರು. ಇವರೂ ನಾನೂ ಎಷ್ಟೋ ಸಾರಿ ಇಸ್ಪೀಟಾಡೀದೀವಿ. ಈ ಆಸಾಮಿ ಎಷ್ಟೋ ಸಾರಿ ಸಾಲ ಹೇಳಿದ್ದಾರೆ. ಇನ್ನೂ ವಾಪಸ್ ಕೊಟ್ಟಿಲ್ಲ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸೌಧ, ಜುಲೈ 12, 1999)

## ಭಿಕ್ಷುಕನಾದ ಬ್ರಾಹ್ಮಣ

ಸಂದರ್ಭ: ವಿಧಾನಸಭೆಯಲ್ಲಿ ಕರ್ನಾಟಕ ಭಿಕ್ಷಾಟನೆ ನಿಷೇಧ (ತಿದ್ದುಪಡಿ) ಮಸೂದೆ 1982 ಪರ್ಯಾಲೋಚನೆಗಾಗಿ ಮಂಡಿಸಿದಾಗ.

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಭಿಕ್ಷುಕ ವೃತ್ತಿ ಇದೆಯಲ್ಲಾ ಇದು ನಮ್ಮ ಧಾರ್ಮಿಕ ವ್ಯವಸ್ಥೆಯಲ್ಲಿ ಆಳವಾಗಿ ಬೇರೂರಿದೆ. ಸಮಾಜದ ಒಂದು ರೋಗ. ಭಿಕ್ಷೆಗೆ ಗೌರವ ಸ್ಥಾನ ನೀಡಿದ್ದು ನಮ್ಮ ಧಾರ್ಮಿಕ ವ್ಯವಸ್ಥೆ. ಭಿಕ್ಷು ಎಂದರೆ ಬೆಗ್ಗರ್ ಎಂದರ್ಥ. ಬೆಗ್ಗರ್ ಎಂದರೆ a religious mendicant, expecially a Brahmana in the fourth Ashrama when he abandons his house and family and subsists onalms.

ಅಧ್ಯಕ್ಷರು: (ಮಾನ್ಯ ಕೆ.ಹೆಚ್. ರಂಗನಾಥರವರು) ಯಾವುದು ಅದು ನೀವು ಓದುತ್ತಾ ಇರುವುದು.

ಜೆ.ಹೆಚ್. ಪಟೇಲ್: ಕಿಟ್ಟೆಲ್ ಶಬ್ದಕೋಶ.

ಮಳ್ಳೂರು ಆನಂದರಾವ್: ಭಿಕ್ಷು-ಭಿಕ್ಷುಕ ಬೇರೆ ಬೇರೆ ಪದಗಳು. ಭಿಕ್ಷು ಎಂದರೆ ಬೌದ್ಧ ಭಿಕ್ಷು.

ಜೆ.ಹೆಚ್. ಪಟೇಲ್: ಇಲ್ಲಿ ಭಿಕ್ಷು ಎಂದರೆ ಭಿಕ್ಷುಕ. ಬಡತನದಿಂದ ನಿಸ್ಸಹಾಯಕನಾದವನು. ನಾವೇನು ದಯೆ, ಧರ್ಮ, ದಾನ ಎಂದು ನಮ್ಮ ಪದ್ಧತಿಯಲ್ಲಿ ಬೆಳೆಸಿಕೊಂಡು ಬಂದಿದ್ದೇವೆ, ಅದು. ಚೈನಾ ದೇಶದಂತೆ ಬಿಕ್ಷಾಟನೆ ನಿರ್ಮೂಲನ ಮಾಡಲು ನಮ್ಮಲ್ಲಿ ಪ್ರತ್ಯೇಕ ಚಳುವಳಿಯೇ ಬೇಕಾಗಿದೆ.

ಮಳ್ಳೂರು ಆನಂದರಾವ್: ನಿಮ್ಮ ಅಭಿಪ್ರಾಯದ ಪ್ರಕಾರ ಭಿಕ್ಷುಕರು ಅಂದರೆ ಯಾರು?

ಜೆ.ಹೆಚ್. ಪಟೇಲ್: ನೀವು 4ನೇ ಆಶ್ರಮಕ್ಕೆ ಹೋದರೆ ನೀವು ಕೂಡ ಭಿಕ್ಷುಕರೇ?

ಮಳ್ಳೂರು ಆನಂದರಾವ್: ಮಾನ್ಯ ಅಧ್ಯಕ್ಷರೇ, ಮಾನ್ಯ ಜೆ.ಹೆಚ್. ಪಟೇಲರು ಒಂದು ನಿಘಂಟು ತೋರಿಸಿ, ಬ್ರಾಹ್ಮಣರು ಭಿಕ್ಷುಕರು ಎಂದು ಹೇಳುತ್ತಿದ್ದಾರೆ.

ಜೆ.ಹೆಚ್. ಪಟೇಲ್: ಬರೀ ಬ್ರಾಹ್ಮಣರಷ್ಟೇ ಅಲ್ಲ; ಎಲ್ಲಾ ಜಾತಿಯವರೂ ಬರ್‍ತಾರೆ. ಭಿಕ್ಷೆ ಬೇಡಿ ತಿನ್ನುವುದು ಅವಮಾನಕರ ಎನ್ನುವ ಭಾವನೆ ಹುಟ್ಟಿಸದೇ ಇದ್ದರೆ ನಾವು-ನೀವು ಎಲ್ಲಾ ಇದೇ ಜಾತಿಗೆ ಸೇರ್ತೀವಿ.

(ವಿಧಾನಸಭೆ ಕಲಾಪ ಫೆಬ್ರವರಿ 12, 1982)

## 'ಆತ್ಮ' ನೋಡಿ ಬಂದವರು ಯಾರಾದರೂ ಇದ್ದಾರೆಯೇ?

ಸಂಸತ್ತು ಮತ್ತು ವಿಧಾನ ಮಂಡಲಗಳಲ್ಲಿ ದೇಶದ ಹಾಗೂ ನಾಡಿನ ಗಣ್ಯರು ನಿಧನರಾದಾಗ ಅವರ ನೆನಪಿಗೆ ಗೌರವ ವ್ಯಕ್ತಪಡಿಸಲು ಸಂತಾಪ ಸೂಚನೆ ನಿರ್ಣಯ ಮಾಡುತ್ತೇವೆ. ಇದೊಂದು ಸತ್ ಸಂಪ್ರದಾಯ.

ಇಂತಹ ಸಂದರ್ಭಗಳಲ್ಲಿ ನಾವು ಸಾಮಾನ್ಯವಾಗಿ ಅವರ ಆತ್ಮಕ್ಕೆ ಶಾಂತಿ ಸಿಗಲಿ ಮುಂತಾಗಿ ಹೇಳಿಕೊಳ್ಳುತ್ತೇವೆ.

ಆ ಆತ್ಮ ಎಲ್ಲಿರುತ್ತದೆಯೋ, ಯಾವ ತರಹದ ಶಾಂತಿ ಅದಕ್ಕೆ ಸಿಗುತ್ತದೋ, ನನಗಂತೂ ಇಲ್ಲಿಯವರೆವಿಗೂ ಗೊತ್ತಿಲ್ಲ. ಅದನ್ನು ನೋಡಿಕೊಂಡು ವಾಪಸ್ ಬಂದಿರುವ ಯಾರನ್ನು ಇದುವರೆವಿಗೂ ನಾನು ನೋಡಿಲ್ಲ. ಈ ಶಾಂತಿಯ ಕೋರಿಕೆ ಕೇವಲ ಒಂದು ರಿಚುಯಲ್ ಆಗಿದೆ.

ಇನ್ನು ಸ್ಮಾರಕಗಳ ಬಗೆಗೆ ಹೇಳುವುದಾದರೆ ಈ ಮೆಮೋರಿಯಲ್ಸ್‌ಗಳು ಸಹಿತ ಒಂದು ರೀತಿಯಲ್ಲಿ ಅರ್ಥ ಕಳೆದುಕೊಂಡಿವೆ.

ಗಾಂಧೀಜಿಯನ್ನೇ ಮರೆತಂತಹ ಈ ದೇಶ, ಯಾವ ಮೆಮೋರಿಯಲ್ಸ್‌ನಿಂದ ಸ್ಫೂರ್ತಿ ಪಡೆದು, ಯಾರನ್ನು ತಾನೇ ಸ್ಮರಿಸಿಕೊಳ್ಳುತ್ತದೆ ಹೇಳಿ?

ಒಂದು ಅಂಶವನ್ನು ಗಮನದಲ್ಲಿಟ್ಟುಕೊಳ್ಳುವುದು ಮುಖ್ಯ.

ಈ ಮಹನೀಯರಂತೆ ನಾವೂ ನಡೆಯೋಣ. ಅವರ ಗುಣಗಳು ನಮಗೆ ಆದರ್ಶವಾಗಲಿ. ಎಷ್ಟು ಸಾಧ್ಯವೋ, ಎಲ್ಲೆಲ್ಲಿ ಸಾಧ್ಯವೋ ಅಷ್ಟರಮಟ್ಟಿಗೆ ಈ ಆದರ್ಶ ನಡೆನುಡಿ ನಮ್ಮ ಜೀವನದಲ್ಲಿ ಪ್ರತಿಬಿಂಬಿಸಲಿ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ಮಾರ್ಚಿ 17, 1997)

## ಖರ್ಗೆ-ಪಟೇಲರ ಸೈದ್ಧಾಂತಿಕ ಕಚ್ಚೆ-ಚಡ್ಡಿ

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ನೀವಿಬ್ಬರೂ ಇದ್ದೀರಲ್ಲಾ, ಮಾನ್ಯ ಖರ್ಗೆಯವರು ಮತ್ತು ಯಡಿಯೂರಪ್ಪನವರು, ಯಾವ ರೀತಿ ಎಂದರೆ ಹಿಂದೆ ಕುಸ್ತಿ ಆಡಬೇಕಾದರೆ ಕಚ್ಚೆ ಹಿಡಿಯಬೇಡ ಎಂದು ನಿಯಮವಿತ್ತು. ನಿಜವಾಗಿ ಕುಸ್ತಿ ಆಡಬೇಕಾದರೆ ಕಚ್ಚೆ ಹಿಡಿಯದೆ ಹೊಡೆಯಬೇಕು. ಆದರೆ ನೀವು ಕಚ್ಚೆ ಹಿಡಿದೇ ಕುಸ್ತಿ ಹೊಡೆಯುವುದಕ್ಕೆ ಹೋಗುತ್ತೀರಿ.

ಮಲ್ಲಿಕಾರ್ಜುನ ಖರ್ಗೆ (ವಿರೋಧ ಪಕ್ಷದ ನಾಯಕ): ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ಮುಖ್ಯಮಂತ್ರಿಗಳು ಹೇಳಿದ ಕಚ್ಚೆ ವಿವರಣೆಯನ್ನು ನಾನು ಸಹಿತ ಸೈದ್ಧಾಂತಿಕ ದೃಷ್ಟಿಯಿಂದಲೇ ನೋಡುತ್ತೇನೆ.

ಕಚ್ಚೆಯಾಗಲೀ, ಚಡ್ಡಿಯಾಗಲೀ ಸೈದ್ಧಾಂತಿಕವಾಗಿ ದೃಢವಾಗಿ ಇರಬೇಕು. ಹೇಳುವುದಷ್ಟೇ ಅಲ್ಲ; ಆಚರಣೆಗೂ ಸೈ ಅನ್ನುವಂತಿರಬೇಕು. ಬರೇ ಫಿಲಾಸಫಿ ಆದರೆ ಏನು ಚೆಂದ? ಪಟೇಲರೂ ಹೇಳಿದ್ದಾದರೂ ಏನು? ಸದನದಲ್ಲಿರುವರೆಲ್ಲಾ ಕೂಡ ಬಹಳ ಶಾಂತ ರೀತಿಯಿಂದ ಕೇಳಿ. ಕುಸ್ತಿ ಆಡುವುದಕ್ಕೆ ಬರುವವನ ಕಚ್ಚೆಯನ್ನು ಹಿಡಿಯಬಾರದಂತೆ. ಕುಸ್ತಿ ಆಡುವವರು ಕಚ್ಚೆ ಹಾಕಿಕೊಂಡು ಹೋಗುವುದಿಲ್ಲ, ಅವರು ಭದ್ರವಾದ ಚಡ್ಡಿ ಹಾಕಿಕೊಂಡು ಹೋಗಬೇಕು. ಆದಕ್ಕಾಗಿ ನೀವು ಎಲ್ಲಾದರೂ ಕುಸ್ತಿ ಆಡಲು ಹೋಗುವಾಗ ಕಚ್ಚೆಗಿಚ್ಚೆ ಹಾಕಿಕೊಂಡು ಹೋದೀರಿ ಜೋಕೆ. ಕಾಚಾ ಹಾಕಿಕೊಂಡೇ ಹೋಗಿ. ಈ ದಡದಿಂದ ಆ ದಡಕ್ಕೆ 63ನೇ ಇಸವಿಯಲ್ಲೇ ಈಜಾಡಿದರು ಎಂದರೆ ಲೆಕ್ಕಹಾಕಿ, ಇವತ್ತು ನಮ್ಮ ಸುದೈವ ಅವರು ಉಳಿದಿದ್ದಾರೆ. ಗಂಗಾನದಿಯಲ್ಲಿ ಈಜಾಡುವಾಗ ತಪ್ಪೇನಾದರೂ ಆಗಿದ್ದರೆ ಅರೇಬಿಯನ್ ಸಮುದ್ರಕ್ಕೆ ಹೋಗುತ್ತಿದ್ದರು.

(ವಿಧಾನಸಭೆ ಕಲಾಪ ಸೆಪ್ಟೆಂಬರ್ 4, 1997)

## ಕೈ, ಬಾಯಿ ಎರಡರಲ್ಲೂ ಕೆಸರು

ಇವೊತ್ತು ಏನಾಗುತ್ತಿದೆ ಎಂದರೆ, ನಾವುಗಳು ಪರಸ್ಪರ ಕೆಸರು ಎರಚಾಡುತ್ತಿದ್ದೇವೆ. ಅವನ ಮುಖಕ್ಕೆ ಮಸಿ ಬೇಗ ಬಳಿಯಬೇಕೆಂದು ಇವನು ತನ್ನ ಕೈಗೆ ಮಸಿ ಹಚ್ಚಿಕೊಳ್ಳುವುದು, ಇವನ ಮುಖಕ್ಕೆ ಬೇಗ ಮಸಿ ಬಳಿಯಬೇಕೆಂದು ಅವನು ತನ್ನ ಕೈಗೆ ಮಸಿ ಹಚ್ಚಿಕೊಳ್ಳುವುದು. ಹೀಗಾಗಿ ಇಬ್ಬರ ಕೈಗಳೂ ಕೆಸರು, ಇಬ್ಬರ ಕೈಯಲ್ಲೂ ಸೆಗಣಿ. ಗಂಧವಿಲ್ಲ. ಗಂಧ ಇದ್ದಿದ್ದರೆ ಏನಾದರೂ ಮಾಡಬಹುದು. ಆದರೆ, ಕೈಯಲ್ಲಿ ಇಬ್ಬರೂ ಸೆಗಣಿ ಹಚ್ಚಿಕೊಂಡು ಕುಳಿತಿದ್ದಾರೆ. ಈ ರೀತಿ ದೆಹಲಿಯಲ್ಲೂ ಆಗಿದೆ, ಇಲ್ಲಿಯೂ ಆಗಿದೆ, ಇನ್ನು ಆಗಬಾರದು. ಕೆಸರು ಎರಚುವುದೇ ಕೆಲಸ, ಹಣವಂತೂ ಪೋಲಾಗಿದೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ಸೆಪ್ಟೆಂಬರ್ 4, 1997)

## ಧಾಂಡಿಗ : ಭೀಮ ಪ್ರಶ್ನೆ!

ಮಳ್ಳೂರು ಆನಂದರಾವ್: ಸನ್ಮಾನ್ಯ ಅಧ್ಯಕ್ಷರೇ ಜೆ.ಹೆಚ್. ಪಟೇಲರು ಬಹಳ ಬುದ್ಧಿವಂತರು. ಆದರೂ ಅವರು ಚುಚ್ಚಿ ಚುಚ್ಚಿ ಮಾತನಾಡುವುದು ಯಾವಾಗಲೂ, ಎಲ್ಲ ಸಂದರ್ಭಕ್ಕೂ ಸರಿ ಹೋಗುವುದಿಲ್ಲ.

ಕೆ.ಹೆಚ್. ಶ್ರೀನಿವಾಸ್: ಪಟೇಲರು ಹೇಳಿದ್ದಾದರೂ ಏನು? ಏಕೆ ನಿಮಗೆ ಅಚ್ಚರಿ? ಪಟೇಲರು ಧಾಂಡಿಗ ಸರ್ಕಾರ ಎಂದು ಗುಂಡೂರಾಯರ ಆಡಳಿತವನ್ನು ಕುರಿತು ಹೇಳಿದರೆ ನೀವೇಕೆ ಎದ್ದು ನಿಂತಿರಿ?

ಮಳ್ಳೂರು ಆನಂದರಾವ್: ಮಾನ್ಯ ಜೆ.ಹೆಚ್. ಪಟೇಲರು ಸಾಮಾನ್ಯವಾಗಿ ಎಲ್ಲರ ಬಗ್ಗೆಯೂ ಮಾತನಾಡುತ್ತಿರುತ್ತಾರೆ. ಅವರು ಇವತ್ತು ಮಾತನಾಡುವಾಗ 'ರಾಜಕೀಯ ಭಿಕ್ಷುಕರು' ಎಂದು ಹೇಳಿದರು. ರಾಜಕೀಯ ಭಿಕ್ಷುಕರು ಯಾರು ಎಂಬುದನ್ನು ತೋರಿಸುತ್ತೀರಾ? ಈಗಾಗಲೇ ಬ್ರಾಹ್ಮಣರ ಬಗ್ಗೆ ಹೇಳಿದ್ದಾರೆ.

ಪ್ರೊ: ಎ. ಲಕ್ಷ್ಮೀಸಾಗರ್ (ವಿರೋಧ ಪಕ್ಷದ ನಾಯಕ): ಆನಂದರಾಯರೊಬ್ಬರನ್ನು ಬಿಟ್ಟರೆ ಮಿಕ್ಕವರು ಯಾರೂ ಏನು ಹೇಳುತ್ತಿಲ್ಲ, ಏಕೆ ಸುಮ್ಮನಿದ್ದಾರೆ?

ಮಳ್ಳೂರ್ ಆನಂದರಾವ್: ಕೊಂಕಿಸಿ ಮಾತನಾಡತಕ್ಕದ್ದು ಸರಿಯಲ್ಲ. ಧಾಂಡಿಗ ಸರ್ಕಾರವೆಂದು ಹೇಳಿದರು. ಮಾನ್ಯ ದೇವರಾಜ ಅರಸುರವರ ಸರ್ಕಾರ ಧಾಂಡಿಗ ಸರ್ಕಾರವೇ, ಇಲ್ಲಾ ಗುಂಡೂರಾಯರ ಸರ್ಕಾರ ಧಾಂಡಿಗ ಸರ್ಕಾರವೇ?

ಜೆ.ಹೆಚ್. ಪಟೇಲ್: ಅರ್ಥವಾಗದಿದ್ದರೆ ಮತ್ತೊಂದು ಸಾರಿ ಕೇಳಿ. ಧಾಂಡಿಗ ಎಂದ ಕೂಡಲೇ ನಾನು ನಿಮ್ಮನ್ನು ನೋಡಲೇ ಇಲ್ಲ.

(ಸದನದಲ್ಲಿ ನಗು)

ಈಗ ಅರ್ಥವಾಯಿತು ಬಿಡಿ. ನಾನು ನಿಮ್ಮನ್ನು ನೋಡಿ ಈ ಮಾತು ಹೇಳಲಿಲ್ಲವೆಂದು ಪುನಃ ಕ್ಲಾರಿಫೈ ಮಾಡಿ ಹೇಳುತ್ತೇನೆ.

(ಪುನಃ ನಗು)

ವೆಂಕಟರಮಣರಿಗೂ ಕೋಪ ಬರಲಿಲ್ಲ. ಅವರೂ ಮಿಸ್ಟೇಕ್ ಮಾಡಿಕೊಳ್ಳಲಿಲ್ಲ ಬಿಡಿ.

(ಪುನಃ ನಗು)

(ದಡೂತಿ ಜನರ ಕ್ಷಮೆ ಕೋರಿ. ಮಳ್ಳೂರು ಆನಂದರಾಯರು ಮತ್ತು ಸಚಿವ ಪಿ. ವೆಂಕಟರಮಣ - ಇಬ್ಬರೂ ಭಾರಿ ಗಾತ್ರದ ಆಜಾನುಬಾಹುಗಳು)

(ವಿಧಾನಸಭೆ ಕಲಾಪ ಫೆಬ್ರವರಿ 12, 1982)

## ಗುಡಿ ಕಟ್ಟಿದವ ಹೊರಗೆ

ಗುಡಿ ಕಟ್ಟಲು ಕಲ್ಲು ಹೊರುವವನೊಬ್ಬ, ಮಣ್ಣು ಹೊರುವವನು ಮತ್ತೊಬ್ಬ. ಇಟ್ಟಿಗೆ ತರಲು ಇನ್ನೊಬ್ಬ. ಎಲ್ಲಾ ಇವರ ಕೈಯಿಂದಲೇ ನಡೆಯಬೇಕು. ಗುಡಿ ಕಟ್ಟಾದ ಬಳಿಕ ಪೂಜಾರಿ ಅಲ್ಲಿ ದೇವರ ಮೂರ್ತಿ ಕೂರಿಸಿದ ಎನ್ನಿ. ತಕ್ಷಣ ಮಣ್ಣು, ಇಟ್ಟಿಗೆ, ಕಲ್ಲು ಹೊರುವವರಾರೂ ಒಳಗೆ ಬರುವಂತಿಲ್ಲ. ಎಲ್ಲರಿಗೂ ಪ್ರವೇಶ ನಿಷಿದ್ಧವೇ ಎಂದರೆ ಹಾಗೂ ಅಲ್ಲ. ಗುಡಿ ಕಟ್ಟದೇ ಇರುವವರೆಲ್ಲಾ ಬರುತ್ತಾರೆ; ಅವರು ಹಣವಂತರು ಅಥವಾ ಪ್ರಭಾವಶಾಲಿಗಳು ಒಳಗೆ ಇರುತ್ತಾರೆ. - ಇಂತಹ ರಹಸ್ಯಮಯ ದೇಶ, ಸಂಸ್ಕೃತಿ ನಮ್ಮದು.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಆಗಸ್ಟ್ 7, 1996)

## ಪ್ರಾಮಾಣಿಕತೆ ಇದ್ದಲ್ಲಿ ಗಾಂಧೀವಾದ; ಗಂಡಸುತನ ಇದ್ದಲ್ಲಿ ಮಾರ್ಕ್ಸ್‌ವಾದ

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಗಾಂಧಿವಾದದಲ್ಲಿ ನಂಬಿಕೆ ಇರುವವರು ಪ್ರಾಮಾಣಿಕವಾಗಿದ್ದಲ್ಲಿ ಮಾತ್ರ ತಮ್ಮ ಚಿಂತನೆಗಳನ್ನು ಕಾರ್ಯರೂಪಕ್ಕೆ ತರಲು ಸಾಧ್ಯ. ಇದು ಅರ್ಥಶಾಸ್ತ್ರಜ್ಞರು ಹೇಳಿರುವ ಮಾತು. ಇನ್ನು ಮಾರ್ಕ್ಸ್‌ವಾದದ ಬಗೆಗೆ ಹೇಳುವುದಾದರೆ ಇದಕ್ಕೆ ಒಂದು ಗಂಡಸುತನ ಬೇಕು.

ಗಾಂಧೀವಾದದ ಪ್ರಾಮಾಣಿಕತನವಾಗಲೀ, ಮಾರ್ಕ್ಸ್‌ವಾದದ ಗಂಡಸುತನವಾಗಲೀ ಇಲ್ಲದಿದ್ದಾಗ ಅಂತಹ ಸಂದರ್ಭದಲ್ಲಿ ನಪುಂಸಕ ಸಮಾಜವಾದ ತಲೆ ಎತ್ತುತ್ತದೆ.

ನಮ್ಮ ದೇಶದಲ್ಲಿ ಭಾಷಣ ಮಾಡತಕ್ಕ ಜನರಿಗೆ ಹಿಂದುಳಿದ ಮತ್ತು ದುರ್ಬಲ ಜನರನ್ನು ಕುರಿತು ಒಂದು ಮಾತು ಹೇಳದಿದ್ದರೆ ಭಾಷಣಪೂರ್ಣವಾದಂತೆ ಎನಿಸುವುದೇ ಇಲ್ಲ. ಇದೇ ನಪುಂಸಕವಾದ. ಹರಿಜನ, ಗಿರಿಜನ, ದುರ್ಬಲರು, ಅಲ್ಪಸಂಖ್ಯಾತರು ಬಡವರು - ಹೀಗೆ ಹೇಳಿಕೊಂಡೇ ಸಾಗಿದ್ದಾನೆ.

ಎಂ. ವೀರಪ್ಪಮೊಯಿಲಿ: ಇದನ್ನೇ ತಾವೂ ಹೇಳಿದ್ದೀರಿ. ಆದರೆ ಜನ ನಮ್ಮನ್ನು ನಂಬಿದರು. ನಿಮ್ಮನ್ನು ನಂಬಲಿಲ್ಲ ಅಷ್ಟೆ.

**ಜೆ.ಹೆಚ್. ಪಟೇಲ್:** ಹೋದಸಾರಿ ಸರ್ಕಾರ ನಡೆಸುತ್ತಿದ್ದವರು ಬಡಕಲ ಕುದುರೆ ಹತ್ತಿದ್ದರು. ಬಹಳ ದಿನಗಳಿಂದ ಹುಲ್ಲು ಕಡಿಮೆ ಆಗಿ ಆ ಕುದುರೆ ಬಿತ್ತು ಎಂದೇ ಇಟ್ಟುಕೊಳ್ಳೋಣ. ಆದರೆ ಅತಿ ಸೂಕ್ಷ್ಮ ವಿಷಯವೆಂದರೆ ಇವರು ಹತ್ತಿದ್ದು ಕುದುರೆಯೇ ಅಲ್ಲ. ಕುದುರೆ ಬಡವಾಗಿದ್ದರೂ ಕತ್ತೆಗಿಂತ ಕೊಂಚ ವಾಸಿ, ಜೋರಾಗಿ ಓಡಬಹುದು.

(ವಿಧಾನ ಸಭೆ ಕಲಾಪ ಮಾರ್ಚಿ 26, 1981)

## ಹಾಸ್ಯ ನನ್ನ ಉಸಿರು

ವಿಧಾನಮಂಡಲದಲ್ಲಿ ನಾನು ಮಾಡುವ ಹಾಸ್ಯವನ್ನು ಕುರಿತು ಎರಡೂ ಸದನಗಳಲ್ಲಿ ಎಷ್ಟೋ ಬಾರಿ ಚರ್ಚೆ ನಡೆದಿದೆ. ಹಾಸ್ಯ ನನ್ನ ಪ್ರಿಯವಾದ ಶೈಲಿ.

ಒಂದೊಂದು ಸಲ ನಿಮ್ಮನ್ನು ನಗಿಸಬೇಕೆಂಬ ಇಚ್ಛೆಯಿಂದಲೇ ಹೇಳುತ್ತೇನೆ. ಒಂದೊಂದ್ಸಾರಿ ನೊಂದೂ ಹೇಳ್ತೀನೆ. ಹಿರಿಯ ಚಿಂತಕ ಡಿ.ವಿ. ಗುಂಡಪ್ಪ ಕೇಳುತ್ತಾರೆ. ಸತ್ಯವಂತನ ಅರಸುತ ಪೇಟೆಯೊಳಗೆ ಹಾಡುಹಗಲಲ್ಲೇ ದೀವಿಗೆಯ ಹಿಡಿದು ನಡೆದು ಕೆಟ್ಟದೀಜಗವೆಂದು ತೊಟ್ಟಿಯೊಳಗೆ ಎಸೆದಂತೆ ಮಂಕುತಿಮ್ಮ.

ಒಬ್ಬ ತತ್ವಜ್ಞಾನಿ ಹಗಲಿನಲ್ಲಿ ಲಾಟೀನು ಹಿಡಿದು ಹೊರಟಿರುತ್ತಾನೆ. ಆತ ಸತ್ಯವಂತರನ್ನು ಹುಡುಕುವುದಕ್ಕೆ ಹೊರಟಿದ್ದ, ವಿಫಲನಾಗಿ ಆತ ಆ ಲಾಟೀನನ್ನು ಎಸೆದು ಮುಂದಕ್ಕೆ ಹೋಗುತ್ತಾನೆ.

ಹಾಗೆ ಈಗ್ಯಾರು ಆ ಲಾಟೀನು ಹಿಡಿದುಕೊಂಡು ಹುಡುಕುವವರು? ಸತ್ಯವಂತರು ಎಲ್ಲಿ ಸಿಗಬಹುದು? ಬ್ಯಾಂಕ್‌ಗಳ ನೋಟಿಸ್‌ನಲ್ಲಿರಬಹುದಾ? ಸಿಬಿಐ ಚಾರ್ಜ್ ಶೀಟಿನಲ್ಲಿರಬಹುದಾ? ಸುಪ್ರೀಂಕೋರ್ಟ್ ಲಿಸ್ಟ್‌ನಲ್ಲಿರಬಹುದಾ? ಪರದೇಶಿ ರೆಕಾರ್ಡ್‌ಗಳಲ್ಲಿರಬಹುದಾ? ಸತ್ಯವಂತರು ಎಲ್ಲಿರಬಹುದು? ಇದನ್ನೇ ನಾನು ಹಾಸ್ಯದಲ್ಲಿ ಹೇಳಿ ಉತ್ತರ ಹುಡುಕುತ್ತೇನೆ. ಹಾಸ್ಯ ತಪ್ಪಿರಬಹುದು, ಸತ್ಯ ಸುಳ್ಳೇ?

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ನವೆಂಬರ್ 10, 1998)

### ಗಂಡೆದೆಯ ಧೀರ ರಾಜಕಾರಣಿ

ಜೆ.ಹೆಚ್. ಪಟೇಲರ ಮೂರೂವರೆ ವರ್ಷಗಳ ಆಡಳಿತಾವಧಿಯನ್ನು ಗಮನಿಸಿದರೆ ಎಷ್ಟು ಕಷ್ಟದಲ್ಲಿ ಅವರು ಮುಖ್ಯಮಂತ್ರಿ ಸ್ಥಾನ ಮತ್ತು ಸರ್ಕಾರವನ್ನು ನಡೆಸಿಕೊಂಡು ಬಂದರೆಂಬ ಅಂಶ ಸ್ಪಷ್ಟವಾಗುತ್ತದೆ.

ಕರ್ನಾಟಕ ರಾಜ್ಯಕ್ಕೆ ಸಲ್ಲಿಸಿರುವ ಅವರ ಸೇವೆ ಅನುಪಮವಾದುದು. "ಗಡಸು ನಿರ್ಧಾರ ಕೈಗೆತ್ತಿಕೊಳ್ಳುತ್ತಿದ್ದ ಒಬ್ಬ ಸರ್ದಾರ" ಎಂದು ನಾನು ಅವರನ್ನು ಕರೆಯುತ್ತೇನೆ".

ನೋಡಲಿಕ್ಕೆ ಶಿಥಿಲ ಎನ್ನುವಂತೆ ದೈಹಿಕವಾಗಿ ಕಂಡರೂ ಪಟೇಲರಿಗೆ ಗಂಡೆದೆ ಇತ್ತು. ಹೋರಾಟದ ಹಿನ್ನೆಲೆ, ಮನೋಭಾವ - ಅವರಲ್ಲಿತ್ತು. ಕೊನೆಯುಸಿರು ಇರುವವರೆಗೂ ಎಂತಹವರನ್ನೂ ಎದುರಿಸಬಲ್ಲೆನೆಂಬ ದೃಢ ಆತ್ಮವಿಶ್ವಾಸ ಇತ್ತು. ಪಟೇಲರು ಜೀವಿತ ಕಾಲದ ಕೊನೆಯವರೆಗೂ ಹೋರಾಟದ ಹಾದಿಯನ್ನು ಬಿಡದ ಅಪ್ರತಿಮ ಧೀರ ರಾಜಕಾರಣಿ.

(ಎಸ್.ಎಂ. ಕೃಷ್ಣ (ಮುಖ್ಯಮಂತ್ರಿ) ವಿಧಾನಸಭೆ ಫೆಬ್ರವರಿ 27, 2001)

# 2

# ಪ್ರತಿ ಪಕ್ಷದಲ್ಲಿದ್ದ ಪಟೇಲರು, ಅರಸರೊಂದಿಗೆ

## ರಾಜಕೀಯ ಚದುರಂಗದಲ್ಲಿ ಜಿಗ್ರಿದೋಸ್ತರಾದ ಎದುರಾಳಿಗಳು

ರಾಜಕಾರಣದಲ್ಲಿ ಕಾಲಾನುಕಾಲದಿಂದ ನೆಲೆಗಟ್ಟಿ ನಿಂತ ತಿಳಿವೊಂದಿದೆ. ಕೌಟಿಲ್ಯ-ಚಾಣುಕ್ಯ ಕಾಲದ ವೇದವಾಕ್ಯವಿದು. ಬಹುಶಃ ಇದನ್ನು ಸಂಸದೀಯ ವೇದಿಕೆಯಲ್ಲಿ ಚಲಾವಣೆಗೆ ತಂದವನು 19ನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಇಂಗ್ಲೆಂಡಿನ ಜ್ಯೂಯಿಷ್ ರಕ್ತದ ರಾಜಕಾರಣಿ ಬೆಂಜಮಿನ್ ಡಿಸ್ರೈಲಿ. ಇವನ ನಂತರ ಈ ನಾಣ್ಣುಡಿಯನ್ನು ಸಮರಕೌಶಲ್ಯವಾಗಿ, ಚಾಣಾಕ್ಷತನದಿಂದ ಬಳಸಿ, ದಾಯಾದಿ ಜನಾಂಗಗಳ ನಡುವೆ ಬೆಸುಗೆ ಹಾಕಿ ವಿಶ್ವಯುದ್ಧವೊಂದನ್ನು ಗೆದ್ದವನು ಬ್ರಿಟನ್ನಿನ ಪ್ರಧಾನಿ ವಿನ್‌ಸ್ಟನ್ ಚರ್ಚಿಲ್. ಶಾಂತಿ -ಸತ್ಯಾಗ್ರಹಗಳ ಚೇತನವಾಗಿ ಬೆಳೆಯುತ್ತಿದ್ದ ಭಾರತದ ಮೇಲೂ ಚರ್ಚಿಲ್ ಈ ರಣನೀತಿ ಪ್ರಯೋಗಿಸಿದ. ದಾಸ್ಯದ ಸಂಕೋಲೆ ಕಳಚಿ ಛಲದಿಂದ ಸೆಟೆದೇಳಲು ಅಣಿಯಾಗುತ್ತಿದ್ದ ಸ್ವತಂತ್ರ ಭಾರತವನ್ನು ಮಿತ್ರನನ್ನಾಗಿ ಮಾಡಿಕೊಳ್ಳುವಂತೆ ಇಂಗ್ಲೀಷ್ ಆಳರಸರಿಗೆ ಈತ ಹೇಳಿದ ಕಿವಿ ಮಾತು: "ರಾಜಕೀಯದಲ್ಲಿ ಖಾಯಂ ಶತ್ರುವೂ ಇಲ್ಲ, ಖಾಯಂ ಮಿತ್ರನೂ ಇಲ್ಲ" - ಇದೇ ಈ ತಿಳಿವು.

ದೇವರಾಜ ಅರಸು ಮತ್ತು ಜೆ.ಹೆಚ್. ಪಟೇಲರ ನಡುವಣ ಕೆಂಡದಕೋಪ ಹಾಗೂ ಸೈದ್ಧಾಂತಿಕ ಅನುರಾಗಕ್ಕೆ ಈ ನಾಣ್ಣುಡಿ ಹೇಳಿ ಮಾಡಿಸಿದ ನಿದರ್ಶನ.

ದಿವಂಗತ ಡಿ. ದೇವರಾಜ ಅರಸುರವರು ಕ್ಯಾಬಿನೆಟ್ ದರ್ಜೆ ಸಚಿವರಾಗಿ ಇಂದಿನ ಹಿರಿಯ ರಾಜಕಾರಣಿ ಶ್ರೀ ರಾಮಕೃಷ್ಣಹೆಗಡೆವರೊಂದಿಗೆ ಸದನದಲ್ಲಿ ಒಟ್ಟಿಗೆ ಕುಳಿತದ್ದು 1962ರ ಜುಲೈನಲ್ಲಿ. ಇಷ್ಟು ಹೊತ್ತಿಗಾಗಲೇ ಹೆಗಡೆಯವರು ವೀರೇಂದ್ರಪಾಟೀಲರೊಂದಿಗೆ ಉಪಮಂತ್ರಿಗಳಾಗಿ ಕೆಲವು ವರ್ಷದ ಅನುಭವಗಳಿಸಿದ್ದಾಗಿತ್ತು. ಆಗಿನ್ನೂ ಶ್ರೀಮಂತ ಕುಟುಂಬದ

ಸಮಾಜವಾದಿ ವಕೀಲ ಜೆ.ಹೆಚ್. ಪಟೇಲರು ಶಾಂತವೇರಿ ಗೋಪಾಲಗೌಡರೊಂದಿಗೆ ರಾಜ್ಯದ ತುಂಬೆಲ್ಲಾ ಲೋಹಿಯಾ ಚಿಂತನೆಗಳನ್ನು ಹರಡುತ್ತಿದ್ದ ಕಾಲ. ಪಟೇಲರು ಸಂಸತ್ ಅನುಭವ ಮುಗಿಸಿ ವಿಧಾನಸಭೆಯಲ್ಲಿ ಅರಸರನ್ನು ಎದುರಾಗಿದ್ದು 1978ರ ಮಾರ್ಚ್ ತಿಂಗಳಿನಲ್ಲಿ. 1952ರಲ್ಲಿಯೇ ಶಾಸಕರಾದರೂ ಮಂತ್ರಿಯಾಗಲು ಅರಸರು ಹತ್ತು ವರ್ಷ ಕಾಯಬೇಕಾಯಿತು.

ಶಾಸಕರಾಗಿದ್ದಂದಿನಿಂದಲೂ ಅಳುಕದೆ ಮುನ್ನುಗ್ಗುವ ಧೈರ್ಯದ ಯುವ ಕಾಂಗ್ರೆಸ್ಸಿಗ ದೇವರಾಜ ಅರಸರು ಇಂದಿರಾಜಿಗೆ ಅಚ್ಚುಮೆಚ್ಚು. ತನ್ನ ತಂದೆಯ ಸಹಪಾಟಿಗಳೇ ಹೆಚ್ಚಾಗಿದ್ದ ಕಾಂಗ್ರೆಸ್ಸಿನ ವರಿಷ್ಠರೊಂದಿಗೆ ಆಕೆ ನಡೆಸಿದ್ದ ಸೆಣಸಾಟ ಅರಸರಿಗೆ ಪ್ರಗತಿಪರ ಮತ್ತು ಮಂದಗಾಮಿಗಳ ನಡುವಣ ಹೋರಾಟ ಎಂಬಂತೆ ಕಂಡಿತ್ತು. ಗರೀಬೀ ಹಠಾವೋ, ಬ್ಯಾಂಕ್ ಮತ್ತು ವಿಮಾ ಕ್ಷೇತ್ರದ ರಾಷ್ಟ್ರೀಕರಣ – ಇಂತಹ ಇಂದಿರಾಜಿಯವರ ಕೆಲವು ದಿಟ್ಟಹೆಜ್ಜೆಗಳು ದೇವರಾಜ ಅರಸುರವನ್ನಷ್ಟೇ ಏಕೆ ಇಡೀ ದೇಶದಲ್ಲಿನ ಯುವ ಪೀಳಿಗೆಯ ಕಾಂಗ್ರೆಸ್ಸಿಗರ ಮನಗೆದ್ದದ್ದು ಇತಿಹಾಸ.

ಪಟೇಲರಿಗೆ ದೇವರಾಜ ಅರಸರವರ ಧೋರಣೆಯಲ್ಲಿ ಬಹುವಾಗಿ ಹಿಡಿಸಿದ್ದು ಭೂಸುಧಾರಣೆ. ಸಮಾಜವಾದಿಯಾಗಿ ತಾನು ಚಿತ್ರಿಸಿಕೊಂಡಿದ್ದ ಕನಸನ್ನು ಕಾರ್ಯರೂಪಕ್ಕೆ ತಂದಿದ್ದರು ಅರಸು. ಜನಕಲ್ಯಾಣಕ್ಕಾಗಿ ಇದು ಅಭೂತಪೂರ್ವ ಕ್ರಾಂತಿಕಾರ್ಯ ಎನಿಸಿತು. ಗೇಣಿದಾರನಿಗೆ ಭೂ ಒಡೆತನ ದೊರಕಿಸಿಕೊಡಲು ಅರಸರು ಹಮ್ಮಿಕೊಂಡ ದಿಟ್ಟ ಹೆಜ್ಜೆ ಪಟೇಲರ ಮನವನ್ನು ಸೂರೆಗೊಂಡವು. ಮಾನವ ಇತಿಹಾಸದ ಮೇಲಿನ ಕಪ್ಪು ಛಾಯೆಯಂತಿದ್ದ ಜೀತಪದ್ಧತಿಯ ನಿರ್ಮೂಲನವಂತೂ ಪಟೇಲರನ್ನು ಮೂಕವಿಸ್ಮಿತರನ್ನಾಗಿ ಮಾಡಿತ್ತು.

1977ರ ಸಾರ್ವತ್ರಿಕ ಚುನಾವಣೆಯಲ್ಲಿ ಇಂದಿರಾಜಿ ಪರಾಜಯ ಅನುಭವಿಸಿದ ಬಳಿಕ, ಅವರಿಗೆ ಚಿಕ್ಕಮಗಳೂರಿನ ಅಂದಿನ ಸಂಸದ ಶ್ರೀ ಡಿ.ಬಿ. ಚಂದ್ರೇಗೌಡರು ತಮ್ಮ ಸ್ಥಾನ ತೆರವು ಮಾಡಿಕೊಟ್ಟರಷ್ಟೆ. ಈ ವೇಳೆಗಾಗಲೇ ಪಟೇಲರು ವಿಧಾನಸಭೆಯನ್ನು ಪ್ರವೇಶಿಸಿದ್ದರು.

ಚಿಕ್ಕಮಗಳೂರು ಲೋಕಸಭಾ ಮರುಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ವಿಜಯಿಯಾದ ಕೆಲವೇ ದಿನಗಳಲ್ಲಿ ದೇವರಾಜ ಅರಸರು ಇಂದಿರಾಗಾಂಧಿಯವರ ಅವಕೃಪೆಗೆ ಒಳಗಾಗಿ ಕಾಂಗ್ರೆಸ್ಸಿನಿಂದ ಉಚ್ಚಾಟನೆಗೊಂಡಾಗ ಅವರ ನೆರವಿಗೆ ಧಾವಿಸಿದ ಮೊದಲ ವ್ಯಕ್ತಿ ಪಟೇಲ್. ಪುನಃ ಅಧಿಕಾರಕ್ಕೆ ಬಂದ ಇಂದಿರಾಜಿಯವರನ್ನು ಉಳಿದ ರಾಜಕಾರಣಿಗಳು ಭಯಮಿಶ್ರಿತ ಗೌರವ ಮತ್ತು ಮೆಚ್ಚುಗೆಯಿಂದ ನೋಡುತ್ತಿದ್ದಾಗ ಅವರನ್ನು ಎದುರು ಹಾಕಿಕೊಂಡ ಅರಸು ಧೈರ್ಯ ಮತ್ತು ರಿಸ್ಕ್ ತೆಗೆದುಕೊಳ್ಳುವ ಸಾಮರ್ಥ್ಯ ಆದರ್ಶವೆನಿಸಿತು. ಈ ನಿಲುವಿಗಾಗಿ ಸೈದ್ಧಾಂತಿಕ ಪಕ್ಷಾಂತರ ಮಾಡಲು ಪಟೇಲರು ಹಿಂದೆ ಮುಂದೆ ನೋಡಲಿಲ್ಲ. ಅರಸರಲ್ಲಿ ಪಟೇಲರು ಲೋಹಿಯಾರ ಸಿಟ್ಟು ಮತ್ತು ಹೋರಾಟದ ಗುಣ ಗುರ್ತಿಸಿದರು.

## ಕೈಕೈ ಮಿಲಾಯಿಸಿದ ಪಟೇಲ್ - ಅರಸು

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಮಾನ್ಯ ಅರಸರೇ ನಿಮ್ಮದು ಸರ್ವಾಧಿಕಾರಿ ಪ್ರವೃತ್ತಿ. ಹೀಗಾಗಿ ನಿಮ್ಮ ಜೊತೆಯವರಾಗಲೀ, ನಿಮ್ಮ ಮಂತ್ರಿಗಳಾಗಲೀ ನಿಮ್ಮ ಮುಂದೆ ನಿಮ್ಮ ಅವಗುಣಗಳನ್ನು ಕುರಿತು ಮಾತನಾಡುತ್ತಿಲ್ಲ. ಮಾತನಾಡಲು ಆಗುತ್ತಿಲ್ಲ. ಹೀಗೆ ಬೇರೆಡೆ ನಡೆಯುವುದು ದುಸ್ತರ. ನೀವು ಸಾಕಷ್ಟು 'ಬಾಂಡೆಡ್ ಲೇಬರ್‌ಗಳನ್ನು' ನಿಮ್ಮ ಬಳಗದಲ್ಲಿಟ್ಟುಕೊಂಡಿದ್ದೀರಿ. ಅವರು ನೀವು ಹೇಳಿದ್ದಕ್ಕೆಲ್ಲಾ ಕೈ ಎತ್ತುತ್ತಾರೆ.

ಡಿ. ದೇವರಾಜ ಅರಸು (ಮುಖ್ಯಮಂತ್ರಿ): ನಿಮ್ಮಂತಹ ಸೋಷಲಿಸ್ಟ್ ಇದ್ದುಬಿಟ್ಟರೆ ಜನರ ಉದ್ಧಾರವಾಗುತ್ತೋ? ಇವರ ತಲೆಯಲ್ಲಿ ಎಷ್ಟು ಕೂದಲಿದೆಯೋ ಹಾಗಾಗುತ್ತೆ. ಹೊಸದಾಗಿ ಕಲಿಯಲು ಪಟೇಲರಿಗೆ ಪುರುಸೊತ್ತು ಇಲ್ಲ. ಕಲಿತ ಹಳೆಯ ವಿಚಾರ ಇಲ್ಲವೇ ಚಾಳಿಯನ್ನು ಮರೆಯಲೂ ಆಗಿಲ್ಲ. ಡಾಕ್ಟರ್ ರಾಮಮನೋಹರ ಲೋಹಿಯಾ ಪುಸ್ತಕ ಓದಿ, ವೇದಾಧ್ಯಯನ ಮಾಡ ಹೊರಟ ದುರಂತವಿದು.

ಜೆ.ಹೆಚ್. ಪಟೇಲ್: ಒಂದು ಕಥೆ ಹೇಳುತ್ತೇನೆ. ಕೇಳಿ. ಕೆಲವರು ಹಕ್ಕಿ ಶಿಕಾರಿ ಮಾಡುತ್ತಾರೆ. ಅವರ ಬಳಿ ಪಾಠ ಕಲಿಸಿದ ಗೌಜಿಗನ ಹಕ್ಕಿಯೊಂದು ಇರುತ್ತದೆ. ಈ ಹಕ್ಕಿ ಶಿಕಾರಿ ಮಾಡುವವರ ಮಾತನ್ನು ಮಾತ್ರ ಕೇಳುತ್ತದೆ. ಈ ಹಕ್ಕಿಗೆ ಶೀಟಿ ಹಾಕಿ ತನ್ನ ಬಳಗವನ್ನೆಲ್ಲಾ ಕರೆಸುವ ತಂತ್ರ ಹೇಳಿಕೊಟ್ಟಿರಲಾಗುತ್ತೆ.

ಬೇಟೆಗಾರ ಕಾಡಿಗೆ ಶಿಕಾರಿಗಾಗಿ ಈ ಹಕ್ಕಿಯನ್ನು ಜೊತೆಯಲ್ಲಿ ಕರೆದೊಯ್ಯುತ್ತಾನೆ. ಈ ಹಕ್ಕಿ ಸೀಟಿ ಊದಿದೊಡನೆಯೇ ಅದರ ಬಳಗದ ಹಕ್ಕಿಗಳೆಲ್ಲವೂ ಬರುತ್ತವೆ. ಬೇಟೆಗಾರ ಬಲೆ ಬೀಸಿ ಹಿಡಿದು ಹಕ್ಕಿಗಳನ್ನೆಲ್ಲಾ ಮನೆಗೆ ತೆಗೆದುಕೊಂಡು ಬರುತ್ತಾನೆ.

ಕೊನೆಗೆ ತಾವು ಸಾಕಿಕೊಂಡಿರುವ ಗೌಜಿಗದ ಹಕ್ಕಿಯೊಂದನ್ನು ಬಿಟ್ಟು ಉಳಿದ ಹಕ್ಕಿಗಳೆಲ್ಲವನ್ನು ಬೇಟೆಗಾರರು ತಿನ್ನುತ್ತಾರೆ.

ಹಾಗೆಯೇ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ದೇವರಾಜ ಅರಸುರವರು ಈ ಹರಿಜನ ಮಂತ್ರಿಗಳನ್ನು ಸಾಕಿಕೊಂಡಿದ್ದಾರೆ. ಅಂತೆಯೇ ಶ್ರೀಮಾನ್ ಅಜೀಜ್ ಸೇಠ್‌ರವರನ್ನು ಗೌಜಿಗನ ಹಕ್ಕಿಯಂತೆ ಸಾಕಿ ಮುಸ್ಲಿಂ ಜನಾಂಗವನ್ನೆಲ್ಲಾ ಹಿಡಿದುಕೊಂಡು ಬಂದಿದ್ದಾರೆ.

(ವಿಧಾನಸಭೆ ಕಲಾಪ, ಮಾರ್ಚಿ 21, 1978)

## ಅರಸು : ಜಾಣ ಬೆಕ್ಕು

ಜೆ.ಹೆಚ್. ಪಟೇಲ್: ಮಾನ್ಯ ಎಸ್.ಎಂ. ಯಾಹ್ಯಾರವರೇ, (ಶ್ರೀ ಯಾಹ್ಯಾ ಅರಸು ಮಂತ್ರಿಮಂಡಲದಲ್ಲಿ ಹಣಕಾಸು ಖಾತೆ ಸಚಿವರು) ನಿಮ್ಮ ಮಾನ್ಯ ಮುಖ್ಯಮಂತ್ರಿಯವರ ರಾಜಕಾರಣದ ಜಾಡು ನಿಮಗೆ ಹಾಗೂ ನಿಮ್ಮ ಉಳಿದ ಸಹೋದ್ಯೋಗಿಗಳಿಗೆ ತಿಳಿಯುತ್ತಿಲ್ಲ.

ಅವರ ರಾಜಕಾರಣದ ಮರ್ಮ ತಿಳಿಯುವುದರೊಳಗೆ ಕಾಲ ಮಿಂಚಿರುತ್ತದೆ. ನನಗೆ ಒಂದು ಕಥೆ ನೆನಪಿಗೆ ಬರುತ್ತದೆ.

ಒಂದು ಜಾಣ ಬೆಕ್ಕು ಇತ್ತಂತೆ. ಪಾಪ, ಊಟವಿಲ್ಲದೆ ಕಷ್ಟಪಡುತ್ತಿತ್ತು. ಎಷ್ಟೇ ಆಗಲಿ ಜಾಣ ಬೆಕ್ಕು. ಉಪಾಯ ಹುಡುಕಿತು. ಒಂದು ದಿನ ಇಲಿಗಳನ್ನೆಲ್ಲಾ ಕರೆದು ಇನ್ನು ಮುಂದೆ ನಾನು ನಿಮ್ಮನ್ನು ತಿನ್ನುವುದಿಲ್ಲ. ನಿಮ್ಮನ್ನೆಲ್ಲಾ ಕಾಶಿಗೆ ಕರೆದುಕೊಂಡು ಹೋಗುತ್ತೇನೆ. ಸಿದ್ಧರಾಗಿ ಎಂದು ಹೇಳಿತಂತೆ. ಇಲಿಗಳು ಸರಿ ಎಂದು ಒಪ್ಪಿದವು. ಆಗ ಬೆಕ್ಕು ಆಲೋಚನೆ ಮಾಡಿ ನೀವೆಲ್ಲ ಬಹಳ ದುರ್ಬಲರು. ನೀವು ಮುಂದೆ ಹೋಗಿ, ನಿಮಗೆ ಅಪಾಯವಿಲ್ಲದ ರೀತಿಯಲ್ಲಿ ನಿಮ್ಮನ್ನು ನೋಡಿಕೊಂಡು ನಾನು ಹಿಂದೆ ಹಿಂದೆ ಬರುತ್ತೇನೆ ಎಂದು ಹೇಳಿತಂತೆ. ಹಾಗೆಯೇ ಆಗಲಿ ಎಂದ ಇಲಿಗಳು ಮುಂದೆ ಮುಂದೆ ಹೋಗುತ್ತಿದ್ದವಂತೆ, ಬೆಕ್ಕು ಒಂದೊಂದೇ ಇಲಿಗಳನ್ನು ಮುಗಿಸುತ್ತಾ ಬಂತಂತೆ.

ಹೀಗೆ ದೇವರಾಜ ಅರಸುರವರು ನಿಮ್ಮನ್ನೆಲ್ಲಾ ಮುಗಿಸುತ್ತಾರೆ. ಅವುಗಳಲ್ಲಿ ಕೆಲವು ಇಲಿಗಳು ಹಿಂದಕ್ಕೆ ನೋಡಿ ಈ ಬೆಕ್ಕು ನಮ್ಮನ್ನು ಕಾಶಿಗೆ ಕರೆದುಕೊಂಡು ಹೋಗುವುದಿಲ್ಲ. ಅದಕ್ಕೂ ಮುಂಚೆ ಕೈಲಾಸಕ್ಕೆ ಖಾಯಂ ಆಗಿ ಕಳುಹಿಸುತ್ತದೆ ಎಂದು ಖಚಿತಮಾಡಿಕೊಂಡರಂತೆ. ಇಂತಹ ಕೆಲವು ಪುಣ್ಯಾತ್ಮರು ನಮ್ಮ ಜೊತೆಯಲ್ಲಿದ್ದಾರೆ. ವಿಚಾರವಂತರಾದ ಶ್ರೀಮಾನ್ ರಂಗನಾಥ್‌ರವರು ಹಾಗೂ ಬಸವಲಿಂಗಪ್ಪನವರನ್ನು ಅರಸುರವರು ಯಾವಾಗ ಮುಗಿಸುತ್ತಾರೋ? ಮಾನ್ಯ ಯಾಹ್ಯಾರವರು ಕೂಡ ಯಾವ ಘಳಿಗೆಯಲ್ಲಿ ಬೆಕ್ಕಿನ ಬಾಯಿಗೆ ಹೋಗುತ್ತಾರೋ ತಿಳಿಯದು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ ಮಾರ್ಚಿ 23, 1979)

## ಭ್ರಷ್ಟಾಚಾರದ ತಾಂಡವ ನೃತ್ಯ

ಮಾನ್ಯ ಮುಖ್ಯಮಂತ್ರಿಗಳಾದ ಅರಸುರವರು ಬಹಳ ಚತುರರು, ರಾಜಕಾರಣದಲ್ಲಿ ಹೆಚ್ಚು ಪಳಗಿದವರು. ಆದರೆ ಅವರ ಆಡಳಿತದ ಬಿಗಿ ಮತ್ತು ಪ್ರಾಮಾಣಿಕತೆ ಬಗೆಗೆ ಬಹು ಕೆಟ್ಟ ಪ್ರತೀತಿ ಇದೆ. ಬೇರೆ ಯಾವ ರಾಜ್ಯದಲ್ಲಿಯೂ ಇಷ್ಟು ಕೆಟ್ಟ ಆಡಳಿತ ಇಲ್ಲ. ಇದನ್ನು ನಾನು ಬಹಳ ದುಃಖದಿಂದ ಹೇಳುತ್ತಿದ್ದೇನೆ. ಭ್ರಷ್ಟಾಚಾರ ದಿಲ್ಲಿಯಲ್ಲಿದೆ. ಬಂಗಾಳದಲ್ಲಿದೆ. ಬೇರೆ ರಾಜ್ಯಗಳಲ್ಲಿಯೂ ಇದೆ. ಭ್ರಷ್ಟಾಚಾರವಿಲ್ಲದ ಸಮಾಜ ಬಹುಶಃ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಇಲ್ಲ. ಆದರೆ ಕರ್ನಾಟಕದ ದುಸ್ಥಿತಿ ಎಂದರೆ, ಇದು ಒಂದು ಗಲೀಜು ಕೊಂಪೆಯಂತಾಗಿದೆ. ಮನೆಯಲ್ಲಿ ದೇವರ ಮನೆ, ಮಲಗುವ ಕೋಣೆ, ಕುಳಿತು ಮಾತನಾಡಲು ವರಾಂಡ, ಹಾಗೆಯೇ ಪಾಯಿಖಾನೆಗೆ ಪ್ರತ್ಯೇಕ ಜಾಗ ಇರುತ್ತದೆ. ಆದರೆ ಕರ್ನಾಟಕದಲ್ಲಿ ಎಲ್ಲವೂ ಭ್ರಷ್ಟಾಚಾರ ತುಂಬಿದ ಶೌಚಾಲಯವೇ ಆಗಿದೆ. ತಾಲ್ಲೂಕು ಆಫೀಸಿನಿಂದ ಹಿಡಿದು ತುದಿಯವರೆಗೂ ಲಂಚಮಯವೇ ಆಗಿದೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷ ಶಾಸಕ) ವಿಧಾನ ಸಭೆ ಮಾರ್ಚಿ 23, 1979)

## ಮುಟ್ಠಾಳ ಸರ್ಕಾರ

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ):** ನಮ್ಮ ಅರ್ಥವ್ಯವಸ್ಥೆಯಲ್ಲಿರತಕ್ಕ ಮೂಲ ದೋಷಗಳಿಂದ ಪಟ್ಟಣ ಆಧಾರಿತ ಅರ್ಥವ್ಯವಸ್ಥೆ ಬೆಳೆಯುತ್ತದೆ. ಹಳ್ಳಿ ಬಗೆಗೆ ಗಮನವಿರುವುದಿಲ್ಲ. ಪಟ್ಟಣಗಳಲ್ಲಿ ಸಣ್ಣ ಕೊರತೆಯಾದರೂ ಅದು ಸರ್ಕಾರದ ಗಮನಕ್ಕೆ ಬರುತ್ತದೆ. ಇನ್ನು ಹಳ್ಳಿಗಾಡಿನ ಜನರು ಮೂಕರು. ಅವರ ವೇದನೆಯನ್ನು, ಸಂಕಟವನ್ನು ಇವತ್ತು ಕೇಳುವವರಾರು? ಈ ಮುಟ್ಠಾಳ ಸರ್ಕಾರಕ್ಕೆ ರೈತರು ಜೀವಕೊಡುತ್ತಿದ್ದಾರೆ.

ಟಿ. ಭಾಸ್ಕರಶೆಟ್ಟಿ: ಅಧ್ಯಕ್ಷರೇ, ಮಾನ್ಯ ಹಿರಿಯ ಸದಸ್ಯರಾದ ಪಟೇಲರು ಮಾತನಾಡುತ್ತಾ 'ಮುಟ್ಠಾಳ ಸರ್ಕಾರ' ಎಂದು ಹೇಳಿದ್ದಾರೆ. ಅದು ಅನ್‌ಪಾರ್ಲಿಮೆಂಟರಿ ಶಬ್ಧವಾಗುವುದಿಲ್ಲವೇ?

ಜಿ.ಎಫ್. ಉಪ್ಪನಾಳ್: ಮುಟ್ಠಾಳ ಸರ್ಕಾರ ಎಂದು ಹೇಳಿರುವ ಬಗ್ಗೆ ನನ್ನ ಪಾಯಿಂಟ್ ಆಫ್ ಆರ್ಡರ್.

ಜೆ.ಹೆಚ್. ಪಟೇಲ್: ಅಧ್ಯಕ್ಷರೇ, ಮುಟ್ಠಾಳ ಶಬ್ಧ ಅನ್‌ಪಾರ್ಲಿಮೆಂಟರಿ ಆಗುವುದಿಲ್ಲ. ಅದರ ಬಗ್ಗೆ ಬೇಕಾದರೆ ವಿವರಣೆ ಕೊಡುತ್ತೇನೆ. ಮುಟ್ಟಿದ್ದು ಎಲ್ಲಾ ಹಾಳಾದರೆ. ಅದು ಮುಟ್ಹಾಳ ಅಥವಾ ಮುಟ್ಠಾಳ. ಇವರು ಏನು ಮುಟ್ಟಿದರೂ ಹಾಳಾಗುತ್ತದೆ. ಆದರೂ ಅದು ಅನ್‌ಪಾರ್ಲಿಮೆಂಟರಿ ಶಬ್ಧ ಎಂದು ಖಚಿತವೆನಿಸಿದರೆ ಆ ಪದವನ್ನು ಹಿಂತೆಗೆದುಕೊಳ್ಳುತ್ತೇನೆ.

(ವಿಧಾನ ಸಭೆ ಕಲಾಪ : ಜುಲೈ 15, 1978)

## "ಸಂಬಳವೇ ಬೇಡ.. ಮಂತ್ರಿ ಮಾಡಿ"

## ಪಟೇಲರಿಗೆ ಅರಸು ಕಿವಿಮಾತು

ಮುಖ್ಯಮಂತ್ರಿಯಾಗಿದ್ದ ದೇವರಾಜ ಅರಸು ಮತ್ತು ಪ್ರತಿಪಕ್ಷದ (ಜನತಾಪಕ್ಷ) ಶಾಸಕ ಜೆ.ಹೆಚ್. ಪಟೇಲ್. ನಾಡಿನಲ್ಲಿ ಭೂಸುಧಾರಣೆಯನ್ನು ಜಾರಿಗೆ ತರುವಲ್ಲಿ ದೃಢವಾದ ನಿಲುವು ತಾಳಿದವರು ಇವರಿಬ್ಬರೂ ಈ ವಿಚಾರದಲ್ಲಿ ಇಬ್ಬರೂ ಒಂದೇ ಬಳ್ಳಿಯ ಎರಡು ಹೂಗಳು.

ಆದರೆ ಸದನದಲ್ಲಿ ಇವರಿಬ್ಬರೂ ಜಿದ್ದಾಜಿದ್ದಿ ಹೋರಾಡುವ ಎದುರಾಳಿಗಳು. ದುಂದುವೆಚ್ಚ, ಭ್ರಷ್ಟ ಅಧಿಕಾರಿಗಳಿಗೆ ರಕ್ಷಣೆ, ಆಡಳಿತ ಭಾಷೆ ಅನುಷ್ಠಾನದ ವಿಳಂಬ, ರಾಜಕೀಯ ಪಕ್ಷಗಳ ಮೇಲೆ ದಾಳಿ, ಗುಂಪುಗಾರಿಕೆ - ಹೀಗೆ ವಿವಿಧ ಆರೋಪ ಕುರಿತಂತೆ ಆಡಳಿತ ಪಕ್ಷದ ಸರ್ಕಾರವನ್ನು ಹಿಗ್ಗಾಮುಗ್ಗಾ ಖಂಡಿಸಿ ಮಾತನಾಡುತ್ತಿದ್ದರು ಪಟೇಲರು. ಬಹುತೇಕ ಸಂದರ್ಭಗಳಲ್ಲಿ ಪಟೇಲರ ಮಾತನ್ನು ಕೇಳಲು ಮುಖ್ಯಮಂತ್ರಿ ಅರಸರು ಸದನದಲ್ಲಿಯೇ ಹಾಜರಿರುತ್ತಿದ್ದುದೂ ಉಂಟು.

ಇಂತಹ ಒಂದು ಸಂದರ್ಭ: ಮುಖ್ಯಮಂತ್ರಿ ಅರಸುರವರ ಸರ್ಕಾರ ಮಂತ್ರಿಗಳ ಸಂಬಳವನ್ನು ತಿಂಗಳಿಗೆ 1200 ರೂಗಳಿಂದ 1750 ರೂಪಾಯಿಗಳಿಗೆ ಹೆಚ್ಚಿಸಲು ನಿರ್ಧರಿಸಿತು. ಸದನದಲ್ಲಿ ಈ ವಿಷಯ ಚರ್ಚೆಗೆ ಬಂದಾಗ ಪಟೇಲರು – ಅರಸು ನಡುವೆ ಸಂಭಾಷಣೆ ಹೀಗಿತ್ತು:

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಖರ್ಚು ವೆಚ್ಚ ಸರಿತೂಗಿಸುವುದು ಹಾಗೂ ಸರ್ಕಾರಕ್ಕೆ ತಪಶೀಲು ಕೊಡುವುದು ಮಂತ್ರಿಗಳಿಗೆ ಕಷ್ಟವೇ? ನನಗಂತೂ ತಿಳಿಯುವುದಿಲ್ಲ. ಅಷ್ಟು ನಿಮಗೆ ಕಷ್ಟ ಇದ್ದರೆ ನೀವು ಬಿಟ್ಟು ಬಿಡಿ ನಾವು ನಡೆಸುತ್ತೇವೆ.

ಡಿ. ದೇವರಾಜ ಅರಸು (ಮುಖ್ಯಮಂತ್ರಿ): ತಾವು ಕಷ್ಟಬೇಡಿ ಎಂದು ಹೇಳಿದಿರಿ. ಆದರೆ ಸುಮ್ಮನೆ ಅಧಿಕಾರ ನಡೆಸಲು ಬರುವವರಿದ್ದಾರೆ. ಶ್ರೀಮಾನ್ ಜೆ.ಹೆಚ್. ಪಟೇಲರು ಮಂತ್ರಿಗಳಿಗೆ ಅಷ್ಟು ಕಷ್ಟವಾದರೆ ನಾವು ನಡೆಸುತ್ತೇವೆ ಎಂದು ಹೇಳಿದ್ದಾರೆ. ನಾನು ಅವರಿಗೆ ಒಂದು ಕಿವಿ ಮಾತು ಹೇಳುತ್ತೇನೆ.

ನಮ್ಮನ್ನು ತೆಗೆದುಕೊಳ್ಳಿ. ನಮಗೆ ಸಂಬಳವೇ ಬೇಡ. ಸಂಬಳವಷ್ಟೇ ಏಕೆ ಯಾವುದೂ ಬೇಡ. ನಮ್ಮನ್ನು ಬರೀ ಮೆಂಬರುಗಳಾಗಿ ಮಾಡಿ ಎಂದು ಕೇಳಿಕೊಳ್ಳುವವರಿದ್ದಾರೆ ಪಟೇಲರೇ, ಅಂತಹ ಜನರ ಕಥೆಯೇ ಬೇರೆ.

ಜಿ.ಬಿ. ಶಂಕರ್‌ರಾವ್: ಕೂಲಿ ಇಲ್ಲದೆ ಕುರಿ ಕಾಯುವ ತೋಳ ಇರುವಂತಹ ಜನ ಅಲ್ಲವೇ?

ಡಿ. ದೇವರಾಜ ಅರಸು: ನಮ್ಮವರೇ ಆಗಲಿ, ನಿಮ್ಮವರೇ ಆಗಲಿ ಅಂತಹ ಜನರನ್ನು ಇಲ್ಲಿ ತಂದಿಡುವುದು ಬೇಡ. ಅದಕ್ಕಾಗಿ ಕರ್ನಾಟಕ ಮಂತ್ರಿಗಳ ಸಂಖ್ಯೆ ಮತ್ತು ಭತ್ಯೆ ಕಾಯಿದೆಯನ್ನು (1978 ತಿದ್ದುಪಡಿ ಮಸೂದೆ) ನಮ್ಮ ಸರ್ಕಾರ ಜಾರಿಗೆ ತರುತ್ತಿದೆ.

ಎಸ್.ಆರ್. ಬೊಮ್ಮಾಯಿ (ಪ್ರತಿ ಪಕ್ಷದ ನಾಯಕ ಇಂಗ್ಲೀಷಿನಲ್ಲಿ): ಮುಖ್ಯಮಂತ್ರಿಯವರು ಮಸೂದೆಯ ಬಗೆಗೆ ಹೇಳಿದ ಬಳಿಕ ಒಂದು ಮಾತನ್ನು ಹೇಳಬೇಕು ಎನ್ನಿಸುತ್ತಿದೆ. 1966ರ ಸುಮಾರಿನಲ್ಲಿಯೇ ಶಾಸಕರುಗಳಿಗೆ ಟೆಲಿಫೋನ್ ಸೌಲಭ್ಯ ಒದಗಿಸಬೇಕು ಎಂಬ ಬೇಡಿಕೆ ಇತ್ತು. ಇದು ಕಾರ್ಯರೂಪಕ್ಕೆ ಬರಲು 10 ವರುಷ ಬೇಕಾಯಿತು. ಇಂದು ನಮ್ಮೆಲ್ಲರಿಗೂ ಟೆಲಿಫೋನ್ ಸೌಲಭ್ಯ ದೊರೆತಿದೆ. ವಿದೇಶಗಳಿಗೆ ನಮ್ಮ ಸ್ಥಿತಿಯನ್ನು ಹೋಲಿಸಿಕೊಂಡರೆ ಆಶ್ಚರ್ಯವಾಗುತ್ತದೆ. ಅಮೇರಿಕೆಯ ಸೆನೆಟರ್‌ಗೆ ಪ್ರತ್ಯೇಕ ಕಛೇರಿ, ಒಬ್ಬ ಸ್ಟೆನೋಗ್ರಾಫರ್, ವಾಹನ ಮತ್ತಿತರ ಸೌಲಭ್ಯವಿರುತ್ತದೆ. ದಿನವಿಡೀ ಶಾಸಕನಾಗಿ ಕಾರ್ಯನಿರ್ವಹಿಸಲು ಅವನಿಗೆ ಎಲ್ಲ ಸೌಕರ್ಯಗಳು ಇರುತ್ತವೆ. ನಿಜ, ನೂರಕ್ಕೆ 75 ಕ್ಕಿಂತಲೂ ಕಡಿಮೆ ಜನ ಬಡತನ ರೇಖೆಯಿಂದ ಕೆಳಗಿರುವ ನಮ್ಮ ದೇಶದಲ್ಲಿ ಸಂಸದರು ಮತ್ತು ಶಾಸಕರುಗಳಿಗೆ ಈ ಎಲ್ಲ ಸೌಲಭ್ಯಗಳು ಹೆಚ್ಚು ಎನಿಸಿದಲ್ಲಿ ವಿಶೇಷವೇನಿಲ್ಲ. ನಾವು ಮಂತ್ರಿಗಳಾದವರು ಸ್ವಚ್ಛವಾದ ಆಡಳಿತವನ್ನು ಕೊಡಬೇಕು. ಚಾರಿತ್ರ್ಯವನ್ನು ಕಾಪಾಡಿಕೊಂಡು ಬರಬೇಕು.

ಮಂತ್ರಿಗಳು ಕೂಡ ಸರ್ಕಾರ ಕೊಡುವ ಈ ಸೌಕರ್ಯಗಳನ್ನು ಪಡೆದ ಮೇಲೆ ಸರಿಯಾದ ರೀತಿಯಲ್ಲಿ ನಡೆದುಕೊಂಡು ಹೋಗಬೇಕು.

ಜೆ.ಹೆಚ್. ಪಟೇಲ್: (ಇಂಗ್ಲೀಷ್‌ನಲ್ಲಿ) ಈ ವಿಷಯದಲ್ಲಿ ಇಡೀ ಸದನ ಮುಖ್ಯ ಮಂತ್ರಿಗಳ ಭಾವನೆಯನ್ನು ಮಾನ್ಯ ಮಾಡುತ್ತದೆ ಎಂದು ಹೇಳ ಬಯಸುತ್ತೇನೆ.

(ವಿಧಾನ ಸಭೆ ಕಲಾಪ : ಆಗಸ್ಟ್ 24, 1978)

## ತಾಕತ್ತಿನ ಪ್ರಶ್ನೆ

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಸ್ವಾಮಿ ಅಧ್ಯಕ್ಷರೇ, ಸರ್ಕಾರದ ಕೆಲಸ ಸುಸೂತ್ರವಾಗಿ ನಡೀಬೇಕೂ ಅಂದ್ರೆ ಹೇಗೆ ಸಾಧ್ಯ ನೀವೇ ಹೇಳಿ. ಮುಖ್ಯಮಂತ್ರಿಗಳು (ಅರಸರು) ತಾವೇ 18 ಖಾತೆಗಳನ್ನು ಇಟ್ಟುಕೊಂಡೀದಾರೆ, ಪಾಪ ಬೇರೆಯವರಿಗೆ ಉಪದೇಶ ಹೇಳ್ತಿದಾರೆ.

ಡಿ. ದೇವರಾಜ ಅರಸು (ಮುಖ್ಯಮಂತ್ರಿ): ಅಲ್ಲ ಸ್ವಾಮಿ ನಿಮಗೆ ತಾಕತ್ ಇಲ್ಲ ಎಂದರೆ ನಮಗೂ ಇಲ್ಲ ಎಂದು ಅಂದ್ಕೊಂಡಿದೀರೇನು?

ಜೆ.ಹೆಚ್. ಪಟೇಲ್: ಇರಬಹುದು, ನಿಮ್ಮ ಜೊತೆ ಇರುವ ಮಂತ್ರಿಗಳಲ್ಲಿ ಹಲವರಿಗೆ ತಾಕತ್ತು ಇಲ್ಲದಿರಬಹುದು, ಆದರೆ ನಮಗಿಲ್ಲ ಅಂತ ಈಗ್ಲೇ ನೀವು ಹೇಗೆ ಹೇಳಕ್ಕೆ ಸಾಧ್ಯ ಸ್ವಾಮೀ..

(ವಿಧಾನಸಭೆ ಕಲಾಪ : ಮೇ 25, 1979)

## ಗ್ರೋವರ್ ಆಯೋಗ

ದೇವರಾಜ ಅರಸು (ಮುಖ್ಯಮಂತ್ರಿ) : ನನ್ನ ಆಡಳಿತದ ಮೇಲೆ ನಿಮಗೆ ಕಣ್ಣು ಬಿದ್ದಿದೆ ಸ್ವಾಮೀ.. ನನ್ನ ಮೇಲೆ ಭ್ರಷ್ಟಾಚಾರದ ಆರೋಪ ಹೊರಿಸೋದಕ್ಕೆ ಎರಡು ವರ್ಷ ತೊಗೊಂಡ್ರೀ.. ಬೆಟ್ಟ ಅಗೆದ ಮೇಲೆ ಇಲಿ ಸಿಕ್ಕತ್ತೆ ತಡೀರಿ..

ಜೆ.ಹೆಚ್.ಪಟೇಲ್ (ಪ್ರತಿಪಕ್ಷದ ಶಾಸಕ): ತಮಗೆ ಸಿಟ್ಟೇ ಬರೋಲ್ಲ.. ಅಂತಾದ್ರಲ್ಲಿ ಈಗ ನೀವು ಸಿಟ್ಟಿನಿಂದ ಕೆಂಡ ಕಾರುವುದನ್ನು ಕಂಡರೆ ಆಶ್ಚರ್ಯ ಆಗ್ತಿದೆ. ಗ್ರೋವರ್ ಆಯೋಗ ಅಂದ ಕೂಡ್ಲೆ, ಹೇಳಿ ಸ್ವಾಮಿ ಯಾಕಿಷ್ಟು ಸಿಟ್ಟು.

ದೇವರಾಜ ಅರಸು: ಗ್ರೋವರ್ ಆಯೋಗದ ಬಗ್ಗೆ ಮಾತಾಡೋಕೆ ನನಗೆ ಇಷ್ಟವಿಲ್ಲ, 66 ಕರಪ್ಷನ್ ಚಾರ್ಜು ಮಾಡೀದೀರಿ, ಅದರಲ್ಲಿ ಒಂದರಲ್ಲಾದ್ರೂ ಭ್ರಷ್ಟಾಚಾರವಿದೆಯೇ ಎಂದು ಸಾಬೀತು ಮಾಡಲು ನಿಮಗಾಗಿಲ್ಲ.. ತಡ್ಕೋಳಿ... ಅವಕಾಶ ಬಂದಾಗ ಅದನ್ನೆಲ್ಲಾ ನಿಮ್ಮ ಮುಖಕ್ಕೆ ಹಿಡೀತೀನಿ.

(ವಿಧಾನಸಭೆ ಕಲಾಪ: ಮೇ 25, 1979)

## ಕರ್ನಾಟಕ ಸುಖೀ ರಾಜ್ಯ

ಡಿ. ದೇವರಾಜ ಅರಸು (ಮುಖ್ಯಮಂತ್ರಿ): ಮಾನ್ಯ ಪಟೇಲರೇ, Per capita ಇನ್‌ಕಮ್ ವಿಷಯದಲ್ಲಿ ದಕ್ಷಿಣ ರಾಜ್ಯಗಳ ಪೈಕಿ ಕರ್ನಾಟಕವೇ ಹೆಚ್ಚಿನದೆಂದು ರಿಸರ್ವ್ ಬ್ಯಾಂಕ್ ಅಂಕಿ ಅಂಶಗಳು ಹೇಳುತ್ತವೆ.

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಮಾನ್ಯ ಅರಸುರವರೇ, ನಿಮ್ಮ ಅಂಕಿ ಅಂಶಗಳು ತಪ್ಪು ತಪ್ಪಾಗಿವೆ. ತಾವು ಕರ್ನಾಟಕದ Per Capita Income ಮೂರು ರೀತಿಯಲ್ಲಿ ಹೇಳಿದ್ದೀರಿ. ಮೊದಲನೆಯದು Draft & Estimated Plan ಪುಟ ೩ರಲ್ಲಿ 840ರೂ ಎಂದು ಹೇಳಿದ್ದೀರಿ. ಅದೇ ಕರ್ನಾಟಕದಲ್ಲಿ Draft & Estimated Plan ಪುಟ 58ರಲ್ಲಿ 950ರೂ ಎಂದು ಹೇಳಿದ್ದೀರಿ. ನ್ಯಾಷನಲ್ ಡೆವೆಲಪ್‌ಮೆಂಟ್ ಕೌನ್ಸಿಲ್‌ನಲ್ಲಿ ಭಾಷಣ ಮಾಡುತ್ತಾ, ತಾವು 1045ರೂ ಎಂದು ಹೇಳಿದ್ದೀರಿ. ಇದರಲ್ಲಿ ಯಾವುದನ್ನು ನಾವು ತೆಗೆದುಕೊಳ್ಳೋಣ ಹೇಳಿ?

ಡಿ. ದೇವರಾಜ ಅರಸು: ಇದು latest Figure.

ಜೆ.ಹೆಚ್. ಪಟೇಲ್: ಇಲ್ಲಿ 840 ರೂ ಎಂದು ಇದ್ದದ್ದು 1045 ರೂ ಆಗಬೇಕಾದರೆ 276ರೂ ಪರ್‌ಕ್ಯಾಪಿಟಾ ಜಾಸ್ತಿ ಆಗಿದೆ. ಇದನ್ನು ನೋಡಿದರೆ ಎಂದು ಕರ್ನಾಟಕವನ್ನು ನೀವು ಸ್ವರ್ಗ ಮಾಡುತ್ತೀರೋ?

ಡಿ. ದೇವರಾಜ ಅರಸು: ಇನ್ನು 10 ವರ್ಷಗಳಲ್ಲಿ ಕರ್ನಾಟಕ ಸ್ವರ್ಗವಾಗಲಿದೆ.

ಜೆ.ಹೆಚ್. ಪಟೇಲ್: ಅಲ್ಲಿಯವರೆಗೂ ನೀವಿರಬೇಕಲ್ಲಾ!

ಡಿ. ದೇವರಾಜ ಅರಸು: ನಾನು ಇಲ್ಲದಿದ್ದರೂ ನೀವಾರೂ ಇರುತ್ತೀರಲ್ಲಾ. 10 ವರ್ಷಗಳವರೆಗೆ ಇದೇ ರೀತಿ ಟೆಂಪೋ ಆನ್ ಡೆವೆಲಪ್‌ಮೆಂಟ್ ಎಕ್ಸಪೆಂಡಿಚರ್ ಕ್ರಮವಾಗಿ ಮಾಡಿಕೊಂಡು ಹೋದರೆ ಇನ್ನು 10 ವರ್ಷಗಳಲ್ಲಿ ಕರ್ನಾಟಕ ಖಂಡಿತಾ ಸ್ವರ್ಗವಾಗುತ್ತೆ.

ಎಸ್.ಆರ್. ಬೊಮ್ಮಾಯಿ: ಸೋರಿ ಹೋಗುವುದನ್ನು ನಿಲ್ಲಿಸಿದರೆ ನಮ್ಮ ಕರ್ನಾಟಕ ಸ್ವರ್ಗವಾಗುತ್ತೆ.

ಡಿ. ದೇವರಾಜ ಅರಸು: ನಿಮಗೆ ತೂತು ಮಡಕೆ ಹೊತ್ತು ಅಭ್ಯಾಸವೆಂದು ಕಾಣುತ್ತದೆ.

ಎಸ್.ಆರ್. ಬೊಮ್ಮಾಯಿ: ಇನ್ನೂ ಈ ಅವಕಾಶ ನಮಗೆ ಸಿಕ್ಕಿಲ್ಲ.

ಡಿ. ದೇವರಾಜ ಅರಸು: ಕಳೆದ 2 ವರ್ಷಗಳಲ್ಲಿ ನಿಮ್ಮದು ಎಷ್ಟು ತೂತಾಗಿದೆ ಎಂಬುದು ಎಲ್ಲರಿಗೂ ಗೊತ್ತಾಗಿದೆ.

ಜೆ.ಹಚ್. ಪಟೇಲ್: ದೊಡ್ಡ ಮಡಕೆಗೆ ದೊಡ್ಡ ತೂತು, ಸಣ್ಣ ಮಡಕೆಗೆ ಸಣ್ಣ ತೂತು.

ದೇವರಾಜ ಅರಸು: ನಿಮ್ಮ ಮಡಕೆಗೆ ದೊಡ್ಡ ತೂತು ಇಲ್ಲ. ಸಣ್ಣ ತೂತೂ ಇಲ್ಲ. ದದ್ದು ಮಡಕೆ. ನೀವು ಎಷ್ಟೇ ನೀರು ಹಾಕಿದರೂ ದದ್ದು ಮಡಕೆಯಲ್ಲಿ ನೀರೇ ನಿಲ್ಲೋಲ್ಲ.

(ವಿಧಾನಸಭೆ ಕಲಾಪ ಮಾರ್ಚ್ 21, 1978)

## ಪರ್‌ಕ್ಯಾಪಿಟಾ ಇನ್‌ಕಂ!

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): .... ಹಳ್ಳಿಯನ್ನು ನಾನು ಹೆಚ್ಚು ನೋಡಿದ್ದೇನೋ, ತಾವು ಜಾಸ್ತಿ ನೋಡಿದ್ದೋರೋ ಆ ಮಾತು ಬೇರೆ ... ಹಳ್ಳಿಯ ಆದಾಯ ಜನಜೀವನ, ಖರ್ಚು-ವೆಚ್ಚ ಇವುಗಳ ಬಗೆಗೆ ನಾನು ಕೊಂಚ ಹೆಚ್ಚು ತಿಳಿದಿದ್ದೇನೆ. ಆದಂತೂ ಖಂಡಿತ ... 1974-75 ಮತ್ತು 75-76ರ ಪರ್‌ಕ್ಯಾಪಿಟು ಇನ್‌ಕಂ ತೆಗೆದುಕೊಂಡರೆ ಪಂಜಾಬಿನಲ್ಲಿ 1982 ರೂಪಾಯಿ; ಹರಿಯಾಣದಲ್ಲಿ 1917 ರೂಪಾಯಿ; ಮಹಾರಾಷ್ಟ್ರದಲ್ಲಿ 1271 ರೂಪಾಯಿ, ಗುಜರಾತಿನಲ್ಲಿ 1038 ರೂಪಾಯಿ ಮತ್ತು ಕರ್ನಾಟಕದಲ್ಲಿ 784 ರೂಪಾಯಿ ಇದೆ. ಇದು ಕೇರಳದಲ್ಲಿ 841 ರೂಪಾಯಿ, ತಮಿಳುನಾಡಿನಲ್ಲಿ 814 ರೂಪಾಯಿ ಮತ್ತು ಆಂಧ್ರದಲ್ಲಿ 1003 ರೂಪಾಯಿ.

ನಾವು (ಕರ್ನಾಟಕದಲ್ಲಿ) ಕೊಡುತ್ತಿರುವ ಟ್ಯಾಕ್ಸ್ ಎಷ್ಟಿದೆ ಅಂದರೆ ಪಂಜಾಬಿನವರು 163 ರೂಪಾಯಿ ಟ್ಯಾಕ್ಸ್ ಕಟ್ಟಿದರೆ ನಾವು 100 ರೂಪಾಯಿ ಕೊಡ್ತಿದ್ದೇವೆ. ಟ್ಯಾಕ್ಸ್ ಕೊಡುವ ವಿಷಯದಲ್ಲೂ ನಾವೇ ಹೆಚ್ಚು.

ಎಸ್.ಎಂ. ಯಾಹ್ಯಾ (ಹಣಕಾಸು ಮಂತ್ರಿ): ಪಂಜಾಬಿನವರು 163 ರೂಪಾಯಿ ಟ್ಯಾಕ್ಸ್ ಕಟ್ಟುತ್ತಿದ್ದಾರೆ; ಕರ್ನಾಟಕದಲ್ಲಿ ನಾವು 100 ರೂಪಾಯಿ ಕಟ್ಟುತ್ತಿದ್ದೇವೆ ಎಂದು ನೀವೇ ಹೇಳುತ್ತಿದ್ದೀರಿ.. ಇಷ್ಟಾಗಿ ನಮ್ಮದೇ ಟ್ಯಾಕ್ಸ್ ಹೆಚ್ಚು ಎನ್ನುತ್ತೀರಲ್ಲಾ ಹೇಗೆ...?

ಜೆ.ಹೆಚ್. ಪಟೇಲ್: ಪಂಜಾಬಿನವರು 1982 ರೂಪಾಯಿ ಪರ್‌ಕ್ಯಾಪಿಟಾ ಇನ್‌ಕಂಗೆ 163 ರೂಪಾಯಿ ಟ್ಯಾಕ್ಸ್ ಕಟ್ಟುತ್ತಾರೆ ಕರ್ನಾಟಕದಲ್ಲಿ ನಾವು 784 ರೂಪಾಯಿಗೆ 100 ರೂಪಾಯಿ ಕೊಡುತ್ತಿದ್ದೇವೆ. ... ಹೇಳಿ ಸರ್ಕಾರವನ್ನು ನಡೆಸುತ್ತಿರುವವರು ನೀವು ನಿಮ್ಮ ದಾರಿಯಾವುದು? ಧಾಟಿ ಏನು? ನಿಜ. ನಿಮಗೆ ಜನ ಓಟುಕೊಟ್ಟರು ನೀವು ಸರ್ಕಾರ ಮಾಡಿದಿರಿ ... ನಿಮಗೆ ಜೀವ ಕೊಟ್ಟವರಿಗೆ ನೀವೇನು ಕೊಟ್ಟಿರಿ ಹೇಳಿ...?

(ವಿಧಾನ ಸಭೆ ಕಲಾಪ : ಮಾರ್ಚ 23, 1979)

## ಪರಿಶಿಷ್ಟರ ರಕ್ಷಣೆ

ಈ ಹಿಂದೆ ಕರ್ನಾಟಕದ ಮುಖ್ಯ ಮಂತ್ರಿಗಳಾಗಿದ್ದ ದಿವಂಗತ ಶ್ರೀಮಾನ್ ದೇವರಾಜ ಅರಸುರವರು ರಾಜ್ಯದಲ್ಲಿರುವ ದುರ್ಬಲರಿಗೆ, ಅಲ್ಪಸಂಖ್ಯಾತರಿಗೆ, ಪರಿಶಿಷ್ಟ ಜನಾಂಗಕ್ಕೆ ಯಾವ ರಕ್ಷಣೆಯ ಭರವಸೆಗಳನ್ನು ಕೊಟ್ಟಿದ್ದರೋ ಅವುಗಳನ್ನು ನಮ್ಮ ಸರಕಾರ ದ್ವಿಗುಣಗೊಳಿಸಿದೆ.

(ಜೆ.ಹೆಚ್. ಪಟೇಲ್ (ವಿದ್ಯುತ್ ಖಾತೆ ಮಂತ್ರಿ) ವಿಧಾನ ಸಭೆ: ಜನವರಿ 17, 1984)

## ನನಗೆ ಅರಸರು ಮತ್ತೊಬ್ಬ ಲೋಹಿಯಾ

ಲೋಹಿಯಾರವರ ವೈಚಾರಿಕ ಚಿಂತನೆಗಳಿಂದ ನಾನು ಎಷ್ಟು ಪ್ರಭಾವಿತನಾಗಿದ್ದೆನೋ ಅಷ್ಟೇ ಅರಸರ ಚಿಂತನೆ, ಆಚಾರ, ಆಯಾಮಗಳು ನನಗೆ ಹಿಡಿಸಿವೆ. ಬಡತನವನ್ನು, ಬಡವರನ್ನು ಅರಿತ ರಾಜಕಾರಣಿ ಅರಸರು... ಹಿಂದುಳಿದ ವರ್ಗ ಮತ್ತು ಜಾತಿಗಳ ಸರ್ವಾಂಗೀಣ ಪ್ರಗತಿ ಅರಸರ ಹಿರಿಯಾಸೆಯಾಗಿತ್ತು.. ಅವರನ್ನು ನಾನು ವಜ್ರದ ಹೃದಯದವರೆಂದು ನಂಬಿದ್ದೆ. ಆದರೆ ಪ್ರಕೃತಿಯ ಜೊತೆ ಸೆಣಸಾಟದಲ್ಲಿ ನಾವು ಸೋಲಲೇಬೇಕು... ರಾಷ್ಟ್ರದಲ್ಲಿ ಆಳುವ ಪಕ್ಷ ಮತ್ತು ವಿರೋಧ ಪಕ್ಷಗಳು ಮಾತ್ರ ಇರಬೇಕೆಂಬುದು ಅರಸರ ಹಿರಿಯಾಸೆ. ಇದಕ್ಕಾಗಿ ಅವರು ಅಪಾರವಾಗಿ ಶ್ರಮಿಸಿದರು...

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ: ಜೂನ್ 8, 1982)

## ಪಟೇಲ್-ರಂಗನಾಥ್ : ತಾತ್ವಿಕ ಸಂಘರ್ಷ

ಸಂದರ್ಭ: ಕರ್ನಾಟಕ ವಿಧಾನ ಮಂಡಲದಲ್ಲಿ ಸೈದ್ಧಾಂತಿಕ ರಾಜಕಾರಣ, ರಾಷ್ಟ್ರದ ಆಡಳಿತ ಸಾಮಾನ್ಯ ಜನರ ಹಿತ ಇವೇ ಮುಂತಾದ ವಿಷಯಗಳು ಬಂದಾಗ ಹಿರಿಯ ಶಾಸಕರು ಪರಸ್ಪರ ಕೈಕೈ ಮಿಲಾಯಿಸುತ್ತಾರೆ. ಹಿರಿಯ ಸಂಸದೀಯ ಪಟುಗಳ ನಡುವಣ ಈ ವಾಗ್ಯುದ್ಧ ಮತ್ತು ವಿಚಾರ ಮಂಥನ ಗಂಧ-ಸಾಣೆ ತಿಕ್ಕಿದಂತೆ.

ಮಾನ್ಯ ಕೆ.ಎಚ್. ರಂಗನಾಥ್ ಮತ್ತು ಜೆ.ಹೆಚ್. ಪಟೇಲರ ನಡುವಣ ವಿಚಾರ ವಿನಿಮಯ ಹೀಗೊಮ್ಮೆ ನಡೆಯಿತು. 1978ರ ಮಾರ್ಚಿಯಲ್ಲಿ ರಾಜ್ಯಪಾಲರ ಭಾಷಣಕ್ಕೆ ವಂದನೆ ಸೂಚಿಸುವ ಚರ್ಚೆ ಸಂದರ್ಭ, ಶ್ರೀ ದೇವರಾಜ ಅರಸುರವರು ಮುಖ್ಯ ಮಂತ್ರಿಗಳಾಗಿದ್ದ ಕಾಲ. ಶ್ರೀ ವೆಂಕಟರಮಣ ವಿಧಾನಸಭಾಧ್ಯಕ್ಷರು.

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಕೇಂದ್ರದಲ್ಲಿ ಕಳೆದ 30 ವರ್ಷಗಳ ಕಾಂಗ್ರೆಸ್ ಪಕ್ಷದ ಆಡಳಿತದಲ್ಲಿನ ರಾಜಕೀಯ ಗರ್ಭದೊಳಗೆ ಭ್ರೂಣದ ರೋಗವನ್ನು ಏನು ಬೆಳೆಸಿದ್ದೀರಿ, ಅದನ್ನು ಬೇರೆ ಸರ್ಕಾರ (ಜನತಾ ಪಕ್ಷದ ನೇತೃತ್ವದಲ್ಲಿ) ಆಡಳಿತಕ್ಕೆ ಬಂದ 10-11 ತಿಂಗಳೊಳಗಾಗಿ ಹೋಗಲಾಡಿಸಲು ಸಾಧ್ಯವಿಲ್ಲ. ನಾವು ಬಹಳ ಮಾಡಿದ್ದೇವೆ,

ಬಡವರನ್ನು ಉದ್ಧಾರ ಮಾಡಿದ್ದೇವೆ. ಆದಕ್ಕೆ ಹರಿಜನರು ನಮಗೆ ಮತಕೊಟ್ಟಿದ್ದಾರೆ ಎಂದು ಹೇಳುವುದಾದರೆ ...

ಕೆ.ಎಚ್. ರಂಗನಾಥ್: ತಾವು 30 ವರ್ಷ ಮತ್ತು 11 ತಿಂಗಳು ಇದರ ಲೆಕ್ಕವನ್ನು ಹಾಕುತ್ತಾ ಹೋದರೆ ನಾವು ಮತ್ತು ನೀವು ಇಬ್ಬರೂ ತೊಂದರೆಗೆ ಒಳಗಾಗುತ್ತೇವೆ. ಏಕೆಂದರೆ ಈಗಿನ ಪ್ರಧಾನಿಯವರು (ಶ್ರೀ ಮೊರಾರ್ಜಿ ದೇಸಾಯಿ) 1937 ರಿಂದಲೂ ಕಾಂಗ್ರೆಸ್‌ನಲ್ಲಿದ್ದವರು. ಇವರೊಂದಿಗೆ ಈಗ ಹೊಸದಾಗಿ ಕೇಂದ್ರದಲ್ಲಿ ಮಂತ್ರಿಗಳಾಗಿರುವವರಲ್ಲಿ ಹಲವರು ಕಾಂಗ್ರೆಸ್ ಪಕ್ಷದಲ್ಲಿ ಇದ್ದವರೇ. ಹೊಸದಾಗಿ ಮಂತ್ರಿಗಳಾಗಿರುವವರೆಂದರೆ ಮಧುದಂಡವತೆ, ಜಾರ್ಜ್ ಫರ್ನಾಂಡಿಸ್ ಮತ್ತು ಕೌಶಿಕ್ - ಇವರಂಥವರು. ಕಳೆದ 30 ವರ್ಷಗಳ ಆಡಳಿತದಲ್ಲಿ ಒಂದೊಂದು ಇಟ್ಟಿಗೆ ಅಥವಾ ಕಲ್ಲನ್ನು ಇಟ್ಟಂತವರ ಪೈಕಿ ಬಹಳ ಜನ ನಿಮ್ಮ ಕಡೆಯೇ ಇದ್ದಾರೆ. ಆದ ಕಾರಣ ತಾವು 30 ವರ್ಷಗಳ ಚರಿತ್ರ, 11 ತಿಂಗಳ ಚರಿತ್ರೆಯನ್ನು ಈಗ ಹೇಳುವುದು ಬೇಡ. ಇರುವ ವಾಸ್ತವಾಂಶವನ್ನು ತೆಗೆದುಕೊಂಡು ತಾವು ಸಲಹೆ ಕೊಡಿ.

ಜೆ.ಹೆಚ್. ಪಟೇಲ್: ಕಳೆದ 30 ವರ್ಷಗಳ ಆಡಳಿತ ಕಾಲದಲ್ಲಿ 18 ವರ್ಷಗಳ ಕಾಲ ತಂದೆ, 11 ವರ್ಷಗಳ ಕಾಲ ಮಗಳು ರಾಜ್ಯಭಾರ ಮಾಡಿದರು. ಇನ್ನೂ ..

ಕೆ.ಎಚ್. ರಂಗನಾಥ್: ತಾವು ಲೋಕಸಭಾ ಸದಸ್ಯರಾಗಿದ್ದವರು. ಈ ಮೊದಲು ಮಾನ್ಯ ಮುರಾರ್ಜಿ ದೇಸಾಯಿ ಅವರು ಅರ್ಥ ಮಂತ್ರಿಗಳಾಗಿದ್ದಾಗ ದಿವಂಗತ ಲೋಹಿಯಾರವರು ಎಕ್ಸ್‌ಪೆಂಡಿಚರ್ ಟ್ಯಾಕ್ಸ್ ಹಾಕಬೇಕೆಂದು ಹೇಳಿದ್ದರು. ಆದರೆ ಅವರು ಅದನ್ನು ಹಾಕಿದರೋ ಎಂದು ನಾನು ತಮ್ಮನ್ನು ಪ್ರಶ್ನಿಸುತ್ತೇನೆ. ಅಂದು ಅವರು ಇದನ್ನು ಕಾರ್ಯಗತ ಮಾಡಿದ್ದರೆ ಈಗಿನ ಹಲವಾರು ಸಮಸ್ಯೆಗಳನ್ನು ಪರಿಹಾರ ಮಾಡಬಹುದಾಗಿತ್ತು.

(ವಿಧಾನಸಭೆ ಕಲಾಪ ಮಾರ್ಚ್ 21, 1978)

## ಪಟೇಲರ ಬಗ್ಗೆ ದೇವರಾಜ ಅರಸು ಅವರ ಭವಿಷ್ಯನುಡಿ

ಸಂದರ್ಭ: ಮುಂದೆ ಎಂದಾದರೊಮ್ಮೆ ಸಮಾಜವಾದಿ ಧುರೀಣ ಜೆ.ಹೆಚ್. ಪಟೇಲರು ಕರ್ನಾಟಕದ ಮುಖ್ಯಮಂತ್ರಿಗಳಾಗುತ್ತಾರೆಂದು ಹಿಂದಿನ ಹಲವಾರು ನಾಯಕರು ಭವಿಷ್ಯ ನುಡಿದುದ್ದುಂಟು. 1978ರಲ್ಲಿ ಮೊದಲ ಬಾರಿಗೆ ಪಟೇಲರು ವಿಧಾನಸಭೆಗೆ ಆರಿಸಿ ಬಂದಾಗ ಅಂದಿನ ಮುಖ್ಯಮಂತ್ರಿ ದೇವರಾಜ ಅರಸುರವರು (ಜುಲೈ 26, 1978) ಈ ಭವಿಷ್ಯ ಹೇಳಿದ್ದರಲ್ಲದೆ, ಆಡಳಿತ ಯಂತ್ರದ ಸುಧಾರಣೆ ಮತ್ತು ಬಡಜನರ ಕಲ್ಯಾಣಕ್ಕಾಗಿ ಪಟೇಲರು ವ್ಯಕ್ತಪಡಿಸಿದ ಸಲಹೆ - ಸೂಚನೆಗಳನ್ನು ಸರಾಸಗಟು ಮಾನ್ಯ ಮಾಡಿದ್ದರು.

ಸರ್ಕಾರಪ್ರಧಾನ ಸಮಾಜದ ಅನಾಹುತಗಳನ್ನು ವಿವರಿಸಿ ಮಾನ್ಯ ಜೆ.ಹೆಚ್. ಪಟೇಲರು ತಮ್ಮದೇ ಆದ ವ್ಯಾಖ್ಯಾನ ಮಾಡಿದ್ದಾರೆ. ಅವರ ಅಭಿಪ್ರಾಯವನ್ನು ನಾನು ಮಾನ್ಯ ಮಾಡುತ್ತೇನೆ. ಹೊರ ರಾಷ್ಟ್ರಗಳಲ್ಲಿನ ಹಲವಾರು ಉತ್ತಮ ಉದಾಹರಣೆಗಳನ್ನು ಪಟೇಲರು ಹೇಳಿದ್ದಾರೆ.

ಸಮಾಜ ಸೇವಕರು ಹಾಗೂ ನಿಷ್ಠಾವಂತ ರಾಜಕಾರಣಿಗಳು ಈ ಎಲ್ಲ ವಿಷಯಗಳ ಮನನಮಾಡಿಕೊಳ್ಳುವ ಅವಶ್ಯಕತೆ ಇದೆ.

ತತ್ವಗಳ ಆಧಾರದ ಮೇಲೆ ಆದರ್ಶದ ಆಧಾರದ ಮೇಲೆ ನಡೆಯಬೇಕೆಂಬ ಆಶೆ ನಮಗಿದೆ. ಆದರೆ ಅಂದಿನ ಸಮಾಜದ ಒಳಸ್ಥರಗಳನ್ನು ಮತ್ತು ವಾಸ್ತವಿಕತೆಯನ್ನು ನಾವು ಮರೆಯಬಾರದು.

ನಾಳೆ ದಿವಸ ಶ್ರೀ ಜೆ.ಹೆಚ್. ಪಟೇಲರೇ ಮುಖ್ಯಮಂತ್ರಿಗಳಾಗಿ ಬಂದರೂ ಇಂದಿನ ಸಮಾಜದ ಹಾಗೂ ಆಡಳಿತದ ಕೆಲವು ಮೂಲಭೂತ ನ್ಯೂನತೆಗಳನ್ನು ಒಮ್ಮೆಲೇ ಬದಲಾವಣೆ ಮಾಡಲು ಅವರಿಂದಲೂ ಸಾಧ್ಯವಾಗುವುದಿಲ್ಲ. ಪಟೇಲರು ಕೂಡ ಸಮಾಜದಿಂದ ದೂರವಿರಲು ಸಾಧ್ಯವಾಗುವುದಿಲ್ಲ. ಹಾಗೊಮ್ಮೆ ಜುಲುಮೆಯಿಂದ ಆದರ್ಶಕ್ಕೆ ಅಂಟಿಕೊಂಡು ಇರುವಂತಾದರೆ ಇವರಿಗೂ ಸಮಾಜಕ್ಕೂ ಇರುವ ದಾರಿಕಡಿದು ಹೋಗುತ್ತದೆ. ಆಕಾಶದಲ್ಲಿ ದಾರಕಿತ್ತ ಗಾಳಿಪಟದಂತೆ ಪಟೇಲರು ಹಾರಾಡಬೇಕಾಗುತ್ತದೆ.

(ದೇವರಾಜ್ ಅರಸ್ (ಮುಖ್ಯಮಂತ್ರಿ) ವಿಧಾನಸಭೆ ಜುಲೈ 20, 1978)

## ಉಪಕುಲಪತಿಯ ದುಂದುವೆಚ್ಚ

ಸನ್ಮಾನ್ಯ ಸಭಾಧ್ಯಕ್ಷರೇ, ವಿಶ್ವವಿದ್ಯಾನಿಲಯದಂತಹ ಉನ್ನತ ಶಿಕ್ಷಣ ಸ್ವಾಯತ್ತ ಸಂಸ್ಥೆಯ ಬಗೆಗೆ ಮತ್ತು ಅಲ್ಲಿನ ವೈಸ್‌ಛಾನ್ಸಲರ್‌ರವರಿಂದ ನಡೆದಿದೆ ಎಂದು ಹೇಳಲಾದ ಅವ್ಯವಹಾರಗಳ ಬಗೆಗೆ ತನಿಖೆ ನಡೆಸಲು ನಿವೃತ್ತ ನ್ಯಾಯಾಧೀಶರ ನೇತೃತ್ವದ ಏಕ ಸದಸ್ಯ ವಿಚಾರಣೆ ಸಮಿತಿ ನೇಮಿಸಲು ಸರ್ಕಾರ ಮುಂದಾದದ್ದು ಸ್ತುತ್ಯಾರ್ಹ.

ಮಾನ್ಯ ಮುಖ್ಯಮಂತ್ರಿ ದೇವರಾಜ ಅರಸುರವರು ಸ್ವಲ್ಪವೂ ಹಿಂದೆ-ಮುಂದೆ ನೋಡದೆ ಈ ತನಿಖಾ ವರದಿಯನ್ನು ವಿಧಾನ ಮಂಡಲದಲ್ಲಿ ಮಂಡಿಸುವ ಸೌಜನ್ಯ ತೋರಿದ್ದಾರೆ. ಇದನ್ನು ನಾನು ಬಹುವಾಗಿ ಮೆಚ್ಚಿಕೊಂಡಿದ್ದೇನೆ.

ಒಂದೊಂದು ಸಾರಿ ಯೋಚನೆ ಮಾಡಿದರೆ ನಾವು ಶಿಕ್ಷಣ ಹಾಗೂ ಜೀವನ ಮೌಲ್ಯಗಳನ್ನು ಸಂಪೂರ್ಣ ಮರೆಯುತ್ತಿದ್ದೇವೇನೋ ಎನ್ನಿಸುತ್ತಿದೆ. ದುಂದು ವೆಚ್ಚವನ್ನು ಮಹಾನ್ ನಾಯಕನೊಬ್ಬ ಹೇಗೆ ವಿರೋಧಿಸಿದ ಎನ್ನುವುದಕ್ಕೆ ಅಮೇರಿಕೆಯ ಅಧ್ಯಕ್ಷ ಅಬ್ರಹಾಂ ಲಿಂಕನ್‌ನ ಜೀವನದ ಒಂದು ಘಟನೆ ನೆನಪಾಗುತ್ತದೆ.

ಅಬ್ರಾಹಂ ಲಿಂಕನ್ ಮೊದಲು ಬಡತನದ ಕಷ್ಟನಷ್ಟಗಳನ್ನು ಅನುಭವಿಸಿದ ವ್ಯಕ್ತಿ. ಐಶ್ವರ್ಯವಂತನ ಮಗಳೊಂದಿಗೆ ಆತನ ಲಗ್ನವಾಯಿತು. ಅವನ ಮನೆಯಲ್ಲಿ ಹಳೇ ಫರ್ನಿಚರ್ ಇದ್ದವು. ಲಿಂಕನ್ ಒಮ್ಮೆ ಪ್ರವಾಸಕ್ಕೆ ಹೊರ ಹೋಗಿದ್ದಾಗ ಆತನ ಪತ್ನಿ ಸೆಕ್ರೆಟರಿಯನ್ನು ಕರೆದು ಹಳೇ ಪೀಠೋಪಕರಣಗಳನ್ನು ತೆಗೆಸಿಹಾಕಿದಳು, ಹೊಸ ಫರ್ನಿಚರ್ ತರಿಸಿ ಹಾಕಿಸಿದ್ದಾಯಿತು. ಅದಕ್ಕೆ ತಗುಲಿದ ಖರ್ಚು ಆರು ನೂರು ಡಾಲರ್.

ಲಿಂಕನ್ ವಾಪಸು ಬಂದಾಗ 'What is this vulgarity: who did it' ಎಂದ. ಸೆಕ್ರೆಟರಿಯನ್ನು ಕರೆದು ಖರ್ಚು ಎಷ್ಟಾಯಿತೆಂದು ವಿಚಾರಿಸಿದ ಲಿಂಕನ್. " ಕೂಡಲೇ ನನ್ನ ಪತ್ನಿಯಿಂದ ಈ ಖರ್ಚನ್ನು ವಸೂಲು ಮಾಡಿ ಸರ್ಕಾರದ ಖಜಾನೆಗೆ ತುಂಬಿ " ಎಂದ ಲಿಂಕನ್.

ನಮ್ಮ ಆಡಳಿತಗಾರರು, ಶಿಕ್ಷಣವೇತ್ತರು, ಸಚಿವರು, ಸಮಾಜದ ಮುಂದಾಳುಗಳು ಒಟ್ಟಿನಲ್ಲಿ ನಾನು, ನೀವು ಇದನ್ನು ಗಮನಿಸಬೇಕು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ), ವಿಧಾನಸಭೆ, ಆಗಸ್ಟ್ 4, 1978)

## ಎರಡು ರೂಪಾಯಿಯಲ್ಲಿ ಒಂದೂವರೆ ಗುಮಾಸ್ತನಿಗೆ

ನಮ್ಮಲ್ಲಿ ಭ್ರಷ್ಟಾಚಾರ ಭದ್ರವಾಗಿ ನೆಲೆಯೂರಿಬಿಟ್ಟಿದೆ... ರಾಜ್ಯದಲ್ಲಿ ಎಲ್ಲಿ ಯಾವ ಆಫೀಸಿಗೆ ಹೋದರೂ ದುಡ್ಡು ಬಿಚ್ಚಬೇಕು. ಪ್ರಮಾಣ ಪೂರ್ವಕವಾಗಿ ಹೇಳುವುದಾದರೆ, ದುಡ್ಡು ಕೊಡದೆ ಯಾವ ಸಬ್‌ರಿಜಿಸ್ಟ್ರಾರ್ ಆಫೀಸಿನಲ್ಲೂ ಕೆಲಸವಾಗುಲ್ಲ.. ಹಳ್ಳಿಕಡೆ ಮನೆಯಿಂದ ರೈತ ಎರಡು ರೂಪಾಯಿ ಇಟ್ಕೊಂಡು ಕಛೇರಿಗೆ ಬಂದ ಅಂತ ಇಟ್ಕೊಳಿ. ಇದರಲ್ಲಿ ಕನಿಷ್ಠ ಒಂದೂವರೆ ರೂಪಾಯಿಯನ್ನು ಅಲ್ಲಿರುವ ಗುಮಾಸ್ತನಿಗೆ ಕೊಡಬೇಕು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ), ವಿಧಾನಸಭೆ : ಮೇ 30, 1979)

## ದಕ್ಷತೆ ಅಲ್ಲ - ದಲ್ಲಾಳಿತನ

ನಮ್ಮ ಆಡಳಿತದಲ್ಲಿ ದಕ್ಷತೆಗೆ ಹೆಚ್ಚು ಬೆಲೆ ಇಲ್ಲ. ಬೆಲೆ ಇರುವುದು ಅಧಿಕಾರಿ ಎಷ್ಟರ ಮಟ್ಟಿಗೆ ಪರಿಸ್ಥಿತಿಯನ್ನು ಸರಿತೂಗಿಸಿಕೊಂಡು ಹೋಗುತ್ತಿದ್ದಾನೆ ಎಂಬುದಕ್ಕೆ. ಸರ್ಕಾರಿ ಸ್ವಾಮ್ಯದ ಕಾರ್ಖಾನೆಗಳಲ್ಲಿ ಅಲ್ಲಿನ ಮುಖ್ಯಸ್ಥ ಕಾರ್ಖಾನೆಯನ್ನು ಹೇಗೆ ಯಶಸ್ವಿಯಾಗಿ ನಡೆಸುತ್ತಿದ್ದಾನೆ ಎಂಬುದಕ್ಕೆ ಯಾರು ಹೆಚ್ಚು ಗಮನಕೊಡುವುದಿಲ್ಲ. ಸಂಬಂಧಪಟ್ಟ ಖಾತೆಯ ಮಂತ್ರಿ, ಇಲಾಖೆಯ ಕಾರ್ಯದರ್ಶಿ ಮತ್ತು ರಾಜಕೀಯ ನಾಯಕನನ್ನು ಈ ಅಧಿಕಾರಿ ಹೇಗೆ ನಿಭಾಯಿಸುತ್ತಿದ್ದಾನೆ ಎಂಬುದಕ್ಕೆ ವಿಶೇಷ ಬೆಲೆ ಕೊಡಲಾಗುತ್ತಿದೆ. ಇದು ತಪ್ಪು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಮಾರ್ಚಿ 23, 1979)

## ಲಂಚಕ್ಕೆ ಪರ್ಯಾಯ ಹೆಸರು ಸಬ್‌ರಿಜಿಸ್ಟ್ರಾರ್

ಎಂತಹವನೇ ಅಫಲತ್‌ಕಾರ ಅಥವಾ ಪಾಲಾಕ್ಷಪ್ಪ ಹೋಗಲಿ ದುಡ್ಡಿಟ್ಟು ಮಾತನಾಡಿದರೆ ಮಾತ್ರ ಸಬ್‌ರಿಜಿಸ್ಟ್ರಾರ್ ವಾಪಸು ಉತ್ತರ ಕೊಡುತ್ತಾನೆ. ಲಂಚಕ್ಕೆ ಇನ್ನೊಂದು ಹೆಸರು ಈ ಹುದ್ದೆ. ಇಂತಹ ರಿಜಿಸ್ಟ್ರೇಷನ್‌ಗೆ ಇಷ್ಟು ಮಾಮೂಲಿ ಚಾರ್ಜು. ಲೆಖ್ಖ ಎಲ್ಲವೂ ಕರಾರುವಾಕ್. ಅದು ಯಾರೇ ಆಗಲಿ ನಿಗದಿ ಮಾಡಿದಷ್ಟು ಚಾರ್ಜು ಈತನ ಕೈಯಲ್ಲಿಟ್ಟರೆ ಮಾತ್ರ ಕೆಲಸ

ನಡೆಯುತ್ತೇ. ಇದಕ್ಕೆ ಕಾರಣ ಏನು ಏನ್ನುತ್ತೀರಾ? ಆತ ಮಂತ್ರಿಗಳಿಗೆ ಇಂತಿಷ್ಟು ಇನ್‌ಸ್ಟಾಲ್‌ಮೆಂಟ್ ಹಣ ಕಕ್ಕಬೇಕು ಎಂದಿರುತ್ತದಂತೆ. ಆತನ ಚಾರ್ಜನ್ನು ಇಷ್ಟು ಅಂತ ರೆಗ್ಯುಲರೈಸ್ ಮಾಡಿಸಿಬಿಡಿ ಸ್ವಾಮಿ.

(ಜೆ.ಹೆಚ್. ಪಟೇಲ್, ವಿಧಾನ ಸಭೆ : ರೆವಿನ್ಯೂ ಸಚಿವ ಬಂಗಾರಪ್ಪನವರನ್ನು ಛೇಡಿಸುವ ದನಿಯಲ್ಲಿ, ಮಾರ್ಚಿ 26, 1980)

## ಅಂತ್ಯೋದಯ ಮುಂಬಯಿ, ಕಲ್ಕತ್ತೆಯಲ್ಲಿಲ್ಲ

ಸಂದರ್ಭ: ಸಮಾಜವಾದಿ ತತ್ವಗಳನ್ನು ಆದರ್ಶವಾಗಿಟ್ಟುಕೊಂಡು ರಾಜಕೀಯ ಪ್ರವೇಶಿಸಿದ ಜೆ.ಹೆಚ್. ಪಟೇಲರಿಗೆ ಹಿರಿಯನಾಯಕ ಡಾ: ರಾಮಮನೋಹರ ಲೋಹಿಯಾರವರ ಆಚಾರ, ವಿಚಾರಗಳು ಪ್ರಭಾವ ಬೀರಿದ್ದವು. ತಾತ್ವಿಕವಾಗಿ ಇದಕ್ಕೊಂದು ನಿದರ್ಶನ.

ಸನ್ಮಾನ್ಯ ಅಧ್ಯಕ್ಷರೇ, ಮುಖ್ಯಮಂತ್ರಿ ಅರಸುರವರ ಗಮನಕ್ಕೆ ಒಂದು ವಿಷಯ ತರಲಪೇಕ್ಷಿಸುತ್ತೇನೆ. ಇಂದಿನ ಸರ್ಕಾರ ನಗರ ಮತ್ತು ಪಟ್ಟಣಗಳ ಸಂಸ್ಕೃತಿಗೆ ಮಾರುಹೋಗಿದೆ. ಅಮೇರಿಕಾದ ವಾಷಿಂಗ್‌ಟನ್ನಿನಲ್ಲಿ ಸಿಗುವ ಸೌಲಭ್ಯಗಳು ದೆಹಲಿಯಲ್ಲಿ ಸಿಗಬೇಕು. ದೆಹಲಿಯಲ್ಲಿ ಸಿಗುವ ಸೌಲಭ್ಯಗಳು ಬೆಂಗಳೂರಿನಲ್ಲಿ ಸಿಗಬೇಕು. ಅಮೇರಿಕಾ ಅಥವಾ ಬ್ರಿಟನ್ ದೇಶದ ಜನರು ಭಾರತಕ್ಕೆ ಬಂದರೆ, ಇಲ್ಲಿನ ಮಹಾನಗರಗಳನ್ನು ಅವರು ನೋಡಿ, " ಭಾರತ ದೇಶ ಪ್ರಗತಿ ಹೊಂದಿದೆ " ಎಂದು ಸರ್ಟಿಫಿಕೇಟ್ ಕೊಟ್ಟರೆ ಸಾಕು ಇವರಿಗೆ. ನಗರೀಕರಣವೇ ಇವರ ಆರ್ಥಿಕ ನೀತಿ. ಈ ವಿದೇಶೀಯರೂ ಹೀಗೆಯೇ. ಕೆಲವು ವಿದ್ಯುತ್ ಇಲ್ಲವೇ ದೊಡ್ಡ ದೊಡ್ಡ ನೀರಾವರಿ ಯೋಜನೆ ಅಥವಾ ದಿಲ್ಲಿ, ಕಲ್ಕತ್ತ, ಮುಂಬಯಿ, ಬೆಂಗಳೂರು ಇವುಗಳನ್ನು ನೋಡಿ ಭಾರತದ ಪ್ರಗತಿ ಅಪಾರ ಎಂದು ಭಾವಿಸುತ್ತಾರೆ. ಆದುದರಿಂದ ನಾವು ಕೊಟ್ಟಿರುವ ಸಾಲಕ್ಕೆ ಬಡ್ಡಿಯನ್ನು ತಡೆದುಕೊಟ್ಟರೂ ಚಿಂತೆ ಇಲ್ಲ ಎಂದು ಸಮಾಧಾನಪಟ್ಟುಕೊಂಡು ವಾಪಸಾಗುತ್ತಾರೆ.

ನನ್ನದೊಂದು ಎಚ್ಚರಿಕೆಯ ಮಾತಿದೆ. ಯಾರು ಕೆಳಗೆ ಬಿದ್ದಿದ್ದಾನೆ ಅವನನ್ನು ಮೊದಲು ನೋಡಿ. ಅದು ಅಂತ್ಯೋದಯ ನೀತಿ. ಇದೇ ಮಹಾತ್ಮಾಗಾಂಧೀಜಿಯವರ ಆರ್ಥಿಕ ನೀತಿ. ಆದರೆ ಪಂಡಿತ ಜವಾಹರಲಾಲ್ ನೆಹರು ಬಂದ ಮೇಲೆ ಅಂತ್ಯೋದಯ ಅರ್ಥನೀತಿಯೇ ಇಲ್ಲ ಎನ್ನುವಂತಾಗಿದೆ. ಮುಂಬಯಿ ನೋಡಿಕೊಂಡು, ಕಲ್ಕತ್ತ ನೋಡಿಕೊಂಡು, ಆರೇಳು ಯೋಜನೆ ಆದ ಮೇಲೆ ಸಾಧ್ಯವಾದರೆ ಹಳ್ಳಿಗಳ ಕಡೆ ಹೋಗುವ ವಿಚಾರ ಅವರದು.

(ಜೆ.ಹೆಚ್. ಪಟೇಲ್ ವಿಧಾನ ಸಭೆ : ಜುಲೈ 15, 1978)

## ಪಕ್ಷಾಂತರಿಯಾದ ಪಟೇಲರು

ಪಕ್ಷಾಂತರವನ್ನು ಹೀನಾಮಾನವಾಗಿ ಜರೆಯುತ್ತಿದ್ದ ಪಟೇಲರೂ ಒಬ್ಬ ಪಕ್ಷಾಂತರಿ ಎಂದರೆ ನಂಬುವುದು ಕಷ್ಟ. ಇದು ವಸ್ತುತಃ ಸತ್ಯ. ಆದರೆ ಪಟೇಲರು ನಡೆಸಿದ ಪಕ್ಷಾಂತರಕ್ಕೆ ಸೈದ್ಧಾಂತಿಕ ಮತ್ತು ವ್ಯಕ್ತಿನಿಷ್ಠೆ ಕಾರಣಗಳಾದವು.

ಪಟೇಲರ ಪಕ್ಷಾಂತರದ ಹಿನ್ನೆಲೆ ಹೀಗಿತ್ತು. ಅರಸುರವರನ್ನು ಮೊದಮೊದಲು ತೀವ್ರವಾಗಿ ಖಂಡಿಸಿದ ಪಟೇಲರಿಗೆ ಭೂಸುಧಾರಣಾ ಕಾನೂನು ಹೊಸ ಮುಂಜಾವು ಮಾಡಿಸಿತು. ಸಮಾಜವಾದಿ ಪಕ್ಷದ ಧೋರಣೆಗಳನ್ನು ಈ ಕಾನೂನಿನ ಮೂಲಕ ಆಗು ಮಾಡಿದ್ದರು ಅರಸರು.

ಅಸಾಧ್ಯವಾದುದನ್ನು ಸಾಧಿಸಿದಾತ ಶತ್ರು ಆದರೂ ಬಹಿರಂಗವಾಗಿ ಆತನನ್ನು ಮೆಚ್ಚುವ ಪ್ರಾಮಾಣಿಕ ಸಂಸದೀಯ ಗುಣ ಪಟೇಲರದು. ಈತ ಚನ್ನಗಿರಿಯ ಭಾರಿದೊಡ್ಡ ಜಮೀನುದಾರ ಎಂಬ ಅಂಶ ಮರೆಯುವಂತಿಲ್ಲ. ಗೇಣಿದಾರನ ಹಿತಕ್ಕಾಗಿ ದುಡಿಯುವ ಕ್ರಾಂತಿಯ ಕಿಡಿ ಇವರಲ್ಲಿತ್ತು.

ಇಷ್ಟರೊಳಗಾಗಿ ಅರಸರ ನಾಯಕತ್ವಕ್ಕೆ ಸಂಚುಕಾರ ಬಂದಿತ್ತು. ಶ್ರೀಮತಿ ಇಂದಿರಾಗಾಂಧಿಯವರನ್ನ ಚಿಕ್ಕಮಗಳೂರು ಲೋಕಸಭಾ ಉಪ ಚುನಾವಣೆಯಲ್ಲಿ ಯಶಸ್ವಿಯಾಗಿಸಲು ಶ್ರಮಿಸಿದ್ದ ಅರಸರು, ನಂತರದ ರಾಜಕೀಯ ಬೆಳವಣಿಗೆಗಳಲ್ಲಿ ಇಂದಿರಾಜಿಯವರಿಂದ ದೂರವಾಗಿದ್ದರು.

ಅಧಿಕಾರದಿಂದ ಕೆಳಗಿಳಿದ ಅರಸರನ್ನು ವಿಧಾನಸಭೆಯಲ್ಲಿ ವಿರೋಧ ಪಕ್ಷದ ನಾಯಕರನ್ನಾಗಿ ಮಾಡಿ, ಪಟೇಲರು ಅವರ ಬಲಭುಜವಾಗಿ ನಿಂತದ್ದು ಈ ಪಕ್ಷಾಂತರದ ಕಥಾನಕ.

## ಪಕ್ಷಾಂತರಿ ನೀವೋ – ನಾವೋ

ಜಿ.ಕೆ. ತಕ್ಕೇಡ್: ಇವತ್ತು ಈ ದೇಶದ ಜನತಾ ಪಕ್ಷದಲ್ಲಿ ಆರು ಭಾಗಗಳಾಗಿವೆ. ಜನತಾ ಪಕ್ಷದಿಂದ ಮಾನ್ಯ ದೇವರಾಜ ಅರಸುರವರ ಪಕ್ಷಕ್ಕೆ ಕೆಲವರು ಬಂದರು. ನಿನ್ನೆ ಮಾನ್ಯ ಪಟೇಲರು ಹೇಳಿದರು. ನೀವು ಅಲ್ಲಿ ಕುಳಿತಿರುವುದನ್ನು ನೋಡಿದರೆ ಹೊಟ್ಟೆಯುರಿಯುತ್ತೆ ಅಂತ. ಅವರಿಗೆ ತಾವು ಮಂತ್ರಿ ಮಂಡಲದಲ್ಲಿ ಬರಲಿಲ್ಲ ಎಂದು ಅಸೂಯೆ ಆಗಿರಬೇಕು. ಈ ರೀತಿ ನಿಮ್ಮ ಅಸಮಾಧಾನ.

ಜೆ.ಹೆಚ್. ಪಟೇಲ್: ಮಾನ್ಯ ದೇವರಾಜ ಅರಸುರವರ ಮಂತ್ರಿ ಮಂಡಲದಲ್ಲಿ ಅವರ ಪಕ್ಷದ ಜನ ಅರಸರನ್ನು ಬಿಡುತ್ತಿದ್ದಾಗ ಪರಿಸ್ಥಿತಿ ಹೇಗಿತ್ತು ಎಂಬುದು ಮಾನ್ಯ ತಕ್ಕೇಡ್ ಅವರಿಗೆ ಗೊತ್ತಿದೆ. ನಾವು ಮಂತ್ರಿಗಳಾಗಲಿಕ್ಕೆ ಹೋಗಿ ಅರಸರ ಪಕ್ಷವನ್ನು ಸೇರಲಿಲ್ಲ. ಮಾನ್ಯ

ತಕ್ಕೇಡ್‌ರವರು ಸುರಕ್ಷಿತವಾಗಿ ಉಳಿಯಲಿ ಎಂದು ಸೇರಿದೆವು. ಅದರಿಂದ ಅವರು ಇಳಿದರು. ಇಲ್ಲದಿದ್ದರೆ ಬಹಳ ಮುಂಚಿತವಾಗಿಯೇ ಊರಿಗೆ ಹೋಗುತ್ತಿದ್ದರು.

ಜಿ.ಕೆ. ತಕ್ಕೇಡ್: ನಾವು ಮಾನ್ಯ ಪಟೇಲರ ಉಪಕಾರದಿಂದಾಗಲೀ ಆಶೀರ್ವಾದದಿಂದಾಗಲೀ ಬಂದವರಲ್ಲ. ಶ್ರೀಮತಿ ಇಂದಿರಾಗಾಂಧಿಯವರ ಆಶೀರ್ವಾದದಿಂದ ನಾವು ಅಧಿಕಾರದಲ್ಲಿ ಬಂದಿದ್ದೇವೆ. ಈ ಮಾತನ್ನು ತಾವು ನೆನಪಿನಲ್ಲಿಟ್ಟುಕೊಳ್ಳಬೇಕು.

(ವಿಧಾನ ಸಭೆ ಕಲಾಪ : ಮಾರ್ಚ್ 7, 1980)

## ಪಕ್ಷಾಂತರಕ್ಕೆ ಆತ್ಮ ಸಾಕ್ಷಿ ಎಲ್ಲಿ?

ಡಿ.ಬಿ. ಕಲ್ಮಣಕರ್: (ಇಂಗ್ಲೀಷಿನಲ್ಲಿ)... ಇತ್ತೀಚೆಗೆ ಪತ್ರಿಕೆಯೊಂದರಲ್ಲಿ ಹಿರಿಯ ರಾಜಕಾರಣಿ ಜೆ.ಬಿ. ಕೃಪಲಾನಿಯವರ ಹೇಳಿದ ಮಾತೊಂದನ್ನು ಓದಿದೆ. ಅಧ್ಯಕ್ಷೀಯ ಚುನಾವಣೆಯಲ್ಲಿ ಅವರನ್ನು ಪಕ್ಷಾಂತರದ ಬಗೆಗೆ ಪ್ರಶ್ನಿಸಲಾಯಿತು. ಒಂದು ರೀತಿ ಪಕ್ಷಾಂತರವು ಶಾಸಕ ಅಥವಾ ಸಂಸದನ ವೈಯಕ್ತಿಕ ಆತ್ಮ ಚಿಂತನೆಗೆ ಬಿಟ್ಟ ವಿಷಯ ಎಂದು ಅವರು ಉತ್ತರಿಸಿದ್ದರು.

ಜೆ.ಹೆಚ್. ಪಟೇಲ್ (ವಿದ್ಯುತ್ ಖಾತೆ ಸಚಿವರು): (ಇಂಗ್ಲೀಷಿನಲ್ಲಿ) ಮಾನ್ಯ ಡಿ.ಬಿ. ಕಲ್ಮಣ್‌ಕರ್‌ರವರು ಆಚಾರ್ಯ ಜೆ.ಬಿ. ಕೃಪಲಾನಿಯವರ ವಿಷಯ ಪ್ರಸ್ತಾಪಿಸಿದರು. ನನಗೆ ನೆನಪಿದೆ. ಆಗ ನಾನು ಲೋಕಸಭಾ ಸದಸ್ಯನಾಗಿದ್ದೆ. 1969 ರ ಅಧ್ಯಕ್ಷೀಯ ಚುನಾವಣೆಯಲ್ಲಿ ಆತ್ಮ ಚಿಂತನೆಗೆ ಅನುಗುಣವಾಗಿ ತಾವು ಮತ ನೀಡಿದುದಾಗಿ ಅವರು ಹೇಳಿದ್ದುಂಟು. ಅವರು ಮುಂದುವರೆದು "ಈ ಆತ್ಮ ಸಾಕ್ಷಿ ವೇದ-ಉಪನಿಷತ್ತುಗಳ ದರುಶನದಿಂದ ಬಂದಿದೆ. ವಿಜ್ಞಾನಿಗಳ ಪ್ರಕಾರ ಆತ್ಮ ಸಾಕ್ಷಿ ವ್ಯಕ್ತಿಯ ಹೃದಯದಲ್ಲಿ ಹುಟ್ಟುತ್ತದಂತೆ. ಆದರೆ ನಮ್ಮ ಕಾಂಗ್ರೆಸ್ ಮಿತ್ರರಿಗೆ ಇದು ಹೊಟ್ಟೆಯಿಂದ ಹುಟ್ಟಿದೆ. " ಎಂದು ಹೇಳಿದ್ದು ದಾಖಲೆಯಲ್ಲಿದೆ.

ಎಲ್.ಜಿ. ಹಾವನೂರು: ಮಾನ್ಯ ಸಚಿವ ಜೆ.ಹೆಚ್. ಪಟೇಲರ ನೆನಪಿನ ಶಕ್ತಿಯನ್ನು ನಾನು ಮೆಚ್ಚುತ್ತೇನೆ. ಕೃಪಲಾನಿಯವರು ಕಾಂಗ್ರೆಸ್ ಬಂಧುಗಳ ಆತ್ಮ ಸಾಕ್ಷಿ ಹೊಟ್ಟೆಯಿಂದ ಹುಟ್ಟುತ್ತದೆ ಎಂದು ಹೇಳಿದುದಾಗಿ ಪಟೇಲರು ತಿಳಿಸಿದರು. ಅದು ಸರಿ, ನಾನು ಮಾನ್ಯ ಪಟೇಲರಿಗೆ ಒಂದು ಪ್ರಶ್ನೆ ಹಾಕುತ್ತೇನೆ. 1979ರಲ್ಲಿ ಮಾನ್ಯ ಎಚ್.ಡಿ. ದೇವೇಗೌಡರು ಸನ್ಮಾನ್ಯ ಪಟೇಲರನ್ನು ಜನತಾಪಕ್ಷದಿಂದ ಹೊರಹಾಕಿದಾಗ ಅವರು ಮಾನ್ಯ ದೇವರಾಜ ಅರಸುರವರ ಪಕ್ಷ ಸೇರಿದರಲ್ಲಾ. ಆಗ ಪಟೇಲರ ಆತ್ಮ ಸಾಕ್ಷಿ ಎಲ್ಲಿಂದ ಹೊರ ಹೊಮ್ಮಿತ್ತು?

(ವಿಧಾನ ಪರಿಷತ್ತಿನ ಕಲಾಪ: ಫೆಬ್ರವರಿ 2, 1984)

ಈಗೇನೋ ನಾವು ಶಾಸಕರಾಗಿದ್ದೇವೆ. ನಮಗೆ ಈಗೀಗ ಸಂಸದೀಯ ನಡವಳಿಕೆಯ ಪರಿಚಯವಿದೆ. 1960ರ ದಶಕದಲ್ಲಿ ನಮಗೇನೂ ತಿಳಿಯದಿದ್ದಾಗ ತಾಯಿನುಡಿಯ ಬಗೆಗೆ ನಮ್ಮೆಲ್ಲರಲ್ಲಿ ಮಮತೆ, ಆಸಕ್ತಿ, ಗೌರವ ಮತ್ತು ಸ್ವಾಭಿಮಾನ ಮೂಡಿಸಿದವರು ಪಟೇಲರು.

ಲೋಕಸಭೆಯಲ್ಲಿ ಕನ್ನಡ ಭಾಷೆ ಮಾತನಾಡಬಹುದೇ? ಕನ್ನಡದಲ್ಲಿ ಮಾತನಾಡಿದರೆ ಸದನದಿಂದ ಹೊರಹಾಕುವರೆ? ಎಂದು ಚಡಪಡಿಸುತ್ತಿದ್ದ ದಿನಗಳು ಅವು.

ಒಮ್ಮೆಯಷ್ಟೇ ಅಲ್ಲ, ಕನಿಷ್ಠ 30-40 ಬಾರಿ ಕನ್ನಡದಲ್ಲಿ ಮಾತನಾಡಿ ನಮ್ಮೆಲ್ಲರಲ್ಲಿ ಜಾಗೃತಿಯನ್ನು ಮೂಡಿಸಿದವರು ಪಟೇಲರು.

1967ರಲ್ಲಿ ಪಟೇಲರು ಪಾರ್ಲಿಮೆಂಟಿನಲ್ಲಿ ಕನ್ನಡ ವಿಜಯಪತಾಕೆ ಹಾರಿಸಿ ಬಂದಿದ್ದಾಯಿತು. ಇದಾದ ಬಳಿಕ ಪಾರ್ಲಿಮೆಂಟ್ ಚುನಾವಣೆಗಳಲ್ಲಿ ನಾನೇ ಅವರ ಎಲೆಕ್ಷನ್ ಏಜೆಂಟ್. ಬಹಳ ಜೋರು ಚುನಾವಣೆ ಪ್ರಚಾರ ಮಾಡಿದ್ದೆವು.

ಕೌಂಟಿಂಗ್ ದಿನ ಸಹ್ಯಾದ್ರಿ ಕಾಲೇಜಿನಲ್ಲಿ ಎಲ್ಲರೂ ಜಮಾಯಿಸಿದ್ದೆವು. ಗೆದ್ದೇ ಗೆಲ್ಲುತ್ತೀವೆಂಬ ವಿಶ್ವಾಸ ನಮ್ಮದು. ಎಲ್ಲರೂ ಗೆಲ್ಲುತ್ತೀವಿ ಎಂದೇ ತಾನೆ ಕೌಂಟಿಂಗ್‌ಗೆ ಹೋಗುವುದು!

ಎಣಿಕೆ ಆರಂಭವಾಯಿತು. ಟ್ರೆಂಡ್ ಗೊತ್ತಾಯಿತು. ಸೋಲುವುದು ಗ್ಯಾರಂಟಿ ಎನ್ನುವ ಸೂಚನೆಗಳು ಸ್ಪಷ್ಟವಾದವು.

ಸ್ಥಿತಪ್ರಜ್ಞರಂತೆ, ನಗೆ ಚಟಾಕಿ ಹಾರಿಸುತ್ತ ಕುಳಿತಿದ್ದ ಪಟೇಲರು ನಾನಿದ್ದಲ್ಲಿಗೆ ಬಂದು ಭುಜ ಅಲುಗಿಸಿ ಪ್ರಶ್ನಿಸಿದರು.

"ಶಂಕರೂ, ಅವತ್ತು ಜೈಲಿನಿಂದ ಹೊರಗೆ ಬಂದ ಮೇಲೆ (ತುರ್ತುಪರಿಸ್ಥಿತಿ ಕಾಲದಲ್ಲಿ) ಮುಂದೇನು ಮಾಡೋಣ ಎಂದು ಕೇಳಿದ್ದೀ ತಾನೆ".

ಹೌದು ಎಂದೆ.

'ಈಗ ನಡಿ ವಾಪಸ್ಸು ಜೈಲಿಗೆ ಹೋಗೋಣ'

ಇವರ ಸಮಚಿತ್ತದ ಮುಂದೆ ಚುನಾವಣೆ ತಮಾಷೆ ಎನ್ನಿಸಿತು.

(ಡಿ.ಹೆಚ್. ಶಂಕರಮೂರ್ತಿ, ವಿಧಾನಪರಿಷತ್, ಫೆಬ್ರವರಿ 27, 2001)

## ಜನಮನದಲ್ಲಿ ಇಂದಿಗೂ ಇರುವ ಪಟೇಲರು

ಪಟೇಲರು ಪಟೇಲರೇ. ಒಂದು ಲೋಕಾರೂಢಿ ಮಾತಿದೆ. ಅನೇಕ ಜನ ಬದುಕಿ ಸತ್ತವರು ಇದ್ದಾರೆ. ಕೆಲವೇ ಜನ ಗತಿಸಿದ ಮೇಲೂ ಜನಮನದಲ್ಲಿ ಸದಾ ಬದುಕಿರುತ್ತಾರೆ. ಪಟೇಲರು ಈ ವರ್ಗಕ್ಕೆ ಸೇರಿದವರು.

ಸಂಸತ್ತಿನಲ್ಲಿ ನಾನೂ ಇದ್ದೆ. ಕನ್ನಡದಲ್ಲಿ ಮಾತನಾಡುವ ಮೂಲಕ ರಾಷ್ಟ್ರದಲ್ಲಿರುವ ಎಲ್ಲ ಪ್ರಾಂತೀಯ ಭಾಷೆಗಳಿಗೂ ಗೌರವ, ನೆಲೆ ಮತ್ತು ಜೀವಂತಿಕೆಯನ್ನು ತಂದುಕೊಟ್ಟವರು ಪಟೇಲರು.

ಸಾರ್ವಜನಿಕ ಜೀವನದಲ್ಲಿ ಹಾಗೂ ಸಂಸದೀಯ ಜೀವನದಲ್ಲಿ ಪ್ರತಿಯೋರ್ವ ವ್ಯಕ್ತಿಗೂ ಗೌರವತೋರುತ್ತಿದ್ದ ಮಾನವೀಯತೆಯ ಗಣಿ ನಮ್ಮ ಪಟೇಲರು.

(ಡಿ.ಬಿ. ಚಂದ್ರೇಗೌಡ (ಸಂಸದೀಯ ಖಾತೆ ಸಚಿವರು) ವಿಧಾನ ಪರಿಷತ್, ಫೆಬ್ರವರಿ 27, 2001)

# 3

# ಗುಂಡೂರಾಯರ ಕಾಲದಲ್ಲಿ ಪಟೇಲರು

## 'ರಂಪು, ರಗಳೆ, ಸಂಪಿನ ಮೊಂಡಾಟ' – ಕವಿವಾಣಿ

ಸಂಸತ್ತಿಗೆ ನಡೆಯುವ ಚುನಾವಣೆ, ಕೆಲವೊಮ್ಮೆ ರಾಜ್ಯಮಟ್ಟದಲ್ಲಿನ ಸರ್ಕಾರಗಳ ಪತನ ಇಲ್ಲವೇ ಉಗಮಕ್ಕೆ ಎಡೆಮಾಡಿಕೊಟ್ಟಿರುವುದು ಭಾರತದ ಪ್ರಜಾತಂತ್ರ ವ್ಯವಸ್ಥೆಯ ಪ್ರಯೋಗ ವಿಶೇಷ. ಲೋಕಸಭೆಯ ಚುನಾವಣೆಯ ಫಲಿತಾಂಶ ವಿಧಾನಮಂಡಲದ ರಾಜಕೀಯ ಪಕ್ಷಗಳು ಹಾಗೂ ಸರ್ಕಾರದ ಮೇಲೆ ಎಲ್ಲ ಸಂದರ್ಭಗಳಲ್ಲಿಯೂ ಪ್ರಭಾವ ಬೀರದಿರಬಹುದು. ಆದರೆ ಜನಾಭಿಪ್ರಾಯ ಸಂಸದೀಯ ಸಂಸ್ಥೆಗಳ ಅಸ್ತಿತ್ವದ ಬುನಾದಿ. ಆಡಳಿತ ಪಕ್ಷದ ಸರ್ಕಾರದ ಬಗೆಗೆ ಜನಾಭಿಪ್ರಾಯ ಇಲ್ಲವೆಂದ ಕೂಡಲೇ ರಾಜಕೀಯ ಅಸ್ಥಿರತೆ ತಲೆಯೆತ್ತಿ ನಾಯಕ-ಶಾಸಕರ ನಡುವೆ ಕಂದಕ ನಿರ್ಮಿಸುತ್ತದೆ. ಶಾಸಕರು ಅಧೀರರಾಗುತ್ತಾರೆ. ಮುಂದೇನಾಗುವುದೆಂಬ ಕಾತುರ ಅವರನ್ನು ಕಾಡಲು ಆರಂಭಿಸುತ್ತದೆ. ದೇವರಾಜ ಅರಸು ಸರ್ಕಾರ ಆಡಳಿತದಿಂದ ಕೆಳಗಿಳಿಯಲು ಮತ್ತು ಗುಂಡೂರಾಯರ ನೇತೃತ್ವದ ನೂತನ ಸರ್ಕಾರ ಅಡಳಿತಸೂತ್ರವಹಿಸಲು ಮುಂದಾದದ್ದು ಇದೇ ಹಿನ್ನೆಲೆಯಲ್ಲಿ.

ಕರ್ನಾಟಕದ ಸಂಸದೀಯ ಇತಿಹಾಸದ ಪುಟಗಳಲ್ಲಿ ಅತಿ ಕಿರಿ ವಯಸ್ಸಿನಲ್ಲಿ ಮುಖ್ಯಮಂತ್ರಿಯಾದವರ ಪೈಕಿ ಮೊದಲಿಗರು ಆರ್. ಗುಂಡೂರಾವ್. ಮುಂದೆ ಜೆ.ಹೆಚ್. ಪಟೇಲರಿಗೂ, ರಾಯರಿಗೂ ಆದ ಸಾಮ್ಯವೆಂದರೆ – ಲೋಕಸಭೆಯ ಅನುಭವ. ಪಟೇಲರು ಮೊದಲು ಲೋಕಸಭೆ ಕಂಡು, ನಂತರ ವಿಧಾನಸಭೆ ಪ್ರವೇಶಿಸಿದವರು. ಗುಂಡೂರಾಯರು ಶಾಸಕರಾಗಿ ನಂತರ ಸಂಸದರಾದವರು.

ಗುಂಡೂರಾಯರು ದೇವರಾಜ ಅರಸುರವರ ರಾಜಕೀಯ ಗರಡಿಯಲ್ಲಿ ಪಳಗಿದವರು. ಅರಸು ಮಂತ್ರಿಮಂಡಲದಲ್ಲಿ 1974ರ ಅಕ್ಟೋಬರ್‌ನಲ್ಲಿ ಯುವಜನ ಖಾತೆಯ ರಾಜ್ಯದರ್ಜೆ ಸಚಿವರಾಗಿ ಅಧಿಕಾರ ಸೂತ್ರ ವಹಿಸಿಕೊಂಡ ರಾಯರಿಗೆ 1977ರ ಫೆಬ್ರವರಿಯಲ್ಲಿ ಅರಸುರವರ ಮಂತ್ರಿಮಂಡಲದಲ್ಲಿಯೇ ಕ್ಯಾಬಿನೆಟ್ ದರ್ಜೆಗೆ ಬಡ್ತಿ ಸಿಕ್ಕಿತ್ತು. ಇಬ್ಬರೂ ಪರಸ್ಪರ ಸಂಬಂಧದಲ್ಲಿ ನಾಜೂಕಿನ ಅನುಕೂಲ-ಸಿಂಧು ಸೂತ್ರ ಅನುಸರಿಸಿದವರು. ಅರಸು-ರಾಯರದು ಇಂಗ್ಲೀಷ್‌ನಲ್ಲಿ ಹೇಳುವಂತೆ 'ಬ್ಲೋಹಾಟ್-ಬ್ಲೋಕೋಲ್ಡ್' ಕ್ಷಣಚಿತ್ತ; ಕ್ಷಣಪಿತ್ತ. (blow-hot; blow cold) ಸಂಬಂಧ. ತಮ್ಮ ರಾಜಕೀಯ ಭವಿಷ್ಯವು ಪಕ್ಷದ ನೇತಾರರಾದ ಇಂದಿರಾಜಿಯವರ ಕೈಯಲ್ಲಿದೆ ಎಂಬ ವಾಸ್ತವಿಕ ಅರಿವು ಮಾತ್ರ ಇಬ್ಬರಿಗೂ ಇತ್ತು.

ಜನವರಿ 12, 1980 ರಂದು ಗುಂಡೂರಾಯರು ಕರ್ನಾಟಕದ ಮುಖ್ಯಮಂತ್ರಿ ಆದ ಬಳಿಕ ವಿಧಾನ ಸಭೆಯಲ್ಲಿ ದೇವರಾಜ ಅರಸರು ಪ್ರತಿಪಕ್ಷದ ನಾಯಕರು. ಜೆ.ಹೆಚ್. ಪಟೇಲರೇ ಎರಡನೆಯ ನಾಯಕ. ಈ ವೇಳೆಗೆ ಮಾನ್ಯ ದೇವೇಗೌಡರು ಪಟೇಲರನ್ನು ಜನತಾ ಪಕ್ಷದಿಂದ ಹೊರಹಾಕಿದ್ದೂ ಆಗಿತ್ತು.

ಕೊಡಗಿನ ಕಾವೇರಿಯ ದಡದ ಗುಂಡೂರಾವ್ ಹೊಸ ಅಲೆಯ ರಾಜಕಾರಣಿ. ಆಡಳಿತದಲ್ಲಿ ಹೊಸತನ ತರಬೇಕೆಂಬ ಉತ್ಕಟ ಇಚ್ಛೆ. ಸ್ಥಳದಲ್ಲಿಯೇ ಕೇಳಿದ್ದನ್ನು ಮಂಜೂರು ಮಾಡುವ ಹುಮ್ಮಸ್ಸು. ಎಲ್ಲಕ್ಕಿಂತ ಮಿಗಿಲಾಗಿ ಪಕ್ಷದ ವರಿಷ್ಠರ ಪೂರ್ಣ ವರದಹಸ್ತ.

ಜೆ.ಹೆಚ್. ಪಟೇಲರು ಸದನದಲ್ಲಿ ಗುಂಡೂರಾವ್ ನೇತೃತ್ವದ ಸರ್ಕಾರದ ಆಡಳಿತದಲ್ಲಿನ ನ್ಯೂನತೆಗಳತ್ತ ಗಮನ ಸೆಳೆಯಲು ಬಹುವಾಗಿ ಪ್ರಯತ್ನಿಸಿದರು. ರೋಲರ್ ಮಿಲ್ ಪ್ರಕರಣ, ರೋಲೆಕ್ಸ್ ವಾಚ್ ಪ್ರಸಂಗ, ಪತ್ರಿಕೆಗಳ ಮೇಲಿನ ಹಲ್ಲೆ, ಕೈಗಾರಿಕಾ ಮುಷ್ಕರ, ಕನ್ನಡಪರ ಗೋಕಾಕ್ ಚಳುವಳಿ, ನಿಪ್ಪಾಣಿ, ನರಗುಂದ, ನವಲಗುಂದ, ಮಲಪ್ರಭ, ಮಂಡ್ಯ, ಶಿವಮೊಗ್ಗ, ಬಳ್ಳಾರಿಗಳಲ್ಲಿ ರೈತರ ಚಳುವಳಿ ಮತ್ತು ರೈತರ ಮೇಲೆ ಗೋಲಿಬಾರ್ - ಹೀಗೆ ಹಲವಾರು ಪ್ರಕರಣಗಳನ್ನು ಕೈಗೆತ್ತಿಕೊಂಡು ಪಟೇಲರು ಸದನದಲ್ಲಿ ಗುಂಡೂರಾವ್ ಆಡಳಿತವನ್ನು ಟೀಕಿಸಿದರು.

## "ಯಾರಿಗೆ ಬಂದಿದೆ ಸ್ವಾತಂತ್ರ್ಯ?"

ಮಾನ್ಯ ಅಧ್ಯಕ್ಷರೇ, ನಾನು ಒಂದು ನಿಲುವಳಿ ಸೂಚನೆಯನ್ನು ಕಳುಹಿಸಿದ್ದೆ.. ಗಂಭೀರವಾದ ವಿಷಯ ಕುರಿತದ್ದು. ರಾಜ್ಯದ ಮೂಲೆ ಮೂಲೆಗಳಿಂದ ಸಾವಿರಾರು ರೈತರು ಇವತ್ತು ಬೆಂಗಳೂರಿಗೆ ಬಂದಿದ್ದಾರೆ.. ಇತಿಹಾಸದಲ್ಲಿಯೇ ಮೊದಲ ಬಾರಿಗೆ ರೈತರು, ಕಾರ್ಮಿಕರು, ರೈತ ಕಾರ್ಮಿಕರು, ವಿದ್ಯಾರ್ಥಿಗಳು, ಹೀಗೆ ಎಲ್ಲ ಶ್ರಮಜೀವಿಗಳೂ ಒಟ್ಟಾಗಿ ಸರ್ಕಾರದ ಗಮನ ಸೆಳೆಯಲು ಇಲ್ಲಿಗೆ ಬರುತ್ತಿದ್ದಾರೆ.. ಶಾಂತಿಯುತವಾಗಿದೆ ಅವರ ಚಳುವಳಿ...

ರೈತರ ಸ್ಥಿತಿ ಚಿಂತಾಜನಕವಾಗಿದೆ. ಅವರ ಮೂಲಭೂತ ಸಮಸ್ಯೆಗಳನ್ನು ಬಗೆಹರಿಸಲು ಕಣ್ಣೊರೆಸುವ ಪ್ರಯತ್ನವಾಗಿದೆಯೇ ವಿನಃ ರೈತರ ಸ್ಥಿತಿ ಸುಧಾರಿಸುವ ಪ್ರಜ್ಞಾಪೂರ್ವಕ ಬದ್ಧತೆ ಕಾಣುತ್ತಿಲ್ಲ. ಇಂದು ರೈತ ನೇಗಿಲು, ಗುಳ, ಕೊನೆಗೆ ಒಂದು ಕೊಡಲಿಯನ್ನೂ ಕೊಳ್ಳುವ ಸ್ಥಿತಿಯಲ್ಲಿಲ್ಲ... ಬೆಳೆದ ಧಾನ್ಯಗಳಿಗೆ ಸರಿಯಾದ ಬೆಲೆ ಸಿಗುತ್ತಿಲ್ಲ.

ಇಂದು ರೈತರು ಹಾಕುತ್ತಿರುವ ಘೋಷಣೆಗಳನ್ನು ಕೇಳಿದರೆ ಆಶ್ಚರ್ಯವೆನಿಸುತ್ತದೆ.

"...ಯಾರಿಗೆ ಬಂದಿದೆ, ಎಲ್ಲಿಗೆ ಬಂದಿದೆ 47ರ ಸ್ವಾತಂತ್ರ್ಯ?
ತಾತಾ ಬಿರ್ಲಾ ಜೋಬಿಗೆ ಬಂದಿದೆ ಸ್ವಾತಂತ್ರ್ಯ;
ಇಂದಿರಾ ಗಾಂಧಿಯ ಲಾಟಿಗೆ ಬಂದಿದೆ ಸ್ವಾತಂತ್ರ್ಯ;
ರೈತರ ಸಾವಿಗೆ ಬಂದಿದೆ 47ರ ಸ್ವಾತಂತ್ರ್ಯ;
ಗುಂಡೂರಾಯರ ಗುಂಡಿಗೆ ಬಂದಿದೆ ಸ್ವಾತಂತ್ರ್ಯ;
ಯಾರಿಗೆ ಬಂದಿದೆ, ಎಲ್ಲಿಗೆ ಬಂದಿದೆ 47ರ ಸ್ವಾತಂತ್ರ್ಯ..."

ಸ್ವಾಮೀ ... ಅಧ್ಯಕ್ಷರೇ.. ಇದು ಕೇವಲ ಕವನವಲ್ಲ.. ಬೆಂಗಳೂರಿಗೆ ಬರುತ್ತಿರುವ ರೈತರು ಹಾಡಿಕೊಂಡು ಬರುತ್ತಿರುವ ಘೋಷಣೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ : ಫೆಬ್ರವರಿ 5, 1981)

## ಇಂದಿರಾಜಿನ ನೋಡಿದ ಮೇಲೆ ಇವರಿಗೆ ಬೇರೆ ದೇವರೇಕೆ?

ಎಚ್.ಟಿ. ಕೃಷ್ಣಪ್ಪ: ರಾಜ್ಯದ ಕೆಲ ಸಮಸ್ಯೆಗಳನ್ನು ಕುರಿತು ಪ್ರಧಾನ ಮಂತ್ರಿಯವರೊಂದಿಗೆ ಚರ್ಚಿಸಲು ಹೋದ ಮುಖ್ಯಮಂತ್ರಿಯವರು ಸ್ವಲ್ಪಕಾಲ ಶ್ರೀಮತಿ ಇಂದಿರಾಗಾಂಧಿಯವರೊಂದಿಗೆ ದೇವಸ್ಥಾನಕ್ಕೆ ಹೋಗಿಬರುವ ಕಾರ್ಯಕ್ರಮದಲ್ಲಿ ಭಾಗವಹಿಸಿದುದು ಪ್ರಮಾದವೇನೂ ಅಲ್ಲ.

ಜೆ.ಹೆಚ್. ಪಟೇಲ್: ಅವರು (ಶ್ರೀ ಗುಂಡೂರಾಯರು) ಶ್ರೀಮತಿ ಇಂದಿರಾಗಾಂಧಿಯವರನ್ನು ನೋಡಿದ ಮೇಲೆ ಮತ್ತೊಂದು ದೇವರನ್ನು ನೋಡುವ ಅವಶ್ಯಕತೆ ಏನಿತ್ತು?

(ವಿಧಾನಸಭೆ ಕಲಾಪ: ಮಾರ್ಚ್ 4, 1980)

## ಇಂದಿರಾಗಾಂಧಿ ಹೆಸರೆತ್ತಲು ಇವರೇ ಕಾರಣ - ಪಟೇಲ್

ನನ್ನದೊಂದು ಕ್ರಿಯಾಲೋಪವಿದೆ... ಅಧ್ಯಕ್ಷರೇ.. ಈ ಸದನದಲ್ಲಿಲ್ಲದವರ ವಿಷಯವನ್ನು ಎತ್ತ ಬೇಡ ಎನ್ನುತ್ತೀರಾ. ವೈಯಕ್ತಿಕವಾಗಿಯಾಗಲೀ ಯಾರ ಹೆಸರನ್ನು ತೆಗೆದುಕೊಳ್ಳಬೇಡಿ ಎಂದು ತಾವು ಆದೇಶ ನೀಡುತ್ತೀರಿ. ರಾಜ್ಯಪಾಲರ ಭಾಷಣದ ಮೊದಲ ಪುಟದಲ್ಲಿ ಹೀಗಿದೆ.

"ಸುಮಾರು 33 ತಿಂಗಳ ಕಾಲ ಅಧಿಕಾರದಿಂದ ಹೊರಗಿದ್ದ ಶ್ರೀಮತಿ ಇಂದಿರಾಗಾಂಧಿಯವರು ಈಗ ಪ್ರಚಂಡ ಬಹುಮತದಿಂದ ಕೇಂದ್ರದಲ್ಲಿ ಪುನಃ ಪ್ರಧಾನ ಮಂತ್ರಿಯಾಗಿ ಅಧಿಕಾರಕ್ಕೆ ಬಂದಿದ್ದಾರೆ. ಲೋಕಸಭಾ ಚುನಾವಣೆಗಳ ಫಲಿತಾಂಶದಿಂದಾಗಿ ನಮ್ಮ ರಾಜ್ಯದ ಸರ್ಕಾರದಲ್ಲಿಯೂ ಬದಲಾವಣೆಯುಂಟಾಗಿ ಈಗ ಕಾಂಗ್ರೆಸ್ (ಐ) ಪಕ್ಷ ಸರ್ಕಾರವನ್ನು ರಚಿಸಿದೆ."

ಇದು ರಾಜ್ಯಪಾಲರ ಭಾಷಣ. ಹೀಗಾಗಿ ಶ್ರೀಮತಿ ಇಂದಿರಾಗಾಂಧಿಯವರು ಇವತ್ತು ವೈಯಕ್ತಿಕವಾದ ವ್ಯಕ್ತಿಯಾಗಿಲ್ಲ. ರಾಜ್ಯಪಾಲರ ಭಾಷಣದಲ್ಲಿ ಅವರ ಹೆಸರನ್ನು ಎತ್ತದಿದ್ದ ಪಕ್ಷದಲ್ಲಿ ನಮಗೆ ಇಲ್ಲಿ ಮಾತನಾಡಕ್ಕೆ ಅವಕಾಶವೇ ಇರುತ್ತಿರಲಿಲ್ಲ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಮಾರ್ಚಿ 8, 1980)

## ಮೂರ್ಖ ಯಾರು? ಗುಂಡೂರಾವ್ - ಪಟೇಲ್

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಈ ದೇಶದಲ್ಲಿ ಆಡಳಿತ ನಡೆಸುತ್ತಿರುವ ಮಂತ್ರಿಗಳ ಬಗ್ಗೆ ಹಾಗೂ ಶಾಸಕರ ಬಗ್ಗೆ ಸಹ ಜನರಲ್ಲಿ ಒಂದು ಕೆಟ್ಟ ಅಭಿಪ್ರಾಯವಿದೆ. ಆದ್ದರಿಂದ ಇವರುಗಳನ್ನು ಹತೋಟಿಗೆ ತರಲು ಇಂತಹ ಒಂದು ಕಾನೂನನ್ನು ಜಾರಿಗೆ ತರಬೇಕಾಗುತ್ತದೆ. ಈ ರಾಜ್ಯದಲ್ಲಿ ಹಾಗೂ ಈ ರಾಷ್ಟ್ರದಲ್ಲಿ ನಡೆಯುತ್ತಿರುವ ಕೆಲವು ಘಟನೆಗಳನ್ನು ನೋಡಿದಾಗ, ಕೆಲವರು ಯಾವ ರೀತಿ ನಡೆದುಕೊಳ್ಳುತ್ತಿದ್ದಾರೆಂದರೆ, ಅವರ ಹೆಸರನ್ನು ನಾನು ಇಲ್ಲಿ ಹೇಳುವುದಿಲ್ಲ. ಸಂಸತ್ತಿನ ಸದಸ್ಯರೊಬ್ಬರು ಪಾಟ್ನ ರೈಲ್ವೆ ಸ್ಟೇಷನನ್ನು ಮಾರಾಟ ಮಾಡಿದ್ದಾರೆ. ಇಂತಹವರನ್ನು ಹತೋಟಿಗೆ ತರಲು ಈ ರೀತಿಯ ಕಾನೂನು ಬೇಕು.

ಈ ಕಾರಣದಿಂದಲೇ ನಮ್ಮ ರಾಜ್ಯಾಂಗದಲ್ಲಿ ಇದ್ದಂಥ ಎಲ್ಲ ತಿದ್ದುಪಡಿಗಳೂ ಹೋದಮೇಲೆ ಫಂಡಮೆಂಟಲ್ ಡ್ಯೂಟೀಸ್ ಎಂಬ ಛಾಪ್ಟರನ್ನು ಅದರಲ್ಲಿ ಸೇರಿಸಿದ್ದಾರೆ. ಒಂದನ್ನು ಮಾತ್ರ ಓದಿ ಹೇಳುತ್ತೇನೆ:

"To strive towards excellence in all spheres of individual and collective activity so that the nation constantly rises to higher levels of endeavour and achievement".

ಇದರ ಅರ್ಥವೇನೆಂದರೆ, ಹೊಟ್ಟೆಯಲ್ಲಿ ಗೆಡ್ಡೆ ಇದ್ದಾಗ, ಅದು ಕರಗಲು ಔಷಧ ಕೊಡಬೇಕು. ಇಲ್ಲದಿದ್ದರೆ ಗೆಡ್ಡೆ ಜಾಸ್ತಿ ಬೆಳೆದರೆ ಕೆಮ್ಮು ಪ್ರಾರಂಭವಾಗುತ್ತದೆ. ಆಗ ಕೆಮ್ಮಿಗೆ ಔಷಧ ಕೊಟ್ಟರೆ ಗೆಡ್ಡೆ ಕರಗುವುದಿಲ್ಲ. ಆದಕಾರಣ ರೋಗದ ಚಿಹ್ನೆ ಎಲ್ಲಿದೆ ಎಂಬುದನ್ನು ಕಂಡುಹಿಡಿದು, ಅದಕ್ಕೆ ಔಷಧ ಕೊಡಬೇಕು, ಇಲ್ಲದಿದ್ದರೆ ಅದು ಹೊಸ ರೋಗಕ್ಕೆ ದಾರಿಯಾಗುತ್ತದೆ.

ಅಧ್ಯಕ್ಷರು:- ತಾವು ಹೇಳುವುದನ್ನೆಲ್ಲಾ ಹೇಳಿಬಿಟ್ಟಿದ್ದೀರಿ. ಆದಕಾರಣ ತಾವು ತಮ್ಮ ಭಾಷಣವನ್ನು ಇಲ್ಲಿಗೇ ಮುಗಿಸಿ ಬೇರೆಯವರಿಗೆ ಮಾತನಾಡಲು ಅವಕಾಶ ಮಾಡಿಕೊಡುವುದು ಒಳ್ಳೆಯದು.

ಜೆ.ಹೆಚ್. ಪಟೇಲ್:- ಸರ್ವಜ್ಞಕವಿಯು ತನ್ನ ವಚನದಲ್ಲಿ 'ಮೂರ್ಖನಿಗೆ ಬುದ್ಧಿಯನ್ನು ನೂರ್ಕಾಲ ಪೇಳಿದರೆ ಗೋರ್ಕಲ್ಲ ಮೇಲೆ ಮಳೆ ಹುಯ್ದಂತೆ' ಎಂದು ಹೇಳಿರುವಂತೆ ನೀವು ನನಗೆ ಭಾಷಣ ಮಾಡಬೇಡಿ ಎಂದು ಹೇಳುತ್ತೀರಾ?

**ಆರ್. ಗುಂಡೂರಾವ್ (ಮುಖ್ಯಮಂತ್ರಿ)**:- ಮೂರ್ಖರು ಯಾರು ಅಂತ ಕೇಳುವುದಕ್ಕೆ ನೀವು ತಯಾರು ಆಗಬೇಕು.

ಜೆ.ಹೆಚ್. ಪಟೇಲ್:- ನಾವು ಯಾವಾಗಲೂ ಅದನ್ನು ಕೇಳುವುದಕ್ಕೆ ತಯಾರು ಇದ್ದೇವೆ.

ಅಧ್ಯಕ್ಷರು:- ದಯವಿಟ್ಟು ನೀವು ಕನ್‌ಕ್ಲೂಡ್ ಮಾಡಿ.

ಆರ್. ಗುಂಡೂರಾವ್:- ಇಲ್ಲಿ ಮೂರ್ಖರೂ ಇರುತ್ತಾರೆ, ಮೂರ್ಖರ ಅಪ್ಪಂದಿರೂ ಇರುತ್ತಾರೆ.

ಜೆ.ಹೆಚ್. ಪಟೇಲ್:- ಕುಂಬಳಕಾಯಿ ಕಳ್ಳ ಅಂದರೆ ತಾವು ಏತಕ್ಕೆ ಹೆಗಲ ಮುಟ್ಟಿ ನೋಡಿಕೊಳ್ಳುತ್ತೀರಿ?

ಆರ್. ಗುಂಡೂರಾವ್:- ನೀವು ಒಬ್ಬರೇ ಬುದ್ಧಿವಂತರು.

ಜೆ.ಹೆಚ್. ಪಟೇಲ್:- ಸ್ವಾಮಿ, ಅವರಿಗೆ ಇಲ್ಲಿ ಎಷ್ಟು ಅಧಿಕಾರವಿದೆಯೋ ಅಷ್ಟೇ ಅಧಿಕಾರ ನನಗೂ ಇಲ್ಲಿ ಇದೆ. ಅದನ್ನು ನೀವು ಒಪ್ಪುತ್ತೀರಿ. ಅವರು ಇಲ್ಲಿ ಮಾನ್ಯ ಮುಖ್ಯಮಂತ್ರಿಗಳಾಗಿದ್ದರೂ ಏನು ನಾನು ಒಬ್ಬ ಸಾಮಾನ್ಯ ಸದಸ್ಯನಾಗಿದ್ದರೂ, ಮುಷ್ಕರ ಮಾಡುವ ಬಗ್ಗೆ ನಾನು ಭಾಷಣ ಮಾಡುತ್ತೇನೆ. ಕಾನೂನು ಇಲ್ಲಿದೆ. ಈ ಕಾನೂನಿನ ವ್ಯಾಪ್ತಿಯಲ್ಲಿ ನಾನೆಲ್ಲಿ ಬರುತ್ತೇನೆಯೋ ಎಂದು ನನಗೆ ಹೆದರಿಕೆ ಆಗುತ್ತದೆ. ಅಲ್ಲದೇ ಅವರನ್ನು ನೋಡಿದರೆ ನನಗೆ ಹೆದರಿಕೆಯಾಗುತ್ತದೆ.

ಅಧ್ಯಕ್ಷರು:- ಈ ಕಾನೂನಿನ ವ್ಯಾಪ್ತಿಯಲ್ಲಿ ನೀವು ಬರುವುದಿಲ್ಲ.

(ವಿಧಾನಸಭೆ ಕಲಾಪ, ಮೇ 6, 1980)

## ಜಾತಿಗೊಂದು ಕಾಲೇಜು ಬೇಡ

ನಮ್ಮ ರಾಜ್ಯದಲ್ಲಿ ಪ್ರತಿಯೊಂದು ಜಾತಿಯವರೂ ಒಂದೊಂದು ಕಾಲೇಜನ್ನು ಪ್ರಾರಂಭ ಮಾಡಿ ವಿದ್ಯೆಯನ್ನು ಮಾರಾಟ ಮಾಡುವುದು ಸರಿಯಲ್ಲ. ಕುರುಬರು ಒಂದು ಕಾಲೇಜನ್ನು

ಪ್ರಾರಂಭ ಮಾಡಿದರೆಂದು ಲಿಂಗಾಯಿತರೂ ಒಂದು ಕಾಲೇಜನ್ನು ಆರಂಭಿಸುವುದು, ಲಿಂಗಾಯಿತರು ಮಾಡಿದರೆಂದು ಒಕ್ಕಲಿಗರೂ ಮಾಡುವುದು ಅಷ್ಟು ಚೆನ್ನಾಗಿ ಕಾಣುವುದಿಲ್ಲ. ಇವತ್ತಿನ ದಿನ ಮೆಡಿಕಲ್ ಕಾಲೇಜುಗಳನ್ನು ತೆರೆಯುವುದು ಒಂದು ಹುಡುಗಾಟಿಕೆಯಾಗಿದೆ. ಕ್ಯಾಪಿಟೇಷನ್ ಫೀ ಕೊಟ್ಟು ಬರುವಂತಾಗಿದೆ. ಇಡೀ ದೇಶದಲ್ಲಿ ಪ್ರೈವೇಟ್ ಮೆಡಿಕಲ್ ಕಾಲೇಜುಗಳಲ್ಲಿ ಕ್ಯಾಪಿಟೇಷನ್ ಫೀ ತೆಗೆದುಕೊಳ್ಳುತ್ತಿರುವುದು ನಮ್ಮ ರಾಜ್ಯದಲ್ಲಿ ಮಾತ್ರ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಫೆಬ್ರವರಿ 2, 1981)

ಜೆ.ಹೆಚ್. ಪಟೇಲ್: ಮಾನ್ಯ ಅಧ್ಯಕ್ಷರೇ, ಗುಂಡೂರಾಯರ ನೇತೃತ್ವದ ಈ ಸರ್ಕಾರದಲ್ಲಿ ಏನಾಗಿದೆ ಎಂದರೆ, ಒಬ್ಬ ಮಂತ್ರಿಯನ್ನು ತೆಗೆಯಬೇಕು ಎಂದರೆ ಬೆಂಗಳೂರಿನಿಂದ ಡೆಲ್ಲಿಗೆ ಓಡಿಹೋಗಬೇಕು. ಒಬ್ಬ ಮಂತ್ರಿಯನ್ನು ಸೇರಿಸಬೇಕಾದರೂ ಬೆಂಗಳೂರಿನಿಂದ ಡೆಲ್ಲಿಗೆ ಹೋಗಬೇಕು. ಈಗ ಬೆಂಗಳೂರಿನಿಂದ ಡೆಲ್ಲಿಗೆ ಓಡಾಟ, ಪರದಾಟ, ಕಿತ್ತಾಟ, ತಿಕ್ಕಾಟ, ನಡೆಯುತ್ತಿರುವುದನ್ನು ನೋಡಿದರೆ ಮಂತ್ರಿ ಮಂಡಲವನ್ನು ಒಂದು ಸುವ್ಯವಸ್ಥಿತ ರೀತಿಯಲ್ಲಿ ರಚಿಸತಕ್ಕ ಒಂದು ಶಕ್ತಿ ನಿಮ್ಮ ಪಕ್ಷಕ್ಕೆ ಇಲ್ಲ. ಇದನ್ನು ಶ್ರೀಮಾನ್ ಗುಂಡೂರಾವ್ ಅವರು ತಮ್ಮ ನಡವಳಿಕೆಯಿಂದ ತೋರಿಸಿಕೊಂಡಿದ್ದಾರೆ. ಡಿ.ವಿ.ಜಿ. ಅವರು ಒಂದು ಪದ್ಯವನ್ನು ಹೇಳಿದ್ದಾರೆ;

ಈ ಹೊತ್ತಿನ ಧಣಿ ನಾಳೆ ಪರಾರಿ
ನಾಳೆಯ ಧಣಿ ಈ ಹೊತ್ತು ಭಿಕಾರಿ
ದೊಂಬಿಯ ರಾಜ್ಯ ದೊಂಬರ ಭೋಜ್ಯ
ಗಂಭೀರ ಕತ್ತೆಗೆ ದೊಣ್ಣೆಯೇ ಪೂಜ್ಯ
ರಂಪು ರಗಳೆ ಸಂಪಿನ ಮೊಂಡಾಟ
ಗುಂಪು ಕಟ್ಟಿದರೆ ಮಂತ್ರಿಯ ಪೀಠ

ಇದು ವಿಚಾರ, ಈ ಮಂತ್ರಿಮಂಡಲಕ್ಕೆ ಸಂಬಂಧಪಟ್ಟಂತಹ ವ್ಯವಸ್ಥೆಯನ್ನು ಕುರಿತು ಇದು ಪ್ರತಿ ಬಿಂಬಿಸುತ್ತದೆ.

ಪಿ.ಕೆ. ಕಳ್ಳಿಗುಡ್ಡ:- ಇದನ್ನು ಯಾರು ಬರೆದಿದ್ದಾರೆ.

ಎ. ಲಕ್ಷ್ಮೀಸಾಗರ್:- ಕೀರ್ತಿ ಶ್ರೇಷ್ಠರಾದ ಪೂಜ್ಯ ಡಿ.ವಿ. ಗುಂಡಪ್ಪನವರ ಪದ್ಯ ಇದು.

ಜೆ.ಹೆಚ್. ಪಟೇಲ್:- ಈ ಪದ್ಯದ ನಾಲ್ಕನೇ ಸಾಲಿನಲ್ಲಿ ಗಂಭೀರ ಕತ್ತೆಗೆ ದೊಣ್ಣೆಯೇ ಪೂಜ್ಯ ಎಂದು ಏನು ಬರೆದಿದ್ದಾರೆ. ಅದು ಮುಖ್ಯ ಅಂಶ.

(ವಿಧಾನಸಭೆ ಕಲಾಪ ಫೆಬ್ರವರಿ 4, 1981)

## ಸರ್ಕಾರ - ಕುದುರೆ

ಮಾನ್ಯ ಗುಂಡೂರಾಯರ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ಈ ವರ್ಗಾವಣೆಗಾಗಿ ಓಡಾಡುವ ಗದ್ದಲ ಕಡಿಮೆಯಾಗಿದೆ. ಬಹಳ ಉತ್ಸಾಹಶಾಲಿ ಮುಖ್ಯಮಂತ್ರಿಗಳಿದ್ದಾರೆ. ಆದರೆ ಸರ್ಕಾರವೇ ಇಲ್ಲ ಎನ್ನುವಂತಾಗಿದೆ. ನಿಮ್ಮ ಆಡಳಿತ ಯಂತ್ರದ ಚಾಲನೆ ನಿಮ್ಮ ಕೈಲಿದೆ. ಕುದುರೆ ಒಂದಿಷ್ಟು ಎದ್ದು ಒದರಿ ಸ್ವಲ್ಪ ದೂರ ಹೋದ ಮಾತ್ರಕ್ಕೆ ದಾರಿ ಸವೆದ ಹಾಗಲ್ಲ. ಇದರ ಜೊತೆಗೆ ಕೇಳಿ ಬಂದ ಒಂದು ಮಾತು ಹೀಗಿದೆ: ಅದೇನೆಂದರೆ ಶ್ರೀ ದೇವರಾಜ ಅರಸು ಕಾಲದಲ್ಲಿ ಹಿಂದುಳಿದ ಜಾತಿಯ ಅಧಿಕಾರಿಗಳಿಗೆ ಏನೊಂದು ರಕ್ಷಣೆ ಇತ್ತು. ಈಗ ಅದಿಲ್ಲ ಎನ್ನುವ ಟೀಕೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಫೆಬ್ರವರಿ 3, 1981)

## ಇಂದಿರಾಜಿ ಬಗೆಗೆ ಟೀಕೆ

ಶ್ರೀಮತಿ ಇಂದಿರಾಗಾಂಧಿಯವರ ಹೆಸರು ಬಂದಾಗಲೆಲ್ಲಾ ಹಾದಿ ತಪ್ಪಿದರು ಎನ್ನುವಷ್ಟು ವಿಚಲಿತರಾಗಿ ಟೀಕೆ ಮಾಡುವುದು ಪಟೇಲರ ಹವ್ಯಾಸವಾಗಿತು. ಈ ಸಂದರ್ಭಗಳು ಹೇಗಿದ್ದವೆಂದರೆ ಪ್ರಜಾಪ್ರಭುತ್ವದಲ್ಲಿ ಜನಾಭಿಪ್ರಾಯವೇ ಮಾನ್ಯ ಎನ್ನುವ ಸಿದ್ಧಾಂತವನ್ನು ನಂಬಬೇಕಾದ ಪಟೇಲರು ಶ್ರೀಮತಿ ಇಂದಿರಾಗಾಂಧಿಯವರನ್ನು ಜನರೇ ಆರಿಸಿದ್ದರು ಎಂಬುದನ್ನು ಒಮ್ಮೊಮ್ಮೆ ಮರೆತಂತೆ ಭಾಸವಾಗುತ್ತಿತ್ತು. ಈ ಬಗೆಗೆ ಪಟೇಲರ ವಾದವನ್ನು ಸದನ ಸಹಿತ ಒಪ್ಪಿದಂತೆ ಕಾಣುತ್ತಿರಲಿಲ್ಲ. ಹಿಡಿಸಲಿ-ಬಿಡಲಿ ಹೇಳುವುದಕ್ಕೆ ಪಟೇಲರು ಹಿಂದು ಮುಂದು ನೋಡುತ್ತಿರಲಿಲ್ಲ ಎಂಬುದಕ್ಕೆ ಇಲ್ಲಿ ಒಂದು ವಿಚಾರ ಘರ್ಷಣೆಯ ತುಣುಕು.

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ):** ಇನ್ನೊಂದು ವಿಷಯ ನಮ್ಮ ಉಪನಾಯಕರಾದ ಶ್ರೀ ಬಸವಲಿಂಗಪ್ಪನವರು ಶ್ರೀಮತಿ ಇಂದಿರಾಗಾಂಧಿಯವರಿಂದಲೇ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಜನತೆಯ ಕಷ್ಟ ನಿವಾರಣೆ ಸಾಧ್ಯ ಎಂದು ನಂಬಿದ್ದಾರೆ. ಇದು ಅವರ ತಪ್ಪು ಕಲ್ಪನೆ, ಶ್ರೀಮತಿ ಇಂದಿರಾಗಾಂಧಿಯವರು ಯಾವಾಗಲೂ ಜಾಣ್ಮೆಯಿಂದ, ತಮ್ಮ ಜಾತಿಯವರನ್ನು ಉಳಿಸಿಕೊಂಡು, ಹರಿಜನರ ಉದ್ಧಾರದ ತತ್ವವನ್ನು ಬೇರೆಯವರಿಗೆ ನಂಬಿಸಿ, ಭ್ರಮೆ ಹುಟ್ಟಿಸುವುದರಲ್ಲಿ ನಿರತರಾಗಿದ್ದಾರೆ. ಕರ್ನಾಟಕ ರಾಜ್ಯದ ಜನತೆಗೆ ಶ್ರೀಮಾನ್ ದೇವರಾಜು ಅರಸುರವರ ನಾಯಕತ್ವ ಮಾಡಿರುವಷ್ಟು ಅನುಕೂಲ ರಾಷ್ಟ್ರದ ಬೇರಾವ ರಾಜ್ಯದಲ್ಲೂ ಆಗಿಲ್ಲ. ಆದರೆ ಶ್ರೀಮತಿ ಇಂದಿರಾಗಾಂಧಿಯವರ ಬಗೆಗೆ ಮಾತ್ರ ಮಿತಿಮೀರಿದ ಕಲ್ಪನೆ ಇದೆ. ಇದನ್ನು ನಾನು ವಿರೋಧಿಸುತ್ತೇನೆ.

**ವೈ. ರಾಮಕೃಷ್ಣ:** ಶ್ರೀಮಾನ್ ಬಸವಲಿಂಗಪ್ಪನವರು ಅದನ್ನು ಹೃತ್ಪೂರ್ವಕವಾಗಿ ಹೇಳಿದ್ದಾರೆ.

ಜೆ.ಹೆಚ್. ಪಟೇಲ್: ಅವರ ಹೃದಯ ಬೇರೆ, ನಿಮ್ಮ ಹೃದಯ ಬೇರೆ. ಅವರು ಹೃತ್ಪೂರ್ವಕವಾಗಿ ಹೇಳಿದ್ದಾರೆಂದು ನಿಮಗೆ ಹೇಗೆ ಗೊತ್ತು ಸ್ವಾಮಿ, ನಮ್ಮ ಮಾನ್ಯ ಬಸವಲಿಂಗಪ್ಪನವರು ಹೀಗೆ ಹೇಳುವವರಲ್ಲ. ಎಲ್ಲೋ ತಪ್ಪಿ ಹಾಗೆ ಹೇಳಿದ್ದಾರೆ ಅಷ್ಟೆ.

ಒಬ್ಬ ಮಾನ್ಯ ಸದಸ್ಯರು: ಈ ದಿವಸ ಮಾನ್ಯ ದೇವರಾಜು ಅರಸರನ್ನು ಹೊಗಳುತ್ತಿದ್ದೀರಲ್ಲಾ ಹಿಂದೆ ಅವರನ್ನೇ ಬೈಯುತ್ತಿದ್ದಿರಿ ಏಕೆ ಸ್ವಾಮಿ?

ಜೆ.ಹೆಚ್. ಪಟೇಲ್: ನೀವು ಹಿಂದೆ ಸೋತು, ಈಗ ಶ್ರೀಮತಿ ಇಂದಿರಾಗಾಂಧಿಯವರ ಹೆಸರಿನಲ್ಲಿ ಗೆದ್ದು ಬಂದು ಬಿಟ್ಟಿದ್ದೀರಿ, ನಿಮಗೆ ಅರ್ಥವಾಗುವುದಿಲ್ಲ. ನಾನು ಹಿಂದೆ ಬಯ್ಯುತ್ತಿದ್ದ ವಿಷಯ ಬೇರೆ.

ಆರ್. ಗುಂಡೂರಾವ್ (ಮುಖ್ಯಮಂತ್ರಿ): ಶ್ರೀಮಾನ್ ಜೆ.ಹೆಚ್. ಪಟೇಲರು ಒಂದು ವರ್ಷದಲ್ಲಿ ಎಷ್ಟೆಷ್ಟು ಬಾರಿ ಯಾವ ಯಾವ ರೀತಿಯಲ್ಲಿ ಮಾತನಾಡುತ್ತಾರೆಂಬುದು ಈ ದೇಶಕ್ಕೆ ಗೊತ್ತಿದೆ.

(ವಿಧಾನ ಸಭೆ: ಫೆಬ್ರವರಿ 29, 1980)

## ಇಂದಿರಾ - ನೆಹರೂ ಮನೆ, ಅಲ್ಲಿ ಬಂದೆವು ಸುಮ್ಮನೆ - ಪಟೇಲ್

ಸಂದರ್ಭ: ರಾಜ್ಯಪಾಲರ ಭಾಷಣಕ್ಕೆ ವಂದನೆ ಸೂಚಿಸುವ ಕಲಾಪ, ಅರಸು ಕೆಳಗಿಳಿದು ಗುಂಡೂರಾಯರು ಅಧಿಕಾರಕ್ಕೆ ಬಂದಿದ್ದರು. ಸ್ವಾರಸ್ಯಕರ ವಿಶ್ಲೇಷಣೆ ಇದು.

ಎ.ಬಿ. ಬ್ಯಾಡಗಿ: ಇಂದಿನ ರಾಜಕೀಯ ಬೆಳವಣಿಗೆಗಳಿಗೆ ಹಿನ್ನೆಲೆ ಏನು, ವಿರೋಧ ಪಕ್ಷಗಳಲ್ಲಿ ಸಮಾನ ದೃಷ್ಟಿಯ ವೈಚಾರಿಕ ಮನೋಭಾವ ಇಲ್ಲ, ಕಾಂಗ್ರೆಸ್ (ಐ) ಪಕ್ಷದಲ್ಲಿ ತತ್ವ-ಸಿದ್ಧಾಂತಗಳೂ ಇವೆ, ಯಾವ ಸದಸ್ಯನೂ ಮನಸ್ಸಿಗೆ ಬಂದಂತೆ ವರ್ತಿಸುವುದಿಲ್ಲ. ಹೀಗಾಗಿ ಕಾಂಗ್ರೆಸ್ (ಐ) ಪಕ್ಷ ಈ ಬಾರಿ ದೇಶಾದ್ಯಂತ ವಿಜಯಗಳಿಸಿದೆ.

ಮಾನ್ಯ ಜೆ.ಹೆಚ್. ಪಟೇಲರಿಗೆ ಒಂದು ಮಾತು ಹೇಳಲೇಬೇಕು ಎನಿಸುತ್ತದೆ. ಜನತಾಪಕ್ಷ ಎರಡು ವರ್ಷ ರಾಜ್ಯಭಾರ ನಡೆಸಿದರು. ಒಳ್ಳೆಯ ಧೋರಣೆ ಅನುಸರಿಸಿರಬಹುದು. ಛಲೋ ಕೆಲಸ ಮಾಡಿರಲಿಕ್ಕೂ ಸಾಕು. ಆದರೆ ಅವರು ಮಾಡಿದ ಕೆಲಸ ಬಡಜನರನ್ನು, ಜನಸಾಮಾನ್ಯರನ್ನು ಮುಟ್ಟಲೇ ಇಲ್ಲ. ವಿರೋಧಪಕ್ಷಗಳಲ್ಲಿ ಏಕತೆಯ ಛಲವೇ ಇರಲಿಲ್ಲ.

ಜೆ.ಹೆಚ್. ಪಟೇಲ್: ಬ್ಯಾಡಗಿಯವರೇ ನಾನು ಹೇಳಿದ್ದೇನೆಂದರೆ, ಶ್ರೀಮತಿ ಇಂದಿರಾಗಾಂಧಿಯವರು ಮತ್ತು ಅವರ ತಂದೆ ಪಂಡಿತ ನೆಹರೂರವರು ಮೂವತ್ತು ವರ್ಷ ರಾಜ್ಯಭಾರ ಮಾಡಿದರಷ್ಟೆ. ಆರ್ಥಿಕ ತಳಹದಿ ಇಲ್ಲದೆ ಮನೆಯೊಂದನ್ನು ಕಟ್ಟಿದ್ದರು. ಅವರು ಕಟ್ಟಿದ್ದು ಈ ಮನೆ. ಈ ಮನೆಯಲ್ಲಿ ನಾವು ಇದ್ದದ್ದು ಕೇವಲ ಎರಡೇ ವರ್ಷ. ಮನೆಯ

ಅಡಿಪಾಯ ಭದ್ರವಿರಲಿಲ್ಲ ಅದಕ್ಕಾಗಿ ಸರಿಯಾದ ನಿರ್ಮಾಣವೂ ಇರಲಿಲ್ಲ. ಮನೆ ಕಟ್ಟಿದ್ದುದೂ ಸರಿ ಇರಲಿಲ್ಲ. ಹೀಗಾಗಿ ಮನೆ ಬಿದ್ದು ಹೋಯಿತು.

ಎ.ಬಿ. ಬ್ಯಾಡಗಿ: ಬಾಡಿಗೆ ಇರಬೇಕಾದವರು ಅಥವಾ ಮನೆಯೊಂದರಲ್ಲಿ ವಾಸಿಸಬೇಕಾದವರಂತೆ ನೀವು ಅಲ್ಲಿ ವಾಸಿಸರಲಿಲ್ಲ. ನಿಮ್ಮ ನಡವಳಿಕೆ, ವ್ಯವಸ್ಥೆ-ಎಲ್ಲವೂ ಅಸ್ತವ್ಯಸ್ತವಾಗಿತ್ತು. ಮನೆಯಲ್ಲಿ ಇದ್ದ ಸಂಪತ್ತೆಲ್ಲಾ ನಿಮ್ಮ ಬಿಗಿ ಇಲ್ಲದೆ ಆಡಳಿತದಿಂದ ನಾಶವಾಯಿತು. ಇದ್ದ ಬಂಗಾರ ಖಾಲಿಯಾಯಿತು. ಸಹಜವಾಗಿ ಜನಸಾಮಾನ್ಯರಿಗೆ ಕಾಂಗ್ರೆಸ್ಸೇ ವಾಸಿ ಎನ್ನಿಸಿತು. ಜನಾಭಿಪ್ರಾಯಕ್ಕಾನುಗುಣವಾಗಿ ಕಾಂಗ್ರೆಸ್ (ಐ) ಮತ್ತೆ ಆಯ್ಕೆಗೊಂಡಿತು.

(ವಿಧಾನ ಸಭೆ ಕಲಾಪ : ಮಾರ್ಚ 7, 1980)

## ಸಮಾಜವಾದಿಗಳು ಈ ಕಡೆಯೋ, ಆ ಕಡೆಯೋ?

ಸಂದರ್ಭ: 1980ರ ಮಾರ್ಚ್ ತಿಂಗಳು. ರಾಜ್ಯಪಾಲರ ಭಾಷಣದ ಮೇಲಿನ ಚರ್ಚೆ. ಲೋಕಸಭೆಗೆ ನಡೆದ ಚುನಾವಣೆಯಲ್ಲಿ ಶ್ರೀಮತಿ ಇಂದಿರಾಗಾಂಧಿಯವರ ನೇತೃತ್ವದ ಸರ್ಕಾರಕ್ಕೆ ಬಹುಮತದೊರಕುತ್ತಿದ್ದಂತೆ, ಕರ್ನಾಟಕ ರಾಜಕಾರಣದಲ್ಲಾದ ಬದಲಾವಣೆ ವಿಷಯ ಕುರಿತು ಪಟೇಲರು ನಡೆಸಿದ ವಿಚಾರದ ಧಾಟಿ ಹೀಗಿತ್ತು.

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ):** ದೇಶದಲ್ಲಿ ರಾಜಕೀಯ ಪ್ರವಾಹ ಹಲವಾರು ದಿಕ್ಕಿನಲ್ಲಿ ಹರಿದದ್ದು ನಿಜ. ಜನರು ಹಲವಾರು ಕಾರಣಗಳಿಗಾಗಿ ಶ್ರೀಮತಿ ಇಂದಿರಾಗಾಂಧಿಯವರಿಗೆ ಓಟಿತ್ತಿದ್ದಾರೆ. ಶ್ರೀಮತಿ ಇಂದಿರಾಗಾಂಧಿಯವರು ಪ್ರಧಾನಿಯಾಗಲೀ ಎಂದು ಜನ ಓಟು ಕೊಟ್ಟರೇ ವಿನಃ ಇಲ್ಲಿ ಶ್ರೀ ಗುಂಡೂರಾಯರು ಮುಖ್ಯಮಂತ್ರಿ ಆಗಲಿ ಎಂದಲ್ಲ. ಚುನಾವಣೆಗೆ ಹೋದರೆ ಬಹಳ ಕಷ್ಟವಿದೆ ಎಂದು ಭಯಪಟ್ಟ ಶಾಸಕರು ಎಂತಹದೋ ಒಂದು ಸರ್ಕಾರವಿರಲಿ; ಕುರುಡು, ಕುಂಟ, ಕಿವುಡ ಸರ್ಕಾವಾದರೂ ಸರಿಯೇ, ಎಂಥದೋ ಒಂದು ಹರಕು-ಮುರಕು ತಲೆಯ ಮೇಲೆ ಕೊಡೆ ಬೇಕಿತ್ತು.

**ಜೆ.ಕೆ. ತಕ್ಕೇಡ್:** ಮಾನ್ಯ ಸದಸ್ಯರೂ ಸಹಿತ ಜನತಾ ಪಕ್ಷದಿಂದ ಆರಿಸಿ ಬಂದು ಆನಂತರ ಶ್ರೀ ದೇವರಾಜು ಅರಸು ಅವರಿಗೆ ಬೆಂಬಲ ಕೊಟ್ಟು ಅವರ ಸರ್ಕಾರವನ್ನು ಪೋಷಿಸಿಕೊಂಡು ಬರಲಿಲ್ಲವೇ?

**ಜೆ.ಹೆಚ್. ಪಟೇಲ್:** ತಮ್ಮ ಮಾತು ಸರಿ. ನಾನು ಜನತಾ ಪಕ್ಷದಿಂದಲೇ ಆರಿಸಿ ಬಂದದ್ದು. ಆದರೆ ಕೆಲವೊಂದು ವಿಚಾರಗಳಲ್ಲಿ ಕಾಂಗ್ರೆಸ್ ಪಕ್ಷದಲ್ಲಿ ಬಂದಂತೆ ಜನತಾಪಕ್ಷದಲ್ಲಿಯೂ ಭಿನ್ನಾಭಿಪ್ರಾಯಗಳು ಬಂದುದ್ದರಿಂದ ಜನತಾ ಪಕ್ಷದವರು ನನ್ನನ್ನು ಪಕ್ಷದಿಂದ ಹೊರಗೆ ಹಾಕಿದರು. ಆ ಸಮಯದಲ್ಲಿ ಶ್ರೀಮತಿ ಇಂದಿರಾಗಾಂಧಿಯವರನ್ನು ವಿರೋಧ ಮಾಡತಕ್ಕಂತಹ ಒಂದು ಐತಿಹಾಸಿಕ ತೀರ್ಮಾನವನ್ನು ಶ್ರೀ ದೇವರಾಜ ಅರಸರು ತೆಗೆದುಕೊಂಡ

ಕಾರಣ ನಾನು ಅವರಿಗೆ ಬೆಂಬಲ ಕೊಟ್ಟೆ. ಇದೆಲ್ಲಾ ಆಯಿತು. ಈಗ ಗುಂಡೂರಾಯರ ನೇತೃತ್ವದಲ್ಲಿ ಸರ್ಕಾರ ರಚಿತವಾಗಿದೆ. ಮಂತ್ರಿಮಂಡಲದಲ್ಲಿ ಸಾಮರಸ್ಯವಿಲ್ಲ. ಆರ್ಥಿಕ ನೀತಿ ಇಲ್ಲ. ಸರ್ಕಾರದ ಮುಖ್ಯ ಸ್ಥಾನಗಳಿಗೆ ತಮಗೆ ಬೇಕಾದವರನ್ನು ತಂದಿದ್ದಾರೆ.

**H.D. Devegowda:** You want fresh-minded people?

ಜೆ.ಹೆಚ್. ಪಟೇಲ್: ಅವರಿಗೆ ಮತ್ತೆ ಜನ ಓಟು ಕೊಟ್ಟರೆ ಜನರ ತೀರ್ಮಾನವನ್ನು ಒಪ್ಪಲೇ ಬೇಕು.

ಹೆಚ್.ಡಿ. ದೇವೇಗೌಡ: ಹೊಟ್ಟೇಪಾಡು ಸ್ವಾಮಿ, ನೀವು ಮೊದಲೇ ಹೇಳಿದಿರಲ್ಲಾ.

ಜೆ.ಹೆಚ್. ಪಟೇಲ್: ನಾನು ಆ ಕಡೆ ಇದ್ದಾಗ ಈ ಕಡೆ ಬಗ್ಗೆ ಹೇಳಿದ್ದೆ; ಈಗ ಈ ಕಡೆ ಇದ್ದಾಗ ಆ ಕಡೆ ಕುರಿತು ಹೇಳುತ್ತಿದ್ದೇನೆ. ನಿಮಗೇಕೆ ಸಿಟ್ಟು?

ಎಸ್. ಬಂಗಾರಪ್ಪ (ಕಂದಾಯ ಮಂತ್ರಿ): ಮಾನ್ಯ ಪಟೇಲರು ಆ ಕಡೆ ಕೂತಾಗ ಈ ಕಡೆ ಬಗ್ಗೆ ಹೇಳುತ್ತಿದ್ದರು. ಈ ಕಡೆ ಕುಳಿತಾಗ ಆ ಕಡೆ ಬಗ್ಗೆ ಹೇಳುತ್ತಿದ್ದರು. ಎರಡೂ ಕಡೆ ಒಂದೇ ಸಾರಿ ಬರುವುದಿಲ್ಲ. ಹೀಗಾಗಿ ಅವರು ಒಂದೊಂದು ಸಾರಿ ಜಾಗ ನೋಡಿಕೊಂಡು ಹೇಳುತ್ತಾರೆ.

ಜೆ.ಹೆಚ್. ಪಟೇಲ್: ಏನು ಮಾಡುವುದು, ನಾನು ಎಂದೂ ಪಾರ್ಟಿ ಬದಲಾವಣೆ ಮಾಡುವವನಲ್ಲ. ಯಾವಾಗಲೂ ಖಾಯಂ ಆಗಿರತಕ್ಕವನು. ದುರಾದೃಷ್ಟವೋ ಏನೋ, ಮಾನ್ಯ ಬಸವಲಿಂಗಪ್ಪನವರ ಜೊತೆಯಲ್ಲಿ ಸೇರಿದರೆ ಅವರೂ ನನ್ನ ಜೊತೆಯಲ್ಲಿ ವಾಪಸ್ಸು ಬಂದು ಬಿಡುವುದೇ?

ಬಿ. ಬಸವಲಿಂಗಪ್ಪ: ಸ್ವಾಮಿ, ಈ ಸಮಾಜವಾದಿಗಳ ಬಗ್ಗೆ ನಾನು ಈಗಾಗಲೇ ಹೇಳಿದ್ದೇನೆ. ಯಾರು ಈ ಸಮಾಜವಾದಿಗಳು ಅಂತ ಇದ್ದಾರೆ ಅವರು ಇವರ ಜೊತೆಗೆ ಸೇರಿದಾಗ ಇವರು ಸ್ಥಾನ ಬಿಡುತ್ತಾರೆ. ಇವರು ನಮ್ಮ ಹತ್ತಿರ ಬಂದರು. ಬಂದು ಮೂರು ದಿವಸಗಳೂ ಆಗಿಲ್ಲ. ನಾವು ಇತ್ತ ಕಡೆಗೆ ಬಂದು ಬಿಟ್ಟೆವು, ಆದುದರಿಂದ ತಾವು ಅಲ್ಲಿಗೆ ದಯವಿಟ್ಟು ಹೋಗಿ.

ಎಸ್. ಬಂಗಾರಪ್ಪ: ಮಾನ್ಯ ಅಧ್ಯಕ್ಷರೇ, ಸಮಾಜವಾದಿಗಳ ಗುಂಪಿನಲ್ಲಿ ಬಹುಶಃ ಅವರು ನನ್ನನ್ನೂ ಸೇರಿಸಿರಬೇಕು. ಈ ಹಿನ್ನೆಲೆಯಲ್ಲಿ ಹೇಳುತ್ತೇನೆ. ಹಿಂದಿನ ಮಂತ್ರಿಮಂಡಲವಿದ್ದಾಗ ಅವರು ಇತ್ತ ಕಡೆಗೆ ಬಂದ ಮೇಲೆ ಅದು ಹೋಯಿತು. ಈಗ ಪುನಃ ನಾನು ಇತ್ತ ಕಡೆಗೆ ಬಂದ ಮೇಲೆ ರಚನೆ ಆಗಿದೆ.

(ವಿಧಾನಸಭೆ ಕಲಾಪ, ಮಾರ್ಚ್ 1980)

## ರೈತ ಚಳುವಳಿ : ಬಂದೂಕ ಬೇಡ

ಸಂದರ್ಭ: ಗುಂಡೂರಾಯರ ನೇತೃತ್ವದ ಸರ್ಕಾರ ಅಧಿಕಾರಕ್ಕೆ ಬಂದು ಕೇವಲ ಆರು ತಿಂಗಳಾಗಿತ್ತು. ಬೇಸಾಯ ಮತ್ತು ಕೃಷಿ ಉತ್ಪನ್ನಗಳಿಗೆ ಸರಿಯಾದ ಬೆಲೆ ಸಿಗದಿರುವ ಹಿನ್ನೆಲೆಯಲ್ಲಿ ರಾಜ್ಯದ ವಿವಿಧೆಡೆಗಳಲ್ಲಿ ವ್ಯಾಪಕವಾಗಿ ವ್ಯಕ್ತವಾದ ರೈತ ಚಳುವಳಿ ನರಗುಂದ- ನವಿಲುಗುಂದಗಳಲ್ಲಿ ಹಿಂಸಾರೂಪ ತಳೆದು, ಗೋಲಿಬಾರು ಮತ್ತು ಸಾವುನೋವಿಗೆ ಕಾರಣವಾಯಿತು. ವಿಧಾನ ಸಭೆಯಲ್ಲಿ ಸದನದ 49ನೇ ವಿಧಿ ಅನ್ವಯ ನಿಲುವಳಿ ಸೂಚನೆ ತಂದು ರೈತ ಚಳುವಳಿ ಬಗೆಗೆ ಚರ್ಚಿಸಲು ಪ್ರತಿಪಕ್ಷಗಳು ಸಂಘಟಿತ ಪ್ರಯತ್ನ ನಡೆಸಿದವು. ರೈತ ಚಳುವಳಿಯನ್ನು ಕುರಿತು ಸದನ ಗಂಭೀರ ಚರ್ಚೆ ನಡೆಸಿತು.

ಈ ಸ್ಥಿತಿ ಬರುವುದಕ್ಕೆ ಈಗಿನ ಸರ್ಕಾರ ಮಾತ್ರ ಜವಾಬ್ದಾರಿ ಎಂದು ನಾನು ಹೇಳುವುದಿಲ್ಲ. ಹಿಂದಿನ ಸರ್ಕಾರಗಳು ಸಹಿತ ಈ ದುಸ್ಥಿತಿಗೆ ಜವಾಬ್ದಾರಿಯಾಗಿವೆ. ಅದು ಕೇಂದ್ರ ಸರ್ಕಾರವೇ ಆಗಿರಬಹುದು ಅಥವಾ ರಾಜ್ಯ ಸರ್ಕಾರವೇ ಆಗಿರಬಹುದು. ರೈತರ ಕೋಪ ಏನಿದೆ ಅದು ರಾಜ್ಯವ್ಯಾಪಿ ಹರಡಿ ಮತ್ತಷ್ಟು ಪರಿಸ್ಥಿತಿ ಗಂಭೀರವಾಗಲು ನಾವು ಅವಕಾಶ ಕೊಡಬಾರದು. ಮಿತ್ರ ಆರ್.ಎಸ್. ಪಾಟೀಲರ ಮಾತು ನಿಜ. ರೈತರು ಸಂಯಮ ತಪ್ಪಿ ಕೊಡಲಿ ಇಲ್ಲವೇ ಬಂದೂಕವನ್ನು ಕೈಗೆತ್ತಿಕೊಂಡರೆ ಪರಿಸ್ಥಿತಿ ಎಲ್ಲಿಗೆ ಹೋಗಿ ಮುಟ್ಟುವುದೆಂದು ಹೇಳಲಿಕ್ಕಾಗುವುದಿಲ್ಲ. ಈ ಸರ್ಕಾರ, ಮುಖ್ಯಮಂತ್ರಿ ಶ್ರೀ ಗುಂಡೂರಾಯರ ನೇತೃತ್ವದ ಸರ್ಕಾರ, ಅಧಿಕಾರಕ್ಕೆ ಬಂದ ಮೇಲೆ ರಾಜ್ಯದಲ್ಲಿ ಒಂದು ರೀತಿಯ ರೈತರ ಬಗೆಗೆ ಉಪೇಕ್ಷೆ ವಾತಾವರಣ ಉಂಟಾಗಿದೆ. ವಾಸ್ತವವಾಗಿ ಇಂತಹ ಘಟನೆ ನಡೆದಾಗ ನಿಲುವಳಿ ಸೂಚನೆ ಬದಲು ಮಂತ್ರಿ ಮಂಡಲದ ಮೇಲೆ ಅವಿಶ್ವಾಸ ನಿರ್ಣಯ ತರಬೇಕಿತ್ತು. ಆದರೆ ಅದರಿಂದ ರೈತರಿಗೇನೂ ನೇರ ಪ್ರಯೋಜನವಾಗಲಾರದು. ಇವತ್ತು ಮಲಪ್ರಭಾದಲ್ಲಿ ಶುರುವಾದದ್ದು ನಾಳೆ ತುಂಗಭದ್ರಾದಲ್ಲಿ ಆಗಬಹುದು. ಒಬ್ಬಿಬ್ಬರು ಅಧಿಕಾರಿಗಳ ವಜಾದಿಂದ ಸಮಸ್ಯೆ ಬಗೆಹರಿಯುವುದಿಲ್ಲ. ಮುಖ್ಯಮಂತ್ರಿಗಳು ಗಲಭೆ ಸ್ಥಳಕ್ಕೆ ಧಾವಿಸಲಿ. ಜನಕ್ಕೆ ಸಮಾಧಾನ ಹೇಳಲಿ. ಆಡಳಿತ ಬಿಗಿಗೊಳಿಸಲಿ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಜುಲೈ 22, 1980)

## ಬೆಂಜ್ ಕಾರು ಮತ್ತು ಪತ್ರಿಕೆಗಳು

ಆರ್. ಗುಂಡೂರಾವ್: (ಮುಖ್ಯಮಂತ್ರಿ): ಪತ್ರಿಕೆಗಳಲ್ಲಿ ಮುಖ್ಯಮಂತ್ರಿಗಾಗಿ ಸರ್ಕಾರ ಕೊಂಡ ಕಾರ್ ಬಗೆಗೆ ಏನೆಲ್ಲಾ ಪ್ರಚಾರ ಬಂದಿದೆ ಎಂಬುದನ್ನು ನಾನೂ ನೋಡಿದ್ದೇನೆ. ಪತ್ರಿಕೆಗಳಲ್ಲಿ ನಡೆದಿರುವ ಪ್ರಚಾರ ವಿಚಿತ್ರವಾಗಿದೆ. ಮುಖ್ಯಮಂತ್ರಿ ಹಾಕಿಕೊಂಡ ಸೂಟಿನ ಬಗ್ಗೆ ಪತ್ರಿಕೆಗಳಲ್ಲಿ ಬಂದಿದೆ. ಯಾವ ಪ್ಲೇಟಿನಲ್ಲಿ ಊಟ ಮಾಡಿದರು. ಇದು ಚಿನ್ನದ್ದಾ ಹೀಗೆಲ್ಲಾ ಸುದ್ದಿ ಮುದ್ರಿತವಾಗುತ್ತಿದೆ.

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಈ ಕಾರಿನ ವಿಷಯ ಪತ್ರಿಕೆಯಲ್ಲಿ ಏಕೆ ಬಂತು ಅಂದರೆ, ಇಂದು ಒಂದು ಎತ್ತಿನ ಗಾಡಿಕೊಳ್ಳುವುದಕ್ಕೂ ಶಕ್ತಿ ಇಲ್ಲದ ಲಕ್ಷಾಂತರ ಜನರಿರುವ ನಮ್ಮ ನಾಡಿನಲ್ಲಿ ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಕಾರನ್ನು ಖರೀದಿಸಿದರೆ ಅದು ಸುದ್ದಿಯಾಗುತ್ತೆ. ಇದನ್ನು ಇಂದಿನ ಆರ್ಥಿಕ ಪರಿಸ್ಥಿತಿ ಹಿನ್ನೆಲೆಯಲ್ಲಿ ನೋಡಿದರೆ ಪತ್ರಿಕೆಯಲ್ಲಿ ಬರುವ ಸುದ್ದಿಗಳ ಮೂಲ ಗೊತ್ತಾಗುತ್ತದೆ. ಶ್ರೀಮತಿ ಇಂದಿರಾಗಾಂಧಿಯವರಂತಹ ಪ್ರಮುಖ ನಾಯಕರು ಸ್ವತಃ ಅಂಬಾಸಿಡರ್ ಕಾರಿನಲ್ಲಿ ಓಡಾಡುತ್ತಾರೆ. ಇದನ್ನು ನೀವೂ ನೋಡಿದ್ದೀರಿ.

ಆರ್. ಗುಂಡೂರಾವ್: ಎಷ್ಟೋ ಜನ ಎತ್ತಿನ ಗಾಡಿಯಲ್ಲಿ ಮತ್ತು ಸೈಕಲ್ ಮೇಲೆ ಹೋಗುವುದಾಗಿ ದೊಡ್ಡ ದೊಡ್ಡ ಮಾತು ಹೇಳಿ ಹಾಗೆ ಮಾಡದೇ ಇದ್ದವರೂ ನಮ್ಮಲ್ಲಿದ್ದಾರೆ. 1972ನೇ ಇಸವಿಯಲ್ಲಿ ದೇವರಾಜ ಅರಸರು ಮುಖ್ಯಮಂತ್ರಿ ಆದರು. ಆಗ ಒಂದು ಹೊಸ ಬೆಂಜ್ ಕಾರು ಬಂತು. 1980ನೇ ಇಸವಿಯಲ್ಲಿ ನಾನು ಮುಖ್ಯ ಮಂತ್ರಿಯಾದೆ. ನನಗೂ ಒಂದು ಹೊಸ ಬೆಂಜ್ ಕಾರು ಬಂತು. 1972ರ ಬೆಂಜ್ ಕಾರಿಗೂ ವ್ಯತ್ಯಾಸವೇನೂ ಇಲ್ಲ. ಪತ್ರಿಕೆಗಳವರು ಇದನ್ನು ಸುದ್ದಿ ಮಾಡುವ ಬದಲು, ಸಮಾಜಕ್ಕೆ ಒಳ್ಳೆಯದಾಗುವ ವಿಷಯ ಬರೆದರೆ ಒಳ್ಳೆಯದು.

(ವಿಧಾನ ಸಭೆ ಕಲಾಪ : ಜುಲೈ 30, 1980)

## ರಾಯರೇ.. ರಾಜ್ಯಲಕ್ಷ್ಮಿ ಚಂಚಲೆ, ಹುಷಾರು

ಆರ್. ಗುಂಡೂರಾವ್ (ಮುಖ್ಯಮಂತ್ರಿ): ಈ 25 ವರ್ಷಗಳಲ್ಲಿ ನಿಜವಾದ ಜಾತ್ಯಾತೀತ ಸರ್ಕಾರ ಎಂದರೆ ನಮ್ಮ ಸರ್ಕಾರ. ಯಾವ ಜಾತಿಗೂ ತೊಂದರೆಯನ್ನು ಕೊಡದೇ ಇರತಕ್ಕಂಥ ಸರ್ಕಾರ ಎಂದರೆ ನಮ್ಮ ಸರ್ಕಾರ. (ಇಂಗ್ಲೀಷ್‌ನಲ್ಲಿ) ನಮ್ಮ ಆಡಳಿತದಿಂದಾಗಿ ಪರಿಶಿಷ್ಟ ಜಾತಿ ಮತ್ತು ವರ್ಗದ ಜನರು ಇಡೀ ದೇಶದಲ್ಲಿಯೇ ಮೊದಲು ಎನ್ನಬಹುದಾದ ಅಂಬೇಡ್ಕರ್ ಮೆಡಿಕಲ್ ಕಾಲೇಜು ನಡೆಸಲು ಸಾಧ್ಯವಾಗಿದೆ. ಯಾವುದೇ ಒಕ್ಕಲಿಗ ಮುಖ್ಯಮಂತ್ರಿಯೂ ಮಾಡಲಾಗದ ಮತ್ತೊಂದು ಕೆಲಸ ನಮ್ಮಿಂದ ಸಾಧ್ಯವಾಗಿದೆ. ಇದರಿಂದಾಗಿ ಕೆಂಪೇಗೌಡ ಮೆಡಿಕಲ್ ಮತ್ತು ಇಂಜಿನಿಯರಿಂಗ್ ಕಾಲೇಜ್ ಅಸ್ತಿತ್ವಕ್ಕೆ ಬಂದಿದೆ.

ಎಸ್.ಆರ್. ಬೊಮ್ಮಾಯಿ: ಇದಕ್ಕಾಗಿ ನಿಮ್ಮನ್ನು ಅಭಿನಂದಿಸುತ್ತೇನೆ.

ಜೆ.ಹೆಚ್. ಪಟೇಲ್: ಮಾನ್ಯ ಮುಖ್ಯಮಂತ್ರಿಗಳೇ ಈ ಮೆಡಿಕಲ್ ಕಾಲೇಜು ಕೊಟ್ಟಿದ್ದಕ್ಕೆ ನಮ್ಮ ಅಭಿನಂದನೆಗಳು ನಿಜ. ಆದರೆ ಎಲ್ಲಾ ಕೆಲಸಕ್ಕೂ ಇದೇ ರೀತಿ ಹೊಗಳಿಕೆಯನ್ನು ಗುಂಡೂರಾಯರು ನಿರೀಕ್ಷಿಸಬಾರದು. ಯಾಕೇ ಅಂದ್ರೆ, ಈ ರಾಜ್ಯಲಕ್ಷ್ಮಿ ಬಹಳ ಚಂಚಲೆ. ಅವಳು ಗುಂಡೂರಾಯರಿಗೆ ಹೂವಿನ ಹಾರ ಹಾಕಲು ಸಿದ್ಧವಾಗಿದ್ದಾಳೆ ಎಂದುಕೊಳ್ಳಿ, ಆಗ ನಾವು ಕೂಡಲೇ ರಾಯರ ಮೂಗು ಅಷ್ಟೇನೂ ಚೆನ್ನಾಗಿಲ್ಲ ಎಂದೇ ಹೇಳಬೇಕು.

ಶ್ರೀ ಗುಂಡೂರಾಯರು ನನಗಿಂತ ಚೆನ್ನಾಗಿದ್ದಾರೆ ಎಂದು ನಾನೇ ಹೇಳಿಬಿಟ್ಟರೆ, ನಾನು ಈ ರಾಜ್ಯ ಲಕ್ಷ್ಮಿಯನ್ನು ಒಲಿಸಿಕೊಳ್ಳುವುದು ಯಾವಾಗ ನೀವೇ ಹೇಳಿ?

ಆದ್ದರಿಂದ ಗುಂಡೂರಾಯರೇ ನಾವು ಹೇಳೋದನ್ನ ಹೇಳ್ತಾನೇ ಇರ್ತೀವಿ. ನೀವೂ ಅಷ್ಟೇ, ಮಾಡೋದನ್ನ ಮಾಡ್ತಾನೇ ಇರಿ.

**ಆರ್. ಗುಂಡೂರಾವ್:** ಪಟೇಲರ ಮಾತೂ ಸರಿಯೇ. ಯಾರು ಚೆನ್ನಾಗಿ ಇರ್ತಾರೋ ಅವರ ಬಳಿಗೇ ಈ ರಾಜ್ಯಲಕ್ಷ್ಮಿ ಬಂದಿದ್ದಾಳೆ. ಅವಳು 8 ವರುಷದ ನಂತರ ಬಂದೀದಾಳೆ. (ಇಂಗ್ಲೀಷಿನಲ್ಲಿ) ನನಗೆ ಖಂಡಿತಾ ನಂಬಿಕೆ ಇದೆ. ಈ ರಾಜ್ಯಲಕ್ಷ್ಮಿ ನನ್ನ ಹತ್ತಿರ ಇನ್ನೂ 8 ವರ್ಷ ಇರ್ತಾಳೆ.

**ಎಸ್.ಆರ್. ಬೊಮ್ಮಾಯಿ:** (ಇಂಗ್ಲೀಷಿನಲ್ಲಿ) ನೀವು ಹೇಗೆ ಈ ರಾಜ್ಯಲಕ್ಷ್ಮಿಯನ್ನು ನಡೆಸಿಕೊಂಡು ಹೋಗ್ತೀರಿ ಎನ್ನುವುದರ ಮೇಲೆ ಆಕೆ ನಿಮ್ಮ ಬಳಿ ಎಷ್ಟು ವರ್ಷ ಇರ್ತಾಳೆ ಎನ್ನುವುದು ನಿರ್ಧಾರವಾಗುತ್ತದೆ.

**ಆರ್. ಗುಂಡೂರಾವ್ (ಇಂಗ್ಲೀಷ್‌ನಲ್ಲಿ):** ಖಂಡಿತವಾಗಿಯೂ ಆಕೆಯನ್ನು ನಾನು ಈವರೆಗೆ ಆಳಿದ ದೊರೆಗಳಿಗಿಂತಲೂ ಬಹು ಚೆನ್ನಾಗಿ ನೋಡಿಕೊಳ್ತೀನಿ. ಉಳಿದವರಿಗಿಂತ ನಾನು ಹೆಚ್ಚು ಸಮರ್ಥ ಎಂಬ ಭರವಸೆ ನನಗಿದೆ.

(ವಿಧಾನ ಸಭೆ ಕಲಾಪ : ಫೆಬ್ರವರಿ 11, 1982)

## ಅವಸರ ಬೇಡ ರಾಯರೇ, ಮುಂದಿನ ಚುನಾವಣೆ ನೋಡಿ

**ಪ್ರತಿ ಐದು ವರ್ಷಗಳಿಗೊಮ್ಮೆ ನಡೆಯುವ ವಿಧಾನಸಭೆ ಮತ್ತು ಲೋಕಸಭೆಯ ಚುನಾವಣೆಗಳತ್ತ ಆಡಳಿತಪಕ್ಷ ಮತ್ತು ಪ್ರತಿಪಕ್ಷಗಳ ಪೂರ್ಣ ಗಮನ ಕೇಂದ್ರೀಕೃತವಾಗುವುದು ಕೊನೆಯ ವರುಷದಲ್ಲಿಯೇ. ಇದೊಂದು ಸಂಸದೀಯ ಋತುಮಾನ.**

**ಆಡಳಿತ ಪಕ್ಷಕ್ಕೆ ಮುಂಬರುವ ಚುನಾವಣೆಯಲ್ಲಿ ತನ್ನ ಸ್ಥಾನ ಉಳಿಸಿಕೊಳ್ಳಬೇಕು, ಆಡಳಿತ ಮುಂದುವರೆಸಿಕೊಳ್ಳಬೇಕು, ಜೊತೆಗೆ ಇನ್ನೂ ಹೆಚ್ಚು ಸ್ಥಾನಗಳಿಸಬೇಕು ಎನ್ನುವ ತವಕ. ಇದಕ್ಕಾಗಿ ಕೊನೆಯ ವರುಷದ ಹಣಕಾಸು ಆಡಳಿತ ಜನತೆಗೆ ಕೊಂಚ ವಜ್ಜೆ ಎನಿಸುವುದಿಲ್ಲ. ಬಜೆಟ್‌ನಲ್ಲಿ ರಿಯಾಯಿತಿ ಹೆಚ್ಚಿರುತ್ತದೆ. ಒಮ್ಮೊಮ್ಮೆ ತೆರಿಗೆಗಳೇ ಇರುವುದಿಲ್ಲ. ಇಂತಹ ಲೆಖ್ಖಾಚಾರವನ್ನು ಚುನಾವಣಾ ಪೂರ್ವ ಬಜೆಟ್ ಎನ್ನುವುದು ರೂಢಿ.**

**ಅಂತೆಯೇ ಪ್ರತಿ ಪಕ್ಷಗಳಿಗೂ ಸರ್ಕಾರದ ಕೊನೆಯ ವರುಷವನ್ನು ಹತಾಶೆಯ ವರುಷವೆಂದು ಬಣ್ಣಿಸುವ ಆಸಕ್ತಿ. ಮತದಾರರಿಗೆ ತಾವು**

ಸಮೀಪವಾಗುತ್ತಿರುವುದಾಗಿ ಕಲ್ಪನೆ. ಆಡಳಿತ ಸರ್ಕಾರದ ವಿಫಲತೆಯನ್ನು ಜಗಜ್ಜಾಹಿರಗೊಳಿಸುವ ಛಲ. ಬೆಳಗಾದರೆ ಆಡಳಿತದ ಖುರ್ಚಿ ತಮಗೆ ಖಂಡಿತವೆಂದು ಕನಸು ಕಾಣುವ ಪರ್ವವರ್ಷ.

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಜನರ ಚರ್ಮವನ್ನು ಸುಲಿಯುತ್ತಾ ಹೋಗುತ್ತಿರುವ ನಿಮ್ಮ ರಥ ಎಲ್ಲಿಯವರೆಗೆ ಹೋಗುತ್ತದೆ ಎಂಬುದನ್ನು ನಾವು ಕಾದು ನೋಡುತ್ತಿದ್ದೇವೆ. ಮುಂದಿನ ಚುನಾವಣೆಯಲ್ಲಿ ಜನರ ಮುಂದೆ ಓಟಿಗೆ ಹೋದಾಗ ಅವರು ನಿಮ್ಮ ಚರ್ಮ ಸುಲೀತಾರೆ. ನೋಡ್ತಾ ಇರಿ.

ಆರ್. **ಗುಂಡೂರಾವ್**: ಜನ ನಮ್ಮ ಚರ್ಮನ್ನ ಸುಲೀತಾರೋ ಅಥವಾ ನಿಮ್ಮ ಚರ್ಮವನ್ನೋ ಆಮೇಲೆ ನೋಡೋಣಂತೆ. ಈಗ ಬಜೆಟ್ ಮೇಲೆ ಮಾತಾಡಿ ಪಟೇಲರೇ.

ಜೆ.ಹೆಚ್. ಪಟೇಲ್: ಅಷ್ಟೊಂದು ಆತುರ ಬೇಡ ರಾಯರೇ.

ಆರ್. **ಗುಂಡೂರಾವ್**: ನೀವು ಇಷ್ಟೊತ್ತು ಹೇಳಿದ್ದನ್ನ ನಾನೂ ಕೇಳಿದೆ ಪಟೇಲರೇ ನಿಮ್ಮ ಜನತಾ ಪಕ್ಷ ಕೇಂದ್ರದಲ್ಲಿದ್ದಾಗ ಏನು ಮಾಡಿತು ಎಂಬುದು ಜನಕ್ಕೂ ಗೊತ್ತಿದೆ. ಬರ್ಲಿ ತಡೀರಿ ಚುನಾವಣೆ ಜನ ಯಾರ ಚರ್ಮ ಸುಲೀತಾರೆ ಗೊತ್ತಾಗುತ್ತೆ.

ಜೆ.ಹೆಚ್. ಪಟೇಲ್: ನಮ್ಮ ಸರ್ಕಾರ (ಕೇಂದ್ರದಲ್ಲಿ) ಜನರಿಂದ ತೆರಿಗೇನೂ ತೊಗೊಂತು. ಉಪಕಾರವನ್ನೂ ಮಾಡ್ತು. ಆದರೆ ನೀವು ಬರೇ ತೆರಿಗೆ ಹಾಕಿ ಚರ್ಮ ಸುಲದೇ ಸುಲಿದಿರಿ.

ಆರ್. **ಗುಂಡೂರಾವ್**: ತಡೀರಪ್ಪಾ ತಡ್ಕೋಳಿ.

ಜೆ.ಹೆಚ್. ಪಟೇಲ್: ಏನ್ ಮಾಡೋಣ ಕೆಲವು ಸಂದರ್ಭದಲ್ಲಿ ರೋಗಿಗೆ ಅಪಥ್ಯವೇ ಹಿಡಿಸುತ್ತೆ, ರುಚಿಸುತ್ತೆ. ಬೇಡೋ, ತಿನ್ನಬೇಡ, ಹೊಟ್ಟೆ ಕೆಡುತ್ತಯ್ಯ, ಬೇಡ ಅಂತ ಎಷ್ಟು ಹೇಳಿದ್ರೂ ಕೇಳಲ್ಲ. ಇದೇ ಕಥೆ ಚುನಾವಣೇಲೂ... ನನಗೆ ಗುಂಡೂರಾಯರ ಸರ್ಕಾರವೇ ಚೆನ್ನ ಅಂದ್ರೆ ಆಯ್ತು ನಿನ್ನ ಹಣೇ ಬರಹ ಏನ್ಬೇಕಾಗುತ್ತೆ. ಈಗ್ಯಾಕೆ ಬಿಡಿ. ಉದಾಹರಣೆಗೆ ಕೆ.ಎಸ್.ಆರ್.ಟಿ.ಸಿ. ತೊಗೋಳಿ ನಿಮ್ಮ ಕೈಲಿ ಆಗಲ್ಲ ಖಾಸಗಿಯವರಿಗೆ ಕೊಡೀ ಅನ್ತೀವಿ.

ಆರ್. **ಗುಂಡೂರಾವ್**: ನಿಮ್ಮ ಸಲಹೆ ಖಂಡಿತಾ ಸರಿ ಪಟೇಲರೇ ಹಿಂದೆ ಸಾರಿಗೆ ಮಂತ್ರಿಯಾಗಿದ್ದಾಗ ನಾನು ಹೀಗೇ ಹೇಳ್ತಿದ್ದೆ, ಯಾರೇನು ಮಾಡಿದ್ರೂ ಇಷ್ಟೇನೆ, ಮುಂದೆ ನೀವೇ ಮಂತ್ರಿಗಳಾದ್ರೂ ಇಷ್ಟೇ.

ಜೆ.ಹೆಚ್. ಪಟೇಲ್: ಮಾನ್ಯ ಅಧ್ಯಕ್ಷರೇ ಬಹುಷಃ ಇದೇ ಇವರ ಕೊನೆ ಬಜೆಟ್ಟು ಅಂತ ಕಾಣುತ್ತೆ. ಮುಂದೇನೋ ಎಂಬುದು ಇನ್ನೂ ಖಚಿತವಾಗಿ ಗೊತ್ತಾಗಲ್ಲ. ಇದೇ ಕೊನೆ ವರ್ಷ. ಚುನಾವಣೆ ಬರ್ತಿದೆ. ಕೊನೇ ಪಕ್ಷ ಅಂತ್ಯಕಾಲದಲ್ಲಾದ್ರೂ ಜನಕ್ಕೆ ಒಳ್ಳೆಯ ಕೆಲಸಮಾಡುವುದನ್ನು ಬಿಟ್ಟು ಧಿಮಾಕು ಮಾಡುತ್ತಿದ್ದಾರೆ. ನಾಳೆ ಜನನ್ನ ಓಟುಕೇಳಬೇಕು ಎಂಬ

ಪರಿವೆ ಇವರಿಗಿದ್ದಂತಿಲ್ಲ. ಇವತ್ತು ಇವರು ಜನರ ಚರ್ಮ ಸುಲಿದಿದ್ದಾರೆ, ನಾಳೆ ಜನ ಇವರನ್ನು ಸುಲೀತಾರೆ ಅನ್ನುವ ಕಳಕಳಿಯ ಮಾತು ಹೇಳಿ ಇಷ್ಟು ಮಾತನಾಡಲು ಅವಕಾಶ ಕೊಟ್ಟ ತಮಗೆ ವಂದಿಸಿ ನನ್ನ ಮಾತು ಮುಗಿಸುತ್ತೇನೆ.

(ವಿಧಾನಸಭೆ ಕಲಾಪ: ಮಾರ್ಚ್23,1982)

## ರೈತರ ತಾಳ್ಮೆಗೂ ಮಿತಿ ಇದೆ.... ಎಚ್ಚರ

ಸನ್ಮಾನ್ಯ ಅಧ್ಯಕ್ಷರೇ.. ಕಳೆದ 30 ವರ್ಷಗಳಿಂದ ರೈತರು ಒದಿಸಿಕೊಂಡಿದ್ದಾರೆ. ಅಪಾರವಾಗಿ ನೋವನ್ನು ಅನುಭವಿಸಿದ್ದಾರೆ. ನೀವು ಹೋಗಿ ಎಂದರೆ ರೈತರು ಎಲ್ಲಿಯವರೆಗೆ ಹೋಗಬಲ್ಲರು? ಗೋಡೆ ತನಕ ಹೋಗಬಲ್ಲರು. ಮುಂದೆ ಎಲ್ಲಿ ಹೋದಾರು.. ಹಿಂತಿರುಗಿ ಬರುತ್ತಾರೆ ಎಚ್ಚರವಿರಲಿ. ಬಗ್ಗು ಎಂದರೆ ನೆಲೆವಿರುವವರೆಗೂ ಬಗ್ಗಲು ಸಾಧ್ಯ... ಇನ್ನೂ ಬಗ್ಗು ಎಂದರೆ ಪರಿಸ್ಥಿತಿ ಗಂಭೀರವಾಗುತ್ತೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ : ಫೆಬ್ರವರಿ 5, 1981)

## ಬೆಂಗಳೂರು ರೇಸ್‌ಕೋರ್ಸ್

ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ಗುಂಡೂರಾಯರಿಗೆ ಒಂದು ವಿಷಯ ಹೇಳಲಿಚ್ಛಿಸುತ್ತೇನೆ. ಬೆಂಗಳೂರು ಟರ್ಫ್ ಕ್ಲಬ್‌ಗೂ ಸರ್ಕಾರಕ್ಕೂ ಯಾವ ಸಂಬಂಧವಿದೆಯೋ ನನಗೆ ಗೊತ್ತಿಲ್ಲ. ರೇಸ್ ಕ್ಲಬ್ ಇರುವ ಸ್ಥಳ ಬೆಂಗಳೂರಿನಲ್ಲಿ ಅತ್ಯಮೂಲ್ಯವಾದ ಜಾಗ. ಇದನ್ನು ಬೇರೆ ಕಡೆ ಸ್ಥಳಾಂತರಿಸಬೇಕಾದ ಅಗತ್ಯ ಇದೆ. ಕುದುರೆಗಳು ಎಲ್ಲಿ ಆದರೂ ಓಡುತ್ತವೆ. ಊರಿಂದ ಹೊರಗೂ ಓಡುತ್ತವೆ, ಒಳಗೂ ಓಡುತ್ತವೆ. ಅದಕ್ಕೇನೂ ತೊಂದರೆಯಾಗುವುದಿಲ್ಲ. ಆದರೆ ನಗರದ ಮಧ್ಯಭಾಗದಲ್ಲಿ ಜನರಿಗೆ ಸ್ಥಳ ಅವಶ್ಯಕವಾಗಿ ಬೇಕಾಗಿದೆ. ಆದ್ದರಿಂದ ಸರ್ಕಾರ ಇದರ ಬಗ್ಗೆ ತೀವ್ರವಾಗಿ ಆಲೋಚನೆ ಮಾಡಿ ಜನರ ಹಿತದೃಷ್ಟಿಯಿಂದ ರೇಸ್ ಕೋರ್ಸನ್ನು ನಗರದಿಂದ ಹೊರಕ್ಕೆ ಸ್ಥಳಾಂತರಿಸಬೇಕು.

(ಜೆ.ಹೆಚ್. ಪಟೇಲ್, ವಿಧಾನಸಭೆ ಜುಲೈ 21, 1982)

## ಜನತಾ ಪಾರ್ಟಿಯಿಂದ ಹೊರಹಾಕಲ್ಪಟ್ಟ ಪಟೇಲ್

**ಆರ್. ಗುಂಡೂರಾಯರು (ಮುಖ್ಯಮಂತ್ರಿ):** ಪ್ರತಿಪಕ್ಷದ ಶಾಸಕರು ರಾಜ್ಯದಲ್ಲಿ ಏನೇನೋ ನಡೆದಿದೆ ಎಂದು ಆರೋಪಿಸಿದ್ದಾರೆ. ಮಾನ್ಯ ಜೆ.ಹೆಚ್. ಪಟೇಲರೂ ಈ ಬಗೆಗೆ ಗಂಭೀರ ಆಪಾದನೆ ಮಾಡಿದ್ದಾರೆ. ಮಾನ್ಯ ದೇವೇಗೌಡರು ಸಹಿತ ಈ ವಿಷಯ ಕುರಿತಂತೆ ಹೇಳಿದ್ದಾರೆ. ಹೇಳಿ ನಿಮಗೇನು ಕಷ್ಟವಾಗಿದೆ. ದೇಶದಲ್ಲಿ ಈಗ ಆಗಿರುವುದಾದರೂ ಏನು ಹೇಳಿ.

**ಡಿ. ದೇವರಾಜ ಅರಸು (ಪ್ರತಿಪಕ್ಷದ ನಾಯಕ):** ಪ್ರತಿಬಾರಿಯೂ ಇವರು ಹೇಳುವ ಮಾತೆಂದರೆ - ನಿಮಗೆ ಏಕೆ ಅಷ್ಟು ಕಷ್ಟ.

**ಆರ್. ಗುಂಡೂರಾರು:** ನಿನ್ನೆ ಎಲ್ಲಾ ಈ ವಿಷಯ ಕುರಿತು ಮಾತನಾಡಿದ್ದಾಗಿದೆ. ಅರಸರೇ ನೀವು ಇಲ್ಲಿ ಇರಲಿಲ್ಲ.

**ಡಿ. ದೇವರಾಜ ಅರಸು:** ನಾವೇನೂ ಇಲ್ಲಿ ಕಡಲೇಪುರಿ ತಿನ್ನುವುದಕ್ಕೆ ಬಂದು ಕುಳಿತಿಲ್ಲ. ದೇಶದ ಆಗುಹೋಗುಗಳ ಬಗ್ಗೆ ಚರ್ಚೆ ಮಾಡುವುದಕ್ಕೆ ಬಂದು ಕುಳಿತಿದ್ದೇವೆ. ರಾಜ್ಯದ ಕಷ್ಟ ಸುಖ ಕುರಿತು ಚರ್ಚಿಸಬೇಕಾಗಿದೆ.

(ಗೊಂದಲ)

**ಆರ್. ಗುಂಡೂರಾವ್:** ಪ್ರತಿಪಕ್ಷಗಳು ಹಠಹಿಡಿದಿರುವಂತೆ ಏನೇನೂ ಆಗಿಲ್ಲ. ಸಚಿವ ಇಬ್ರಾಹಿಂ ರಾಜೀನಾಮೆಗೆ ಒತ್ತಾಯಿಸುತ್ತಿದ್ದೀರಿ. ಈ ಪ್ರಕರಣದಲ್ಲಿ ಇಬ್ರಾಹಿಂರ ಹಸ್ತಕ್ಷೇಪವೇನೂ ಇಲ್ಲ. ಈ ಬಗ್ಗೆ ಶ್ರೀಮಾನ್ ಜೆ.ಹೆಚ್. ಪಟೇಲರು ಬಹಳವಾಗಿ ಹೇಳಿದ್ದಾರೆ. ಮುಖ್ಯ ಮಂತ್ರಿಯವರು ರಾಜೀನಾಮೆ ಕೊಡಬೇಕು ಎಂದಿದ್ದಾರೆ. ಇಲ್ಲಿ ಮಾನ್ಯ ಮುಖ್ಯಮಂತ್ರಿಯವರು ರಾಜೀನಾಮೆ ಕೊಟ್ಟರೆ ಶ್ರೀಮಾನ್ ಜೆ.ಹೆಚ್. ಪಟೇಲರು ಮುಖ್ಯಮಂತ್ರಿಗಳಾಗುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅವರು ಜನತಾ ಪಕ್ಷದಲ್ಲಿ ಇದ್ದರು. ಇನ್ನೇನು ಜನತಾ ಪಾರ್ಟಿ ಹೋಗುತ್ತದೆ ಎನ್ನುವ ಸಮಯದಲ್ಲಿ ಇವರಿಗೆ ಮಂತ್ರಿಪದವಿ ಸಿಗಲಿಲ್ಲ. ಅನಂತರ ಆ ಸರ್ಕಾರವೂ ಸಹಾ ಬಿದ್ದುಹೋಯಿತು.

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ):** ಈ ವಿಷಯದ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳು ಎರಡು-ಮೂರು ಬಾರಿ ಹೇಳಿದ ಕಾರಣ ಹೇಳುತ್ತಿದ್ದೇನೆ. ಮಂತ್ರಿ ಆಗಲು ನಾನು ಜನತಾ ಪಾರ್ಟಿ ಬಿಟ್ಟು ಕಾಂಗ್ರೆಸ್‌ಗೆ ಸೇರಿದೆ ಎಂದು ಮುಖ್ಯಮಂತ್ರಿ ಹೇಳಿದ್ದಾರೆ. ನಾನು ಜನತಾ ಪಾರ್ಟಿಯನ್ನು ಬಿಡಲಿಲ್ಲ. ಜನತಾಪಾರ್ಟಿಯವರೇ ನನ್ನನ್ನು ಹೊರಹಾಕಿದರು. ಶ್ರೀ ಅರಸರನ್ನು ನಾನು ಕೂಡಿಕೊಂಡದ್ದು ಮಂತ್ರಿಯಾಗಲು ಎಂಬ ಕಾರಣಕ್ಕಲ್ಲ. ಅರಸರು ಮುಖ್ಯಮಂತ್ರಿಯಾದಾಗಿನಿಂದಲೂ ನಾನು ಶ್ರೀಮತಿ ಇಂದಿರಾಗಾಂಧಿಯವರ ಕೆಲವೊಂದು ಧೋರಣೆಗಳನ್ನು ವಿರೋಧಿಸುತ್ತ ಬಂದಿರುವುದು ಇಡೀ ದೇಶಕ್ಕೆ ತಿಳಿದ ವಿಷಯವಾಗಿದೆ.

(ವಿಧಾನಸಭೆ ಕಲಾಪ 10 ಜೂನ್ 1980)

## ಗುಂಡೂರಾವ್ - ಪಟೇಲ್ ಸಂವಾದ

**R. Gundu Rao (Chief Minister):** I am not telling centuries and centuries old story. It has all happened in front of us. ನಾನು ಒಂದು ಟೈಂನಲ್ಲಿ ಶ್ರೀಮನ್ ಜೆ.ಹೆಚ್. ಪಟೇಲರನ್ನು ಅವರು ಯಾವಾಗಲೂ ವಿರೋಧ ಪಕ್ಷದಲ್ಲೆ ಇರುತ್ತಾರೆ ಅಂತ ತಿಳಿದುಕೊಂಡಿದ್ದೆ. ಆದರೆ ಏಕೋ ಗೊತ್ತಾಗಲಿಲ್ಲ. ಅವರು 1979ರಲ್ಲಿ ಶ್ರೀಮಾನ್ ದೇವರಾಜ ಅರಸ್‌ರವರ ಕಡೆ ಬಂದು ಸೇರಿಕೊಂಡರು. ಆದರೆ ಅರಸ್‌ರವರಿಗೂ ಲೋಹಿಯಾರವರಿಗೂ ಏನು ಸಂಬಂಧವೋ ನನಗಂತೂ ಗೊತ್ತಾಗಲಿಲ್ಲ.

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ):** ಮಾನ್ಯ ಮುಖ್ಯಮಂತ್ರಿಗಳು ಈ ವಿಷಯ ಹೇಳಿದ್ದರಿಂದ ನಾನು ಹೇಳಬೇಕಾಗಿದೆ. Let it be on record.

ವಿಷಯ ಹೀಗೆ ಆಯಿತು. ಜನತಾಪಾರ್ಟಿ ಒಡೆದ ಮೇಲೆ ಜನತಾಪಾರ್ಟಿ ಮುಖಂಡರಿಗೂ ನನಗೂ ಸ್ವಲ್ಪ ಭಿನ್ನಾಭಿಪ್ರಾಯ ಬಂದಮೇಲೆ ನಮ್ಮ ಸ್ನೇಹಿತರು ಸಮಾಜವಾದಿ ಅಂತ ಹೇಳಿಸಿಕೊಳ್ಳುವವರು ಏನು ಇದ್ದರು, ಅವರು ಒಂದು ಲೋಕದಳ ಪಾರ್ಟಿ ಮಾಡಿದರು. ಆ ಲೋಕದಳದ ಪಾರ್ಟಿಯಲ್ಲಿ ಕೆಲಸ ಮಾಡುವುದಕ್ಕೆ ನನಗೆ ಇಷ್ಟವಾಗಲಿಲ್ಲ. ಏತಕ್ಕೆಂದರೆ ನಾನು ಯಾವಾಗಲೂ ಕೂಡ ಶ್ರೀಮತಿ ಇಂದಿರಾಗಾಂಧಿಯವರೊಂದಿಗೆ ಸೆಣೆದಾಡುತ್ತಿದ್ದುದು ತಮಗೆಲ್ಲಾ ಗೊತ್ತಿದೆ. ಆ ಸಂದರ್ಭದಲ್ಲಿ ಶ್ರೀಮಾನ್ ದೇವರಾಜ ಅರಸ್‌ರವರು ಶ್ರೀಮತಿ ಇಂದಿರಾಗಾಂಧಿಯವರ ವಿರುದ್ಧವಾಗಿ ಸೆಣೆದಾಡುತ್ತಾ ಇದ್ದುದರಿಂದ ನಾನು ಅವರಿಗೆ ಬೆಂಬಲ ಕೊಟ್ಟನೇ ವಿನಾ ಇನ್ನಾವ ವಿಷಯಕ್ಕೂ ಅಲ್ಲ.

ನನ್ನ ಮೊದಲು ನಿಲುವು ಏನು ಇತ್ತು ಈಗಲೂ ಕೂಡ ಅದೇ ನಿಲುವು ಎಂದು ನಾನು ಒತ್ತಿ ಹೇಳುತ್ತೇನೆ. I have not disowned my leader now, I am with my leader.

**ಆರ್. ಗುಂಡೂರಾವ್:** ತಮ್ಮ ನಿಲುವು ಏನು ಎಂಬುದು ದೇಶದ ಜನಕ್ಕೆ ಗೊತ್ತಿದೆ. ಸಮಾಜವಾದದ ಮೇಲೆ ನಿಂತು ಲೋಹಿಯಾರವರ ಹಾಗೆ ಕೆಲಸ ಮಾಡುವಂಥಾ ಜನರು ಈಗಲೂ ಇದ್ದಾರೆ.

**ಜೆ.ಹೆಚ್. ಪಟೇಲ್:** ನನ್ನ ಉದ್ದೇಶವೂ ಅದೇ, ನಾನು ಈಗಲೂ ಅದೇ ಹೇಳುತ್ತೇನೆ ಮುಂದೆಯೂ ಕೂಡ ನನ್ನ ಉದ್ದೇಶ ಹಾಗೆಯೇ ಇರುತ್ತದೆ ಎಂದು ಹೇಳುತ್ತೇನೆ.

**ಆರ್. ಗುಂಡೂರಾವ್:** ನೀವೇನಾದರೂ ರಾಜಿ ಮಾಡಿಕೊಂಡರೆ ಆಗ ಯೋಚನೆ ಮಾಡಬೇಕಾಗುತ್ತದೆ. (ನಗು)

**ಜೆ.ಹೆಚ್. ಪಟೇಲ್:** ಯೋಚನೆ ನನಗಿಲ್ಲ. "ಮಾನ್ಯ ಗಂಗಾಧರನ್ ಅವರನ್ನು ಹೊರತು.." ಎಂದು ತಾವು ಹೇಳಿದ್ದರಿಂದ ನಾನಿದನ್ನು ಹೇಳಬೇಕಾಯಿತು. ಅಂತಹ ಪ್ರಸಂಗ ಬಂದರೆ ನಾನೇನೆಂಬುದನ್ನು ಹೇಳುತ್ತೇನೆ.

**ಆರ್. ಗುಂಡೂರಾವ್:** ರಾಜಕಾರಣ ಕುರಿತು ಸದನದಲ್ಲಿ ಮಾತನಾಡುವಾಗ ನಮ್ಮೆಲ್ಲರಿಗೂ ನಮ್ಮದೇ ಆದ ವಿಚಾರ ಶೈಲಿ, ಭಾಷಣ ಶೈಲಿ ಇರುತ್ತದೆ. ಉದಾಹರಣೆಗೆ ಮಾನ್ಯ ಜೆ.ಹೆಚ್. ಪಟೇಲರು ಮಧ್ಯೆ ಮಸಾಲೆ ಸೇರಿಸಿ ಮಾತನಾಡಿದ್ದಾರೆ. ಅವರ ಮಾತಿನ ಮಧ್ಯದಲ್ಲಿ ಕೋಳಿ ಕುರಿ ಇರಲೇಬೇಕು. ನಾನಾದರೆ ಇದ್ದುದನ್ನು ಇದ್ದಂತೆ ಹೇಳುತ್ತೇನೆ. ಆದರೆ ಅವರು ಬೇರೆ ರೀತಿಯಿಂದ ಹೇಳುತ್ತಾರೆ. ನಾನು ತಿನ್ನುತ್ತೇನೆ ಎಂದು ಹೇಳಿದರೆ, ಅವರು ತಿಂದೂ ಸಹ ತಿನ್ನುವುದಿಲ್ಲವೆಂದು ಹೇಳುತ್ತಾರೆ.

ಜೆ.ಹೆಚ್. ಪಟೇಲ್: ನಾನು ತಿಂದಿದ್ದೇನೆ ಎಂದೂ ಹೇಳಿಲ್ಲ ಮತ್ತು ತಿನ್ನುತ್ತೇನೆ ಎಂದು ಸಹಿತ ಹೇಳಿಲ್ಲ.

ಆರ್. ಗುಂಡೂರಾವ್: ನಾವೂ ನೀವೂ ಜೊತೆಯಲ್ಲಿಯೇ ತಿಂದಿದ್ದೇವೆ. ಆ ಮಾತು ಬಿಡಿ. ನಮ್ಮ ಪಕ್ಷದ ಸಿಂಬಲ್‌ನಿಂದ ಗೆದ್ದು ಬಂದಿರುವವರು ಅತ್ತಕಡೆಯೇ ಕೂತಿದ್ದೀರಲ್ಲಾ. ಹೋಲ್‌ಸೇಲ್ ಆಗಿದ್ದೀರಲ್ಲಾ. ಅದೇ ಶ್ರೀ ಬೊಮ್ಮಾಯಿರವರು, ಶ್ರೀ ದೇವೇಗೌಡರವರು, ಶ್ರೀ ಲಕ್ಷ್ಮೀಸಾಗರ್‌ರವರ ಹಾಗಿದ್ದಿದ್ದರೆ ಹೇಳಬಹುದಾಗಿತ್ತು. ಅದು ಬಿಟ್ಟು ನೀವು ಆ ರೀತಿ ನಮಗೆ ಹೇಳುತ್ತಿದ್ದೀರಲ್ಲಾ. ನೀವೆಲ್ಲಾ ಶ್ರೀಮತಿ ಇಂದಿರಾ ಗಾಂಧಿಯವರ ಹೆಸರಿನಲ್ಲಿ ಗೆದ್ದು ಬಂದು ಬಣ್ಣ ಬದಲಾಯಿಸಿಕೊಂಡು ಈಗ (ಯು) (ಜಡ್) ಪಾರ್ಟಿ ಅಂತ ಹೇಳಿಕೊಳ್ಳುತ್ತಾ ಶ್ರೀ ವೈ ರಾಮಕೃಷ್ಣರವರಿಗೆ ಪಾರ್ಟಿ ಬದಲಾಯಿಸಿದವರು, ಬಣ್ಣ ಬದಲಾಯಿಸಿದವರು ಎಂದು ಹೇಳುತ್ತಿದ್ದೀರಿ. ಆದರೆ ಪಾಪ ಅವರು ಜನರು ಏನು ತೀರ್ಮಾನ ಕೊಟ್ಟರೋ ಅದರಂತೆ ನಮ್ಮ ಕಡೆಗೆ ಬಂದಿದ್ದಾರೆ.

ವೈ. ರಾಮಕೃಷ್ಣ: ಇಲ್ಲ. ನಾನು ಕಾಂಗ್ರೆಸ್ (ಐ) ಪಕ್ಷ ವಿರೋಧ ಪಕ್ಷವಾಗಿದ್ದಾಗಲೇ ನಿಮ್ಮ ಕಡೆಗೆ ಬಂದಿದ್ದು. ಅಧಿಕಾರ ಬಂದ ಮೇಲಲ್ಲ.

ಆರ್. ಗುಂಡೂರಾವ್: ಇವತ್ತು ದಿನ ಬೆಳಗಾದರೆ ಬಣ್ಣ ಬದಲಾಯಿಸುತ್ತಿದ್ದೀರಿ, ಅಂಥಾದ್ದರಲ್ಲಿ ನಮಗೆ ಹೇಳುತ್ತೀರೇನು? ಲೋಕದಳದಲ್ಲಿದ್ದಂತವರನ್ನು ಮೊನ್ನೆ ಪಾರ್ಲಿಮೆಂಟ್ ಬೋರ್ಡ್ ಪಾರ್ಟಿಗೆ ತೆಗೆದುಕೊಂಡಿರಿ, ನೀವೇ ಬಣ್ಣ ಬದಲಾಯಿಸುತ್ತಿರುವಂಥವರು. ಕೆಂಪು, ಹಸಿರು ಅಂತ ಸಂದರ್ಭ ಬಂದಾಗಲೆಲ್ಲಾ ತೂರಿಕೊಳ್ಳುವವರು ನೀವು. ಆದರೆ ನಮ್ಮ ಕರ್ನಾಟಕದಲ್ಲಿ ಮಾತ್ರ ಜನತಾ ಪಾರ್ಟಿ ಮಾತ್ರ ಸ್ವಲ್ಪ ಸ್ಯಾಂಕ್ಟಿಟಿ ಉಳಿಸಿಕೊಂಡು ಬಂದಿದೆ. ಅವರು ಮಾತ್ರ ಬಣ್ಣ ಬದಲಾಯಿಸಿಕೊಳ್ಳುವುದಕ್ಕೆ ಹೋಗಿಲ್ಲ. ಶ್ರೀ ಜೆ.ಹೆಚ್. ಪಟೇಲರವರು ಬಣ್ಣ ಬದಲಾಯಿಸಲಿಲ್ಲವೋ? ಅವರು ಮೊದಲು ಜನತಾ ಪಾರ್ಟಿಯಿಂದ ಗೆದ್ದು ಬಂದವರು ಈಗ ಇಲ್ಲಿ ಕೂತಿದ್ದಾರೆ. ಇಲ್ಲದಿದ್ದರೆ ಅವರು ಶ್ರೀ ಬೊಮ್ಮಾಯಿರವರ ಪಕ್ಕದಲ್ಲಿ ಕೂರಬೇಕಾಗಿತ್ತು. ಆದುದರಿಂದ ಅಧ್ಯಕ್ಷರೇ ನಾನು ಸಭೆಯ ಸಮಯವನ್ನು ಹೆಚ್ಚು ತೆಗೆದುಕೊಳ್ಳುವುದಕ್ಕೆ ಹೋಗುವುದಿಲ್ಲ.

ಜೆ.ಹೆಚ್. ಪಟೇಲ್: ನಾನು ಇಲ್ಲೇ ಇದ್ದವನು, ಬಣ್ಣ ಬದಲಾಯಿಸಿರುವ ವಿಷಯ ಬರುವುದೇ ಇಲ್ಲ. ಆಮೇಲೆ ಏನೇನು ತಿಂದಿದ್ದೇನೆ, ಬಿಟ್ಟಿದ್ದೇನೆ, ಏನೇನು ಮಾಡಿದ್ದೇನೆ ಎಂಬುದನ್ನೆಲ್ಲಾ ಈಗ ಹೇಳುವುದಿಲ್ಲ, ಮುಂದೆ ಮುಖ್ಯಮಂತ್ರಿ ಆದ ಮೇಲೆ ಹೇಳುತ್ತೇನೆ.

(ನಗು...)

(ವಿಧಾನಸಭೆ ಕಲಾಪ ಮಾರ್ಚಿ 6, 1981)

### ದೇವನಹಳ್ಳಿ ವಿಮಾನ ನಿಲ್ದಾಣಕ್ಕಾಗಿ ಪಟೇಲರ ಪ್ರಯತ್ನ

ಇಂದು ಮಾನ್ಯ ಜೆ.ಹೆಚ್. ಪಟೇಲರನ್ನು ಹಲವಾರು ನಿರ್ದಿಷ್ಟ ಕಾರಣಗಳಿಗಾಗಿ ಅಭಿನಂದಿಸಬೇಕೆನಿಸುತ್ತದೆ. ಅವರು ನಮಗೆ ಪ್ರಾಮಾಣಿಕವಾಗಿ ಕೆಲಸ ಮಾಡಲು ಅವಕಾಶ ಮಾಡಿಕೊಟ್ಟಿದ್ದರು. ಅದಕ್ಕಾಗಿಯೂ ಸಹ ಅವರಿಗೆ ನನ್ನ ಅಭಿನಂದನೆಗಳು.

ದೇವನಹಳ್ಳಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ವಿಚಾರದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಹಾಗೂ ಸಚಿವ ಸಂಪುಟದ ನನ್ನ ಎಲ್ಲಾ ಸಹೋದ್ಯೋಗಿಗಳೂ ಸಹ ಪ್ರಾಮಾಣಿಕವಾಗಿ ಪ್ರಯತ್ನ ಮಾಡಿದ್ದಾರೆ. ನಮ್ಮಲ್ಲಿ ಯಾವ ಭಿನ್ನಾಭಿಪ್ರಾಯ ಇರಲಿಲ್ಲ. ನಮಗೆ ವಿರೋಧ ಪಕ್ಷಗಳ ಸಹಕಾರ ಕೂಡ ಸಿಕ್ಕಿತ್ತು. ಆದರೆ ದುರ್ದೈವದಿಂದ ಕೇಂದ್ರ ಸರ್ಕಾರದಲ್ಲಿದ್ದಂತಹ ನಮ್ಮ ಜನರಿಂದಲೇ ನಮಗೆ ಸಹಕಾರ ಸಿಗಲಿಲ್ಲ.

(ಆರ್.ವಿ. ದೇಶಪಾಂಡೆ, ವಿಧಾನಸಭೆ, ಮಾರ್ಚ್ 27, 1998)

### ಸಾಮಾಜಿಕ ನ್ಯಾಯದ ಹೋರಾಟಗಾರ

ಹಿಂದುಳಿದ ಮತ್ತು ನಿಸ್ಸಹಾಯಕ ವರ್ಗ ಮತ್ತು ಜಾತಿಗಳ ಮೀಸಲಾತಿಗೆ ಪ್ರಾಮಾಣಿಕವಾಗಿ ನೆರವಾಗಲು ಮುಂದಾದವರು ಜೆ.ಹೆಚ್. ಪಟೇಲರು. ಸಾಮಾಜಿಕ ನ್ಯಾಯಕ್ಕಾಗಿ ಹೋರಾಟ ನಡೆಸಿದವರು.

ರಾಜಕಾರಣಿಗಳಲ್ಲಿ ಒಂದು ಗುಣ ಇರುತ್ತದೆ. ನಿಮ್ಮ ಪ್ರತಿಸ್ಪರ್ಧಿಯಾಗಿ ನಿಂತ ಪಕ್ಷ ಇಲ್ಲವೇ ಅಭ್ಯರ್ಥಿ ಬಗೆಗೆ ದ್ವೇಷ ಸಾಧಿಸುವುದು. ಇದಕ್ಕೆ ಸೇಡು ತೀರಿಸಿಕೊಳ್ಳುವುದು ಎನ್ನುತ್ತಾರೆ. ನಾನು ಕಂಡಂತೆ ಪಟೇಲರಲ್ಲಿ ಎಂದೆಂದೂ ಈ ಭಾವನೆ ಇರಲಿಲ್ಲ.

(ಕೆ. ಮಲ್ಲಣ್ಣ (ವಿಧಾನ ಪರಿಷತ್) ಫೆಬ್ರವರಿ 27, 2001)

### ಹೃದಯ ವೈಶಾಲ್ಯತೆ

ನಾವು ಜೈಲಿನಲ್ಲಿದ್ದಾಗ ಪಟೇಲರು ತೋರಿದ ಹೃದಯ ವೈಶಾಲ್ಯತೆಯನ್ನು ಸ್ಮರಿಸಬಯಸುತ್ತೇನೆ.

ತುರ್ತು ಪರಿಸ್ಥಿತಿ ವಿರೋಧಿಸಿದ ನಮ್ಮನ್ನೆಲ್ಲಾ ಜೈಲಿನಲ್ಲಿ ತುಂಬಲಾಗಿತ್ತು. ಬಹಳ ಜನ ಯುವಕರಿದ್ದೆವು. ಜೈಲಿನ ಊಟ ರುಚಿ ಇರುತ್ತಿರಲಿಲ್ಲ. ಬೇಸರವಾಗುತ್ತಿತ್ತು. ವಿಧಿಯಿಲ್ಲ ತಿನ್ನಲೇಬೇಕು, ಹೀಗಾಗಿ ತಿನ್ನುತ್ತಿದ್ದೆವು.

ಇವೆಲ್ಲವನ್ನು ಗಮನಿಸಿದರು ಪಟೇಲರು. ಆಗ್ರಹಪೂರ್ವಕವಾಗಿ ಬಂಧು-ಮಿತ್ರರ ಮನೆಗಳಿಂದ ಜೈಲಿಗೆ ಊಟ ತರಿಸಲು ಮುಂದಾದರು.

ರುಚಿಯಾದ ಊಟ, ಹೊಟ್ಟೆ ತುಂಬುವಷ್ಟು ರೊಟ್ಟಿ, ಪಲ್ಲೆ, ಚಟ್ನಿ. ಮೊದಲು ನಮ್ಮೆಲ್ಲರಿಗೂ ಕೊಟ್ಟು, ಸಾಕೇನ್ರಪ್ಪಾ ಎಂದು ಕೇಳಿ ತಾವು ಉಳಿದ ಚೂರುಪಾರನ್ನು ಬಾಯಿಗೆ ಇಟ್ಟುಕೊಳ್ಳುತ್ತಿದ್ದರು ಸಮಾಜವಾದಿ ಪಟೇಲರು.

(ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) ವಿಧಾನಸಭೆ, ಫೆಬ್ರವರಿ 27, 2001)

# 4

# ಸಂಸದೀಯ ಹೆಜ್ಜೆಗಳು

## ಶಾಸಕ ಪಟೇಲರ ಮೊದಲ ಮಾತು

ಜಯದೇವಪ್ಪ ಹಾಲಪ್ಪ ಪಟೇಲರು ಕರ್ನಾಟಕ ವಿಧಾನ ಸಭೆಯನ್ನು ಮೊದಲ ಬಾರಿಗೆ ಪ್ರವೇಶಿಸಿದ್ದು 1978ರಲ್ಲಿ. ಅಂದಿನ ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ವಿಧಾನಸಭಾ ಕ್ಷೇತ್ರದಿಂದ ಜನತಾ ಪಕ್ಷದ ಅಭ್ಯರ್ಥಿಯಾಗಿ ಆರಿಸಿ ಬಂದ ಪಟೇಲರು ಶಾಸಕರಾಗಿ ಪ್ರಮಾಣ ವಚನ ಸ್ವೀಕರಿಸಿದ್ದು ಮಾರ್ಚ್ 17, 1978ರ ಶುಕ್ರವಾರ. ಹಂಗಾಮಿ ಸಭಾಪತಿ ಶ್ರೀ ವಿ.ಮಸಿಯಪ್ಪನವರಿಂದ ಪ್ರತಿಜ್ಞಾ ವಚನ ಸ್ವೀಕರಿಸಿದ 123ನೆಯ ಶಾಸಕ ಇವರು.

ಆರನೆಯ ವಿಧಾನ ಸಭೆಯ ಸಭಾಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾದ ಸಭಾಧ್ಯಕ್ಷ ಮಾನ್ಯ ವಿ. ವೆಂಕಟರಮಣರವರನ್ನು ಅಭಿನಂದಿಸಿ ಮಾಡಿದ ಭಾಷಣವೇ, ಪಟೇಲರು ಕರ್ನಾಟಕದ ವಿಧಾನಸಭೆಯ ಶಾಸಕರಾಗಿ ಆಡಿದ ಮೊದಲ ಮಾತು.

## ಸಂಜೀವರೆಡ್ಡಿಯವರ ಮಾದರಿ ಗುಣ

ಸನ್ಮಾನ್ಯ ಸಭಾಧ್ಯಕ್ಷರೇ, ಈಗಾಗಲೇ ಮಾನ್ಯ ಮುಖ್ಯಮಂತ್ರಿಗಳು ಸಭಾಧ್ಯಕ್ಷರ ಬಗ್ಗೆ ಮಾತನಾಡುತ್ತಾ ಯಾವ ಸಂದರ್ಭ ಬಂದರೂ ತಾವು ಕಠಿಣವಾಗಿರುತ್ತೀರಿ ಎಂದು ಭಾವಿಸಿರುವುದಾಗಿ ಹೇಳಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳು ಹೇಳಿದಂತಹ ಸಂದರ್ಭಗಳು ಬರುವುದು ಕಡಿಮೆ. ಹೊರಗಡೆ ಪ್ರಕ್ಷುಬ್ಧ ವಾತಾವರಣ ಇದ್ದಾಗ ಸದನದಲ್ಲಿ ಅಲ್ಲೋಲ ಕಲ್ಲೋಲ ವಾತಾವರಣ ಉಂಟಾಗಹುದೇ ವಿನಃ ಉಳಿದಂತೆ ಇಲ್ಲ. ತಾವು ವಿದ್ಯಾವಂತರು. ಸಜ್ಜನರು. ಎಲ್ಲ ಪರಿಸ್ಥಿತಿಗಳನ್ನು ಅರಿತುಕೊಂಡು ಯಾವ ಸಂದರ್ಭದಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ತಾವು ತಿಳಿದಿರುವಿರಿ....

....ಮಾನ್ಯ ಸಭಾಧ್ಯಕ್ಷರೇ ಒಂದು ಮಾತನ್ನು ಹೇಳಬಯಸುತ್ತೇನೆ... ನಾನು ಸಂಸತ್ ಸದಸ್ಯನಿರುವಾಗ ಸಂಜೀವರೆಡ್ಡಿಯರು ಲೋಕಸಭಾಧ್ಯಕ್ಷರಾಗಿದ್ದರು. ಮಾನ್ಯ ರೆಡ್ಡಿಯವರು ಸಂಸದರ ಮನಸ್ಸನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಂಡಿದ್ದರು. ಜನರ ಮನಸ್ಸಿನಲ್ಲಿ ಏನಿದೆ ಎಂಬುದನ್ನು ಸೂಚಿಸಲಿಕ್ಕೆ ನಿಂತ ಮಾನ್ಯ ಸದಸ್ಯರಿಗೆ ಮುಕ್ತವಾಗಿ ಅಭಿಪ್ರಾಯಗಳನ್ನು ವ್ಯಕ್ತಿಪಡಿಸಲು ಅವಕಾಶ ಮಾಡಿಕೊಡುತ್ತಿದ್ದರು. ಶ್ರೀ ಸಂಜೀವರೆಡ್ಡಿಯವರಿಗಿಂತ ಹೆಚ್ಚು ಓದಿದವರು ಆ ಸ್ಥಾನದಲ್ಲಿ ಈ ಮುನ್ನ ಅಧ್ಯಕ್ಷರಾಗಿದ್ದರೂ ಶ್ರೀ ರೆಡ್ಡಿಯವರಷ್ಟು ಯಶಸ್ವಿಯಾಗಿರಲಿಲ್ಲ. ಬಹುಶಃ ತಮಗೂ ತಿಳಿದ ವಿಷಯವೆಂದರೆ, ರಾಹುದೆಸೆ ಇರುವ (ಆಳುವ ಪಕ್ಷದತ್ತ ಕೈ ತೋರಿಸಿ) ಇವರಿಗೆ ಆಳುವ ಜವಾಬ್ದಾರಿಯನ್ನೂ, ನಮಗೆ ಕೇಳುವ ಜವಾಬ್ದಾರಿಯನ್ನು ಜನತೆ ವಹಿಸಿದೆ. ಇವರು (ಆಡಳಿತ ಪಕ್ಷ) ಬೇಜವಾಬ್ದಾರಿಯಿಂದ ವರ್ತಿಸಿದರೆ ನಾವು ಕೂಡ ಹಾಗೆಯೇ ವರ್ತಿಸಬೇಕಾಗುತ್ತದೆ. ದೇವರು ತಮಗೆ ಆಯುರಾರೋಗ್ಯ ಮತ್ತು ಕೀರ್ತಿ ಕರುಣಿಸಲಿ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ : ಮಾರ್ಚಿ 17, 1978)

## ವಿಧಾನ ಪರಿಷತ್ತು : ಮೊದಲ ದಿನ

ವಿಧಾನ ಸಭೆಯ ಪ್ರತಿಪಕ್ಷದ ಶಾಸಕರಾಗಿ 1978-83ರ ಅವಧಿಯ ಐದು ವರ್ಷಗಳ ಸೇವೆಯ ನಂತರ, ಆಡಳಿತ ಪಕ್ಷದ ಶಾಸಕರಾಗಿ ಏಳನೆಯ ವಿಧಾನ ಸಭೆಗೆ ಪುನರಾಯ್ಕೆಗೊಂಡ ಮಾನ್ಯ ಜೆ.ಹೆಚ್. ಪಟೇಲರು ಸಚಿವರಾಗಿ ಕರ್ನಾಟಕ ವಿಧಾನ ಪರಿಷತ್ತಿನ ಕಲಾಪಗಳಲ್ಲಿ ಪಾಲ್ಗೊಂಡಿದ್ದು ಮೊದಲ ಬಾರಿಗೆ 1983ರ ಮಾರ್ಚಿ 14 ರಂದು. ವಿದ್ಯುತ್ ಮತ್ತು ಅಬಕಾರಿ ಖಾತೆ ಮಂತ್ರಿಗಳಾದ ಮೇಲೆ.

ಹಿರಿಯ ಕಾಂಗ್ರೆಸ್ ಶಾಸಕ ಬಿ.ಕೆ. ಗುಡದಿನ್ನಿಯವರೊಂದಿಗೆ ಪ್ರಶ್ನೋತ್ತರ ಕಾಲದಲ್ಲಿ ಕಲಾಪಗಳ ವಿಧಿವಿಧಾನದ ಬಗ್ಗೆ ಸಣ್ಣ ಸಂಘರ್ಷ ನಡೆಸುವುದರೊಂದಿಗೆ ಪಟೇಲರು ವಿಧಾನಪರಿಷತ್ತಿನ ಕಲಾಪಗಳನ್ನು ಆರಂಭಿಸಿದರು. ಅಂದಿನ ಕಲಾಪಗಳನ್ನು ನಡೆಸಿಕೊಟ್ಟವರು ಮಾನ್ಯ ಉಪ ಸಭಾಪತಿ ಡಾ। ಮಲಕರೆಡ್ಡಿಯವರು. ಪಟೇಲರು ಅಂದು ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರ ಮಂತ್ರಿಮಂಡಲದಲ್ಲಿ ಸಚಿವರು. ಸಂದರ್ಭ: ಚುಕ್ಕೆ ಗುರುತಿನ ಪ್ರಶ್ನೆಗಳಿಗೆ ಕೊಡಲಾದ ಬಾಯಿ ಮಾತಿನ ಉತ್ತರ.

**ಬಿ.ಕೆ. ಗುಡದಿನ್ನಿ:** ಮಾನ್ಯ ಉಪ ಸಭಾಪತಿಯವರೇ, ಪ್ರಶ್ನೆಯನ್ನು ಕೇಳುವ ಪೂರ್ವದಲ್ಲಿ ಪ್ರಶ್ನೆಗೆ ಉತ್ತರವನ್ನು ಏನು ಕೊಟ್ಟಿದ್ದಾರೆ ಅದು ಸರಿಯಲ್ಲ. ನಾವು ಕೇಳಿರುವ ಪ್ರಶ್ನೆಯೇ ಒಂದು; ಸರ್ಕಾರದ ಉತ್ತರಕೊಟ್ಟಿರುವುದೇ ಮತ್ತೊಂದು. ನನ್ನ ಪ್ರಶ್ನೆಗೆ ಸರಿಯಾದ, ಸಮಂಜಸವಾದ ಉತ್ತರ ಬಂದಿಲ್ಲ. ಆದುದರಿಂದ ಈ ಪ್ರಶ್ನೆಯನ್ನು ತಡೆಹಿಡಿಯುವಂತೆ ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ.

ಜೆ.ಹೆಚ್. ಪಟೇಲ್ (ವಿದ್ಯುತ್ ಮತ್ತು ಅಬಕಾರಿ ಮಂತ್ರಿ): ಮಾನ್ಯ ಉಪ ಸಭಾಪತಿಯವರೇ, ಇನ್ನೂ ಉತ್ತರವನ್ನೇ ನಾನು ಹೇಳದೆ ಇರುವಾಗ ಉತ್ತರ ಸಮಂಜಸವಲ್ಲ ಎಂದರೆ ಹೇಗೆ?

ಎಲ್.ಜಿ. ಹಾವನೂರ್: ಹೊಸ ನಿಯಮಗಳ ಪ್ರಕಾರ ತಾವು ಉತ್ತರವನ್ನು ನೋಟೀಸ್ ಆಫೀಸಿನಲ್ಲಿ ಇಟ್ಟಿರುತ್ತೀರಿ. ಅದನ್ನು ನಾವು ತಿಳಿದುಕೊಂಡು ಬಂದಿರುತ್ತೇವೆ. ಅದನ್ನು ಬಿಟ್ಟು ಮಾನ್ಯ ಮಂತ್ರಿಗಳು ಬೇರೆ ಉತ್ತರವನ್ನು ಏನು ಹೇಳಬಲ್ಲಿರಿ?

ಜೆ.ಹೆಚ್. ಪಟೇಲ್: ಮಾನ್ಯ ಸದಸ್ಯರು ಮೊದಲು ಪ್ರಶ್ನೆ ಕೇಳಲಿ. ಅದಕ್ಕೆ ನಾನು ಸಮಂಜಸ ಉತ್ತರವನ್ನೇ ಕೊಡುತ್ತೇನೆ.

ಬಿ.ಕೆ. ಗುಡದಿನ್ನಿ: ಮಾನ್ಯ ಸಭಾಪತಿಯವರೇ, ನನ್ನ ಪ್ರಶ್ನೆಗೆ ಸರಿಯಾದ ವಿವರಗಳನ್ನೇ ಕೊಡದೆ ನಾನು ಪ್ರಶ್ನೆ ಕೇಳುವುದು ಹೇಗೆ.

(ಮಾನ್ಯ ಮಂತ್ರಿ ಜೆ.ಹೆಚ್. ಪಟೇಲರು ವಿವರಗಳ ಪಟ್ಟಿಯನ್ನು ಸಭೆಯಲ್ಲಿ ಓದಿದರು
ವಿಷಯ: ಗ್ರಾಮೀಣ ವಿದ್ಯುದ್ದೀಕರಣ)

ಬಿ.ಕೆ. ಗುಡದಿನ್ನಿ: ಬಿಜಾಪುರ ಜಿಲ್ಲೆಯ ಕೆಲವೊಂದು ತಾಲ್ಲೂಕುಗಳಲ್ಲಿ ನೀರಾವರಿ ಪಂಪುಸೆಟ್‌ಗಳಿಗೆ ವಿದ್ಯುಚ್ಛಕ್ತಿಯನ್ನು ಪೂರೈಸಲು ಕೆಇಬಿ ಅಥವಾ ಸರ್ಕಾರ ಈ ಮುನ್ನ ಹಾಕಿಕೊಂಡಿದ್ದ ಗುರಿಯನ್ನು ಮುಟ್ಟುವುದಕ್ಕೆ ಸಾಧ್ಯವಾಗದಿರಲು ಕಾರಣವೇನು?

ಎ.ಕೆ. ಸುಬ್ಬಯ್ಯ: ಮಾನ್ಯ ಸಭಾಪತಿಯವರೇ, ಮಾನ್ಯ ಪಟೇಲರು ಈಗಷ್ಟೇ ಹೊಸ ಸರ್ಕಾರದ ಮಂತ್ರಿಗಳಾಗಿ ಇಲ್ಲಿಗೆ ಬಂದಿದ್ದಾರೆ. ಪಟೇಲರೇ ಹಳೆಯ ಸರ್ಕಾರಕ್ಕೆ ಹಾಕಿದ್ದ ಹಾಗೂ ಹಾಕಬೇಕಾದ ಪ್ರಶ್ನೆಗಳು ಇವು. ಈಗ ಅವರೇ ಇಂತಹ ಪ್ರಶ್ನೆಗೆ ಉತ್ತರಿಸಬೇಕಾಗಿದೆ. ಇದ್ಯಾವ ಗ್ರಹಚಾರ.

ಜೆ.ಹೆಚ್. ಪಟೇಲ್: ಕೆಲವು ಸಾರಿ ಯಾರೋ ಮಾಡಿದ ತಪ್ಪಿಗೆ ಮತ್ಯಾರೋ ಶಿಕ್ಷೆ ಅನುಭವಿಸಬೇಕಾಗುತ್ತೆ.

ಟಿ.ಎನ್. ನರಸಿಂಹಮೂರ್ತಿ: ಸ್ವಾಮಿ, ತಾವು ಉತ್ತರ ಹೇಳುವ ಕಾಲದಲ್ಲಿ ಕೆಲವೊಂದು ತಾಲ್ಲೂಕುಗಳಲ್ಲಿ ತಮ್ಮ ಗುರಿ ಮೀರಿ ಸಾಧನೆ ಮಾಡಿರುವುದಾಗಿ ಹೇಳಿದ್ದೀರಿ. ಅದಕ್ಕಾಗಿ ತಮಗೆ ಅಭಿನಂದನೆಗಳು.

ಬಿ.ಕೆ. ಗುಡದಿನ್ನಿ: ಮಾನ್ಯ ಸಭಾಪತಿಯವರೇ, ಇದೇನೋ ಲೆಜಿಸ್ಲೇಚರ್ ಸೆಕ್ರೆಟೆರಿಯೇಟಿನ ಹೊಸ ವಿಧಾನವಾಗಿದೆ. ಪೂರಕ ಪ್ರಶ್ನೆ ಹಾಕಲು ನಮಗೆ ಸಚಿವರ ಉತ್ತರಗಳು ಇಲ್ಲದಿದ್ದರೆ ಹೇಗೆ? ಲೋಕಸಭೆಯಲ್ಲಿ ಈ ರೀತಿ ಮಾಡುವುದಿಲ್ಲ. ನಾನು ಕೂಡ 4 ವರ್ಷ ಲೋಕಸಭಾ ಸದಸ್ಯನಾಗಿದ್ದವನು.

ಜೆ.ಹೆಚ್. ಪಟೇಲ್: ಲೋಕಸಭೆಯಲ್ಲಿ ಏನೂ ಕೊಡೋದಿಲ್ಲ. ನಾವು ನೇರವಾಗಿ ಪ್ರಶ್ನೆ ಕೇಳುತ್ತೇವೆ. ಸಚಿವರು ಕೊಡುವ ಉತ್ತರಗಳ ಮೇಲೆ ಮತ್ತೆ ಪೂರಕ ಪ್ರಶ್ನೆಗಳನ್ನು ಕೇಳಬೇಕಾಗುತ್ತದೆ.

(ವಿಧಾನ ಪರಿಷತ್ತಿನ ಕಲಾಪ: ಮಾರ್ಚಿ 14, 1983)

## ಪ್ರತಿಪಕ್ಷದ ಶಾಸಕನಾಗಿ ಕೊನೆಯ ಮಾತು

ತಾವು ಪ್ರತಿನಿಧಿಸುವ ವಿಧಾನಸಭಾ ಕ್ಷೇತ್ರದ ಅವಶ್ಯಕತೆಗಳ ಬಗೆಗೆ ಸದನದಲ್ಲಿ ಲಿಖಿತ ಇಲ್ಲವೇ ಮೌಖಿಕ ಪ್ರಶ್ನೆಗಳನ್ನು ಕೇಳುವ ಅವಕಾಶ ಪ್ರತಿಯೋರ್ವ ಶಾಸಕನಿಗೂ ಇರುತ್ತದೆ. ಬಹುತೇಕ ಶಾಸಕರು ಈ ಅವಕಾಶವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುತ್ತಾರೆ.

ಪ್ರಶ್ನೆಗಳನ್ನು ಕೇಳುವುದರಿಂದ ಮಾತ್ರ ಕ್ಷೇತ್ರದ ಆಗು ಹೋಗುಗಳ ಬಗೆಗೆ ಸದನದ ಇಲ್ಲವೇ ತನ್ಮೂಲಕ ಸರ್ಕಾರದ ಗಮನ ಸೆಳೆಯಲು ಸಾಧ್ಯ ಎಂದು ಪರಿಗಣಿಸುವುದು ಸರಿಯಲ್ಲ. ಸಂಸದೀಯ ಚಟುವಟಿಕೆಗಳಿಗೆ ಪೂರಕವಾಗಿ (followup) ವಿವಿಧ ಖಾತೆಗಳ ಮಂತ್ರಿಗಳು, ಸಚಿವಾಲಯ ಮತ್ತು ಸರ್ಕಾರದ ಇಲಾಖೆಗಳ ಸಂಪರ್ಕದಿಂದ ಕ್ಷೇತ್ರದ ಕೆಲಸ ಕಾರ್ಯಗಳನ್ನು ಮಾಡಿಸುವುದು ಶಾಸಕರ ಜವಾಬ್ದಾರಿಯಾಗಿರುತ್ತದೆ.

ಪಟೇಲರು ಈ ನಡವಳಿಕೆಗೆ ಹೊರತಾಗಿರಲಿಲ್ಲ. ಚನ್ನಗಿರಿ ವಿಧಾನಸಭಾ ಕ್ಷೇತ್ರದ ಹಲವಾರು ಅವಶ್ಯಕತೆಗಳ ಬಗೆಗೆ ಸಂದರ್ಭ ಸಿಕ್ಕಂತೆಲ್ಲಾ ಪ್ರಶ್ನೆಗಳನ್ನು ಕೇಳುತ್ತಿದ್ದರು. ಪ್ರತಿಪಕ್ಷದ ಶಾಸಕರಾಗಿ (1978ರ ಮಾರ್ಚ 17 ರಿಂದ 1982ರ ನವೆಂಬರ್ 26 ರವರೆಗೆ) ಪಟೇಲರು ಮಾಡಿದ ಕೊನೆಯ ಭಾಷಣವೂ ಚನ್ನಗಿರಿ ಕ್ಷೇತ್ರವನ್ನೇ ಕುರಿತದ್ದಾಗಿತ್ತು ಎನ್ನುವುದು ದಾಖಲೆಗಳಿಂದ ವ್ಯಕ್ತವಾಗುತ್ತದೆ.

ನಮ್ಮ ಸಂಸದೀಯ ವ್ಯವಹಾರಗಳಲ್ಲಿ ಮತ್ತೊಂದು ನಡವಳಿಕೆ ಬೆಳೆದು ಬಂದಿದೆ, ಸಾಮಾನ್ಯವಾಗಿ ಆಡಳಿತಕ್ಕೆ ಬಂದ ಬಳಿಕ ಮಂತ್ರಿ, ಉಪಮುಖ್ಯ ಮಂತ್ರಿ, ಮುಖ್ಯಮಂತ್ರಿ ಮತ್ತು ವಿಧಾನ ಪರಿಷತ್ತಿನ ಸಭಾಪತಿ, ಉಪಸಭಾಪತಿ ಹಾಗೂ ಸ್ಪೀಕರ್ ಮತ್ತು ಡೆಪ್ಯುಟಿ ಸ್ಪೀಕರುಗಳು ಸದನದಲ್ಲಿ ತಮ್ಮ ಕ್ಷೇತ್ರದ ಸಮಸ್ಯೆಗಳನ್ನು ಕುರಿತು ಚರ್ಚಿಸುವುದಿಲ್ಲ. ಹೀಗೆ ಚರ್ಚಿಸಬಾರದು ಎಂದು ಯಾವ ಕಾನೂನೂ ಇಲ್ಲ. ಸದನದ ನಿಯಮಾವಳಿ ಇಂತಹ ನಿರ್ಬಂಧ ಹೇರುವುದಿಲ್ಲ. ಮಂತ್ರಿಗಳು ಪಕ್ಷದ ಶಾಸಕಾಂಗ ಸಭೆಯಲ್ಲಿ ಮುಕ್ತ ಚರ್ಚೆ ನಡೆಸಲಿ ಎಂಬ ಹಿರಿಯಾಸೆ ನಮ್ಮ ರಾಜ್ಯಾಂಗ ರಚನೆಕಾರರ ಉದ್ದೇಶವಿದ್ದಿರಬೇಕು.

ಹೀಗಾಗಿ ಪಟೇಲರು ಅಧಿಕಾರಕ್ಕೆ ಬಂದ ಏಳೆಂಟು ವರ್ಷಗಳ ಕಾಲ ತಮ್ಮ ಕ್ಷೇತ್ರದ ಅವಶ್ಯಕತೆ ಆಗು ಹೋಗುಗಳ ಬಗೆಗೆ ಸದನದಲ್ಲಿ ಉಲ್ಲೇಖಿಸಿರುವುದು ಬಹು ಕಡಿಮೆ.

ಚನ್ನಗಿರಿ - ಹೊನ್ನಾಳಿ ತಾಲ್ಲೂಕುಗಳಲ್ಲಿನ ತೀವ್ರ ಅಭಾವ ಪರಿಸ್ಥಿತಿ ಬಗೆಗೆ ಸದನದ ಗಮನ ಸೆಳೆಯಲಿಚ್ಛಿಸುತ್ತೇನೆ. ಇಲ್ಲಿನ ವಾಸ್ತವಿಕ ಸ್ಥಿತಿ ಕುರಿತು ಸರ್ಕಾರದ ವರದಿಯಲ್ಲಿ ಏನನ್ನೂ ಹೇಳದಿರುವುದು ಖೇದಕರ. ಒಂದು ತಿಂಗಳ ಕೆಳಗೆ ಮಾನ್ಯ ಕಂದಾಯ ಮಂತ್ರಿಗಳಿಗೆ ಮತ್ತು ಮಾನ್ಯ ಮಂತ್ರಿಗಳಾದ ಬೇಗಾನೆ ರಾಮಯ್ಯನವರಿಗೆ ಒಂದು ಪತ್ರ ಬರೆದು ಚನ್ನಗಿರಿ ತಾಲ್ಲೂಕಿನಲ್ಲಿ ಕಠಿಣ ಪರಿಸ್ಥಿತಿ ಇದೆ; ಅಲ್ಲಿ ಬೀಜ ಬಿತ್ತೇ ಇಲ್ಲ ಎಂದು ತಿಳಿಸಿದ್ದೆ. ಬೇರೆ ಕಡೆ ಬಿತ್ತಿ ಹಾಳಾದರೆ, ನಾವು ಬಿತ್ತೇ ಇಲ್ಲ. ಆದುದರಿಂದ ಅತಿ ಕಡಿಮೆ ನೀರಾವರಿ ಇರುವ ಕಡೆಗಳಲ್ಲಿ ಮತ್ತು ಬರಗಾಲ ಇರುವ ಕಡೆ ತೀವ್ರ ಗಮನ ಕೊಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ : ಜುಲೈ 31, 1982)

## ಸೆನೆಟ್ ಮತ್ತು ಹೌಸ್ ಆಫ್ ಕಾಮನ್ಸ್

ಪಾರ್ಲಿಮೆಂಟ್ ಆಗಲಿ, ವಿಧಾನಸಭೆ ಅಥವಾ ವಿಧಾನಪರಿಷತ್ ಆಗಲಿ ಕಾರ್ಯಕಲಾಪಗಳು ಕ್ರಮಬದ್ಧವಾಗಿ ನಡೆಯಬೇಕಾದರೆ ಸದನದಲ್ಲಿ ನಿಯಮಾವಳಿಗಳನ್ನು ಎಚ್ಚರದಿಂದ ಪಾಲಿಸಬೇಕಾಗುತ್ತದೆ. ಇದು ವಿರೋಧ ಪಕ್ಷಕ್ಕಷ್ಟೇ ಅನ್ವಯಿಸುವ ಮಾತಲ್ಲ.

ವಿರೋಧ ಪಕ್ಷಕ್ಕಿಂತಲೂ ಹೆಚ್ಚಾಗಿ ಆಡಳಿತ ಪಕ್ಷದ ಶಾಸಕರು ನಿಯಮಾವಳಿ ಪಾಲಿಸುವಲ್ಲಿ ಅಧ್ಯಕ್ಷರೊಂದಿಗೆ ಮತ್ತಷ್ಟು ಸಹಕರಿಸಬೇಕು.

ಸದನವನ್ನು ನಿಯಂತ್ರಿಸಲು ಅಧ್ಯಕ್ಷರಿರುತ್ತಾರೆ. ಬ್ರಿಟನ್ನಿನ ಹೌಸ್ ಆಫ್ ಕಾಮನ್ಸ್ ಅಂದರೆ ನಮ್ಮ ಲೋಕಸಭೆಗೆ ಸಮಾನವಾದ ಸಂಸದೀಯ ಸಂಸ್ಥೆಯಲ್ಲಿ ನಾನು ಒಂದು ವಾರ ಕುಳಿತು ಕಾರ್ಯ ಕಲಾಪಗಳನ್ನು ವೀಕ್ಷಿಸಿದೆ.

ಅಲ್ಲಿನ ಸದಸ್ಯರು ಎಷ್ಟು ಸೂಕ್ಷ್ಮಮತಿಗಳು ಎಂದರೆ ಅಧ್ಯಕ್ಷರ ನೆಕ್ಸ್ಟ್ ಎಂದರೆ ಅದು ಯಾರೇ ಇರಲೀ ಮಾತನಾಡುವವರು ಅವರು ಕುಳಿತುಕೊಳ್ಳಬೇಕು. ಸ್ಪೀಕರ್ ಯಾವುದೇ ಕಾರಣಕ್ಕೆ ಒಂದು ನಿಮಿಷ ಕೊಡದಿದ್ದರೆ ಯಾರೂ ನಿಂತು ಹೆಚ್ಚು ಮಾತನಾಡುವ ಹಾಗಿಲ್ಲ. ಪ್ರತಿಯೊಬ್ಬ ಸದಸ್ಯರೂ ಹಾಗೇ ಮಾಡುತ್ತಾರೆ. ಇಲ್ಲದಿದ್ದರೆ ತಕ್ಷಣ ಮಾರ್ಷಲ್ ಬರುತ್ತಾರೆ. ಸದನದ ಕಾರ್ಯಕ್ರಮಗಳ ಪಟ್ಟಿ ಪ್ರಕಾರ ಸಮಯದ ಒಳಗೆ ಅದು ನಡೆಯಲೇ ಬೇಕು. ಅದಕ್ಕೆ ಎಲ್ಲರೂ ಬದ್ಧರು. ಅದಕ್ಕೆ ಯಾವ ಪಕ್ಷದವರೇ ಅಡ್ಡಿ ಬಂದರೂ ಅವರು ಸ್ಟ್ರಿಕ್ಟ್ ಆಗಿ ಇರತ್ತಾರೆ. ಸದನದಲ್ಲಿ ಮಾರ್ಷಲ್ ಅನ್ನು ಉಪಯೋಗಿಸುವ ಸಂದರ್ಭಗಳು ಬಂದಿಲ್ಲ. ಆದರೆ ಸ್ಪೀಕರ್ ಒಂದು ಸಲ ಡೈರೆಕ್ಷನ್ ಕೊಟ್ಟರೆ ಅದನ್ನು ಪ್ರಧಾನಮಂತ್ರಿಗಳಿಂದ ಹಿಡಿದು ಯಾರೂ ಮೀರುವುದಿಲ್ಲ. ಇಂಗ್ಲೆಂಡ್‌ನಲ್ಲಿ 300 ವರ್ಷದ ಕನ್‌ವೆನ್‌ಷನ್ ಬಂದಿದೆ. ಅವರಿಗೆ ರೂಲ್ ಬುಕ್ ಸಹ ಇಲ್ಲ. ಕನ್‌ವೆನ್‌ಷನ್ ಮೇಲೆ ಅವರು ಹೆಚ್ಚು ನಡೆಯುತ್ತಾರೆ. ಅದನ್ನು ನಾನು ನೋಡಿದ್ದೇನೆ.

ಅಮೇರಿಕಾದ ಕಾಂಗ್ರೆಸ್ ಸೆಷನ್‌ನಲ್ಲಿ ಕೂಡ 2-3 ದಿವಸ ಕುಳಿತಿದ್ದೇನೆ. ಕನ್‌ವೆನ್‌ಷನ್ ಮೇಲೆ ಅವರೂ ಅವಲಂಬಿಸಿದ್ದಾರೆ. ಅದನ್ನೂ ನೋಡಿದ್ದೇನೆ. ಅಮೇರಿಕಾದ ಕಾಂಗ್ರೆಸ್‌ನಲ್ಲಿ ಅಧ್ಯಕ್ಷರು ಕುಳಿತಿರುತ್ತಾರೆ. ಅಲ್ಲಿ ಇಷ್ಟು ಜನ ಇಲ್ಲಿ ಇಷ್ಟು ಜನ 3-4 ಸದಸ್ಯರು ಕುಳಿತು ಅವರವರ ಸಮಸ್ಯೆಗಳ ಬಗ್ಗೆ ಸದನದಲ್ಲೇ ಚರ್ಚೆ ಮಾಡುತ್ತಿರುತ್ತಾರೆ. ಆ ಕಾಂಗ್ರೆಸ್‌ನ ಅಧ್ಯಕ್ಷರು ಕೂಗಿದ ತಕ್ಷಣ ಯಾರು ಯಾವ ಗುಂಪಿನ ಪರವಾಗಿ ಮಾತನಾಡಬೇಕೋ ಅವರು ಮಾತನಾಡುತ್ತಾರೆ. ಆ ಗುಂಪಿನವರು ಒಬ್ಬರು ಮಾತನಾಡಿದ ತಕ್ಷಣ ಬೇರೆಯವರಿಗೆ ಅವಕಾಶ ಇಲ್ಲ. ಅದು ಅಮೇರಿಕನ್ ಕಾಂಗ್ರೆಸ್. ಅಮೇರಿಕನ್ ಸೆನೆಟ್ ನೋಡಿದ್ದೇನೆ. ಅಲ್ಲಿ ಎರಡು ದಿವಸ ಕುಳಿತಿದ್ದೆ. ಅಲ್ಲಿ ಒಬ್ಬರು ಸೆನೆಟರ್ ಮಾತನಾಡುವಾಗ ಅದು ಹಾಗೇ ಟೈಪ್ ಆಗುತ್ತಿರುತ್ತದೆ. ಯಾರೂ ಸದನದಲ್ಲಿ ಬೇರೆ ರೀತಿಯ ಶಬ್ದ ಮಾಡುವುದಿಲ್ಲ. ಅವರವರ ಕೆಲಸವನ್ನು ಅವರು ಮಾಡುತ್ತಿರುತ್ತಾರೆ. ಸೆನೆಟರ್ ಮಾತನ್ನು ಗಮನವಿಟ್ಟು ಕೇಳುತ್ತಾರೆ. ಈ ರೀತಿ ನಾನು ಬೇರೆ ಬೇರೆ ದೇಶದ ಎರಡು-ಮೂರು ಸದನಗಳನ್ನು ನೋಡಿ ಕೊಂಚ ಅನುಭವಗಳಿಸಿದ್ದೇನೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ಫೆಬ್ರವರಿ 26, 1997)

## ಅಮೇರಿಕ, ಇಂಗ್ಲೆಂಡ್, ಭಾರತ ಸಂವಿಧಾನಗಳು

ಅಮೇರಿಕೆಯ ಸಂವಿಧಾನದ ಬಗ್ಗೆ ನಾನು ಓದಿದ್ದೇನೆ. ಅಮೇರಿಕನ್ ಕಾನ್‌ಸ್ಟಿಟ್ಯೂಷನ್‌ನಲ್ಲಿ President has no legislative powers. Legislature is totally independent of President. When he chooses his Secretaries of State, he has no compulsion of any sorts. ನಾವು ಇದು ಇವನ್ಯಾಕೆ ಮಾಡಿದ, ಅವನ ಸಂಬಂಧಿಕ ಏಕೆ ಮಾಡಿದ ಏನೂ ಹಾಗೆ ಕೇಳುವಂತಿಲ್ಲ. ಅದು spoil system ಎಂದು ಏನು ಮಾಡಿದ್ದಾರೆ, He can appoint his brother as Advocate General or Attorney General. He can appoint any body. ನಮ್ಮಲ್ಲಿ ಯಾರನ್ನಾದರೂ ನೇಮಿಸಿದ ಕೂಡಲೇ ಟೀಕೆ ಬರುತ್ತದೆ. ಇವನು ತಮ್ಮ ಜಾತಿಯವನನ್ನು ನೇಮಕ ಮಾಡಿಕೊಂಡ ಎಂದು ಕೂಗಾಡುತ್ತಾರೆ.

ನಾವು ಬ್ರಿಟಿಷ್ ಸಿಸ್ಟಂ ಮೇಲೆ ಡಿಪೆಂಡ್ ಆದೆವು. ಹೋಗಲಿ ಬ್ರಿಟಿಷ್ ಸಿಸ್ಟಂನಾದರೂ ಚೆನ್ನಾಗಿ ಮಾಡಿದ್ದೇವೆಯೇ? ಬ್ರಿಟಿಷರ ಸಿಸ್ಟಂನಲ್ಲಿ I can be a Professor to-day. I can be Minister tomorrow or I can also come back to teaching or research. But, here once a politician always a politician and he never retires. ಅವನು ಸತ್ತರೂ, ಸಾಯುವವರೆವಿಗೂ ಏನು ಮಾಡಿಯಾದರೂ ಭಂಡತನದಿಂದಾದರೂ Politicsನಲ್ಲಿ ಇರಬೇಕು Is there any one example in this country where politician has gone back to this original field. ಜೆ.ಪಿ., ಗಾಂಧಿ ಬಿಡಿ, ಅವರು ಪೊಲಿಟಿಷನ್ಸ್ ಅಲ್ಲ. ಅವರು ತಪಸ್ವಿಗಳು.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಫೆಬ್ರವರಿ 27, 1997)

## ಕಾವೇರಿದ ಸದನದ ಒಂದು ದೃಶ್ಯ

ನಮ್ಮ ಸಂವಿಧಾನ ಮತ್ತು ಸಂವಿಧಾನಾತ್ಮಕ ಸಂಸದೀಯ ನಡವಳಿಕೆಗಳಿಗೆ ವಿಶ್ವದ ಪ್ರಜಾಸತ್ತಾತ್ಮಕ ಸಮಾಜಗಳಲ್ಲಿ ಅನುಸರಿಸಲಾಗುತ್ತಿರುವ ನಿಯಮ, ನಿಬಂಧನೆ ಮತ್ತು ಸಾಂಪ್ರದಾಯಿಕ ಆಚರಣೆಗಳ ಸತ್ವನಿಷ್ಠ ಅನುಭವದ ಲೇಪನವಿದೆ. ವಿಶ್ವ ನಾಗರೀಕತೆಯ ಒಳ್ಳೆಯ ಅಂಶಗಳನ್ನು ಪ್ರಜ್ಞಾಪೂರ್ವಕವಾಗಿ ನಾವು ಅಳವಡಿಸಿಕೊಂಡಿದ್ದೇವೆ.

ಸಂಸತ್ತು ಮತ್ತು ವಿಧಾನಸಭೆಗಳಲ್ಲಿ ಮಾತನಾಡುವಾಗ ಸೌಹಾರ್ದತೆ, ಸಂಯಮ ಮತ್ತು ಸಮನ್ವಯತೆ ಸಾಧಿಸಲು, ಇವೆಲ್ಲಕ್ಕಿಂತ ಮುಖ್ಯವಾಗಿ ಕಲಹ ಇಲ್ಲವೇ ಘರ್ಷಣೆಯ ವಾತಾವರಣ ಮೂಡದಂತೆ ಎಚ್ಚರಿಕೆ ವಹಿಸಲು ನಿಯಮಾವಳಿಗಳಲ್ಲಿ ಹಲವು ಸೂಕ್ಷ್ಮ ಇತಿ-ಮಿತಿ ಮತ್ತು ಕಟ್ಟುಪಾಡುಗಳನ್ನು ಗುರುತಿಸಿಕೊಂಡಿದ್ದೇವೆ.

ಸಂಸತ್ತಿನಲ್ಲಿ ಸಂಸದರು ಕಲಾಪಗಳಲ್ಲಿ ಪಾಲ್ಗೊಳ್ಳುವಾಗ ಪಾಲಿಸಬೇಕಾದ ಕೆಲವು ನಿಯಮಗಳಿವೆ. 352ನೇ ವಿಧಿಯ 2,3,4 ಮತ್ತು 5ನೇ ಕಲಂಗಳು ಸದನದಲ್ಲಿ ಸದಸ್ಯರ ಮಾತುಕತೆಯನ್ನು ನಿಯಂತ್ರಿಸುವ ಚಾವಟಿಗಳಂತಿವೆ.

ನ್ಯಾಯಾಲಯದ ವಿಚಾರಣೆಯಲ್ಲಿರುವ ಪ್ರಕರಣ ಅಥವಾ ಮೊಕದ್ದಮೆಗಳ ಚರ್ಚೆಗೆ ನಿಷೇಧ; ಉಳಿದ ಸಂಸದರ ಬಗೆಗೆ ಆರೋಪ ಮಾಡದಂತೆ ತಡೆಯುವುದು; ಸಂಸತ್ತು ಮತ್ತು ವಿಧಾನಮಂಡಲಗಳ ಯಾವುದೇ ಸದನದ ಕಲಾಪದ ಬಗೆಗಿನ ಕೀಳರಿಮೆ ಇಲ್ಲವೇ ಯಾವುದೇ ವಿಧದ ಟೀಕೆ ಮಾಡಲು ಅವಕಾಶ ನೀಡದಿರುವುದು; ಮಂತ್ರಿ ಅಥವಾ ಮತ್ತಾವುದೇ ಸಾಂವಿಧಾನಿಕ ಸ್ಥಾನದಲ್ಲಿರುವವರ ಬಗೆಗೆ ಮಿಥ್ಯಾರೋಪ ಆಗದಂತೆ ಎಚ್ಚರಿಕೆ - ಇವೇ ಮೊದಲಾದ ಮುನ್ನೆಚ್ಚರಿಕೆ ನಿಬಂಧನೆಗಳನ್ನು ಸಂಸತ್ತಿನ ನಿಯಮಾವಳಿ ನಮೂದಿಸುತ್ತದೆ (ಈ ವಿಷಯದಲ್ಲಿ ಹೆಚ್ಚಿನ ಮಾಹಿತಿ: ಕೌಲ್ ಮತ್ತು ಶಖಧರ್‌ರವರ Practice and Procedure in Parliament ಐದನೇ ಮುದ್ರಣ ಪುಟ 311 ಮತ್ತು ಸುಭಾಷ್ ಕಶ್ಯಪ್‌ರವರ Parliamentary Procedure, Jan. 2000, PP, 1398, 1558, 1575, 1611, 2410, 2422, 2427 ಮತ್ತು 2446).

### 'ಅನ್‌ಪಾರ್ಲಿಮೆಂಟರಿ'

ಪಾರ್ಲಿಮೆಂಟಿನಲ್ಲಿ ಅನುಸರಿಸಲಾಗುವ ನಿಯಮ, ನಿಬಂಧನೆ ಮತ್ತು ಸಂಪ್ರದಾಯಗಳನ್ನೇ ನಮ್ಮ ವಿಧಾನಮಂಡಲ ಅನುಸರಿಸುತ್ತದೆ. ನಿಯಮ 327, 328, 329, 330, 331, 332, 354 ಮತ್ತು 350. ಇವುಗಳ ಪ್ರಕಾರ ಶಾಸಕರು ಮತ್ತೊಬ್ಬ ಶಾಸಕರನ್ನು ಜರಿಯುವ, ಹಂಗಿಸುವ, ಅಪಮಾನ-ಅಪಹಾಸ್ಯಕ್ಕೆ ಗುರಿ ಮಾಡುವಂತಹ, ಯಶಸ್ಸಿಗೆ ಕುಂದು ತರುವ ಇಲ್ಲವೇ ನೋವು ಉಂಟುಮಾಡುವಂತಹ ಪದಗಳನ್ನು ಬಳಸುವಂತಿಲ್ಲ.

ರಾಜ್ಯದ್ರೋಹ ಮತ್ತು ಸಮಾಜವನ್ನು ಕ್ಷೋಭೆಗೆ ತಳ್ಳುವಂತಹ ಪದಗಳನ್ನು ಬಳಸಿ, ಉದ್ರೇಕಗೊಳಿಸುವ ಪ್ರವೃತ್ತಿಯನ್ನು ನಮ್ಮ ಸಂಸದೀಯ ವ್ಯವಸ್ಥೆ ಕ್ಷಮಿಸುವುದಿಲ್ಲ.

ಇಷ್ಟೆಲ್ಲಾ ನಿರ್ಬಂಧಗಳಿದ್ದರೂ ಉದ್ವಿಗ್ನತೆ, ಭಾವೋದ್ವೇಗ ಮತ್ತು ಕಾವೇರಿದ ಘರ್ಷಣೆಗೆ ಎಡೆಮಾಡಿಕೊಡುವಂತಹ ಹಲವಾರು ಸಂದರ್ಭಗಳು ಸದನದಲ್ಲಿ ಹಣಿಕಿ ಹಾಕುವುದುಂಟು. ಕೊಡು-ತೆಗೆದುಕೋ ಮನೋಭಾವ ಶಾಸಕರಲ್ಲಿ ಇದ್ದಾಗ ಏನಂದರೂ ನಡೆದುಹೋಗುತ್ತವೆ; ಪ್ರತಿಷ್ಠೆ ಇಲ್ಲವೇ ಸ್ವಾಭಿಮಾನ ಅಡ್ಡಬಂದರೆ 'ಅನ್‌ಪಾರ್ಲಿಮೆಂಟರಿ' ಎಂಬ ಆಕ್ಷೇಪ ಸದನದ ತುಂಬೆಲ್ಲಾ ಪ್ರತಿಧ್ವನಿಸುತ್ತದೆ.

ಸ್ವಾರಸ್ಯದ ಸಂಗತಿ ಎಂದರೆ - ಸಂವಿಧಾನ ಹಾಗೂ ಇದರ ಅನುಚ್ಛೇಧಗಳಲ್ಲಿ ಹಾಗೂ ಸಂಸತ್ತು ಮತ್ತು ವಿಧಾನಮಂಡಲಗಳ ನಿಯಮಾವಳಿಗಳಲ್ಲಿ 'ಅನ್‌ಪಾರ್ಲಿಮೆಂಟರಿ' ಎನ್ನುವ ಶಬ್ದವೇ ಇಲ್ಲ. ನಿಯಮ 310(2) ಮತ್ತು 310(7) ಈ ಎರಡು ವಿಧಿಗಳು ಸಂಸದೀಯ ನಡವಳಿಕೆಗೆ ತಕ್ಕುದಲ್ಲದ ಪದಗಳ ಪ್ರಯೋಗವನ್ನು ನಿಷೇಧಿಸುತ್ತವೆ ವಿನಃ ಅಂಸಂದೀಯ ಯಾವುದು ಎಂದು ಸ್ಪಷ್ಟವಾಗಿ ತಿಳಿಸುವುದಿಲ್ಲ.

## ಕರ್ನಾಟಕ ವಿಧಾನಮಂಡಲದ ಹೆಗ್ಗಳಿಕೆ

ದೇಶದ ಹಲವಾರು ವಿಧಾನ ಮಂಡಲದ ಕಲಾಪಗಳಿಗೆ ಹೋಲಿಸಿದಲ್ಲಿ ಉನ್ನತಮಟ್ಟದ ಸಂಸದೀಯ ನಡವಳಿಕೆಗೆ ಕರ್ನಾಟಕ ವಿಧಾನಮಂಡಲ ಹೆಸರುವಾಸಿ. ನಮ್ಮಲ್ಲಿಯೂ ಒಮ್ಮೊಮ್ಮೆ ಕೈಮೀರಿ ಉದ್ವಿಗ್ನ ಪರಿಸ್ಥಿತಿ ಕಂಡುಬರುವುದುಂಟು. ಆದರೆ ಇದೇ ದಿನನಿತ್ಯದ ಚಾಳಿಯಲ್ಲ.

ಇಂತಹ ಸಂದರ್ಭವೊಂದು ಎಂಟನೆಯ ವಿಧಾನಸಭೆಯ ಮೊದಲ ಅಧಿವೇಶನದಲ್ಲಿ ಪ್ರಮಾದ್‌ವಶಾತ್ ಸಂಭವಿಸಿತು.

ಅಂದಿನ ಮುಖ್ಯ ಮಂತ್ರಿಗಳಾಗಿದ್ದ ಮಾನ್ಯ ರಾಮಕೃಷ್ಣ ಹೆಗಡೆ ಮತ್ತು ಪ್ರತಿಪಕ್ಷದ ನಾಯಕ ಮಾನ್ಯ ಎಸ್. ಬಂಗಾರಪ್ಪನವರುಗಳ ನಡುವೆ ಕಾವೇರಿದ ಮಾತಿನ ಚಕಮಕಿ ನಡೆದಿತ್ತು. ಸಾರಾಯಿ ಮಾರಾಟದಲ್ಲಿ ಅಕ್ರಮ ನಡೆದಿದೆಯೆಂದು ತೀವ್ರವಾಗಿ ಆಪಾದಿಸಿದ್ದರು ವಿರೋಧ ಪಕ್ಷದ ನಾಯಕರು. ಯಾವುದೇ ಅವ್ಯವಹಾರ ಇಲ್ಲವೆಂದರು ಮುಖ್ಯಮಂತ್ರಿಗಳು.

ಸೂಕ್ತ ವಿಚಾರಣೆಯಿಂದ ಅಕ್ರಮ ನಡೆದಿರುವುದು ದೃಢವಾದರೆ ತಾವು ರಾಜೀನಾಮೆ ನೀಡುವುದಾಗಿ ಹೇಳಿದ ಮುಖ್ಯಮಂತ್ರಿಗಳು, ಹಾಗೊಮ್ಮೆ ಆರೋಪ ಸಾಬೀತಾಗದಿದ್ದಲ್ಲಿ ರಾಜೀನಾಮೆ ಕೊಡಲು ಸಿದ್ಧರಿದ್ದೀರಾ ಎಂದು ವಿರೋಧ ಪಕ್ಷದ ನಾಯಕರಿಗೆ ಸವಾಲೆಸೆದರು.

ಬೃಹತ್ ಕೈಗಾರಿಕೆ ಖಾತೆಯ ಮಂತ್ರಿಗಳಾದ ಜೆ.ಹೆಚ್. ಪಟೇಲರು ಈ ಸಂದರ್ಭದಲ್ಲಿ ಸದನದಲ್ಲಿ ಹಾಜರಿದ್ದು ನಾಯಕದ್ವಯರ ಸಂಘರ್ಷವನ್ನು

ನೋಡುತ್ತಿದ್ದರು. ಸುಮಾರು ಎರಡು-ಮೂರು ಗಂಟೆಗಳ ಅವಧಿಯ ಈ ಬಿರುಸಿನ ಮಾತಿನ ನಡುವೆ ಪಟೇಲರು ಮಾತನಾಡಿದ್ದು ಕೇವಲ ನಾಲ್ಕು ನಿಮಿಷ. ಪಟೇಲರ ಮಾತಿಗೆ ಮುನ್ನ ನಡೆದ ಕಲಾಪಗಳ ಫ್ಲಾಷ್ ಬ್ಯಾಕ್‌ನ್ನು ಸಂಕ್ಷಿಪ್ತವಾಗಿ ಕೆಳಗೆ ಕೊಡಲಾಗಿದೆ.

ಈ ಕಲಾಪವನ್ನು ಉದಾಹರಿಸಲು ಎರಡು ಸ್ಪಷ್ಟ ಕಾರಣಗಳಿವೆ.

ಮೊದಲನೆಯದು: ಇದು ಜೆ.ಹೆಚ್. ಪಟೇಲರ ಶಾಸನಸಭೆಯ ಕಾಲಾವಧಿಯಲ್ಲಿ ನಡೆದ ಘಟನೆ.

ಎರಡನೆಯದು: ಸಂಸದೀಯ ಕಲಾಪಗಳು ನಡೆಯುತ್ತಿರುವಾಗ ಎಷ್ಟೇ ಅನುಭವಸ್ಥರು, ಮುತ್ಸದ್ದಿಗಳು ಮತ್ತು ಹಿರಿಯ ರಾಜಕಾರಣಿಗಳಿದ್ದರೂ ಒಮ್ಮೊಮ್ಮೆ ಉದ್ವೇಗಕ್ಕೆ ತುತ್ತಾಗಿ ಸಂಸದೀಯ ನಡವಳಿಕೆಯ ಸೀಮೋಲ್ಲಂಘನೆಗೆ ಕಾರಣರಾಗುತ್ತಾರೆ ಎಂಬುದು.

ಒಂದು ಮನವಿ. ಈ ಘಟನೆಯನ್ನು ನಿದರ್ಶನವಾಗಿ ತೆಗೆದುಕೊಂಡಿರುವುದು ಯಾವುದೇ ಹಿರಿಯ ಇಲ್ಲವೇ ಕಿರಿಯ ಶಾಸಕರ ನಡವಳಿಕೆಯನ್ನು ಮೇಲುಕೀಳೆಂದು ತೋರಿಸುವುದಕ್ಕಲ್ಲ.

## ಕರ್ನಾಟಕ ವಿಧಾನಸಭೆ

ಅಧ್ಯಕ್ಷರು (ಮಾನ್ಯ ಬಿ.ಜಿ. ಬಣಕಾರ) ಪೀಠವನ್ನಲಂಕರಿಸಿದ್ದರು

ವಿತ್ತೀಯ ಕಾರ್ಯಕಲಾಪಗಳು:

1985-86ನೇ ಸಾಲಿನ ಆಯವ್ಯಯದ ಮೇಲಿನ ಸಾಮಾನ್ಯ ಚರ್ಚೆ

ಮಾನ್ಯ ಮುಖ್ಯಮಂತ್ರಿಯವರಿಂದ ಚರ್ಚೆಗೆ ಉತ್ತರ

ಅಧ್ಯಕ್ಷರು: ಈಗ 1985-86ನೇ ಇಸವಿಯ ಆಯವ್ಯಯದ ಬಗ್ಗೆ ಮಾನ್ಯ ಸದಸ್ಯರು ಮಾಡಿದ ಚರ್ಚೆಗೆ ಮಾನ್ಯ ಮುಖ್ಯಮಂತ್ರಿಗಳು ಉತ್ತರವನ್ನು ಕೊಡುವರು.

(ಸುಮಾರು ಒಂದು ಗಂಟೆಯ ಉತ್ತರ ಮತ್ತು ಸಾಮಾನ್ಯ ಚರ್ಚೆ ನಂತರ ಸಭೆಯಲ್ಲಿ ವಾದ-ವಿವಾದ ಆರಂಭವಾಗಿ ಉದ್ವಿಗ್ನ ಸ್ಥಿತಿ ತಲುಪಿತು)

(ಗೊಂದಲ)

ಅಧ್ಯಕ್ಷರು: ಎಲ್ಲರೂ ಕುಳಿತುಕೊಳ್ಳಬೇಕು, ಅಧ್ಯಕ್ಷರು ಮಾತನಾಡಲು ಎದ್ದು ನಿಂತುಕೊಂಡ ಮೇಲೆ ತಾವೆಲ್ಲರೂ ಕುಳಿತುಕೊಳ್ಳಬೇಕು. ಈ ತರಹ ಎಲ್ಲರೂ ಎದ್ದು ನಿಂತುಕೊಂಡು ಮಾತನಾಡಿದರೆ ಅದು ಯಾವುದೂ ಕಡತಕ್ಕೂ ಹೋಗುವುದಿಲ್ಲ. ಎಲ್ಲರೂ ದಯವಿಟ್ಟು ಕುಳಿತುಕೊಳ್ಳಬೇಕು.

(ಗೊಂದಲ)

ಎಸ್. ಬಂಗಾರಪ್ಪ (ವಿರೋಧ ಪಕ್ಷದ ನಾಯಕ): ಮಾನ್ಯ ಅಧ್ಯಕ್ಷರೇ, ಮಾನ್ಯ ಮುಖ್ಯಮಂತ್ರಿಗಳು ಎರಡು ಪದವನ್ನು ಉಪಯೋಗ ಮಾಡಿದ್ದಾರೆ. ಒಂದು ಬೇಜವಾಬ್ದಾರಿ ಎಂಬ ಪದವನ್ನು ಉಪಯೋಗ ಮಾಡಿದ್ದಾರೆ. ಆ ಪದವನ್ನು ಅವರು ಹಿಂದಕ್ಕೆ ತೆಗೆದುಕೊಳ್ಳಬೇಕು.

ರಾಮಕೃಷ್ಣ ಹೆಗಡೆ (ಮುಖ್ಯಮಂತ್ರಿ): ಅವರು ಹೇಳಿದ್ದಾರೆ ಅದಕ್ಕೆ ನಾನು ಹೇಳಿದ್ದೇನೆ, ಇನ್ನೂ ನೂರು ಸಲ ಅದನ್ನೇ ಹೇಳುತ್ತೇನೆ.

(ಗೊಂದಲ)

ಸಿ. ಬೈರೇಗೌಡ (ಪಶು ಸಂಗೋಪನೆ ಖಾತೆ ಮಂತ್ರಿ): ಒಂದು ಲೀಟರ್‌ಗೆ 3 ರೂಪಾಯಿ ತೆಗೆದುಕೊಂಡಿದ್ದೇವೆ ಎಂದು ಹೇಳಿದರಲ್ಲಾ ಅದು ಬೇಜವಾಬ್ದಾರಿ ಮಾತಲ್ಲದೆ ಮತ್ತೇನು?

ಎಸ್. ಬಂಗಾರಪ್ಪ: ಆ ಮಾತನ್ನು ಮಾನ್ಯ ಮುಖ್ಯ ಮಂತ್ರಿಗಳು ಆಡಬಾರದಾಗಿತ್ತು. ಇದು ವಿರೋಧಪಕ್ಷಕ್ಕೆ ಅಗೌರವ ತರತಕ್ಕ ವಿಚಾರ. ಒಂದು ವೇಳೆ ನೀವು ಅದೇ ರೀತಿ ಆಡುತ್ತಾ ಹೋದರೆ ನಾವೂ ಕೂಡ ಅದೇ ರೀತಿ ಆಡುತ್ತೇವೆ. ಅನಂತರ ಗಂಡಸ್ತನ ಎನ್ನತಕ್ಕಂಥ ಪದ ಪ್ರಯೋಗ ಮಾಡಿದ್ದಾರೆ; ಸಂತೋಷ. ಗಂಡಸ್ತನ ಎನ್ನತಕ್ಕಂಥ ವಿಚಾರಕ್ಕೆ ಬಂದಿದ್ದರಿಂದ ಸಂತೋಷ.

(ಗೊಂದಲ)

ಎಸ್. ಬಂಗಾರಪ್ಪ: ದಯವಿಟ್ಟು ಒಂದೇ ಒಂದು ವಿಚಾರವನ್ನು ಹೇಳುತ್ತೇನೆ. ಗಂಡಸ್ತನ ಎಂಬ ಪದದ ಪ್ರಯೋಗ ಅಷ್ಟು ಒಳ್ಳೆಯದಾಗಲಾರದು ಎನ್ನತಕ್ಕಂಥಾದ್ದು ನನ್ನ ಅಭಿಪ್ರಾಯ.

(ಗೊಂದಲ)

ಎಸ್. ಬಂಗಾರಪ್ಪ: ಗಂಡಸುತನ ಪದದ ಪ್ರಯೋಗ ಮಾಡಬೇಕು ಅಂದರೆ ಮಾಡೋಣ. ಮಾನ್ಯ ಸಭಾಧ್ಯಕ್ಷರೇ, ರಾಜಕೀಯದ ಗಂಡಸತನ ಅಂದರೆ ಆ ಪ್ರಶ್ನೆ ಬೇರೆ. ಬರೀ ಗಂಡಸುತನ ಅಂದರೆ ನಿಮಗೆ ಕೂದಲೆಲ್ಲಾ ಬೆಳ್ಳಗಾಗಿದೆ ವಯಸ್ಸಾಗಿದೆ ನಿಮ್ಮಿಂದ ಏನೂ ಆಗುವುದಿಲ್ಲ ಎಂದರ್ಥ. ಆ ಪದವನ್ನು ಬಾಯಿ ಚಪಲಕ್ಕೋಸ್ಕರ ಹೇಳುತ್ತಾ ಇರಬಹುದಷ್ಟೆ.

(ಗೊಂದಲ)

ಎಂ. ರಘುಪತಿ: ಮಾನ್ಯ ಬಂಗಾರಪ್ಪನವರೆ, ಆ ಭಾಷೆ ಒಳ್ಳೆಯದಲ್ಲ. ಅದು ಶೋಭೆ ತರತಕ್ಕ ಭಾಷೆಯಲ್ಲ. ಈ ಪದಗಳನ್ನು ಉಪಯೋಗಿಸಬೇಡಿ, ಶೋಭೆ ತರುವುದಿಲ್ಲ.

ಎಸ್. ಬಂಗಾರಪ್ಪ: ಆ ಮಾತನ್ನು ಮುಖ್ಯಮಂತ್ರಿಗಳಿಗೆ ಹೇಳಿ.

(ಗೊಂದಲ)

**ಅಧ್ಯಕ್ಷರು:** ಈ ಕಡೆಯವರು, ಆ ಕಡೆಯವರು ಮಾತನಾಡುವಾಗ ಹಳ್ಳಿಯೊಳಗೆ ಯಾವ ರೀತಿ ಮಾತನಾಡುತ್ತಾರೆ ಹಾಗೆ ಮಾತನಾಡುವುದು ಸರಿಯಲ್ಲ. ಸ್ವಲ್ಪ ಗೌರವವಾಗಿ ನೀವು ಪದಗಳನ್ನು ಉಪಯೋಗ ಮಾಡಬೇಕು. ಈ ಕಡೆಯವರೂ, ಆ ಕಡೆಯವರೂ ಗೌರವಯುತವಾದ ವಾಕ್ಯಗಳನ್ನು ಉಪಯೋಗ ಮಾಡಿ.

ಎಂ.ಎಸ್. ಕೃಷ್ಣನ್: ನನ್ನದು ಪಾಯಿಂಟ್ ಆಫ್ ಆರ್ಡರ್ ಇದೆ.

**ಅಧ್ಯಕ್ಷರು:** ಕುಳಿತುಕೊಳ್ಳಿ.

ಎಂ.ಎಸ್. ಕೃಷ್ಣನ್: ಪಾಯಿಂಟ್ ಆಫ್ ಆರ್ಡರ್ ಇದೆ ಎಂದು ಹೇಳುತ್ತಿದ್ದೇನೆ. ಕುಳಿತುಕೊಳ್ಳಿ ಎಂದರೆ ಏನು?

ಜಿ. ನಾರಾಯಣಕುಮಾರ್: ಕನ್ನಡದಲ್ಲಿ ಹೇಳಿ.

ಎಂ.ಎಸ್. ಕೃಷ್ಣನ್: ಮಾನ್ಯ ಅಧ್ಯಕ್ಷರೇ, ಕ್ರಿಯಾಲೋಪ ಎತ್ತಿದರೂ ಕುಳಿತುಕೊಳ್ಳಿ ಅಂದರೆ ನಾವು ಏನು ಮಾಡುವುದು. ದಯವಿಟ್ಟು ಇಲ್ಲಿ ಪ್ರತಿ ಪಕ್ಷಗಳನ್ನು ಮಕ್ಕಳ ತರಹ ಟ್ರೀಟ್ ಮಾಡಬಾರದು. ನಿಯಮ 310 ಪ್ರಕಾರ:

"A member while speaking shall not...

(ii) make a personal charge against a member,

(vii) utter treasonable, seditious or defamatory words. ಎಂದಿದೆ. ನಾನು ನಿಯಮ 310 (2) ಮತ್ತು 310(7) ಇವೆರಡನ್ನು ತಮ್ಮ ಗಮನಕ್ಕೆ ತರಬೇಕಾಗಿದೆ. ಮಾನ್ಯ ಮುಖ್ಯಮಂತ್ರಿಗಳು ಇವತ್ತು ಗಂಡಸ್ತನ ಇದ್ದರೆ ಎನ್ನುವ ಪದ ಉಪಯೋಗಿಸಿದರು.

(ಗೊಂದಲ)

ಎಂ.ಎಸ್. ಕೃಷ್ಣನ್: ಅವರು ಹೇಳಿದ್ದನ್ನು ನಾನು ಕೇಳಿಕೊಂಡೆ. ಗಂಡಸ್ತನ ಇದ್ದರೆ ಎಂದು ಹೇಳಿದರು. ಮುಖ್ಯಮಂತ್ರಿಗಳು ಆ ರೀತಿ ಹೇಳಿದರು. ನನಗೆ ಆ ರೀತಿ ಕೇಳಿಸಿತು. ತಪ್ಪಾದರೆ ನಾನು ಒಪ್ಪಿಕೊಳ್ಳುತ್ತೇನೆ. ನಿಮಗೆ ಗಂಡಸ್ತನ ಇದ್ದರೆ ಒಪ್ಪಿಕೊಳ್ಳಿ ಎಂದು ಹೇಳಿದರು. ಒಪ್ಪಿಕೊಳ್ಳುತ್ತಾರೋ ಇಲ್ಲವೋ. ನನಗಂತೂ ಇದು ಘನತೆ ಗೌರವ ತರುವ ವಿಷಯವಲ್ಲ. (ವಿರೋಧ ಪಕ್ಷದವರು ಚಪ್ಪಾಳೆ ತಟ್ಟಿದರು) ನೀವು ಚಪ್ಪಾಳೆ ತಟ್ಟಿದರೆ ನಿಮಗೆ ಸಪೋರ್ಟ್ ಕೊಡುತ್ತೇನೆ ಎಂದು ತಿಳಿದುಕೊಳ್ಳಬೇಡಿ. ಮಾನ್ಯ ಬಂಗಾರಪ್ಪನವರು ಮಾನ್ಯ ಮುಖ್ಯಮಂತ್ರಿಗಳು ಹೇಳುವುದಕ್ಕಿಂತ ಮುಂಚಿತವಾಗಿ ಬೇಜವಾಬ್ದಾರಿಯುತವಾಗಿ ಮಾತನಾಡುವಂಥ ಸ್ಥಾನದಲ್ಲಿ ನಾವು ಇಲ್ಲ ಎಂದು ಹೇಳಿದರು. ಇದು ನನಗೆ ಜ್ಞಾಪಕ.

ಒಬ್ಬ ಮಾನ್ಯ ಸದಸ್ಯರು: ಆಪಾದನೆ ಇರುವುದು ಮುಖ್ಯಮಂತ್ರಿಗಳ ಮೇಲೆ, ಬಂಗಾರಪ್ಪನವರ ಮೇಲೆ ಅಲ್ಲ.

ಎಸ್.ಆರ್. ಬೊಮ್ಮಾಯಿ (ಕಂದಾಯ ಮಂತ್ರಿ): ನಾನು ಹೇಳುವುದನ್ನು ಸ್ವಲ್ಪ ಕೇಳಿ.

(ಗೊಂದಲ)

ಎಸ್.ಆರ್. ಬೊಮ್ಮಾಯಿ: ಸ್ವಾಮಿ, ಇವತ್ತು ಆರೋಪ ಪ್ರತ್ಯಾರೋಪ ಏನೇ ಇರಲಿ, ನ್ಯಾಯಾಂಗ ತನಿಖೆಯಿಂದ ಸಾರ್ವಜನಿಕರಿಗೆ ಗೊತ್ತಾಗಬೇಕು. ಸಾರ್ವಜನಿಕ ಹಿತ ದೃಷ್ಟಿಯಿಂದ ಇದು ಬಹಳ ಮುಖ್ಯವಾಗಿ ಆಗಬೇಕಾಗಿದೆ. ಸರ್ಕಾರದ ಮೇಲೆ ಎಷ್ಟು ಜವಾಬ್ದಾರಿ ಇದೆಯೋ ಅಷ್ಟೇ ಜವಾಬ್ದಾರಿ ವಿರೋಧ ಪಕ್ಷದ ಮೇಲೆಯೂ ಇದೆ. ಎರಡೂ ಕಡೆಯವರು ಪರೀಕ್ಷೆಗೆ ಒಳಗಾಗಬೇಕು. ಸರ್ಕಾರದವರ ತಪ್ಪು ಇದ್ದರೆ ಅವರು ಅನುಭವಿಸುತ್ತಾರೆ. ಆಪಾದನೆ ಮಾಡಿದವರ ತಪ್ಪು ಇದ್ದರೆ ಅದನ್ನು ಹೊರುವುದಕ್ಕೆ ಅವರು ಬದ್ಧರಾಗಬೇಕು. ತಾವು ರಾಜೀನಾಮೆ ಕೊಡತಕ್ಕ ವಿಚಾರದಲ್ಲಿ ಸ್ಪಷ್ಟವಾದ ನಿಲುವನ್ನು ನೀಡಿ.

ಕೆ.ಹೆಚ್. ಶ್ರೀನಿವಾಸ್: ಮಾನ್ಯ ಅಧ್ಯಕ್ಷರೇ, ನಮ್ಮ ಮುಂದಿರತಕ್ಕ ಪ್ರಶ್ನೆ ಇಷ್ಟೆ, ನ್ಯಾಯಾಂಗ ತನಿಖೆ ಮಾಡುವುದಕ್ಕೆ ನಾವು ಸಿದ್ಧರಿದ್ದೇವೆ. ಫಲಿತಾಂಶದ ಆಧಾರದ ಮೇಲೆ ಸರ್ಕಾರ ತಪ್ಪು ಮಾಡಿದರೆ ತಾವು ರಾಜೀನಾಮೆ ನೀಡಬೇಕು, ಇಲ್ಲದೇ ಹೋದರೆ ವಿರೋಧ ಪಕ್ಷದ ನಾಯಕರು ರಾಜೀನಾಮೆ ಕೊಡತಕ್ಕ ಸವಾಲಿನ ಬಗ್ಗೆ ವಿಚಾರ ಮಾಡುತ್ತಿದ್ದೇವೆ. ವಿರೋಧ ಪಕ್ಷದವರ ಹಕ್ಕುಗಳು ಏನು? ಆಡಳಿತ ಪಕ್ಷದ ಜವಾಬ್ದಾರಿಗಳೇನು ಎನ್ನುವ ಬಗ್ಗೆ ಹೊಸದಾಗಿ ಇಲ್ಲಿ ವಿಶ್ಲೇಷಣೆ ಮಾಡಬೇಕಾದ ಅಗತ್ಯ ಇಲ್ಲ. ವಿರೋಧ ಪಕ್ಷಗಳಿಗೆ ಆಪಾದನೆ ಮಾಡತಕ್ಕ ಅಧಿಕಾರ ಇದೆ, ಹಕ್ಕು ಇದೆ, ಅದನ್ನು ಯಾರೂ ಅಲ್ಲಗಳೆಯುವಂತಿಲ್ಲ.

(ಗೊಂದಲ)

ಕೆ.ಎಚ್. ಶ್ರೀನಿವಾಸ್: ನಾವು ಆಪಾದನೆ ಮಾಡಿದ್ದಕ್ಕೆಲ್ಲಾ ರಾಜೀನಾಮೆ ಕೊಡುವುದಕ್ಕೆ ತಯಾರಿರಬೇಕೆಂದು ಹೇಳುವುದಾದರೆ ಸಾರ್ವಜನಿಕ ಜೀವನದಲ್ಲಿ ಕೆಲಸ ಮಾಡುವುದು ಕಷ್ಟವಾಗುತ್ತದೆ. ನಾನು ಮಾನ್ಯ ಬೊಮ್ಮಾಯಿಯವರನ್ನು ಕೇಳುತ್ತೇನೆ. ತಾವು ಕೂಡ ಹಿಂದೆ ವಿರೋಧ ಪಕ್ಷದಲ್ಲಿ ಕುಳಿತು ಕೆಲಸ ಮಾಡಿದ್ದೀರಿ. ತಾವು ಆಪಾದನೆ ಮಾಡಿದಾಗ ಸವಾಲಿನ ರೂಪದಲ್ಲಿ ಯಾವುದನ್ನೂ ತೆಗೆದುಕೊಂಡಿದ್ದು ನನ್ನ ಗಮನದಲ್ಲಿಲ್ಲ. ಕೆಲವು ಸಾರಿ ಆಪಾದನೆ ಮಾಡಿದಾಗ ಅದರ ಬಗ್ಗೆ ವಿಚಾರಣೆ ಮಾಡಿದಾಗ ಯಾವ ಬೆಲೆಯೂ ಇಲ್ಲದೇ ಇರುವುದನ್ನು ನಾವು ನೋಡಿದ್ದೇವೆ. ಕೆಲವು ಸಲ ಸತ್ಯವೇ ವಿಚಿತ್ರವಾಗಿರುತ್ತದೆ. ಹುತ್ತದಲ್ಲಿ ಹಾವಿದ್ದಾಗ ಬಾಲ ಮಾತ್ರ ಮೇಲೆ ಇರುತ್ತದೆ, ಬಾಲ ಹಿಡಿದು ಎಳೆದರೆ ಬಾಲ ತುಂಡಾಗಿ ಬರುತ್ತೆ, ಒಳಗಡೆ ಇರುವುದು ಕೇರೆ ಹಾವೋ, ಸರ್ಪವೋ ಗೊತ್ತಾಗುವುದಿಲ್ಲ. ಮುಂಡವನ್ನು ರಕ್ಷಣೆ

ಮಾಡಿಕೊಳ್ಳುವವರು ನೀವು. ಬೇಕಾದರೆ ವಿಚಾರಣೆ ಮಾಡಿಕೊಳ್ಳಿ ಇಲ್ಲದಿದ್ದರೆ ಮಾಡುವುದಿಲ್ಲ ಎಂದು ಹೇಳಿ.

ಎಂ.ಪಿ. ಪ್ರಕಾಶ್ (ಕೃಷಿ ಮತ್ತು ತೋಟಗಾರಿಕೆ ರಾಜ್ಯ ಮಂತ್ರಿ): ಸ್ವಾಮಿ, ಅತಿ ಬುದ್ದಿವಂತಿಕೆಯಿಂದ , ರೋಚಕ ವಿಷಯಗಳನ್ನು ಪ್ರಸ್ತಾಪ ಮಾಡಿ ಮಾನ್ಯ ಶ್ರೀನಿವಾಸ್‌ರವರು ವಿಷಯವನ್ನು ದಾರಿತಪ್ಪಿಸುವ ರೀತಿಯಲ್ಲಿ ಮಾತನಾಡಿದ್ದಾರೆ. ಇದು ಸವಾಲಿನ ಪ್ರಶ್ನೆಯಲ್ಲ. ವಿರೋಧ ಪಕ್ಷದ ನಾಯಕರು ಆಪಾದನೆ ಮಾಡುವಂತಹ ಎಲ್ಲಾ ಸಂದರ್ಭಗಳಲ್ಲೂ ರಾಜೀನಾಮೆ ಕೊಡತಕ್ಕದ್ದು ಸತ್ಸಂಪ್ರದಾಯವಲ್ಲ. ಎಲ್ಲಾ ಸಂದರ್ಭಗಳಲ್ಲೂ ಮುಖ್ಯಮಂತ್ರಿಗಳು ರಾಜೀನಾಮೆಯನ್ನು ಕೊಡಬೇಕೆಂದು ಕೇಳಿಲ್ಲ. ಈಗ ಆಪಾದನೆಯನ್ನು ಮಾಡುತ್ತಿದ್ದಾರೆ, ಬುದ್ಧಿವಂತಿಕೆಯಿಂದ ಮಾತನಾಡಿ ವಾದದ ದಾರಿಯನ್ನು ತಪ್ಪಿಸಬೇಡಿ.

ಎಸ್. ಬಂಗಾರಪ್ಪ: ಈ ಸದನದಲ್ಲಿ ಕಡತದ ವಿಚಾರದಲ್ಲಿ ನಾನು ಏನು ಹೇಳಿದ್ದೇನೆ? ನಾವು ಸರ್ಕಾರಕ್ಕೆ ಬರುವ ಎಕ್ಸೈಜನ್ನು ಕಡಿಮೆ ಮಾಡಿಲ್ಲವೆಂದು ಸಭಾ ನಾಯಕರು ಹೇಳಿದಾಗ ನಾನು ಹೇಳಿದೆ, ನೀವು ಕಡತವನ್ನು ತರಿಸಿ ನೋಡಿ. ಸರ್ಕಾರದ ಮಟ್ಟದಲ್ಲಿ ರುಜು ಮಾಡಿದ್ದೀರಿ, ಕಡತ ತರಿಸಿ ನೋಡಿ ಎಂದು ಹೇಳಿ. ಈ ವಿಷಯಕ್ಕೆ ಬೇರೆಯದನ್ನು ಮಿಕ್ಸ್ ಮಾಡತಕ್ಕದ್ದಲ್ಲ.

ಅಧ್ಯಕ್ಷರು: ಈ ವಿಷಯವನ್ನು ಇಲ್ಲಿಗೆ ಬಿಡೋಣ

ಆರ್. ವೆಂಕಟರಾಮಯ್ಯ: ಅಧ್ಯಕ್ಷರೇ, ನನ್ನದು ಒಂದು ಪಾಯಿಂಟ್ ಆಫ್ ಆರ್ಡರ್ ಇದೆ. ಮಾನ್ಯ ಬಂಗಾರಪ್ಪನವರು ಮಾತನಾಡುತ್ತಾ ಮುದುಕರು, ಚಟ, ಚಪಲ ಎಂದೆಲ್ಲಾ ಪದಗಳನ್ನು ಉಪಯೋಗಿಸಿದರು. ಅದನ್ನೂ ಕೂಡ ಎಕ್ಸಪಂಜ್ ಮಾಡಬೇಕು. ಮತ್ತು ಗಂಡಸುತನ ಎಂದು ಉಪಯೋಗಿಸಿದ್ದು ಸರಿಯಲ್ಲ.

ಅಧ್ಯಕ್ಷರು: ನಾನು ರೂಲಿಂಗ್ ಕೊಡುತ್ತೇನೆ.

ಜೆ.ಹೆಚ್. ಪಟೇಲ್: ಸನ್ಮಾನ್ಯ ಅಧ್ಯಕ್ಷರೇ, ತಮ್ಮ ಅಪ್ಪಣೆ ಪಡೆದು ಕೆಲವು ಮಾತು ಹೇಳಲಿಚ್ಛಿಸುತ್ತೇನೆ. ಮಾನ್ಯ ಕೃಷ್ಣನ್‌ರವರು ಈ ಪದಗಳ ಬಗ್ಗೆ ಹೇಳಿದರು. ಶಬ್ದ ಕೆಟ್ಟದ್ದೇ ಆಗಿದ್ದರೂ ಉಪಯೋಗಿಸತಕ್ಕ ರೀತಿ ಅಶ್ಲೀಲ ಆಗಬಾರದು. ಗಂಡಸುತನ ಎನ್ನುವ ಪದವನ್ನು ಎಕ್ಸ್‌ಪಂಜ್ ಮಾಡಬೇಕು ಎಂದು ಅವರು ಹೇಳಿದರು. ಗಂಡಸುತನ ಎನ್ನುವ ಪದ ಅಶ್ಲೀಲ ಅಲ್ಲ. ಗಂಡಸಿಗೆ ಗಂಡಸುತನ ಇದೆ ಎಂದು ಹೇಳುತ್ತೇವೆಯೇ ಹೊರತು ಮಹಿಳೆಯರ ಹತ್ತಿರ ಹೋಗಿ ಕೇಳುವುದಕ್ಕಾಗುವುದಿಲ್ಲ. ಮಾನ್ಯ ಬಂಗಾರಪ್ಪನವರು ಮಹಿಳೆಯರೇ ಹೇಳಿ? ಗಂಡಸಿಗೆ ಗಂಡಸುತನ ಇದ್ದರೆ ಎಂದು ಹೇಳುವುದು ಅಶ್ಲೀಲವಲ್ಲ. ನಾನು ವಿಚಾರಕ್ಕೋಸ್ಕರ ಒಂದು ವಿಷಯವನ್ನು ಈ ಸಂದರ್ಭದಲ್ಲಿ ಹೇಳುತ್ತೇನೆ.

ಇದು ಹೌಸ್ ಆಫ್ ಕಾಮನ್ಸ್‌ನಲ್ಲಿ ನಡೆದಿರತಕ್ಕ ಘಟನೆ. ಬಾಲ್ಡ್ವಿನ್‌ರವರು ಇಂಗ್ಲೆಂಡಿನ ಪ್ರಧಾನ ಮಂತ್ರಿ ಆಗಿದ್ದಾಗ ಅಂದಿನ ವಿರೋಧ ಪಕ್ಷದ ನಾಯಕರು ಮಾತನಾಡುತ್ತಾ

ಮಾತನಾಡುತ್ತಾ, ಇವ ಏನೋ ಒಂದು ಸಿಫಿಲಿಸ್ ಬಂದ ಹಾಗೆ ಮಾತನಾಡುತ್ತಾರೆ ಎಂದು ಹೇಳಿದರು. ಅದಕ್ಕೆ ಪ್ರೈಂ ಮಿನಿಸ್ಟರ್ ಹೇಳಿದರು. ಅದು ನನಗೆ ಎಲ್ಲಿಂದ ಬಂತೋ ಗೊತ್ತಿಲ್ಲ. ಆದರೆ ಆಗಾಗ್ಗೆ ವಿರೋಧಪಕ್ಷದ ನಾಯಕರ ಮನೆಗೆ ಹೋಗುತ್ತಾ ಇರುತ್ತೇನೆ ಎಂದು. ಇದು ಹೌಸ್ ಆಫ್ ಕಾಮನ್ಸ್‌ನಲ್ಲಿ ರಿಕಾರ್ಡ್ಸ್ ಆಗಿರುವ ಮಾತು. ಆಗ ಸ್ಪೀಕರ್‌ರವರಿಗೆ ಅದನ್ನು ಎಕ್ಸ್‌ಪಂಜ್ ಮಾಡಬೇಕು ಎಂದು ಒತ್ತಾಯ ಬಂತು. ಸ್ಪೀಕರ್‌ರವರು ಪಾರ್ಲಿಮೆಂಟರಿ ಎಕ್ಸರ್‌ಸೈಜ್‌ನಲ್ಲಿ ಕೊಡುವುದು ತೆಗೆದುಕೊಳ್ಳುವುದು ಸೂಕ್ಷ್ಮವಾಗಿರುತ್ತದೆ, ಅದು ಒಂದು ರಿಕಾರ್ಡಾಗಿ ಉಳಿಯಬೇಕು ಎಂದು ಹೇಳಿ ಅದನ್ನು ಎಕ್ಸ್‌ಪಂಜ್ ಮಾಡಲಿಲ್ಲ. ಇವತ್ತಿಗೂ ಹಾಗೇ ಇದೆ.

ಮಾನ್ಯ ಬಂಗಾರಪ್ಪನವರು ಜುಡಿಶಿಯಲ್ ಎನ್‌ಕ್ವೈರಿ ಆಗಬೇಕು ಎಂದು ಕೇಳಿದರು. ಮಾನ್ಯ ಮುಖ್ಯಮಂತ್ರಿಗಳು ಜುಡಿಶಿಯಲ್ ಎನ್‌ಕ್ವೈರಿಯಾಗಿ ಆಪಾದನೆ ಸಾಬೀತಾದರೆ ನಾನು ರಾಜೀನಾಮೆ ಕೊಡುತ್ತೇನೆ. ಇಲ್ಲದೇ ಹೋದರೆ ನೀವು ರಾಜೀನಾಮೆ ಕೊಡಿ, ನಿಮಗೆ ಗಂಡಸುತನ ಇದ್ದರೆ ನೀವು ಒಪ್ಪಿಕೊಳ್ಳಿ ಎಂದು ಹೇಳಿದರೇ ಹೊರತು.

(ಗೊಂದಲ)

ಒಂದು ಲಗ್ನದ ಬಗ್ಗೆ ಹೇಳಿದರೆ ತಪ್ಪಾಗುತ್ತದೆ. ಈಗ ಜುಡಿಶಿಯಲ್ ಎನ್‌ಕ್ವೈಯಿರಿ ವಿಚಾರದಲ್ಲಿ ಗಂಡಸುತನ ಇದ್ದರೆ ಒಪ್ಪಿಕೊಳ್ಳಿ ಎನ್ನುವ ಬಗ್ಗೆ ಹೇಳಿದ್ದಾರೆ. ಇದರ ಬಗ್ಗೆ ಸಮಗ್ರವಾಗಿ ತೆಗೆದುಕೊಂಡರೆ ಯಾವ ದೃಷ್ಟಿಯಿಂದ ಹೋಲಿಸಿದರೂ ಗಂಡಸುತನ ತೋರಿಸಿಕೊಳ್ಳುವುದೇ ಇದೆ. ಜುಡಿಶಿಯಲ್ ಎನ್‌ಕ್ವಯಿರಿ ಒಪ್ಪಿಕೊಳ್ಳುವ ಬಗ್ಗೆ ವಿಚಾರ ಇದೆಯೇ ಹೊರತು ಶಬ್ದಗಳಲ್ಲಿ ಅಶ್ಲೀಲ ಏನೂ ಇಲ್ಲ. ಆದ್ದರಿಂದ, ಜುಡಿಷಿಯಲ್ ಎನ್‌ಕ್ವಯಿರಿ ವಿಚಾರಕ್ಕೆ ಒಪ್ಪಿಕೊಂಡು ಗಂಡಸುತನ ತೋರಿಸಲಿ.

ಎಸ್. ಬಂಗಾರಪ್ಪ: ಮಾನ್ಯ ಅಧ್ಯಕ್ಷರೆ ಈ ಸದನದಲ್ಲಿ ನಾವು ಗೌರವಯುತವಾಗಿ ಕಾರ್ಯಕಲಾಪಗಳನ್ನು ನಡೆಸಬೇಕಾಗುತ್ತದೆ. ಎಷ್ಟೋ ವಿಚಾರಗಳು ಸೀರಿಯಸ್ ಆಗಿ ತೆಗೆದುಕೊಂಡು ಹೋಗುವಂಥ ವಿಚಾರಗಳಿದ್ದರೂ ಕೆಲವು ಸಾರಿ ಬಹಳ ಎತ್ತರದ ಚರ್ಚೆಯಿಂದ ಏನೋ ಸಿಟ್ಟು ಬಂದಿದೆ ಎನ್ನುವ ಭಾವನೆ ಬಂದರೂ ಕೂಡ ಪದಗಳ ಪ್ರಯೋಗವನ್ನು ಮಾಡಬಾರದು. ಇಲ್ಲಿ ಹೆಣ್ಣುಮಕ್ಕಳು ಸದಸ್ಯರಾಗಿ ಬಂದಿರುವ ಸಂದರ್ಭದಲ್ಲಿ ಈ ರೀತಿಯ ಪದಗಳ ಪ್ರಯೋಗ ಅಷ್ಟೊಂದು ಒಳ್ಳೆಯದಲ್ಲ ಎನ್ನುವುದು ನನ್ನ ಮನಸ್ಸಿನಲ್ಲಿ ಇದೆ. ನಾನು ಅನಾವಶ್ಯಕವಾಗಿ ಹೇಳುವವನಲ್ಲ. ಮುಖ್ಯಮಂತ್ರಿಗಳು ಆಡಿದ ಮೇಲೆ ಉತ್ತರ ಕೊಡದೇ ಹೋದರೆ ಕಷ್ಟವಾಗುತ್ತದೆ. ಪದಗಳ ಪ್ರಯೋಗದ ವಿಚಾರದಲ್ಲಿ ನಾನಾಗಿಯೇ ಮಾಡುವುದಿಲ್ಲ. ಹಿಂದೆ ಮಾನ್ಯ ವೀರಪ್ಪಮೊಯಿಲಿಯವರು ವಿರೋಧ ಪಕ್ಷದ ನಾಯಕರಾಗಿದ್ದಾಗ ಪದಗಳ ಪ್ರಯೋಗ ನಡೆದಿವೆ. ನಾನು ಹಿಂದಿನ ವಿಚಾರಗಳನ್ನು ಪ್ರಸ್ತಾಪ ಮಾಡಲಿಕ್ಕೆ ಹೋಗುವುದಿಲ್ಲ. ನಾನು ಮಾನ್ಯ ಮುಖ್ಯಮಂತ್ರಿಗಳಲ್ಲಿ ಈಗಲೂ ಕೂಡ ವಿನಂತಿ ಮಾಡಿಕೊಳ್ಳುತ್ತೇನೆ. ಮಾನ್ಯ ಸಭಾನಾಯಕರು ಅಂತಹ ಪದಗಳನ್ನು ಪ್ರಯೋಗ ಮಾಡಿ ಇಲ್ಲಿ ಚರ್ಚೆಗೆ ತರುವುದು ಒಳ್ಳೆಯದು

ಅಲ್ಲ. ಎಷ್ಟೇ ಸಿಟ್ಟು ಮಾಡಿ ಮಾತನಾಡಿದರೂ ಪದಗಳ ಪ್ರಯೋಗದ ವಿಚಾರದಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕಾಗುತ್ತದೆ. ಈಗ ಮಾನ್ಯ ಸದಸ್ಯರು ಆ ಪದಗಳನ್ನು ತೆಗೆದುಹಾಕಬೇಕೆಂದು ಏನು ಹೇಳಿದ್ದಾರೆ ಅದಕ್ಕೆ ನಾನು ಬೆಂಬಲವನ್ನು ಕೊಡುತ್ತೇನೆ. ಏಕೆಂದರೆ ಈ ವಿಚಾರವೆಲ್ಲಾ ನಾಳೆ ಪತ್ರಿಕೆಗಳಲ್ಲಿ ಹೋಗಿ ಜನರು ಈ ಸದನದ ಮಟ್ಟ ಈ ರೀತಿಗೆ ಹೋಗಿದೆ ಎಂದು ಹೇಳುವುದು ಸರಿಯಲ್ಲ. ಇನ್ನು ಮಾನ್ಯ ಮಂತ್ರಿಗಳಾದ ಜೆ.ಹೆಚ್. ಪಟೇಲ್‌ರವರು ಹೌಸ್ ಆಫ್ ಕಾಮನ್ಸ್‌ನಲ್ಲಿ ಇರತಕ್ಕ ಸಮಾಜದ ರೀತಿ ನೀತಿಗಳನ್ನು ಹೇಳಿದರು. ಇಲ್ಲಿ ಹೆಣ್ಣುಮಕ್ಕಳನ್ನು ಗೌರವದಿಂದ ಕಾಣುವ ಪದ್ಧತಿ ಇರುವುದರಿಂದ ನಮ್ಮಂತಹ ಸಮಾಜಕ್ಕೆ ಅದು ಒಳ್ಳೆಯದಲ್ಲ. ದಯವಿಟ್ಟು ಆ ಪದವನ್ನು ತೆಗೆದುಹಾಕುವುದು ಒಳ್ಳೆಯದು ಎಂದು ನಾನು ಅಧ್ಯಕ್ಷರಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ. ಗಂಡಸುತನ ಪದವನ್ನು ಬಿಡೋಣ.

(ಗೊಂದಲ)

(ಸುಮಾರು ಒಂದು ತಾಸಿನ ಗೊಂದಲ, ಆರೋಪ, ಪ್ರತ್ಯಾರೋಪ, ಇತ್ಯಾದಿ ಮಾತುಕತೆ ನಂತರ)

**ಅಧ್ಯಕ್ಷರು:** ಮುಖ್ಯಮಂತ್ರಿಗಳು ಏನು ಹೇಳುತ್ತಾರೆಂಬುದನ್ನು ಕೇಳೋಣ. ಎಲ್ಲರೂ ಕುಳಿತುಕೊಳ್ಳಿ.

**ಪಂಪಾಪತಿ:** ಮಾನ್ಯ ಅಧ್ಯಕ್ಷರೇ, ಈ ಗೊಂದಲವನ್ನೆಲ್ಲಾ ಜನರು ಮೇಲಿನಿಂದ ನೋಡುತ್ತಿದ್ದಾರೆ. ಆದ್ದರಿಂದ ತಾವು ಸೂಕ್ತ ಕ್ರಮ ತೆಗೆದುಕೊಳ್ಳಬೇಕು.

**ಅಧ್ಯಕ್ಷರು:** ಅನ್-ಪಾರ್ಲಿಮೆಂಟರಿ ಪದಗಳು ಏನಾದರೂ ಇವೆಯೇ ಎಂಬುದನ್ನು ನಾನು ನೋಡುತ್ತೇನೆ. ತಾವು ಕುಳಿತುಕೊಳ್ಳಿ.

**ರಾಮಕೃಷ್ಣ ಹೆಗಡೆ:** ಸಂಸದೀಯ ವ್ಯವಹಾರದಲ್ಲಿ....

**ಎಂ. ಮಲ್ಲಿಕಾರ್ಜುನ ಖರ್ಗೆ:** ಮಾನ್ಯ ಅಧ್ಯಕ್ಷರೇ, ನನ್ನದೊಂದು ಕ್ರಿಯಾಲೋಪವಿದೆ. ಏನೆಂದರೆ, ಈ ಮೊದಲು ಮಾನ್ಯ ಕೃಷ್ಣನ್ ಅವರು ನಿಯಮ 310ರ ಪ್ರಕಾರ ಏನು ಕ್ರಿಯಾಲೋಪ ಎತ್ತಿದ್ದರು, ಅದಕ್ಕೆ ತಾವು ರೂಲಿಂಗ್ ಕೊಡಬೇಕು.

**ಅಧ್ಯಕ್ಷರು:** ನಾನು ಇವೊತ್ತು ರೂಲಿಂಗ್ ಕೊಡುತ್ತೇನೆ.

(ಗೊಂದಲ)

**ಅಧ್ಯಕ್ಷರು:** ಎಲ್ಲರೂ ಏಕಕಾಲದಲ್ಲಿ ಎದ್ದುನಿಂತು ಮಾತನಾಡಿದರೆ ಕಷ್ಟವಾಗುತ್ತದೆ. ಎಲ್ಲರೂ ಕುಳಿತುಕೊಳ್ಳಿ.

**ಎಂ. ಮಲ್ಲಿಕಾರ್ಜುನ ಖರ್ಗೆ:** ತಾವು ಮೊದಲು ರೂಲಿಂಗ್ ಕೊಡಿ.

**ರಾಮಕೃಷ್ಣ ಹೆಗಡೆ:** ಅವರು ಅಧಿಕೃತ ಕಡತವನ್ನು ನೋಡಿ ರೂಲಿಂಗ್ ಕೊಡುತ್ತಾರೆ. ಇದು ನಿಜಕ್ಕೂ ನಮ್ಮ ಘನತೆಗೆ ಸರಿಯಾದುದಲ್ಲ. ನಾವು ಯಾವ ದಾರಿಯಲ್ಲಿ ಹೋಗಬೇಕೋ ಆ ದಾರಿಯಲ್ಲಿ ಹೋಗುತ್ತಿಲ್ಲ. ಆ ಕಡೆಯವರು ಒಂದು ಮಾತನ್ನು ತಿಳಿದುಕೊಳ್ಳಬೇಕು. ಏನೆಂದರೆ, ಏನಾದರೂ ಒಂದು ವಿಷಯವನ್ನು ಇಲ್ಲಿ ಪ್ರಸ್ತಾಪ ಮಾಡಿದ ಮೇಲೆ ಅದಕ್ಕೆ ಉತ್ತರ ಪಡೆಯಲು ತಯಾರಿಲ್ಲ ಎಂದರೆ ಯಾವ ರೀತಿ ಸರಿ ಹೋಗುತ್ತದೆ? ಕೊಡುವುದು ಮತ್ತು ತೆಗೆದುಕೊಳ್ಳುವುದು ಈ ಎರಡಕ್ಕೂ ಸಿದ್ಧರಿರಬೇಕು. ಈ ಕಡೆಯಿಂದ ಏನಾದರೂ ಚುಚ್ಚು ಮಾತುಗಳನ್ನು ಹೇಳಿದರೆ ಇಲ್ಲವೇ ಆ ಕಡೆಯಿಂದ ಏನಾದರು ಚುಚ್ಚು ಮಾತುಗಳನ್ನು ಕೇಳಿದರೆ ಸಹಿಸಿಕೊಳ್ಳಬೇಕಾಗುತ್ತದೆ.

ಈ ಮಾತನ್ನು ನಾನು ಏತಕ್ಕೆ ಹೇಳಿದೆ ಎಂದರೆ, ಈ ಒಂದು ಪ್ರಕರಣದಲ್ಲಿ ನ್ಯಾಯಾಂಗ ತನಿಖೆಯಾಗಬೇಕೆಂದು ಕೇಳಿದರು. ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಎಲ್ಲದಕ್ಕೂ ನ್ಯಾಯಾಂಗ ತನಿಖೆಯಾಗಬೇಕು ಎಂದು ಹೇಳಿದರೆ ಸಾಧ್ಯವಿಲ್ಲ.

ಈ ಪ್ರಕರಣದಲ್ಲಿ ಸಾಮಾನ್ಯ ಜನತೆಗೆ ತಪ್ಪು ತಿಳಿವಳಿಕೆಯಾಗಲೀ, ಅನುಮಾನವಾಗಲೀ, ಸಂದೇಹವಾಗಲೀ ಬಂದರೆ, ಅದು ನಿವಾರಣೆಯಾಗಲಿ ಮತ್ತು ಸತ್ಯ ಸಂಗತಿ ಹೊರಬರಲಿ ಎಂಬ ಉದ್ದೇಶದಿಂದ ನ್ಯಾಯಾಂಗ ತನಿಖೆ ಮಾಡಿಸುತ್ತೇನೆಂದು ಹೇಳಿದೆ. ಇದಕ್ಕೆ ನಾನು ಒಂದು ಷರತ್ತು ಹಾಕಿದೆ, ಏನೆಂದರೆ, ಈ ಪ್ರಕರಣದಲ್ಲಿ ಸರ್ಕಾರದಿಂದ ದುರ್ವ್ಯವಹಾರ ನಡೆದಿಲ್ಲ ಎಂದು ನ್ಯಾಯಾಂಗ ತನಿಖೆಯಿಂದ ಏನಾದರೂ ತೀರ್ಮಾನವಾದರೆ ಅವರು ರಾಜೀನಾಮೆ ಕೊಡಬೇಕೆಂದು ಹೇಳಿದೆ. ಆದರೆ ಅವರು ಕೊಡುವುದಿಲ್ಲವೆಂದು ಹೇಳಿದರು. ಇದರ ಅರ್ಥವೇನೆಂದರೆ, ಅವರಿಗೆ ಎದೆಗಾರಿಕೆ ಇಲ್ಲ, ನೈತಿಕ ಬಲವಿಲ್ಲ ಎಂದು ಸ್ಪಷ್ಟವಾಯಿತು. ಆದರೂ ಈ ಬಗ್ಗೆ ನಾನು ನ್ಯಾಯಾಂಗ ತನಿಖೆ ಮಾಡಿಸುತ್ತೇನೆ.

ಅಧ್ಯಕ್ಷರು ಈ ವಿಷಯ ಇಲ್ಲಿಗೆ ಮುಕ್ತಾಯವಾಯಿತು.

(ಗೊಂದಲ)

**ಅಧ್ಯಕ್ಷರು:** ಈ ವಿಷಯವನ್ನು ಇಲ್ಲಿಗೆ ಮುಕ್ತಾಯ ಮಾಡೋಣ. ಎಲ್ಲರೂ ದಯಮಾಡಿ ಕುಳಿತುಕೊಳ್ಳಿ. ಈಗ ಮುಂದಿನ ವಿಷಯಕ್ಕೆ ಹೋಗೋಣ. ಈಗ ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು...

(ವಿಧಾನಸಭೆ ಕಲಾಪ ಮಾರ್ಚಿ 27, 1985)

## ಶಾಸಕರ ಮನಮಿಡಿತ : ರೂಲ್ಸ್‌ಗಿಂತ ದೊಡ್ಡದು

ವಿಧಾನಸಭೆಯ ಸ್ಪೀಕರ್‌ರವರಾಗಲೀ, ವಿಧಾನಪರಿಷತ್ತಿನ ಸಭಾಪತಿಗಳಾಗಲೀ ನಿಯಮಾವಳಿಗಳನ್ನು ಬಿಟ್ಟು ಕೆಲಸ ಮಾಡಬೇಕು ಎಂದು ನಾನು ಹೇಳುವುದಿಲ್ಲ. ನಿಯಮಾವಳಿಗಳು ಬೇಕು. ಆದರೆ ಕರಾರುಪಕ್ಕಾಗಿ, ಕೊಂಚವೂ ಉಸಿರುಸಡಿಲಿಸದಂತೆ,

ನಿಯಮವನ್ನು ಕಡ್ಡಾಯವಾಗಿ ಪಾಲಿಸುವುದಕ್ಕಾಗುವುದಿಲ್ಲ. ಹಾಗೆಂದು ರೂಲ್ಸ್‌ಗಳನ್ನು ಗಾಳಿಗೆ ತೂರುವುದೂ ಸಲ್ಲ.

ಸಭಾಧ್ಯಕ್ಷರು ಮತ್ತು ಸಭಾಪತಿಗಳ ನಿರ್ದೇಶನದಂತೆಯೇ ಸದನಗಳು ನಡೆಯಬೇಕು. ಸಮಸ್ಯೆಯ ಗಂಭೀರತೆ ಅರಿತು, ಸದಸ್ಯರ ಭಾವನೆಗಳನ್ನು ಅರಿತು, ಸಂದರ್ಭವನ್ನು ನಿಭಾಯಿಸಬೇಕು. ಆವೇಶಸಲ್ಲದು. ಇದು ಶಾಸಕರಿಗೂ ಅನ್ವಯಿಸುತ್ತದೆ. ಸ್ವಾಭಾವಿಕವಾಗಿ ಎಲ್ಲ ಮನುಷ್ಯರಿಗೂ ಭಾವನೆಗಳು ಇದ್ದೇ ಇರುತ್ತವೆ. ಇದನ್ನರಿತು ಸಭಾಧ್ಯಕ್ಷ-ಸಭಾಪತಿಗಳು ಸದನವನ್ನು ಕೊಂಡೊಯ್ಯಬೇಕು, ಮಾರ್ಗದರ್ಶಕರಾಗಬೇಕು.

ಇದಕ್ಕೆ ಒಂದು ನಿದರ್ಶನ ಕೊಡುತ್ತೇನೆ.

ಇದು ಲೋಕಸಭೆಯ ಸದಸ್ಯನಾಗಿದ್ದ ನನ್ನ ಕಾಲದ ವಿಷಯ.

ಮಾನ್ಯ ಮಾವಳಂಕರ್ ಕಾಲದಲ್ಲಿ ಇದ್ದಂತಹ ಲೋಕಸಭೆ ಈಗ ಇಲ್ಲ. ಸಂಜೀವರೆಡ್ಡಿಯವರು ಲೋಕಸಭಾಧ್ಯಕ್ಷರಾಗಿದ್ದಾಗ ಅವರ ಆ ಪದವಿ ಅವಧಿ ಮುಗಿದ ಮೇಲೆ ನಾನು ಮತ್ತು ನನ್ನ ಸ್ನೇಹಿತರೊಬ್ಬರು ಅವರನ್ನು ಭೇಟಿಯಾದೆವು. ತಾವು ಯಶಸ್ವಿಯಾಗಿ ಅಧ್ಯಕ್ಷ ಸ್ಥಾನ ನಿರ್ವಹಿಸಿದಿರಿ. ಈ ಯಶಸ್ಸಿನ ರಹಸ್ಯ ಏನು ಎಂದು ಕೇಳಿದೆವು. 'I never read rules.' ಎಂದು ಮಾನ್ಯ ಸಂಜೀವರೆಡ್ಡಿ ಹೇಳಿದರು. ಹಾಗಾದರೆ ನೀವು ಓದಿದ್ದಾದರೂ ಏನನ್ನು ಎಂದು ಕೇಳಿದೆವು. 'I read the feelings of the Members' ಎಂದರು ರೆಡ್ಡಿಯವರು.

(ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ) ವಿಧಾನ ಸಭೆ ಡಿಸೆಂಬರ್ 27, 1994)

## ರಂಗನಾಥ್, ಬೊಮ್ಮಾಯಿ – ಇವರ ಬಗೆಗೆ ಕಾಳಜಿ

**ಕೆ.ಹೆಚ್. ರಂಗನಾಥ್:** (ಕೊಂಚ ಎತ್ತರದ ದನಿಯಲ್ಲಿ) ನನ್ನ ಕ್ಷೇತ್ರದಲ್ಲಿ 108 ಮನೆಗಳು ಬೆಂಕಿಯಲ್ಲಿ ಸುಟ್ಟು ಹೋಗಿವೆ. ಈ ವಿಷಯ ತಿಳಿಸಿ ಬರೆದರೆ ಸರ್ಕಾರದಿಂದ ಒಂದು ಉತ್ತರವಿಲ್ಲ. ಹೇಳೀ ಸ್ವಾಮಿ, ಏನು ಮಾಡೋಣ ಹೇಳಿ.

**ಮಲ್ಲಿಕಾರ್ಜುನ ಖರ್ಗೆ:** (ಇಂಗ್ಲೀಷಿನಲ್ಲಿ) ಈ ವಿಷಯದ ಬಗೆಗೆ ಸರ್ಕಾರದ ಗಮನ ಸೆಳೆಯಲು ಸತತ ಪ್ರಯತ್ನ ನಡೆಸಿದ್ದೇವೆ. ಈವರೆಗೆ ಏನೇನೂ ಸಾಧ್ಯವಾಗಿಲ್ಲ. ಹೀಗಾದರೆ ಏನುಗತಿ ?

**ಎಸ್.ಆರ್. ಬೊಮ್ಮಾಯಿ (ಕೈಗಾರಿಕಾ ಸಚಿವರು):** (ಅಷ್ಟೇ ಎತ್ತರದ ದನಿಯಲ್ಲಿ) ತಾವೆಲ್ಲಾ ಹಿಂದೆ ಮಂತ್ರಿಗಳಾಗಿದ್ದಾಗ ಯಾವ ರೀತಿ ನಡೆದುಕೊಂಡಿದ್ದೀರಿ ಎಂದು ಜನ ನೋಡಿದ್ದಾರೆ.

ಜೆ.ಹೆಚ್. ಪಟೇಲ್ (ವಿದ್ಯುಚ್ಛಕ್ತಿ ಸಚಿವರು): (ಸಮಾಧಾನ ಮಾಡುವ ದನಿಯಲ್ಲಿ) ಮಾನ್ಯ ಉಪಾಧ್ಯಕ್ಷರೇ, ಮಾನ್ಯ ಸದಸ್ಯರಾದ ರಂಗನಾಥ್‌ರವರು ಇಂದು ಸ್ವಲ್ಪ ಆವೇಶದಿಂದ ಮಾತನಾಡಿದ್ದನ್ನು ನಾನು ನೋಡಿದೆ. ಅವರು ಸಾಕಷ್ಟು ಅನುಭವಿಗಳು. ಅತ್ಯಂತ ಹಿರಿಯರು. ಅವರಿಗೆ ಸ್ವಲ್ಪ ರಕ್ತದ ಒತ್ತಡ ಇರುವುದನ್ನು ನಾನು ಗಮನಿಸಿದ್ದೇನೆ. ಮಾನ್ಯ ಮಂತ್ರಿಗಳಾದ ಬೊಮ್ಮಾಯಿಯವರಿಗೂ ಬ್ಲಡ್ ಪ್ರೆಷರ್ ಇದೆ. ನನ್ನದೊಂದು ಪ್ರಾರ್ಥನೆ. ದಯಮಾಡಿ ಗಮನಿಸಿ. ನೀವಿಬ್ಬರೂ ಹಿರಿಯರು - ನಮ್ಮ ದೇಶಕ್ಕೆ ಆಸ್ತಿ ಇದ್ದಂತೆ. ತಮ್ಮಗಳ ಆರೋಗ್ಯದ ದೃಷ್ಟಿಯಿಂದ ತೀರಾ ಇಷ್ಟು ಆವೇಶ ತಪ್ಪು. ಇದು ಬೇಡವೇ ಬೇಡ.

(ವಿಧಾನ ಸಭೆ ಕಲಾಪ, ಮಾರ್ಚಿ 29, 1983)

## ಸಭಾಧ್ಯಕ್ಷರು : ಸರಿಮಾರ್ಗಕ್ಕೆ ತರುವವರು

### (ಸಂದರ್ಭ: ಮಾನ್ಯ ಕೆ.ಹೆಚ್. ರಂಗನಾಥ್‌ರವರು ಆರನೆಯ ವಿಧಾನಸಭೆಯ ಅಧ್ಯಕ್ಷರಾಗಿ ಆಯ್ಕೆಯಾದಾಗ)

ಆಳುವ ಪಕ್ಷ ಮತ್ತು ವಿರೋಧಪಕ್ಷಗಳೆರಡೂ ಸಂಸದೀಯ ಪ್ರಜಾತಂತ್ರದಲ್ಲಿ ಒಂದು ರಥದ ಎರಡು ಗಾಲಿಗಳು ಇದ್ದ ಹಾಗೆ. ಎರಡೂ ಪಕ್ಷಗಳಿಗೆ ತಮ್ಮದೇ ಆದ ಜವಾಬ್ದಾರಿ ಇರುತ್ತದೆ. ಹೌಸ್ ಆಫ್ ಕಾಮನ್ಸ್‌ನ ಅಧ್ಯಕ್ಷರೊಬ್ಬರು ಹೇಳಿದ ಮಾತು ಹೀಗಿದೆ: One ounce of indiscipline on part of the ruling party is equal to one tonne of indiscipline on part of the opposition. ಜನರ ಸಮಸ್ಯೆಗಳು ಬಂದಾಗ ನಾವು ನಿಯಮಗಳ ಪ್ರಕಾರ ತಮ್ಮ ಅನುಮತಿ ಪಡೆದು ಸರ್ಕಾರದ ಗಮನ ಸೆಳೆಯುತ್ತೇವೆ. ಆಳುವ ಪಕ್ಷ ದಾರಿ ತಪ್ಪಿದಾಗ ಅದನ್ನು ದಾರಿಗೆ ತರುವ ಗುರುತರ ಹೊಣೆಗಾರಿಗೆ ನಮ್ಮದು.. ಆಗ ತಾವು ನಮ್ಮ ಕಡೆ ಇರಬೇಕಾಗುತ್ತದೆ. ... ಇಂದು ಈ ಸದನಗಳ ಬಗೆಗೆ ಜನರ ಗೌರವ ಕಡಿಮೆಯಾಗುತ್ತಿದೆ. ಇದು ದುರಾದೃಷ್ಟಕರ.. ಈ ಗೌರವ ಮೊದಲಿನಂತೆ ಇರುವ ಹಾಗೆ ನಾವೆಲ್ಲರೂ ನೋಡಿಕೊಳ್ಳೋಣ... ತಪ್ಪು ಮಾಡಿದವರನ್ನು ಸರಿಯಾದ ಮಾರ್ಗಕ್ಕೆ ತರುವವರು ತಾವು .. ನನ್ನ ನಿಮ್ಮ ವೈಯಕ್ತಿಕ ಸಂಬಂಧದ ಬಗೆಗೆ ಇಲ್ಲಿ ಹೇಳುವುದಿಲ್ಲ. ಏತಕ್ಕೆಂದರೆ ನಾವು-ನೀವು ಬಹಳ ಹಳೆಯ ಸ್ನೇಹಿತರು...

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ : ಜನವರಿ 30, 1981)

## ಸದನಗಳ ಗೌರವ : ನಮ್ಮ ಹೊಣೆ

### (ಸಂದರ್ಭ: ಮಾನ್ಯ ರಮೇಶ್‌ಕುಮಾರ್‌ರವರು ವಿಧಾನ ಸಭೆಯ ಅಧ್ಯಕ್ಷರಾಗಿ ಆಯ್ಕೆಯಾದಾಗ)

ಇಂದಿನ ಸಮಾಜದಲ್ಲಿ ಉದ್ಭವಿಸಬಹುದಾದಂತಹ ಎಲ್ಲ ಸಮಸ್ಯೆಗಳ ಪ್ರತಿಬಿಂಬವೇ ಸಂಸತ್ತು ಮತ್ತು ವಿಧಾನಮಂಡಲ. ಸಮಾಜದಲ್ಲಿ ಶಾಂತಿ ಇಲ್ಲದಿದ್ದಾಗ ಸಂಸದೀಯ ಕಲಾಪಗಳಲ್ಲಿಯೂ ಶಾಂತಿ ಇರುವುದಿಲ್ಲ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಕರ್ನಾಟಕದ ಜನತೆ ನಮ್ಮ ವಿಧಾನ ಮಂಡಲಗಳಿಂದ ಅತಿ ಹೆಚ್ಚಿನ ಸಾಧನೆಯನ್ನು ನಿರೀಕ್ಷಿಸುತ್ತಿದ್ದಾರೆ. ತಮ್ಮ ಸಮಸ್ಯೆಗಳ ಕಡೆಗೆ ಶಾಸಕರು ಗಮನ ನೀಡುವರೆಂದು ಅವರು ನಂಬಿದ್ದಾರೆ.

ನಿಜ, ನಾವು ಜನರ ನಿರೀಕ್ಷೆ ಮತ್ತು ಕಷ್ಟಕಾರ್ಪಣ್ಯಗಳತ್ತ ಇನ್ನೂ ತೀವ್ರಗಮನ ನೀಡಬೇಕಾಗಿದೆ. ಈ ಮಾತು ಆಡಳಿತ ಪಕ್ಷ ಮತ್ತು ವಿರೋಧ ಪಕ್ಷಗಳೆರಡಕ್ಕೂ ಅನ್ವಯಿಸುತ್ತದೆ.

ಲೋಕಸಭೆಯೇ ಇರಲಿ, ರಾಜ್ಯಸಭೆ, ವಿಧಾನ ಪರಿಷತ್ತು ಇಲ್ಲವೇ ವಿಧಾನ ಸಭೆಯೇ ಆಗಿರಲಿ. ಜನರ ನಿರೀಕ್ಷೆಯಲ್ಲಿ ಇಂದು ಈ ಸದನಗಳು ಗೌರವ ಕಳೆದುಕೊಂಡಿವೆ. ಪ್ರಯತ್ನ ಮಾಡೋಣ. ಸದನಗಳ ಗೌರವವನ್ನೂ, ರಾಜ್ಯಾಂಗದತ್ತವಾದ ಈ ಪ್ರಜಾತಂತ್ರ ಸಂಸ್ಥೆಗಳ ಗೌರವವನ್ನೂ ಮತ್ತೆ ತಂದುಕೊಡೋಣ. ಮರ್ಯಾದೆಯನ್ನು ಕಾಪಾಡೋಣ.

(ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ) ವಿಧಾನಸಭೆ, ಡಿಸೆಂಬರ್ 27, 1994)

## ರಾಜ್ಯದ ವಿಧಾನ ಮಂಡಲ : ದೇಶಕ್ಕೆ ಮಾದರಿ

ಕರ್ನಾಟಕ ವಿಧಾನ ಮಂಡಲದ ಉಭಯ ಸದನಗಳು ಇಡೀ ದೇಶದಲ್ಲಿಯೇ ಮಾದರಿ ಎನ್ನಬಹುದು. ನಮ್ಮ ಶಾಸಕರು 'ಸಭ್ಯರು'. ಬೇರೆ ರಾಜ್ಯಗಳ ವಿಧಾನಸಭೆಯಲ್ಲಿ ನಡೆಯುವ ಹಾಗೆ ತೋಳು ಮುದುರಿ, ಕುರ್ಚಿ ಹಿಡಿದು ಹೊಡೆದಾಡುವಷ್ಟು ಅಸಭ್ಯತನ ನಮಗೆ ಬಂದಿಲ್ಲ. ಅಷ್ಟು ಅಸಭ್ಯರು ಏಕೆ ಇಲ್ಲ ಎಂದರೆ ನಮ್ಮ ರಾಜ್ಯದ ಜನರು ಸಭ್ಯರಾಗಿದ್ದಾರೆ. ಅಂಥ ಅಸಭ್ಯ ನಡವಳಿಕೆಯನ್ನು ನಮ್ಮ ಜನ ಸಹಿಸುವುದಿಲ್ಲ.

ಅಸಭ್ಯ ನಡವಳಿಕೆ ತಮಿಳುನಾಡಿನಲ್ಲಿ ನಡೆಯುಬಹುದು, ಆಂಧ್ರಪ್ರದೇಶದಲ್ಲಿ ನಡೆಯಬಹುದು; ಬಿಹಾರದಲ್ಲಂತೂ ಅಲ್ಲಿಯ ವಿಧಾನಸಭೆಯಲ್ಲಿ ಹೊಡೆದಾಟ ನಡೆಯದಿದ್ದರೆ ಅಲ್ಲಿಯ ಜನ ನಂಬುವುದೇ ಇಲ್ಲ. ಏಕೆಂದರೆ ಅಲ್ಲಿಯ ಜನರಿಗೆ ಅದೇ ತರಹವ ಹೊಡೆದಾಟ ಬೇಕು. ಅಲ್ಲಿರುವಂಥವರು ಅದೇ ತರಹದ ಜನ. ಪೈಲ್ವಾನ್‌ಗಿರಿ ಮಾಡಿ ಯಾರು ಕುಸ್ತಿ ಮಾಡುತ್ತಾನೋ ಅವನೇ ಅಲ್ಲಿ ದೊಡ್ಡವನು. ಸಧ್ಯ ನಮ್ಮಲ್ಲಿ ಹಾಗಿಲ್ಲ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಜುಲೈ 22, 1999)

## ಸಂಸದೀಯ ಸಂಸ್ಥೆಗಳಿಗೆ ಗೌರವ ಕೊಡಿ

**ಅಧಿವೇಶನ ನಡೆಯುವ ಸಮಯಗಳಲ್ಲಿ ಸಾಧ್ಯವಿದ್ದ ಮಟ್ಟಿಗೂ ರಾಜ್ಯದ ಮುಖ್ಯಮಂತ್ರಿಯು ರಾಜಧಾನಿಯಲ್ಲಿಯೇ ಇದ್ದು ಸದನದ ಕಲಾಪಗಳಲ್ಲಿ ಭಾಗವಹಿಸಬೇಕೆಂಬುದು ಪಟೇಲರ ಸದಿಚ್ಛೆ. ಪ್ರತಿಪಕ್ಷದಲ್ಲಿದ್ದಾಗ ಪಟೇಲರು ಮೇಲಿಂದ ಮೇಲೆ ಈ ಮಾತನ್ನು ಹೇಳಿದ್ದುಂಟು.**

ಅಂದಿನ ಮುಖ್ಯಮಂತ್ರಿ ಶ್ರೀ ದೇವರಾಜ ಅರಸುರವರು ಹಲವಾರು ರಾಜಕೀಯ ಬೆಳವಣಿಗೆಗಳ ಒತ್ತಡದಿಂದ ವಿಧಾನ ಮಂಡಲಗಳ ಅಧಿವೇಶನದ ಸಂದರ್ಭದಲ್ಲಿ ರಾಜ್ಯದಿಂದ ಹೊರಗೆ ಹೋಗಬೇಕಾಗಿಬರುತ್ತಿತ್ತು. ಸಂಸದೀಯ ವ್ಯವಹಾರಗಳಲ್ಲಿ ಇದು ಸಲ್ಲದು. ಸದನಕ್ಕೆ ಅಗೌರವ ತೋರಿಸಿದಂತಾಗುತ್ತದೆ. ಆದಕಾರಣ ಸಭಾಧ್ಯಕ್ಷರು ಸಭಾನಾಯಕರಾದ ಮುಖ್ಯಮಂತ್ರಿಗೆ ಉಪದೇಶ ಮಾಡಬೇಕು ಎಂಬುದು ಪಟೇಲರ ಒತ್ತಾಸೆ.

ಅಧಿಕೃತ ಕಲಾಪಗಳಿಗಾಗಿ ಅಥವಾ ಕೇಂದ್ರ ಸರ್ಕಾರದೊಂದಿಗೆ ಕಾರ್ಯ ಸಮನ್ವಯಕ್ಕಾಗಿ ಮುಖ್ಯಮಂತ್ರಿ ಹೊರಗೆ ಉಳಿಯುವ ಸಂದರ್ಭಗಳಿದ್ದಲ್ಲಿ ಮಾತ್ರ ಇದು ಅನಿವಾರ್ಯ. ತಪ್ಪೇನೂ ಇಲ್ಲ ಎಂದು ಪಟೇಲರು ಅಭಿಪ್ರಾಯಪಡುತ್ತಿದ್ದರು.

ಇಂತಹ ಒಂದು ಸಂದರ್ಭ:

ನಮ್ಮ ಸಂಸತ್ತು ಮತ್ತು ವಿಧಾನಮಂಡಲಗಳು ಬ್ರಿಟಿಷ್ ಸಂಸದೀಯ ವ್ಯವಸ್ಥೆಯ ಒಂದು ಅನುಕರಣೆ ಆಗಿದೆ. ಇದರಂತೆ ನಮ್ಮಲ್ಲಿ ಹಾಗೂ ಬ್ರಿಟೀಷ್ ಸಂಸತ್ತಿನಲ್ಲಿ ಸಂಪ್ರದಾಯಗಳಿಗೆ ಹೆಚ್ಚು ಬೆಲೆಕೊಡುತ್ತೇವೆ. ಉದಾಹರಣೆಗೆ ಮುಖ್ಯಮಂತ್ರಿಯಾಗಲೀ, ಮಂತ್ರಿಗಳಾಗಲೀ, ಶಾಸಕರಾಗಲೀ ಸದನಕ್ಕೆ ಗೈರು ಹಾಜರಾಗಬೇಕಿದ್ದಲ್ಲಿ ಸಭಾಧ್ಯಕ್ಷರ ಇಲ್ಲವೇ ಸಭಾಪತಿಗಳ ಗಮನಕ್ಕೆ ಈ ಅಂಶ ತರುತ್ತೇವೆ ಹಾಗೂ ಅನುಮತಿ ಪಡೆಯುತ್ತೇವೆ. ಇದೊಂದು ಒಳ್ಳೆಯ ಸಂಪ್ರದಾಯ.

ದುರದೃಷ್ಟವಶಾತ್ ನಮ್ಮ ಮುಖ್ಯಮಂತ್ರಿಗಳಿಗೆ ಈ ಸದನದ ಬಗ್ಗೆ ಕಳಕಳಿ ಇಲ್ಲದಿರುವುದನ್ನು ನೋಡಿದರೆ ಬಹಳ ನೋವಾಗುತ್ತದೆ. ಯಾರ ಯಾರನ್ನೋ ಉಳಿಸಬೇಕಾಗುತ್ತದೆ. ಅವರಿಗೆ ದೆಹಲಿ, ಕಲ್ಕತ್ತ, ಮುಂಬಯಿ ಹೀಗೆ ಬೇರೆ ಪಟ್ಟಣಗಳಲ್ಲಿ ಯಾರ ಯಾರನ್ನೇ ಕೂಡಿಸಬೇಕಾಗುತ್ತದೆ. ಈ ಸದನದಲ್ಲಿ ಇರುವಷ್ಟು ಪುರಸೊತ್ತು ಇಲ್ಲ.

ಅಧ್ಯಕ್ಷರೇ, ನಿಮಗೆ ಅಧಿಕಾರವಿದೆ. ಅವರಿಗೆ ಹೇಳಿ. ವಿನಾಕಾರಣ ಸಣ್ಣಪುಟ್ಟ ಕಾರ್ಯಗಳಿಗೆ ಸದನ ಬಿಟ್ಟು ಹೋಗುವುದು ಅವರ ಘನತೆಗೆ ತಕ್ಕದ್ದಲ್ಲ. ನನ್ನ ಮಾತು ಮುಖ್ಯಮಂತ್ರಿಗಳಿಗೆ ಸಿಟ್ಟು ತರಿಸಬಹುದು, ಚಿಂತೆಯಿಲ್ಲ. ಸಂಸದೀಯ ಸಂಸ್ಥೆಗಳಿಗೆ ಗೌರವ ಕೊಡುವುದು ನಮ್ಮ ಪ್ರಥಮ ಕರ್ತವ್ಯ. ಈಗಾಗಲೇ ಒಬ್ಬರಿಗೆ ಶಿಕ್ಷೆ ಆಗಿದೆ. ಮತ್ತೊಬ್ಬರಿಗೆ ಆಗುವುದು ಬೇಡ.

(ಜೆ.ಹೆಚ್. ಪಟೇಲ್ (ವಿಧಾನಸಭೆ) : ಮಾರ್ಚಿ 20, 1979)

## ರಾಜ್ಯಪಾಲರ ಭಾಷಣ : ಸಂಸದೀಯ ಪ್ರಕ್ರಿಯೆ

ರಾಜ್ಯಪಾಲರ ಭಾಷಣದ ಮೇಲೆ ಚರ್ಚೆ ಎತ್ತರದ ಮಟ್ಟದಲ್ಲಿ ನಡೆಯಬೇಕು ಇದೊಂದು ಪ್ರಮುಖ ಸಂಸದೀಯ ಪ್ರಕ್ರಿಯೆ. ರಾಜ್ಯದ ಸ್ಥಿತಿಗತಿಗಳ ಸಿಂಹಾವಲೋಕನ. ಹಿಂದಿನ

ರಾಜ್ಯಪಾಲರ ಭಾಷಣಕ್ಕೂ ಮತ್ತು ಇಂದಿನ ರಾಜ್ಯಪಾಲರ ಭಾಷಣಕ್ಕೂ ವ್ಯತ್ಯಾಸ ಏನೆಂದರೆ, ಪ್ರತಿಸಲದ ಈವರೆಗಿನ ರಾಜ್ಯಪಾಲರ ಭಾಷಣದಲ್ಲಿ 'ಸರ್ಕಾರ ಇಂತಿಂಥ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ, ಇಂತಿಂಥ ಹೊಸ ಕಾರ್ಯಕ್ರಮಗಳನ್ನು ಜಾರಿಗೆ ತರುತ್ತೇವೆ. ಇದಕ್ಕೆ ಇಷ್ಟು ಹಣ ಇಟ್ಟಿದ್ದೇವೆ' - ಇತ್ಯಾದಿ ಅಂಶಗಳು ಇದ್ದವು. ಈ ಬಾರಿಯ ರಾಜ್ಯಪಾಲರ ಭಾಷಣದಲ್ಲಿ ಸರ್ಕಾರ ಸಾಧನೆ ಮಾಡಿರತಕ್ಕಂಥ ವಿಷಯಗಳ ಬಗ್ಗೆ ಹಾಗೂ ದೇಶದ ರಾಜಕೀಯ ಆಗುಹೋಗುಗಳ ಬಗೆಗೆ ಪ್ರಸ್ತಾಪಿಸಿದ್ದೇವೆ. ಮೊನ್ನೆ ನಡೆದ ಲೋಕಸಭಾ ಚುನಾವಣೆಯಲ್ಲಿ ನಮ್ಮ ಆಡಳಿತ ಪಕ್ಷಕ್ಕೆ ಸೋಲುಂಟಾದ ಬಗ್ಗೆ ನಾವೇ ಆತ್ಮಾವಲೋಕನ ಮಾಡಿಕೊಂಡಿದ್ದೇವೆ. ನಾವು ಸೋತಿಲ್ಲ, ನಮ್ಮ ಪಕ್ಷಕ್ಕೆ ಏನೂ ಆಗಿಲ್ಲವೆಂದು ಹೇಳುವುದಕ್ಕೆ ಹೋಗಿಲ್ಲ. ಇರುವ ವಿಷಯವನ್ನು ಯತಾರ್ಥವಾಗಿ ನಿಮ್ಮೆದುರು ಇಟ್ಟಿದ್ದೇವೆ.

ಕಳೆದ ಮೂರು ವರುಷಗಳ ನಮ್ಮ ಸರ್ಕಾರದ ಆಡಳಿತಾವಧಿಯಲ್ಲಿ ನಮಗೆ ಸಾಧ್ಯವಾದಷ್ಟು ಮಾಡಿದ್ದೇವೆ. ನಾಡಿನ ಜನತೆ ಮತ್ತು ವಿವಿಧ ರಾಜಕೀಯ ಪಕ್ಷಗಳು ಸರ್ಕಾರದೊಂದಿಗೆ ಸಹಕರಿಸಿದ್ದರಿಂದ ಇಷ್ಟು ಕೆಲಸ ಮಾಡಿದ್ದೇವೆ.

ಸುಂದರವಾಗಿ ದೇವಸ್ಥಾನ ಕಟ್ಟಿ, ದೃಷ್ಟಿ ಬೊಟ್ಟು ಎಂಬಂತೆ ಎಲ್ಲೋ ಒಂದೆಡೆ ಕೆಟ್ಟ ಚಿತ್ರ ಬಿಡಿಸಿದಾಗ ಅದನ್ನೇ ನೋಡುತ್ತ ನಿಂತರೆ ಹೇಗೆ? ಸುಂದರವಾದ ದೇವಸ್ಥಾನವನ್ನು ಮೊದಲು ನೋಡಬೇಕು.

ಸರ್ಕಾರಕ್ಕೆ ಪ್ರೋತ್ಸಾಹ ಕೊಟ್ಟಿದ್ದೀರಿ. ಅನಾವಶ್ಯಕವಾಗಿ ಟೀಕೆ ಮಾಡುವುದನ್ನು ಬಿಟ್ಟು ಸರ್ಕಾರ ಮಾಡಿರುವಂಥ ಕೆಲಸವನ್ನು ಮೊದಲು ನೋಡಬೇಕು.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನ ಪರಿಷತ್ತು ಮಾರ್ಚ್ 23, 1998)

## ರಾಜ್ಯಪಾಲರ ಭಾಷಣ ಒಂದು Idea

ಅಧ್ಯಕ್ಷರು (ರಮೇಶ್‌ಕುಮಾರ್): ಈಗ ಸನ್ಮಾನ್ಯ ಮುಖ್ಯಮಂತ್ರಿಗಳು ಸರ್ಕಾರದ ಪರವಾಗಿ ಉತ್ತರ ಪ್ರಾರಂಭಿಸಲಿ.

(ಮಾನ್ಯ ರಾಜ್ಯಪಾಲರ ಭಾಷಣದ ವಂದನಾ ನಿರ್ಣಯದ ಮೇಲಿನ ಚರ್ಚೆಗೆ ಮುಖ್ಯಮಂತ್ರಿಗಳಿಂದ ಉತ್ತರ)

**ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):** ಮಾನ್ಯ ಅಧ್ಯಕ್ಷರೇ, ರಾಜ್ಯಪಾಲರ ಭಾಷಣದ ಮೇಲೆ ಮಾನ್ಯ ವಿರೋಧ ಪಕ್ಷದ ನಾಯಕರು, ಹಲವಾರು ಮುಖಂಡರು ಅವರದೇ ಆದ ವ್ಯಾಖ್ಯಾನವನ್ನು ಮಾಡಿದ್ದಾರೆ. ಇದು ಚುನಾವಣಾ ಭಾಷಣ ಎಂದು ಕೆಲವರು ಹೇಳಿದರು, ಸರ್ಕಾರ ಯಥಾಪ್ರಕಾರ ಪ್ರತಿ ವರ್ಷ ಏನು ಹೇಳುತ್ತದೋ ಸುಮ್ಮನೆ ಅವರು ಓದಿ ಹೋಗಿಬಿಟ್ಟರು ಎಂದರು ಇನ್ನು ಕೆಲವರು.

ಈ ಬ್ರಿಟಿಷ್ ಪಾರ್ಲಿಮೆಂಟರಿ ಸಿಸ್ಟಂನ್ನು ನಾವು ಅಡಾಪ್ಟ್ ಮಾಡಿಕೊಂಡಿದ್ದೇವೆ. ಆ ಪ್ರಕಾರ ನಡೆದುಕೊಂಡು ಹೋಗುತ್ತೇವೆ. ಇಲ್ಲಿಯವರೆಗೂ ಅಲ್ಲಿ ಪ್ರೆಸಿಡೆಂಟ್ ಅಡ್ರೆಸ್ ಮಾಡುವುದಾಗಲಿ, ರಾಜ್ಯಪಾಲರು ಅಡ್ರೆಸ್ ಮಾಡುವುದಾಗಲಿ ಬದಲಾವಣೆ ಆಗಿಲ್ಲ. ರಾಜ್ಯಪಾಲರೇನು ಅವರಿಗಷ್ಟೇ ಅವರೇ ಕುಳಿತುಕೊಂಡು ಬರೆಯುತ್ತಾರೆಯೇ? ರಾಜ್ಯಪಾಲರಿಗೆ ಏನೇನು ಸರ್ಕಾರ ಮಾಡಿದೆ, ಮಾಡಬೇಕು ಎಂದು ವಿಚಾರ ಇದೆ ಎನ್ನುವುದನ್ನು ನಾವು ಹೇಳಿದ್ದನ್ನು ಅವರು ಓದುತ್ತಾರೆ. ರಾಜ್ಯಪಾಲರ ಭಾಷಣ ಒಂದು ವಿಚಾರ. ನಮ್ಮ ಬಜೆಟ್ ಇದೆಯಲ್ಲಾ, ಅದು ಆಚಾರ. ಅದನ್ನು ಹಲವಾರು ಇಲಾಖೆಗಳ ಮೂಲಕ ಹೇಳುತ್ತೇವೆ. Governor's Address is idea. Budget is concrete.

ಮಲ್ಲಿಕಾರ್ಜುನ ಖರ್ಗೆ: ನೀವು ಹೇಳಿದಂತೆ ಅದು ಆಚಾರವೂ ಹೌದು, ಅದು ವಿಚಾರವೂ ನಿಜ. ನಿಮ್ಮದು ಮಾತ್ರ ಪ್ರಚಾರ.

ಜೆ.ಹೆಚ್. ಪಟೇಲ್: ರಾಜಕಾರಣದಲ್ಲಿರುವುದೇ ಅದಕ್ಕೋಸ್ಕರ.

(ವಿಧಾನಸಭೆ ಕಲಾಪ, ಏಪ್ರಿಲ್ 3, 1999)

## ವಿಧಾನಸೌಧದ ಶಿಲ್ಪಿ : ಕೆಂಗಲ್

ದಿವಂಗತ ಕೆಂಗಲ್ ಹನುಮಂತಯ್ಯನವರು ಕೇವಲ ಒಂದೂವರೆ ಕೋಟಿ ರೂಪಾಯಿಗಳ ಖರ್ಚಿನಲ್ಲಿ ಇಡೀ ದೇಶಕ್ಕೆ ಮಾದರಿ ಎನ್ನಬಹುದಾದ ವಿಧಾನ ಸೌಧವನ್ನು ನಿರ್ಮಿಸಿದರು. ಇಷ್ಟೊಂದು ಹಣದ ಖರ್ಚೇಕೆ ಎಂದು ನಮ್ಮ ರಾಜಕೀಯ ಪಕ್ಷಗಳು ಮತ್ತು ನಾಯಕರು ಆವತ್ತು ಮಾನ್ಯ ಕೆಂಗಲ್ಲರನ್ನು ಟೀಕಿಸಿದೆವು. ಪ್ರಗತಿ ಪಥದಲ್ಲಿರುವ ಎಷ್ಟೋ ದೇಶಗಳು ಸಣ್ಣ ಸಣ್ಣ ಮನೆ ಮತ್ತು ಮರಗಿಡಗಳ ಕೆಳಗೆ ಕುಳಿತು ಶಾಸನ ಮಾಡುತ್ತಿರುವಾಗ ನಮಗೆ ಈ ವೈಭವ ಮಂದಿರ ಏಕೆ ಬೇಕಿತ್ತು ಎಂದು ಆರೋಪ ಮಾಡಿದೆವು... ಇಂದು ಇಂತಹ ಮತ್ತೊಂದು ಕಟ್ಟಡ ನಿರ್ಮಿಸಲು ನಮಗೆ ಸಾಧ್ಯವೇ.. ಕನಿಷ್ಠ ನೂರಿನ್ನೂರು ಕೋಟಿ ರೂಪಾಯಿಗಳ ಖರ್ಚು ತಗುಲುವ ಇಂತಹ ಭವ್ಯ ಸದನವನ್ನು ಕಟ್ಟುವ ಚೈತನ್ಯ ನಮಗುಂಟೇ?

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ: ಫೆಬ್ರವರಿ 8, 1982)

## ವಿಧಾನಸೌಧ: ಜೈಲೂ ಅಲ್ಲ; ಛತ್ರವೂ ಅಲ್ಲ

ಯು.ಬಿ. ಬೋರ್ಕರ್: ಅಧ್ಯಕ್ಷರೇ, ಇವತ್ತು ಬೆಳಿಗ್ಗೆ ನಾನು ನನ್ನ ತಂಗಿಯ ಕೈಯಲ್ಲಿ ವಿಧಾನಸೌಧದಲ್ಲಿರುವ ಅಪೆಕ್ಸ್ ಬ್ಯಾಂಕಿನಿಂದ ದುಡ್ಡು ತರಲು ಚೆಕ್ ಕೊಟ್ಟು ಕಳುಹಿಸಿದ್ದೆ. ಆಕೆ ಬ್ಯಾಂಕಿನ ಟೋಕನ್ ಪಡೆದು ನಿಂತಿದ್ದಳು. ಏತನ್ಮಧ್ಯೆ ವಿಧಾನಸೌಧದ ವಾಚ್ ಅಂಡ್ ವಾರ್ಡ್ ಸಿಬ್ಬಂದಿ ನನ್ನ ತಂಗಿಯನ್ನು ಹೊರಗಡೆ ಕರೆತಂದು ಅವಮಾನಕರ ರೀತಿ ನಡೆದುಕೊಂಡು ನಮ್ಮ ಮನಸ್ಸಿಗೆ ನೋವುಂಟು ಮಾಡಿದ್ದಾರೆ.

**ಅಜೀಜ್ ಸೇಠ್:** ಮಾನ್ಯ ಅಧ್ಯಕ್ಷರೇ ಇಂದು ನನ್ನನ್ನು ಕಾಣಲು ಮತ್ತು ಶಿಕ್ಷಣ ಮಂತ್ರಿಗಳನ್ನು ಭೇಟಿಯಾಗಲು ಬಂದಿದ್ದ ಮೈಸೂರಿನ ಇಬ್ಬರು ಗಣ್ಯರಿಗೂ ಇದೇ ರೀತಿ ಅವಮಾನಕರ ಅನುಭವವಾಗಿದೆ. ಪಾರ್ಲಿಮೆಂಟಿನಲ್ಲಿ ಮಾನ್ಯ ಸಂಸದರನ್ನು ಭೇಟಿಯಾಗಲು ಬರುವ ಗಣ್ಯರಿಗೆ 'ಸೆಂಟ್ರಲ್ ಹಾಲ್' ಇದೆ.. ಸರ್ಕಾರ ನಮ್ಮಲ್ಲೂ ಇಂತಹ ವ್ಯವಸ್ಥೆ ಮಾಡಬಹುದು.

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ)** : ಮಾನ್ಯ ಅಜೀಜ್ ಸೇಟ್‌ರವರು ನೊಂದು ಹೇಳುತ್ತಿರುವುದರಲ್ಲಿ ಅರ್ಥವಿದೆ. ಈ ಮುನ್ನ ನಾನು ಲೋಕಸಭೆಯ ಸದಸ್ಯನಾಗಿದ್ದು ಕೊಂಚ ಅನುಭವ ಪಡೆದಿದ್ದೇನೆ.. ಈ ಸದನ ಜನಪ್ರತಿನಿಧಿಗಳಾದ ಶಾಸಕರಿಗೆ ಒಂದು ಜೈಲೂ ಆಗಬಾರದು, ಒಂದು ಧರ್ಮ ಛತ್ರವೂ ಆಗಬಾರದು.. ಪಾರ್ಲಿಮೆಂಟಿನಲ್ಲಿ ಎಂ.ಪಿ.ಗಳನ್ನು ಕಾಣ ಬಂದವರಿಗೆ ಉತ್ತರಿಸಲು ಸ್ವಾಗತಕಾರರಿರುತ್ತಾರೆ... ಅಂತಹ ಸೌಲಭ್ಯ ಇಲ್ಲೂ ಆಗಬೇಕು.. ಜನ ಪ್ರತಿನಿಧಿಗಳನ್ನು ಕಾಣಲು ಬರುವ ಜನರಿಗೆ ಎಂದೂ ಅವಮಾನವಾಗಬಾರದು.

**ಅಧ್ಯಕ್ಷರು (ಕೆ. ಹೆಚ್. ರಂಗನಾಥ್)** : ಇದಕ್ಕಾಗಿ ವಿಶೇಷ ವ್ಯವಸ್ಥೆ ಇಲ್ಲೂ ಸಹಿತ ಮಾಡಲಾಗಿದೆ... ಆದರೂ ಮಾನ್ಯ ಸದಸ್ಯರುಗಳ ಸಲಹೆ ಏನಿದೆ ಅದನ್ನು ಖಂಡಿತಾ ನಾವು ಮಾನ್ಯ ಮಾಡಿ ಸೂಕ್ತ ವ್ಯವಸ್ಥೆ ಮಾಡಿಸುತ್ತೇವೆ.

(ವಿಧಾನಸಭೆ ಕಲಾಪ : ಫೆಬ್ರವರಿ 11, 1982)

## 'ಗಮನ ಸೆಳೆಯುವ' ಶೂನ್ಯವೇಳೆ

ಲೋಕಸಭೆಯಲ್ಲಿ ನಡೆಸಿಕೊಂಡು ಬಂದಿರುವ ಸತ್ಸಂಪ್ರದಾಯವನ್ನು ನನ್ನ ಅನುಭವದಿಂದ ಹೇಳುತ್ತೇನೆ.

ಯಾವುದಾದರೊಂದು ವಿಶಿಷ್ಟ ಘಟನೆ ನಡೆದರೆ, ಸಂಸತ್ ಸದಸ್ಯರು ನೋಟೀಸು ಕೊಟ್ಟು ಆ ಘಟನೆಯನ್ನು ಸದನದ ಗಮನಕ್ಕೆ ತರುತ್ತಾರೆ. ನೋಟೀಸು ಕೊಟ್ಟ ನಂತರ ಶೂನ್ಯವೇಳೆಯಲ್ಲಿ ಸಭೆಯ ಮೂಲಕ ಸರ್ಕಾರದ ಗಮನಕ್ಕೆ ತರುತ್ತಾರೆ. ಈ ಘಟನೆಗೆ ಸರ್ಕಾರ ಕೂಡಲೇ ಉತ್ತರ ಕೊಡಬೇಕೆಂಬ ನಿಯಮವಿಲ್ಲ, ಕಾನೂನು ಪ್ರಕಾರ ಉತ್ತರವನ್ನು ಕೊಡಲೂ ಬಾರದು.

ಯಾವ ಘಟನೆಗಳಿಗೆ ಉತ್ತರವನ್ನು ಕೊಡಲು ಸರ್ಕಾರಕ್ಕೆ ಕೂಡಲೇ ಸಾಧ್ಯವೋ ಅಂತಹ ಘಟನೆಗೆ ಉತ್ತರ ಸಿಗಬಹುದು, ಕೆಲವಕ್ಕೆ ಕೊಡಲು ಸಾಧ್ಯವಿಲ್ಲದಿದ್ದಲ್ಲಿ ಇಲ್ಲ. ಇದಕ್ಕೆ ನಮ್ಮಲ್ಲಿ ನಿಯಮ 72 ಮತ್ತು 334ರಲ್ಲಿ ಸಾಕಷ್ಟು ಅವಕಾಶವಿದೆ.

ಉದಾಹರಣೆಗೆ ಕಾನಕಾನಹಳ್ಳಿ ಎನ್ನುವ ಊರು, ಅಲ್ಲಿನ ಪೋಲೀಸ್ ಠಾಣೆ ಮುಂದೆ ಲಾರಿ ಹರಿದು ಅಪಘಾತವಾಯಿತು ಎನ್ನಿ. ಅಪಘಾತಕ್ಕೆ ಒಳಗಾದವನನ್ನು ತುರ್ತು ಚಿಕಿತ್ಸೆಗೆ ಆಸ್ಪತ್ರೆಗೆ ಸೇರಿಸಲಾಗಿದೆ. ಆರೋಗ್ಯ ಮಂತ್ರಿಗಳನ್ನು ತತ್‌ಕ್ಷಣ ಉತ್ತರಿಸಿ ಎಂದರೆ ಆತ ಏನು ಮಾಡಬಲ್ಲ?

ನಾವು ಬ್ರಹ್ಮರಲ್ಲ. ಸಾಮಾನ್ಯ ಮನುಷ್ಯರು. ಹಿಂದೆ ಏನು ನಡೆದಿದೆ, ಮುಂದೆ ಏನು ನಡೆಯಬಹುದು ಎಂಬುದು ಆ ಕ್ಷಣ ಗೊತ್ತಾಗುವಷ್ಟು ಅಲೌಕಿಕ ಶಕ್ತಿ ನಮಗಿರುವುದಿಲ್ಲ.

(ಜೆ.ಹೆಚ್. ಪಟೇಲ್ (ಕೈಗಾರಿಕೆ ಮಂತ್ರಿ) ವಿಧಾನಸಭೆ : ಜುಲೈ 31, 1985)

## ಸ್ವರ್ಗಾಭಿಮುಖದ ಮಾತುಗಳು

**ಕೆ.ಬಿ. ಶಿವಯ್ಯ (ನಂಜನಗೂಡು):** 1980ರ ಈ ರಾಜ್ಯಪಾಲರ ಭಾಷಣ ಯಾವ ರೀತಿ ಇದೆ ಎಂದರೆ, ಬಹುಷಃ ತಮ್ಮ ಜೀವಿತ ಕಾಲದಲ್ಲಿ ಎಲ್ಲಾ ಆಸೆ - ಆಕಾಂಕ್ಷೆಗಳನ್ನು ಪೂರೈಸಿಕೊಂಡವರು ಸ್ವರ್ಗಕ್ಕೆ ಮುಖ ಮಾಡಿಕೊಂಡು ಇನ್ನೇನು ಪ್ರಯಾಣ ಮಾಡುವ ಹಂತದಲ್ಲಿದ್ದಾಗ ಅಂತಹವರು ಕೊನೆಗಾಲದಲ್ಲಿ ಏನು ಮಾತುಗಳನ್ನು ಹೇಳುತ್ತಾರೋ, ಅಂತಹ ಮಾತನ್ನು ಈ ಮಂತ್ರಿ ಮಂಡಲದವರು ರಾಜ್ಯಪಾಲರ ಬಾಯಲ್ಲಿ ಹೇಳಿಸಿದ್ದಾರೆ.

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ):** ಅದು ಸರಿ. ಇವರು ಸ್ವರ್ಗದ ಕಡೆಗೇ ಹೋಗುತ್ತಾರೆ ಎಂದು ಮಾನ್ಯ ಸದಸ್ಯರಿಗೆ ಹೇಗೆ ಗೊತ್ತು.

(ವಿಧಾನ ಸಭೆ ಕಲಾಪ : ಮಾರ್ಚ್ 7, 1980)

ಸನ್ಮಾನ್ಯ ಸಭಾಧ್ಯಕ್ಷರೇ, ಯಾರೋ ಒಬ್ಬ ಲೋಕಸಭಾ ಸದಸ್ಯರು ಸತ್ತರೆ, ಅವರು ಪ್ರಧಾನಿಯ ಮಗನೇ ಆಗಿರಬಹುದು. ಆ ಬಗ್ಗೆ ವಿಧಾನ ಸಭೆಯಲ್ಲಿ ಕಂಡೋಲೆನ್ಸ್ ವಿಷಯ ತರುವುದೇ ಆಗಲಿ ಅಥವಾ ಈ ಬಗ್ಗೆ ರಾಜ್ಯ ಸರ್ಕಾರ ರಜಾ ಘೋಷಣೆ ಮಾಡುವುದಾಗಲೀ ಅದು ಸಂಪ್ರದಾಯವೇ?

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ, ಜೂನ್ 30, 1980)

## ಪ್ರಶ್ನೆ ಉತ್ತರಿಸುವಲ್ಲಿ 'ವಿಳಂಬ'

**ಸಭಾಪತಿಯುವರು:** ಪ್ರಶ್ನೆ ಸಂಖ್ಯೆ: 348 (719)ಕ್ಕೆ ಉತ್ತರವನ್ನು ನೀಡಲು ಮುಖ್ಯಮಂತ್ರಿಗಳು ಸಮಯಾವಕಾಶ ಕೇಳಿದ್ದಾರೆ.

**ಎನ್.ಸಿ. ಮಾಧುರಾಜು:** ಮಾನ್ಯ ಸಭಾಪತಿಗಳೇ, ಕಳೆದ ವರ್ಷವೂ ಇದೇ ಪ್ರಶ್ನೆಯನ್ನು ಕೇಳಿದ್ದೆವು. ಆಗ ಸಚಿವರಾಗಿದ್ದ ಮಾನ್ಯ ರಮೇಶ್ ಜಿಗಜಿಣಗಿಯವರು ಇದೇ ಉತ್ತರಕ್ಕೆ ಸಮಯಾವಕಾಶ ಬೇಕು ಎಂದು ಕೇಳಿದ್ದರು. ಈಗಲೂ ಸಹ ಮಾನ್ಯ ಮುಖ್ಯಮಂತ್ರಿಗಳು ಸಮಯಾವಕಾಶ ಬೇಕು ಎಂದು ಕೇಳಿದರೆ ಹೇಗೆ? ಇದರಿಂದ ಮೀಸಲಾತಿ ಪಡೆಯಬೇಕಾದ ಬಡಜನರಿಗೆ ಅನ್ಯಾಯವಾಗುವುದಿಲ್ಲವೇ?

**ಸಭಾಪತಿಯುವರು:** ಇದೇ ಅಧಿವೇಶನದಲ್ಲಿ ಈ ಪ್ರಶ್ನೆಗೆ ಉತ್ತರತರಿಸುತ್ತೇನೆ.

**ಮರಿಲಿಂಗೇಗೌಡ:** ಮಾನ್ಯ ಸಭಾಪತಿಗಳೇ, ಕಳೆದ ಸಲ ಮಾನ್ಯ ಮಂತ್ರಿಗಳು ಸಮಯಾವಕಾಶ ಬೇಕು ಎಂದು ಕೇಳಿಕೊಂಡರು. ಈ ಅಧಿವೇಶನದಲ್ಲಿಯೂ ಸಹ ಸಮಯಾವಕಾಶವನ್ನು ಕೇಳುತ್ತಿದ್ದಾರೆ. ಹೀಗೆ ಮಾಡಿದರೆ ಇದರ ಅರ್ಥ ಏನು?

**Chairman:** This will be the last chance.

**N.C. Madhuraj:** Sir, I would like to know.

**ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):** ಮಾನ್ಯ ಸಭಾಪತಿಗಳೇ, ನಾನು ಸಾಮಾನ್ಯವಾಗಿ ಸಮಯಾವಕಾಶವನ್ನು ಕೇಳುವುದೇ ಇಲ್ಲ.

**N.C. Madhuraj:** I would like to know when you are going to give it.

**ಜೆ.ಹೆಚ್. ಪಟೇಲ್:** ಮಾನ್ಯ ಸಭಾಪತಿಗಳೆ, ಮಾನ್ಯ ಸದಸ್ಯರು ಮೀಸಲಾತಿ ಬಗ್ಗೆ ಕೇಳಿದ್ದಾರೆ. ನಾನು ಅವರಿಗೆ ಜನರಲ್ ಫಿಗರ್ಸ್ ಬೇಕಾದರೆ ಕೊಡಬಹುದು ಎಂದು ಹೇಳಿದ್ದೇನೆ. ಜಿಲ್ಲಾವಾರು ಮತ್ತು ಜಾತಿವಾರು ಕೇಳಿರುವುದರಿಂದ ಅದಕ್ಕೆ ಸಮಯ ಬೇಕಾಗುತ್ತದೆ. ಮಾನ್ಯ ಸಭಾಪತಿಗಳೆ, ಮುಂದಿನ ವಾರದಲ್ಲಿ ಈ ಪ್ರಶ್ನೆಯನ್ನು ತೆಗೆದುಕೊಳ್ಳೋಣ.

(ವಿಧಾನ ಪರಿಷತ್ ಕಲಾಪ ಆಗಸ್ಟ್ 8, 1996)

## ಗೋವಿಂದ ಕಾರಜೋಳರ ಒಂಟಿ ದನಿ

**ಗೋವಿಂದಪ್ಪ ಎಂ. ಕಾರಜೋಳ:** ಮಾನ್ಯ ಅಧ್ಯಕ್ಷರೇ, ಈ ಸದನದಲ್ಲಿ ಕೇವಲ ಬೆಂಗಳೂರು ವಿಭಾಗ, ಮೈಸೂರು ವಿಭಾಗದ ವಿಚಾರ ಮಾತ್ರ ಪ್ರಸ್ತಾಪವಾಗುತ್ತಿದೆ. ಉತ್ತರ ಕರ್ನಾಟಕದ ವಿಚಾರವಾಗಿ ನಾವು ಪದೇ ಪದೇ ಪ್ರಾರ್ಥನೆ ಮಾಡಿಕೊಂಡರೂ ನಮಗೆ ಅವಕಾಶ ಸಿಗುತ್ತಿಲ್ಲ. ನಮ್ಮದೂ ಕೂಡ ಒಂದು ಸಮಸ್ಯೆ ಇದೆ. 1870ನೇ ಇಸವಿಯಲ್ಲಿ ಮುಧೋಳ ಕೋರ್ಟ್ ಕಟ್ಟಡ ಕಟ್ಟಿದ್ದು. ಅದು ಬಿದ್ದು ಹಾಳಾಗಿ ಹೋಗುತ್ತಿದೆ.

ಇದನ್ನು ಸದನದಲ್ಲಿ ಪ್ರಸ್ತಾಪ ಮಾಡುವುದಕ್ಕೆ ನಾನು ಎಂಟು ದಿವಸದಿಂದ ತಮ್ಮ ಅನುಮತಿಯನ್ನು ಕೇಳುತ್ತಿದ್ದೇನೆ. ಸದನದಲ್ಲಿ ಸಂಬಂಧಪಟ್ಟವರು ಎಲ್ಲರೂ ಇದ್ದಾರೆ. ದಯವಿಟ್ಟು ಈಗ ಒಂದು ನಿಮಿಷ ಮಾತನಾಡುವುದಕ್ಕೆ ಅವಕಾಶ ಮಾಡಿಕೊಡಿ.

**ಅಧ್ಯಕ್ಷರು:** ಇದನ್ನು ಶೂನ್ಯ ವೇಳೆಯಲ್ಲಿ ಪ್ರಸ್ತಾಪ ಮಾಡುವುದಕ್ಕೆ ತೆಗೆದುಕೊಳ್ಳೋಣ ಈಗ ಬೇಡ.

**ಗೋವಿಂದಪ್ಪ ಎಂ. ಕಾರಜೋಳ:** ಮುಂದಿನ ಸಾಲಿನಲ್ಲಿ ಕುಳಿತವರು ಶೂನ್ಯ ವೇಳೆಯಲ್ಲಿ ಅಥವಾ ಬೇರೆ ಯಾವುದೇ ಸಮಯದಲ್ಲಿ ಪ್ರಸ್ತಾಪ ಮಾಡುವುದಕ್ಕೆ ಬಿಡುವುದಿಲ್ಲ. ಎಲ್ಲಾ

ಸಮಯದಲ್ಲೂ ಮುಂದಿನ ಸಾಲಿನವರೇ ಮಾತನಾಡುತ್ತಿರುತ್ತಾರೆ. ನಾನು ಪರ್ಸನಲಿ ತಮ್ಮನ್ನು ಭೇಟಿ ಆಗಿ ಕೇಳಿಕೊಂಡಿದ್ದೇನೆ. ಆದರೂ ಕೂಡ ನನಗೆ ಇದುವರೆಗೆ ಅವಕಾಶ ಕಲ್ಪಿಸಿಕೊಟ್ಟಿಲ್ಲ. ಒಂದು ನಿಮಿಷ ಪ್ರಸ್ತಾಪ ಮಾಡಿಬಿಡುತ್ತೇನೆ. ಈ ವಿಷಯ ಕೂಡ ಆಯವ್ಯಯಕ್ಕೆ ಸಂಬಂಧಪಟ್ಟ ವಿಚಾರವಾಗಿದೆ.

**ಅಧ್ಯಕ್ಷರು:** ಈಗ ಅವಕಾಶ ಕೊಡುವುದಕ್ಕೆ ಆಗುವುದಿಲ್ಲ. ಹೀಗೆ ಮಾಡಿದರೆ ನಾನು ಸದನ ನಡೆಸುವುದಾದರೂ ಹೇಗೆ? ತಾಳ್ಮೆ ಎಲ್ಲಿಂದ ಬರಬೇಕು?

**ಗೋವಿಂದಪ್ಪ ಎಂ. ಕಾರಜೋಳ:** ಮುಂದಿನ ಎರಡು ಸಾಲಿನವರು ಮಾತ್ರ ಮಾತನಾಡಿಕೊಂಡು ಅವರಿಗೆ ಸಂಬಂಧಪಟ್ಟ ವಿಚಾರವನ್ನು ಮಾತ್ರ ಕೇಳುತ್ತಾ ಕುಳಿತುಕೊಂಡರೆ ನಾವು ಏನು ಮಾಡಬೇಕು? ದಯಮಾಡಿ ಹೇಳಿ. ಇಲ್ಲವೆಂದರೆ ಈ ಸದನದಲ್ಲಿ ನಮ್ಮನ್ನು ಸಸ್ಪೆಂಡ್ ಮಾಡಿಬಿಡಿ. ನಾವು ಹೊರಗೆ ಹೋಗಿಬಿಡುತ್ತೇವೆ. ನಾವು ಏನು ಮಾಡಬೇಕು ಹೇಳಿ.

**ಜೆ.ಹೆಚ್. ಪಟೇಲ್:** ಮಾನ್ಯ ಮುಧೋಳದ ಶಾಸಕರಾದ ಗೋವಿಂದ ಕಾರಜೋಳರವರಿಗೆ ಸನ್ಮಾನ್ಯ ಅಧ್ಯಕ್ಷರು ಅವಕಾಶ ಮಾಡಿಕೊಡುತ್ತಾರೆ. ನೊಂದುಕೊಳ್ಳುವುದು ಬೇಡ. ಇಲ್ಲಿ ಎಲ್ಲ ಶಾಸಕರೂ ಸಮಾನರು. ಹೆಚ್ಚಿಲ್ಲ; ಕಡಿಮೆ ಇಲ್ಲ. ಖಂಡಿತಾ ಶೂನ್ಯ ವೇಳೆಯಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ನಿಮಗೆ ಅವಕಾಶ ಮಾಡಿಕೊಡುತ್ತಾರೆ.

(ವಿಧಾನಸಭೆ ಕಲಾಪ ಏಪ್ರಿಲ್ 3, 1999)

## ಇಂಗ್ಲೆಂಡಿನ ಪಾರ್ಲಿಮೆಂಟೂ... ನಮ್ಮೂರ ವಿಧಾನಸಭೆಯೂ - ಎತ್ತಿಂದೆತ್ತ...

**ಎಂ.ಎಸ್. ಕೃಷ್ಣನ್:** ಮಾನ್ಯ ಮುಖ್ಯಮಂತ್ರಿಗಳೇ (ರಾಮಕೃಷ್ಣ ಹೆಗಡೆಯವರನ್ನು ಉದ್ದೇಶಿಸಿ) ಮಾನ್ಯ ಅಧ್ಯಕ್ಷರು ನೆನಪು ಮಾಡಿದರೂ ಉತ್ತರ ಬರದಿದ್ದರೆ ಸನ್ಮಾನ್ಯ ಅಧ್ಯಕ್ಷರಾದರೂ ಏನು ಮಾಡಬಲ್ಲರು ಹೇಳಿ...

**ಜೆ.ಹೆಚ್. ಪಟೇಲ್ (ಕೈಗಾರಿಕೆ ಖಾತೆ ಸಚಿವರು) :** ಮಾನ್ಯ ಸಭಾಧ್ಯಕ್ಷರೇ, ಸರ್ಕಾರ ಪರಿಶೀಲಿಸುತ್ತಿರುವುದಾಗಿ ತಿಳಿಸಿದೆ...ಪ್ರಜಾತಂತ್ರ ವ್ಯವಸ್ಥೆಯಲ್ಲಿನ ಈ ಸೂಕ್ಷ್ಮತೆಯನ್ನು ಕುರಿತು ಬ್ರಿಟನ್ನಿನ ಪಾರ್ಲಿಮೆಂಟಿನ ನಡವಳಿಯನ್ನು ವಿವರಿಸಬಯಸುತ್ತೇನೆ. ಹೌಸ್ ಆಫ್ ಕಾಮನ್ಸಿನಲ್ಲಿ ಮಂತ್ರಿಗಳು 'ಪರಿಶೀಲನೆಯಲ್ಲಿದೆ' ಎಂದು ಹೇಳಿ ಮುಗಿಸುತ್ತಾರೆ. ಇನ್ನೂ ಹೆಚ್ಚು ಬಲವಂತ ಮಾಡಿದರೆ 'ತೀವ್ರ ಪರಿಶೀಲನೆಯಲ್ಲಿದೆ' ಎಂದು ಹೇಳುತ್ತಾರೆ.

'ಪರಿಶೀಲನೆಯಲ್ಲಿದೆ' ಎಂದರೆ ಹಾಲಿ ಈಗ ಯಾವುದೇ ಕಡತ ಸಿಗುವಂತಿಲ್ಲ (Under consideration means there is no file available)- ಇದು ಒಂದು ಅರ್ಥ.

'ತೀವ್ರ ಪರಿಶೀಲನೆಯಲ್ಲಿದೆ' ಎಂದರೆ ಸರ್ಕಾರ ಈ ಪ್ರಶ್ನೆಗೆ ಉತ್ತರಿಸಲು ಕೊಂಚ ಸಮಯ ತೆಗೆದುಕೊಳ್ಳುತ್ತಿದೆ (Under active consideration means Government will take some time to answer)- ಎಂದು ಅರ್ಥೈಸಿದಂತಾಗುತ್ತದೆ.

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ:** ಮಾನ್ಯ ಪಟೇಲರು ಬಹಳ ಬುದ್ಧಿವಂತರು... ಇಲ್ಲಿ ಇರುವವರೆಲ್ಲಾ ಪರಿಶೀಲನಾ ಮಂತ್ರಿಗಳು ಎಂದು ಹೇಳಿ ಮುಗಿಸಿದ್ದಾರೆ.. ಮಾನ್ಯ ಅಧ್ಯಕ್ಷರೇ ವಾಸ್ತವವಾಗಿ ನೋಡಿದರೆ ಇಲ್ಲಿ ಆಕ್ಟೀವೂ ಇಲ್ಲ... ಕನ್ಸಿಡರೇಷನ್ನೂ ಇಲ್ಲ... ನಮ್ಮಲ್ಲಿಯೂ ಪರಿಶೀಲನೆ ಪದವಿದೆ...

**ರಾಮಕೃಷ್ಣ ಹೆಗಡೆ (ಮುಖ್ಯ ಮಂತ್ರಿ)...** ಸನ್ಮಾನ್ಯ ಅಧ್ಯಕ್ಷರೇ ತಮ್ಮ ಮೂಲಕ ಮಾನ್ಯ ಸದಸ್ಯರಲ್ಲಿ ಅರಿಕೆ ಮಾಡಿಕೊಳ್ಳುತ್ತಿದ್ದೇನೆ. ಕೆಲವು ಪ್ರಶ್ನೆಗಳಿಗೆ ಉತ್ತರ ತರಿಸಲು ಸ್ವಲ್ಪ ಸಮಯ ಹಿಡಿಸುತ್ತದೆ. ಬ್ರಿಟೀಷ್ ಪಾರ್ಲಿಮೆಂಟಿನಲ್ಲಿ ಇಂತಹ ಪ್ರಶ್ನೆಗಳಿಗೆ ಉತ್ತರ ತರಿಸುವುದು ತಡವಾದರೆ 'ವಿವರವಾದ ಉತ್ತರ ತರಿಸಲಿಕ್ಕೆ ಧೀರ್ಘ ಕಾಲ ತಗುಲುತ್ತದೆ.' ಎನ್ನುತ್ತಾರೆ.

**ಯು.ಆರ್. ಸಭಾಪತಿ:** ಸರ್ಕಾರ ಮನಸ್ಸು ಮಾಡಿದರೆ ಈ ಪ್ರಶ್ನೆಗಳಿಗೆ ಕೇವಲ ಒಂದು ಗಂಟೆಯೊಳಗಾಗಿ ಉತ್ತರ ತರಿಸಬಲ್ಲದು.

**ಕೆ.ಹೆಚ್. ಪಾಟೀಲ್:** ಅಧ್ಯಕ್ಷರೇ, ಇಂಗ್ಲೆಂಡ್ ಪಾರ್ಲಿಮೆಂಟಿಗೂ, ಭಾರತೀಯ ಸಂಸದೀಯ ಪದ್ಧತಿಗೂ ಅಜಗಜಾಂತರ ವ್ಯತ್ಯಾಸವಿದೆ. ಅಲ್ಲಿ ಆತ್ಮಸಾಕ್ಷಿಯಾಗಿ ತಮ್ಮ ಹೃದಯ ತೆರೆದಿಟ್ಟು ಉತ್ತರಿಸುತ್ತಾರೆ. ಆದರೆ ಇಲ್ಲಿನ ಪರಿಸ್ಥಿತಿಯೇ ಬೇರೆ. ಉತ್ತರ ಕೊಡಲು ಸಾಧ್ಯತೆ ಇದ್ದರೂ, ಸರ್ಕಾರ ಹಲವಾರು ಸಂದರ್ಭಗಳಲ್ಲಿ ಉತ್ತರಿಸುವ ಮನಸ್ಸು ತೋರಿಸುವುದಿಲ್ಲ...

**ರಾಮಕೃಷ್ಣ ಹೆಗಡೆ :** ನನ್ನ ಹೃದಯ ಅವರ ಎದೆಯಲ್ಲಿ ಇರುವುದಾದರೆ ನಾನೇನು ಮಾಡಲಿ ಎನ್ನುವ ಚಿಂತೆ ನನ್ನದು..

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ :** ಅಧ್ಯಕ್ಷರೇ, ಪಟೇಲರು ಮತ್ತು ಹೆಗಡೆಯವರು ಬ್ರಿಟೀಷ್ ಪಾರ್ಲಿಮೆಂಟಿನ ನಡವಳಿಕೆ ಕುರಿತು ಹೇಳಿದರು. ಅಲ್ಲಿ ಪಾರ್ಲಿಮೆಂಟ್ ಎಷ್ಟು ವಿಧಿವತ್ತಾಗಿ, ಎಷ್ಟು ದೀರ್ಘ ಕಾಲದ ಅವಧಿವರೆಗೆ ನಡೆಯುತ್ತದೆ ಎಂಬ ಕಲ್ಪನೆ ನಮಗೇನಾದರೂ ಇದೆಯೇ? ಇಲ್ಲಿ ಎಂಟೋ- ಹತ್ತೋ ದಿನ ನಡೆದರೆ ಹೆಚ್ಚೆಚ್ಚು. ಚೌಕಾಸಿ ಮಾಡಿ ಮುಗಿಸ್ತೀರಿ.... ಮತ್ತೆ ಮುಂದಿನ ವರ್ಷವೇ ಸದನ ಸೇರುವುದು. ಇಂತಹ ಇಕ್ಕಟ್ಟಿನಲ್ಲಿ ನಮ್ಮ ಪ್ರಶ್ನೆಗಳಿಗೆ ಉತ್ತರ ಸಾಧ್ಯವೇ? ಬ್ರಿಟನ್ನಿನ ಪಾರ್ಲಿಮೆಂಟಿನಲ್ಲೂ ಹೀಗೇ ನಡೆಯುತ್ತದೆಯೇ ಹೇಳಿ...

**ಕೆ. ಹೆಚ್. ಪಾಟೀಲ್:** ನೀವಾಗಲೀ, ನಾವಾಗಲೀ ಮಂತ್ರಿಗಳಾದಾಗ್ಯೂ ಹೀಗೆ ನಡೆಯುವುದು ಸರಿಯೇ, ನಮ್ಮೆಲ್ಲರಿಗೂ ಏನಾಗಿದೆ? ಮೂರು ದಿವಸಗಳಲ್ಲಿ ಉತ್ತರ ಸಿಗದಿದ್ದಲ್ಲಿ ಸಂಬಂಧಪಟ್ಟವರನ್ನು ಸಸ್ಪೆಂಡೋ, ಡಿಸ್‌ಮಿಸ್ಸೋ ಮಾಡುತ್ತಿದ್ದೆವು. ಮಾನ್ಯ ಹೆಗಡೆಯವರೇ ಉತ್ತಮ ಸಂಪ್ರದಾಯ ಹಾಕಿ, ನನ್ನ ಆತ್ಮೀಯ ಮಿತ್ರ ಮಾನ್ಯ ಜೆ.ಹೆಚ್. ಪಟೇಲರು

ವಾತಾವರಣವನ್ನು ತಿಳಿಗೊಳಿಸಲು ಹೀಗೆ ಹೇಳುತ್ತಾರೆ ಎನ್ನುವುದು ನಮಗೂ ಅರ್ಥವಾಗುತ್ತೆ. ಆದರೆ ಅವರು ಹೇಳಿದ್ದನ್ನು ನಮ್ಮ ಅಧಿಕಾರ ವರ್ಗ ಲಘುವಾಗಿ ತೆಗೆದುಕೊಂಡಿದ್ದೇ ಆದಲ್ಲಿ ತೂಕಡಿಸುವವರಿಗೆ ಹಾಸಿಗೆ ಹಾಸಿದಂತೆ ಆಗುತ್ತೆ. ಹುಷಾರು..

(ವಿಧಾನಸಭೆ ಕಲಾಪ : ಸೆಪ್ಟೆಂಬರ್ 7 ,1987)

## ನ್ಯಾಯಾಂಗ ತನಿಖೆ : ಮೂಲ ಉದ್ದೇಶದ ಅಪಹರಣ

ನ್ಯಾಯಾಂಗ ತನಿಖೆ ನೇಮಿಸಬೇಕೆಂದು ಸದನಗಳಲ್ಲಿ ಸದಸ್ಯರುಗಳಿಂದ ಒತ್ತಡ ಬಂದಂಥ ಸಂದರ್ಭದಲ್ಲಿ ಅದು ಮೆರಿಟ್ ಕೇಸ್ ಆಗಿದ್ದರೆ ತಕ್ಷಣ ನ್ಯಾಯಾಂಗ ತನಿಖೆ ಎಂದು ಹೇಳುತ್ತೇವೆ. ತಮ್ಮಲ್ಲಿ ಅತ್ಯಂತ ಗೌರವಯುತವಾಗಿ ಮನವಿ ಮಾಡಿಕೊಳ್ಳುವುದೇನೆಂದರೆ, ಯಾವ ಆತುರದಲ್ಲಿ ನಾವು ನ್ಯಾಯಾಂಗ ತನಿಖೆಯನ್ನು ನೇಮಿಸುತ್ತೇವೋ, ಈ ಆತುರದ ಪರಿಣಾಮ ಕೊನೆಗೆ ಏನಾಗುತ್ತದೆಂದರೆ ಯಾವ ವ್ಯಕ್ತಿಗೆ ನ್ಯಾಯ ಸಿಗಬೇಕಾಗಿತ್ತೋ ಅದು ಸಿಗದಿರುವಂಥ ಅನುಭವವಾಗಿದೆ.

ಕಳೆದ ಮೂರು ವರ್ಷಗಳಲ್ಲಿ ಒಟ್ಟು ಒಂಭತ್ತು ನ್ಯಾಯಾಂಗ ತನಿಖೆಗಳನ್ನು ನೇಮಿಸಲಾಗಿದ್ದು, ವಿಚಾರಣೆ ನಡೆಸಲು ನ್ಯಾಯಮೂರ್ತಿಗಳಿಗೆ ಅನುಮತಿ ಕೊಟ್ಟಿದ್ದು; ಅವರಲ್ಲಿ ಕೆಲವು ನ್ಯಾಯಮೂರ್ತಿಗಳು ತನಿಖೆ ನಡೆಸಿದ್ದು, ಇನ್ನು ಕೆಲವರು ಎರಡು-ಮೂರು ವರ್ಷಗಳಾಗುತ್ತಾ ಬಂದಿದ್ದರೂ ವಿಚಾರಣೆ ನಡೆಸುತ್ತಿರುವುದರಿಂದ ಸಾಕಷ್ಟು ಹಣವೂ ಖರ್ಚಾಗಿದೆ.

ತಮಗೆ ಈಗಾಗಲೇ ಒದಗಿಸಿರುವ ಉತ್ತರದ ಅನುಬಂಧದಲ್ಲಿ ನ್ಯಾಯಮೂರ್ತಿ ಕೆ. ಜಗನ್ನಾಥಶೆಟ್ಟಿ ವಿಚಾರಣಾ ಆಯೋಗದಲ್ಲಿ ಇಪ್ಪತ್ತೇಳು ಲಕ್ಷ ರೂಪಾಯಿಗಳು ಖರ್ಚಾಗಿದೆ. Judicial enquiry is not a punishing body. They can only recommend. Ultimately, Court has to take a decision. ಆ ನ್ಯಾಯಮೂರ್ತಿಗಳಿಗೂ ವಿನಾಕಾರಣ ಸಮಯಹರಣವಾಗುತ್ತದೆ. ಸರ್ಕಾರಕ್ಕೂ ಖರ್ಚಾಗುತ್ತದಾದ್ದರಿಂದ ಇನ್ನು ಮುಂದೆ ಯಾವುದೇ ನ್ಯಾಯಾಂಗ ತನಿಖೆಗೆ ಅಧಿಕಾರದಲ್ಲಿ ಸರ್ಕಾರ ಅವರದೇ ಇರಲಿ, ನಮ್ಮದೇ ಇರಲಿ ನ್ಯಾಯಾಂಗ ತನಿಖೆ ನಡೆಸಲು ಸರ್ಕಾರ ಒಪ್ಪಿಕೊಂಡ ತಕ್ಷಣ ಆರು ತಿಂಗಳೊಳಗೆ ತನಿಖೆ ನಡೆಸಿ ಮುಗಿಸಬೇಕೆಂಬ ಒಂದು ಕಾಲಮಿತಿ ಹಾಕಬೇಕು. ಇಲ್ಲದಿದ್ದರೆ, ಸುಮ್ಮನೆ ಈ ರೀತಿ ವಿಚಾರಣಾ ಆಯೋಗಗಳನ್ನು ನೇಮಿಸಿಕೊಂಡು, ಹಣ ಖರ್ಚು ಮಾಡುತ್ತಾ ಹೋದರೆ, Ultimately by the time the report comes, the wholething would have been infructuous.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನ ಪರಿಷತ್ತು ಜುಲೈ 18, 1996)

## ಭ್ರಷ್ಟಾಚಾರ ಹುಟ್ಟುವ ಸ್ಥಳ

ನಾನು 1967ರ ಲೋಕಸಭಾ ಚುನಾವಣೆಯಲ್ಲಿ ಕೇವಲ 29 ಸಾವಿರ ರೂಪಾಯಿಗಳನ್ನು ಖರ್ಚುಮಾಡಿ ಗೆದ್ದು ಲೋಕಸಭೆಗೆ ಹೋಗಿದ್ದೆ. ಈಗ ಒಬ್ಬ ಪಂಚಾಯಿತಿ ಸದಸ್ಯ ಕನಿಷ್ಠ 50 ಸಾವಿರ ರೂಪಾಯಿಗಳನ್ನು ಎದುರಾಳಿಯನ್ನು ಸೋಲಿಸುವುದಕ್ಕೆ ಖರ್ಚು ಮಾಡುತ್ತಾನೆ. ಆದರೆ, ಆ ಪಂಚಾಯಿತಿಯಲ್ಲಿ 30 ಸಾವಿರ ರೂಪಾಯಿಗಳ ಬಂಡವಾಳ ಇರುವುದಿಲ್ಲ. ಈ ರೀತಿಯಾಗಿ ಚುನಾವಣೆಗಳು ಭ್ರಷ್ಟಾಚಾರವನ್ನು ಹುಟ್ಟಿಸತಕ್ಕಂತಹ ಮಾತೃಭೂಮಿಗಳಾಗಿವೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಜುಲೈ 22, 1999)

## ಕಡತದಿಂದ * ಇವರ ಹೆಸರು ತೆಗೆದ ಪ್ರಕರಣ

ಎ.ಕೆ. ಸುಬ್ಬಯ್ಯ: ಬಡವರಿಗೆ ಅನ್ಯಾಯವಾಗುವ ಪ್ರಕರಣಗಳು ಬಹು ಹಿಂದಿನಿಂದ ನಡೆದುಕೊಂಡೇ ಬಂದಿವೆ. ಇದು ಮಾನ್ಯ ಬಸವಲಿಂಗಪ್ಪನವರು ಕಂದಾಯ ಮಂತ್ರಿಗಳಾದ ಕಾಲದಿಂದ ಹಿಡಿದು ಇಂದು ಮಾನ್ಯ ಜಾಲಪ್ಪನವರು ಮಂತ್ರಿಯಾಗಿರುವವರೆಗೂ ನಡೆಯುತ್ತಲೇ ಬಂದಿದೆ. ನಿದರ್ಶನವೊಂದನ್ನು ಹೇಳುತ್ತೇನೆ. ಶ್ರೀ ಬುಡಿಗೆಪ್ಪ ಎಂಬಾತನಿಗೆ ರೆಗ್ಯುಲೇಟೆಡ್ ಮಾರ್ಕೆಟಿನಲ್ಲಿ ಅಂಗಡಿಯೊಂದನ್ನು ಅಲಾಟ್ ಮಾಡುವ ವಿಷಯ. ನಾನು ಆಗ ನಗರಾಭಿವೃದ್ಧಿ ಸಚಿವರಾಗಿದ್ದ * ರವರಿಗೆ ಒಂದು ಪತ್ರ ಬರೆದೆ.

(**** ಈ ಪದಗಳನ್ನು ಮಾನ್ಯ ಸಭಾಪತಿಯವರ ಆದೇಶದ ಮೇರೆಗೆ ಕಡತದಿಂದ ತೆಗೆಯಲಾಗಿದೆ)

ಜೆ.ಹೆಚ್. ಪಟೇಲ್ (ಭಾರಿ ಕೈಗಾರಿಕೆ ಮಂತ್ರಿ): ಈಗ ಈ ಸಭೆಯ ಸದಸ್ಯರಲ್ಲದವರ ಬಗ್ಗೆ ಇವರು ಈ ರೀತಿ ಹೇಳಿದರೆ ಹೇಗೆ?

ಕಾಗೋಡು ತಿಮ್ಮಪ್ಪ: ಅವರು ಮಂತ್ರಿಗಳಾಗಿದ್ದಾಗ ಮಾಡಿದ್ದನ್ನು ಇವರು ಹೇಳಿದ್ದಾರೆ.

ಜೆ.ಹೆಚ್. ಪಟೇಲ್: ಹಾಗೆ ಹೇಳುವುದು ನಿಯಮಾವಳಿಯ ವಿರುದ್ಧ ಆಗುತ್ತದೆ. ಏನಾದರೂ ಹೇಳುವುದಿದ್ದರೆ ಈಗಿರುವ ಮಂತ್ರಿಗಳ ವಿರುದ್ಧ ಹೇಳಲಿ.

ಕೆ.ಎನ್. ನಾಗೇಗೌಡ: ಆಡಳಿತ ಪಕ್ಷದವರು ದಿವಂಗತರಾದ ದೇಶದ ನಾಯಕಿ ಶ್ರೀಮತಿ ಇಂದಿರಾಗಾಂಧಿಯವರ ಬಗ್ಗೆ ಹೇಳುತ್ತಿರುತ್ತಾರೆ. ನಾವು ಈ ಹಿಂದಿನ ಮಂತ್ರಿಗಳ ಬಗೆಗೆ ಹೇಳುವುದು ಯಾವ ರೀತಿ ತಪ್ಪು ಎನ್ನುತ್ತೀರಾ?

ಕಾಗೋಡು ತಿಮ್ಮಪ್ಪ: ಯಾರು ಮಂತ್ರಿಗಳಾಗಿದ್ದಾಗ ತಪ್ಪು ಆಯಿತು ಎನ್ನಲು * ಅವರ ಹೆಸರನ್ನು ಹೇಳಲಾಗಿದೆ.

**ಜೆ.ಹೆಚ್. ಪಟೇಲ್:** ಅವರು ಸತ್ಯ ಸಂಗತಿಗಳನ್ನು ಹೇಳಿದರೆ ಸತ್ಯ ಎಂದು ಒಪ್ಪಿಕೊಳ್ಳೋಣ. ಆದರೆ ನೀವು ಕಂಡಿದ್ದೇ ಸತ್ಯ ಎಂದು ಹೇಳಲು ಬಂದೀತೇ? ನಿಮ್ಮ ಮಾತು ಬೇರೆಯವರ ದೃಷ್ಟಿಯಲ್ಲಿ ಸತ್ಯವಾಗದಿರಬಹುದು. ತಮ್ಮ ಅಭಿಪ್ರಾಯಗಳನ್ನು ತಾವು ಹೇಳುವಾಗ ಈ ಸದನದಲ್ಲಿ ತಮ್ಮನ್ನು ರಕ್ಷಣೆ ಮಾಡಿಕೊಳ್ಳವವರು ಇದ್ದರೆ ಮಾತ್ರ ಅಂತಹವರ ಬಗ್ಗೆ ಹೇಳಿ. ಅದನ್ನು ಬಿಟ್ಟು ಬೇರೆಯವರ ಬಗ್ಗೆ ಹೇಳುವುದು ಸರಿ ಅಲ್ಲ.

**ಕಾಗೋಡು ತಿಮ್ಮಪ್ಪ:** ಹಿಂದಿನ ಮಂತ್ರಿಗಳ ಕೆಲಸದ ಬಗ್ಗೆ ಸರ್ಕಾರ ಸಮಜಾಯಿಷಿ ಕೊಡಲಿ.

**ಜೆ.ಹೆಚ್. ಪಟೇಲ್:** ಈ ಮನೆಯ ಸದಸ್ಯರಲ್ಲದವರ ಹೆಸರನ್ನು ಇವರು ಇಲ್ಲಿ ಪ್ರಸ್ತಾಪ ಮಾಡುವುದು ಸರಿಯಲ್ಲ. ಅದು ಅಧಿಕೃತ ದಾಖಲೆಯಲ್ಲಿ ಇರಲೂ ಬಾರದು.

**ಮಾನ್ಯ ಸಭಾಪತಿ:** ಇಬ್ಬರು ಮಾನ್ಯ ಸದಸ್ಯರುಗಳು ಸದನದಲ್ಲಿ ಮಾತನಾಡುವಾಗ * ಅವರ ಹೆಸರನ್ನು ಹೇಳಿದ್ದಾರೆ. ಅದನ್ನು ನಾನು ಕಡತದಿಂದ ತೆಗೆದುಹಾಕಿದ್ದೇನೆ.

(ವಿಧಾನ ಪರಿಷತ್ ಕಲಾಪ: ಮಾರ್ಚ್ 17, 1985)

## ದಿನಾ ಧರಣಿ : ನಗೆಪಾಟಲು

ವಿನಾಕಾರಣ ಅಥವಾ ಸಣ್ಣಪುಟ್ಟ ಕಾರಣಗಳಿಗೆಲ್ಲಾ ವಿಧಾನ ಮಂಡಲದ ಸದನಗಳಲ್ಲಿ ಧರಣಿ ಹೂಡುವ ಪ್ರವೃತ್ತಿ ಪ್ರಜಾತಂತ್ರ ವ್ಯವಸ್ಥೆಗೆ ಶೋಭೆ ತರುವುದಿಲ್ಲ.

ಇದು ನಗೆಪಾಟಲಿನ ವರ್ತನೆ ಜನ ಸದನಗಳನ್ನು ನೋಡಿ ನಗುತ್ತಾರೆ; ಇದು ತಪ್ಪಬೇಕು.

ಧರಣಿಗೆ ನೆಲ ಹಿಡಿಯುವುದು ಎಂದು ಅರ್ಥ. ಪ್ರತಿನಿತ್ಯವೂ ಧರಣಿ ಮಾಡುವುದು ಅನರ್ಥ. ಪ್ರತಿದಿನವೂ ನೆಲ ಹಿಡಿಯುವುದೇ ಆದರೆ ನಾವೇಕೆ ಶಾಸನ ಸಭೆಗಳಿಗೆ ಬರಬೇಕು. ಬೇರೆ ಎಲ್ಲಾದರೂ ಹೋಗಬಹುದಿತ್ತು ಅಲ್ಲವೇ?

ವಿಧಾನಸಭೆಗೆ ಬಂದು ಯಾವುದು ಆರ್ಗ್ಯೂಯೇಬಲ್ ಕೇಸ್ ಎಂದು ನೋಡಿ ಕನ್‌ವಿನ್ಸ್ ಮಾಡಬೇಕು. ಇಲ್ಲ ಎಂದರೆ ಕನ್‌ವಿನ್ಸ್ ಆಗಬೇಕು. ಈ ಧರಣಿ ಶೋನಿಂದ ಏನೂ ಆಗುವುದಿಲ್ಲ. ದಿನವೂ calculated damage to the time of the House ಇದು ಪ್ರಜಾತಂತ್ರಕ್ಕೆ ಆಗತಕ್ಕಂಥ ಅಪಚಾರ. ಪ್ರತಿದಿವಸ ನೀರು ಬಿಟ್ಟರು ಎಂದರು. ನೀರು ಏಕೆ ಬಿಟ್ಟೆವು ಎಂದು ಹೇಳಿದ್ದೇವೆ ಆಗಲೂ ಧರಣಿ.

ಎಲೆಕ್ಟ್ರಿಸಿಟಿ ಬಿಲ್ ಜಾಸ್ತಿ ಮಾಡಿದೆವು, ಏಕೆ ಮಾಡಿದೆವು ಎಂದು ಹೇಳಿದಾಗ ಅದಕ್ಕೆ ಧರಣಿ.

ಇಲ್ಲಿ ಇವತ್ತು ಪಂಚಾಯತ್ ರಾಜ್ ವ್ಯವಸ್ಥೆಗೆ ಈ ಸದನದಿಂದ ಏನೂ ಆಗಿಲ್ಲ. ನಾವು ಒಂದು ರೆಕಮೆಂಡೇಷನ್ ಅನ್ನು ಲೋಕಸಭಾ ಅಧಿವೇಶನ ಇರುವಾಗ ರೆಕಮೆಂಡ್ ಮಾಡಿದ್ದೇವೆ. ಆ ರೆಕಮೆಂಡ್ ಮಾಡಿದ್ದಕ್ಕೆ ಇಲ್ಲಿ ಧರಣಿ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಜುಲೈ 15, 1996)

## "ರೆಚೆಡ್" ಪದ ಅಸಂಸದೀಯವೇ?

ಸಂದರ್ಭ: 'ಪಾರ್ಲಿಮೆಂಟರಿ' ಅಥವಾ 'ಅನ್‌ಪಾರ್ಲಿಮೆಂಟರಿ' ಎಂಬ ಜಿಜ್ಞಾಸೆ ಬಂದಾಗಲೆಲ್ಲಾ ಪೊಳ್ಳು ಪಾಂಡಿತ್ಯಕ್ಕೆ ಮಾರುಹೋಗದೆ ವಾಸ್ತವವನ್ನು ತೆರೆದಿಡುವ ಪ್ರಯತ್ನ ನಡೆಸಿದ ಸಂಸದೀಯ ಪಟುಗಳು ನಮ್ಮಲ್ಲಿದ್ದಾರೆ. ಈ ಪೈಕಿ ಪಟೇಲರೂ ಒಬ್ಬರು.

ಪದಗಳು ತಮ್ಮಷ್ಟಕ್ಕೆ ತಾವೇ ಒಳ್ಳೆಯವೂ ಅಲ್ಲ; ಕೆಟ್ಟವೂ ಅಲ್ಲ ಎಂಬ ಖಚಿತ ಧೋರಣೆ ಪಟೇಲರದು. ಪದಗಳನ್ನು ಅರ್ಥೈಸಿಕೊಳ್ಳುವಲ್ಲಿ, ಮಣ್ಣಿನ ನಂಟು ಇದ್ದವರು ಮಾತ್ರ ವಿಶ್ಲೇಷಣೆಯನ್ನು ಸರಿಯಾಗಿ ಮಾಡಬಲ್ಲರು ಎಂಬುದು ಇವರ ವಾದ. ಆಯಾ ಪರಿಸರ, ಬದುಕು ಮತ್ತು ಸಮಾಜದ ನಂಬಿಕೆಯನ್ನು ಅವಲಂಬಿಸಿ ಪದಗಳು ಅಭಿವ್ಯಕ್ತವಾಗಬೇಕೇ ವಿನಃ ಪದಕೋಶಗಳಿಗೆ (dictionary) ಒಪ್ಪುವಂತೆ ಅಂಚು ಕತ್ತರಿಸುವ ಆಭಾಸದ ಕಸರತ್ತು ಆಗಬಾರದು ಎಂಬುದು ಪಟೇಲರ ನಿಲುವು.

ಶಾಸಕರ ಬುದ್ಧಿಮತ್ತೆಯನ್ನು ಕೆಣಕಿ, ಪದಗಳ ವಿಭಿನ್ನ ಪರಿಕಲ್ಪನೆಯ ಸೂಕ್ಷ್ಮತೆ ವಿವರಿಸಲು ಪಟೇಲರು ಮುಂದಾದ ಸಂದರ್ಭವೊಂದು ಇಲ್ಲಿದೆ. ಆಡಳಿತ ಕಾಂಗ್ರೆಸ್ (ಐ) ಪಕ್ಷದ ಮಾನ್ಯ ವೀರಣ್ಣ ಮತ್ತಿಕಟ್ಟಿ ಮತ್ತು ಪ್ರತಿಪಕ್ಷದ ಪ್ರೊ: ಲಕ್ಷ್ಮೀಸಾಗರ್ ನಡುವೆ 'ರೆಚೆಡ್' ಎಂಬ ಪದದ ಬಗೆಗೆ ವಾಗ್ವಾದ ನಡೆದಾಗ..

**Speaker (K.H. Ranganath):** I have requested both of you to withdraw.

**Prof: A. Lakshmi Sagar:** I have not called him by that name.

**Speaker:** You have stated wretched Government.

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಆ ಶಬ್ದಗಳಲ್ಲಿ ಬೇರೊಬ್ಬ ಸದಸ್ಯರನ್ನು ಕುರಿತು ಮಾತನಾಡಿದರೆ ಅದು ಯಾವ ರೀತಿ ಅರ್ಥ ಬರುತ್ತದೆ ರೂಲ್ ನಂಬರ್ 315 ರಲ್ಲಿ ಸ್ಪಷ್ಟವಾಗಿ ಕೊಟ್ಟಿದೆ. ಅದನ್ನು ತಮ್ಮ ಗಮನಕ್ಕೆ ತರುತ್ತೇನೆ. ಅದು ಈ ರೀತಿ ಇದೆ.

ಇತರರಿಗೆ ಮಾನನಷ್ಟ ಮಾಡುವಂಥಾ ಅಥವಾ ಅಸಭ್ಯವಾದ ಅಥವಾ ಸಭಾ ಮರ್ಯಾದೆಗೆ ತಕ್ಕುದಲ್ಲವಾದ ಅಥವಾ ವ್ಯಕ್ತಿಯ ಘನತೆಗೆ ಯೋಗ್ಯವಲ್ಲದ ಪದವನ್ನು ಅಥವಾ

ಪದಗಳನ್ನು ಚರ್ಚೆಯಲ್ಲಿ ಉಪಯೋಗಿಸಿದೆ" ಎಂಬುದಾಗಿ ಅಧ್ಯಕ್ಷರಿಗೆ ಮನವರಿಕೆಯಾದರೆ ಆಗ ಅದು ಅಸಂಸದೀಯ ಪದ.

ಅಧ್ಯಕ್ಷರು: ಹಾಗಾದರೆ ಸಭಾಮರ್ಯಾದೆ ಏನಾಯಿತು?

ಜೆ.ಹೆಚ್. ಪಟೇಲ್: ಸಭಾ ಮರ್ಯಾದೆ ಇದೆ. ಆದರೆ ಅದು ಅನ್‌ಪಾರ್ಲಿಮೆಂಟರಿ ಆಗುವುದಿಲ್ಲವೇ?

ಅಧ್ಯಕ್ಷರು: ಅದನ್ನು ನೀವೇ ಹೇಳಿಬಿಡುತ್ತೀರಲ್ಲಾ, ನಾನು ಅದರ ಬಗ್ಗೆ ಇನ್ನೂ ರೂಲಿಂಗ್ ಅನ್ನೇ ಕೊಟ್ಟಿಲ್ಲಾ ಅದಕ್ಕೂ ಮುಂಚೆ ನೀವೇ ಈ ರೀತಿ ಹೇಳುತ್ತೀರಲ್ಲಾ.

ಜೆ.ಹೆಚ್. ಪಟೇಲ್: ನಾನು ಅನ್‌ಪಾರ್ಲಿಮೆಂಟರಿ ಆಗುತ್ತದೆ ಅಂತ ಹೇಳಿಲ್ಲಾ. ಈ ಪದ ಏನು ಇದೆ ಅದು ಅನ್‌ಡಿಗ್ನಿಫೈಡ್ ಮತ್ತು ಇನ್‌ಡೀಸೆಂಟ್ ಆಗತಕ್ಕಂಥಾ ಸಾಧ್ಯತೆ ಇದೆ. ಆದುದರಿಂದ ಇಬ್ಬರೂ ಕೂಡ ವಾಪಸ್ ತೆಗೆದುಕೊಳ್ಳಬೇಕು ಎಂದು ಹೇಳುತ್ತೇನೆ. ಇನ್ನೊಂದು ವಿಷಯ ಏನೆಂದರೆ ಮಾನ್ಯ ಲಕ್ಷ್ಮೀಸಾಗರ್‌ರವರು ಉಪಯೋಗಿಸಿರತಕ್ಕಂಥಾ ಪದದಲ್ಲಿ ಯಾವ ಅರ್ಥ ಬರುತ್ತದೆ ಮತ್ತು ಮಾನ್ಯ ಮತ್ತಿಕಟ್ಟಿಯವರು ಉಪಯೋಗಿಸಿರತಕ್ಕಂಥಾ ಪದದಲ್ಲಿ ಯಾವ ಅರ್ಥ ಬರುತ್ತದೆ ಅವರೆಡನ್ನೂ ನೋಡುವುದಾದರೆ ಸಭಾ ಮರ್ಯಾದೆಗೆ ತಕ್ಕುದಲ್ಲ ಅನ್ನುವ ವ್ಯಾಪ್ತಿಯೊಳಗೆ ಬರುವುದಿಲ್ಲ. ಅವರು ಇನ್ನೊಬ್ಬ ವ್ಯಕ್ತಿಯ ಘನತೆಗೆ ಕುಂದು ತರಕ್ಕಂಥಾ ಮಾತನಾಡಿಲ್ಲಾ. ಆದರೆ ಅವರು ಉಪಯೋಗಿಸಿದ ಪದ ಸಭಾ ಮರ್ಯಾದೆಗೆ ತಕ್ಕುದಲ್ಲ ಅನ್ನುವ ಅಭಿಪ್ರಾಯ ಆದರೆ ಅದನ್ನು ಏನು ಮಾಡಬೇಕೆನ್ನುವುದು ತಮ್ಮ ಅಧಿಕಾರಕ್ಕೆ ಬಿಟ್ಟದ್ದು. ಒಂದುವೇಳೆ ತಮ್ಮ ಅಭಿಪ್ರಾಯದಲ್ಲಿ ಸಭಾಮರ್ಯಾದೆಗೆ ತಕ್ಕುದಲ್ಲ ಅಂತ ಆದರೆ ಅದು ಅನ್‌ಪಾರ್ಲಿಮೆಂಟರಿ."

**Speaker:** I will examine it.

**Prof: A. Lakshmi Sagar:** Sir I have been very objective in my assesment to the best of my ability.

ಮಳ್ಳೂರು ಆನಂದರಾವ್: ಅವರು ಏನು ಹೇಳಬೇಕೋ ಅದನ್ನು ಸರಿಯಾದ ರೀತಿಯಲ್ಲಿ ಹೇಳಲಿ. ತಾವು ಅವರು ಉಪಯೋಗಿಸಿರತಕ್ಕ ಪದದ ಬಗ್ಗೆ ತೀರ್ಪು ಕೊಡಬೇಕು.

**Prof: A. Lakshmi Sagar:** Sir, I have called hundred times. That this is a ** Government. I may be a wretched man. It does not matter.

(ಗೊಂದಲ)

---

** As ordered by the Chair the word is expunged.

**S.R. Bommai:** Sir, I raise a point of order, ಅವರು ಹೇಳಿದ ಮಾತುಗಳು ಅನ್‌ಪಾರ್ಲಿಮೆಂಟರಿ ಎಂದು ತಮ್ಮ ಅಭಿಪ್ರಾಯ ಆದರೆ ಅವುಗಳನ್ನು ತೆಗೆದುಹಾಕಿ, ಆದರೆ, ವೈಯಕ್ತಿಕವಾಗಿ ಒಬ್ಬ ಸದಸ್ಯರನ್ನು ರೆಚೆಡ್ ಎಂದು ಹೇಳುವುದು ಸರಿಯಲ್ಲ.

ಮತ್ತಿಕಟ್ಟಿ: ಅವರು ಗೌರ್ನಮೆಂಟ್‌ನ್ನು ಹಾಗೆ ಹೇಳುವುದಾದರೆ, ನಾವು ಏತಕ್ಕೆ ** ಪರ್ಸನ್ ಎಂದು ಕರೆಯಬಾರದು?

ಎಸ್.ಆರ್. ಬೊಮ್ಮಾಯಿ: ಆವೇಶ ಬೇಡ.

ಎಂ. ವೀರಪ್ಪ ಮೊಯ್ಲಿ: ಎರಡೂ ಕಡೆಯವರಿಗೂ ತಿಳಿಸಿ.

ಎಸ್.ಆರ್. ಬೊಮ್ಮಾಯಿ: "ರೆಚೆಡ್" ಅನ್‌ಪಾರ್ಲಿಮೆಂಟರಿ ಹೌದೋ ಅಲ್ಲವೋ ಎನ್ನುವ ಬಗ್ಗೆ ತಾವು ನಿರ್ಣಯ ಕೊಡಿ. ಇಂಗ್ಲೀಷ್ ಭಾಷೆಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಕೆಲವರಿಗೆ ಕಷ್ಟ ಇದೆ, ಅವರು ಪ್ರೊಫೆಸರ್ ಇದ್ದಾರೆ, ಒಂದೊಂದು ಸಾರಿ high standard ಇಂಗ್ಲೀಷಿನಲ್ಲಿ ಮಾತನಾಡುತ್ತಾರೆ. ಇಲ್ಲಿ ಉದ್ವೇಗಕ್ಕೆ ಕಾರಣ ಇಲ್ಲ, ಉಪಯೋಗಿಸಿರತಕ್ಕ ಪದದ ಬಗ್ಗೆ ತಾವು ನಿರ್ಣಯ ಕೊಡಿ. ಆದರೆ ಸದಸ್ಯರನ್ನು ವೈಯಕ್ತಿಕವಾಗಿ ರೆಚೆಡ್ ಅಂತ ಹೇಳುವುದನ್ನು ತೆಗೆಸಿ ಹಾಕಬೇಕು.

ಅಧ್ಯಕ್ಷರು: ಲಕ್ಷ್ಮೀಸಾಗರ್‌ರವರು ಸ್ವಲ್ಪ ರಿಸ್ಟ್ರೈನ್ಡ್ ಆಗಿ ಹೇಳುವುದಕ್ಕೆ ಪ್ರಯತ್ನ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಜೆ.ಎಚ್. ಪಟೇಲ್: ಸರ್ಕಾರದವರು ಮಾಡಿರತಕ್ಕ ಕೆಲಸಗಳಿಂದಾದ ಪರಿಣಾಮಗಳನ್ನು ತೋರಿಸುವುದಕ್ಕೋಸ್ಕರ ವಿರೋಧ ಪಕ್ಷದವರು ಕೆಲವು ಅನಿಸಿಕೆಗಳನ್ನು ಹೇಳಬೇಕಾಗುತ್ತದೆ. ಹಾಗೆ ಹೇಳುವಾಗ ಈ ಸಭೆಯ ನಿಯಮಾವಳಿ ಚೌಕಟ್ಟಿನಲ್ಲಿ ಹೇಳುವಂತಾದ್ದು ಇದೆ, ರೆಚೆಡ್ ಅಂದರೆ, The dictionary meaning is as follows, "very unfortunate or miserable person, despicable person, person without conscience or shame. (often as term of playful abuse)" This is the meaning of wretched. How could it become unparliamentary? I will now quote the rule.

(ವಿಧಾನಸಭೆ ಕಲಾಪ ಮಾರ್ಚಿ 23, 1981)

---

** As ordered by the Chair the word is expunged.

**ವಿಚಾರದ ಸ್ವಚ್ಛತೆ : ಆಚರಣೆಯ ಗೊಂದಲ**

ಪಟೇಲರನ್ನು ನಾನು ಬಾಲ್ಯದಿಂದ ಬಲ್ಲವಳು. ನಮ್ಮ ನಿರೀಕ್ಷೆಯ ಪ್ರಮಾಣದಷ್ಟು ಅವರು ಸಾಧಿಸಲಾಗಲಿಲ್ಲ ಎಂಬುದೂ ನಿಜ. ಪಟೇಲರಿಗೆ ಸಿಟ್ಟು ಇರುತ್ತಿತ್ತೇ ವಿನಃ ಎಂದೂ ದ್ವೇಷ ಇರುತ್ತಿರಲಿಲ್ಲ. ವಿಚಾರದ ಸ್ವಚ್ಛತೆ ಇತ್ತಾದರೂ ಆಚರಣೆಯಲ್ಲಿ ಗೊಂದಲವಿತ್ತು. ಪಟೇಲರದು ಅಪ್ಪಟ ಚಿನ್ನದಂತಹ ವ್ಯಕ್ತಿತ್ವ.

(ಶ್ರೀಮತಿ ಪ್ರಫುಲ್ಲಾ ಮಧುಕರ್ (ವಿಧಾನ ಪರಿಷತ್) ಫೆಬ್ರವರಿ 27, 2001)

# 5

# ಭೂ ಸುಧಾರಣೆ

## ಬಡಗೇಣಿದಾರನ ಭೂ ಕೈಲಾಸ

ಸ್ವಾತಂತ್ರ್ಯಾನಂತರದ ದಶಕಗಳಲ್ಲಿ ಮಾನವ ಕಲ್ಯಾಣಕ್ಕಾಗಿ ನಮ್ಮ ಶಾಸಕಾಂಗ ಯಾವುದಾದರೊಂದು ಕ್ರಾಂತಿಕಾರಕ ಹೆಜ್ಜೆಯನ್ನು ಇಟ್ಟಿದೆ ಎನ್ನಬಹುದಾದಲ್ಲಿ ಅದು ಭೂ ಸುಧಾರಣೆ ಮತ್ತು ಜೀತವಿಮುಕ್ತಿ ಕಾನೂನು.

ನಾಡಿನ ಒಡಲನ್ನು ತುಂಬುವ ಮಣ್ಣಿನ ಮಕ್ಕಳ ಬದುಕಿನೊಂದಿಗೆ ಚೆಲ್ಲಾಟವಾಡಿದ ಗೇಣಿದಾರ-ಭೂಮಾಲೀಕರ ಒಪ್ಪಂದ ನೂರಾರು ವರುಷಗಳಿಂದ ಬೇರುಬಿಟ್ಟಿದ್ದ ಒಂದು ರೀತಿಯ ಶೋಷಣೆಯ ಸಂಕಿರಣ. ಬ್ರಿಟಿಷರ ಆಳ್ವಿಕೆಯಲ್ಲಿ ಪರಾಕಾಷ್ಠೆ ಮುಟ್ಟಿದ ಈ ಹುನ್ನಾರದಲ್ಲಿ ಭೂಮಿ ಉಳುವಾತ ಅಸಹಾಯಕ. ನಿಕೃಷ್ಟ. ಆಳರಸರಿಗೆ ಕಪ್ಪಕಾಣಿಕೆ ಒಪ್ಪಿಸುವ ಶ್ರೀಮಂತ ಜಮೀನ್ದಾರರ ವಿರುದ್ಧ ಸೊಲ್ಲೆತ್ತುವ ಧೈರ್ಯ ಆತನಿಗಿರಲಿಲ್ಲ. ಹಾಗೆಂದ ಮಾತ್ರಕ್ಕೆ ಎಲ್ಲ ಭೂಮಾಲೀಕರೂ ಶೋಷಕರು ಎಂದು ಹೇಳುವಂತಿಲ್ಲ. ಒಡೆಯ – ಗೇಣಿದಾರ ತಂದೆ-ಮಗನಂತಿದ್ದ ನಿದರ್ಶನಗಳೂ ಇವೆ. ಆದರೆ ಇಂತಹ ಸಂಬಂಧ ಅಲ್ಲೊಂದು-ಇಲ್ಲೊಂದು.

ಗೇಣಿ ವ್ಯವಸ್ಥೆಯ ಅಪವಿತ್ರ ಸಂತಾನ ಜೀತ ಪದ್ಧತಿ. ನಮ್ಮ ಸಮಾಜದಲ್ಲಿ ಅರಿತೋ ಅರಿಯದೆಯೋ ನಡೆದಿತ್ತು ಈ ಅಮಾನುಷ ಕ್ರೌರ್ಯ. ಪಟೇಲರ ದೃಷ್ಟಿಯಲ್ಲಿ ಇವೆರಡೂ ಗುಲಾಮಗಿರಿಯ ಸಂಕೇತಗಳೇ. ಕಾರಿಗನೂರಿನ ಶ್ರೀಮಂತ ಜಮೀನುದಾರನ ವಂಶಸ್ಥ ಜಯದೇವಣ್ಣನವರ ಬದುಕಿನ ಒಂದೆರಡು ಮಜಲುಗಳನ್ನು ಇಲ್ಲಿ ಗುರುತಿಸಿದಲ್ಲಿ ಪ್ರಸ್ತುತವಾದೀತು.

ಹದಿನೇಳನೆಯ ವಯಸ್ಸಿನಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಬ್ರಿಟೀಷರ ಬೂಟುಗಾಲಿನ ಪೆಟ್ಟು ತಿಂದವರು ಪಟೇಲರು.

'ಕಾರಿಗನೂರ ಪಟೇಲರ ಮಗ ಜಯಣ್ಣ ಶಿವಮೊಗ್ಗ ಜೈಲಾಗದಾನಂತೆ'- ಇದು ಅಂದು ಮಲೆನಾಡಿನ ತುಂಬೆಲ್ಲಾ ಕೇಳುತ್ತಿದ್ದ ಮನೆ ಮಾತು. ಪ್ರಾರಂಭದಿಂದಲೂ ಹೋರಾಟಗಾರ ಈತ.

ಶ್ರೀಮಂತಿಕೆಯ ಪರಿಸರದಲ್ಲಿ ಬೆಳೆದ ಯುವಕ ಜಯಣ್ಣ ದಾವಣಗೆರೆ ಮತ್ತು ಮೈಸೂರಿನ ಕಾಲೇಜು ದಿನಗಳಲ್ಲಿ ಸಮಾಜವಾದಿ ಚಿಂತನೆಯ ಮಿತ್ರರೊಡನೆ ಕಲಿತ. ಕಲೆತ. ಸಮಾಜವಾದಿ ಚಿಂತನೆ ಜಯಣ್ಣನ ಜೀವನಕ್ಕೆ ಹೊಸ ಅರ್ಥ ಮತ್ತು ಗುರಿ ನಿಶ್ಚಯಿಸಿತು. ಇದೇ ಸಮಯಕ್ಕೆ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನಲ್ಲಿ ಸ್ಫೋಟಿಸಿದ ಕಾಗೋಡು ಸತ್ಯಾಗ್ರಹ ಸಮಾಜವಾದಿ ಚಿಂತಕರ ಸಂಘಟನೆಗೆ ಸ್ಪಷ್ಟ ಆಯಾಮ ನೀಡಿತು. ಡಾ: ರಾಮಮನೋಹರ ಲೋಹಿಯಾ, ಕಮಲಾದೇವಿ ಚಟ್ಟೋಪಾಧ್ಯಾಯ, ಶಾಂತವೇರಿ ಗೋಪಾಲಗೌಡ ಮುತ್ತಿತರ ಮುಂಚೂಣಿ ನಾಯಕರ ಸಹಯೋಗದೊಂದಿಗೆ ಹೆಜ್ಜೆ ಇಟ್ಟ ಜಯದೇವಣ್ಣನಿಗೆ ಗರುಡ ಶರ್ಮ ವೈ.ಆರ್. ಪರಮೇಶ್ವರಪ್ಪ, (ಅಣ್ಣಯ್ಯ) ಖಾದ್ರಿ ಶಾಮಣ್ಣ, ಸಿಜಿಕೆ ರೆಡ್ಡಿ, ಅನಂತಮೂರ್ತಿ, ಎಸ್. ಬಂಗಾರಪ್ಪ, ಕಾಗೋಡು ತಿಮ್ಮಪ್ಪ, ಶಂಕರನಾರಾಯಣ ಭಟ್ಟ, ಕೆ.ವಿ. ಸುಬ್ಬಣ್ಣ, ಪ್ರಗತಿ ನಾರಾಯಣರಾವ್, ಪಿ. ಲಂಕೇಶ, ಕೆ.ಜಿ. ಮಹೇಶ್ವರಪ್ಪ, ಕೊಣಂದೂರು ಲಿಂಗಪ್ಪ, ಇವರೇ ಮೊದಲಾದ ಹಿರಿಯರು, ಕಿರಿಯರು ಅಚ್ಚುಮೆಚ್ಚಿನ ಮಿತ್ರರಾದರು.

ಉಳುವವನ ಬದುಕಿಗೆ ಬೆಳಕು ತಂದ ಭೂಸುಧಾರಣಾ ಚಿಂತನೆ ಜಯದೇವಪ್ಪ ಹಾಲಪ್ಪ ಪಟೇಲರು ಶಾಸಕರಾಗುವ ಮುನ್ನವೇ ಶಾಸನವಾಗಿತ್ತು. ಭೂಸುಧಾರಣಾ ಕಾನೂನು 1961, ತಿದ್ದುಪಡಿ ನಿಯಮಗಳು 1965, 1966, 1974, 1976 ಮತ್ತು 1978ರ ಭೂಸುಧಾರಣಾ ವಿಧೇಯಕಗಳು, ಸಮಗ್ರ ಋಣ ಪರಿಹಾರ ಕಾನೂನು 1980 ಇವೇ ಮೊದಲಾದ ಶಾಸನಗಳಿಂದ ಪ್ರಭಾವಿತರಾದವರು ಪಟೇಲ್. ಇವರ ತಂದೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದ ಹಾಲಪ್ಪ ಪಟೇಲರು ಸ್ವಇಚ್ಛೆಯಿಂದ ಗೇಣಿದಾರರಿಗೆ ಭೂಮಿ ಕೊಟ್ಟದ್ದು ಮಗ ಜಯಣ್ಣನಿಗೆ ಹಾಲುಸಕ್ಕರೆ ಉಣಿಸಿದಂತಾಗಿತ್ತು. ಸಮಾಜವಾದದ ತಾತ್ವಿಕ ಹಿನ್ನೆಲೆಯಲ್ಲಿ ಪ್ರಜಾಪ್ರಭುತ್ವವನ್ನು ಬುಡದಿಂದ ನೆಲೆಯೂರಿಸಲು ಸಾಧ್ಯವೆಂಬ ಇವರ ನಂಬಿಕೆಗೆ, ಗೇಣಿದಾರರ ನೂತನ ಶಾಸನ ಪ್ರೇರಕ ಶಕ್ತಿಯಾಯಿತು.

ತಲೆತಲಾಂತರಗಳಿಂದ ರಾಜತ್ವದ ಬಗೆಗೆ ಗೌರವ ಮತ್ತು ಕೃತಜ್ಞತೆಯಿಂದ ಮಿಂದೇಳುತ್ತಿದ್ದ ಸಮಾಜ ಮತ್ತು ವ್ಯವಸ್ಥೆ ಪಟೇಲರಿಗೆ ಹಿಡಿಸಲಿಲ್ಲ. ದೇವರಾಜ ಅರಸು ಮೊದಮೊದಲು ಇದೇ ಗುಂಪಿಗೆ ಸೇರಿದವರು ಎಂದು ನಂಬಿದ್ದ ಕಾರಣ ಸಮಾಜವಾದಿ ಶಾಸಕ ಪಟೇಲರನ್ನು ಅರಸು ಬಹುಕಾಲ ಆಕರ್ಷಿಸಲಿಲ್ಲ. ಅರಸರಿಗೂ-ಪಟೇಲರಿಗೂ ನಂಟು ಬೆಳೆಯಲು ಭೂಸುಧಾರಣಾ ಕಾನೂನು ಸ್ನೇಹ ಸೇತುವೆಯಾಯಿತು. ಪ್ರಾರಂಭದಲ್ಲಿ ಭೂಸುಧಾರಣೆ ಕಾನೂನಿನ ಬಗೆಗೆ ಮಾಡಿದ ಪಟೇಲರ ಟೀಕೆ ಹೀಗಿತ್ತು.

## ಕಾಲಿಗೆ ಹಗ್ಗ, ಭೂನ್ಯಾಯ ಮಂಡಲಿ

ರಾಜ್ಯದಲ್ಲಿ ಅರಸುರವರ ಸರ್ಕಾರ ತಂದಿರುವ ಭೂಸುಧಾರಣಾ ಕಾನೂನಿನಲ್ಲಿ ಕೆಲವೊಂದು ಲೋಪದೋಷಗಳಿವೆ. ಭೂಸುಧಾರಣೆಯನ್ನು ಕಾರ್ಯಗತ ಮಾಡಬೇಕಾದ ಭೂನ್ಯಾಯ ಮಂಡಲಗಳು ವಾಸ್ತವಿಕವಾಗಿ ಅನ್ಯಾಯ ಮಂಡಲಗಳಾಗಿವೆ.

ಭೂನ್ಯಾಯ ಮಂಡಲಿಗಳ ಕಾರ್ಯವಿಧಾನ ಹೇಗಪ್ಪಾ ಇದೆ ಎಂದರೆ ಒಂದು ಕಡೆ ಗೇಣಿದಾರನ ಕುತ್ತಿಗೆಗೆ ಹಗ್ಗ. ಮತ್ತೊಂದು ಕಡೆ ಭೂ ಮಾಲೀಕನ ಕಾಲಿಗೆ ಹಗ್ಗ ಬಿದ್ದಿರುತ್ತೆ. ಈ ಎರಡೂ ಹಗ್ಗವನ್ನು ಭೂ ನ್ಯಾಯು ಮಂಡಲಿಯುವರು ಜಗ್ಗುತ್ತಾರ. ಭೂನ್ಯಾಯಮಂಡಲಿಗಳಲ್ಲಿರುವರು ನ್ಯಾಯವಾಗಿ ಕೆಲಸ ಮಾಡದಿರುವ ಕಾರಣ ಯಾರು ಅಧಿಕಾರದಲ್ಲಿರುತ್ತಾರೋ ಅವರು ಯಜ್ಞಪಶುಗಳಾಗುತ್ತಾರೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಮಾರ್ಚಿ 21, 1978)

## ಭೂ ಸುಧಾರಣೆ : ಗುಜರಾತಿನ ನಂತರ ಕರ್ನಾಟಕ

ಕರ್ನಾಟಕದಲ್ಲಿ ಮಾನ್ಯ ದೇವರಾಜ ಅರಸು ಸರ್ಕಾರ ಬಂದ ಮೇಲೆ ಜಗತ್ತಿನಲ್ಲಿ ಎಲ್ಲೂ ಆಗದೇ ಇರುವಂಥ ಭೂಸುಧಾರಣೆ ಕೆಲಸ ಆಗಿದೆ. ಹಿಂದುಳಿದ ಜನಾಂಗದವರಿಗೆ, ಮಧ್ಯಮವರ್ಗದವರಿಗೆ ಪ್ರಪಂಚದಲ್ಲಿ ಎಲ್ಲೆಲ್ಲೂ ಸಿಗದಷ್ಟು ಸಹಾಯ ಸಿಕ್ಕಿದೆ ಎಂದು ಹೇಳುವವರಿದ್ದಾರೆ. ನಾನು ಇದನ್ನು ಒಪ್ಪುತ್ತೇನೆ. ಒಳ್ಳೆಯ ಕಾನೂನನ್ನು ತಂದಿದ್ದೀರಿ. ಒಳ್ಳೆಯ ಕೆಲಸ ಮಾಡಿದ್ದೀರಿ.

ಆದರೆ ಕರ್ನಾಟಕದಲ್ಲಿ ಭೂಸುಧಾರಣೆ ಜಾರಿಗೆ ಬರುವುದಕ್ಕೂ ಮೊದಲೇ, ಇವರಿಗಿಂತ ಇನ್ನೂ ಹೆಚ್ಚು ಪ್ರಗತಿಪರವಾಗಿ ಈ ಕೆಲಸವನ್ನು ಮಾಡಿರುವ ರಾಜ್ಯಗಳು ಇದ್ದಾವೆ ಎಂಬುದನ್ನು ಇವರು ಮರೆತಂತಿದೆ. 1958-59 ಇಸವಿಯಲ್ಲಿಯೇ ಮೊರಾರ್ಜಿ ದೇಸಾಯಿಯವರು ಮುಖ್ಯಮಂತ್ರಿಯಾಗಿದ್ದಾಗ ಸೌರಾಷ್ಟ್ರದಲ್ಲಿ ಭೂಸುಧಾರಣೆಯನ್ನು ಜಾರಿಗೆ ತಂದು ಪ್ರಗತಿಪರ ಹೆಜ್ಜೆ ಇಟ್ಟಿದ್ದಾರೆ. ಇದನ್ನು ಸದನದ ಗಮನಕ್ಕೆ ತರಬೇಕಾದದ್ದು ನಮ್ಮ ಕರ್ತವ್ಯ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ ಮೇ 30 1979)

## ಹರಿಜನ ಗಿರಿಜನರಿಗೆ ಭೂಮಿ ಏನೇನು ಸಾಲದು

ಬಾಯಲ್ಲಿ ಹೇಳೋದು ಒಂದು, ಕೈಯಲ್ಲಿ ಮಾಡೋದು ಮತ್ತೊಂದು. ಉದಾಹರಣೆಗೆ ಹೇಳ್ತೀನಿ. ಭೂ ಸುಧಾರಣೆ ಕಾನೂನಿನ ನಂತರ ಸರ್ಕಾರದ ಭೂಮಿಯನ್ನು ಬಡ ರೈತರಿಗೆ, ಭೂರಹಿತರಿಗೆ ಹಂಚ್ತೀವಿ ಎಂದು ದೊಡ್ಡದಾಗಿ ಹೇಳ್ತೀರಿ. ನಾನೂ ನೀವೂ ಎಲ್ಲರೂ ಹೀಗೇ ಹೇಳೋದು. 1977 ಇಸವಿ ಕೊನೆಯ ಭಾಗದಲ್ಲಿ ಸರ್ಕಾರದ ಕೈಲಿ 30,760 ಎಕರೆ ಜಮೀನು ಇತ್ತು. ಇದರಲ್ಲಿ ಹರಿಜನ ಗಿರಿಜನರಿಗೆ ಕೊಟ್ಟಿದ್ದು ಎಷ್ಟಪ್ಪ ಅಂದ್ರೆ 3,492 ಎಕರೆ.

ಮಾನ್ಯ ಅಧ್ಯಕ್ಷರೇ, ಕರ್ನಾಟಕದಲ್ಲಿರೋ ಹರಿಜನ ಗಿರಿಜನರನ್ನು ಆಧಾರವಾಗಿ ಇಟ್ಟುಕೊಂಡು ಹೇಳೋದಾದರೆ ಇದು ಒಂದು ಪರ್ಸೆಂಟೂ ಆಗೋದಿಲ್ರಿ. ಇದು ಯಾವನ್ಯಾಯ. ಶ್ರೀ ಬಸವಲಿಂಗಪ್ಪನವರು ಜಾತಿ ಬೇಧವನ್ನು ಮೆಟ್ಟಿ ನಿಂತವರು. ಅವರಲ್ಲಿ ಜಾತೀಯ ಪಕ್ಷಪಾತವಿಲ್ಲ. ಒಪ್ಪುತ್ತೇನೆ. ಆದರೆ ವಸ್ತುಸ್ಥಿತಿ ನೋಡಿ ಸ್ವಾಮಿ. ಹರಿಜನ, ಗಿರಿಜನರಿಗೆ ನಾವು ಸರ್ಕಾರಿ ಜಮೀನು ಕೊಟ್ಟಿರುವುದು ಏನೇನೂ ಸಾಲದು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ: ಮೇ 30, 1979)

## ದುಂಡು ದುಂಡಾದ ಭೂನ್ಯಾಯ ಮಂಡಲಿ ಸದಸ್ಯರು

ಮಾನ್ಯ ಅಧ್ಯಕ್ಷರೇ, ಕಾನೂನಿನ ಉದ್ದೇಶ ಎಷ್ಟೇ ಉನ್ನತವಾಗಿರಬಹುದು ...ಸರ್ಕಾರದ ಗುರಿ ಎಷ್ಟೇ ಮಹತ್ವದ್ದಾಗಿರಬಹುದು. ಆದರೆ ನಮ್ಮ ಸಮಾಜ ಇದೆಯಲ್ಲಾ ಇದಕ್ಕೆ ಹಣವೇ ಮುಖ್ಯ. ಗೇಣಿದಾರನ ಕಷ್ಟಕಾರ್ಪಣ್ಯಗಳನ್ನು ಸರಿಯಾಗಿ ತಿಳಿಯದ ಹಾಗೂ ಪ್ರಾಮಾಣಿಕರಲ್ಲದ ಭೂನ್ಯಾಯ ಮಂಡಲಿ ಸದಸ್ಯರು ಮಾತ್ರ ದುಂಡಗಾಗುತ್ತಾರೆ. ಇವರಲ್ಲಿ ನಮ್ಮವರೂ ಇರ್ತಾರೆ. ನಿಮ್ಮವ್ರೂ ಇರ್ತಾರೆ. ಮೊದಮೊದಲು ತೆಳ್ಳಗೆ ಒಣಗಿದಂತಿದ್ದವರು ಭೂನ್ಯಾಯ ಮಂಡಲಿ ಸದಸ್ಯರಾಗಿ ನಾಲ್ಕು ತಿಂಗಳಾಗುತ್ತಿದ್ದಂತೆ ದುಂಡುದುಂಡಾಗಿ, ಮಿರಿ ಮಿರಿ ಮಿಂಚುತ್ತಾರೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ : ಮೇ 30, 1979)

## ಕೆಮ್ಮಿಗೆ ಬೆದರುವ ದುಷ್ಟಜನ

ಒಂದು ಗುಂಪಿನಲ್ಲಿ ಅಥವಾ ಕೇರಿಯಲ್ಲಿ ಒಬ್ಬನೇ ಒಬ್ಬ ಕೆಮ್ಮುವನಿದ್ದರೆ ಸಾಕು. ಈತ ಬಲಿಷ್ಟನಲ್ಲದಿದ್ದರೂ 100 ಜನ ಕಳ್ಳರು ಆ ಸ್ಥಳಕ್ಕೆ ಕನ್ನಹಾಕಲು ಹೆದರುತ್ತಾರೆ. ಒಬ್ಬನ ಕೆಮ್ಮು ನೂರು ಪುಕ್ಕಲು ಇಲ್ಲವೇ ಹುಷಾರಿ ಜನರ ಹುನ್ನಾರದ ವಿರುದ್ಧ ಎಚ್ಚರಿಕೆಯ ಗಂಟೆ ಎಂದಾಯಿತು. ಹಾಗೆಯೇ ಭೂಸುಧಾರಣೆ ಕಾನೂನಿನ ಅನ್ವಯ ರಾಜ್ಯದಲ್ಲಿ ರಚಿಸಲಾಗಿರುವ ಭೂನ್ಯಾಯಮಂಡಲಿಗಳಲ್ಲಿ ಒಬ್ಬೊಬ್ಬ ವಿರೋಧ ಪಕ್ಷದ ಸದಸ್ಯ ಇದ್ದರೆ ಸ್ವಲ್ಪ ಎಚ್ಚರಿಕೆಯ ತೀರ್ಮಾನ ಬರುತ್ತದೆ. ವಿಚಾರ ಮಾಡಿ ನೋಡುತ್ತಾರೆ. ಇಲ್ಲದಿದ್ದರೆ ಆಡಳಿತ ಪಕ್ಷದ ಸದಸ್ಯರು ಒಟ್ಟಿಗೆ ಕೂಡಿಕೊಂಡು ಯಾರ ಜಮೀನನ್ನು ಯಾರಿಗೋ ಮಾಡಿ ದುಡ್ಡು ಹೊಡೆಯುತ್ತಾರೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಮೇ 30, 1979)

## ತಹಶೀಲ್ದಾರನಿಗಿಂತ ಲೆಕ್ಕಿಗ ಮೇಲು

ಬಿ. ಬಸವಲಿಂಗಪ್ಪ (ರೆವಿನ್ಯೂ ಮಂತ್ರಿಗಳು): ಸಭಾಧ್ಯಕ್ಷರೇ ಮಾನ್ಯರುಗಳಾದ ಜೆ.ಹೆಚ್. ಪಟೇಲ್, ಶಿವಪ್ಪ, ದಾಮೋದರಮುಲ್ಕಿ - ಇವರುಗಳು ವಿಲೇಜ್ ಅಕೌಂಟೆಂಟ್‌ಗಳ ಅಧಿಕಾರ ದುರುಪಯೋಗ, ಭ್ರಷ್ಟಾಚಾರ - ಈ ಬಗ್ಗೆ ಮಾತನಾಡಿದ್ದಾರೆ. ಜಮೀನಿನ ನಕಲು ಕಾಪಿ

ಕೊಡುವ ಅಧಿಕಾರವನ್ನು ಇವರಿಂದ ತೆಗೆದು ತಹಶೀಲ್ದಾರರಿಗೆ ವಹಿಸುವ ಹುಕುಂ ಹೊರಡಿಸಲಿದ್ದೇವೆ.

ಜೆ.ಹೆಚ್. ಪಟೇಲ್: ಬಸ್ಲಿಂಗಪ್ಪನವರೇ ಯೋಚನೆ ಮಾಡಿ ಮುಂದಿನ ಹೆಜ್ಜೆ ಇಡಿ... ವಿಲೇಜ್ ಅಕೌಂಟೆಂಟ್‌ಗಿಂತ ತಹಶೀಲ್ದಾರರು ಜಾಸ್ತಿ ಕೇಳುವ ಪ್ರಸಂಗ ಬಂದೀತು!

ಬಿ. ಬಸವಲಿಂಗಪ್ಪ: ಪಟೇಲರ ಚಿಂತೆ ನನಗೆ ಅರ್ಥವಾಯಿತು. ಈ ಅಧಿಕಾರವನ್ನು ಡಿ.ಸಿ. ಯವರಿಗೆ ಕೊಟ್ಟರೆ ಇನ್ನೂ ಜಾಸ್ತಿ ಆಗುತ್ತೆ; ಡಿವಿಜನಲ್ ಕಮೀಷನರಿಗೆ ಕೊಟ್ಟರೆ ಮತ್ತೂ ಜಾಸ್ತಿ ಆಗುತ್ತೆ ಅಂತ ತಾನೇ.

(ವಿಧಾನಸಭೆ ಕಲಾಪ ಮೇ 31, 1979)

## The Karnataka Land Reforms (Amendment) Bill, 1980

## Motion to Consider

**S. Bangarappa (Minister for Revenue and Agriculture):** I beg to move ,

"That the Karnataka Land Reforms (Amendment) Bill, 1980 be taken into consideration."

ಎಸ್. ಬಂಗಾರಪ್ಪ (ಕಂದಾಯ ಮಂತ್ರಿಗಳು): ಮಾನ್ಯ ಅಧ್ಯಕ್ಷರೇ, ಕರ್ನಾಟಕ ಭೂ ಸುಧಾರಣಾ ಕಾನೂನಿಗೆ ಒಂದು ತಿದ್ದುಪಡಿಯನ್ನು ತಂದಿದ್ದೇವೆ. ಈ ಮೊದಲು ಸೆಕ್ಷನ್ 55ರಲ್ಲಿ ಒಬ್ಬ ಗೇಣಿದಾರ ತನ್ನ ಭೂ ಒಡೆತನದ ಹಕ್ಕನ್ನು ಪಡೆಯಬೇಕಾದರೆ 100 ರೂಪಾಯಿ ಹಣವನ್ನು ಕಟ್ಟಿಬಿಟ್ಟರೆ ಸಾಕು ಅಂತ ಇತ್ತು. ಒಂದು ಯೂನಿಟ್‌ಗೆ ಇಷ್ಟು ಕೊಡಬೇಕೆಂದು ಇತ್ತು. ನಾನು ಸಚಿವನಾದ ಮೇಲೆ ಸ್ವಲ್ಪ ಪ್ರೊಗ್ರೆಸೀವ್ ಆಗಿ ಮಾಡತಕ್ಕ ದೃಷ್ಟಿಯಿಂದ ಒಂದು ಯೂನಿಟ್ ಇದ್ದುದನ್ನು ಎರಡು ಯೂನಿಟ್ ಮಾಡಿ ಸ್ವಲ್ಪ ಹೆಚ್ಚಿನ ಸಹಾಯ ಗೇಣಿದಾರನಿಗೆ ದೊರಕಲಿ ಎನ್ನುವ ದೃಷ್ಟಿಯಿಂದ ತಿದ್ದುಪಡಿಯನ್ನು ತಂದೆ. ಗೇಣಿದಾರನಿಗೆ ಇದರಿಂದ ಏತಕ್ಕೆ ಉಪಯೋಗವಾಗುತ್ತದೆಂದರೆ, ಗೇಣಿದಾರ ಸಾಲ ಸೋಲ ತೆಗೆದುಕೊಳ್ಳುವುದಕ್ಕೆ, ಜಮೀನು ಅಬಾದು ಮಾಡುವುದಕ್ಕೆ ಉಪಯೋಗವಾಗುತ್ತದೆ; ಹಣ ಕೂಡ ಜಾಸ್ತಿ ಸಿಕ್ಕುತ್ತದೆ. ಇದು ಹಿಂದೆ ಹೊರಡಿಸಿದಂತೆ ಆರ್ಡಿನೆನ್ಸ್ ರಿಪ್ಲೇಸ್ ಮಾಡತಕ್ಕ ಮಸೂದೆ. ಈ ಮಸೂದೆಗೆ ಮಾನ್ಯ ಸದಸ್ಯರೆಲ್ಲರೂ ಒಪ್ಪಿಗೆ ಕೊಡಬೇಕೆಂದು ತಮ್ಮ ಮೂಲಕ ಪ್ರಾರ್ಥನೆ ಮಾಡುತ್ತೇನೆ.

ಬಿ.ಬಿ. ಸಯಾನಕ್: (ಇಂಗ್ಲೀಷಿನಲ್ಲಿ) ಮಾನ್ಯ ಸಭಾಧ್ಯಕ್ಷರೇ, ಈ ತಿದ್ದುಪಡಿ ಮಸೂದೆಯನ್ನು ನಾನು ಸ್ವಾಗತಿಸುತ್ತಿದ್ದೇನೆ. ಇದೇ ಸಂದರ್ಭದಲ್ಲಿ ಈಗಿರುವ ಭೂನ್ಯಾಯ ಮಂಡಲಿಗಳ ಕಾರ್ಯವಿಧಾನ ಮತ್ತಷ್ಟು ಪರಿಣಾಮಕಾರಿ ಹಾಗೂ ರೈತರ ಪರ ಇರಬೇಕೆಂಬುದೇ

ನನ್ನ ಆಗ್ರಹ. ಇದಕ್ಕಾಗಿ ಸರ್ಕಾರ ಸಚ್ಚಾರಿತ್ರ್ಯ ಮತ್ತು ಪ್ರಾಮಾಣಿಕ ಜನರನ್ನು ಭೂನ್ಯಾಯ ಮಂಡಲಿಯ ಸದಸ್ಯರನ್ನಾಗಿ ನೇಮಿಸಲು ಕ್ರಮ ಕೈಗೊಳ್ಳಬೇಕೆಂದು ಆಗ್ರಹ ಪೂರ್ವಕವಾಗಿ ಒತ್ತಾಯಿಸುತ್ತೇನೆ.

ಎ.ಜಿ. ಕೊಡಗಿ: ಮಾನ್ಯ ಸಭಾಧ್ಯಕ್ಷರೆ, ಈ ದಿವಸ ಸಭೆಯ ಮುಂದೆ ಮಂಡಿಸಿರತಕ್ಕ ಮಸೂದೆಯ ತಿದ್ದುಪಡಿ ಒಳ್ಳೆಯ ಸದುದ್ದೇಶದಿಂದ ಕೂಡಿದೆಯೆಂದು ನಾನು ತಿಳಿದುಕೊಂಡಿದ್ದೇನೆ.

ಅಧ್ಯಕ್ಷರೇ, ನಾನು ಮೊದಲೇ ಹೇಳಿದ ಹಾಗೆ ಈಗ ತಂದಿರುವ ಮಸೂದೆಯು ಹಿಂದುಳಿದವರಿಗೆ ಅನುಕೂಲವಾಗುವ ಒಂದು ದೊಡ್ಡ ಉದ್ದೇಶವಿರುವುದರಿಂದ ಕೇವಲ 100 ರೂಪಾಯಿಗೆ ಪಟ್ಟಾ ಪಡೆದು ಮುಂದಿನ ವರ್ಷದಿಂದಲೇ ಅಸಲು ಬಡ್ಡಿಯನ್ನು ವಸೂಲು ಮಾಡುವುದಕ್ಕೆ ಹೊರಟರೆ ರೈತರಿಗೆ ಮತ್ತಷ್ಟು ತೊಂದರೆಯನ್ನು ಕೊಟ್ಟಂತಾಗುತ್ತದೆ. ಆದ್ದರಿಂದ ಅವರಿಗೆ ಕೊಡುವ ಹಕ್ಕು ಶಾಶ್ವತವಾಗಿರಬೇಕು. ಕೇವಲ ರೈತರಿಂದ 100 ರೂಪಾಯಿಗಳನ್ನು ಪಡೆದು ಪಟ್ಟಾಕೊಟ್ಟು ಸಂಪೂರ್ಣವಾದ ಹಕ್ಕನ್ನು ಈ ವಿಧೇಯಕದಲ್ಲಿ ಅಳವಡಿಸಿಕೊಳ್ಳಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

ಜೆ.ಎಚ್. ಪಟೇಲ್: ಸನ್ಮಾನ್ಯ, ಸಭಾಧ್ಯಕ್ಷರೇ ಮಾನ್ಯ ಸದಸ್ಯರಾದ ಎ.ಜಿ. ಕೊಡಗಿಯವರು ಹೇಳಿದ ಮಾತುಗಳನ್ನು ನಾನು ಸಮರ್ಥನೆ ಮಾಡುತ್ತಾ, ಈ ವಿಧೇಯಕ ಏನು ಇದೆ ಅದನ್ನು ನಾವು ಎಲ್ಲರೂ ಒಪ್ಪತಕ್ಕಂಥ ಉದ್ದೇಶವಾಗಿರುತ್ತದೆ. ನಾವು ಕಳೆದ 10-20 ವರ್ಷಗಳಿಂದಲೂ ಶಿವಮೊಗ್ಗ ಜಿಲ್ಲೆಯಲ್ಲಿರತಕ್ಕಂಥ ಭೂಹೀನ ರೈತರು ಮತ್ತು ಸಣ್ಣ ರೈತರು, ಅವರ ಸಮಸ್ಯೆಗಳನ್ನು ಯಾವುದೇ ಸರ್ಕಾರ ಇದ್ದರೂ ಅದರ ಗಮನಕ್ಕೆ ತರುತ್ತಲೇ ಇದ್ದೆವು. ಯಾವಾಗಲೂ ಉಳುವವನಿಗೆ ಭೂಮಿ ಅವನಿಗೇನೆ ಒಡೆತನ ಕೊಡಬೇಕೆಂದು ಹೇಳುತ್ತಾ ಹೋರಾಟ ಮಾಡಿಕೊಳ್ಳುತ್ತಲೇ ಬಂದಿರುತ್ತೇವೆ. ಉಳುವವನಿಗೆ ಭೂಮಿ ಎನ್ನುವ ತತ್ವವನ್ನು ಒಪ್ಪಿಕೊಂಡಿರುವ ಸರ್ಕಾರ ಯಾವುದೇ ಇರಲಿ ಅದನ್ನು ಬೇರೆ ರೀತಿಯಲ್ಲಿ ಮಾರಾಟ ಮಾಡಿ ಅವನಿಗೆ ಪಟ್ಟಾ ಕೊಡುವುದಾದರೆ ಅದು ಉಳುವವನಿಗೆ ಭೂಮಿ ಕೊಟ್ಟಂತಾಗುವುದಿಲ್ಲ. ಸಾಹುಕಾರರು ಯಾವ ರೀತಿ ಮಾರಾಟ ಮಾಡುತ್ತಾರೆ ಆದರಂತೆ ಸರ್ಕಾರದವರು ಒಂದು ರೀತಿಯಲ್ಲಿ ಮಾರಾಟ ಮಾಡಿದಂತಾಗುತ್ತದೆ. ಇದರಿಂದ ಉಳುವವನಿಗೆ ಭೂಮಿ ಎನ್ನುವ ಒಂದು ಸದುದ್ದೇಶ ಏನು ಇದೆ ಅದು ಆದಂತಾಗುವುದಿಲ್ಲ. ಇದು ಈಗ ಏನಾಗಿದೆ ಎಂದರೆ ಅವರ ಮೂಗಿನ ತುಂಬ ತುಪ್ಪ ಹಚ್ಚಿ, ಹೊಟ್ಟೆ ತುಂಬಾ ತುಪ್ಪ ಹಾಕಿದ್ದೇವೆ ಎಂದಂತಾಗಿದೆ. ಈ ರೀತಿ ಹೇಳಿಕೊಳ್ಳುವುದು ಬೇಡ. ಮೂಗಿಗೆ ತುಪ್ಪ ಹಚ್ಚಿದರೆ ವಾಸನೆ ಬರುತ್ತದೆ ಅಷ್ಟೆ. ನೂರು ರೂಪಾಯಿಗೆ ಪಟ್ಟಾ ಕೊಟ್ಟು ತುಪ್ಪ ಹಚ್ಚುವ ಕೆಲಸ ನಿಜವಾಗಿಯೂ ಸಣ್ಣ ರೈತರಿಗೆ ಅನುಕೂಲವಾಗುವುದಿಲ್ಲ. ಇದರಿಂದ ಮುಂದೆ ಇನ್ನು ಏನೂ ಕೊಡುವುದು ಬೇಡವೆಂದು ಹೇಳಿದಂತಾಗುತ್ತದೆ. ಸುಮಾರು 35-45 ಕೋಟಿ ರೂಪಾಯಿಗಳು ಒಟ್ಟು ಹಣವನ್ನು ರಾಜ್ಯ ಸರ್ಕಾರದವರು ಕೊಡಬೇಕಾಗಿರುತ್ತದೆ. ಅಂದರೆ ಸುಮಾರು ಆರು ಲಕ್ಷ ಮನೆತನಗಳಿಗೆ ಸಹಾಯ ಮಾಡುವುದಕ್ಕೋಸ್ಕರ 40 ಕೋಟಿ

ರೂಪಾಯಿಗಳನ್ನು ಸರ್ಕಾರದ ಖಜಾನೆಯಿಂದ ಕೊಡಬೇಕಾಗಿರುತ್ತದೆ. ಇದರಿಂದ ಏನಾಗುತ್ತದೆಂದರೆ ಭೂಮಾಲೀಕರಿಗೆ ಪರಿಹಾರ ಕೊಡುತ್ತೇವೆಂದು ಹೇಳಿ, ತೀರ್ಮಾನ ಮಾಡಿ ಅವರನ್ನು ರಸ್ತೆಯಲ್ಲಿ ತಳ್ಳಿದಂತಾಗುತ್ತದೆ. ಸರ್ಕಾರದವರಿಂದ ನೂರು ರೂಪಾಯಿಕೊಟ್ಟು ಪಟ್ಟಾ ಮಾಡಿಕೊಂಡ ಮೇಲೆ ಬ್ಯಾಂಕ್‌ಗಳಿಗೆ, ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕ್‌ಗಳಿಗೆ ಡೀಡ್ ಮಾಡಿ ಸಾಲವನ್ನು ತೆಗೆದುಕೊಳ್ಳುವ ಉದಾರತೆಯನ್ನು ತೋರಿಸಿರುವುದು ಯಾವ ಒಂದು ಸುಧಾರಣೆಯ ಅಂಶವೂ ಅಲ್ಲ. ಒಂದು ಗಾದೆ ಮಾತಿನಂತೆ ಸುಮ್ಮನೆ ಕಣ್ಣು ಒರೆಸುವುದರಿಂದ ಹೃತ್ಪೂರ್ವಕವಾಗಿ ರೈತನ ಏಳಿಗೆ ಮಾಡಿದಂತಾಗುವುದಿಲ್ಲ. ಮಾನ್ಯ ಬಂಗಾರಪ್ಪನವರು ತೀವ್ರ ಆಲೋಚನೆ ಮಾಡಬೇಕು. ಕೇಂದ್ರದಲ್ಲಿ ನಿಮ್ಮ ಸರ್ಕಾರವೇ ಇದೆ. ದಿನಬೆಳಗಾದರೆ ಬಡರೈತರಿಗೆ, ಕೂಲಿಗಾರರಿಗೆ ಇರತಕ್ಕಂಥ ಸಮಸ್ಯೆಗಳ ಬಗ್ಗೆ ದೊಡ್ಡ ದೊಡ್ಡ ಘೋಷಣೆಯನ್ನು ಹೊರಡಿಸುತ್ತಿದ್ದೀರಿ. ನಲವತ್ತು ಕೋಟಿ ರೂಪಾಯಿಗಳ ಜೊತೆಗೆ ಕೇಂದ್ರ ಸರ್ಕಾರದವರಿಂದಲೂ ಸ್ವಲ್ಪ ಹಣವನ್ನು ಪಡೆದರೆ ಬಹುಭಾಗ ಈ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಾಗುತ್ತದೆ. ನಿಜಕ್ಕೂ ನೀವು ಪ್ರಯತ್ನ ಮಾಡಿ. ನಿಮ್ಮ ಮಾತಿನಲ್ಲಿ ಸತ್ಯಾಂಶವಿದೆ ಇಷ್ಟನ್ನು ಹೇಳಿ ಈ ಮಸೂದೆಗೆ ಬೆಂಬಲಕೊಟ್ಟು ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಎಚ್.ಡಿ. ದೇವೇಗೌಡ:** ಮಾನ್ಯ ಸಭಾಪತಿಗಳೇ ಈ ಒಂದು ಮಸೂದೆಯ ನೀತಿಯ ಬಗ್ಗೆ ನನಗುಂಟಾಗಿರುವ ಸಮಸ್ಯೆಯು ನಿವಾರಣೆಗೆ ಸರ್ಕಾರದಿಂದ ಉತ್ತರ ಪಡೆಯುವುದಕ್ಕೋಸ್ಕರವಾಗಿ ವಿಷಯವನ್ನು ಪ್ರಸ್ತಾಪ ಮಾಡುತ್ತಿದ್ದೇನೆ. ಸಮಗ್ರ ಭೂ ಸುಧಾರಣಾ ಕಾನೂನು ತಂದಾಗ ಈ ಸದನ ಅವಿರೋಧವಾಗಿ ಮಂಜೂರಾತಿಯನ್ನು ಕೊಟ್ಟಿದ್ದು ತಮಗೂ ಜ್ಞಾಪಕ ಇರಬಹುದು. ನಾನು ಈ ಮಾತನ್ನು ಹೇಳುವಾಗ ತಪ್ಪಾಗಿ ಭಾವಿಸಿಕೊಳ್ಳಬಾರದೆಂದು ಹೇಳುತ್ತಾ ಈ ದೇಶದಲ್ಲಿರುವ ಎಲ್ಲಾ ಟೆನೆಂಟ್ಸ್ ಬಡವರೆಂದು ಭಾವಿಸಬಾರದು. ಅದು ತಪ್ಪು. ಎಲ್ಲಾ ಭೂಮಾಲೀಕರು ಸಹ ಶ್ರೀಮಂತರೆಂದು ಹೇಳಿದರೆ ಅದೂ ತಪ್ಪಾಗುತ್ತದೆ. ಕೆಲವು ಭೂಮಾಲೀಕರು ಇಂದು ಬೀದಿ ಭಿಕಾರಿಗಳಾಗಿರುವುದನ್ನು ನಾವು ನೋಡುತ್ತಿದ್ದೇವೆ. ಎಷ್ಟೋ ಜನ ಗೇಣಿದಾರರು 10-15 ಎಕರೆ ಒಳ್ಳೆಯ ಜಮೀನನ್ನು ಇಟ್ಟುಕೊಂಡು ದೊಡ್ಡ ಭೂಮಾಲೀಕರಾಗಿದ್ದಾರೆ.

ಸ್ವಾಮಿ, ಈ ದಿನ ಅನೇಕ ಗೇಣಿದಾರರು ನಮ್ಮ ಊರಿನಲ್ಲಿಯೂ ಇದ್ದಾರೆ. ಬಹುಶಃ ನನ್ನ ಸಮಾಜಕ್ಕೆ ಸೇರತಕ್ಕಂತಹ ಜನ 100ಕ್ಕೆ 95 ಜನರು ಇದ್ದಾರೆ. ಅವರಲ್ಲಿ ಒಬ್ಬೊಬ್ಬರಿಗ 8-10-16 ಎಕರೆ ವೆಟ್ ಲ್ಯಾಂಡ್ ಇದೆ. ಯಾರ ಭೂಮಿಯನ್ನೋ ಕಿತ್ತುಕೊಂಡು ಅವರಿಗೆ ಕೊಟ್ಟಿದ್ದಾರೆ: ಅವರು ಬ್ರಾಹ್ಮಣರಾಗಿರಬಹುದು, ಜೈನರಾಗಿರಬಹುದು ಅಥವಾ ಮುಸ್ಲಿಮರಾಗಿರಬಹುದು. ಅವರಿಗೆ ಇಂದು ಜೀವನ ಮಾಡುವುದಕ್ಕೆ ಏನೂ ಇಲ್ಲ. ಇವರಲ್ಲಿ ಒಬ್ಬ ಮುಸ್ಲಿಮ್ ಮಹಿಳೆ ರಾಷ್ಟ್ರಪತಿಗಳವರಿಗೂ ಕಾಗದವನ್ನು ಬರೆದು ತನ್ನ ದುಃಖವನ್ನು ತೋಡಿಕೊಂಡಿದ್ದಾಳೆ. ಅವಳು ಕಡು ಬಡವಳು. ಅವಳಿಗೆ 12 ಮಕ್ಕಳು ಇವೆ. ಈ ರೀತಿಯ ಕಾನೂನನ್ನು ಮಾಡಿದ್ದೀರ. ಇವತ್ತು ಎಲ್ಲಾ ಗೇಣಿದಾರರೂ......

**ಜಿ. ರಾಜೂಗೌಡ:** ಮಾನ್ಯ ಅಧ್ಯಕ್ಷರೇ, ಮಾನ್ಯ ಕಂದಾಯ ಸಚಿವರು ಈ ಸದನದ ಮುಂದೆ ಮಂಡಿಸಿರತಕ್ಕಂತಹ ಭೂ ಸುಧಾರಣ ಕಾಯಿದೆಗೆ ತಂದಿರತಕ್ಕಂತಹ ತಿದ್ದುಪಡಿ ವಿಧೇಯಕವನ್ನು ನಾನು ಸಂಪೂರ್ಣವಾಗಿ ಸ್ವಾಗತಿಸುತ್ತೇನೆ. ಮಾನ್ಯ ಸಚಿವರು ಒಂದು ಸ್ಪಷ್ಟೀಕರಣ ನೀಡಬೇಕೆಂದು ಕೇಳಿಕೊಳ್ಳುತ್ತೇನೆ. ಈ ಒಂದು ಸೌಲಭ್ಯ 5 ಎಕರೆಗಿಂತ ಕಡಿಮೆ ಖುಷ್ಕಿ ಜಮೀನು ಇರತಕ್ಕಂತಹವರಿಗೆ ಅನ್ವಯಿಸುತ್ತದೋ? ಅಥವಾ ಬೇರೆಯವರಿಗೂ ಅನ್ವಯಿಸುತ್ತದೋ ಎಂಬುದನ್ನು ತಿಳಿಸಬೇಕು.

ಒಬ್ಬ ಗೇಣಿದಾರ ತನಗೆ ಬಂದಿರತಕ್ಕಂತಹ 3 ಎಕರೆ ಭೂಮಿಯನ್ನು ಪರಭಾರೆ ಮಾಡಬಾರದು ಎಂಬುದಾಗಿ ಇದೆ. ಆದರೆ ಆತನು ಆ ಜಮೀನಿನ ಮೇಲೆ ಸಾಲವನ್ನು ತೆಗೆದುಕೊಳ್ಳಬೇಕಾದರೆ ಹಕ್ಕುಪತ್ರ ಇರಲೇಬೇಕಾಗುತ್ತದೆ. ಈಗ ತಾವು ತಂದಿರತಕ್ಕಂತಹ ಭೂ ಸುಧಾರಣಾ ವಿಧೇಯಕ ಸರ್ವ ವಿಧದಲ್ಲೂ ಸಮಂಜಸವಾಗಿದೆ. ಸಣ್ಣ ಗೇಣಿದಾರರಿಗೆ ಇದರಿಂದ ಅನುಕೂಲವಾಗುತ್ತದೆ. ಹರಿಜನ-ಗಿರಿಜನ ಮತ್ತು ಬಡವರಿಗೆ ಉಚಿತವಾಗಿ ಕೊಡಬೇಕೆಂದು ಹೇಳುವುದಕ್ಕೆ ಇಷ್ಟಪಡುತ್ತೇನೆ.

**ಬಿ.ವಿ. ಕಕ್ಕಿಲಾಯ:** ಮಾನ್ಯ ಅಧ್ಯಕ್ಷರೆ, ನಾವು ಗೇಣಿದಾರರಿಗೆ ಪಟ್ಟ ಎಂದು ಹೇಳಿ ಅನುಭೋಗದ ಹಕ್ಕು ಮಾತ್ರ ಕೊಟ್ಟರೆ ಸಮಂಜಸವಾಗಲಾರದು ಎಂದು ನನಗನ್ನಿಸುತ್ತದೆ, ಮಾನ್ಯ ಜೆ.ಹೆಚ್. ಪಟೇಲ್‌ರವರು ಈ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ. ಭೂಮಿಯ ಒಡೆತನವನ್ನು ಈ ಒಂದು ಶಾಸನದಲ್ಲಿ ಅವರಿಗೆ ಕೊಡುತ್ತಿಲ್ಲ. ಭೂಮಿಯ ಮಾಲೀಕತ್ವವನ್ನು ಕೊಡುವಂತಹ ಕ್ರಮ ಇದರಲ್ಲಿ ನೀವು ಕೈಗೊಳ್ಳಿ.

(ಸರ್ವಶ್ರೀ ಎಂ.ಸಿ. ಬಸಪ್ಪ, ಕೆ.ಹೆಚ್. ಶ್ರೀನಿವಾಸ್ ಮತ್ತು ಪ್ರೊ: ಎ. ಲಕ್ಷ್ಮೀಸಾಗರ್ ಇವರುಗಳು ಚರ್ಚೆಯಲ್ಲಿ ಭಾಗವಹಿಸಿದ್ದರು. ಕಂದಾಯ ಸಚಿವ ಎಸ್ ಬಂಗಾರಪ್ಪನವರ ಉತ್ತರದನಂತರ ಸನ್ಮಾನ್ಯ ಸಭಾಧ್ಯಕ್ಷರು (ಪಿ. ವೆಂಕಟರಮಣ) ವಿಧೇಯಕವನ್ನು ಮತಕ್ಕೆ ಹಾಕಿದರು. ಸದನ ಧ್ವನಿ ಮತದಿಂದ ವಿಧೇಯಕವನ್ನು ಅಂಗೀಕರಿಸಿತು)

(ವಿಧಾನಸಭೆ ಕಲಾಪ ಫೆಬ್ರವರಿ 26, 1980)

## ಶಾನುಭೋಗರೂ, ಪಟೇಲರೂ...

## ಪಟೇಲರ ಅನುಕಂಪ

**ಕೆ. ವೆಂಕಟಪ್ಪ:** ಮಾಜಿ ಶ್ಯಾನುಭೋಗರಿಗೆ ಒಟ್ಟಾರೆ ಸಂಭಾವನೆ ಅಥವಾ ವಿಶ್ರಾಂತಿ ವೇತನ ಕೊಡುವ ಬಗ್ಗೆ ಸರ್ಕಾರದ ಯೋಚನೆ ಏನು?

ಬಿ. ಬಸವಲಿಂಗಪ್ಪ (ಕಂದಾಯ ಮಂತ್ರಿ): ...ಶ್ಯಾನುಭೋಗರ ವೃತ್ತಿ ಅನುವಂಶಿಕವಾದದ್ದು.. ಕಾಯಿದೆ ಪ್ರಕಾರ ವಜಾ ಆಗಿದೆ ... ವೆಂಕಟಪ್ಪನವರು ಹೇಳೋ

ಮಾತಿನಲ್ಲೂ ಅರ್ಥವಿದೆ ಹಾಗೆ ಕೊಡುವಾಗ ಅರ್ಹತೆಯುಳ್ಳದ್ದು ಸೇವೆಯಲ್ಲಿ ಮುಂದುವರೆಯುತ್ತಿರುವವರಿಗೂ ಕೊಡಬೇಕೇ ಬೇಡವೇ ಈ ವಿಷಯವೂ ಸರ್ಕಾರದ ಪರಿಶೀಲನೆಯಲ್ಲಿದೆ.

ಜೆ.ಹೆಚ್. ಪಟೇಲ್: ಯಾವ ಕಾರಣಕ್ಕೋ ಏನೋ ಮಾನ್ಯ ಮಂತ್ರಿಗಳಿಗೆ ಪಟೇಲರು ಮತ್ತು ಶ್ಯಾನುಭೋಗರನ್ನು ಕಂಡರೆ ಆಗೋಲ್ಲ ಅನ್ನಿಸುತ್ತೆ .. ಆದರೆ ವಾಸ್ತವಿಕವಾಗಿ ನೋಡಿದರೆ ಪಾಪ ಬಹಳ ಮಂದಿ ಶ್ಯಾನುಭೋಗರು, ಪಟೇಲರು ಇಂದು ನಿರ್ಗತಿಕರಾಗಿದ್ದಾರೆ. ದಾರುಣ ಸ್ಥಿತಿಲ್ಲಿದ್ದಾರೆ. ವೃತ್ತಿಯಲ್ಲಿದ್ದಾಗ ಬಹು ಚೆನ್ನಾಗಿ ಕೆಲಸ ಮಾಡಿದ ಹಲವಾರು ಮಂದಿ ಇವರಲ್ಲಿದ್ದಾರೆ.

ಹೆಚ್.ಡಿ. ದೇವೇಗೌಡ : ಮಾನ್ಯ ಅಧ್ಯಕ್ಷರೇ ಈಗಿರುವರಿಗಿಂತ ಹಿಂದಿನ ಶ್ಯಾನುಭೋಗರು, ಪಟೇಲರು ಚೆನ್ನಾಗಿ ಕೆಲಸ ಮಾಡಿದ್ದಾರೆ.

ಜೆ.ಹೆಚ್. ಪಟೇಲ್: ಮಾನವೀಯ ದೃಷ್ಟಿಯಿಂದಲೂ ಅವರಿಗೆ ವಿಶ್ರಾಂತಿ ವೇತನವನ್ನೋ ಇನ್ನಾವುದೇ ವೇತನವನ್ನೋ, ಒಟ್ಟಿನಲ್ಲಿ ಏನಾದರೊಂದು ಪರಿಹಾರ ಕೊಡಿ.

ಬಿ. ಬಸವಲಿಂಗಪ್ಪ: ಮಾನ್ಯ ಜೆ.ಹೆಚ್. ಪಟೇಲರು ನನಗೆ ಪಟೇಲರು, ಶ್ಯಾನುಭೋಗರನ್ನು ಕಂಡರೆ ಆಗೋಲ್ಲ ಎನ್ನುವ ಮಾತನ್ನು ಹೇಳಿದ್ದಾರೆ. ಪಟೇಲರು- ಶಾನುಭೋಗರನ್ನು ಮನೆಗೆ ಕಳಿಸಿದೋನು ನಾನಲ್ಲ. ನಾನು ಬರೋಕೆ ಮುಂಚೇನೇ ಅವರನ್ನು ಕಳುಹಿಸಲಾಗಿತ್ತು...

(ವಿಧಾನಸಭೆ ಕಲಾಪ : ಮಾರ್ಚ್ 21, 1979)

## ಶ್ಯಾನುಭೋಗರೂ, ಪಟೇಲರೂ

ಹಿಂದೆ ಇದ್ದ ಹಳೇ ಶ್ಯಾನುಭೋಗರೇ ವಾಸಿ ಅಥವಾ ಹಿಂದಿನ ಪಟೇಲರೇ ಇರಬೇಕಾಗಿತ್ತು ಎಂದು ನಾನು ವಾದಿಸುವವನಲ್ಲ. ಪ್ರಜಾಪ್ರಭುತ್ವ ಯಾವ ಕಾಲಕ್ಕೂ ಒಳ್ಳೆಯದೇ. ಆದರೆ ರೆವಿನ್ಯೂ ಇಲಾಖೆಯು ಶ್ಯಾನುಭೋಗರು-ಪಟೇಲರು ಹೋದ ಬಳಿಕ ಸುಧಾರಿಸಿದೆಯೇ ಎಂದು ನೋಡಹೋದರೆ ವ್ಯಸನವಾಗುತ್ತೆ. ವಿಲೇಜ್ ಅಕೌಂಟೆಂಟ್‌ಗಳು ಶ್ಯಾನುಭೋಗರಿಗಿಂತಲೂ ಭ್ರಷ್ಟರಾಗಿದ್ದಾರೆ. ಈ ವಿಲೇಜ್ ಅಕೌಂಟೆಂಟ್‌ಗಳು ಈ ರೀತಿಯಾಗಲು ಕಾರಣವೇನು ಎನ್ನುವುದನ್ನು ಹುಡುಕಿಕೊಂಡು ಹೊರಟರೆ ನಮಗೆ ಗೊತ್ತಾಗುತ್ತೆ. ಇವರು ತಹಶೀಲ್ದಾರರಿಗೆ ಇಂತಿಷ್ಟು ಕಾಂಟ್ರಿಬ್ಯೂಷನ್ ಕೊಡಬೇಕು. ತಹಶೀಲ್ದಾರ್ ಯಾಕೆ ಭ್ರಷ್ಟ ಎಂದರೆ ಆತ ಮೇಲಿರುವ ಅಸಿಸ್ಟೆಂಟ್ ಕಮೀಷನರಿಗೆ ಕಾಂಟ್ರಿಬ್ಯೂಷನ್ ಕೊಡಬೇಕು. ಮಾಮೂಲು ಬಂದು ಬಿಟ್ಟಿದೆ. ಇಂತಹ ವಾತಾವರಣದಲ್ಲಿ ಮುಖ್ಯಮಂತ್ರಿ ದೇವರಾಜ ಅರಸುರವರು ಇನ್ನು 10 ವರ್ಷದಲ್ಲಿ ಕರ್ನಾಟಕವನ್ನು ಸ್ವರ್ಗ ಮಾಡುತ್ತೇವೆ ಎಂದು ಹೇಳುತ್ತಾರೆ. ಜನ ಸ್ವರ್ಗಕ್ಕೆ ಹೋಗೋದು ಯಾವಾಗ ಸ್ವಾಮಿ, ಸತ್ತ ಮೇಲೆ ತಾನೆ ಸ್ವರ್ಗಕ್ಕೆ ಹೋಗುವುದು, ಅಂದರೆ ನೀವು ಮಾಡೋದು ಇದನ್ನೇ. ಜನರನ್ನೆಲ್ಲಾ ಸ್ವರ್ಗಕ್ಕೆ ಕಳುಹಿಸುವುದು.

ಬಿ. ಬಸವಲಿಂಗಪ್ಪ (ಕಂದಾಯ ಸಚಿವರು): ಸ್ವರ್ಗ ಇದೆ ಎಂಬುದನ್ನು ಪಟೇಲರೇ ನೀವು ನಂಬಿಕೊಂಡಿದ್ದೀರಾ?

ಜೆ.ಹೆಚ್. ಪಟೇಲ್: ನಾನು ನಂಬಿದ್ದೇನೆ ಎಂದು ಹೇಳುತ್ತಿಲ್ಲ. ನೀವೇ ಕಳುಹಿಸುತ್ತೇನೆ ಎಂದು ಹೇಳುತ್ತಿದ್ದೀರಿ. ಅದನ್ನು ಕೇಳುತ್ತಿದ್ದೇನೆ.

(ವಿಧಾನ ಸಭೆ ಕಲಾಪ : ಮೇ 30, 1979)

## ಶ್ಯಾನುಬೋಗ್ ಬಸ್ಲಿಂಗಪ್ಪಾಜೀ...

ಜೆ.ಹೆಚ್. ಪಟೇಲ್: ಇವತ್ತು ಜಿಲ್ಲಾಧಿಕಾರಿಗಳು ಅಧಿಕಾರವಿಲ್ಲದ ಸಾಮಾನ್ಯ ಸೂತ್ರದಾರರಾಗಿದ್ದಾರೆ. ಅವರಿಂದ ಎಲ್ಲ ಜವಾಬ್ದಾರಿಗಳು ಹಂಚಿಹೋಗಿವೆ... ಮುಖ್ಯಮಂತ್ರಿ (ಶ್ರೀ ಅರಸು) ಹೇಳ್ತಾರೆ.. ಡಿಸಿ ಗಳನ್ನು ಪವರ್‌ಫುಲ್ ಮಾಡ್ತೀನಿ ಅಂತ ಅವರೇ ಹೇಳಿದ್ದರಿಂದ ಈ ಮಾತನ್ನು ಸ್ವಲ್ಪ ನಂಬಬಹುದು. ಬೇರೆ ಮಂತ್ರಿಗಳಿಗೆ ಈ ಮಾತು ಹೇಳಲು ಶಕ್ತಿಯೇ ಇಲ್ಲ... ನಮ್ಮ ಸ್ನೇಹಿತರಾದ ಕಂದಾಯ ಸಚಿವರಿಗೆ ಒಬ್ಬ ಡಿಸಿ ಯನ್ನು ವರ್ಗಮಾಡೋದಕ್ಕೂ ಸಾಧ್ಯವಿಲ್ಲ.. ಇದು ಇವರ ಅಧಿಕಾರ ವಿಕೇಂದ್ರೀಕರಣದ ಪರಿಕಲ್ಪನೆ.

ಎಸ್.ಆರ್. ಬೊಮ್ಮಾಯಿ: ಅವರು (ಶ್ರೀ ಬಸವಲಿಂಗಪ್ಪ) ದೊಡ್ಡ ಶಾನುಭೋಗರು ಇದ್ದ ಹಾಗೆ.

ಜೆ.ಹೆಚ್. ಪಟೇಲ್: ಹೌದೌದು.. ಜಮೀನು ಪೋಟಿಗೆ ಕಳ್ಕೊಂಡು ಪೂಜಾರಿಕೆ ಮಾಡೋ ಶ್ಯಾನುಬೋಗ ಇದ್ದಾಗೆ...

ವಿ. ಲಕ್ಷ್ಮೀಸಾಗರ್: ಬಸ್ಲಿಂಗಪ್ಪನೋರು ನೋಡೋಕೂ ಹಾಳೇ ಶ್ಯಾನುಭೋಗರ ಥರ. ಕಾಣಿಸ್ತಾರೆ.. ಅವರ ಬಟ್ಟೆ, ಮೈಮೇಲೆ ಶಲ್ಯ .... ಎಲ್ಲವೂ ಥೇಟ್ ಹಳೇ ಶ್ಯಾನುಭೋಗರೇ...

(ವಿಧಾನಸಭೆ ಕಲಾಪ, ಮೇ 30, 1979)

## ನಾಲ್ವರಿಗೆ ತೊಂದರೆ ಚಿಂತಿಲ್ಲ; 96 ಖದೀಮರ ಬಲಿ

ವ್ಯಾಪಕವಾದ ಭೂ ಸುಧಾರಣಾ ಕಾನೂನನ್ನು (1978) ರಾಜ್ಯದಲ್ಲಿ ಜಾರಿಗೆ ತಂದ ಬಳಿಕ, ಇದಕ್ಕೆ ಪೂರಕವಾಗಿ ತರಲಾದ ಮತ್ತೊಂದು ಸಮಗ್ರ ಕ್ರಮವೆಂದರೆ 1980ರ ಕರ್ನಾಟಕ ಋಣ ವಿಮೋಚನೆ ಕಾನೂನು.

ತಲಾತಲಾಂತರಗಳಿಂದ ತಾನು ಹಸನು ಮಾಡುವ ಭೂಮಿಯ ಒಡೆಯನಾಗಲಾರದ ಗೇಣಿದಾರ ಮತ್ತು ಅವನ ಮಡದಿ, ಮಕ್ಕಳು ಜೀತದಾಳಾಗಿ, ಸಾಲಗಾರರಾಗಿ ಸಂಕಷ್ಟದಿಂದ ಹೊರಬರಲಾಗದಂತಹ ಕರುಣಾಜನಕ ಪರಿಸ್ಥಿತಿಯಲ್ಲಿದ್ದರು. ಇಂತಹ ಸಣ್ಣ ರೈತ, ಬಡ ಗೇಣಿದಾರ, ಗಾಣದ ಎತ್ತಿನಂತೆ ಶ್ರಮಿಸಿ ಕೃಶವಾಗುವ ಕೃಷಿ ಕಾರ್ಮಿಕ ಮತ್ತಿತರ

ದುರ್ಬಲ ವರ್ಗದ ಜನರನ್ನು ಸಾಲ ವಿಮುಕ್ತರನ್ನಾಗಿ ಮಾಡುವ ಉದ್ದೇಶದಿಂದ ಸರ್ಕಾರ ಮಸೂದೆಯನ್ನು ರೂಪಿಸಿತು. 1966 ಮತ್ತು 1976ರ ಕರ್ನಾಟಕ ಋಣ ವಿಮೋಚನಾ ಕಾನೂನುಗಳ ಪ್ರಮುಖ ಅಂಶಗಳನ್ನು ಒಳಗೊಂಡ ಸಮಗ್ರ ಕಾಯಿದೆ ವಿಧಾನ ಮಂಡಲದಲ್ಲಿ ಮಂಡಿತವಾಯಿತು.

1980ರ ವೇಳೆಗೆ ರಾಜಕೀಯ ದೃಶ್ಯವೂ ಬದಲಾಗಿತ್ತು. ಭೂ ಸುಧಾರಣಾ ಕಾನೂನಿನ ರುವಾರಿಗಳಲ್ಲೊಬ್ಬರಾಗಿದ್ದ ಶ್ರೀ ದೇವರಾಜ ಅರಸುರವರು ಮುಖ್ಯಮಂತ್ರಿ ಸ್ಥಾನದಿಂದ ಕೆಳಗಿಳಿದಿದ್ದರು.

ಪ್ರಜಾತಂತ್ರದ ವಿಶೇಷ ಎನ್ನುವಂತೆ ಅರಸುರವರೇ ವಿಧಾನ ಸಭೆಯಲ್ಲಿ ವಿರೋಧ ಪಕ್ಷಗಳ ನಾಯಕ. ಅರಸುರವರೊಂದಿಗೆ ಕೈಜೋಡಿಸಿದ ಪ್ರತಿಪಕ್ಷದ ಧುರೀಣರಲ್ಲಿ ಸರ್ವಶ್ರೀ ಎಸ್.ಆರ್. ಬೊಮ್ಮಾಯಿ, ಎಚ್.ಡಿ. ದೇವೇಗೌಡ ಮತ್ತು ಜೆ.ಹೆಚ್. ಪಟೇಲರೂ ಸೇರಿದ್ದರು. (ಈ ಮೂವರು ಮಹನೀಯರೂ ಮುಂದಿನ ದಶಕಗಳಲ್ಲಿ ಅನುಕ್ರಮವಾಗಿ ರಾಜ್ಯದ ಮುಖ್ಯಮಂತ್ರಿ ಸ್ಥಾನವನ್ನು ಅಲಂಕರಿಸಿದರೆಂಬುದು ಇತಿಹಾಸ).

ಅರಸರ ಸಂಪುಟದಲ್ಲಿ ಸಚಿವರಾಗಿದ್ದ ಆರ್. ಗುಂಡೂರಾಯರು ಕರ್ನಾಟಕದ ಮುಖ್ಯಮಂತ್ರಿಯಾದ ಬಳಿಕ ಕರ್ನಾಟಕ ಋಣ ವಿಮೋಚನೆ ಮಸೂದೆ ವಿಧಾನ ಮಂಡಲದಲ್ಲಿ ಪ್ರಸ್ತಾಪಿತವಾಗಿತ್ತು.

ರೈತನನ್ನು ಋಣಮುಕ್ತನನ್ನಾಗಿ ಮಾಡುವ ಕ್ರಮಕ್ಕೆ ತಾತ್ವಿಕವಾಗಿ ವಿಧಾನ ಮಂಡಲದಲ್ಲಿದ್ದ ಎಲ್ಲ ರಾಜಕೀಯ ಪಕ್ಷಗಳು ಸಹಮತ ಸೂಚಿಸಿದವು.

ವಿಧಾನ ಸಭೆಯಲ್ಲಿ ನಡೆದ ಚರ್ಚೆಯಲ್ಲಿ ಸರ್ವಶ್ರೀ ಬಿ.ವಿ. ಕಕ್ಕಿಲಾಯ, ಎಚ್. ಗಂಗಾಧರನ್, ಎ.ಜಿ. ಕೊಡಗಿ, ದೇವರಾಜ ಅರಸು, ಪಿ.ಎನ್. ಕೆಂಗೇಗೌಡ, ವಿ.ವಿ. ಪತ್ತಾರ್, ಎ.ಬಿ. ಜಕನೂರ, ಹೆಚ್.ಡಿ. ದೇವೇಗೌಡ, ಎ. ಲಕ್ಷ್ಮೀಸಾಗರ್, ಬಿ. ಬಸವಲಿಂಗಪ್ಪ, ಕೆ.ಹೆಚ್. ಶ್ರೀನಿವಾಸ, ಜೆ.ಹೆಚ್. ಪಟೇಲ್, ಡಿ. ಜಯದೇವರಾಜ ಅರಸು ಇವರುಗಳು ಪಾಲ್ಗೊಂಡಿದ್ದರು. ಕಾಯಿದೆಯನ್ನು ಕುರಿತ ಕೆಲವು ಅಭಿಪ್ರಾಯಗಳು ಹೀಗಿದ್ದವು.

**ಎಚ್. ಗಂಗಾಧರನ್:** ಹೆಚ್ಚು ಪ್ರಮಾಣದಲ್ಲಿ ಬಡಜನರನ್ನು ಈ ಕಾನೂನಿನ ವ್ಯಾಪ್ತಿಯಲ್ಲಿ ತರುವ ಉದ್ದೇಶದಿಂದ ವರಮಾನ ಮಿತಿಯನ್ನು 4800 ರೂ.ಗಳಿಗೆ ಏರಿಸಿರುವುದು ಸ್ವಾಗತಾರ್ಹ. ಆದರೂ ಬಡವರೆಲ್ಲರೂ ಈ ಕಾನೂನಿನ ವ್ಯಾಪ್ತಿಯೊಳಗೆ ಬರಲಾರರು. ಉದಾಹರಣೆಗೆ ಹೇಳುವುದಾದರೆ ನಮ್ಮ ಮೈಸೂರು ಭಾಗದಲ್ಲಿ ಸಣ್ಣಪುಟ್ಟ ವ್ಯಾಪಾರ ಮಾಡುವವರಿದ್ದಾರೆ. ಅವರು 10 ರೂಪಾಯಿ ಸಾಲ ಪಡೆದು ಸೊಪ್ಪನ್ನು ಖರೀದಿಸಿ, ಮಾರಾಟ ಮಾಡಿ ಸಂಜೆ ವೇಳೆಗೆ 10 ರೂಪಾಯಿಗೆ ಒಂದು ರೂಪಾಯಿ ಬಡ್ಡಿ ಕೊಡುತ್ತಾರೆ. ಇದು ಸುಲಭವಾಗಿ ತಪ್ಪಿಸಬಹುದಾದ ವ್ಯವಹಾರವಲ್ಲ. ಹಾಗೆ ತಪ್ಪಿಸಿದ್ದೇ ಆದಲ್ಲಿ ಅವರಿಗೆ ಸಾಲವೇ ದೊರೆಯುವುದಿಲ್ಲ. ದೊಡ್ಡ ದೊಡ್ಡ ನಗರಗಳಲ್ಲಿ ಇದೇ ವ್ಯವಹಾರ ದೊಡ್ಡ ರಖಂ- ಬಡ್ಡಿಯಲ್ಲಿ ನಡೆಯುತ್ತಿದೆ.

ಎ.ಜಿ. ಕೊಡಗಿ: ಋಣ ವಿಮೋಚನೆಗಾಗಿ ಸರ್ಕಾರ ದುರ್ಬಲರ ನೆರವಿಗೆ ನಿಂತಿರುವುದು ಸ್ವಾಗತಾರ್ಹ. ಆದರೆ ವ್ಯವಸ್ಥಿತವಾದ ರೀತಿಯಲ್ಲಿ ದುರ್ಬಲರಿಗೆ ಸಾಲ ಸಿಗುವ ವ್ಯವಸ್ಥೆ ಮಾಡಲು ಸರ್ಕಾರ ಮುಂದೆ ಬರಲೇಬೇಕು.

ಡಿ. ದೇವರಾಜ ಅರಸು (ವಿರೋಧ ಪಕ್ಷದ ನಾಯಕ): ಇದೊಂದು ಪ್ರಗತಿಪರ, ಜನಹಿತ ಹೆಜ್ಜೆ. ಕೇವಲ ಒಂದು ಪಕ್ಷದ ವಿಚಾರವಲ್ಲ. ಇಲ್ಲಿ ಪಕ್ಷ ಮುಖ್ಯವಲ್ಲ. ಮಾನ್ಯ ಶಾಸಕರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಈ ಕಾನೂನನ್ನು ಜಾರಿಗೆ ತರಲು ಮುತುವರ್ಜಿ ವಹಿಸಬೇಕು. ಸರ್ಕಾರ ಮಾಡುವ ಕೆಲಸಕ್ಕೆ ಶಾಸಕರು ಸಹಾಯಕರಾಗಿ ನಿಂತಲ್ಲಿ ಈ ಕಾನೂನಿನಿಂದ ಹೆಚ್ಚು ಬಡಜನರಿಗೆ ಉಪಕಾರವಾಗುತ್ತದೆ. ಇದು ನನ್ನ ಅನುಭವ ಮತ್ತು ಖಚಿತ ನಂಬಿಕೆ. ಇಡೀ ದೇಶದಲ್ಲಿ ಈ ಕಾನೂನನ್ನು ಜಾರಿಗೆ ತಂದಿರುವ ರಾಜ್ಯಗಳು ಕೇವಲ ಎರಡು ಮಾತ್ರ. ಮೊದಲನೆಯದು ಮಹಾರಾಷ್ಟ್ರ. ಎರಡನೆಯದು ನಾವು. ಕರ್ನಾಟಕ ಹೆಮ್ಮೆ ಪಡಬೇಕಾದ ವಿಷಯ ಇದು.

ವಿ.ವಿ. ಪತ್ತಾರ್: ದೇವಸ್ಥಾನ ಮತ್ತಿತರ ಜಮೀನು ರಿಟ್ರೆಂಚ್ ಮಾಡಲು ನ್ಯಾಯಮಂಡಲಿಗಳಿಗೆ ಯಾವ ರೀತಿ ಅಧಿಕಾರ ಕೊಟ್ಟಿದ್ದೇವೆಯೋ ಅದೇ ರೀತಿ ಈ ಕಾನೂನು ಜಾರಿ ಸಹಿತ ನ್ಯಾಯಮಂಡಲಿಗಳಿಗೇ ಒಪ್ಪಿಸಬೇಕು.

ಹೆಚ್.ಡಿ. ದೇವೇಗೌಡ: ಬಡವರಿಗೆ ಅನುಕೂಲ ಮಾಡುವುದನ್ನು ನಾನು ಯಾರಿಂದಲೂ ಕಲಿಯಬೇಕಾದ್ದಿಲ್ಲ. ಈಗ ನಮ್ಮ ಮುಂದೆ ಇರುವ ಪ್ರಶ್ನೆ ಎಂದರೆ ' ನಂಬಿಕೆ ಕ್ರಯ ' ಎಂದರೆ ಏನೆಂದು ಖಚಿತಪಡಿಸಿಕೊಳ್ಳಬೇಕು. ಇಲ್ಲಿ ನಂಬಿಕೆ ಕ್ರಯ ಬರುವುದಿಲ್ಲ. ನಮ್ಮ ಕಡೆ ಶುದ್ಧ ಕ್ರಯಕ್ಕೆ ಬರೆಸಿಕೊಳ್ಳುತ್ತಾರೆ. ತಮ್ಮ ಕಾನೂನಿನಲ್ಲಿ ಅಸಿಸ್ಟೆಂಟ್ ಕಮೀಷನರಿಗೆ ಅಧಿಕಾರ ಕೊಡುತ್ತೇವೆಂದು ಹೇಳುತ್ತೀರಿ. ನಿರ್ದಿಷ್ಟವಾಗಿ ಡಿಫೈನ್ ಮಾಡದದ್ದಲ್ಲಿ ಹಳ್ಳಿಯಲ್ಲಿ ಏನು ಪರಿಣಾಮ ಆಗುತ್ತದೆ. ಯೋಚಿಸಬೇಕು. ಲೋಕಸಭೆಯ ಚುನಾವಣೆಗೆ ಒಂದು ತಿಂಗಳ ಮುಂಚೆ ಜನತೆಗೆ ಅನುಕೂಲ ಮಾಡಬೇಕೆಂದು ಶ್ರೀಮಾನ್ ಬಸವಲಿಂಗಪ್ಪನವರು ರೆವಿನ್ಯೂ ಸಚಿವರಾಗಿದ್ದಾಗ ಈ ಆರ್ಡಿನೆನ್ಸ್ ತಂದರು. ನನಗೇನೂ ಸಂಕಟವಿಲ್ಲ. ದಯಮಾಡಿ ಅವರೇ ಹೇಳಲಿ, ನಂಬಿಕೆ ಕ್ರಯ ಏನು ಎಂಬುದನ್ನೂ ಅವರು ತಿಳಿಸಬೇಕು.

ಬಿ. ಬಸವಲಿಂಗಪ್ಪ: ಮಾನ್ಯ ಅಧ್ಯಕ್ಷರೇ ಶ್ರೀಮಾನ್ ದೇವೇಗೌಡರ ವಾದವನ್ನು ಕೇಳಿದೆ. ಅವರ ವಾದ ನನಗೆ ಆಶ್ಚರ್ಯ ತಂದಿದೆ. ಈ ವಿಧೇಯಕದಲ್ಲಿ ನಂಬಿಕೆ ಕ್ರಯಕ್ಕೆ ಸಂಬಂಧಿಸಿದ ಕಲಂ ಏನಿದೆ ಇದನ್ನು ವಿಚಾರ ಮಾಡಿಯೇ ಸೇರಿಸಿದ್ದೇವೆ. ಇದನ್ನು ಈ ವಿಧೇಯಕದಲ್ಲಿ ಸೇರಿಸುವುದಕ್ಕೆ ನಾನೂ ಕಾರಣ. ಹಳ್ಳಿಗಾಡಿನ ಎಲ್ಲ ವಿದ್ಯಾಮಾನಗಳು ನಮಗೂ ಗೊತ್ತಿದೆ. ನಾವೂ ಎಲ್ಲಾ ಕಡೆ ತಿರುಗಾಡಿ, ಅಭ್ಯಾಸ ಮಾಡಿ, ಜನಗಳನ್ನು ಕೇಳಿ, ವಿಚಾರ ಮಾಡಿ ಈ ಕಲಂ ಸೇರಿಸಿದ್ದೇವೆ.

ಮೊದಲು ಆಧಾರ ಪತ್ರ ಎಂದು ಬರೆಸಿಕೊಂಡು, ಅದನ್ನು ಆಮೇಲೆ ಶುದ್ಧಕ್ರಯ ಪತ್ರ ಎಂದು ಮಾಡಿ ಜನಕ್ಕೆ ಮೋಸ ಮಾಡುವುದನ್ನು ಕಾಣುತ್ತಿದ್ದೇವೆ.

10-12 ಸಾವಿರ ರೂಪಾಯಿಗಳ ಬೆಲೆ ಬಾಳುವ ಜಮೀನನ್ನು ಅಮಾಯಕರಿಗೆ ಮೋಸ ಮಾಡಿರುವ ನೂರಾರು ನಿದರ್ಶನಗಳನ್ನು ಸಾವಿರಾರು ಪ್ರಕರಣಗಳನ್ನು ನೋಡಬಹುದಾಗಿದೆ.

ಜೆ.ಹೆಚ್. ಪಟೇಲ್: ಕಾನೂನು ಮಾಡುವಾಗ ಎಲ್ಲರಿಗೂ ಒಳ್ಳೆಯದಾಗಬೇಕು ಎನ್ನುವ ಉದ್ದೇಶವನ್ನು ಅಳವಡಿಸಬೇಕಾಗುತ್ತದೆ. ಆದರೆ ಕೆಲವೊಂದು ಸಂದರ್ಭಗಳಲ್ಲಿ ಈ ರೀತಿ ಮಾಡುವುದು ಕಷ್ಟವಾಗುತ್ತದೆ. ಹೀಗೆ ಕಾನೂನು ಮಾಡಿದಾಗ ಅನಿವಾರ್ಯವಾಗಿ ಕೆಲವೊಂದು ಜನರಿಗೆ ದುಷ್ಪರಿಣಾಮವಾಗುತ್ತದೆ. ಎಲ್ಲಾ ವಿಷಯಗಳನ್ನು ಕರಾರುವಕ್ಕಾಗಿ ಡಿಫೈನ್ ಮಾಡುವುದೂ ಕಷ್ಟ.

ಮಾನ್ಯ ದೇವೇಗೌಡರ ಸಂಶಯ ನಿಜವಾಗಿದ್ದರೂ ಕೂಡ ಅದನ್ನು ಗಮನಕ್ಕೆ ತೆಗೆದುಕೊಳ್ಳಬಹುದೇ ಹೊರತು, ಅದನ್ನು ಗಮನದಲ್ಲಿಟ್ಟುಕೊಂಡು ನಾವು ಕಾನೂನು ಮಾಡಿದರೆ ಬಹಳ ಅಪಾಯವಾಗುತ್ತದೆ.

ಕಾನೂನು ಪ್ರಕಾರ ಒಂದು ಗ್ರಾಮದಲ್ಲಿ ಬಹುಷಃ ನಾಲ್ಕು ಜನ ಅಮಾಯಕ ಖರೀದಿದಾರರಿಗೆ ಅಪಚಾರವಾಗಬಹುದು. ಇಲ್ಲ ಎನ್ನುವಂತಿಲ್ಲ. ಆದರೆ ಈ ಮಿತಿಯನ್ನು ತೆಗೆದುಹಾಕಿದ್ದೇ ಆದಲ್ಲಿ 96 ಜನ ಖದೀಮರಿಗೆ ಅನುಕೂಲವಾಗುತ್ತೆ. ಮಾನ್ಯ ದೇವೇಗೌಡರು ಪ್ರಸ್ತಾಪಿಸಿರುವ ಅಂಶ ಸಾಂಧರ್ಭಿಕ ಸತ್ಯವಾದರೂ ಸಹಿತ ಈ ಪದವನ್ನು ತೆಗೆದುಹಾಕುವುದು ಸರಿಯಾಗುವುದಿಲ್ಲ.

ಹೆಚ್.ಡಿ. ದೇವೇಗೌಡ: ನಂಬಿಕೆ ಕ್ರಯ ಎನ್ನುವುದನ್ನು ಮತ್ತಷ್ಟು ಡಿಫೈನ್ ಮಾಡಬಹುದಲ್ಲ?

ಜೆ.ಹೆಚ್. ಪಟೇಲ್: ನಮ್ಮ ದೇಶದಲ್ಲಿ ' ನಂಬಿಕೆಯನ್ನೇ' ಸಮರ್ಥಿಸಲಾಗುವುದಿಲ್ಲ. ಇನ್ನು ನಂಬಿಕೆ ಕ್ರಯದ ಪಾಡು ಹಾಗಿರಲಿ. ನಂಬಿಕೆ ಎನ್ನುವುದು ನಮ್ಮಲ್ಲಿ ಸಂಪೂರ್ಣವಾಗಿ ಕಳೆದುಹೋದಂತಿದೆ. ಕಂಪ್ಲೀಟ್‌ಲಿ ಆಬ್ಸೆಂಟ್. ಈ ಮಸೂದೆಯಿಂದ ಸ್ವಲ್ಪ ಜನರಿಗೆ ದುಷ್ಪರಿಣಾಮವಾದರೂ ಕೂಡ ನಾವು ಸಹಿಸಿಕೊಳ್ಳಬೇಕಾಗುತ್ತದೆ. ಕೆಲವು ಸಾರಿ ಸಮಾಜದ ಹಿತದೃಷ್ಟಿಯಿಂದ ನಾವು ಅದನ್ನು ಸಹಿಸಲು ಸಿದ್ಧವಾಗಬೇಕಾಗುತ್ತದೆ. ಹೀಗಾಗಿ ನಾವು ಕರ್ನಾಟಕ ಋಣ ವಿಮೋಚನೆ ಕಾನೂನನ್ನು ತರಲೇಬೇಕು. ಇದನ್ನು ನಾವು ಬೆಂಬಲಿಸೋಣ.

ಸಭಾಧ್ಯಕ್ಷರು (ಪಿ. ವೆಂಕಟರಮಣ): ನಂಬಿಕೆಯ ಕ್ರಮವೇ ಅಥವಾ ಶುದ್ಧ ಕ್ರಯವೇ ಎನ್ನುವ ತೀರ್ಮಾನದ ಅಧಿಕಾರವನ್ನೂ ಭೂ ನ್ಯಾಯ ಮಂಡಲಿಯ ಅಧ್ಯಕ್ಷರು ತೆಗೆದುಕೊಂಡರೆ ಒಳ್ಳೆಯದು.

(ವಿಧಾನ ಸಭೆ ಕಲಾಪ : ಮೇ 5, 1980)

(ಅದೇ ದಿನ ವಿಧಾನ ಸಭೆ ಕರ್ನಾಟಕ ಋಣ ವಿಮೋಚನೆ ವಿಧೇಯಕದ ಅಂಗೀಕಾರಕ್ಕೆ ಅನುಮೋದನೆ ನೀಡಿತು.)

## ಪಟೇಲರೇ ಏನಾಯ್ತು ಲೋಹಿಯಾ ಫಿಲಾಸಫಿ?

ಮಲ್ಲಿಕಾರ್ಜುನ ಖರ್ಗೆ (ವಿರೋಧ ಪಕ್ಷದ ನಾಯಕ): ಈ ಸದನದ ಗಮನಕ್ಕೆ ತರಬಯಸುತ್ತೇನೆ. ಶ್ರೀಮಾನ್ ಜೆ.ಹೆಚ್. ಪಟೇಲರು ಹಿಂದೆ ಇದ್ದ ಹಾಗೆ ಈಗ ಇಲ್ಲ. ಏಕೆಂದರೆ ಒಂದು ಗಾದೆ ಮಾತು ಹೇಳುತ್ತಾರೆ. ಸೋತಾಗ ಸೋಗತಿ ಗುಣ ನೋಡಬೇಕು; ಹೊಲಸಾದಾಗ ಹೆಂಡತಿ ಗುಣ ನೋಡಬೇಕು ಎಂದು. ಅಂದರೆ ಮನುಷ್ಯ ಖಾಯಿಲೆ ಬಿದ್ದಾಗ ಹೆಂಡತಿ ಯಾವ ರೀತಿಯಲ್ಲಿ ನೋಡಿಕೊಳ್ಳುತ್ತಾಳೆ ಎನ್ನತಕ್ಕಂಥಾದ್ದು. ಹಾಗೆ ಪಟೇಲರ ಗುಣ ನಾವು ಯಾವಾಗ ನೋಡಬೇಕಾಯಿತು ಅಂದರೆ ಸಮಾಜವಾದಿ ಪಟೇಲರು ಅಧಿಕಾರಕ್ಕೆ ಬಂದ ಮೇಲೆ ಅಧಿಕಾರದಲ್ಲಿ ಇಲ್ಲದೇ ಇದ್ದಾಗ ಅವರು ಅನೇಕ ಮಾತುಗಳನ್ನು ಹೇಳಿದ್ದರು, ಲೋಹಿಯಾ ಫಿಲಾಸಫಿ, ಗಾಂಧಿ ಫಿಲಾಸಫಿ, ಸಣ್ಣ ಕೈಗಾರಿಕೆಗಳು, ಭೂಸುಧಾರಣಾ ಕಾನೂನು, ಈ ದೇಶದಲ್ಲಿ ಮಾಡಬೇಕಾದ ಹೋರಾಟ ಎಲ್ಲಾ ಹೇಳಿದರು. ಅಧಿಕಾರಕ್ಕೆ ಬಂದಮೇಲೆ ತಾವು ಏನು ಮಾಡಿದಿರಿ? ಶಾಸ್ತ್ರ ಹೇಳುವುದಕ್ಕೆ, ಬದನೆಕಾಯಿ ತಿನ್ನುವುದಕ್ಕೆ ಅಂದಹಾಗೆ. ತಾವು ಅಧಿಕಾರಕ್ಕೆ ಬಂದು ಎರಡು ವರ್ಷಗಳು ಆದವು. ಒಂದು ಮಾಮೂಲಿ ಭೂ ಸುಧಾರಣಾ ಕಾನೂನು, ಈ ರಾಜ್ಯದಲ್ಲಿ ಅದು ಬಡಜನರ ಜೀವಾಳ ಆಗಿತ್ತು. ಆ ಕಾನೂನಿಗೆ ಧಕ್ಕೆ ಕೊಟ್ಟಂತಹವರು ತಾವು ಮತ್ತು ಶ್ರೀಮಾನ್ ದೇವೇಗೌಡರು ಎನ್ನತಕ್ಕಂಥ ಮಾತನ್ನು ನಾನು ಸ್ಪಷ್ಟವಾಗಿ ಹೇಳುತ್ತೇನೆ. ಇದಕ್ಕೆ ಬೇರೆ ಯಾರು ಹೇಳಿದರೂ ತಾವು ಒಪ್ಪಬಾರದಿತ್ತು. ನಾವು ಬೇರೆಯವರನ್ನು ಕುರಿತು ಆಪಾದನೆ ಮಾಡುವುದಿಲ್ಲ.

ಸಿ. ಬೈರೇಗೌಡ: ಈ ಮನೆ ಆ ಕಾನೂನನ್ನು ಪಾಸ್ ಮಾಡಿದೆ.

ಅಧ್ಯಕ್ಷರು (ಮಾನ್ಯ ರಮೇಶ್‌ಕುಮಾರ್): ನಾನು ಅದನ್ನೇ ಹೇಳುತ್ತಿದ್ದೇನೆ. ಇಲ್ಲಿ ಮಾನ್ಯ ದೇವೇಗೌಡರು ಇಲ್ಲ ಡಿಫೆಂಡ್ ಮಾಡಿಕೊಳ್ಳುವುದಕ್ಕೆ. ಇವರ ಮೇಲೆ ಎಷ್ಟು ಬೇಕಾಗಿದ್ದರೂ ಹೇಳಿ, ಅವರ ಮೇಲೆ ಏಕೆ?

ಎಂ. ಮಲ್ಲಿಕಾರ್ಜುನ ಖರ್ಗೆ: ಇದ್ದರಲ್ಲ ಅವರು ಅದಕ್ಕೆ ನಾನು ಹೇಳಿದೆ.

ಅಧ್ಯಕ್ಷರು: ಆ ಸ್ಪೀಡ್‌ನಲ್ಲಿ ಎಲ್ಲಾ ಹೊರಗೆ ಬಂದುಬಿಡುತ್ತದೆ.

ಎಂ. ಮಲ್ಲಿಕಾರ್ಜುನ ಖರ್ಗೆ: ಸ್ಪೀಡಲ್ಲ, ತಂದವರು ಯಾರು? ನಾವು ದೇವರಾಜ ಅರಸ್ ಅವರ ಹೆಸರನ್ನು ತೆಗೆದುಕೊಳ್ಳುವುದಿಲ್ಲವೆ? ಒಳ್ಳೆಯ ಕಾನೂನು ತಂದರು ಎಂದು ಹೇಳುವುದಿಲ್ಲವೆ? ಅದನ್ನು ಇರಚುಮುರಚು ಮಾಡಿದವರು ದೇವೇಗೌಡರು ಅಂದರೆ ಅದನ್ನು ರೆಫರ್ ಮಾಡುವಂತೆ ಇಲ್ಲ. ಈ ಭೂಸುಧಾರಣಾ ಕಾನೂನಿನಲ್ಲಿ, ಇಡೀ ಬಡಜನತೆಯ ಜೀವಾಳ ಇದರಲ್ಲಿ ಇದೆ. ಅವರ ಆರ್ಥಿಕ ಬದುಕು ಅದರಲ್ಲಿ ಇದೆ. ಇಂತಹ ಕಾನೂನನ್ನು ತಾವು ತಮ್ಮ ಕೈಯಿಂದ ಕೊಲೆ ಮಾಡಿದಿರಲ್ಲ, ಯಾವ ಬಾಯಿಂದ ಹೇಳುತ್ತೀರಿ ತಾವು ಅಧಿಕಾರ ಸಿಕ್ಕಾಗ ಸಾಮಾನ್ಯ ಜನರಿಗೆ ಒಳ್ಳೆಯದು ಮಾಡುತ್ತೇವೆಂದು? ಇದು ಒಬ್ಬಿಬ್ಬರ ಪ್ರಶ್ನೆ ಅಲ್ಲ.

ಲಕ್ಷಾಂತರ ಜನರ ಪ್ರಶ್ನೆ ಇದರಲ್ಲಿ ಇದೆ. ಖಾಯಂ ಆದಂತಹ ಟೆನೆಂಟ್‌ಗಳು ಇರಬಹುದು, ಅಂತಹ ಒಂದು ಭೂ ಸುಧಾರಣಾ ಕಾನೂನಿಗೆ ಕಡಿವಾಣ ಹಾಕಿ ಅದಕ್ಕೆ ಒಂದು ಇತಿಮಿತಿಯನ್ನು ಇಟ್ಟು ಇಡೀ ಕರ್ನಾಟಕ ರಾಜ್ಯದಲ್ಲಿಯೇ ಒಂದು ಪ್ರಗತಿ ಪರವಾದ ಕಾನೂನು ಇದೆ ಎಂದು ಹೇಳಿ ಇದನ್ನು ಕಮ್ಯೂನಿಸ್ಟ್ ಪಾರ್ಟಿಯವರು ಸಹ ಹೊಗಳಿದರು. ಇದು ಒಂದು ರೀತಿ ಭಗವದ್ಗೀತೆ ಎಂದು ಹೇಳಿದರೂ ತಪ್ಪಾಗುವುದಿಲ್ಲ. ಅಂಥ ಒಂದು ಒಳ್ಳೆಯ ಕಾನೂನಿಗೆ ಇವರು ತಿಲಾಂಜಲಿ ಕೊಟ್ಟಿರುವುದರಿಂದ, ಯಾವ ಬಾಯಿಯಿಂದ ಇವರು ಒಳ್ಳೆ ಕೆಲಸ ಮಾಡಿದ್ದಾರೆಂದು ಹೇಳಬೇಕು?

(ವಿಧಾನಸಭೆ ಕಲಾಪ, ಜನವರಿ 27, 1998)

### ಪಾರದರ್ಶಕ ವ್ಯಕ್ತಿತ್ವ

"The best way of being intoxicated is by ideas" ಎಂದು ಹೇಳಿದ ಪಾರದರ್ಶಕ ವ್ಯಕ್ತಿಯೇ ಪಟೇಲರು. ಅನೇಕರಿಗೆ ಪಾರದರ್ಶಕತೆ ಎನ್ನುವುದು ಭಾಷಣದ ವಸ್ತು ಆಗಿದೆ. ಆದರೆ ಪಟೇಲರಿಗೆ ಇದು ಜೀವನದ ಅವಿಭಾಜ್ಯ ಅಂಗ. ಸ್ವಂತ ಮತ್ತು ಸಾರ್ವಜನಿಕ ಜೀವನದಲ್ಲಿ ಇದ್ದದ್ದನ್ನು ಇದ್ದಂತೆಯೇ ತೋರಿದ ಮತ್ತೊಬ್ಬ ರಾಜಕಾರಣಿಯನ್ನು ನಾನು ನೋಡಿಲ್ಲ.

ರಾಷ್ಟ್ರಮಟ್ಟದ ಯಾವುದೋ ಶತಮಾನೋತ್ಸವ ಆಚರಣೆಗಾಗಿ ಸರ್ಕಾರ ಸಮಿತಿಯೊಂದನ್ನು ರಚಿಸಿತ್ತು. ಅದರಲ್ಲಿ ಹಿರಿಯರಾದ ಶ್ರೀಮತಿ ನಾಗರತ್ನಮ್ಮನವರು, ಹೆಗ್ಗಡೆಯವರು, ಪಟೇಲರು, ಬೊಮ್ಮಾಯಿಯವರು ಮತ್ತು ನಾನು ಸದಸ್ಯರು.

ಆಗ ಕೆಲವೆಡೆ ಹಿಂದೂ-ಮುಸ್ಲಿಂ ಗಲಾಟೆ ನಡೆದಿತ್ತು.

ಬಿಚ್ಚು ಮನಸ್ಸಿನಿಂದ ಮಾತನಾಡುತ್ತಿದ್ದೆವು. ಹೆಗಡೆಯವರು ಮಾತಿನ ಮಧ್ಯೆ ಇದೇನಿದು? ಜಾತಿ ಧರ್ಮದ ಹೆಸರಿನ ಕಚ್ಚಾಟ. ಅರ್ಥವಿಲ್ಲದ್ದು. ನಾನು ಹರಿಜನರ ಮಧ್ಯೆ ಇದ್ದಾಗ ಇವರು ಹರಿಜನರು ಎಂಬ ಭೇದ ಭಾವನೆ ನಮಗಿರುವುದಿಲ್ಲ. ಮುಸ್ಲಿಮರ ಜೊತೆ ಇದ್ದಾಗ ಬೇರೆ ಎಂಬ ಭಾವನೆಯೇ ನನಗೆ ಬರುವುದಿಲ್ಲ. ಆದರೂ ಜನ ಹೀಗೇಕೆ ಕಿತ್ತಾಡುತ್ತಾರೋ ನನಗೆ ಅರ್ಥವಾಗುವುದಿಲ್ಲ ಎಂದರು.

ಹೌದೌದು ಎನ್ನುವಂತೆ ನಾವು ಸಮ್ಮತಿ ಸೂಚಿಸಿದೆವು.

ಪಟೇಲರು ಮೆಲ್ಲಗೆ ಎದ್ದರು. ಹೆಗಡೆಯವರ ಕಿವಿ ಹತ್ತಿರ ಬಂದು, ಅವರಿಗಷ್ಟೇ ಕೇಳಿಸಲು ಸಾಧ್ಯ ಎನ್ನುವಷ್ಟು ಕೀಟಲೆ ದನಿಯಲ್ಲಿ "ನೀವು ಹೆಣ್ಣು ಮಕ್ಕಳ ಜೊತೆ ಇದ್ದಾಗಲೂ ಏನೂ ಅನ್ನಿಸುವುದಿಲ್ಲವೇ" ಅಂದರು.

(ವೈ.ಕೆ. ರಾಮಯ್ಯ (ಹುಲಿಯೂರುದುರ್ಗ) ವಿಧಾನಸಭೆ ಫೆಬ್ರವರಿ 27, 2001)

### ಹೃದಯ ಶ್ರೀಮಂತಿಕೆಯ ಸಮಾಜವಾದಿ

ನಾನು ರಾಜಕೀಯ ಜೀವನದಲ್ಲಿ ಕಂಡ ಅತ್ಯಂತ ಪ್ರೌಢಿಮೆ, ಪ್ರಬುದ್ಧತೆ ಮತ್ತು ಹೃದಯ ಶ್ರೀಮಂತಿಕೆಯ ಜನನಾಯಕ ಜೆ.ಹೆಚ್. ಪಟೇಲ್. ನಾಡುಕಂಡ ಅಪೂರ್ವ ಮುತ್ಸದ್ದಿ ಇವರು.

ಉತ್ತರ ಕರ್ನಾಟಕದ ಏಳಿಗೆಗಾಗಿ ಆದ್ಯತೆ ನೀಡಿ, ಶ್ರದ್ಧೆ - ಅಂತಃಕರಣದಿಂದ ದುಡಿದ ಆಡಳಿತಗಾರ ಈತ. ಪ್ರಗತಿಗಾಗಿ ಪರಿವರ್ತನೆಯ ಕನಸು ಕಂಡ ಪಾರದರ್ಶಕ ರಾಜಕಾರಣಿ ಪಟೇಲರು.

(ಬಿ.ಆರ್. ಯಾವಗಲ್ (ನರಗುಂದ) ವಿಧಾನಸಭೆ, ಫೆಬ್ರವರಿ 27, 2001)

# 6

# ಪರಿಶಿಷ್ಟರ ಬಗೆಗೆ ಮಮತೆ

## 'ನಾನು ಖರ್ಗೆ ಅಣ್ಣ - ತಮ್ಮ'

ಶತಶತಮಾನಗಳಿಂದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ವರ್ಣ ಆಧಾರಿತ ಮತ್ತು ಮೌಢ್ಯಕಾರಣಗಳಿಗಾಗಿ ಅಸ್ಪೃಶ್ಯತೆಯನ್ನು ಪೋಷಿಸಿದ ಸಮಾಜ ನಮ್ಮದು ಎಂದು ಮನನೊಂದ ರಾಜಕಾರಣಿ ಜೆ.ಹೆಚ್. ಪಟೇಲ್. ಇದೇ ಕಾರಣಕ್ಕಾಗಿ ಜಾತಿಯನ್ನು ಪ್ರೀತಿಸುವ ವರ್ಗ ಪಟೇಲರನ್ನು ದೂರುವಿಟ್ಟದ್ದೂ ಸತ್ಯ. ಈಗ ಪಟೇಲರು ಜೀವಿಸಿಲ್ಲ. ಇಂದು ಅವರನ್ನು ಹೊಗಳುವುದು ಸುಲಭ. ಜಾತೀಯುತೆಯನ್ನು ವಿಚಾರದ ತಳಹದಿಯಾಗಿಟ್ಟುಕೊಂಡ ಯಾರೊಬ್ಬ ರಾಜಕಾರಣಿಯನ್ನೂ ಪಟೇಲರು ಅಂತಃಸಾಕ್ಷಿಯಾಗಿ ಒಪ್ಪಲಿಲ್ಲ ಎಂಬುದು ಅವರು ಸದನದಲ್ಲಿ ಹೇಳಿದ ಮಾತುಗಳಿಂದ ಸ್ಪಷ್ಟವಾಗುತ್ತದೆ. ಜಾತೀಯುತೆ ಎಂಬ ಕಳಂಕವನ್ನು ಅಳಿಸಿಹಾಕಲು ವೈಯಕ್ತಿಕವಾಗಿ ಆಡಿದ ಮಾತನ್ನು ಮಾಡಿ ತೋರಿಸಿದವರು ಪಟೇಲರು.

ಈ ವಿಷಯದಲ್ಲಿ ಪಟೇಲರು, ಗಾಂಧೀಜಿ, ಸರ್ದಾರ್ ಪಟೇಲ್, ಡಾ: ರಾಮಮನೋಹರ ಲೋಹಿಯಾ, ಡಾ: ಬಾಬಾಸಾಹೇಬ್, ಅಂಬೇಡ್ಕರ್, ಲೋಕನಾಯಕ ಜಯಪ್ರಕಾಶ್ ನಾರಾಯಣರಂತಹ ಆದರ್ಶ ವ್ಯಕ್ತಿಗಳ ಜೀವನ ಸಂದೇಶಗಳಿಂದ ಪ್ರಭಾವಿತರಾದವರು. ಪರಿಶಿಷ್ಟ ಜಾತಿ ವರ್ಗಗಳ ಜನರ ಜೀವನಮಟ್ಟ ಸುಧಾರಿಸುವವರೆಗೂ ಸರ್ಕಾರದ ಕಾರ್ಯಯೋಜನೆಗಳಲ್ಲಿ ಮೀಸಲಾತಿ ಅಗತ್ಯ ಎಂಬುದು ಪಟೇಲರ ಸ್ಪಷ್ಟ ನೀತಿ.

ಸದನದಲ್ಲಿ ಮತ್ತು ಹೊರಗಡೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಬಗೆಗೆ ಮೊಸಳೆ ಕಣ್ಣೀರು ಸುರಿಸುವುದನ್ನು ಖಡಾಖಂಡಿತವಾಗಿ

ಟೀಕಿಸುತ್ತಿದ್ದ ಪಟೇಲರಿಗೆ ಪರಿಶಿಷ್ಟ ಜಾತಿ ಮತ್ತು ಮೇಲ್‌ಜಾತಿ ನಡುವೆ ವಿವಾಹ ಮತ್ತಿತರ ಸಾಮಾಜಿಕ ನೆಂಟಸ್ತನ ಹೆಚ್ಚಬೇಕೆಂಬ ಹಿರಿಯಾಸೆ ಇತ್ತು. ಸ್ವತಃ ತಮ್ಮ ಕುಟುಂಬದಲ್ಲಿ ಅಂತರ್‌ಜಾತಿ ವಿವಾಹ ನಡೆಸಿ, ಸೊಸೆಯನ್ನು ಬೇರೆ ಜಾತಿಯಿಂದ ತಂದವರು ಇವರು.

ಪಟೇಲರು ವಿಧಾನಸಭೆಯ ಸದಸ್ಯರಾಗಿದ್ದ ಕಾಲದಲ್ಲಿ ಅವರ ನಿಕಟವರ್ತಿಗಳು ಹಾಗೂ ಆತ್ಮೀಯರು ದಿವಂಗತ ಬಿ. ಬಸವಲಿಂಗಪ್ಪ ಮತ್ತು ಇಂದಿನ ನಾಡಿನ ಹಿರಿಯ ರಾಜಕಾರಣಿ ಕೆ.ಹೆಚ್. ರಂಗನಾಥ್. ಸಂಸದೀಯ ಸಹೃದಯತೆಯ ಬೆಳವಣಿಗೆಗೆ ರಂಗನಾಥರು ಸಭಾಧ್ಯಕ್ಷರಾಗಿ ಇತ್ತ ಕೊಡುಗೆಯನ್ನು ಪಟೇಲರು ಮುಕ್ತಕಂಠದಿಂದ ಹೊಗಳುತ್ತಿದ್ದರು.

ಒಮ್ಮೊಮ್ಮೆ ವಿವಾದಾತ್ಮಕ ಎನಿಸುವಂತೆ ಕಂಡರೂ, ಪ್ರಾಮಾಣಿಕರಾಗಿದ್ದ ಹಿರಿಯ ಮುತ್ಸದ್ದಿ ಬಸವಲಿಂಗಪ್ಪನವರ ಆಚಾರ-ವಿಚಾರಗಳಿಗೆ ಸಂಪೂರ್ಣವಾಗಿ ಮನಸೋತವರು ಪಟೇಲರು. ಬಸವಲಿಂಗಪ್ಪನವರ ಸಾಮಾಜಿಕ ಕಳಕಳಿ, ಮನಸ್ಸಿನಲ್ಲಿರುವುದನ್ನು ನೇರವಾಗಿ ಹೇಳುವ ಸತ್ಯಶೀಲ ಹಠಮಾರಿತನ, ಪ್ರಗತಿ ಚಿಂತನೆಯ ದೂರದೃಷ್ಟಿ, ಧರ್ಮ-ದೇವರ ಬಗೆಗಿನ ವಸ್ತುನಿಷ್ಠ ಪರಿಹಾಸ್ಯ - ಇವೇ ಮೊದಲಾದ ಸಂಸದೀಯ ನಿಲುವನ್ನು ಪಟೇಲರು ಮೇಲಿಂದ ಮೇಲೆ ಅನುಮೋದಿಸುತ್ತಿದ್ದರು.

## ದಲಿತ ಪಂಥ ಚಟುವಟಿಕೆ ಹೆಚ್ಚಲಿ

ದಲಿತ ಪಂಥದವರ ಚಟುವಟಿಕೆಗಳು ಇನ್ನೂ ಸಬಲವಾಗಿ ನಡೆಯದ ಹೊರತು ನಮ್ಮ ದೇಶವನ್ನು, ಸಮಾಜವನ್ನು ಸುಧಾರಿಸಲು ಸಾಧ್ಯವಿಲ್ಲ. ಹೀಗೆಂದ ಮಾತ್ರಕ್ಕೆ ಹಿಂಸೆಗೆ ಪ್ರೋತ್ಸಾಹ ಕೊಡುತ್ತಿದ್ದೇವೆ ಎಂದು ಅರ್ಥವಲ್ಲ. ಬಸವೇಶ್ವರ, ಲೋಹಿಯಾ, ಅಂಬೇಡ್ಕರ್, ಜಯಪ್ರಕಾಶ್ - ಇನ್ನೂ ಹಲವಾರು ಕ್ರಾಂತಿಕಾರಿ ಪುರುಷರು ಕೊಟ್ಟ ಚಿಂತನೆಯನ್ನು ತಿರುಚಿಹಾಕುವ ಶಕ್ತಿಗಳು ನಮ್ಮ ಸಮಾಜದಲ್ಲಿ ಪ್ರಬಲವಾಗಿರುವವರೆಗೂ ಕ್ರಾಂತಿ ಅಥವಾ ಸುಧಾರಣೆ ಸಾಧ್ಯವಿಲ್ಲ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ, ಆಗಸ್ಟ್ 9, 1978)

## ಖರ್ಗೆ, ನಾನು ಅಣ್ಣ-ತಮ್ಮ

ಮಾನ್ಯ ಅಧ್ಯಕ್ಷರೇ, ನಾವು ಇವತ್ತು ಜನಾಂಗವನ್ನು ಒಡೆಯುವುದರಲ್ಲಿ ನಿಸ್ಸೀಮರಾಗಿದ್ದೇವೆ. ಕೇವಲ ವರ್ಣಾಶ್ರಮವಾಗಿದ್ದಿದ್ದರೆ ಸಹಿಸಬಹುದಿತ್ತು. ನಮ್ಮ ಜನ ಯಾವ ಮಟ್ಟದಲ್ಲಿ ಜನಾಂಗವನ್ನು ಒಡೆದಿದ್ದಾರೆ ಅಂದರೆ ಎಡ-ಬಲ, ಸಣ್ಣಕಂಬಳಿ-ದೊಡ್ಡಕಂಬಳಿ, ಮೂರು ದಿವ್ಸದವನು - ನಾಲ್ಕು ದಿವ್ಸದವನು ಇತ್ಯಾದಿ. ಇದರಲ್ಲೂ ನಮಗೆ ಮೂರುಸಾವಿರ ವರ್ಷಗಳ ಪಾಂಡಿತ್ಯವಿದೆ. ಪದರ ಪದರವಾಗಿ, ಸೂಕ್ಷ್ಮ ಸೂಕ್ಷ್ಮವಾಗಿ ನಮ್ಮಲ್ಲಿ ನಾವು ಭೇದ ತಂದುಕೊಂಡಿದ್ದೇವೆ. ಒಕ್ಕಲಿಗರಂತೆ, ಲಿಂಗಾಯಿತರಂತೆ. ಯಾಕೆ ಸ್ವಾಮಿ ಒಂದಾಗಬಾರದು. ಮಾತಾಡುತ್ತೇವೆಯೇ ಹೊರತು ಕಾರ್ಯರೂಪಕ್ಕೆ ತರಲ್ಲ. ಜಾತಿ ಜಾತಿ ನಡುವೆ ರಕ್ತ ಸಂಬಂಧ ಬೆಳೆಸಿದಲ್ಲಿ ಮಾತ್ರ ಈ ಕಷ್ಟ

ಗೊತ್ತಾಗುತ್ತದೆ. ಬೇರೆ ಬೇರೆ ಜನಾಂಗಗಳನ್ನು ಒಂದಾಗಿಸುವ ಕೆಲಸ ಮಾಡಬೇಕೇ ವಿನಃ ಒಡೆಯಬಾರದು. ಒಕ್ಕಲಿಗರು, ಲಿಂಗಾಯುತರು ಕೂಡಿಕೊಂಡರೆ ಒಡೆಯಬೇಡಿ ಎಂದು ನಾನೇ ಎಷ್ಟೋ ಸಲ ಹೇಳಿದ್ದೇನೆ. ಇದೇ ಮಾತು ಎಲ್ಲಾ ಜನಾಂಗಕ್ಕೂ ಅನ್ವಯಿಸುತ್ತದೆ. ಹೆಣ್ಣು-ಗಂಡು ಕೊಟ್ಟು ತಂದು ಜನಾಂಗ-ಜನಾಂಗಗಳನ್ನು ಒಂದು ಮಾಡಿ ಎಂದು ಉಪದೇಶ ನೀಡಿದವರು ಬಸವಣ್ಣನವರು. ಬಸವಣ್ಣನವರ ಮಾತಿನಂತೆ ನಡೆದುಕೊಂಡಿದ್ದಿದ್ದರೆ ಇಂದು ಮಲ್ಲಿಕಾರ್ಜುನ ಖರ್ಗೆ ಮತ್ತು ನಾನು ಅಣ್ಣತಮ್ಮಂದಿರಂತೆ ಇರುತ್ತಿದ್ದೆವು.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ಆಗಸ್ಟ್ 7, 1996)

ಪರಿಶಿಷ್ಟ ಜಾತಿ, ಪರಿಶಿಷ್ಟ ಜನಾಂಗದವರ ಬಗ್ಗೆ ಕಣ್ಣೀರು ಹರಿಸುವ ಬಹಳ ಜನರನ್ನು ನಾನು ನೋಡಿದ್ದೇನೆ. ಅವರಿಗೆ ಏನಾದರೂ ಸಹಾಯ ಮಾಡದೆ ಬರೀ ಅತ್ತರೇನು ಬಂತು. ಬರೀ ಮಾತನಾಡಿದರೆ ಏನು ಬಂತು? ನಾವು ಪರಸ್ಪರ ವಾಗ್ವಾದಗಳಲ್ಲಿ ತೊಡಗಿ ಅವರನ್ನು ಮರೆತಿದ್ದೇವೆ. ಈ ಬಗೆಗೆ ಶಾಸಕರು ಎಚ್ಚೆತ್ತುಕೊಳ್ಳಬೇಕು. ಇದೇ ನನ್ನ ಪ್ರಾರ್ಥನೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ನವೆಂಬರ್ 10, 1998)

## ದೃಷ್ಟಿಕೋನ ಬದಲಾಗಲಿ

ಪರಿಶಿಷ್ಟ ಜಾತಿ - ವರ್ಗಗಳ ಏಳಿಗೆಗಾಗಿ ದೃಢ ಸಂಕಲ್ಪದಿಂದ ಸಂಘಟಿತ ಪ್ರಯತ್ನಗಳನ್ನು ಕೈಗೊಳ್ಳುತ್ತಿರುವಾಗ ನಮ್ಮ ಸಮಾಜದ ದೃಷ್ಟಿಕೋನದಲ್ಲಿ ಆಗಬೇಕಾದ ಆಮೂಲಾಗ್ರ ಬದಲಾವಣೆಗಳನ್ನು ಕುರಿತು ಚಿಂತಿಸೋಣ. ನಮ್ಮ ಸಮಾಜ ಸಂಕುಚಿತ ಜನರಿಂದ ಬಡವಾಗಿದೆ. ವಿಶಾಲ ಹೃದಯ ಮತ್ತು ದೃಷ್ಟಿಗೆ ಅವಕಾಶವೇ ಇಲ್ಲದಂತಾಗಿದೆ. ನಮ್ಮ ಸಮಾಜವನ್ನು ಕಂಪಾರ್ಟ್‌ಮೆಂಟ್‌ಗಳಾಗಿ ವಿಂಗಡಿಸಿರುವ ಮಹನೀಯರಿದ್ದಾರೆ. ಒಂದು ಕಂಪಾರ್ಟ್‌ಮೆಂಟಿನವರು ಇನ್ನೊಂದು ಕಂಪಾರ್ಟ್‌ಮೆಂಟಿಗೆ ಹೋಗುವಂತಿಲ್ಲ. ರಕ್ತ ಸಂಬಂಧ ಬೆಳಸದಂತೆ ಸಂಕೋಲೆಗಳು ಇವೆ. ಇದೊಂದು ಮೂರ್ಖ ಪರಿಕಲ್ಪನೆ. ಈ ರೋಗ ಹೋಗಲು ದೊಡ್ಡ ಸಂಘರ್ಷ ಆಗಬೇಕಾಗಿದೆ. ಅಸ್ಪೃಶ್ಯತೆ ರಕ್ತ ಸಂಬಂಧದಿಂದಷ್ಟೇ ಹೋಗಲು ಶಕ್ಯ. ವಿಷಯ ಬಿಟ್ಟು ಯಾವುದೋ ಮದುವೆ, ರಕ್ತ ಸಂಬಂಧ - ಇತ್ಯಾದಿ ಮಾತನಾಡುತ್ತಿದ್ದೀನಿ ಎಂದು ಭಾವಿಸಬೇಡಿ. ನಾನು ಹೇಳುವುದನ್ನು ದಯಮಾಡಿ ನೀವು ಆಚರಣೆಗೆ ತನ್ನಿ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕರು) ವಿಧಾನ ಸಭೆ : ಫೆಬ್ರುವರಿ 20, 1980)

## ಅಂತರ್‌ಜಾತೀಯ ವಿವಾಹ ಬೇಕು

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಇವತ್ತು ನಮ್ಮ ಸಮಾಜದಲ್ಲಿ ಅಂತರ್‌ಜಾತೀಯ ವಿವಾಹ ಬರದೇ ಹೋದರೆ, ಅದನ್ನು ನಾವು ಜಾರಿಗೆ ತರದೇ ಹೋದರೆ ಎಷ್ಟೇ ಶತಮಾನಗಳಾದರೂ ಅಸ್ಪೃಶ್ಯತೆ ತೆಗೆದು ಹಾಕುವುದಕ್ಕೆ ಸಾಧ್ಯವಿಲ್ಲ.

ಆರ್. ಗುಂಡೂರಾವ್ (ಸಚಿವರು): ಅಂತರ್ ಜಾತೀಯ ವಿವಾಹ ಮಾಡಿಸಿಕೊಂಡವರಿಗೆ ಸರ್ಕಾರ ಎರಡು ಸಾವಿರ ರೂಪಾಯಿಗಳ ಸಹಾಯ ಕೊಡುತ್ತಿದೆಯಲ್ಲಾ ಸ್ವಾಮಿ.

ಜೆ.ಹೆಚ್. ಪಟೇಲ್: ಹರಿಜನ ಯುವಕನನ್ನು ಮೇಲ್‌ಜಾತಿ ಯುವತಿ ಮದುವೆಯಾಗುವುದು; ಮೇಲ್ ಜಾತಿಯ ಯುವಕರನ್ನು ಹರಿಜನ ಯುವತಿ ಮದುವೆಯಾಗುವುದು ಆದಾಗ ಮಾತ್ರ ಸಮಾನವಾದ...

ಬಿ. ಬಸವಲಿಂಗಪ್ಪ: ಮಾಡುವವರು ಯಾರು? ಮಾಡಿಸಿಕೊಳ್ಳುವವರು ಯಾರು?

ಜೆ.ಹೆಚ್. ಪಟೇಲ್: ಇದನ್ನು ಧರ್ಮ ಗುರುಗಳು ಮಾಡುವುದಕ್ಕಾಗುವುದಿಲ್ಲ. ಸರ್ಕಾರದ ವತಿಯಿಂದ ಇಂತಹ ಕ್ರಾಂತಿಕಾರಕ ಕಾರ್ಯಾಚರಣೆ ಆಗಬೇಕಾಗಿದೆ. ಇದಕ್ಕೆ ಪ್ರೋತ್ಸಾಹ ಬೇಕಾಗಿದೆ. ಬರೀ ಬಾಯಿ ಮಾತಿನಿಂದ ಆಗುವ ಕೆಲಸ ಇದಲ್ಲ.

(ವಿಧಾನಸಭೆ ಕಲಾಪ ಆಗಸ್ಟ್ 9, 1978)

## ನೆಹರೂರವರಿಗಾದ ಆಘಾತ

ನಮ್ಮ ದೇಶದಲ್ಲಿ ಸಂಭವಿಸಿದ ಮತ್ತೊಂದು ಪ್ರಸಂಗವನ್ನು ಉದಹರಿಸಬಯಸುತ್ತೇನೆ. ಗೋವಾ ವಿಮೋಚನೆಯ ಕಾಲದ ಘಟನೆ ಇದು. ಗೋವ ರಾಜ್ಯದಲ್ಲಿರುವ ಮಂಗೇಶ್ವರ ದೇವಾಲಯಕ್ಕೆ ಪ್ರಧಾನಿ ಜವಾಹರಲಾಲ್ ನೆಹರು ಬರುವುದಾಗಿ ತಿಳಿಸಿದ್ದರು. ಆಗಿನ ಕಾಂಗ್ರೆಸ್ ಅಧ್ಯಕ್ಷ ಶ್ರೀ ಡಿ. ಸಂಜೀವಯ್ಯನವರೂ ನೆಹರೂರವರೊಂದಿಗೆ ದೇವಾಲಯಕ್ಕೆ ಜೊತೆಯಾಗಿ ಬರುವ ಕಾರ್ಯಕ್ರಮವಿತ್ತು.

ಇದು ಬಹು ಸೂಕ್ಷ್ಮವಾದ ವಿಚಾರ. ನೆಹರೂರವರೊಂದಿಗೆ ಒಬ್ಬ ಹರಿಜನ ಜಾತಿಯ ಮುಂದಾಳು ದೇವಸ್ಥಾನದ ಒಳಗೆ ಬರುತ್ತಾರೆಂದು ಜನ ನಂಬಿದ್ದರು. ಅದನ್ನು ಕಣ್ಣಾರೆ ಕಂಡು ಆನಂದಿಸಲು ಹತ್ತಾರು ಸಾವಿರ ಹರಿಜನರು ಅಲ್ಲಿ ಕಾಯುತ್ತ ನಿಂತರು. ನಮ್ಮ ದಾಸ್ಯ ಸಂಕೋಲೆಯ ವಿಮೋಚನೆಯಾಗಿದೆ, ದೇಶದ ಪ್ರಧಾನಿಯೊಂದಿಗೆ ನಮ್ಮ ಜಾತಿಯ ಬಂಧುವೊಬ್ಬರು ದೇವಸ್ಥಾನದ ಒಳಗೆ ಹೋಗಲಿರುವುದು ಸಂತಸದ ವಿಷಯ, ಈ ಅಪೂರ್ವ ಅವಕಾಶವನ್ನು ಹಾಗೂ ರಾಷ್ಟ್ರದ ನಾಯಕಮಣಿಗಳನ್ನು ಸಮೀಪದಿಂದ ನೋಡಬಹುದು ಎಂಬ ಉತ್ಸಾಹ ಮತ್ತು ತವಕ ಅವರಲ್ಲಿತ್ತು.

ಆದರೆ ಆದದ್ದೇನು? ಗುಡಿಗೆ ಪಂಡಿತ ಜವಾಹರಲಾಲರೊಬ್ಬರೇ ಬಂದರು. ದೇವಸ್ಥಾನದ ಒಳಗೂ ಹೋಗಿ ಬಂದರು. ನೆಹರೂ ಎಂದಿನಂತೆ ಜನರತ್ತ ಕೈಬೀಸಿ ಶುಭಕೋರಿದರು. ಆದರೆ ಅಲ್ಲಿ ನೆರೆದ ಜನ ನೆಹರೂರವರಿಗೆ ಹೂನಗೆ ಬೀರಲಿಲ್ಲ. ಹರುಷ ವ್ಯಕ್ತಪಡಿಸಲಿಲ್ಲ. ನಮ್ಮ ಮುಖಂಡ ಡಿ. ಸಂಜೀವಯ್ಯನವರು ನೆಹರೂರೊಂದಿಗೆ ದೇವಸ್ಥಾನಕ್ಕೆ ಬರುವರೆಂದು ಪ್ರಕಟಿಸಲಾಗಿತ್ತು, ಈ ಸುಸಂದರ್ಭ ಕಾಣಲು ನಾವು ಕಾಯುತ್ತಿದ್ದೆವು ಎಂದು

ಹೇಳಿದರು ಜನ. ಜನರ ಉತ್ಸಾಹ ಮತ್ತು ನಿರೀಕ್ಷೆಯ ಕಾರಣ ನೆಹರೂರವರಿಗೆ ಕೂಡಲೇ ಅರ್ಥವಾಯಿತು.

ಸಹನೆಯ ಮುಂದಾಳು ನೆಹರೂ ತಬ್ಬಿಬ್ಬಾದರು. ಅವರಿಗೆ ಹಿನ್ನೆಲೆ ಏನೇನೂ ತಿಳಿಯದು.

ಅಲ್ಲಿನ ಅಧಿಕಾರಿಗಳ ಹುನ್ನಾರ ಹೀಗಿತ್ತು. ಶ್ರೀ ಸಂಜೀವಯ್ಯನವರಿಗೆ ಅನಾಮಧೇಯ ಕಾಲೇಜೊಂದರ ಉದ್ಘಾಟನೆಯ ನೆಪಹಾಕಿ, ಹರಿಜನ ಮುಂದಾಳುವನ್ನು ಬೇರೆಲ್ಲಿಗೋ ಸಾಗು ಹಾಕಿ, ಪಂಡಿತ ನೆಹರೂರವರನ್ನು ಮಾತ್ರ ದೇವಸ್ಥಾನಕ್ಕೆ ಕರೆತಂದಿದ್ದರು. ಚಾಣಕ್ಯ ಜಾತಿವಾದಿಗಳಲ್ಲಿ ಜಾತೀಯತೆ, ಮೇಲು ಕೀಳಿನ ಭಾವನೆ ಸುಲಭವಾಗಿ ಕರಗುವುದಿಲ್ಲ ಎಂಬುದಕ್ಕೆ ಇದೊಂದು ಉದಾಹರಣೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ಮಾರ್ಚಿ 21, 1978)

## ಅಮೇರಿಕೆಯ ದೃಷ್ಟಾಂತ

ಅಮೇರಿಕೆಯಲ್ಲಿ ಒಂದು ಕಾಲಕ್ಕೆ ವರ್ಣಭೇದ ಆಚರಣೆಯಲ್ಲಿತ್ತು. ದೀರ್ಘ ಹೋರಾಟದ ಫಲವಾಗಿ ಅಲ್ಲಿನ ಸರ್ಕಾರ ವರ್ಣಬೇಧ ಹೊಡೆದು ಹಾಕಿತ್ತು. ಇದಾದ ಬಹು ವರ್ಷಗಳ ನಂತರ ಬಿಳಿಯ ಮನುಷ್ಯನೊಬ್ಬ ಅಮೇರಿಕೆಯ ನ್ಯಾಯಾಲಯದಲ್ಲಿ ದಾವೆ ಹೂಡಿ, ಅಲ್ಲಿನ ಕಂಪೆನಿಗಳಲ್ಲಿ ನೌಕರಿಯನ್ನು ಶೇಕಡ 50 ಭಾಗ ನೀಗ್ರೋಗಳಿಗೆ ಮೀಸಲಾಗಿಟ್ಟಿರುವ ಕ್ರಮವನ್ನು ಪ್ರಶ್ನಿಸಿದ್ದ. ಆತನೂ ಒಬ್ಬ ನೌಕರಿ ಅಪೇಕ್ಷಿಸಿದ ಅರ್ಜಿದಾರನಾಗಿದ್ದ.

ಕೆಳಗಿನ ನ್ಯಾಯಾಲಯಗಳು ಬಿಳಿಯನ ಅಹವಾಲನ್ನು ಎತ್ತಿ ಹಿಡಿದವು. ಅರ್ಹತೆ ಆಧಾರದ ಮೇರೆಗೆ ಬಿಳಿಯನಿಗೆ ನೌಕರಿ ಸಿಗಬೇಕೆಂಬುದು ಕೆಳ ನ್ಯಾಯಾಲಯಗಳ ತೀರ್ಮಾನವಾಗಿತ್ತು.

ಅಮೇರಿಕೆಯ ಸುಪ್ರೀಂಕೋರ್ಟ್ ರಾಜ್ಯಾಂಗದ ಕಾನೂನಿಗೆ ಅನುಗುಣವಾಗಿ ಕರಿಯನಿಗೆ ಕೆಲಸ ಕೊಟ್ಟಿದ್ದು ಸರಿ ಎಂದು ತೀರ್ಮಾನಿಸಿತು. ಈ ರೀತಿ ಅಲ್ಲಿಯೂ ಕರಿಯ-ಬಿಳಿಯ ಎನ್ನುವ ಆಧಾರದ ಮೇಲೆ ಹೋರಾಟ ನಡೆಯುತ್ತಲೇ ಇರುತ್ತವೆ. ಭಾರತಕ್ಕಿಂತ ಕಿರಿಯ ಸಮಾಜಗಳಾದ ಕೆಲವು ಯೂರೋಪಿಯನ್ ರಾಷ್ಟ್ರಗಳಲ್ಲಿ ಸಹಿತ ಇದೇ ರೀತಿಯ ಸಾಮಾಜಿಕ ನ್ಯಾಯ ಅಲ್ಲಿನ ದುರ್ಬಲರಿಗೆ ವಿಸ್ತೃತವಾಗಿರುವುದನ್ನು ನಾವು ಗಮನಿಸಬೇಕು.

1963ನೇ ಇಸವಿಯಲ್ಲಿ ಅಮೇರಿಕೆಯ ಅಧ್ಯಕ್ಷರಾಗಿದ್ದ ಜಾನ್ ಎಫ್ ಕೆನಡಿಯವರು ಸಾಯುವುದಕ್ಕೆ ಮುಂಚೆ ನಡೆದ ಘಟನೆಯೊಂದನ್ನು ಹೇಳಬಯಸುತ್ತೇನೆ.

ಅಮೇರಿಕೆಯ ಲಿಟಲ್ ರಾಕ್ ಶಾಲೆಯಲ್ಲಿ ಇಬ್ಬರು ಕರಿಯ ಹುಡುಗರಿಗೆ ಪ್ರವೇಶಾವಕಾಶ ಕೊಟ್ಟಿದ್ದ ಕಾರಣ, ಅಲ್ಲಿನ ಕೆಲ ಜನರು ಗೊಂದಲ ಎಬ್ಬಿಸಿದ್ದರು. ಕರಿಯ ಹುಡುಗರಿಗೆ ಕಿರುಕುಳ ಕೊಡುತ್ತಿದ್ದರು. ಶಾಲೆಗೆ ಆ ಮಕ್ಕಳು ಬರುವಂತೆಯೇ ಇರಲಿಲ್ಲ.

ಮಾನವೀಯ ಮೌಲ್ಯಗಳಿಗೆ ಅತಿ ಹೆಚ್ಚಿನ ಬೆಲೆಯನ್ನು ನೀಡುತ್ತಿದ್ದ ಅಧ್ಯಕ್ಷರು ಜಾನ್ ಕೆನಡಿ ಈ ಸಂಗತಿ ಕೇಳಿ ಕೆಂಡಾಮಂಡವಾದರು. ಈ ಕ್ರೌರ್ಯವನ್ನು ಹತ್ತಿಕ್ಕಲು ತಮ್ಮ ಫೆಡರಲ್ ಟ್ರಾಫ್ ಸೇನೆಯನ್ನೇ ಕಳುಹಿಸಿ, ಆ ಕರಿಯ ಮಕ್ಕಳಿಬ್ಬರ ಶಿಕ್ಷಣವನ್ನು ಸುಸೂತ್ರ ಮಾಡಿದರು. ನನಗನಿಸುತ್ತದೆ, ಮಾನವೀಯ ಮೌಲ್ಯಕ್ಕೆ ಧಕ್ಕೆಯಾದಾಗ, ಅದರ ರಕ್ಷಣೆಗೆ ಸೈನ್ಯದ ಬಳಕೆ ಮಾಡಿದ್ದ ಜಾನ್‌ಕೆನಡಿಯವರ ಕ್ರಮ ಮಹಾನ್ ಸ್ಥೈರ್ಯ ಮತ್ತು ಆದರ್ಶದ ನಿರ್ಧಾರ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ ಮಾರ್ಚ್ 21, 1978)

## ವರ್ಗ ಸಂಘರ್ಷ : ಪಟೇಲರ ದೃಷ್ಟಿ

ವಿಶ್ವ ಸಮುದಾಯದಾದ್ಯಂತ ವರ್ಗ ಮತ್ತು ವರ್ಗ ಸಂಘರ್ಷ ಅನೂಚಾನವಾಗಿ ಮುಂದುವರೆದುಕೊಂಡು ಬಂದಿದೆ. ಇದು ಬಹಳ ಜನಕ್ಕೆ ಗೊತ್ತಿಲ್ಲ. ವರ್ಗ ಮತ್ತು ಜಾತಿಯ ಬಗ್ಗೆ ಮಹಾತ್ಮ ಗಾಂಧೀಜಿ, ಕಾರ್ಲ್ ಮಾರ್ಕ್ಸ್, ರಾಮಮನೋಹರ ಲೋಹಿಯಾ - ಇವರೇ ಮೊದಲಾದ ಮಹಾನ್ ಚಿಂತಕರು ವಿಶ್ಲೇಷಣೆ ನಡೆಸಿದ್ದಾರೆ.

ವರ್ಗವಾದಿಗಳೂ ಕೆಲವು ತಪ್ಪು ಮಾಡಿರುವುದುಂಟು. ವರ್ಗದಲ್ಲಿ ಕೆಲವರು ಜಾತಿವಾದವನ್ನು ಆಧಾರವಾಗಿ ಮಾಡಿಕೊಂಡು ದೇಶದಲ್ಲಿ ಕ್ರಾಂತಿಯನ್ನು ತರುವ ದುಸ್ಸಾಹಸ ಮಾಡಿದ್ದಾರೆ.

ಜಾತಿ ಮತ್ತು ವರ್ಗ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ವರ್ಗ ಯಾವಾಗ ಆಗುತ್ತದೆ ಎಂದರೆ ಕೆಳಗಿನವರು ಮೇಲಕ್ಕೂ ಮೇಲಿನವರು ಕೆಳಕ್ಕೂ ಹೋಗುವ ಅವಕಾಶ - ಮೊಬಿಲಿಟಿ - ಇದ್ದಾಗ ಮಾತ್ರ. ಯಾವಾಗ ಮೊಬಿಲಿಟಿ ಇರುವುದಿಲ್ಲ ಮತ್ತು ಚಾಲನೆ ತಪ್ಪುತ್ತದೆ ಆಗ ಅದು ಕೇವಲ ಜಾತಿಯಷ್ಟೇ ಆಗಿ ಉಳಿಯುತ್ತದೆ.

ಒಬ್ಬ ಬ್ರಾಹ್ಮಣ ಹರಿಜನನಾಗುವುದಕ್ಕೆ ಸಾಧ್ಯವಿಲ್ಲ. ನಮ್ಮ ದೇಶದಲ್ಲಿ ಶ್ರೀಮತಿ ಇಂದಿರಾಗಾಂಧಿಯವರು ಪ್ರಧಾನ ಮಂತ್ರಿಗಳಾಗಿದ್ದಾಗ ರಾಜಸ್ಥಾನ, ಉತ್ತರ ಪ್ರದೇಶ, ಬಿಹಾರ, ಒರಿಸ್ಸಾ, ಮಧ್ಯಪ್ರದೇಶ, ಹೀಗೆ ಒಟ್ಟು 8 ರಾಜ್ಯಗಳಲ್ಲಿ ಮೇಲಿನ ಜಾತಿಯ ನಾಯಕರೇ ಮುಖ್ಯಮಂತ್ರಿಗಳಾಗಿದ್ದರು. ಕೇಂದ್ರದಲ್ಲಿ ಜನತಾಪಕ್ಷದ ಸರಕಾರ ಅಧಿಕಾರದಲ್ಲಿರುವಾಗ ಐದು ರಾಜ್ಯಗಳಲ್ಲಿ ಬೇರೆ ಬೇರೆ ಹಿಂದುಳಿದ ಜಾತಿ ನಾಯಕರು ಮುಖ್ಯಮಂತ್ರಿಗಳಾಗಲು ಸಾಧ್ಯವಾಯಿತು. ಒಂದು ರಾಜ್ಯದಲ್ಲಿ ಗೊಲ್ಲರ ಜಾತಿಗೆ ಸೇರಿದವ ಮುಖ್ಯಮಂತ್ರಿಯಾದರೆ, ಬಿಹಾರದಲ್ಲಿ ಕ್ಷೌರಿಕ, ರಾಜಸ್ಥಾನದಲ್ಲಿ ಜೈನ ಮತ್ತು ಒರಿಸ್ಸಾದಲ್ಲಿ ಮತ್ತೊಂದು ಹಿಂದುಳಿದ ವರ್ಗದ ನಾಯಕ ಮುಖ್ಯಮಂತ್ರಿ ಸ್ಥಾನಕ್ಕೆ ಬಂದಿದ್ದಾರೆ.

ನಾನು ಜಾತಿ ಮತ್ತು ವರ್ಗದ ವಿಷಯವನ್ನು ಏಕೆ ಪ್ರಸ್ತಾಪಿಸುತ್ತಿದ್ದೇನೆಂದರೆ ಎಲ್ಲೋ ಒಂದೆರಡು ಬೋರ್ಡ್‌ಗಳಿಗೆ ಅಧ್ಯಕ್ಷರನ್ನಾಗಿ ಮಾಡಿದರೆ ಇಲ್ಲವೇ ನಾಲ್ಕೆಂಟು ಮನೆ ಕಟ್ಟಿಸಿಕೊಟ್ಟರೆ

ಹರಿಜನರ ಅಭಿವೃದ್ಧಿ ಆದಂತೆ ಆಗುವುದಿಲ್ಲ. ಸಮಗ್ರ ಅಭ್ಯುದಯಕ್ಕೆ ಸಮಾನಾಂತರ ಅವಕಾಶವೊಂದೇ ಮಾರ್ಗ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಮಾರ್ಚ್ 21, 1978)

## ಮೀಸಲಾತಿ ವಿಸ್ತರಣೆ ಅವಶ್ಯಕತೆ ಪಟೇಲರ ದೃಷ್ಟಿಕೋನ

ಪರಿಶಿಷ್ಟ ಜಾತಿ ಮತ್ತು ವರ್ಗದ ಜನರಿಗೆ ರಾಜ್ಯಾಂಗದ 368 ವಿಧಿಯನ್ವಯ ಮೀಸಲಾತಿ ವಿಸ್ತರಿಸುವುದಕ್ಕೆ ಸಂಬಂಧಿಸಿದಂತೆ ಸಂಸತ್ತು 1980ರಲ್ಲಿ ಭಾರತದ ರಾಜ್ಯಾಂಗಕ್ಕೆ 45ನೇ ತಿದ್ದುಪಡಿಯನ್ನು ತಂದಿತ್ತು. ರಾಜ್ಯಾಂಗದ ತಿದ್ದುಪಡಿ ಮಸೂದೆಯು ದೇಶದ ಎಲ್ಲ ಶಾಸನ ಸಭೆಗಳಲ್ಲಿ ಅನುಮೋದಿತವಾಯಿತು.

ಶತ-ಶತಮಾನಗಳ ಕಾಲ ಕನಿಷ್ಠ ಮಾನವೀಯ ಅವಶ್ಯಕತೆಗಳಿಂದ ವಂಚಿತರಾಗಿ, ಜರ್ಜರಿತರಾದ ಹರಿಜನ ಗಿರಿಜನರಿಗೆ ರಾಷ್ಟ್ರೀಯ ಜನವಾಹಿನಿಯಲ್ಲಿ ಪಾಲ್ಗೊಳ್ಳಲು ನೀಡಲಾದ ವಿಶೇಷ ಮೀಸಲಾತಿ ಸೌಲಭ್ಯವನ್ನು ಮೂರನೆಯ ಬಾರಿಗೆ ಮುಂದುವರಿಸುವುದು ರಾಜ್ಯಾಂಗ ತಿದ್ದುಪಡಿಯ ಮುಖ್ಯ ಉದ್ದೇಶ. ಸ್ವಾತಂತ್ರ್ಯಾನಂತರದ ಸುಮಾರು ಮೂರೂವರೆ ದಶಕಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಜನಾಂಗಗಳ ಜನರ ಜೀವನ ಸ್ಥಿತಿ, ಅವರ ಮೇಲಿನ ನಿರಂತರ ಹಲ್ಲೆ, ಕಷ್ಟ ಕಾರ್ಪಣ್ಯ ಅವರ ಆಶೋತ್ತರ, ಭಾರತೀಯ ಸಮಾಜದಲ್ಲಿ ಅವರಿಗಿರಬೇಕಾದ ಸ್ಥಾನ ಇವೇ ಮೊದಲಾದ ವಿಷಯಗಳನ್ನು ಕುರಿತು ದೇಶದಲ್ಲಿ ವ್ಯಾಪಕ ಚರ್ಚೆ ಮತ್ತು ಮೌಲ್ಯಾಂಕನ ನಡೆದಿತ್ತು.

ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಖಾತೆ ಸಚಿವ ಶ್ರೀ ವೈ. ರಾಮಕೃಷ್ಣ ಕರ್ನಾಟಕದ ಆರನೇ ವಿಧಾನ ಸಭೆಯಲ್ಲಿ ಪಾರ್ಲಿಮೆಂಟಿನಿಂದ ಅಂಗೀಕೃತವಾದ ಈ ವಿಧೇಯಕವನ್ನು ಮಂಡಿಸಿದ್ದರು. ಮೀಸಲಾತಿಯ ವಿಸ್ತರಣೆ ಅಗತ್ಯ ಮತ್ತು ಅನಿವಾರ್ಯವೆಂಬುದು ರಾಜ್ಯದ ಎಲ್ಲ ರಾಜಕೀಯ ಪಕ್ಷಗಳ ಒಮ್ಮತದ ಅಭಿಪ್ರಾಯವಾಗಿತ್ತು. ಸರ್ವಶ್ರೀ ಬಿ. ಸುಬ್ಬಯ್ಯಶೆಟ್ಟಿ, ಎಸ್.ಎಸ್. ಆರಕೇರಿ, ಬಿ. ಬಸವಲಿಂಗಪ್ಪ, ಎ. ಲಕ್ಷ್ಮೀಸಾಗರ್, ಪಿ. ರಾಮದೇವ್, ಬಿ.ವಿ. ಕಕ್ಕಿಲಾಯ, ಎಚ್. ಗಂಗಾಧರನ್, ಎಚ್.ಡಿ. ದೇವೇಗೌಡ, ಎಸ್.ಆರ್. ಬೊಮ್ಮಾಯಿ, ಸಿ.ಎಂ. ಆರುಮ್ಗಂ, ಡಿ.ಬಿ. ನಾಯನಕ್, ಕೆ.ಹೆಚ್. ಶ್ರೀನಿವಾಸ್, ಜಿ. ರಾಜೂಗೌಡ, ಟಿ. ಚೌಡಯ್ಯ, ಜಿ.ಕೆ. ತೆಕ್ಕೇಡ್, ಭೀಮಣ್ಣ ಖಂಡ್ರೆ, ಕೆ. ವೆಂಕಟರಾಮಯ್ಯ, ಜೆ.ಹೆಚ್. ಪಟೇಲ್, ಆರ್. ಗುಂಡೂರಾವ್, ಕೆ. ಭಾಸ್ಕರನಾಯ್ಡು, ಕೆ.ಹೆಚ್. ರಂಗನಾಥ್, ವಿಲಿಯಂ ಮಾರ್ಲೆ, ಕೆ. ಪ್ರಭಾಕರ್, – ಇವರುಗಳು ವಿಧಾನ ಸಭೆಯಲ್ಲಿ ನಡೆದ ರಾಜ್ಯಾಂಗ ತಿದ್ದುಪಡಿ ಮೇಲಿನ ಚರ್ಚೆಯಲ್ಲಿ ಪಾಲ್ಗೊಂಡಿದ್ದರು.

ಜೆ.ಹೆಚ್. ಪಟೇಲರಿಗೆ ಈ ತಿದ್ದುಪಡಿ ಮಸೂದೆ ಪರಿಶಿಷ್ಟ ಜಾತಿ ಮತ್ತು ವರ್ಗದ ಜನರ ಅಂದಿನ ಸ್ಥಿತಿಗತಿ ಮತ್ತು ದೇಶಾದ್ಯಂತ ಅನುಷ್ಠಾನದಲ್ಲಿದ್ದ

> ಕಲ್ಯಾಣ ಕಾರ್ಯಕ್ರಮಗಳ ಬಗೆಗೆ ಕೆಲವು ಮೂಲಭೂತ ಅಂಶಗಳನ್ನು ಪ್ರಸ್ತಾಪಿಸಲು ಸೂಕ್ತ ವೇದಿಕೆಯಾಯಿತು.

ಅಸ್ಪೃಶ್ಯತೆ ಇದೊಂದು ಕಳಂಕ, ಕ್ರೌರ್ಯ ಮತ್ತು ಅಮಾನುಷ ಹೇಯ ನಡವಳಿಕೆ. ನೂರಾರು ವರ್ಷಗಳಿಂದ ಇಂತಹ ಕ್ರೌರ್ಯಕ್ಕೆ ಬಲಿಯಾದ ಈ ಜನಾಂಗಕ್ಕೆ ರಕ್ಷಣೆ ಕೊಡಲು ರಾಜ್ಯಾಂಗಕ್ಕೆ ತಿದ್ದುಪಡಿಯಾಗುತ್ತಿರುವುದು ಸಮಯೋಚಿತ.

ಈ ಕಳಂಕ ಇಷ್ಟು ಹೊತ್ತಿಗೆ ಹೋಗಬೇಕಾಗಿತ್ತು. ಹೋಗಿದೆ ಎನ್ನುವ ಭಾವನೆ ಬರಬೇಕಾಗಿತ್ತು. ಆದರೆ 30 ಅಥವಾ 50 ವರ್ಷಗಳು ಸಾಲದು. ನನ್ನ ಲೆಕ್ಕದ ಪ್ರಕಾರ 300 ವರ್ಷಗಳಾದರೂ ನಮ್ಮ ದೇಶದಲ್ಲಿ ಈ ರೋಗ ಹೋಗುವುದಿಲ್ಲ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ, ಜೂನ್ 12, 1980)

## 18 ಪರ್ಸೆಂಟ್ : ದುರ್ಬಲರ ಅಸಹಾಯಕತೆ

ಜೆ.ಹೆಚ್. ಪಟೇಲ್: ರಿಜರ್‌ವೇಷನ್ - ಮೀಸಲಾತಿ - ಇದು ಇರಬೇಕು ಮತ್ತು ಇನ್ನೂ ಜಾಸ್ತಿ ಆಗಬೇಕು ಎಂಬ ವಿಚಾರ ನನ್ನದು. ಈ ಜನರಿಗೆ ಇಡಲಾಗಿದ್ದ ಮೀಸಲಾತಿಯನ್ನು ಇನ್ನೂ ಭರ್ತಿ ಮಾಡಿಲ್ಲ ಎಂದರೆ ಅದು ನಾಚಿಕೆಗೇಡಿನ ವಿಚಾರ. ಇಲ್ಲಿಯವರೆಗೆ ಈ ದೇಶದ ಆಡಳಿತವನ್ನು ನಡೆಸಿಕೊಂಡ ಬಂದವರೆಲ್ಲಾ ನಾಚಿಕೆಪಡಬೇಕಾದ ಸಂಗತಿ ಇದು.

ಕಳೆದ 30 ವರ್ಷಗಳಿಂದ ಕೋಟಾವೊಂದನ್ನು ಭರ್ತಿ ಮಾಡಲು ಸಾಧ್ಯವಾಗಲಿಲ್ಲ ಎಂದರೆ, ಈ ಜಾಗಗಳಿಗೆ ಬೇಕಾದ ಜನರನ್ನು ತಯಾರು ಮಾಡಿಲ್ಲ ಎಂದೇ ಅರ್ಥ. ತಿಂದು ಕೊಬ್ಬಿದ ಜನರ ಮೇಲೆ ಭಾರ ಹೆಚ್ಚಿಸಿ, ದುರ್ಬಲರನ್ನು ಮೇಲೆತ್ತಿ ಅವರಿಗೆ ಹೆಚ್ಚು ಸೌಲಭ್ಯ ಒದಗಿಸಬೇಕೆಂಬುದು ನನ್ನ ಅಭಿಪ್ರಾಯ.

ಎಸ್.ಎಸ್. ಅರಕೇರಿ: ಮಾನ್ಯ ಜೆ.ಹೆಚ್. ಪಟೇಲರು 'ನಾಚಿಕೆಪಡಬೇಕು' ಎನ್ನುವ ಪದ ಉಪಯೋಗಿಸಿದರು. ಕಳೆದ 30 ವರ್ಷಗಳಿಂದ ಆಡಳಿತ ನಡೆಸಿಕೊಂಡು ಬಂದವರೆಲ್ಲರೂ ಈ ತಪ್ಪನ್ನು ಒಬ್ಬರ ಮೇಲೆ ಒಬ್ಬರು ಹಾಕುತ್ತಿದ್ದಾರೆ. ನೀವು ಯಾರ ಮೇಲೆ ಹಾಕುತ್ತಿದ್ದೀರಿ.. ಹೇಳಿ...

ಜೆ.ಹೆಚ್. ಪಟೇಲ್: ತಪ್ಪು ಯಾರು ಮಾಡಿದ್ದಾರೋ ಅವರ ಮೇಲೆ 18 ಪ್ರತಿಶತ ಮೀಸಲಾತಿ ಎಲ್ಲ ಕೇಡರ್‌ಗಳಲ್ಲಿಯೂ ಏತಕ್ಕೆ ಭರ್ತಿ ಆಗಲಿಲ್ಲ ಎಂದರೆ, ಇಂತಿಂತಹ ಹುದ್ದೆಗಳಿಗೆ ಇಂತಿಂತಹ ಅರ್ಹತೆಗಳಿರಬೇಕೆಂದು ಕಾನೂನು ಮಾಡುವವರು ಬೇರೆ ಜನಾಂಗದವರು. ಈ ಜನಾಂಗದವರು 18 ಪ್ರತಿಶತ ಮೀಸಲಾತಿ ಅನ್ವಯ ಭರ್ತಿ ಮಾಡಲು ಜನರೇ ಸಿಗುತ್ತಿಲ್ಲ; ಅರ್ಜಿಗಳು ಬರುತ್ತಿಲ್ಲ ಎನ್ನುತ್ತಾರೆ. ಆದರೆ ನನಗೆ ತಿಳಿದಂತೆ ಅರ್ಹತೆ ಇದ್ದವರಿಗೂ ಕೆಲಸ ಸಿಗುವುದಿಲ್ಲ. ಇದಕ್ಕೆ ಒಂದು ಉದಾಹರಣೆ ನಮ್ಮ ಊರಿನ ಒಬ್ಬ ಹರಿಜನ ಯುವಕ, ಬಿಎ ಮಾಡಿದವ. ಸುಲ್ಕೂರು ಕಡೆ ಸಂದರ್ಶನಕ್ಕೆ ಹೋಗಿ ಬಂದ. ನೌಕರಿ ಹತ್ತಲಿಲ್ಲ. ಈಗ

ದಿನಗೂಲಿ ಮಾಡುತ್ತಿದ್ದಾನೆ. ನಾನೂ ಸಹ ಸಂದರ್ಶನ ಸಮಯದಲ್ಲಿ ರೆಕಮೆಂಡ್ ಮಾಡಿದೆ. ಆದರೂ ಕೆಲಸ ಸಿಗಲಿಲ್ಲ. ಇದೇ ಅನುಭವ ಬೇರೆ ಶಾಸಕರ ಕ್ಷೇತ್ರದಲ್ಲಿಯೂ ಇರಲಿಕ್ಕೆ ಸಾಕು. ಕಾನೂನು ಮಾಡುವವರೂ, ಅದನ್ನು ಜಾರಿಗೆ ತರುವವರೂ ಇದೇ ಜನ. ಹೀಗಾಗಿ ದುರ್ಬಲರು ಮುಂದೆ ಬರುವುದು ಕಷ್ಟವಾಗಿದೆ.

(ವಿಧಾನಸಭೆ ಕಲಾಪ ಜೂನ್ 12, 1980)

## ವೃದ್ಧಾಪ್ಯ ವೇತನ

ನಮ್ಮ ಊರಿನಲ್ಲಿ ಮೂವರು ವೃದ್ಧರಿಗೆ ವೃದ್ಧಾಪ್ಯ ವೇತನ ತಲಾ 40 ರೂಪಾಯಿ ಸಿಗುತ್ತಿದೆ. ಈ ಪೈಕಿ ಇಬ್ಬರು ಹರಿಜನರು. ಈ ಹಣ ಅವರಿಗೆ ಏತಕ್ಕೂ ಸಾಕಾಗುವುದಿಲ್ಲ. ಹೀಗಾಗಿ ಬೇರೆಯವರ ದನ-ಹೊಲ ಕಾದು ಜೀವನ ಸಾಗಿಸುತ್ತಾರೆ. ಇಂತಹ ಪ್ರಸಂಗಗಳು ಸಾವಿರಾರು. ನನ್ನ ಸಲಹೆ ಎಂದರೆ 40 ರೂಪಾಯಿ ಬದಲು ಚರಕಕೊಡಿ. ಹತ್ತಿ ಪೂರೈಸಲು ಖಾಯಂ ವ್ಯವಸ್ಥೆ ಮಾಡಿ. ಇದರಿಂದ ವ್ಯಕ್ತಿ ಸುಧಾರಿಸುತ್ತಾನೆ. ದೇಶದಲ್ಲಿ ಉತ್ಪನ್ನ ಹೆಚ್ಚುತ್ತದೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಮಾರ್ಚ 23, 1979)

## ಬಸವಲಿಂಗಪ್ಪ : ಜಾತಿ ಮೀರಿದವರು

ಮಾನ್ಯ ಬಸವಲಿಂಗಪ್ಪನವರು ಯಾವುದೇ ಜಾತಿಗೆ ಸೇರಿದವರು ಎಂದು ನಾನು ಭಾವಿಸುವುದಿಲ್ಲ. ಇವರಂತಹ ಕ್ರಿಯಾಶೀಲ ಚಿಂತಕರು ಯಾವುದೇ ಜಾತಿಯಲ್ಲಿ ಹುಟ್ಟಿದರೂ ಅದೊಂದು ಆಕಸ್ಮಿಕ ವಿಶೇಷ. ಬಸವಲಿಂಗಪ್ಪನವರಿಗೆ ಜಾತಿ ಎಂಬುದಿಲ್ಲ. ಇವರು ಜಾತಿ ಮೀರಿದವರು. ಇವರನ್ನು ನಾನು ಬಹುವಾಗಿ ಮೆಚ್ಚುತ್ತೇನೆ. ಮನಸಾರೆ ಅಭಿನಂದಿಸುತ್ತೇನೆ.

(ಜೆ.ಹೆಚ್. ಪಟೇಲ್ ವಿಧಾನ ಸಭೆ ಮೇ 30, 1979)

## ಆಶೀರ್ವಾದ ಸಾಕು ; ಕೆಲಸ ಮಾಡಿ.

ಬಿ. ಬಸವಲಿಂಗಪ್ಪ (ಪ್ರತಿ ಪಕ್ಷದ ಶಾಸಕ) : .. ಅಧ್ಯಕ್ಷರೇ ನಿನ್ನೆ ಸಂಜೆಯಿಂದ ಇವತ್ತು ರಾತ್ರಿಯವರೆಗೆ ಸದನದಲ್ಲಿ ಕೈಗಾರಿಕಾ ಇಲಾಖೆಯ ಕಾರ್ಯವಿಧಾನವನ್ನು ಕುರಿತ ದೀರ್ಘ ಚರ್ಚೆಯನ್ನು, ಭಾಷಣಗಳನ್ನು ಕೇಳುತ್ತ ಕುಳಿತಿದ್ದೇನೆ. ಮಾನ್ಯ ಮಂತ್ರಿಗಳಾದ ಜೆ.ಹೆಚ್.ಪಟೇಲರು ಚರ್ಚೆಗೆ ಉತ್ತರವನ್ನೇನ್ನೊ ಹೇಳಿದ್ದಾರೆ. ಇಲ್ಲ ಎನ್ನುವುದಿಲ್ಲ. ಆದರೆ ಪಟೇಲರು ಕೊನೆಯಲ್ಲಿ ಹೇಳಿದ ಮಾತು, ತೀರಾ ಆಶ್ಚರ್ಯ ಎನ್ನುವಂತಿದೆ. ಉತ್ತರ ಕೊಡುವಾಗ ಎಲ್ಲರಿಗೂ ಒಳ್ಳೆಯದಾಗಲಿ, ನಮಗೂ ಒಳ್ಳೆಯದಾಗಲಿ, ನಿಮಗೂ ಒಳ್ಳೆಯದಾಗಲಿ ಎಂದು ಆಶೀರ್ವಾದ ಮಾಡುವ ಶೈಲಿಯಲ್ಲಿ ಹೇಳಿದ್ದಾರೆ.

ಈ ಆಶೀರ್ವಾದದ ಕೆಲಸ ಮಾಡುವವರು ಸ್ವಾಮಿಗಳು, ಸನ್ಯಾಸಿಗಳು. ಪಟೇಲರನ್ನು ಮಂತ್ರಿಯಾಗಿ ಮಾಡಿರುವ ಉದ್ದೇಶ ಇದಲ್ಲ. ಬಿಗಿಯಾಗಿ, ಸರಿಯಾಗಿ, ಸಮರ್ಥವಾಗಿ

ಕೈಗಾರಿಕೆಗಳನ್ನು ಮತ್ತು ಉದ್ದಿಮೆಗಳನ್ನು ನಡೆಸೀ ಅಂತ. ನಾವು ನಿಮ್ಮನ್ನು ಮಂತ್ರಿಗಳನ್ನಾಗಿ ಮಾಡಿರೋದು ಸ್ಪಿನ್ನಿಂಗ್ ಮಿಲ್‌ನಲ್ಲಿ ಇಳುವರಿ ಹೆಚ್ಚಿಸಿ ಅಂತ; ಉತ್ಪಾದನೆ ಜಾಸ್ತಿ ಮಾಡಿ ಅಂತ. ಆಶೀರ್ವಾದ ಮಾಡಕ್ಕಲ್ಲ... ಉದಾಹರಣೆಗೆ ಶಾಸಕ ಮಾನ್ಯ ನಾರಾಯಣ ಕುಮಾರ್ ಮಾತು. ನಮ್ಮ ರಾಜ್ಯದಲ್ಲಿರುವ ಉದ್ದಿಮೆಗಳಲ್ಲಿ ಕರ್ನಾಟಕದಲ್ಲಿ ಹುಟ್ಟಿದ ಜನರಿಗೆ ಮೊದಲು ನೌಕರಿ, ಆಮೇಲೆ ಬೇರೆಯವರಿಗೆ ಅಂತ ಹೇಳಿದ್ದಾರೆ. ಇದು ಒಪ್ಪುವ ಮಾತು.

ಸ್ವಾಮಿ ಪಟೇಲರೇ.. ಕನ್ನಡಿಗರಿಗೆ ಆದ್ಯತೆ ಇದೆಯೋ ಹೇಳಿ..

ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ) : ನೀವು ಹೇಳಿದ ಪ್ರತಿಯೊಂದು ನುಡಿಯನ್ನೂ ನಾನು ಮಾನ್ಯ ಮಾಡುತ್ತೇನೆ. ಶಕ್ತಿಮೀರಿ ಉತ್ಪಾದನೆ ಹೆಚ್ಚಿಸುವ, ದಕ್ಷತೆ ಹೆಚ್ಚಿಸುವ ಕೆಲಸ ಮುಂದುವರೆಸಿದ್ದೇನೆ.. ಈ ಅಧಿವೇಶನ ಮುಗಿದ ತಕ್ಷಣ ನಾನೇ ಪ್ರತಿಯೊಂದು ಉದ್ದಿಮೆ ಮತ್ತು ಕಾರ್ಖಾನೆಗೂ ಖುದ್ದಾಗಿ ಹೋಗಿ, ಪರಿಶೀಲನೆ ನಡೆಸಿ, ಪರಿಸ್ಥಿತಿಯನ್ನು ಉತ್ತಮಗೊಳಿಸುವ ಭರವಸೆ ಕೊಡುತ್ತೇನೆ...

(ವಿಧಾನಸಭೆ ಕಲಾಪ : ಆಗಸ್ಟ್ 22, 1985)

## ಬಸವಲಿಂಗಪ್ಪ-ಪಟೇಲ್-ಖರ್ಗೆ
## 'ಧರ್ಮ' ಜಿಜ್ಞಾಸೆ

ಎಂ. ಮಲ್ಲಿಕಾರ್ಜುನ ಖರ್ಗೆ: ಮಾನ್ಯ ಅಧ್ಯಕ್ಷರೇ, ಹೊಸ ಸಮಾಜವನ್ನು ನಿರ್ಮಾಣ ಮಾಡಲು ಈ ಸರಕಾರದ ಕೈಯಿಂದ ಆಗೋದಿಲ್ಲ. ಮಾನ್ಯ ಪಟೇಲರು, ನಜೀರ್ ಸಾಹೇಬರು, ಬಸವಣ್ಣೆಪ್ಪ ಮತ್ತು ಜಾಲಪ್ಪನವರದು ಒಂದು ಸಿದ್ಧಾಂತವಾದರೆ, ಮೂಲತಃ ಕಾಂಗ್ರೆಸ್ಸಿನಿಂದ ಬಂದ ರಾಮಕೃಷ್ಣ ಹೆಗಡೆಯವರ ಸಿದ್ಧಾಂತವೇ ಬೇರೆ. ಹೀಗಾಗಿ ನಿಮ್ಮ ಕೈಯಲ್ಲಿ ಏನೇನೂ ಸಾಧ್ಯವಿಲ್ಲ. ಮುಖ್ಯವಾಗಿ ಈ ಸರಕಾರದ ನೀತಿ ಏನು? ನಿಮ್ಮಲ್ಲಿ ಜಾತಿಯ ಆಧಾರದ ಮೇಲೆ ಇನ್ನೂ ಹಲವಾರು ಕಾರ್ಯಚಟುವಟಿಕೆಗಳು ಮುಂದುವರೆದಿವೆ, ಇದು ನಿಮಗೆ ಗೊತ್ತೇ?

ಜೆ.ಹೆಚ್. ಪಟೇಲ್ (ಬೃಹತ್ ಕೈಗಾರಿಕೆ ಮಂತ್ರಿ): ಮಾನ್ಯ ಖರ್ಗೆಯವರೇ, ಜಾತಿ ಪದ್ಧತಿ ಒಂದು ರಾಷ್ಟ್ರೀಯ ಸಮಸ್ಯೆ. ಈ ದೃಷ್ಟಿಕೋನವನ್ನು ಬದಲಾಯಿಸಲು ಕೇವಲ ಕರ್ನಾಟಕ ಒಂದರಿಂದ ಸಾಧ್ಯವಿಲ್ಲ. 800 ವರ್ಷಗಳ ಕೆಳಗೆ ಜಗಜ್ಯೋತಿ ಬಸವೇಶ್ವರರು ಜಾತಿ ನಿರ್ಮೂಲನಕ್ಕಾಗಿ ಬಹುದೊಡ್ಡ ಸಾಮಾಜಿಕ ಆಂದೋಲನವನ್ನೇ ನಡೆಸಿದರು. ಹೋರಾಟ ನಡೆಸಿದರು. ಇದರಿಂದ ದೇಶದ ಮೇಲೆ ಪರಿಣಾಮ ಎಷ್ಟು ಆಗಬೇಕೋ ಅಷ್ಟು ಆಗಲಿಲ್ಲ. ಇಂದಿಗೂ ಈ ದುಷ್ಟಪದ್ಧತಿ ಮುಂದುವರೆದಿದೆ. ಇದೇ ರೀತಿ ಬಂಗಾಲದಲ್ಲಿ ಆರ್ಯ ಸಮಾಜ ನಡೆಸಿದ ಪ್ರಯತ್ನವೂ ಬದಲಾವಣೆ ತರಲಾಗಲಿಲ್ಲ. ನಮ್ಮದು ಧರ್ಮ ಪ್ರಧಾನವಾದ ದೇಶ. ರಿಲಿಜನ್ ಓರಿಯೆಂಟೆಡ್ ಕಂಟ್ರಿ.

ಬಿ. ಬಸವಲಿಂಗಪ್ಪ: Religion is not Dharma, Religion is Matha.

ಜೆ.ಹೆಚ್. ಪಟೇಲ್: ಮತ ಎಂದರೆ ಕ್ಯಾಸ್ಟ್; ಮತ ಎಂದರೆ ಜಾತಿ-ಮತ. ಕ್ಯಾಸ್ಟ್ ಅಂಡ್ ಕ್ರೀಡ್.

ಬಿ. ಬಸವಲಿಂಗಪ್ಪ: ಇದರ ಮೇಲೆ ಬೇಕಾದಂತೆ ವ್ಯಾಖ್ಯಾನ ಮಾಡಬಹುದು. ರಿಲಿಜನ್ ಎಂದರೆ ಧರ್ಮ ಎನ್ನುವುದಕ್ಕೆ ಹೋಗಬೇಡಿ. ಧರ್ಮ ಎಂದರೆ ಕರ್ತವ್ಯ, ಡ್ಯೂಟಿ. Religion is Matha.

ಎಂ. ಮಲ್ಲಿಕಾರ್ಜುನ ಖರ್ಗೆ: ಮಾನ್ಯ ಪಟೇಲರು ಇದನ್ನು ಒಪ್ಪಿಕೊಳ್ಳುತ್ತಾರೆ ಎಂದು ನಂಬುತ್ತೇನೆ. ಮನುಷ್ಯರಿಗಾಗಿ ಧರ್ಮ ಇದೆಯೇ ಹೊರತು, ಧರ್ಮಕ್ಕಾಗಿ ಮನುಷ್ಯ ಹುಟ್ಟಿಲ್ಲ.

ಜೆ.ಹೆಚ್. ಪಟೇಲ್: ಧರ್ಮವನ್ನು ನೀನು ಉಳಿಸಿದರೆ, ಧರ್ಮ ನಿನ್ನನ್ನು ಉಳಿಸುತ್ತದೆ.

ಎಂ. ಮಲ್ಲಿಕಾರ್ಜುನ ಖರ್ಗೆ: ತಾವು ಏನು ಹೇಳುತ್ತೀರಿ ಎಂದು ಜನ ನೋಡುವುದಿಲ್ಲ ತಾವು ಏನು ಮಾಡುತ್ತೀರಿ ಎಂಬುದನ್ನು ನೋಡುತ್ತಾರೆ.

ಜೆ.ಹೆಚ್. ಪಟೇಲ್: ಕೆಲವು ವಿಷಯಗಳಲ್ಲಿ ನಿಮಗೂ, ನನಗೂ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಒಂದು ಉದಾಹರಣೆ; ಈಗಿನ ಸಂದರ್ಭಕ್ಕೆ ಸಮಂಜಸವಲ್ಲದಿದ್ದರೂ ನನಗೆ ನೆನಪಾಗುತ್ತೆ. ಹಡಗಿನಲ್ಲಿ ನಾವು ಬೇರೆ ಬೇರೆ ಕೋಣೆಗಳು ಇರುತ್ತೇವೆ. ಹಡಗನ್ನು ನಡೆಸುವವರು ಹಡಗನ್ನು ಪಶ್ಚಿಮದ ಕಡೆಗೆ ತೆಗೆದುಕೊಂಡು ಹೋಗುತ್ತಿದ್ದಾರೆ ಎಂದಿಟ್ಟುಕೊಳ್ಳಿ. ನಾನು ಒಳಗೆ ಕೂತವನು ಪೂರ್ವಕ್ಕೆ ಹೋಗಬೇಕೆಂದು, ಪೂರ್ವದ ಕಡೆಗೆ ಮುಖ ಹಾಕಿಕೊಂಡ ಮಾತ್ರಕ್ಕೆ ಹಡಗು ಪೂರ್ವಕ್ಕೆ ಹೋಗಲು ಸಾಧ್ಯವೇ?

ಎಂ. ಮಲ್ಲಿಕಾರ್ಜುನ ಖರ್ಗೆ: ಮಾನ್ಯ ಪಟೇಲರೇ ನಿಮಗೆ ಸಮಾಜವನ್ನು ತಿದ್ದುವ ಆಸಕ್ತಿ ಇದೆ; ಸುಧಾರಣೆ ತರುವ ಮನಸ್ಸಿದೆ. ಬದಲಾವಣೆ ತರುವ ಶಕ್ತಿಯನ್ನು ನಿಮ್ಮ ಕೈಯಲ್ಲಿ ಕೊಟ್ಟರೂ ಸಹಿತ ನೀವು ಉಳಿದವರು ಜಗ್ಗಿದ ಕಡೆಗೇ ಹೋಗುತ್ತೇನೆ ಎಂದರೆ ಹೇಗೆ? ನಿಮಗೂ ಬೇರೆಯವರಿಗೂ ವ್ಯತ್ಯಾಸವೆಲ್ಲಿ ಉಳಿಯುತ್ತೆ? ಹೇಳಿ..

(ವಿಧಾನಸಭೆ ಕಲಾಪ: ಫೆಬ್ರವರಿ 6, 1986)

## 'ಹರಿಜನ' ಪದ ಬಳಸಬೇಡಿ-ಎಚ್ಚರಿಕೆ

ಬಿ. ಬಸವಲಿಂಗಪ್ಪ: ನಾನು ಮಾನ್ಯ ಪಟೇಲರ ಭಾಷಣವನ್ನು ಕೇಳಿದ್ದೇನೆ. ಉಳಿದ ಹಲವು ಮಾನ್ಯ ಸದಸ್ಯರ ಭಾಷಣವನ್ನೂ ಕೇಳಿದ್ದೇನೆ. ನಾನು ಮಾತನಾಡಬಾರದು ಎಂದೇ ಇದ್ದೆ. ಇಂದಿನ ಎಲ್ಲ ಭಾಷಣಗಳ ಒಳ ಅರ್ಥ ಏನೆಂದರೆ, ಕುಡಿಯುವವರೆಲ್ಲಾ ಹರಿಜನರು, ಇವರೆಲ್ಲ 'ಹರಿಜನ' ಎಂಬ ಪದವನ್ನು ಬೇಕಾದಾಗಲೆಲ್ಲಾ ಬಳಸಿದ್ದಾರೆ.

ಜೆ.ಹೆಚ್. ಪಟೇಲ್: ನಾನು ಎಂದೂ ಹಾಗೆ ಮಾತನಾಡಿಲ್ಲ.

ಬಿ. ಬಸವಲಿಂಗಪ್ಪ: ಹರಿಜನರು ಎನ್ನುವ ಪದ ಹೇಯವಾದಂತಹ ಭಾಷೆ. ಈ ಭಾಷೆಯನ್ನು ಯಾರೂ ಉಪಯೋಗಿಸಬಾರದು.

ಜೆ.ಹೆಚ್. ಪಟೇಲ್: ನಾನೆಂದೂ ಹೀಗೆ ಮಾತನಾಡಿದವನಲ್ಲ.

ಆರ್. ವೆಂಕಟರಾಮಯ್ಯ: ನಮಗ್ಯಾರಿಗೂ ಅಂತಹ ಉದ್ದೇಶವಿಲ್ಲ.

ಬಿ. ಬಸವಲಿಂಗಪ್ಪ: ಸಾರಾಯಿ ಇದೊಂದು ಜನತಾ ಪಕ್ಷದ ನೀತಿಯಾಗಿಬಿಟ್ಟಿದೆ. ನಿಮಗೆ ಬೇಕಾದಲ್ಲಿ ತಯಾರು ಮಾಡಿದ ಮೇಲೆ ಅದನ್ನು ಹೇಗೆ ಹಂಚಬೇಕು ಎಂದು ಒಂದು ನಿಯಮ ಮಾಡಿಕೊಳ್ಳಿ. ಅನುಕಂಪದ ಹಿನ್ನೆಲೆಯಲ್ಲಿ ಸಮಾಜದ ಹಿಂದುಳಿದ ವರ್ಗ ಮತ್ತು ಅನುಸೂಚಿತ ಜಾತಿ ವರ್ಗ ಮತ್ತು ಅವರ ಹೆಸರಿನಲ್ಲಿ ಸಾರಾಯಿ ಸರಬರಾಜು ನಡೆಸಬೇಡಿ. ಬೇಕಾದರೆ ಎಲ್ಲಾ ಕೇರಿಗಳಲ್ಲಿ ಮದ್ಯದ ಅಂಗಡಿ ತೆಗೆದುಕೊಳ್ಳಿ, ಇದು ಒಂದು ಸಮಾಜವಾದ, ಸಮತಾವಾದ ಆಗುತ್ತದೆ.

ಜೆ.ಹೆಚ್. ಪಟೇಲ್: ನಾನು ಹರಿಜನರ ಬದುಕು, ಘನತೆ ಮತ್ತು ಗೌರವಕ್ಕೆ ಧಕ್ಕೆ ತರುವಂತಹ ಮಾತನ್ನು ಆಡಿಲ್ಲ. ಬೇರೆ ಯಾರಾದರೂ ಮಾತನಾಡಿದರೆ ನನಗೆ ತಿಳಿಯದು. ಹೀಗಾಗಿ ಮಾನ್ಯ ಬಸವಲಿಂಗಪ್ಪನವರಿಗೆ ಸಿಟ್ಟು ಬಂದಿರಬಹುದು. ಸರ್ಕಾರದ ದೃಷ್ಟಿಯಲ್ಲಿ ಪರಿಶಿಷ್ಟ ಜನಾಂಗ ಇರುವ ಕಡೆ ಮದ್ಯದ ಅಂಗಡಿ ತೆರೆಯಬಾರದು ಎಂಬ ನಿಲುವು ಇದೆ. ಏಕೆಂದರೆ ಉಡುಪಿ ಹೋಟೆಲ್ ನಡೆಸುವವರಿಗೆ ಇಂತಹ ಕಡೆ ತೆರೆಯಬೇಕು ಇಲ್ಲವೇ ತೆರೆಯಬಾರದು ಎಂದು ಯಾರೂ ಲೈಸೆನ್ಸ್ ಕೊಡುವುದಿಲ್ಲ. ಉಡುಪಿ ಹೋಟೆಲುಗಳು ಅನುಸೂಚಿತ ಜಾತಿಯವರ ಕೇರಿಯಲ್ಲಿ ಇರಬೇಕು ಎಂದು ಆಶಿಸುವವನು ನಾನು.

ಬಿ. ಬಸವಲಿಂಗಪ್ಪ: ಅವರು ತೆಗೆಯುವುದಿಲ್ಲ.

ಆರ್. ವೆಂಕಟರಾಮಯ್ಯ: ತೆಗೆಯಬೇಕು ಎಂದು ಕಾನೂನು ಮಾಡಬೇಕು.

ಜೆ.ಹೆಚ್. ಪಟೇಲ್: ಒಟ್ಟಿನಲ್ಲಿ ಉಡುಪಿ ಹೋಟೆಲುಗಳ ಮಾಲೀಕರನ್ನು ಕರೆಸಿ ಪರಿಶಿಷ್ಟ ಜಾತಿ ಜನಾಂಗದವರು ಇರುವ ಕಡೆ ಹೋಟೆಲ್ ತೆರೆಯಿರಿ... ಇಡ್ಲಿ ದೋಸೆ ಜೊತೆ ಸಾರಾಯಿ ಮಾರಿರಿ ಎಂದು ಹೇಳಿದಂತಾಗುತ್ತದೆ - ಈ ನಮ್ಮ ಚಿಂತನೆ.

(ವಿಧಾನಸಭೆ ಕಲಾಪ: ಆಗಸ್ಟ್ 9, 1985)

## ಧರ್ಮದೃಷ್ಟಿ

ವಕೀಲರೂ, ಹಿಂದುಳಿದ ಆಯೋಗವೊಂದರ ಅಧ್ಯಕ್ಷರೂ, ಹಿರಿಯ ಸಮಾಜ ಸೇವಕರೂ ಆಗಿದ್ದ ಸಚಿವ ಎಲ್.ಜಿ. ಹಾವನೂರರ ಮೇಲೆ ಸಾರ್ವಜನಿಕ ಸಭೆಯಲ್ಲಿ ಧರ್ಮವೊಂದರ ಬಗ್ಗೆ ಆಕ್ಷೇಪನೀಯ ಮಾತನಾಡಿದುದಕ್ಕಾಗಿ ಕ್ರಮ ತೆಗೆದುಕೊಳ್ಳುವಂತೆ ಒಮ್ಮೆ ಕೆಲವು ಶಾಸಕರು

ಸದನದಲ್ಲಿ ಸರ್ಕಾರವನ್ನು ಆಗ್ರಹಪಡಿಸಿದ್ದರು. ಏತನ್ಮಧ್ಯೆ ಮುಖ್ಯಮಂತ್ರಿ ದೇವರಾಜ ಅರಸುರವರು ಹೇಳಿಕೆಯೊಂದನ್ನು ನೀಡಿ ಹಾವನೂರರ ಅಭಿಪ್ರಾಯವು ವೈಯಕ್ತಿಕ, ಸರ್ಕಾರದ ನೀತಿ ಅಥವಾ ಧೋರಣೆ ಅಲ್ಲ ಎಂದು ಸ್ಪಷ್ಟಪಡಿಸಿದ್ದರು. ಸಚಿವ ಹಾವನೂರ್‌ರವರು ಸಹಿತ ಯಾವುದೇ ಧರ್ಮ ಅಥವಾ ಧಾರ್ಮಿಕ ಆಚರಣೆಯ ವಿರುದ್ಧ ಉದ್ರೇಕಗೊಳಿಸುವ ಇಲ್ಲವೇ ಚಿತಾವಣೆ ಮಾಡುವ ಉದ್ದೇಶ ತಮ್ಮದಲ್ಲವೆಂದೂ, ಇಸ್ಲಾಂ ಧರ್ಮದ ಆಚರಣೆಯ ಬಗೆಗೆ ತಮಗೆ ಅಪಾರ ಗೌರವವಿರುವುದಾಗಿಯೂ ಸಮಜಾಯಿಷಿ ನೀಡಿದರು.

ಪ್ರತಿ ಪಕ್ಷದಲ್ಲಿದ್ದ ಜೆ.ಹೆಚ್. ಪಟೇಲರು ಸದನದ ಚರ್ಚೆಯ ಧಾಟಿ ಮತ್ತು ಇದರಿಂದ ಹೊರಗೆ, ಸಮಾಜದ ಮೇಲೆ ಆಗಬಹುದಾದ ಪರಿಣಾಮಗಳನ್ನು ಗಮನಿಸಿ, ಚರ್ಚೆಯಲ್ಲಿ ಭಾಗವಹಿಸುತ್ತಿದ್ದ ಪ್ರತಿಯೋರ್ವ ಸದಸ್ಯನ ಆಸನದ ಬಳಿಗೂ ಹೋಗಿ ಅಲ್ಲಿಗೇ ಮಾತು ನಿಲ್ಲಿಸಲು ಕೇಳಿಕೊಂಡರು. ಸಾಮಾನ್ಯವಾಗಿ ಪಟೇಲರು ಎಂದೂ ಸದನದಲ್ಲಿ ಬೇರೆಯವರ ಆಸನದ ಬಳಿ ಹೋದವರಲ್ಲ, ಸರ್ಕಾರಿ ಬೆಂಚುಗಳತ್ತ ಇಲ್ಲವೇ ಮಂತ್ರಿಗಳ ಆಸನದತ್ತ ಸುಳಿದವರೂ ಅಲ್ಲ. ಪಟೇಲರ ಸಂಧಾನ ನಿರೀಕ್ಷಿತ ಫಲಿತಾಂಶ ನೀಡಿತು. ಸದನದಲ್ಲಿ ಧರಣಿ ಕುಳಿತಿದ್ದ ಖಮರುಲ್ ಇಸ್ಲಾಂ ಮತ್ತು ಸಿ.ಎಂ. ಇಬ್ರಾಹಿಂ ಪಟೇಲರ ಮಾತಿನಂತೆ ಧರಣಿ ಬಿಟ್ಟು ಎದ್ದಿದ್ದರು.

ಈ ಸಂದರ್ಭದಲ್ಲಿ ಪಟೇಲರಾಡಿದ ಮಾತು ಗಮನಾರ್ಹವಾಗಿತ್ತು.

ಜೆ.ಹೆಚ್. ಪಟೇಲ್ : ಅಧ್ಯಕ್ಷರೇ ಇದು ಬಹು ಸೂಕ್ಷ್ಮ ವಿಷಯವಾಗಿದ್ದರೂ ಕೂಡ ಮಾನ್ಯ ಕಾನೂನು ಮಂತ್ರಿಗಳು ಇದರ ಬಗ್ಗೆ ಸ್ಪಷ್ಟಪಡಿಸಿದ್ದಾರೆ. ನನ್ನ ಚಿಂತೆ ಇಷ್ಟೆ. ಇಲ್ಲಿ (ಸದನದಲ್ಲಿ) ಚರ್ಚಿತವಾಗುತ್ತಿರುವ ವಿಷಯ ಹೊರಗಡೆ ಬೇರೆ ರೀತಿ ಬಣ್ಣ ಬರುವಂತೆ ಆಗಬಾರದು. ಈ ಸಭೆಯಲ್ಲಿ ಇದನ್ನು ಇನ್ನೂ ತೀರ ಉದ್ದ ಮಾಡಿ ಬೆಳೆಸಿಕೊಂಡು ಹೋಗುವುದು ಬೇಡ. ಇಲ್ಲಿಗೇ ನಿಲ್ಲಿಸಿ ಮುಂದಿನ ಕಲಾಪಗಳನ್ನು ಕೈಗೆತ್ತಿಕೊಳ್ಳೋಣ ಮಾನ್ಯ ಸಭಾಧ್ಯಕ್ಷರೇ.

(ವಿಧಾನ ಸಭಾ ಕಲಾಪ : ಆಗಸ್ಟ್ 26, 1978)

## ಬಸವೇಶ್ವರ, ಅಂಬೇಡ್ಕರ್ ಪ್ರತಿಮೆಗಳನ್ನು ಸಾಕುಮಾಡೋಣ

ಜನರ ಭಾವನೆಗಳನ್ನು ವಿನಾಕಾರಣ ಉದ್ರಿಕ್ತಗೊಳಿಸುವುದರಿಂದ ದೊಂಬಿ, ಗೊಂದಲ ಉಂಟಾಗುತ್ತದೆಯೇ ವಿನಃ ಸಮಾಜಕ್ಕೆ ಉಪಕಾರವಾಗುವುದಿಲ್ಲ.

ಹಲವಾರು ಮಹಾನ್ ನಾಯಕರುಗಳ ಪ್ರತಿಮೆಗಳಿವೆ. ಮಹಾರಾಷ್ಟ್ರದಲ್ಲಿಯೇ ಆಗಲಿ; ಕರ್ನಾಟಕದಲ್ಲಿಯೇ ಆಗಲಿ ಅವರ ಪ್ರತಿಮೆಗೆ ಅವಮಾನ ಮಾಡಿದ ಕಿಡಿಗೇಡಿಗಳ ವರ್ತನೆ ಬಗೆಗೆ ಎಚ್ಚರದಿಂದಿರಬೇಕು. ಬೀದರ್‌ನಲ್ಲಿ ಆಗಲೀ ಮೈಸೂರಿನಲ್ಲಿ ಆಗಲೀ ಇಂತಹ ಘಟನೆ ನಡೆದರೆ ಅಂಬೇಡ್ಕರ್‌ರವರಿಗಾಗಲೀ, ಬಸವೇಶ್ವರರಿಗಾಗಲೀ ಸಮಾಧಾನವಾಗುತ್ತದೆಯೇ?

ಅದಕ್ಕೆ ಒಂದು ದಂಗೆ ಏಳುತ್ತದೆ. ಮಹಾತ್ಮನ ಹೆಸರನ್ನು ಹೇಳಿಕೊಂಡು ಈ ರೀತಿ ಅಪಪ್ರಚಾರ ನಡೆಯುತ್ತಿದೆ. ಇದನ್ನು ನಾವು ಹೆಲ್ಪ್‌ಲೆಸ್ಸಾಗಿ ನೋಡುತ್ತಿದ್ದೇವೆ.

ದುಷ್ಟ ಭಾವನೆಗಳು ಆ ಹುಡುಗರಲ್ಲಿ ಕೆರಳದಂತೆ ವಿದ್ಯಾಭ್ಯಾಸ ಕೊಡಿ. ಈ ಸಂಬಂಧ ಅಂಬೇಡ್ಕರ್ ಅವರದೇ ಒಂದು ಘಟನೆ ಹೇಳಬಯಸುತ್ತೇನೆ.

ಬ್ರಿಟೀಷರ ಆಡಳಿತ ಇದ್ದಾಗ ಲಾಲಾ ಲಜಪತರಾಯರನ್ನು ಗಡೀಪಾರೋ ಏನೋ ಮಾಡಿರುತ್ತಾರೆ. ಆಗ ಅವರು ಲಂಡನ್‌ನಲ್ಲಿ ಇರುತ್ತಾರೆ. ದಿವಸವೆಲ್ಲ ಒಬ್ಬ ಇಂಡಿಯನ್ ಹುಡುಗ ಲೈಬ್ರರಿಯಲ್ಲಿ ಓದುತ್ತಿರುತ್ತಾನೆ, ಆಗ ಇವರೇ ಹೋಗಿ ಕೇಳುತ್ತಾರೆ.

ಏನಪ್ಪ ನಿನ್ನ ಹೆಸರು? ನನ್ನ ಹೆಸರು ಅಂಬೇಡ್ಕರ್. ಇಷ್ಟೊಂದು ಆಸಕ್ತಿಯಿಂದ ನೀನು ಬಂದು ಓದುತ್ತಿದ್ದೆಯಲ್ಲ, ದೇಶದ ಸ್ವಾತಂತ್ರ್ಯಕ್ಕೋಸ್ಕರ ಹೋರಾಟ ಮಾಡು. ನಿಮ್ಮಂಥವರು ಮಾಡಬೇಕು.

ಆಗ ಅಂಬೇಡ್ಕರ್ ಹೇಳುತ್ತಾರೆ: ನಾನೀಗ ವಿದ್ಯಾರ್ಥಿ. ವಿದ್ಯಾರ್ಜನೆ ನನ್ನ ಮುಂದಿರತಕ್ಕದ್ದು. ಈ ಹೊತ್ತು ನಾನು ದೇಶದ್ದು, ಅದೂ ಇದೂ, ಎಂದು ಹೋಗೊಲ್ಲ. ಆದರೆ ನಾನು ದೇಶಕ್ಕೋಸ್ಕರ ಹೋರಾಟ ಮಾಡುತ್ತೇನೆ. ನನ್ನ ದೇಶದ ರಕ್ಷಣೆ ನಾನು ಮಾಡುತ್ತೇನೆ. ಆದರೆ ಈಗ ನಾನು ಏನು ಓದಬೇಕೆಂದು ಇದ್ದೇನೆಯೋ ಅದನ್ನು ಕಂಪ್ಲೀಟ್ ಮಾಡುತ್ತೇನೆ ಎಂದು.

ಈಗಿರುವ ಹುಡುಗರು ತಮ್ಮ ಮುಂದಿರುವುದೇನು, ತಮ್ಮ ಗಮನ ಏನು, ಏತಕ್ಕೆ ಹೋಗಬೇಕು, ದೇಶ ಕಟ್ಟಲಿಕ್ಕೆ ಅಥವಾ ಸಮಾಜವನ್ನು ಕಟ್ಟಲಿಕ್ಕೆ ದಲಿತರ ಬಗ್ಗೆ ಆಗಲಿ, ಹಿಂದುಳಿದವರ ಬಗ್ಗೆ ಆಗಲಿ, ಮೇಲ್ಜಾತಿಯವರೇ ಆಗಲಿ ಆ ಘರ್ಷಣೆಗಳನ್ನು ಮಾಡದಂತೆ ಇವತ್ತು ನಾವು ಹೇಗೆ ಹೋಗಬೇಕು ಎನ್ನುವ ಬಗ್ಗೆ ನಾವೂ ನೀವೂ ಎಲ್ಲ ಸೇರಿ ಇದಕ್ಕೊಂದು ರೂಪ ಕೊಡದಿದ್ದರೆ ಕಷ್ಟ.

ತಾವೆಲ್ಲ ಒಪ್ಪುವುದಾದರೆ ಒಂದು ಸಲಹೆ. ಈ ಪ್ರತಿಮೆಗಳನ್ನು ಎಲ್ಲೂ ಬಹಿರಂಗವಾಗಿ ಇಡುವುದು ಬೇಡ. ಅವರಿಗೆ ಅವಮಾನವಾಗುವುದೂ ಬೇಡ, ಸಮಾಜಕ್ಕೆ ಧಕ್ಕೆ ಆಗುವುದೂ ಬೇಡ. ಬಸವೇಶ್ವರರದೂ ಬೇಡ, ಅಂಬೇಡ್ಕರದೂ ಬೇಡ, ಮಹಾತ್ಮ ಗಾಂಧೀದೂ ಬೇಡ. ಬಯಲಲ್ಲಿ ಇಟ್ಟು ಬಿಡೋಣ. ಅದನ್ನಾದ್ರೂ ಮಾಡೋಣ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ಸೆಪ್ಟೆಂಬರ್ 4, 1997)

**ಜಾತಿ ಇರಲಿಲ್ಲ ನೀತಿ ಇತ್ತು!**

ಜೆ.ಹೆಚ್. ಪಟೇಲರಲ್ಲಿ ಜಾತಿ ಇರಲಿಲ್ಲ; ನೀತಿ ಇತ್ತು. ಒಡಲಿಗೆ ಒಡೆಯನಾದ ಪರಮಾತ್ಮನ ಒಡಲಿನಲ್ಲಿ ಜನಿಸಿ ಧನ್ಯರಾದ ಮಹಾನ್ ಜೀವಿ ಜೆ.ಹೆಚ್. ಪಟೇಲರು ಸಮಾಜಕ್ಕೆ ತಾವು ಮಾಡಬೇಕಾದ ಋಣವನ್ನು ಸಂಪೂರ್ಣವಾಗಿ ಮಾಡಿದವರು.

ಜೆ.ಹೆಚ್. ಪಟೇಲರಲ್ಲಿ ಯಾವ ರೀತಿಯ ಪಕ್ಷಪಾತವೂ ಇರಲಿಲ್ಲ, ಎಲ್ಲವನ್ನು, ಎಲ್ಲರನ್ನು ಸಮಚಿತ್ತದಿಂದ ನೋಡುವ ಅಪರೂಪದ ವ್ಯಕ್ತಿತ್ವ ಪಟೇಲರದು.

(ಹೆಚ್.ಎಸ್. ಶಂಕರಲಿಂಗೇಗೌಡ (ಚಾಮರಾಜ) ವಿಧಾನಸಭೆ : ಫೆಬ್ರವರಿ 27, 2001)

# 7

# ಕೇಂದ್ರ - ರಾಜ್ಯ ಸಂಬಂಧ

## ಪಟೇಲರ ಕಾಲದ ಎತ್ತರದ ದನಿ

ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆಂಬ ಸಂಯುಕ್ತ ಪ್ರಜಾತಂತ್ರ ವ್ಯವಸ್ಥೆ (Federal democracy) ನಮ್ಮ ರಾಜ್ಯಾಂಗದ ವಿಶೇಷ ಲಕ್ಷಣ. ಸ್ಥೂಲವಾಗಿ ಹೇಳಬಹುದಾದರೆ, ಒಳಾಡಳಿತದಲ್ಲಿ ರಾಜ್ಯಸರ್ಕಾರಗಳು ಪೂರ್ಣ ಸ್ವತಂತ್ರ. ಸಂಯುಕ್ತತೆ, ಸಮಗ್ರತೆ, ರಾಷ್ಟ್ರ ರಕ್ಷಣೆ, ವಿದೇಶಾಂಗ - ಈ ಕಾರ್ಯಕ್ಷೇತ್ರಗಳಲ್ಲಿ ಕೇಂದ್ರಕ್ಕೆ ಪರಮಾಧಿಕಾರ. ರಾಜ್ಯಾಂಗದ 162, 249, 256, 257 ಮತ್ತು 365 ಅನುಚ್ಛೇದಗಳು ಕೇಂದ್ರ - ರಾಜ್ಯಗಳ ಸಂಬಂಧ ಕುರಿತಂತೆ ಸ್ಪಷ್ಟ ನಿರ್ದೇಶನ ನೀಡುತ್ತವೆ.

ಜನಪರ ಕಾರ್ಯಯೋಜನೆಗಳ ಅನುಷ್ಠಾನದ ಹೊಣೆಗಾರಿಕೆ ಎರಡೂ ಸರ್ಕಾರಗಳ ಸಂಯುಕ್ತ ಜವಾಬ್ದಾರಿ. ಸಂಯುಕ್ತ ವ್ಯವಸ್ಥೆಯ ಅಂತಿಮ ಗುರಿಯೇ ಜನತಾ ಜನಾರ್ಧನನ ಸೇವೆ. ರಾಜ್ಯಾಂಗವಾಗಲೀ, ರಾಜ್ಯಾಂಗದ ಅನುಚ್ಛೇದಗಳಾಗಲೀ ಈ ಸಂಯುಕ್ತ ಜವಾಬ್ದಾರಿಯ ಸೀಮಾಗಡಿಯನ್ನು ಗುರುತು ಹಾಕದಿರುವುದು ನಮ್ಮ ಪ್ರಜಾತಂತ್ರ ಆಡಳಿತದ ಮತ್ತೊಂದು ವೈಶಿಷ್ಟ್ಯ.

ಹತ್ತೂ ದೆಸೆಗಳಿಂದ ಜನಸಮುದಾಯದ ಒಳಿತಿಗೆ ಕಾರ್ಯಕ್ರಮಗಳು ಹರಿದು ಬರಲಿ ಎಂಬ ಸದಾಶಯ ರಾಜ್ಯಾಂಗ ರಚನಕಾರರ ಹೆಗ್ಗುರಿಯಾಗಿರಬೇಕು.

ಈ ಹಿರಿಯಾಸೆ ಕಾರ್ಯರೂಪಕ್ಕೆ ಬಂದು ಜನ ಸಾಮಾನ್ಯರಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವಿವಿಧ ಕಾರ್ಯಕ್ರಮಗಳ ಪೂರ್ಣಫಲ ದೊರೆಯಬೇಕಾದರೆ ಎರಡೂ ಆಡಳಿತಗಳಲ್ಲಿ ಸಮನ್ವಯ ಮತ್ತು ಹೊಂದಾಣಿಕೆ

ರಾಜಕೀಯ ಸಂಬಂಧ ಸೌಹಾರ್ದಯುತವಾಗಿರಬೇಕು. ನಮ್ಮಲ್ಲಿ ಗಾದೆಯ ಮಾತೊಂದಿದೆ. ಎತ್ತು ಏರಿಗೆ, ಕೋಣ ನೀರಿಗೆ - ಹೀಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸ್ವಪ್ರತಿಷ್ಠೆ ಇಲ್ಲವೇ ಪೊಳ್ಳು ಬಿಗುಮಾನದ ಮೇಲೆ ನಿಂತರೆ ಬಡವಾಗುವ ಕೂಸು - ಜನಹಿತ.

ಪ್ರತಿಪಕ್ಷ ಮತ್ತು ಆಡಳಿತ ಪಕ್ಷಗಳೆರಡರಲ್ಲೂ ಇದ್ದ ಪಟೇಲರು ಕೇಂದ್ರ ಮತ್ತು ರಾಜ್ಯಗಳಲ್ಲಿ ಒಂದೇ ಪಕ್ಷ ಹಾಗೂ ವಿಭಿನ್ನ ಪಕ್ಷಗಳ ಆಡಳಿತವನ್ನು ಕಂಡವರು. ಪ್ರತಿಪಕ್ಷದಲ್ಲಿದ್ದಾಗ ಅಂದಿನ ಮುಖ್ಯಮಂತ್ರಿಗಳಾಗಿದ್ದ ದೇವರಾಜ ಅರಸು ಮತ್ತು ಆರ್. ಗುಂಡೂರಾಯರನ್ನು ಕೇಂದ್ರ ಸರ್ಕಾರಕ್ಕೆ ಸಮಾನ ಉದ್ದೇಶಗಳ ಬದ್ಧತೆ, ಸಮತೋಲನದ ಅಭಿವೃದ್ಧಿ, ಸಮಾನ ಆರ್ಥಿಕ, ಸಾಮಾಜಿಕ ಮತ್ತು ಕೈಗಾರಿಕಾ ಅಭಿವೃದ್ಧಿ ಅವಕಾಶಗಳನ್ನ ಮನವರಿಕೆ ಮಾಡಿಕೊಡಲು ಹಾಗೂ ರಾಜ್ಯದ ಹಿತಕಾಯಲು ಆಗ್ರಹಪಡಿಸಿದವರು. ಕಾಂಗ್ರೆಸ್ ಪಕ್ಷ ಕೇಂದ್ರದಲ್ಲಿ ಅಧಿಕಾರದಲ್ಲಿರುವಾಗ ಪ್ರಧಾನಿ ಇಂದಿರಾಜಿಯವರ ಬಳಿ ರಾಜ್ಯದ ಕೆಲಸ ಕಾರ್ಯಗಳನ್ನು ಮಾಡಿಸಿಕೊಳ್ಳಲು ಅಂದಿನ ಆಡಳಿತ ಪಕ್ಷಕ್ಕೆ ಹಿತವಚನ ಸಹಿತ ಹೇಳಿದವರು.

ಜನತಾ ಪಕ್ಷ ಮತ್ತು ಜನತಾದಳ ಪಕ್ಷದ ಸರ್ಕಾರಗಳು ಅಸ್ತಿತ್ವಕ್ಕೆ ಬಂದಾಗ ಮುಖ್ಯಮಂತ್ರಿ ರಾಮಕೃಷ್ಣಹೆಗಡೆ, ಮುಖ್ಯಮಂತ್ರಿ ಎಸ್.ಆರ್. ಬೊಮ್ಮಾಯಿ ಮತ್ತು ಮುಖ್ಯಮಂತ್ರಿ ಎಚ್.ಡಿ. ದೇವೇಗೌಡರುಗಳ ಅವಧಿಯಲ್ಲಿ ಮಂತ್ರಿ ಹಾಗೂ ಉಪಮುಖ್ಯಮಂತ್ರಿಯಾದ ಪಟೇಲರು ತಾವು ಹಿಂದೊಮ್ಮೆ ಪ್ರಶ್ನಿಸಿದ್ದ ಕೇಂದ್ರ-ರಾಜ್ಯ ಸಂಬಂಧದ ಸಮಸ್ಯೆಗಳಿಗೆ ಉತ್ತರಿಸಬೇಕಾಯಿತು. ಕೇಂದ್ರದ ತಪ್ಪನ್ನು ಎತ್ತಿತೋರಿಸುವಲ್ಲಿ ಪಟೇಲರು ಕಡಿಮೆ ಇರಲಿಲ್ಲ.

ಪ್ರಧಾನಮಂತ್ರಿ ಎಚ್.ಡಿ. ದೇವೇಗೌಡರ 11 ತಿಂಗಳ ಅಧಿಕಾರಾವಧಿಯಲ್ಲಿ ಕೇಂದ್ರದಿಂದ ಹೆಚ್ಚಿನ ಪ್ರಮಾಣದ ಸಹಾಯ, ಆರ್ಥಿಕ ನೆರವು ಮತ್ತು ಹೊಸ ಕಾರ್ಯಯೋಜನೆಗಳ ಮಂಜೂರಾತಿಗಾಗಿ ವಿಧಾನಮಂಡಲಗಳು ಜೆ.ಹೆಚ್. ಪಟೇಲರನ್ನು ಆಗ್ರಹಪಡಿಸಿದ ಸಂದರ್ಭಗಳು ಬಂದವು. ಈ ಅವಧಿಯಲ್ಲಿ ಕೇಂದ್ರ ಸರ್ಕಾರವನ್ನು ಸಮರ್ಥಿಸಿಕೊಳ್ಳಲು ಪಟೇಲರು ಹೆಣಗಿದ್ದೂ ಉಂಟು.

## ಕೇಂದ್ರದೊಂದಿಗೆ ಜಗಳವೇಕೆ?

ಜೆ.ಹೆಚ್. ಪಟೇಲ್ (ಭಾರಿ ಕೈಗಾರಿಕೆ ಮಂತ್ರಿ): ನಾನು ವಿವರಗಳಿಗೆ ಹೋಗುವುದಿಲ್ಲ. ಮಾನ್ಯ ವಿರೋಧಪಕ್ಷದ ನಾಯಕರು ನಮ್ಮನ್ನು ಕೇಂದ್ರದೊಂದಿಗೆ ಕಾಲ್ಕೆರೆದು ಜಗಳ ಮಾಡುತ್ತೀರಿ ಎಂದು ಹೇಳಿದರು. ಕೇಂದ್ರದೊಡನೆ ಜಗಳ ಆಡಬೇಕು; ಅವರ ಮೇಲೆ ಗೂಬೆ ಕೂಡಿಸಬೇಕು ಎಂಬುದು ನಮ್ಮ ಉದ್ದೇಶವಲ್ಲ. ಕೇಂದ್ರಸರ್ಕಾರವನ್ನು ಸಮಾನಜವಾಬ್ದಾರಿ ಇರುವ ಜನ ಎಂದೇ ನಾವು ನೋಡುತ್ತೇವೆ. ನೀವು ಅವರನ್ನು 'ಮಾಸ್ಟರ್ಸ್' ಎಂದು ನೋಡುತ್ತೀರಿ. ಹಾಗೆ ನೋಡಬೇಡಿ

ಎಂದು ನಾವು ಹೇಳುತ್ತೇವೆ ಅಷ್ಟೇ. ಆದುದರಿಂದ ನೀವು ಬಜೆಟ್ ಮೇಲೆ ಮಾತನಾಡುವಾಗ ನಿಮ್ಮ ಪಾರ್ಟಿಗೆ ಸಂಬಂಧಪಟ್ಟಂತೆ 'ಮಾಸ್ಟರ್ಸ್ ರಿಲೇಷನ್‌ಶಿಪ್' ತರಬೇಡಿ.

ಟಿ.ಎನ್. ನರಸಿಂಹಮೂರ್ತಿ (ವಿರೋಧಪಕ್ಷದ ನಾಯಕರು): ಈ ವಿಚಾರದಲ್ಲಿ ನಾನು ಕೊನೆಯ ಮನುಷ್ಯ.

ಎ.ಕೆ. ಸುಬ್ಬಯ್ಯ: ನಾವು ವಿಚಾರ ಮಾಡುತ್ತಾ ಇರುವುದು ಕರ್ನಾಟಕ ರಾಜ್ಯ ಮತ್ತು ಕರ್ನಾಟಕ ರಾಜ್ಯದ ಹಿತ. ನೀವು ಕೇಂದ್ರದ ಮೇಲೆ ಕಾಲು ಕೆರೆಯುವುದರಿಂದ ಎಷ್ಟು ನಮ್ಮ ಜನರ ಹಿತರಕ್ಷಣೆ ಮಾಡುತ್ತೀರಿ, ರಾಜ್ಯದ ಹಿತ ರಕ್ಷಣೆ ಎಷ್ಟು ಎಂಬುದು ನಮ್ಮ ಮೂಲಭೂತವಾದ ಪ್ರಶ್ನೆ. ನಿಮ್ಮ ತಪ್ಪನ್ನು ಮುಚ್ಚಿಕೊಳ್ಳುವುದಕ್ಕೆ ಕೇಂದ್ರದ ಮೇಲೆ ಆರೋಪ ಮಾಡಲೂಬಹುದು. ಆದರಿಂದ ಕಷ್ಟಕ್ಕೊಳಗಾಗುವವರು ಕರ್ನಾಟಕದ ಜನ. ಇದು ಕರ್ನಾಟಕ ಜನತೆಯ ಹಿತರಕ್ಷಣೆ ಧೋರಣೆಯಲ್ಲ.

ಜೆ.ಹೆಚ್. ಪಟೇಲ್: ಕಳೆದ 13 ವರ್ಷಗಳ ಕಾಲ ಬೆಣ್ಣೆ ಹಾಕಿ ಬಂದ ಲಾಭವೇನು? ರಾಜ್ಯಕ್ಕೆ ಏನು ಬಂತು? ಕಳೆದ ಎರಡು ವರ್ಷಗಳಿಂದ ಕೇಂದ್ರದೊಡನೆ ನಮ್ಮ ಜವಾಬ್ದಾರಿ ಏನು ಎಂಬುದನ್ನು ತೋರಿಸಬೇಕಾಗಿ ಬಂತು. ಈಗ ತೋರಿಸಿದ್ದೇವೆ.

ಎ.ಕೆ. ಸುಬ್ಬಯ್ಯ: ಎರಡು ವರ್ಷದಿಂದ ತೋರಿಸಿಕೊಂಡು ಬಂದಿದ್ದಲ್ಲಿ ಹೊಂದಾಣಿಕೆ ಯಾವ ಭಾಗದಲ್ಲಾಗಿದೆ ಹೇಳಿ? 10 ಪುಟಗಳ ಬಜೆಟ್ ಭಾಷಣದಲ್ಲಿ ಏನು ಹೇಳುತ್ತೀರಿ ಅದಕ್ಕೂ, ಇದಕ್ಕೂ ವಿರೋದಾಭಾಸವಾಗುತ್ತದೆ.

ಕೆ.ಎನ್. ನಾಗೇಗೌಡ: 1977 ರಲ್ಲಿ ಕೇಂದ್ರದಲ್ಲಿ ಜನತಾಪಕ್ಷ ಆಡಳಿತದಲ್ಲಿತ್ತು ಮತ್ತು 7-8 ರಾಜ್ಯಗಳಲ್ಲಿತ್ತು. ಇವತ್ತು ನಿಮ್ಮ ವಾದ ಏನಿದೆ ಈ ವಾದ ಅವತ್ತು ಇತ್ತೇನು? ಎಕ್ಸೈಜ್, ಇನ್‌ಕಂಟ್ಯಾಕ್ಸ್- ಇವುಗಳ ಬಗೆಗೆ ಇದೇ ವಾದ ಇತ್ತೇನು?

ಜೆ.ಹೆಚ್. ಪಟೇಲ್: ಆಗಿನ ಪ್ರಧಾನಮಂತ್ರಿ ಮೊರಾರ್ಜಿ ದೇಸಾಯಿಯವರು, ಕರ್ನಾಟಕದ ಮುಖ್ಯಮಂತ್ರಿ ಮಾನ್ಯ ದೇವರಾಜ ಅರಸರಿಗೆ ಅದರ ಹಿಂದಿನ ಕಾಂಗ್ರೆಸ್ ಸರ್ಕಾರಕ್ಕಿಂತ ಹೆಚ್ಚಿನ ಸೌಲಭ್ಯ ಒದಗಿಸಿದರು. ಇದು ನಿಮಗೆ ತಿಳಿದಿರಲಿ.

ಕೆ.ಎನ್. ನಾಗೇಗೌಡ: ಹಣ ಕೇಳುವುದು ನಮ್ಮ ಹಕ್ಕು ಎಂದಿರಿ.

ಎ.ಕೆ. ಸುಬ್ಬಯ್ಯ: ನಿಮ್ಮ ಹಾಗೂ ಅವರ ವಾದ ಹಾಗಿರಲಿ. ಕಳೆದ ಎರಡು ವರ್ಷದಿಂದ ಕೇಂದ್ರದಿಂದ ರಾಜ್ಯಕ್ಕೆ ಸಹಕಾರ ಬಂತೇನು?

ಜೆ.ಹೆಚ್. ಪಟೇಲ್: ನಮಗೆ ಏನು ಬರಬೇಕಿತ್ತೋ, ಅದಕ್ಕಾಗಿ ಮಾತನಾಡಬೇಕಾಗಿ ಬಂತು. ಒಮ್ಮೊಮ್ಮೆ ಹಾಗೆ ಮಾತನಾಡಬೇಕಾಗಿ ಬರುತ್ತದೆ.

**ರಾಮಕೃಷ್ಣಹೆಗಡೆ (ಮುಖ್ಯಮಂತ್ರಿ):** ಕೇಂದ್ರ ಸರ್ಕಾರದ ಜೊತೆ ಕಾಲ್ಕೆರೆದು, ಕೈಕೆರೆದು ಯಾಕೆ ಜಗಳ ಮಾಡಬೇಕು? ಅದರಿಂದ ನಮಗೆ ಲಾಭ ಏನು? ಯಾವ ಲಾಭವೂ ಆಗುವುದಿಲ್ಲ ಎನ್ನುವುದು ನಮಗೆ ಗೊತ್ತು. ಸತ್ಯವನ್ನು ಸತ್ಯ ಎಂದು ಹೇಳಿದ್ದು ಅಪರಾಧವಾದರೆ ಅಥವಾ ಕೇಂದ್ರಕ್ಕೆ ಬೇಜಾರಾಗಬಹುದು, ಪ್ರಧಾನಮಂತ್ರಿಗಳಿಗೆ ನೋವಾಗಬಹುದು ಎಂದು ಆತ್ಮವಂಚನೆ ಮಾಡಿಕೊಳ್ಳಲು ನಾನು ತಯಾರಿಲ್ಲ. ಮಾನ್ಯ ನಾಗೇಗೌಡರಿಗೆ ತಿಳಿದಿರಲಾರದು. ನಾನು 15 ವರ್ಷದ ಹಿಂದೆ ಹಣಕಾಸು ಸಚಿವನಾಗಿದ್ದಾಗಲೂ ಕೇಂದ್ರಕ್ಕೆ ಈ ಮಾತನ್ನು ರಾಜ್ಯದ ಸಂಪನ್ಮೂಲಗಳ ವಿಷಯದಲ್ಲಿ ಹೇಳಿದ್ದೆ. ಈಗ ಎಂಟನೆಯ ವಿತ್ತ ಆಯೋಗದ ವರದಿ ವಿಷಯ ತೆಗೆದುಕೊಳ್ಳಿ. ಸ್ವಾತಂತ್ರ್ಯ ಬಂದ ಮೇಲೆ ಇವತ್ತಿನವರೆಗೆ ಯಾವ ಒಂದು ಐತೀರ್ಪನ್ನು ಕೊಡುತ್ತಾರೋ ಆ ಐತೀರ್ಪು ಮ್ಯಾಂಡೇಟರಿ. ಕಾನ್‌ಸ್ಟಿಟ್ಯೂಷ್‌ನ್‌ನಲ್ಲಿ ಬರದೇ ಇರಬಹುದು. ಇವತ್ತಿನವರೆಗೆ ಒಂದು ಸಲವೂ ಐತೀರ್ಪಿಗೆ ವಿರುದ್ಧವಾಗಿ ಒಂದು ನಿರ್ಣಯವನ್ನೂ ಕೇಂದ್ರ ಸರ್ಕಾರ ತೆಗೆದುಕೊಂಡಿಲ್ಲ. ಆದರೆ ಈ ಸಲ ಏಕೆ?

ಇದಕ್ಕಿಂತ ಹೆಚ್ಚಾದ ಮತ್ತೊಂದು ಅಂಶವೆಂದರೆ ವಿತ್ತ ಆಯೋಗದ ವರದಿ ಬಂದಿದ್ದು ಕಳೆದ ವರ್ಷದ ಮೇ ತಿಂಗಳಿನಲ್ಲಿ. ಏಪ್ರಿಲ್ ತಿಂಗಳಿನಲ್ಲಿ ಹೊಸ ಆರ್ಥಿಕ ವರ್ಷ ಆರಂಭವಾಗುತ್ತದೆ. ಹೊಸ ವರ್ಷದಿಂದ ಅದು ಜಾರಿಗೆ ಬರಬೇಕಾಗಿತ್ತು.

ಬುದ್ಧ್ಯಾಪೂರ್ವಕವಾಗಿ 8ನೇ ವಿತ್ತ ಆಯೋಗದ ಶಿಫಾರಸ್ಸುಗಳು ಜಾರಿಗೆ ಬಂದಿಲ್ಲ. ಇದನ್ನು ನಾನು ಕೇಳಿದರೆ ಕಾಲ್ಕೆರೆದು ಜಗಳ ಮಾಡಿದ ಹಾಗೆ ಆಯಿತೇ? ಹೇಳಿ..

(ವಿಧಾನ ಪರಿಷತ್ತು ಕಲಾಪ; ಮಾರ್ಚಿ 15, 1985)

## ಕೇಂದ್ರದ ತಾರತಮ್ಯದಿಂದ ನಾವು ಸೊರಗಿದ್ದೇವೆ

ಸನ್ಮಾನ್ಯ ಅಧ್ಯಕ್ಷರೇ, ನಾವು ಕೇಂದ್ರ ಸರ್ಕಾರದೊಂದಿಗೆ ಅತ್ಯಂತ ಹೆಚ್ಚಿನ ಸೌಹಾರ್ದ ಸಂಬಂಧ ಅಪೇಕ್ಷಿಸುತ್ತೇವೆ. ನಿಜ. ಹಾಗೆಂದು ಹೇಳಿ ನಮ್ಮ ಪರಿಸ್ಥಿಯನ್ನು ಮುಚ್ಚಿಟ್ಟುಕೊಳ್ಳಲು ಬರುವುದಿಲ್ಲ. ಪರಿಸ್ಥಿತಿಯನ್ನು ಕೇಂದ್ರಕ್ಕೆ ಮನವರಿಕೆ ಮಾಡಿಕೊಡುವುದು ನಮ್ಮ ಸದಿಚ್ಛೆ.

ಈವತ್ತು ಕೈಗಾರಿಕಾ ಕ್ಷೇತ್ರದಲ್ಲಿ ಕರ್ನಾಟಕ ಇಷ್ಟೆಲ್ಲಾ ದಾಪುಗಾಲಿನ ಪ್ರಗತಿ ಸಾಧಿಸಿದರೂ, ಏಳನೆಯ ಯೋಜನೆಯ ಅಂಕಿ ಅಂಶಗಳ ಪ್ರಕಾರ ನಮ್ಮ ರಾಜ್ಯ ರಾಷ್ಟ್ರಮಟ್ಟದಲ್ಲಿ 11ನೇ ಸ್ಥಾನದಲ್ಲಿದೆ.

ಕೇಂದ್ರ ರಾಜ್ಯಗಳಲ್ಲಿ ತೊಡಗಿಸಿರುವ ಬಂಡವಾಳದ ಮೊತ್ತವನ್ನು ಗಣನೆಗೆ ತೆಗೆದುಕೊಂಡರೆ ವ್ಯಸನವಾಗುತ್ತೆ. ಬಿಹಾರ, ಮಹಾರಾಷ್ಟ್ರ, ಪಶ್ಚಿಮ ಬಂಗಾಳ, ಉತ್ತರ ಪ್ರದೇಶ, ಆಂಧ್ರ. ಒರಿಸ್ಸಾ ಮತ್ತು ಗುಜರಾತ್‌ಗಳಲ್ಲಿರುವ ಕೇಂದ್ರದ ಬಂಡವಾಳ ಹೂಡಿಕೆಗೆ ಕರ್ನಾಟಕದ ಸ್ಥಿತಿ ಹೋಲಿಸಿದರೆ ನಮ್ಮ ಬಗೆಗೆ ಕೇಂದ್ರ ತಾರತಮ್ಯ ತೋರಿಸಿದೆ ಎಂದು ತಿಳಿಯುತ್ತೆ.

1970ರಲ್ಲಿ ಕೇಂದ್ರ ಕರ್ನಾಟಕದಲ್ಲಿ ತೊಡಗಿಸಿದ ಬಂಡವಾಳ ಕೇವಲ 90 ಕೋಟಿ ರೂಪಾಯಿ. ಇದು 1983ರ ವೇಳೆಗೆ ಪ್ರತಿವರ್ಷ ಶೇ.3.3ರಂತೆ ಬೆಳೆದು 1065ಕೋಟಿ ರೂಪಾಯಿಗಳಿಗೆ ಮುಟ್ಟಿದೆ. ಇದೇ ಚಿತ್ರ ರಾಷ್ಟ್ರದ ಉಳಿದ ರಾಜ್ಯಗಳಲ್ಲಿ ಹೇಗಿದೆ ಅಂದರೆ: ಬಿಹಾರ ಶೇಕಡಾ 19 ; ಪಶ್ಚಿಮ ಬಂಗಾಳ 11 ಪರ್ಸೆಂಟ್; ಒರಿಸ್ಸಾ 10 ಪರ್ಸೆಂಟ್.. ಇನ್ನೂ ವಿಜಯನಗರಕ್ಕೆ 15-20 ಸಾವಿರ ಕೋಟಿ ಬಂಡವಾಳ ಹೂಡಿಕೆ ಭರವಸೆ. ಹೀಗಾಗಿ ನಾನು ಹೇಳುವುದೇನೆಂದರೆ ಕೈಗಾರಿಕಾ ಕ್ಷೇತ್ರಗಳಿಗೆ ಕೇಂದ್ರದ ಬಂಡವಾಳ ಹೂಡಿಕೆ ಪ್ರಮಾಣ ಸರಿಯಾಗಿ ಆಗಿಲ್ಲ.

ಮೊನ್ನೆಯಷ್ಟೇ ಕೇಂದ್ರ ಸಚಿವ ಮಾನ್ಯ ನಾರಾಯಣ ದತ್ತ ತಿವಾರಿಯವರು ರಾಜ್ಯಕ್ಕೆ ಬಂದಾಗ ಕರ್ನಾಟಕದ ಕೈಗಾರಿಕೆಗಳಿಗೆ ಹೆಚ್ಚು ಬಂಡವಾಳ ತೊಡಗಿಸಿರುವುದಾಗಿ ಹೇಳಿದರು. ITI, HMT, BELನ ವಿಸ್ತರಣಾ ಕಾರ್ಯಯೋಜನೆ. ಇವೆಲ್ಲಾ ಸೇರಿ 1065 ಕೋಟಿ.. ಕೇಂದ್ರ ಉಳಿದವರಂತೆ ನಮ್ಮ ಬಗೆಗೂ ಗಮನ ಹರಿಸಿದ್ದಿದ್ದರೆ ನಮ್ಮ ರಾಜ್ಯದ ಜನತೆಗೆ ಇನ್ನಷ್ಟು ಶಕ್ತಿ ಬರುತ್ತಿತ್ತು. ಇಲ್ಲಿ ಮತ್ತಷ್ಟು ಅಭಿವೃದ್ಧಿ ಆಗುತ್ತಿತ್ತು.

(ಜೆ.ಹೆಚ್. ಪಟೇಲ್ (ಕೈಗಾರಿಕಾ ಸಚಿವರು) ವಿಧಾನಸಭೆ: ಮಾರ್ಚ್ 7, 1986)

## ಭದ್ರಾವತಿಯ ವಿಐಎಸ್ಎಲ್

**ಕೆ.ಎನ್. ನಾಗೇಗೌಡ (ಪ್ರತಿ ಪಕ್ಷದ ಶಾಸಕ) :** ಅಧ್ಯಕ್ಷರೇ ಭದ್ರಾವತಿಯ ವಿಐಎಸ್ಎಲ್ ಕಾರ್ಖಾನೆಯನ್ನು ಸ್ಟೀಲ್ ಅಥಾರಿಟಿ ಆಫ್ ಇಂಡಿಯಾ ಸಂಸ್ಥೆಗೆ ವಹಿಸಿಕೊಡುವ ವಿಷಯದ ಬಗೆಗೆ ವಿಳಂಬ ಆಗುತ್ತಿರುವ ಹಿನ್ನೆಲೆಯಲ್ಲಿ ಒಂದೆರಡು ಮಾತು ಹೇಳುತ್ತೇನೆ.. ಮಾನ್ಯ ಎಸ್.ಆರ್.ಬೊಮ್ಮಾಯಿಯವರು ಕೈಗಾರಿಕಾ ಮಂತ್ರಿಗಳಾಗಿದ್ದ ಕಾಲದಿಂದಲೂ ಈ ಪ್ರಸ್ತಾವ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಪರಿಶೀಲನೆಯಲ್ಲಿತ್ತು. ಕೇಂದ್ರ ಸಚಿವರುಗಳಾಗಿದ್ದ ಸನ್ಮಾನ್ಯ ಎಸ್.ಎಂ. ಕೃಷ್ಣ ಮತ್ತು ಎನ್.ಕೆ.ಪಿ. ಸಾಳ್ವೆಯವರುಗಳು ಕೂಡ ಭದ್ರಾವತಿ ಕಾರ್ಖಾನೆಯನ್ನು ಎಸ್ಐಎಸ್ಎಲ್ ಸಂಸ್ಥೆಗೆ ಒಪ್ಪಿಸಲು ಅನುಮೋದಿಸಿದ್ದುದು ನಿಮಗೆ ತಿಳಿದ ವಿಷಯ.

...ಮಾನ್ಯ ಜಯದೇವಣ್ಣನವರು ಸಮಾಜವಾದಿಗಳು. ಚಲಾವಣೆಯಲ್ಲಿರುವ ಬುದ್ಧಿವಂತ ನಾಯಕ. ಒಳ್ಳೆಯ ಸಂಸದೀಯಪಟು. ಇವರಿಗೆ ನಗಿಸಲೂ ಬರುತ್ತದೆ, ಅಳಿಸಲೂ ಬರುತ್ತದೆ. ಹೀರೋ, ಕೆಮಿಡಿಯನ್, ವಿಲನ್- ಎಲ್ಲಾ ಆಗಬಲ್ಲರು... ನಮ್ಮ ರಾಜ್ಯದ ಕೈಗಾರಿಕಾ ಕ್ಷೇತ್ರ ಮತ್ತಷ್ಟು ಹೆಚ್ಚು ಆಶಾದಾಯಕವಾಗಬೇಕಾಗಿದೆ. ರಾಷ್ಟ್ರದ ಆರ್ಥಿಕ ಪರಿಸ್ಥಿತಿ ಉತ್ತಮಪಡಿಸಲು ಕೈಗಾರಿಕಾ ಕ್ಷೇತ್ರದ ಕೊಡುಗೆ ಹೆಚ್ಚಬೇಕಾಗಿದೆ.. ಪಟೇಲರು ನಮ್ಮೆಲ್ಲರ ಸಲಹೆಗಳನ್ನು ತೆರೆದ ಮನಸ್ಸಿನಿಂದ ಸ್ವೀಕರಿಸುವರೆಂಬ ಖಚಿತ ನಂಬಿಕೆ ನನಗಿದೆ..

(ವಿಧಾನಪರಿಷತ್ತು : ಏಪ್ರಿಲ್ 3, 1987)

## ಕೋಕಾ ಕೋಲಾ ಮತ್ತು ಚೀನಾ

ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ) : ಸಮಾಜವಾದಿ ಚಿಂತನೆಗಳಲ್ಲಿ ಸಹಿತ ಹೊಸ ಆವಿಷ್ಕಾರಗಳು ಮೂಡಿ ಬಂದಿವೆ. ಓಬೀರಾಯನ ಕಾಲದ ಸಿದ್ಧಾಂತಗಳಿಗೆ ಹಲವು ರಾಷ್ಟ್ರಗಳು ಕಟ್ಟುಬಿದ್ದಿಲ್ಲ.....ಹೋದ ಸಲ ನಾನು ಚೀನಾಕ್ಕೆ ಹೋದಾಗ ಆದ ಅನುಭವವನ್ನು ಹೇಳುತ್ತೇನೆ. 1981ರಲ್ಲಿ ನಾನು ಚೀನಾಕ್ಕೆ ಹೋದೆ. ಆ ವೇಳೆಗಾಗಲೇ ಅಮೇರಿಕಾ, ಫ್ರಾನ್ಸ್, ಜರ್ಮನಿ ಮತ್ತಿತರ ರಾಷ್ಟ್ರಗಳಿಂದ ಚೀನಾಕ್ಕೆ ಬಂಡವಾಳದ ಹೊಳೆ ಹರಿದು ಬಂದಿತ್ತು.

ಚೀನಾ ದೇಶದ ಅರ್ಥಶಾಸ್ತ್ರಜ್ಞನನ್ನು ಕೇಳಿದೆ... ಅಲ್ಲಪ್ಪಾ, ನಾವು ಅಮೇರಿಕಾ ಬಂಡವಾಳದ ಕೋಕಾಕೋಲಾವನ್ನು ನಮ್ಮ ದೇಶದಿಂದ ಹೊರಗೆ ಹಾಕುತ್ತಿರುವಾಗ ನೀವು ಕೋಕಾಕೋಲಾವನ್ನು ಒಳಗೆ ತರುತ್ತಿದ್ದೀರಿ.. ಇದು ಸರಿಯೇ.

ಪ್ರೊಫೆಸರ್ ಕೂ ಅಂತ ಅವನ ಹೆಸರು. ಕೂ ಹೇಳಿದ. ... ನೀವು ಮಾಡಿದ ಮೊದಲ ತಪ್ಪೇ ಅದು.. ಜನ ಸಾಮಾನ್ಯರಿಗೆ ಕುಡಿಯುವ ನೀರನ್ನು ಕೊಡುವುದಕ್ಕೆ ಮುಂಚೆಯೇ ನೀವು ಕೋಕಾಕೋಲಾ ಕುಡಿಸಿದಿರಿ. ನಿಮ್ಮ ಆರ್ಥಿಕ ವ್ಯವಸ್ಥೆಗೆ ಇದು ಒಗ್ಗಲಿಲ್ಲ; ಜನಕ್ಕೆ ಜೀವನವೂ ಆಗಲಿಲ್ಲ. ನಾವು ಚೀನಾದಲ್ಲಿ 30 ವರ್ಷಗಳ ಕಾಲ ಜನರಿಗೆ ಮೊದಲು ಕನಿಷ್ಠ ಜೀವನಾವಶ್ಯಕತೆಗಳನ್ನು ಪೂರೈಸಲು ಶ್ರಮಿಸಿದೆವು. ನಂತರ ಕೋಕಾ ಕೋಲಾವನ್ನು ನಮ್ಮ ದೇಶದೊಳಕ್ಕೆ ಬಿಟ್ಟೆವು. ಈಗ ಕುಡಿಯುವವರೂ ಆರೋಗ್ಯವಾಗಿದ್ದಾರೆ. ಚೀನಾದ ಆರ್ಥಿಕ ವ್ಯವಸ್ಥೆಯೂ ಕೋಕಾಕೋಲಾವನ್ನು ಅರಗಿಸಿಕೊಂಡಿದೆ.

ಹೀಗಾಗಿ ನೆರೆ ಸಮಾಜವಾದ ಚೀನಾ ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಬಲಿಷ್ಠವಾದ ವ್ಯವಸ್ಥೆಯನ್ನು ಮಾಡಿಕೊಳ್ಳಲು ಸಾಧ್ಯವಾಗಿದೆ.

ನಮ್ಮಲ್ಲಿ ಹೀಗಾಗಿಲ್ಲ... ಕುಡಿಯುವ ನೀರನ್ನೇ ಸರಿಯಾಗಿ ಕೊಡಲು ಆಗದೆ ನಾವು ಒಮ್ಮಿಂದೊಮ್ಮೆಲೇ 21ನೆಯ ಶತಮಾನದ ಬಗೆಗೆ ಮಾತನಾಡಲು ಹೊರಟರೆ... ಸರಿಯೇ ನೀವೇ ಹೇಳಿ...

(ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ) ವಿಧಾನಸಭೆ : ಆಗಸ್ಟ್ 22, 1985)

## Vajpai A Tall Politician

ಇವತ್ತು ಮಾನ್ಯ ವಾಜಪೇಯಿಯವರು ಯಾರ್‍ಯಾರ ಜೊತೆಗೆ ಸೇರಿಕೊಂಡು ಸರ್ಕಾರ ರಚನೆ ಮಾಡುತ್ತಾರೆ? ಆ ಸರ್ಕಾರ ಎಷ್ಟು ದಿವಸ ಇರುತ್ತದೆ? ಎಂಬುದನ್ನೆಲ್ಲಾ ನಾವು ಆಲೋಚನೆ ಮಾಡಬೇಕಾಗಿಲ್ಲ.

ಆರ್ಥಿಕ ದುರ್ಬಲತೆಯನ್ನು, ಸಾಮಾಜಿಕ ಗೊಂದಲವನ್ನು, ಧಾರ್ಮಿಕ ಅಸಮತೋಲನತೆಯನ್ನು ಎದುರಿಸತಕ್ಕಂತಹ ಧೈರ್ಯ ಮತ್ತು ಶಕ್ತಿ ಮಾನ್ಯ ವಾಜಪೇಯಿಯವರಿಗೆ

ಬಂದರೆ ಒಳ್ಳೆಯದು. ಅವರು ಆ ಕೆಲಸವನ್ನು ಮಾಡಲಿ. ಯಾರು ಕೆಲಸ ಮಾಡಿದರೂ ದೇಶಕ್ಕೆ ಒಳ್ಳೆಯದಾಗುವುದಾದರೆ ನಾವ್ಯಾಕೆ ವಿರೋಧ ಮಾಡಬೇಕು?

ಪದೇ ಪದೇ ಚುನಾವಣೆಗೆ ಹೋದರೆ ಜನ ಸುಮ್ಮನಿರುತ್ತಾರಾ? ನಾವಂತೂ ನೆಲಹಿಡಿದು ಹೋಗಿದ್ದೇವೆ. ಚುನಾವಣೆ ಎದುರಿಸಲು ನಮ್ಮ ಬಳಿ ದುಡ್ಡೂ ಇಲ್ಲ. (ಕಾಂಗ್ರೆಸ್ಸಿನತ್ತ ಕೈಮಾಡಿ) ನಿಮ್ಮ ಪಕ್ಷದಲ್ಲಿ ದುಡ್ಡು ಏನಾದರೂ ಇದೆಯೋ ಏನೋ ಗೊತ್ತಿಲ್ಲ.

May be right or wrong, people have opted for one party as a single largest party. Let them run the Government. We will try to cooperate wherever the interest of the nation is going to be saved. We will do that.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನ ಪರಿಷತ್ ಮಾರ್ಚಿ 23, 1998)

## ಕೇಂದ್ರ ಬಲವಾಯ್ತು; ದೇಶ ಬಡವಾಯ್ತು

ಮುಂದೆ ನಡೆಯತಕ್ಕಂತಹ ಅನಿವಾರ್ಯ ಸತ್ಯದ ಬಗ್ಗೆ ಹೇಳುತ್ತೇನೆ ಕೇಳಿ. ದೇಶಕ್ಕೆ ಸ್ಟ್ರಾಂಗ್ ಸೆಂಟರ್ ಬೇಕೆಂದು ಹೇಳಿಕೊಳ್ಳುತ್ತಾ ಹೋಗಿ, ಇವತ್ತು ಸೆಂಟರ್ ಅನ್ನು ಎಷ್ಟು ಸ್ಟ್ರಾಂಗ್ ಮಾಡಿದ್ದೇವೆ ಎಂದರೆ, ದೇಶವನ್ನು ಸಕತ್ ವೀಕ್ ಮಾಡಿದ್ದೇವೆ. ನಾವು ಈಗ ಅದರ ಕಡೆಗೆ ಗಮನ ಕೊಡೋಣ. ಯಾವುದೇ ಕೇಂದ್ರ ಸರ್ಕಾರ ಇರಲಿ. ನಮ್ಮ ದೇಶದ ನಮ್ಮ ರಾಜ್ಯದ, ನಮ್ಮ ಜನರ, ರೈತರ ಪರವಾಗಿ ಕೆಲಸ ಮಾಡುವ ಸರ್ಕಾರಕ್ಕೆ ಬೆಂಬಲಿಸೋಣ. ನಾವು ಮಾನ್ಯ ದೇವೇಗೌಡರ ಸರ್ಕಾರವನ್ನು ಏಕೆ ಹೊಗಳುತ್ತೇವೆ? 11 ತಿಂಗಳಲ್ಲಿ ನೀರಾವರಿಗೆ ಅವರು ನಮಗೆ ದುಡ್ಡು ಕೊಟ್ಟರು. 11 ತಿಂಗಳಲ್ಲಿ ನಮಗೆ ಆರೂವರೆ ಸಾವಿರ ಮೆಗಾವ್ಯಾಟ್‌ಗೆ ಕ್ಲಿಯರೆನ್ಸ್ ಕೊಟ್ಟರು. ಆ ಕಾರಣದಿಂದ ನಾವು ಹಾಗೆ ಹೇಳುತ್ತೇವೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನ ಪರಿಷತ್ತು, ಮಾರ್ಚಿ 23, 1998)

## ಮಮತಾ, ಜಯಾ, ಬರ್ನಾಲಾ

ಮಾನ್ಯ ಸಭಾಧ್ಯಕ್ಷರೇ, ಸರ್ಕಾರದ ಸ್ಥಿರತೆ ಕುರಿತು, ಕೇಂದ್ರ ಹಾಗೂ ರಾಜ್ಯದಲ್ಲಿರುವ ಸರ್ಕಾರಗಳ ಬಗೆಗೆ ಮಾತು ಬರುತ್ತದೆ. ಉದಾಹರಣೆಗೆ ವಾಜಪೇಯಿಯವರ ಸರ್ಕಾರದ ವಿಷಯವನ್ನೇ ತೆಗೆದುಕೊಳ್ಳೋಣ.

ಶ್ರೀಮತಿ ಮಮತಾಬ್ಯಾನರ್ಜಿ ಹೇಳಿದ್ದಾರೆ, I will give only seven day's time; ಜಯಲಲಿತಾ ಹೇಳಿದ್ದರು, I give only two weeks time, ಬರ್ನಾಲಾ ಒಂದು ಸಲ ಹೇಳಿದ್ದರು We will not support, we will withdraw support, ಇದನ್ನು ನೋಡಿ ನಮಗೇನು ಖುಷಿ ಆಗುತ್ತದೆ? ಏನಾಯಿತು? ಬಿಜೆಪಿ ಸರ್ಕಾರ ಇದ್ದ ತಕ್ಷಣ

ಅದು ಮುಳುಗಿಹೋಗಿಬಿಡಬೇಕು. ನಾವೊಂದು ಅರಾಜಕತೆಯ ಅತಂತ್ರ ರಾಷ್ಟ್ರ ಆಗಬೇಕೇನು? ನಾವೊಂದು ಹೇಳಿಕೇಳುವರಿಲ್ಲದ ದೇಶವಾಗಬೇಕು ಎಂದೇನು? ಇದು ಸರಿಯಲ್ಲ. ನಮ್ಮ ರಾಜಕೀಯ ಪಕ್ಷಗಳು ಮತ್ತು ನಾಯಕರು ದೇಶದ ಸ್ಥಿರತೆ ಬಗ್ಗೆ ಯೋಚಿಸಿ ಮಾತನಾಡಿದರೆ ಒಳ್ಳೆಯದು.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ನವೆಂಬರ್ 10, 1998)

## ನಮ್ಮ ದೇಶದ ಹಣ ಅಪವ್ಯಯವಾಗಿದೆ

ಬಹಳಷ್ಟು ಹಣ ಹೋಗಿದೆ. ಸೋರಿ ಹೋದ ಹಣದಲ್ಲಿ ಇಂತಹ ಇನ್ನೊಂದು ರಾಷ್ಟ್ರವನ್ನು ಕಟ್ಟಬಹುದಿತ್ತು. ಅಷ್ಟು ಹಣ ಸೋರಿ ಹೋಯಿತು.

ಕಾಶ್ಮೀರಕ್ಕೆ ಕೊಟ್ಟಂಥ ಹಣದಲ್ಲಿ ಒಂದು ರೂಪಾಯಿ ಕೂಡ ವಾಪಸ್ಸು ಬರಲಿಲ್ಲ. ಅಸ್ಸಾಂನಲ್ಲಿ ಖರ್ಚು ಮಾಡಿದ ಹಣಕ್ಕೆ ಕಾಸಿನ ಬೆಲೆಯೂ ಬರಲಿಲ್ಲ.

ಇವೊತ್ತು ನಮಗೆ, ಅದೂ ಮೊನ್ನೆ ದೇವೇಗೌಡರು ಪ್ರಧಾನಮಂತ್ರಿಗಳಾದ ನಂತರ ಕೆಲವು ಸೀಕ್ರೆಟ್‌ಗಳಿವೆಯೆಂದು ಖಚಿತವಾಗಿ ಗೊತ್ತಾಯಿತು. ನಂಜೇಗೌಡರಿಗೆ ಇದರ ಬಗ್ಗೆ ಚೆನ್ನಾಗಿ ಗೊತ್ತಿದೆ.

ಕೆಲವು ರಾಜ್ಯಗಳ ನಾಯಕರು ಅವರದೇ ಆದಂಥ ಒಂದು ಮಾರ್ಗ ಹಿಡಿದುಕೊಂಡಿದ್ದಾರೆ. ಅವರು ಸೀದಾ ಪ್ರಧಾನಮಂತ್ರಿಗಳ ಅಡುಗೆ ಮನೆಗೆ ಹೋಗುವುದು; ನಾವೆಲ್ಲಾ ಹೊರಗಡೆ ಕುಳಿತುಕೊಂಡು ಏನೋ ತರುತ್ತಾರೆ, ಏನೋ ಹಾಕುತ್ತಾರೆ, ಚಪಾತಿ, ಇನ್ನೇನೋ ಕೊಡುತ್ತಾರೆ, ನೋಡೋಣವೆಂದು ಕಾಯುತ್ತಿದ್ದರೆ ಅವರು ಸೀದಾ, ಸೀದಾ ಅಡುಗೆ ಮನೆಗೆ ಹೋಗಿ ತುಪ್ಪ, ಸಕ್ಕರೆ ಇನ್ನು ಏನೇನು ಬೇಕೋ ಅದನ್ನೆಲ್ಲವನ್ನೂ ದೋಚಿಕೊಂಡು ಲಕ್ನೊಗೋ, ಪಟ್ನಗೋ ಹೋಗಿಬಿಡುವುದು. ನಾವು ಹೊರಗಡೆ ಕುಳಿತುಕೊಂಡು ಕಾಯುತ್ತಿರುವುದು.

ಮೊನ್ನೆ ನಮ್ಮ ಮುದ್ದೇಗೌಡರು ಹೋದಾಗ ಇದರಲ್ಲಿ ಏನೋ ದೊಡ್ಡ ರಹಸ್ಯವಿದೆಯೆಂದು ನನಗೆ ಗೊತ್ತಾಯಿತು.

ನಾವು ಜಿಲ್ಲೆಗಳನ್ನು ಏಕೆ ಹೆಚ್ಚು ಮಾಡಿದ್ದೇವೆಂದರೆ ಕೆಲವು ಸಾರಿ ಜಿಲ್ಲೆಗಳ ಆಧಾರದ ಮೇಲೆ ಈಗ ಜಿಲ್ಲೆಗೊಂದರಂತೆ ಕೇಂದ್ರ ಸರ್ಕಾರ ನವೋದಯ ಶಾಲೆ ಕೊಡುತ್ತದೆ. ನಮ್ಮದು ದೊಡ್ಡ ರಾಜ್ಯವಾಗಿದ್ದು ನಮಗಿಂತಲೂ ಸಣ್ಣ ರಾಜ್ಯಗಳಲ್ಲಿ 30-40 ನವೋದಯ ಶಾಲೆಗಳಿವೆ. ನಮ್ಮ ರಾಜ್ಯದ ಓಲ್ಡ್ ಏಜ್ ಪೆನ್‌ಶನ್‌ಗೆ ಇಟ್ಟಂಥ 47.9 ಕೋಟಿ ರೂಪಾಯಿಗಳು ಉಪಯೋಗವಾಗಿಲ್ಲ, ಯಾರೂ ತೆಗೆದುಕೊಂಡಿಲ್ಲ. ಇದು ನಮ್ಮ ಒಳ್ಳೆಯತನ. ಆಗ ಆ ಪಕ್ಷದ ಸರ್ಕಾರವಿತ್ತು, ಈ ಪಕ್ಷದ ಸರ್ಕಾರವಿತ್ತು ಎಂದು ಹೇಳುವುದಿಲ್ಲ.

ರಾಜ್ಯದ ಹಿತವನ್ನು ಹೇಗೆ ಕಾಪಾಡಬೇಕು ಎನ್ನುವುದರಲ್ಲಿ ನಮ್ಮ ನಮ್ಮಲ್ಲಿ ಭಿನ್ನಾಭಿಪ್ರಾಯ ಇರಬಾರದು. ರಾಜ್ಯದ ಆಡಳಿತ ನಡೆಸುವುದು, ಚುನಾವಣೆಯಲ್ಲಿ ನಾವು ನಿಮ್ಮ ಪಾರ್ಟಿ ತೆಗಳುವುದು, ನೀವು ನಮ್ಮನ್ನು ಬೈಯುವುದು ಈ ರೀತಿ... ಈಗ ನಡೆಯುತ್ತಾ ಇದೆ ಎಂದು ಇಟ್ಟುಕೊಳ್ಳಿ.

ನಡೆಯುವವರು ಎಡವುತ್ತಾರಲ್ಲ, "ನಡೆವರ್ ಎಡವ್ಪವವರಲ್ಲದೆ ಕುಳಿತವರ್ ಎಡವುವರೆ, ಅಥವಾ ಮಲಗಿರುವವರ್ ಎಡವುವರೆ?" ನಡೆವರ್ ಎಡುವವರ್.

(ನಗು)

ಜಿ.ವಿ. ಶ್ರೀರಾಮರೆಡ್ಡಿ: ಅಂತವರು ಆ ಕಡೆ ಕೂಡ ಕುಳಿತಿದ್ದಾರೆ.

ಜೆ.ಹೆಚ್. ಪಟೇಲ್: ಎಡವಿದ್ದರೆ ತಪ್ಪನ್ನು ತಿದ್ದುಕೊಳ್ಳೋಣ, ಮುಂದೆ ಏನು ಮಾಡಬೇಕು ಎಂದು ಹೇಳೋಣ.

(ವಿಧಾನಸಭೆ ಕಲಾಪ ಸೆಪ್ಟೆಂಬರ್ 4, 1997)

### ಇದ್ದದ್ದನ್ನು ಇದ್ದ ಹಾಗೆ ಹೇಳುವಾತ

ಸದನದಲ್ಲಿ ಪಟೇಲರು ಮಾತನಾಡಲಿದ್ದಾರೆ ಎಂದು ತಿಳಿದರೆ ಎಂತಹ ಕೆಲಸವಿರಲಿ ಬಿಟ್ಟು ಬಂದು ಹಾಜರಿರುತ್ತಿದ್ದವರ ಪೈಕಿ ನಾನೂ ಒಬ್ಬ. ವಿಚಾರಪೂರಿತ ಮತ್ತು ವಿಚಾರ ಪ್ರಚೋದಕ ಅವರ ಮಾತು. ಪಟೇಲರ ಹಾಸ್ಯ ಚಟಾಕಿ ಅವರ-ನಮ್ಮ ಮನಸ್ಸನ್ನು ಕದಿಯುತ್ತಿತ್ತು.

ಅಪಾರ ಅನುಭವಿ. ಅಗಾಧ ನೆನಪಿನ ಶಕ್ತಿ ಇವರಿಗೆ. ಅವರ ಸ್ನೇಹಪರತೆ ಮತ್ತು ಮುತ್ಸದ್ದಿತನ ಎಲ್ಲ ಕಾಲಕ್ಕೂ, ಎಲ್ಲ ಶಾಸಕರಿಗೂ ಮಾದರಿ. ಎಲ್ಲಕ್ಕಿಂತ ಮಿಗಿಲಾಗಿ ಒಳಗೆ - ಹೊರಗೆ ಎಂಬ ಮುಖವಾಡ ಇಲ್ಲದ ರಾಜಕಾರಣಿ ಈತ. ವೈಯಕ್ತಿಕ ಮತ್ತು ಸಾರ್ವಜನಿಕ ಜೀವನ ಖುಲ್ಲಾ-ಖುಲ್ಲಾ ಇತ್ತು.

ಇದ್ದುದ್ದನ್ನು ಇದ್ದ ಹಾಗೆ ಹೇಳುವ ನಿಷ್ಠುರವಾದಿ ಪಟೇಲರು ಈ ಶತಮಾನದ ವಿಶಿಷ್ಟ ರಾಜಕಾರಣಿ.

(ಜಗದೀಶ ಶೆಟ್ಟರ್ (ವಿರೋಧಪಕ್ಷದ ನಾಯಕರು) ವಿಧಾನಸಭೆ, ಫೆಬ್ರವರಿ 27, 2001)

### ಸಿಹಿ ಹಾಸ್ಯದ ಚಿಲುಮೆ

ಪಟೇಲರ ಹಾಸ್ಯಭರಿತವಾದ, ಸೊಗಸಾದ ಮತ್ತು ಮೊನಚಾದ ಮಾತುಗಳನ್ನು ಪತ್ರಕರ್ತನಾಗಿ ನಾನು ಮೆಚ್ಚಿದೆ. ಎಂತಹ ಕ್ಲಿಷ್ಟವಾದ ಸಮಸ್ಯೆ ಎದುರಾದರೂ ಹಾಸ್ಯ ಅವರ ಕೈಬಿಡಲಿಲ್ಲ. ಲೋಪದೋಷವನ್ನು ಯಾರಾದರೂ ಎತ್ತಿ ಆಡಿದರು ಎನ್ನಿ. ಸಮಾಧಾನದಿಂದ ಕೇಳಿ, ಹಾಸ್ಯ ರೀತಿಯಲ್ಲಿ ಕಹಿಯನ್ನು ಮರೆಸುವ ಜಾಣ್ಮೆ ಪಟೇಲರಿಗಿತ್ತು.

(ಪಿ. ರಾಮಯ್ಯ (ವಿಧಾನ ಪರಿಷತ್) ಫೆಬ್ರವರಿ 27, 2001)

# 8

# ಮುಖ್ಯಮಂತ್ರಿ ಪರವಾಗಿ ಉತ್ತರ

## ಹತ್ತು ವರ್ಷದ ಹಿಂದೆಯೇ ದಾಖಲೆ

ಸಂಸದೀಯ ಕಲಾಪಗಳಲ್ಲಿ ರಾಷ್ಟ್ರಪತಿ ಮತ್ತು ರಾಜ್ಯಪಾಲರ ಭಾಷಣಕ್ಕೆ ವಿಶೇಷ ಸ್ಥಾನವಿದೆ. ಸಂವಿಧಾನದ 86(1), 87(1), 175(1) ಹಾಗೂ 176 ಅನುಚ್ಛೇದದಂತೆ, ಸಂಸತ್ತಿನಲ್ಲಿ ರಾಷ್ಟ್ರಪತಿಯವರು ಮತ್ತು ವಿಧಾನ ಮಂಡಲದಲ್ಲಿ ರಾಜ್ಯಪಾಲರು ಕ್ರಮವಾಗಿ ಸಂಸತ್ತು ಮತ್ತು ವಿಧಾನ ಮಂಡಲಗಳನ್ನುದ್ದೇಶಿಸಿ ಭಾಷಣ ಮಾಡುತ್ತಾರೆ. ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆ ನಿಯಮ ಅಧ್ಯಾಯ-5, (19 ಮತ್ತು 20ನೇ ನಿಯಮ) ಅಡಿಯಲ್ಲಿ ವಿಧಾನ ಮಂಡಲಗಳ ಉಭಯ ಸದನಗಳಲ್ಲಿ ರಾಜ್ಯಪಾಲರ ಭಾಷಣದಲ್ಲಿ ಪ್ರಸ್ತಾಪಿಸಿರುವ ವಿಷಯಗಳ ಚರ್ಚೆ ನಡೆಯುತ್ತದೆ.

ಉಳಿದ ಸಂಸದೀಯ ಕಲಾಪಗಳಾದ ಪ್ರಶ್ನೋತ್ತರ, ಸಾಮಾನ್ಯ ಚರ್ಚೆ, ಶೂನ್ಯವೇಳೆ, ನಿಲುವಳಿ ಸೂಚನೆ, ಶಾಸನರಚನೆ, ವಿಶ್ವಾಸ ಇಲ್ಲವೇ ಅವಿಶ್ವಾಸ ನಿರ್ಣಯ ಎಲ್ಲಾ ಕಲಾಪಗಳಿಗಿಂತ ವಿಭಿನ್ನವಾದದ್ದು ಈ ಚರ್ಚೆ. ನಮ್ಮ ರಾಜ್ಯಾಂಗ ರಚನಕಾರರು ಪ್ರಜಾತಂತ್ರ ವ್ಯವಸ್ಥೆಗೆ ಹಳೆಬೇರು – ಹೊಸಚಿಗುರಿನ ಸಂಸ್ಕೃತಿಯನ್ನು ಮೇಳವಿಸಿರುವುದು ರಾಜ್ಯಪಾಲರ ಭಾಷಣದಲ್ಲಿ.

ಹೆಸರಿಗೆ ರಾಷ್ಟ್ರಪತಿ ಅಥವಾ ರಾಜ್ಯಪಾಲರ ಭಾಷಣ ಎಂದು ಕರೆಯಲಾಗುತ್ತದೆಯೇ ವಿನಃ ಈ ಭಾಷಣವನ್ನು ಸಿದ್ಧಗೊಳಿಸುವವರು ಪ್ರಧಾನಮಂತ್ರಿ ನೇತೃತ್ವದ ಮತ್ತು ಮುಖ್ಯಮಂತ್ರಿ ನೇತೃತ್ವದ ಅಂದಿನ ಸರ್ಕಾರ. ಸಂಸತ್ತಿನಲ್ಲಿ ಪ್ರಧಾನಮಂತ್ರಿ ಈ ಹೊಣೆಗಾರಿಕೆ ಹೊತ್ತರೆ, ವಿಧಾನಮಂಡಲದಲ್ಲಿ ಮುಖ್ಯಮಂತ್ರಿ ಇದರ ಜವಾಬ್ದಾರಿ ಹೊರುತ್ತಾರೆ.

ಉಭಯ ಸದನಗಳು ಒಟ್ಟಿಗೆ ಕಲೆತು ವೀಕ್ಷಿಸುವ ಏಕೈಕ ಖಾಯಂ ವಾರ್ಷಿಕ ಸಂಸದೀಯ ಕಲಾಪ ಇದು. ಚುನಾವಣೆಯ ಬಳಿಕ ಹೊಸದಾಗಿ ಆಡಳಿತಕ್ಕೆ ಬರುವ ಸರ್ಕಾರ ಮತ್ತು ಪ್ರತಿ ಹೊಸ ಆರ್ಥಿಕ ವರುಷದ ಪೂರ್ವದಲ್ಲಿ ಆಯಾ ಸರ್ಕಾರಗಳು ಮಾಡುವ ಮೊತ್ತ ಮೊದಲನೆಯ ಪ್ರಜಾತಂತ್ರ ಕಸರತ್ತು. ಈ ಭಾಷಣ ಮುಖ್ಯಮಂತ್ರಿಯ ಜನಪರ ಚಿಂತನೆಯ ಏಕೋಭಾವವನ್ನು ಪ್ರಕಟಗೊಳಿಸುವ ಸತ್ಯದರ್ಶನ.

ಭಾಷಣದ ದಿನದಂದು, ರಾಷ್ಟ್ರಪತಿ ಮತ್ತು ರಾಜ್ಯಪಾಲರು ಸಾಂಪ್ರದಾಯಿಕ ರಿವಾಜು- ರೀತಿಯೊಂದಿಗೆ ಪ್ರಜಾಪ್ರತಿನಿಧಿಗಳ ಬಳಿಗೆ ಬರುತ್ತಾರೆ. ಉಭಯ ಸದನಗಳ ಸಭಾಧ್ಯಕ್ಷರು ಈ ಮಾನನೀಯ ವ್ಯಕ್ತಿಯನ್ನು ಸದನಕ್ಕೆ ಕರೆತರುತ್ತಾರೆ. ರಾಷ್ಟ್ರಗೀತೆಯ ಬಳಿಕ ಭಾಷಣ ಆರಂಭವಾಗುತ್ತದೆ. ಭಾಷಣ ಮುಗಿದಕೂಡಲೇ ಮತ್ತೆ ರಾಷ್ಟ್ರಗೀತೆ ನುಡಿಯುತ್ತದೆ. ರಾಷ್ಟ್ರಪತಿ ಇಲ್ಲವೇ ರಾಜ್ಯಪಾಲರು ಗೌರವದೊಂದಿಗೆ ಹಿಂತಿರುಗುತ್ತಾರೆ. ಇಲ್ಲಿಗೆ ಒಂದು ಹಂತ ಮುಗಿಯುತ್ತದೆ.

ದಿಟವೆನಿಸುವ ಪ್ರಜಾತಂತ್ರದ ಹಂತ ಆರಂಭವಾಗುವುದು ಇಲ್ಲಿಂದೀಚೆಗೆ. ಜನರಿಂದ ಆಯ್ಕೆಗೊಂಡ ಸರ್ಕಾರ ಸಂಸದೀಯ ಮಜ್ಜನಕ್ಕೆ ಸಿದ್ಧವಾಗುತ್ತದೆ. ಚುನಾವಣೆಯ ಪೂರ್ವದಲ್ಲಿ ತಾನಿತ್ತ ವಚನಗಳ ಅನುಷ್ಠಾನವನ್ನು ರಾಜ್ಯಪಾಲರ ಮಾತಿನ ಮೂಲಕ ಅಭಿವ್ಯಕ್ತಪಡಿಸಿದ ಮುಖ್ಯಮಂತ್ರಿ ಚರ್ಚೆಯ ವೇದಿಕೆಗೆ ಹಾಜರಾಗುತ್ತಾರೆ. ಚುನಾವಣೆಯ ವಾಗ್ದಾನಗಳಿಗೆ ಪ್ರಧಾನಮಂತ್ರಿ ಇಲ್ಲವೇ ಮುಖ್ಯಮಂತ್ರಿ, ಪ್ರಜಾತಂತ್ರ ಮೂಸೆಯಲ್ಲಿ ಕೊಡುವ ಆಡಳಿತಾತ್ಮಕ ಮೂರ್ತಿರೂಪವೇ ರಾಷ್ಟ್ರಪತಿ ಇಲ್ಲವೇ ರಾಜ್ಯಪಾಲರ ಭಾಷಣ.

ಈ ಭಾಷಣಕ್ಕೆ ವಂದನೆ ಸೂಚಿಸುವ ನಡವಳಿಕೆ ಸಹಿತ ಒಂದು ಸತ್‌ಸಂಪ್ರದಾಯ. ಒಂದು ರೀತಿ ಇದು ನಾಗರೀಕ ಸಮಾಜದ ವಿಶಿಷ್ಟ ಕಾರ್ಯವೈಖರಿ. ಭಾಷಣದ ಮೈಲಿಗಲ್ಲುಗಳನ್ನು ಸದನ ಗುರುತಿಸುತ್ತದೆ. ಸಲಹೆ-ಸೂಚನೆಗಳನ್ನು ನೀಡುತ್ತದೆ. ಲೋಪದೋಷಗಳನ್ನು ತಿದ್ದುತ್ತದೆ. ವಂದನಾ ನಿರ್ಣಯ ಕೂಡ ಬ್ರಿಟನ್ನಿನ ಪಾರ್ಲಿಮೆಂಟಿನಿಂದ ನಮ್ಮ ಪ್ರಜಾತಂತ್ರ ತಂದ ಒಂದು ಸಂಸದೀಯ ನವಿಲುಗರಿ.

ವಂದನೆ ನಿರ್ಣಯದ ಬಗೆಗಿನ ಚರ್ಚೆಗೆ ಪ್ರಧಾನಮಂತ್ರಿ ಇಲ್ಲವೇ ಮುಖ್ಯಮಂತ್ರಿಯುಷ್ಟೇ ಉತ್ತರಿಸುವುದು ವಾಡಿಕೆ. ಸಂಸದೀಯ ಸಂಪ್ರದಾಯದಂತೆ, ಮುಖ್ಯಮಂತ್ರಿಯ ಪ್ರತಿಷ್ಠೆಯ ಪ್ರಶ್ನೆ ಇದು.

ಕರ್ನಾಟಕ ಸಂಸದೀಯ ಇತಿಹಾಸದಲ್ಲಿ ಮುಖ್ಯಮಂತ್ರಿಯ ವಿನಃ ರಾಜ್ಯಪಾಲರ ಭಾಷಣದ ಬಗೆಗಿನ ಚರ್ಚೆಗೆ ವಿಧಾನಸಭೆಯಲ್ಲಿ ಬೇರೆಯವರು ಉತ್ತರಿಸಿದ ನಿದರ್ಶನಗಳಿಲ್ಲ. ಮುಖ್ಯಮಂತ್ರಿ ಅನುಪಸ್ಥಿತಿಯಲ್ಲಿದ್ದಾಗ ವಿಧಾನ ಪರಿಷತ್ತಿನಲ್ಲಿ ಹಿರಿಯ ಮಂತ್ರಿಗಳೊಬ್ಬರು ಉತ್ತರಿಸುವುದು ವಾಡಿಕೆ.

ಮಾನ್ಯ ಜೆ.ಹೆಚ್. ಪಟೇಲರು - ಅನುಭವಿ, ಮುತ್ಸದ್ದಿ, ವಿಚಾರವಾದಿ ಹಾಗೂ ಉತ್ಸಾಹಿ ಸಂಸದೀಯಪಟು. 1986 ರಲ್ಲಿ ರಾಜ್ಯಪಾಲರ ಭಾಷಣಕ್ಕೆ ವಂದನೆ ಸೂಚಿಸುವ ನಿರ್ಣಯದ ಮೇಲಿನ ಚರ್ಚೆಗೆ ಪಟೇಲರೇ ಸಮರ್ಪಕ

ಉತ್ತರನೀಡಿ ದಾಖಲೆ ಸೃಷ್ಟಿಸಿದರು. (ಮುಖ್ಯಮಂತ್ರಿಯವರ ಪರವಾಗಿ ಚರ್ಚೆಗೆ ಉತ್ತರಿಸಿದ ಪಟೇಲರು ಆಗ ಮಾನ್ಯ ರಾಮಕೃಷ್ಣಹೆಗಡೆಯವರ ಮಂತ್ರಿಮಂಡಲದಲ್ಲಿ ಬೃಹತ್ ಕೈಗಾರಿಕಾ ಖಾತೆಯ ಮಂತ್ರಿ)

ಪಟೇಲರ ಉತ್ತರ ಮತ್ತು ಸದನದ ಕಲಾಪದ ಸಂಕ್ಷಿಪ್ತ ವರದಿ ಹೀಗಿದೆ:

**ಜೆ.ಹೆಚ್. ಪಟೇಲ್ (ಭಾರಿ ಕೈಗಾರಿಕೆ ಮಂತ್ರಿ)** : ಮಾನ್ಯ ಅಧ್ಯಕ್ಷರೇ... ಮಾನ್ಯ ರಾಜ್ಯಪಾಲರ ಭಾಷಣದ ವಂದನಾ ನಿರ್ಣಯದ ಮೇಲೆ ಸುಮಾರು ಎಂಟು ದಿನಗಳ ದೀರ್ಘ ಚರ್ಚೆ ನಡೆದಿದೆ. ಬಹಳ ಜನರು ಭಾಷಣಕ್ಕೆ ವಂದನೆ ಸಲ್ಲಿಸಿದ್ದಾರೆ. ಕೆಲವರು ಭಾಷಣವನ್ನು ನಿಂದಿಸಿದ್ದಾರೆ. ಇನ್ನು ಕೆಲವರು ಯಾವುದೇ ಅಭಿಪ್ರಾಯ ಹೇಳದೆ ತಟಸ್ಥರಾಗಿ (ನ್ಯೂಟ್ರಲ್) ಇದ್ದಾರೆ. ಸಂತೋಷ.

ವಿರೋಧಪಕ್ಷದ ಸದಸ್ಯರು ರಾಜ್ಯಪಾಲರು ಈ ಸರ್ಕಾರದ ಪರವಾಗಿ ಭಾಷಣ ಮಾಡಿರುವುದಾಗಿ ಹೇಳಿದ್ದಾರೆ. ನಿಜ. ಇದು ರಾಜ್ಯಾಂಗದ ಒಂದು ಸಂಪ್ರದಾಯ. ಅವರ ಮಾತಿನ ಹಿನ್ನೆಲೆ ಏನಿತ್ತೆಂದರೆ ರಾಜ್ಯಪಾಲರು ಇವರಿಗೇ ಸೇರಿದವರು. ರಾಜ್ಯಪಾಲರು ಇವರಿಗೆ ಸೋತುಬಿಟ್ಟಿದ್ದಾರೆ ಎಂದುಕೊಂಡಿದ್ದಾರೆ ಮೊಯಿಲಿಯವರು. ಆದರೆ ವಾಸ್ತವವಾಗಿ ಹೀಗಾಗಲು ಸಾಧ್ಯವಿಲ್ಲ. ಜನತಾಪಕ್ಷವಿರಲಿ, ಕಾಂಗ್ರೆಸ್ ಪಕ್ಷ ಅಧಿಕಾರದಲ್ಲಿರಲಿ, ಕಮ್ಯುನಿಸ್ಟ್ ಪಕ್ಷವಿರಲಿ, ಯಾವ ಪಕ್ಷದ ಸರ್ಕಾರ ಅಧಿಕಾರದಲ್ಲಿರುತ್ತದೆಯೋ ಆ ಸರ್ಕಾರದ ಅನುಭವಗಳನ್ನು, ಆ ಸರ್ಕಾರದ ನೀತಿಯನ್ನು ರಾಜ್ಯಪಾಲರು ಸದನದ ಮುಂದಿಡುವುದು ಸಂವಿಧಾನದ ರೀತಿ.

ಮಾನ್ಯ ರಾಜ್ಯಪಾಲರ ಭಾಷಣದಲ್ಲಿ ಅರ್ಥ ಇಲ್ಲ. ಆದರಲ್ಲಿ ಏನಿದೆ ಎಂದು ಮಾನ್ಯ ಸದಸ್ಯರೊಬ್ಬರು ಹೇಳಿದರು. ಇದಕ್ಕೆ ನನ್ನ ಉತ್ತರ ಇಷ್ಟೇ. ಪ್ರತಿ ವರ್ಷವೂ ರಾಜ್ಯಪಾಲರು ಭಾಷಣ ಮಾಡುವಾಗ ರಾಜ್ಯದಲ್ಲಿ ಸ್ಥಿತಿಗತಿ ಏನು ಎಂಬುದಕ್ಕೆ ಆದ್ಯತೆ ಕೊಡಲಾಗುತ್ತದೆ. ಯಾವುದೇ ವಿಷಯ ಇಲ್ಲವೇ ಸರ್ಕಾರದ ನೀತಿ ನಿರೂಪಣೆ ಮಾಡುವುದಿದ್ದಲ್ಲಿ ಆ ನೀತಿಯ ನಿರೂಪಣೆಯಾಗುತ್ತದೆ.

ನಮ್ಮ ರಾಜ್ಯದ ಬರಗಾಲ ಪರಿಸ್ಥಿತಿಯನ್ನು ರಾಜ್ಯಪಾಲರು ಹೃದಯಸ್ಪರ್ಶಿಯಾಗಿ ಹೇಳಿದ್ದಾರೆ. ಕಳೆದ ವರ್ಷ ಮುಂಗಾರು ಬೆಳೆ ವಿಫಲವಾಗಿತ್ತು. ಹಿಂಗಾರೂ ಅಷ್ಟೇ. ಅದರ ಹಿಂದಿನ ವರ್ಷವೂ ಹೀಗೆಯೇ ಆಗಿದೆ. ಈ ವರ್ಷದ ಸರಾಸರಿ ಮಳೆ ಪ್ರಮಾಣವನ್ನು ರಾಷ್ಟ್ರದ ಭೂಪಟದ ಮೇಲೆ ನೋಡಿದರೆ ಕರ್ನಾಟಕದ ದಾರುಣ ಸ್ಥಿತಿಯ ವಿಷಯ ತಿಳಿಯುತ್ತದೆ. ಈ ಮಾತನ್ನು ಹೇಳದೆ ನಾವು ಇನ್ನೇನನ್ನ ತಾನೇ ಹೇಳಲು ಸಾಧ್ಯ? ಬರಗಾಲ ಇರುವಾಗ, ಜನಕ್ಕೆ ಕೆಲಸ, ದನಕರುಗಳಿಗೆ ಮೇವು ಮತ್ತು ನೀರು ಒದಗಿಸಿರುವ ವಿಷಯಗಳನ್ನು ಪ್ರಸ್ತಾಪ ಮಾಡಲೇಬೇಕಾಗುತ್ತದೆ.

ನನಗೆ ಅರ್ಥವಾಗುವುದಿಲ್ಲ... ಇವರ ವಿಚಾರವೇನು? ನಾಲ್ಕು ವರ್ಷಗಳ ನಂತರ ರಾಜ್ಯಪಾಲರ ಭಾಷಣವನ್ನು ಹಿಡಿದರೆ 1986ನೇ ಇಸವಿಯಲ್ಲಿ ಏನು ಸಮಸ್ಯೆ ಇತ್ತು ಎಂಬುದು

ತಿಳಿಯಲೇಬೇಕು. ಗತಕಾಲದ ವೈಭವವನ್ನೋ, ಮುಂದೆ ಕಾಣಲಾಗದ ಕನಸನ್ನೋ ರಾಜ್ಯಪಾಲರ ಭಾಷಣದಲ್ಲಿ ನಾವು ಹೇಳಿಲ್ಲ. ಇದೊಂದು ಪ್ರಚಲಿತ ಸಾಹಿತ್ಯ. ರಾಜ್ಯಪಾಲರು ಪ್ರಸ್ತುತ ಸ್ಥಿತಿಯನ್ನು ವಿವರಿಸಿದ್ದಾರೆ. ಕೇಂದ್ರ ಸರ್ಕಾರದ ವತಿಯಿಂದ ಮತ್ತು ನಮ್ಮ ಸರ್ಕಾರದ ವತಿಯಿಂದ ನಡೆದಿರುವ ಪರಿಹಾರ ಕಾಮಗಾರಿಗಳ ವಿವರ ಇಲ್ಲಿದೆ. ಇದರೊಂದಿಗೆ ಕಳೆದ ವರ್ಷದ ಭಾಷಣದಲ್ಲಿ ಪ್ರಸ್ತಾಪಿಸಿದ ಯೋಜನೆಗಳ ಆಚರಣೆ ಹೇಗಾಗಿದೆ ಎಂಬುದನ್ನು ತಿಳಿಸಲಾಗಿದೆ.

ವಿದ್ಯಾಭ್ಯಾಸದ ಕೊರತೆ ತುಂಬುವುದು, ಹಸಿರು ಕಾರ್ಡ್ ವಿತರಣೆ, ವಿದ್ಯಾವಿಕಾಸ, ಸಮವಸ್ತ್ರ, ಪಠ್ಯಪುಸ್ತಕ, ರೈತರ ಸಮಸ್ಯೆ, ಅಭಾವ ಪರಿಹಾರ- ಹೀಗೆ ಮುಖ್ಯ ವಿಷಯಗಳ ಪ್ರಸ್ತಾವನೆ ಇಲ್ಲಿದೆ. ನಾವೇನೂ ದೊಡ್ಡದಾಗಿ ಮಾಡಿದ್ದೇವೆಂದು ಅಪಾರವಾಗಿ ಕೊಚ್ಚಿಕೊಳ್ಳುವುದಕ್ಕೆ ಹೋಗದೆ, ಆದಷ್ಟು ಗಂಭೀರವಾಗಿ, ವಿನಯದಿಂದ ಹೇಳಿದ್ದೇವೆ. ಯಾವ ವಿಷಯವೂ ಕಾಣಲಿಲ್ಲ ಎಂದರೆ ಹೇಗೆ?

ಕನ್ನಡಕ್ಕೆ ಹಿಂದೆಂದೂ, ಯಾವ ಸರ್ಕಾರವೂ ಕೊಡದಷ್ಟು ಅಗ್ರಸ್ಥಾನವನ್ನು ನಾವು ಕೊಟ್ಟಿದ್ದೇವೆ. ಹೀಗೆ ಮಾಡಿದ್ದೇ ದೊಡ್ಡ ಉಪಕಾರ ಎಂಬುದು ಇದರ ಅರ್ಥವಲ್ಲ. ಹಿಂದೆ ಯಾರೂ ನಿಭಾಯಿಸದಷ್ಟು ಕರ್ತವ್ಯ ನಿಭಾಯಿಸಿದ್ದು ಕಾಣಲಿಲ್ಲವೇ?

ಇದು ಬರೀ ಬರದ ವರದಿ ಎಂದಿದ್ದಾರೆ. ಇದೊಂದು ರೀತಿಯ ದೃಷ್ಟಿದೋಷ ಎಂದು ನನಗನ್ನಿಸುತ್ತದೆ. ನಿಂದಕರು ಬೇಕು. ನಿಜ. ದಾಸರು ಹೀಗೆ ಹೇಳಿದ್ದಾರೆ: 'ನಿಂದಕರಿರಬೇಕು. ಹಂದಿ ಇದ್ದರೆ ಕೇರಿ ಹೇಗೆ ಶುದ್ಧವೋ ಹಾಂಗೆ ನಿಂದಕರು' ನಿಜವಾಗಿಯೂ ವಾಸ್ತವಿಕ ಸ್ಥಿತಿಯನ್ನು ಅರ್ಥಮಾಡಿಕೊಂಡು ಅದರ ಪ್ರಸ್ತಾಪ ಮಾಡಿದ್ದರೆ ಚೆನ್ನಿತ್ತು.

ನೀವೇನೋ ಲೋಕಾಯುಕ್ತ ರಚನೆ ಮಾಡಿದ್ದೀರಿ. ಕೇವಲ ಲೋಕಾಯುಕ್ತ ಮಾಡಿ ಬಿಟ್ಟರೆ ಆಯಿತೇ? ಇದರಿಂದೇನಾಗುತ್ತೆ ಎಂದಿದ್ದಾರೆ ಕೆಲವರು. ಹೈಕೋರ್ಟ್ ತೀರ್ಮಾನದಿಂದ ನಿಮ್ಮ ಸರ್ಕಾರದ ಇಮೇಜ್ ಬಿದ್ದುಹೋಗಿದೆ ಎಂಬ ಮಾತನಾಡಿದ್ದಾರೆ. ಒಂದು ಉದಾಹರಣೆ ಹೇಳ್ತಿನಿ ಕೇಳಿ. ಬೇಲೂರು, ಹಳೇಬೀಡು ದೇವಸ್ಥಾನಗಳಿಗೆ ಹೋದಾಗ ಅಲ್ಲಿರುವ ಸುಂದರ ಶಿಲ್ಪಗಳು ಒಂದೆಡೆ ಇರುತ್ತವೆ. ಶಿಲ್ಪಿಯೂ ಬುದ್ಧಿವಂತ. ತಾನು ನಿರ್ಮಿಸಿದ ಕಲೆಯ ಸೌಂದರ್ಯ ಅಳಿಸಿ ಹೋಗಬಾರದು ಮತ್ತು ಕೆಟ್ಟ ಕಣ್ಣುಗಳಿಗೆ ಬಿದ್ದು ದೃಷ್ಟಿತಾಕಬಾರದೆಂದು, ಅದೇ ಪರಿಸರದಲ್ಲಿ ವಿಕಾರವಾದ ಮೈಥುನ ಚಿತ್ರಗಳನ್ನು ಸಹಿತ ಕೆತ್ತಿರುತ್ತಾನೆ. ಕೆಲವರಿಗೆ ಇಂತಹ ಚಿತ್ರಗಳೇ ಕಂಡಿರಬಹುದು... ಏನುಮಾಡುವುದುಕ್ಕಾಗುತ್ತೆ?

ಹೈಕೋರ್ಟು ತೀರ್ಮಾನದ ಬಗ್ಗೆ ನಾವು ಒಪ್ಪಿಕೊಂಡಿದ್ದೇವೆ. ಇದನ್ನು ಸರ್ಕಾರ ಒಪ್ಪಿದೆ. ಇದರಲ್ಲಿ ಪ್ರೊಸೀಜರಲ್ ಮಿಸ್ಟೇಕ್ ಆಗಿದೆ ಎಂದು ನಾವು ಒಪ್ಪಿಕೊಂಡಿದ್ದೇವೆ.

ಕೆಲವರು ನಾವು ವಿಶ್ವಕನ್ನಡ ಸಮ್ಮೇಳನವನ್ನು ವ್ಯವಸ್ಥೆಗೊಳಿಸಿದುದರ ಬಗೆಗೆ ಖಾರವಾಗಿ ಮಾತನಾಡಿದ್ದಾರೆ. ಮಾನ್ಯ ಶಿವರಾಮಕಾರಂತರವರಿಗೂ ಉಪದೇಶ ಮಾಡುವ ಪ್ರಯತ್ನ

ಮಾಡಿದ್ದಾರೆ. ಪುಸ್ತಕ ಬರೆದರೆ ಕಿರೀಟ ಬರುವುದಿಲ್ಲವೆಂದು ಅವರ ಸಾಹಿತ್ಯಕ ಕಿರೀಟ ಕಿತ್ತಲು ಹೋಗಿದ್ದಾರೆ. ಕಾರಂತರು ಒಬ್ಬ ಮಹಾವ್ಯಕ್ತಿ. ಚುನಾವಣೆಗೆ ನಿಂತವರು ಮಾತ್ರ ದೊಡ್ಡ ಮನುಷ್ಯರು; ನಿಲ್ಲದವರು ದೊಡ್ಡ ಮನುಷ್ಯ ಅಲ್ಲ ಎಂದು ತಿಳಿದುಕೊಳ್ಳುವುದು ಸರಿಯಲ್ಲ. ಚುನಾವಣೆ ಹವ್ಯಾಸವೇ ಇಲ್ಲದಿದ್ದ ಮಹಾನ್ ರಾಜಕಾರಣಿಗಳು ನಮ್ಮಲ್ಲಿದ್ದಾರೆ. ಸಾಹಿತಿಗಳೂ ಇದ್ದಾರೆ. ಲೋಕನಾಯಕ ಜಯಪ್ರಕಾಶ್ ನಾರಾಯಣ್‌ರವರು ಚುನಾವಣೆಗೆ ನಿಲ್ಲುತ್ತಲೇ ಇರಲಿಲ್ಲ. ಅವರೇನು ದೊಡ್ಡಮನುಷ್ಯರಾಗಲಿಲ್ಲವೇ?

ಇನ್ನು ಥಿಂಕ್ ಟ್ಯಾಂಕ್ ವಿಷಯ. ಕೇಂದ್ರವೂ ಇಂತಹ ಚಿಂತನೆ ಮಾಡಿದೆ. ಯಾರಿಗೆ ಥಿಂಕ್ ಮಾಡುವುದಕ್ಕೆ ಶಕ್ತಿ ಇಲ್ಲವೋ ಅವರಿಗೆ ಈ ಪ್ರಶ್ನೆ ಬರುವುದೇ ಇಲ್ಲ.

ರಾಜ್ಯಪಾಲರು ಏನು ಹೇಳಿದರೂ ಸರ್ಕಾರದ ಭಾಷೆಯಲ್ಲಿಯೇ ಹೇಳುವುದು. ಯಾವುದೇ ರಾಜ್ಯದಲ್ಲಿಯೂ ರಾಜ್ಯಪಾಲರು ಸ್ವತಂತ್ರ ಭಾಷಣ ಮಾಡುವುದಿಲ್ಲ. ಇಲ್ಲಿ ಭ್ರಷ್ಟಾಚಾರದ ಬಗ್ಗೆ, ಲೋಕಾಯುಕ್ತರ ಬಗ್ಗೆ ಮಾತನಾಡಿದ್ದಾರೆ. ಭ್ರಷ್ಟಾಚಾರ ನಿಲ್ಲಬೇಕೆಂದು ಮಾನ್ಯ ಕೆ.ಹೆಚ್. ಶ್ರೀನಿವಾಸ್ ಹೇಳಿದರು. ರಾಜಕೀಯ ಪೈಪೋಟಿ ನಿಲ್ಲಲಿ ಎಂಬುದು ಅವರ ಮಾತಿನ ಅರ್ಥ. ಮೌಲ್ಯಗಳನ್ನು ಎಲ್ಲರೂ ಪಾಲಿಸಬೇಕು ಎಂದು ಸಹಿತ ಹೇಳಿದ್ದಾರೆ. ನಿಜವಾಗಿಯೂ ಇದು ಸ್ವಾಗತಾರ್ಹವಾದ ಮಾತು. ಆದರೆ ಸಮಿತಿಗಳಿಗೆ ಇಂತಿಂತಹವರನ್ನು ನೇಮಿಸಿದ್ದಾರೆ ಎಂದು ಹೇಳಿದರು. ಅದರಲ್ಲಿ ದೋಷವೇನು ಬಂತು. ಮಾನ್ಯ ಬಿ.ಎಲ್. ಗೌಡರು ಈ ಸದನದ ಸದಸ್ಯರಾಗಿದ್ದವರು. ಅವರನ್ನು ಲೋಕಸೇವಾ ಆಯೋಗದ ಅಧ್ಯಕ್ಷರನ್ನಾಗಿ ಮಾಡಲಾಗಿದೆ. ಅವರು ಶಕ್ತರಲ್ಲವೇ? ಅವರಲ್ಲಿ ಶಕ್ತಿ ಇಲ್ಲವೇ?

**ಕೆ.ಹೆಚ್. ಪಾಟೀಲರು:** ಮಾನ್ಯ ಬಿ.ಎಲ್. ಗೌಡರಲ್ಲಿ ದೋಷವಿಲ್ಲ. ಆದರೆ ನಾವು ಕೇಳುತ್ತಿರುವುದು ಗೋರ್ಕಲ್ಲ ಮೇಲೆ ಮಳೆಸುರಿದಂತೆ ಆಗಿದೆ. ನೂರಕ್ಕೆ 90 ರಷ್ಟು ದೋಷವಿರುವ ಜನರ ನೇಮಕವಾಗಿದೆ. ಅವುಗಳನ್ನು ಎತ್ತಿತೋರಿಸುವುದಕ್ಕೆ ನಾವೇಕೆ ಹೋಗೋಣ? ಹೊಡೆಯಲಿ ಚೆಕ್ಕಡಿ. ಕ್ರಿಮಿನಲ್ ಕೇಸು, ಮಿಸ್ ಅಪ್ರೋಪ್ರಿಯನ್ ಕೇಸು- ಹೀಗೆ ಹಲವು ಆರೋಪಗಳಿರುವವರನ್ನು ಕೂಡಾ ಚೇರ್ಮನ್ನರಾಗಿ ನೇಮಿಸಿಲ್ಲವೇ?

**ಜೆ.ಹೆಚ್. ಪಟೇಲ್:** ನಮ್ಮ ಪಕ್ಷದ ಸದಸ್ಯರು ನಮಗೆ ಚೆಂದವಾಗಿ ಕಾಣುತ್ತಾರೆ. ಅವರಿಗೆ ಬೇಕಾಗುವುದಿಲ್ಲ. ಅವರಿಗೆ ಬೇಕಾಗದ, ಅವರ ಪಕ್ಷದವರು ನಮಗೆ ಚೆಂದವಾಗಿ ಕಾಣಿಸುತ್ತಾರೆ. ನಮ್ಮಲ್ಲಿ ಕೆಟ್ಟವರಿದ್ದರೆ ನೀವು ತೋರಿಸಿ. ಈ ವಿಷಯದಲ್ಲಿ ನಾವು ಫ್ರಾಂಕ್ ಆಗಿದ್ದೇವೆ.

**ಕೆ.ಹೆಚ್. ಪಾಟೀಲ್:** ಇದನ್ನು ಒಂದು ಸವಾಲು ಎಂದು ನಾನು ಭಾವಿಸುತ್ತೇನೆ. ಕಾಂಗ್ರೆಸ್ಸಿಗರು ಹಲವಾರು ವರ್ಷ ಆಡಳಿತ ನಡೆಸಿದರು, ಅನೇಕಾನೇಕ ಕೆಟ್ಟಕೆಲಸ ಮಾಡಿದ್ದಾರೆ ಎಂದು ನೀವು ಹೇಳುತ್ತಿದ್ದೀರಿ. ಈಗ ನಿಮಗೇನಾದರೂ ಯೋಗ್ಯತೆ ಮತ್ತು ಸ್ಥೈರ್ಯ ಇದ್ದಲ್ಲಿ ಯಾರು ತಪ್ಪು ಮಾಡಿದ್ದಾರೆ ಅವರನ್ನು ಲೋಕಾಯುಕ್ತಕ್ಕೆ ಒಳಪಡಿಸಿ, ಇಲ್ಲವೇ ವಿಚಾರಣೆ

ಆಯೋಗಗಳಿಗೆ ನೇರವಾಗಿ ವಹಿಸಿ, ಕ್ರಿಮಿನಲ್ ಕೇಸು ಹಾಕಿ. ದೇಶಕ್ಕಾಗಿ ತ್ಯಾಗ ಮಾಡಿದ ಪಕ್ಷ ಕಾಂಗ್ರೆಸ್.. ನೀವು ಆಗಿಂದಾಗ್ಗೆ ಸಭೆಯಲ್ಲಿ ಹೀಗೆ ಮಾತನಾಡಿದರೆ, ಅವಹೇಳನ ಮಾಡಿದಂತೆ ಆಗುತ್ತದೆ.

ಜೆ.ಹೆಚ್. ಪಟೇಲ್: ಮಾನ್ಯ ಕೆ.ಹೆಚ್. ಪಾಟೀಲರ ಮಾತನ್ನು ಮತ್ತು ಅವರ ಭಾವನೆಯನ್ನೂ ನಾನು ಒಪ್ಪುತ್ತೇನೆ.

ರಾಜಕೀಯ ಪೈಪೋಟಿಯಲ್ಲಿ ಇಡೀ ದೇಶ ಕೆಲವು ಮೂಲಭೂತ ಮೌಲ್ಯಗಳನ್ನು ಕಳೆದುಕೊಂಡಿದೆ. ಅಧಿಕಾರ ಸಂಪಾದಿಸುವುದೇ ಮೂಲ ಉದ್ದೇಶವಾಗಿದೆ. ಎಲ್ಲ ಪಕ್ಷಗಳಿಗೂ ಯಾವುದೇ ರೀತಿಯಲ್ಲಾದರೂ ಅಧಿಕಾರಕ್ಕೆ ಬರಬೇಕೆಂಬ ಹಂಬಲವಿರುತ್ತದೆ. ಆಳುವಪಕ್ಷ ಕಾಂಗ್ರೆಸ್ ಇರಬಹುದು, ಜನತಾ ಪಕ್ಷ ಇರಬಹುದು, ಕಮ್ಯುನಿಸ್ಟ್ ಇರಬಹುದು ಅಥವಾ ಅಕಾಲಿ ಇರಬಹುದು. ಅಧಿಕಾರಕ್ಕಾಗಿ ನಾವು ಮೌಲ್ಯಗಳನ್ನು ಬಿಡುವುದು ಸರ್ವಥಾ ಸರಿಯಲ್ಲ.

ಇಂದು ನಮ್ಮ ದೇಶದ ಆರ್ಥಿಕ ನೀತಿಗಳು ಕಾಸ್ಮೋಪಾಲಿಟನ್ ಆರ್ಥಿಕ ನೀತಿಯ ಪ್ರಭಾವಕ್ಕೆ ಒಳಗಾಗಿದೆ. ಬಾಟಾ ಕಂಪನೀನೋನು ಬಂದ, ಚಪ್ಪಲಿ ಹೊಲೆಯುವವನು ಹಾಳಾದ. ಟಾಟಾ ಕಂಪನೀನೋನು ಬಂದ, ಎಣ್ಣೆ ತಯಾರು ಮಾಡುತ್ತಿದ್ದ ಗಾಣಿಗ ಹಳ್ಳಹಿಡಿದ. ಪ್ಲಾಸ್ಟಿಕ್ ಕೊಡ ತಯಾರು ಮಾಡುವ ಕಾರ್ಖಾನೆ ಬಂದ ಮೇಲೆ ಕುಂಬಾರ ನೆಲಕಚ್ಚಿದ. ಭಾರತದ ಎಲ್ಲಾ ವೃತ್ತಿಗಳು ಒಂದಲ್ಲ ಒಂದು ರೀತಿ ನಿರ್ಮೂಲನವಾಗಿವೆ. ಯಾರೂ ಬಂದು ಬುಲ್‌ಡೋಜರ್ ಹೊಡೆದು ಉರುಳಿಸಲಿಲ್ಲ. ಕಾಸ್ಮೋಪಾಲಿಟನ್ ಎಕಾನಮಿಯ ವಿಷವರ್ತುಲ ನಮ್ಮ ಹಳ್ಳಿಗರನ್ನು ಹಳ್ಳಿ ಬಿಟ್ಟು ಡೆಲ್ಲಿ ಸೇರುವಂತೆ ಮಾಡಿದೆ.

ಹಳ್ಳಿಯ ಸಂತೆಗೆ ಹೋಗುವ ಹೆಣ್ಣುಮಕ್ಕಳು ಪ್ಲಾಸ್ಟಿಕ್ ಕೊಡವನ್ನು ಹುಡುಕಿ ಕೊಳ್ಳುತ್ತಾರೆಯೇ ಹೊರತು ಒಡೆದು ಹೋಗುವ ಮಣ್ಣಿನ ಮಡಿಕೆಯನ್ನು ಕೊಳ್ಳಲು ಮುಂದೆ ಬರುತ್ತಿಲ್ಲ. ಐದು ರೂಪಾಯಿಗೆ ಪ್ಲಾಸ್ಟಿಕ್ ಚಪ್ಪಲಿ ಸಿಗಬಹುದಾದಾಗ 15-20 ರೂಪಾಯಿ ಕೊಟ್ಟು ಚರ್ಮದ ಚಪ್ಪಲಿಯನ್ನು ಯಾರೂ ಕೊಳ್ಳುವುದಿಲ್ಲ. ಈ ವಿಶ್ವವ್ಯಾಪಕ ಆರ್ಥಿಕ ವ್ಯವಸ್ಥೆಯಿಂದಾಗಿ ನಮ್ಮ ಗ್ರಾಮಉದ್ಯೋಗ ಮತ್ತು ಗುಡಿಕೈಗಾರಿಕೆಗಳು ನಾಶವಾಗಿ ಹೋಗಿವೆ. ಇದೊಂದು ರೀತಿ ವಿಶ್ವವ್ಯಾಪಾರಿ ನೀತಿಯ ಪಿತೂರಿ.

ಇಡೀ ರಾಷ್ಟ್ರದ ಜನರ ನರನಾಡಿಯ ಸ್ಪಂದನವನ್ನು ಗುರುತಿಸುವ ಶಕ್ತಿಇದ್ದ ದಿವಂಗತ ಜವಾಹರಲಾಲ್ ನೆಹರೂರವರು ಈ ರಾಷ್ಟ್ರದ ಪ್ರಧಾನಿಯಾಗಿದ್ದರು. ಅವರಿಗೆ ಜನಜೀವನದ ಕಷ್ಟಸುಖಗಳನ್ನು ಅರ್ಥಮಾಡಿಕೊಳ್ಳುವ ಶಕ್ತಿ ಇತ್ತು. ಭಾರತದ ನೆಲದ ಮೇಲೆ ಗಟ್ಟಿಯಾಗಿ ನಿಂತು ಯೋಚಿಸುತ್ತಿದ್ದ ನಾಯಕರು ಇವರು. ಆಕಾಶ ನೆಲ ಎರಡನ್ನೂ ನೋಡುವ ಶಕ್ತಿ ಇವರಿಗಿತ್ತು. ನೆಹರೂರವರ ಬಗೆಗೆ ನನಗೆ ಅಪಾರ ಗೌರವ. ಅವರ ಬಗೆಗೆ ವೈಯಕ್ತಿಕವಾಗಿ ನನಗೆ ಭಿನ್ನಾಭಿಪ್ರಾಯವಿಲ್ಲ.

ಇಂದು ಅಮೇರಿಕವಾಗಲೀ ಇಲ್ಲವೇ ರಷ್ಯಾ ಆಗಲಿ ಆಕಾಶದತ್ತ ನೋಡುವ ಶಕ್ತಿಯನ್ನು ಬೆಳೆಸಿಕೊಳ್ಳಲು ಹೇಗೆ ಸಾಧ್ಯವಾಯಿತು ಎಂದರೆ ಅವರು ನೆಲದ ಮೇಲೆ ಮಾಡಬೇಕಾದ ಕೆಲಸವನ್ನು ಪೂರ್ಣವಾಗಿ, ಮೊದಲು ಮಾಡಿದರು. ಹೀಗಾಗಿ ಈ ನೆಲದ ಮೇಲೆ ನಾವು ಮಾಡಬೇಕಾದ ಕೆಲಸ ಇನ್ನೂ ಬಹಳ ಇದೆ.

ಎಂ. ಮಲ್ಲಿಕಾರ್ಜುನ ಖರ್ಗೆ: ಇದಕ್ಕೆಲ್ಲಾ ನಿಮ್ಮ ಸೋಷಲಿಸಂ ಸಿಸ್ಟಮ್ ಕಾರಣ ಎಂಬುದನ್ನು ಮರೆಯಬಾರದು. ಹಳ್ಳಿಗಾಡಿನಲ್ಲಿ ಇವತ್ತು ನಾವೇನು ಕೆಲಸ ಮಾಡುದ್ದೇವೆಂಬುದನ್ನು ತಾವು ನೋಡಬೇಕು. ನೀವು ಅವರನ್ನು ಯಾವ ರೀತಿ ನೋಡುತ್ತೀರಿ ಎಂಬುದು ಮುಖ್ಯ. ತಾವು ಮಾಡಿರತಕ್ಕಂತಹ ಕೆಲಸದಿಂದ ನಮ್ಮ ಹಳ್ಳಿಗಾಡಿನ ಜನರಿಗೆ ನಿಜವಾಗಿಯೂ ಉಪಯೋಗ ಆಗುತ್ತಿದೆಯೇ ಎಂಬುದನ್ನು ತಾವು ನೋಡಬೇಕು.....

ಜೆ.ಹೆಚ್. ಪಟೇಲ್: ಒಬ್ಬ ವ್ಯಕ್ತಿಗೆ ಒಂದು ಜಾತಿ ಎಂದು ಅಂಟಿಸಿದ್ದರಿಂದ ಮತ್ತು ನಮ್ಮಲ್ಲಿ ಜಾತಿ ಪದ್ಧತಿ ಇನ್ನೂ ಇರುವುದರಿಂದ ಇಂದಿನ ಸಮಾಜದಲ್ಲಿ ಇಷ್ಟೊಂದು ಆರ್ಥಿಕ ತೊಂದರೆಗೆ ಕಾರಣವಾಗಿದೆ ಎನ್ನುವ ಮಾತನ್ನೂ ಈ ಸಂದರ್ಭದಲ್ಲಿ ನಾನು ಹೇಳುತ್ತಿದ್ದೇನೆ.

ಕೆ.ಹೆಚ್. ಪಾಟೀಲ್: ಅಧ್ಯಕ್ಷರೇ ಮಾನ್ಯ ಲೋಹಿಯಾರವರ ನೆನಪು ಬರುತ್ತಿದೆ. ಅವರು ಕೇವಲ ಭಾಷಣ ಮಾಡುತ್ತಿದ್ದರೇ ಹೊರತು ಬೇರೆ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ತಾವು ಸ್ವದೇಶಿ ಬಗ್ಗೆ ಹೇಳುತ್ತೀರಿ. ಮಹಾತ್ಮಾಗಾಂಧೀಜಿಯವರ ತತ್ವಗಳ ಬಗ್ಗೆ ಹೇಳುತ್ತಿದ್ದೀರಿ. ಆದರೆ ತಮ್ಮ ಶಿವಮೊಗ್ಗ ಜಿಲ್ಲೆಯಲ್ಲಿ ತಾವು ಮಾಡಿರತಕ್ಕಂತಹ ಕೆಲಸಗಳಾದರೂ ಏನು ಎಂಬುದನ್ನು ಹೇಳುತ್ತೀರಾ?

ಜೆ.ಹಚ್. ಪಟೇಲ್: ತಾವು ಹೇಳುತ್ತಿರುವುದು ಇತ್ತ ಆಬ್ಜೆಕ್ಟೂ ಅಲ್ಲ. ಕಾಂಕ್ರೀಟೂ ಅಲ್ಲ.

ಶ್ರೀಮತಿ ಕೆ.ಎಸ್. ನಾಗರತ್ನಮ್ಮ: ಲೇಸರ್ ಬೀಮ್ಸ್ ಬಂತು. ಎಲೆಕ್ಟ್ರಾನಿಕ್ಸ್ ಬಂತು. ಸ್ಪೇಸ್ ಬಂತು. ಎಲ್ಲಾ ಬಂತು. ಆದರೂ ನಾನು ಕಬ್ಬಳ್ಳಿ (ನಮ್ಮ ಊರು) ಭಾವಿಯಿಂದ ನೀರು ಸೇದಿ, ಮಡಿಕೆಯಲ್ಲೇ ಅಡುಗೆ ಮಾಡುತ್ತಾ ಇರಬೇಕೆಂದು ತಾವು ಹೇಳುತ್ತೀರಾ.. ಹೇಗೆ?

ಜೆ.ಹೆಚ್. ಪಟೇಲ್: ತಾವು ಪ್ರಧಾನ ಮಂತ್ರಿಯಾಗಿದ್ದರೆ?

ಆರ್.ಎಲ್. ಜಾಲಪ್ಪ: ತಾವು ಗ್ರಾಮಾಂತರ ಪ್ರದೇಶಗಳಿಗೆ ಹೋಗಿ ನೋಡಿ, ಊರಿನ ಸುತ್ತಲೂ ವಾಸನೆ ನಾರುತ್ತದೆ. ಹೆಣ್ಣುಮಕ್ಕಳಿಗಾಗಲೀ ಗಂಡಸರಿಗಾಗಲೀ ನಾವು ಇನ್ನೂ ಶೌಚಾಲಯ ಕಲ್ಪಿಸಿಕೊಡಲು ಈವರೆವಿಗೂ ಸಾಧ್ಯವಾಗಿಲ್ಲ. ಅವರಿಗೆ ಶುದ್ಧವಾದ ಕುಡಿಯುವ ನೀರು ಕೊಡುವುದಕ್ಕೆ ಆಗಿಲ್ಲ. ಪುಸ್ತಕಗಳನ್ನು ಕೊಡಲು ಸಾಧ್ಯವಾಗಿಲ್ಲ. ಆದರೂ ನಾವು ಆಕಾಶಕ್ಕೆ ಹೋಗಬೇಕು ಎಂದು ಸಲಹೆ ಕೊಡುತ್ತಿದ್ದೀರಿ.

ಶ್ರೀಮತಿ ಕೆ.ಎಸ್. ನಾಗರತ್ನಮ್ಮ: ಒಂದೊಂದು ಊರಲ್ಲೂ 10-10 ಬಾರ್‌ಗಳನ್ನು ತೆಗೆಯೋದಕ್ಕೆ, 10-10 ರೆಸ್ಟೋರೆಂಟ್ ತೆಗೆಯುವುದಕ್ಕೆ ಆಗುತ್ತೇ.. ಮಾನ್ಯ ಅಧ್ಯಕ್ಷರೇ, ನಾನು ಇನ್ನು ಏನೇನೋ ಹೇಳಬೇಕಾಗುತ್ತೆ, ಚೆನ್ನಾಗಿರೋಲ್ಲ.

ಉಪಾಧ್ಯಕ್ಷರು: ಮಾನ್ಯ ಸಚಿವರು ಉತ್ತರಕೊಟ್ಟ ಮೇಲೆ ನೀವು ಮಾತನಾಡಿ.

ಶ್ರೀಮತಿ ನಾಗರತ್ನಮ್ಮ: ನಾನು ಆಕಾಶಕ್ಕೆ ಹೋಗುವುದಿಲ್ಲ. ಆದರೆ ಅವರು ಊರು ಬಿಟ್ಟು ಬಂದಿದ್ದರಿಂದ ಹೀಗಾಯಿತು.

(ಗೊಂದಲ)

ಎಂ. ರಾಮಪ್ಪ: ಮಾನ್ಯ ಜಾಲಪ್ಪನವರು ಮಾತ್ರ ಹಳ್ಳಿಯಲ್ಲಿದ್ದಾರೆ. ನಾವು ಮಾತ್ರ ಪಟ್ಟಣದಲ್ಲಿದ್ದೇವೆಯೋ?

ಬಿ.ಎ. ಉಮರಬ್ಬ: ಮಾನ್ಯ ಜಾಲಪ್ಪನವರು ತಮ್ಮ ಕಾಲದ ಇತಿಹಾಸವನ್ನೇ ಇನ್ನೂ ಹೇಳುತ್ತಿದ್ದಾರೆ.

ಜೆ.ಹೆಚ್. ಪಟೇಲ್: ಕೆಲವು ಸೈದ್ಧಾಂತಿಕ ವಿಚಾರಗಳ ಭಿನ್ನಾಭಿಪ್ರಾಯದ ಬಗ್ಗೆ ನಾನು ಹೇಳುತ್ತಾ ಇದ್ದೆ. ಲೋಹಿಯಾರವರ ಬಗೆಗೆ ಮಾನ್ಯ ಕೆ.ಹೆಚ್. ಪಾಟೀಲ್‌ರವರು ಮಾಡಿದ ಟೀಕೆ ಸರಿಯಿಲ್ಲ. ಲೋಹಿಯಾರವರು ಕೇವಲ ಭಾಷಣ ಮಾಡುತ್ತಿದ್ದರೇ ಹೊರತು ಯಾವ ಕೆಲಸವನ್ನೂ ಮಾಡಿಲ್ಲ ಎಂಬ ಮಾತು ಅನ್‌ಚಾರಿಟಬಲ್ ಆಗಿತ್ತು.

ಕೆ.ಹೆಚ್. ಪಾಟೀಲ್: ಮಾನ್ಯ ಲೋಹಿಯಾರವರು ತಮ್ಮ ಕ್ಷೇತ್ರದಲ್ಲಿ ಏನು ಕೆಲಸ ಮಾಡಿದ್ದಾರೆಂಬುದನ್ನು ನಾನು ಹೋಗಿ ನೋಡಿಕೊಂಡು ಬಂದಿದ್ದೇನೆ. ಅದೇ ರೀತಿ ನೀವು ಇಲ್ಲಿ ಮಾತನಾಡುತ್ತಿದ್ದೀರೇ ಹೊರತು ಕಾರ್ಯತಃ ಏನು ಮಾಡಿದ್ದೀರಿ?

ಜೆ.ಹೆಚ್. ಪಟೇಲ್: ನೀವು ಕೇವಲ ಮಾತನಾಡುತ್ತಿದ್ದಾಗ ನಾನು ಕೆಲಸ ಮಾಡಿದವನು ಸ್ವಾಮಿ. 1977ರವರೆವಿಗೂ ಜನತಾಪಕ್ಷದವರು ಒಂದೇ ಒಂದು ಮಾತನ್ನೂ ಆಡಲು ನೀವು ಅವಕಾಶಕೊಟ್ಟಿರಲಿಲ್ಲ. ಇದನ್ನು ಏಕೆ ಹೇಳಬೇಕು ಎಂದರೆ ನಮಗೆ ಮತ್ತು ಬೇರೆಯವರಿಗೆ ನೀವು ಅವಕಾಶವನ್ನೇ ಕೊಟ್ಟಿರಲಿಲ್ಲ. ನೀವು ಮಾಡಿದ್ದನ್ನು ನಾವೂ, ನಾವು ಮಾಡಿದ್ದನ್ನು ನೀವೂ ಹೇಳಲೇ ಬೇಕಾಗುತ್ತದೆ.

ನಾವು ಅಧಿಕಾರವನ್ನು ವಹಿಸಿಕೊಂಡ ಮೇಲೆ ಎರಡು ಪ್ರಮುಖ ಕ್ಷೇತ್ರಗಳಿಗೆ ವಿಶೇಷ ಗಮನ ನೀಡಿದ್ದೇವೆ. ವಿಶ್ವಕಲ್ಯಾಣದ ಆರ್ಥಿಕ ಚಿಂತನೆ ನಮ್ಮದು. ಮೊದಲನೆಯದು ಮೂಲತಃ ಆರ್ಥಿಕ ಸುಧಾರಣೆ ದೃಷ್ಟಿಯಿಂದ ನೀರಾವರಿ ಮತ್ತು ವಿದ್ಯುತ್ ಕ್ಷೇತ್ರಕ್ಕೆ ಆದ್ಯತೆ ಕೊಟ್ಟಿದ್ದೇವೆ. ಎರಡನೆಯದು ಬಡತನವನ್ನು ಕಡಿಮೆ ಮಾಡಲು ಏನು ಸಾಧ್ಯವೋ ಅದನ್ನು ಮಾಡುತ್ತಿದ್ದೇವೆ.

ಶ್ರೀಮತಿ ಇಂದಿರಾಗಾಂಧಿಯವರ 20 ಅಂಶದ ಕಾರ್ಯಕ್ರಮಗಳ ಹಿನ್ನೆಲೆಯನ್ನು ಅರಿತುಕೊಂಡು ಬಡತನ ನಿರ್ಮೂಲನಕ್ಕೆ ಪ್ರಯತ್ನ ಮುಂದುವರೆಸಿದ್ದೇವೆ.

ಮಾನ್ಯ ಸದಸ್ಯರು ಭ್ರಷ್ಟಾಚಾರದ ವಿಷಯದಲ್ಲಿ ಒಂದು ಮಾತು ಹೇಳಿದರು. ಶ್ರೀಮತಿ ಇಂದಿರಾಗಾಂಧಿಯವರು ಕೂಡ ಭ್ರಷ್ಟಾಚಾರದ ಬಗ್ಗೆ ಮಾತನಾಡಿ " It is a world-wide phenomenon, it is as universal phenomenon " ಎಂದು ಹೇಳಿದ್ದಾರೆ. ಎಂದರೆ ಇದು ಸರ್ವಾಂತರ್ಯಾಮಿ. ಇದು ಎಲ್ಲಾ ಕಡೆಯಲ್ಲಿಯೂ ಇದೆ ಎಂದು ಶ್ರೀಮತಿ ಇಂದಿರಾಜಿಯವರೇ ಹೇಳಿದ್ದರು.

**ಕೆ.ಹೆಚ್. ಪಾಟೀಲ್:** ಮಾನ್ಯ ಅಧ್ಯಕ್ಷರೇ, ಶ್ರೀಮತಿ ಇಂದಿರಾಗಾಂಧಿಯವರು ಹುತಾತ್ಮರಾದ ಬಳಿಕವಷ್ಟೇ ಪಟೇಲರು ಇಂದಿರಾಜಿಯವರ ಮಾತನ್ನು ಒಪ್ಪುತ್ತಿರುವಂತೆ ಭಾಸವಾಗುತ್ತಿದೆ.

**ಜೆ.ಹೆಚ್. ಪಟೇಲ್:** ಇಡೀ ಒಂದು ರಾಷ್ಟ್ರದ ಆಡಳಿತ ಸೂತ್ರವನ್ನು ಹಿಡಿದಂತಹ ಪ್ರಧಾನಮಂತ್ರಿಯವರೇ ಭ್ರಷ್ಟಾಚಾರ ಎಲ್ಲ ಕಡೆಯೂ ಇದೆ; ಅದು ಸರ್ವಾಂತರ್ಯಾಮಿ ಎಂದು ಹೇಳುವುದಾದರೆ ತಾಲ್ಲೂಕು ಕಛೇರಿಯ ಗುಮಾಸ್ತ, 5 ರೂಪಾಯಿ ಕೇಳುವವನು 10 ರೂಪಾಯಿ ಕೇಳಿದರೆ ಅದು ತಪ್ಪೆ? ಇವತ್ತು ರಾಷ್ಟ್ರದಲ್ಲಿ ನಾವು ಯಾವ ರೀತಿಯ ವಾತಾವರಣವನ್ನು ಸೃಷ್ಟಿ ಮಾಡುತ್ತಿದ್ದೇವೆ ಎಂಬುದರ ಮೇಲೆ ರಾಷ್ಟ್ರದ ಭವಿಷ್ಯ ಅವಲಂಬಿತವಾಗಿದೆ. ಬೇರೆ ರಾಷ್ಟ್ರಗಳಲ್ಲಿರುವ ಭ್ರಷ್ಟಾಚಾರಕ್ಕೂ ನಮ್ಮ ರಾಷ್ಟ್ರದಲ್ಲಿರುವ ಭ್ರಷ್ಟಾಚಾರಕ್ಕೂ ಹೋಲಿಕೆ ಮಾಡಿ ನೋಡಿದರೆ, ಅದು ಸರ್ವಾಂತರ್ಯಾಮಿ ಎನ್ನುವುದು ಖಚಿತವಾಗುತ್ತದೆ.

(ಗೊಂದಲ)

**ಬಿ.ಎ. ಉಮರಬ್ಬ:** ರಾಷ್ಟ್ರ ಅಥವಾ ರಾಜ್ಯದ ಆರ್ಥಿಕ ನೀತಿ ಹೇಗಿರಬೇಕು ಎಂಬ ಬಗ್ಗೆ ಒಂದು ದಿನದ ಚರ್ಚೆಯನ್ನು ಏರ್ಪಡಿಸಿದರೆ ಆಗ ಪಟೇಲರು ಮಾತನಾಡಲಿ. ನಾವು ಮಾತನಾಡುತ್ತೇವೆ. ಸುಮ್ಮನೆ ಇವತ್ತ್ಯಾಕೆ?

**ಅಧ್ಯಕ್ಷರು:** ತಾವು ದಯವಿಟ್ಟು ಕುಳಿತುಕೊಳ್ಳಿ. ಅವರು ಮಾತನಾಡಿದುದನ್ನು ಗುರುತು ಹಾಕಿಕೊಳ್ಳಿ. ನಂತರ ಮಾತನಾಡಿ.

(ಗೊಂದಲ)

**ಜಿ. ನಾರಾಯಣಕುಮಾರ್:** ಮಾನ್ಯ ಉಮರಬ್ಬರ ಹತ್ತಿರ ಪಟೇಲರೇನು ಅರ್ಥಶಾಸ್ತ್ರ ಕಲಿಯಬೇಕಾಗಿಲ್ಲ. ಮಾನ್ಯ ಪಟೇಲರಿಗಾಗಿರುವ ಅನುಭವದಷ್ಟು ವಯಸ್ಸು ನಿಮಗಾಗಿಲ್ಲ.

**ಜೆ.ಹೆಚ್. ಪಟೇಲ್:** ಆರೋಪಣೆಗೂ ಒಂದು ಇತಿ ಮಿತಿ ಇದೆ. ಅದೇ ರೀತಿ ವಿಚಾರಣೆಗೆ ಆಜ್ಞೆ ಮಾಡುವುದಕ್ಕೂ ಒಂದು ಮಿತಿ ಇದೆ. ಇದರಲ್ಲಿ ನಿಮ್ಮ ಪಾರ್ಟಿ, ನಮ್ಮ ಪಾರ್ಟಿ ಅಂತ

ಅಲ್ಲ. ಮಾನ್ಯ ಬಂಗಾರಪ್ಪನವರು ಹೆಗಡೆಯವರ ತಮ್ಮ ಅಕ್ಕಿಸಾಗಿಸುತ್ತಿದ್ದಾರೆ ಎಂದರೆ ಅದಕ್ಕೆ ನ್ಯಾಯಾಂಗ ತನಿಖೆ; ನನ್ನ ಮಗ ಲಿಕ್ಕರ್ ಟ್ರೇಡ್ ಮಾಡುತ್ತಿದ್ದಾನೆಂದರೆ ಅದಕ್ಕೊಂದು ಜುಡೀಷಿಯಲ್ ಎನ್‌ಕ್ವೈರಿ. ಮೆಡಿಕಲ್ ಆಗಿದ್ದರೆ ಅದಕ್ಕೂ ನ್ಯಾಯಾಂಗ ತನಿಖೆ. ಹೀಗೆ ಆರೋಪಣೆ ಮಾಡುವುದಕ್ಕೂ, ತನಿಖೆ ಕೇಳುವುದಕ್ಕೂ ಇತಿಮಿತಿ ಇಲ್ಲದ ಹಾಗಾಗಿದೆ.

ಕೆ.ಹೆಚ್. ಪಾಟೀಲ್: ಮಾನ್ಯ ಹೆಗಡೆಯವರ ಮಗನ ಬಗ್ಗೆ ಜುಡೀಷಿಯಲ್ ಎನ್‌ಕ್ವಾಯಿರಿ ಮಾಡಿಸಿ ಎಂದು ಕೇಳುವುದರಲ್ಲಿ ತಪ್ಪೇನು? He is governed under the law of the land, he may be innocent. ಹಾಗಾದರೆ ಬೊಮ್ಮಾಯಿಯವರ ಮೇಲೆ ಏಕೆ ಮಾಡಿಸಲಿಲ್ಲ? ನೀವು ಮಾಡಿದ್ದೆಲ್ಲವನ್ನು ನಮ್ಮ ಮೇಲೆ ಹಾಕುವುದಕ್ಕೆ ಹೋಗಬೇಡಿ.

ಜೆ.ಹೆಚ್. ಪಟೇಲ್: ನಾನು ದೋಷಾರೋಪಣೆ ಮಾಡುತ್ತಿಲ್ಲ. ನಾವು ನೀವು ಪರಸ್ಪರ ಸಹಕಾರದಿಂದ ಕೆಲಸ ಮಾಡಿಕೊಂಡು ಹೋಗಬೇಕಾಗುತ್ತದೆ. ನೀವು ಎಲ್ಲಕ್ಕೂ ರಾಜೀನಾಮೆ ಕೇಳುತ್ತಾ ಕುಳಿತರೆ ಹೇಗೆ? ನಾವು ಕೊಡೋದಿಲ್ಲ ನಿಮಗೆ ಗೊತ್ತಿದೆ.

ಎಂ. ಮಲ್ಲಿಕಾರ್ಜುನ ಖರ್ಗೆ: ಇವರು ಅನೇಕ ಸಲ ರಾಜೀನಾಮೆ ಕೊಡಲು ತಯಾರಾಗಿದ್ದೇವೆ ಎಂದು ಹೇಳಿದ್ದಾರೆ. ಯಾವುದೇ ಪ್ರಕರಣ ಸಾಬೀತಾದರೂ ಕೊಡುತ್ತೇವೆಂದು ಹೇಳಿದ್ದಾರೆ. ಈಗಲೇ ಬೇಕಾದಲ್ಲಿ ಮುಖ್ಯಮಂತ್ರಿಯವರು ರಾಜೀನಾಮೆ ಬರೆದು ಕೊಡುತ್ತೇವೆಂದು ಹೇಳಿದ್ದೂ ಸಹಿತ ಉಂಟು. ಆದರೆ ಈ ಬಾಟ್ಲಿಂಗ್ ಪ್ರಕರಣದಲ್ಲಿ ಹೈಕೋರ್ಟಿನ ತೀರ್ಪನ್ನು ಆಧರಿಸಿ ರಾಜೀನಾಮೆ ಕೊಡಿ ಅಂದಾಗ ಮಾತ್ರ ಇಲ್ಲ ಅಂತಿದ್ದಾರೆ.

ಹೆಚ್.ಡಿ. ದೇವೇಗೌಡ: ನಾವಿಬ್ಬರೂ ಸಹ ಈ ಹಿಂದೆ ರಾಜೀನಾಮೆ ಕೊಟ್ಟು ತೋರಿಸಿದ್ದೇವೆ.

ಮಲ್ಲಾರಿಗೌಡ ಎನ್. ಪಾಟೀಲ್: ಅದನ್ನು ಒಪ್ಪುತ್ತೇವೆ. ಈಗಲೂ ಅದನ್ನೇ ಮಾಡಿ ತೋರಿಸಿ?

ಜೆ.ಹೆಚ್. ಪಟೇಲ್: ರಾಜೀನಾಮೆ ಕೊಡುವ ಸಂದರ್ಭ ಬಂದರೆ ಅದಕ್ಕೆ ನಾವು ಹಿಂಜರಿಯುವುದಿಲ್ಲ. ರಾಜೀನಾಮೆಯನ್ನು ಯಾವಾಗ ಕೊಡಬೇಕು ಎಂಬುದು ನಮಗೆ ಗೊತ್ತಿದೆ. ಅಂತಹ ತಪ್ಪು ಏನಾದರೂ ಮಾಡಿದ್ದೇವೆ ಎಂದು ನಮ್ಮ ಮನಸ್ಸಿಗೆ ಬಂದರೆ ನೀವು ಕೇಳುವುದಕ್ಕೆ ಮೊದಲೇ ರಾಜೀನಾಮೆ ಕೊಡುತ್ತೇವೆ.

ಹೆಚ್.ಡಿ. ದೇವೆಗೌಡ: ನಮ್ಮ ಕೆಲಸವನ್ನು ಹಗುರ ಮಾಡುವುದಕ್ಕೆ ವಿರೋಧಪಕ್ಷದವರು ಪ್ರಯತ್ನ ಮಾಡಿದ್ದಾರೆ. ಅಷ್ಟಾದರೂ ಮಾಡದಿದ್ದರೆ ಅವರು ಆ ಕಡೆ ಕುಳಿತು ಏನು ಮಾಡಬೇಕು?

ಜೆ.ಹೆಚ್. ಪಟೇಲ್: ಪ್ರತಿ ಸಲ ನೀವು ಕೇಳಿದಾಗಲೂ ನಾವು ರಾಜೀನಾಮೆ ಕೊಡುವಂತಹ ಕೆಲಸ ಆಗಬಾರದು. ಅಂತಹ ಸಂದರ್ಭ ಬಂದರೆ ನಾವೇ ಕೊಡುತ್ತೇವೆ.

ಬಿ.ಎಸ್. ಯಡಿಯೂರಪ್ಪ: ಬಾಟ್ಲಿಂಗ್ ಪ್ರಕರಣದಲ್ಲಿ ರಾಜೀನಾಮೆ ಕೊಡಿ ಎಂದು ನಾವು ಕೇಳುತ್ತಿದ್ದೇವೆ.

ಕೆ.ಹೆಚ್. ಪಾಟೀಲ್: ಮಾನ್ಯ ಅಧ್ಯಕ್ಷರೇ, ತಮಗೆ ತಿಳಿದಂತೆ ಮಾನ್ಯ ಜೆ.ಹೆಚ್. ಪಟೇಲರು ಸುಂದರವಾದ, ವಿಚಾರಪೂರ್ಣವಾದ ಮತ್ತು ಸಾಹಿತ್ಯ ತುಂಬಿದ ಭಾಷಣವನ್ನು ಮಾಡಿದ್ದಾರೆ. ಆದರೆ ಇವರ ಭಾಷಣಕ್ಕೂ, ನಾವು ರಾಜ್ಯಪಾಲರ ಭಾಷಣದ ಮೇಲೆ ಮಾಡಿದ ಟೀಕೆಗೂ ಯಾವ ಸಂಬಂಧವೂ ಇಲ್ಲ.

ಪಟಮಕ್ಕಿ ರತ್ನಾಕರ್: ಮಾನ್ಯ ಅಧ್ಯಕ್ಷರೇ, ಜೆ.ಹೆಚ್. ಪಟೇಲರು ಒಬ್ಬ ಪ್ರಾಮಾಣಿಕ ಸಮಾಜವಾದಿಗಳು. ಜನರ ಬಗ್ಗೆ ಅತ್ಯಂತ ಕಳಕಳಿ ಉಳ್ಳವರು. ಜನಾನುರಾಗಿಯೂ ಹೌದು. ಇಂತಹವರು ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಸಮಾಜವಾದಿ ಸಿದ್ಧಾಂತವನ್ನು ಹೇಗೆ ಜಾರಿಗೆ ತರುತ್ತಾರೆ ಎಂಬುದನ್ನು ನಾವು ಎದುರು ನೋಡುತ್ತಿದ್ದೆವು. ಸರ್ಕಾರ ಯಾವ ಕಾರ್ಯಕ್ರಮವನ್ನೂ ಇಟ್ಟಂತೆ ಕಾಣಲಿಲ್ಲ. ಉತ್ತರ ಕುಮಾರರನ್ನು ರಣರಂಗಕ್ಕೆ ಕಳುಹಿಸಿ ಸರ್ಕಾರ ಪಲಾಯನ ಮಾಡಿದಂತಾಗಿದೆ.

ಜೆ.ಹೆಚ್. ಪಟೇಲ್: ಮಾನ್ಯ ಪಟಮಕ್ಕಿ ರತ್ನಾಕರರು ಹೇಳುತ್ತಿರುವ ವಿಚಾರ ಸರಣಿ ಸರಿಯಾದ ಮಾರ್ಗದಲ್ಲಿಲ್ಲ. ಸರ್ಕಾರದ ಕಾರ್ಯಕ್ರಮಗಳನ್ನು ಸಾಕಷ್ಟು ವಿವರಿಸಿದ್ದೇನೆ. ಯಾವ ಯಾವ ಸದಸ್ಯರು ಏನು ಕೇಳಿದ್ದಾರೆ ಎಲ್ಲಕ್ಕೂ ಉತ್ತರ ಹೇಳಿದ್ದಾಗಿದೆ. ಉಳಿದಂತೆ ನಮ್ಮಲ್ಲಿ ಸೈದ್ಧಾಂತಿಕ ವ್ಯತ್ಯಾಸಗಳಿವೆ.

ಎಂ. ಮಲ್ಲಿಕಾರ್ಜುನ ಖರ್ಗೆ: ಬರೀ ಭಾಷಣ ಮಾಡಿದರೆ ರಾಜ್ಯಪಾಲರ ಭಾಷಣಕ್ಕೆ ಉತ್ತರವಾಗಲಿಲ್ಲ.

ಜೆ.ಹೆಚ್. ಪಟೇಲ್: ಸಂಸದೀಯ ವ್ಯವಹಾರದಲ್ಲಿ ಎಲ್ಲ ಮಾತಿಗೂ ಉತ್ತರ ಹೇಳಲು ಬರುವುದಿಲ್ಲ. ರಾಜ್ಯಪಾಲರ ಭಾಷಣದಲ್ಲಂತೂ ಇದಕ್ಕಿಂತ ಹೆಚ್ಚು ವಿವರ ಹೇಳಲು ಆಗುವುದಿಲ್ಲ. ಇನ್ನೂ ವಿವಿಧ ಇಲಾಖೆಗಳ ಮೇಲಿನ ಬೇಡಿಕೆಯ ಚರ್ಚೆ ಬರುತ್ತದೆ. ಆಗ ಮಾನ್ಯ ಸದಸ್ಯರುಗಳು ನಿರ್ದಿಷ್ಟ ಇಲಾಖೆಯ ಕಾರ್ಯಯೋಜನೆ ಕುರಿತು ಕೂಲಂಕುಷವಾಗಿ ಚರ್ಚಿಸಬಹುದು.

ಆರ್.ಎನ್. ನಾಯಕ್: ನಿವೃತ್ತಿಯ ವಯಸ್ಸನ್ನು 58ಕ್ಕೆ ಹೆಚ್ಚಿಸುವ ಮೂಲಕ ಹೊಸಬರಿಗೆ ಉದ್ಯೋಗ ಅವಕಾಶ ತಪ್ಪಿಸಿದ್ದೀರಿ. ಚಾಕಚಕ್ಯತೆಯಿಂದ ಉತ್ತರ ಕೊಡುವ ನಮ್ಮ ಮಂತ್ರಿಗಳು ಇದಕ್ಕೇನನ್ನುತ್ತಾರೆ?

ಜೆ.ಹೆಚ್. ಪಟೇಲ್: ನಿವೃತ್ತಿ ವಯಸ್ಸನ್ನು ಏರಿಸಿದ ಮಾತ್ರಕ್ಕೆ ಉದ್ಯೋಗಾವಕಾಶ ಕಡಿಮೆ ಆಗಿದೆ ಎಂದು ಹೇಳುವುದು ಸರಿಯಲ್ಲ. ಇದಕ್ಕೆ ಪೂರಕವಾದಗಳೂ ಇದೆ. ಇದರ ವಿಮರ್ಶೆ ಇಲ್ಲಿ ಮಾಡಿಲ್ಲ.

ಬಿ.ಎಂ. ಇದಿನಬ್ಬ: ಮಾನ್ಯ ಅಧ್ಯಕ್ಷರೇ, ಮಾನ್ಯ ಹಿರಿಯ ಸಚಿವರಾದ ಪಟೇಲರು ಅನೇಕ ದಂತ ಕಥೆ, ಉಪಕಥೆ ಸೇರಿಸಿ ಅತ್ಯುತ್ತಮ ರೀತಿ ಉತ್ತರಕೊಟ್ಟಿದ್ದಾರೆ. ಆದರೂ ಅನೇಕರ ವಿಚಾರಗಳಿಗೆ ಉತ್ತರ ಬಂದಿಲ್ಲ.

ಜೆ.ಹೆಚ್. ಪಟೇಲ್: ತಾವು ಸಹಿತ ಚರ್ಚೆಯಲ್ಲಿ ಮಾತನಾಡುವಾಗ ಕವನವನ್ನು ಓದಿದಿರಿ. ನಾನು ಬಹಳ ಸಂತೋಷಪಟ್ಟೆ. ತಮ್ಮ ಕನ್ನಡ ಭಾಷೆ ನಿಜವಾಗಿಯೂ ನನಗೆ ಹೆಮ್ಮೆ ಎನಿಸಿತು. ಅದೇ ರೀತಿ ಮಾನ್ಯ ಉಮರಬ್ಬನವರ ಭಾಷಣದ ವಿವರ ಪತ್ರಿಕೆಯಲ್ಲಿ ಬಂದಿರುವುದನ್ನು ಓದಿ ನನಗೆ ಸಂತೋಷವಾಯಿತು.

ಜಿ. ನಾರಾಯಣಕುಮಾರ್: ಮಾನ್ಯ ಅಧ್ಯಕ್ಷರೇ, ಈ ಸಂದರ್ಭದಲ್ಲಿ ನಿನ್ನೆ ಮಾನ್ಯ ಬಸವಲಿಂಗಪ್ಪನವರು ಕನ್ನಡ ಪುಸ್ತಕವೊಂದನ್ನು ಹರಿದುಹಾಕಿದುದ್ದನ್ನು ಪ್ರಸ್ತಾಪಿಸಿದ್ದೇವೆ. ಒಮ್ಮೆ 'ಬೂಸಾ' ಎಂದು ಹೇಳಿ ಇವರು ಸ್ಥಾನ ಕಳೆದುಕೊಂಡರು.....

ಅಧ್ಯಕ್ಷರು: ಹೀಗೆ ಮಾತನಾಡುವುದು ಸರಿಯಲ್ಲ. ಮುಂದೇನೂ ಹೇಳಬೇಡಿ, ದಾಖಲೆಯಾಗುವುದಿಲ್ಲ.

ಬಿ. ಬಸವಲಿಂಗಪ್ಪ: ಮಾನ್ಯ ನಾರಾಯಣಕುಮಾರರಿಗೆ ಇರುವ ಕನ್ನಡ ಪ್ರೇಮವನ್ನು ನಾನು ಮೆಚ್ಚುತ್ತೇನೆ. ಅವರ ಬಗೆಗೆ ನಾನು ತಪ್ಪು ತಿಳಿದುಕೊಳ್ಳುವುದಿಲ್ಲ. ಸಾಹಿತ್ಯವನ್ನು 'ಬೂಸಾ' ಎಂದು ಹೇಳಿ ಅಧಿಕಾರ ಕಳೆದುಕೊಂಡರು ಎಂದು ಹೇಳಿದರು. ಚಿಂತಿಲ್ಲ.. ಸತ್ಯಕ್ಕೋಸ್ಕರ, ನೀತಿಗೋಸ್ಕರ ಅಧಿಕಾರ ಕಳೆದುಕೊಂಡಿದ್ದೇನೆ. ಬೂಸಾ ಸಾಹಿತ್ಯ ಬರೆದು, ಜನಗಳಲ್ಲಿರುವ ಬುದ್ದಿಯನ್ನು ಅಪಹರಿಸಿಬಿಟ್ಟು, ಸುಖವಾಗಿ ತಿಂದು, ತೇಗಿ, ಕೊಬ್ಬು ಬೆಳೆಸಿಕೊಂಡು, ಸಮಾಜದಲ್ಲಿ ಬೆಳೆಯುತ್ತಿದ್ದಾರಲ್ಲಾ ಅಂತಹವರನ್ನು ನಾನು ಬಿಡುವುದಿಲ್ಲ.

ಸನ್ಮಾನ್ಯ ಅಧ್ಯಕ್ಷರೇ, ಪುನಃ ನಾನು ಹೇಳುತ್ತೇನೆ. ಕೆಲವು ಜನ ಬೂಸಾ ಸಾಹಿತ್ಯ ಬರೆದು ಕೊಬ್ಬು ಬೆಳೆಸಿಕೊಂಡು ಸಮಾಜದಲ್ಲಿದ್ದಾರೆ. ಸಾಹಿತ್ಯ ಹೇಗಿರಬೇಕೆಂಬುದನ್ನು ನನಗೆ ತಿಳಿದಂತೆ ಹೇಳಿದ್ದೇನೆ. ಸಾಹಿತ್ಯದಿಂದ ಸಾಮಾಜಿಕ ಬದಲಾವಣೆಯಾಗಬೇಕು. ಜಾತೀಯ ಭಾವನೆ ಹೋಗಬೇಕು. ಎಲ್ಲರೂ ಅಣ್ಣ ತಮ್ಮಂದಿರಂತೆ ಬೆಳೆಯುವ ವಿಶಾಲ ದೃಷ್ಟಿಯ ಸಮಾಜ ರಚನೆಯಾಗಬೇಕು.

ಇದು ಬಿಟ್ಟು ಜಾತಿ ಭೇಧ, ಮೇಲು ಕೀಳು ಎಂದು ಹೇಳುವುದಿದೆಯಲ್ಲಾ ಅದೇ ಬೂಸಾ ಸಾಹಿತ್ಯ. ಇದನ್ನು ಸಾವಿರ ಸರ್ತಿ ಹೇಳುತ್ತೇನೆ. ಉತ್ತಮ ಚಿಂತನೆಯ ಸಾಹಿತ್ಯಬೇಕು ಎಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು. ಕನ್ನಡ ಭಾಷೆಗೆ ಎಂದೂ ನನ್ನ ವಿರೋಧವಿಲ್ಲ. ಕನ್ನಡ ಸಾಹಿತ್ಯಕ್ಕೆ ನನ್ನ ವಿರೋಧವಿಲ್ಲ. ನಾನೂ ಕನ್ನಡದವನು. ಸಮಾಜವನ್ನು ಹಾಳುಮಾಡುವ ವಿಷಯಗಳ ಸಾಹಿತ್ಯವೇನಿದೆ ಅದೇ ಬೂಸಾ ಸಾಹಿತ್ಯ. ಅದರ ಮೇಲೆ ನನ್ನ ಕಣ್ಣು.

ವೈ.ಕೆ. ರಾಮಯ್ಯ: ಮಾನ್ಯ ಬಸವಲಿಂಗಪ್ಪನವರಿಗೆ ನೆಮ್ಮದಿ ತರುವಂತಹ ಒಂದು ಮಾತನ್ನು ಅವರ ಗಮನಕ್ಕೆ ತರುತ್ತೇನೆ. ನಿಮ್ಮ ಅಭಿಪ್ರಾಯವನ್ನು ಸತ್ಯವೆಂದು ಒಪ್ಪಿಕೊಂಡವರು ನಮ್ಮಲ್ಲಿ ಬಹಳ ಜನರಿದ್ದೇವೆ. ಹೀಗಾಗಿ ತಾವು ಅಧಿಕಾರ ಕಳೆದುಕೊಂಡಿರಿ ಎಂದು ವ್ಯಥೆ ಪಡುವುದು ಬೇಡ. ನಿಮ್ಮೊಂದಿಗೆ ನಾವಿದ್ದೇವೆ.

ಎಂ.ಎಸ್. ಪಾಟೀಲ್: ಅಧ್ಯಕ್ಷರೇ ನನ್ನದೊಂದು ಸಲಹೆ ಇದೆ. ಸಾರಾಯಿ ಮಾರಾಟವನ್ನು ರದ್ದುಗೊಳಿಸದಿದ್ದಲ್ಲಿ ಬರಗಾಲಕ್ಕೆ ವ್ಯಯ ಮಾಡಿದ ಹಣ ಮತ್ತೆ ಮರುಪಾವತಿಯಾಗುತ್ತದೆಯೇ ಎಂಬ ಸಂದೇಹ ವ್ಯಕ್ತವಾಗುತ್ತದೆ. ಆದ್ದರಿಂದ ಡ್ರೈಎರಿಯಾ ಡಿಕ್ಲೇರ್ ಮಾಡುವ ಉದ್ದೇಶವಿದೆಯೇ?

ಜೆ.ಹೆಚ್. ಪಟೇಲ್: ಈ ಸಲಹೆಯನ್ನು ನಾನು ಪರೀಕ್ಷಿಸುತ್ತೇನೆ.

ಬಾಬುರೆಡ್ಡಿ ಪಿ. ತುಂ7 ೪: ಬರಗಾಲವಿರುವ ಹಿನ್ನೆಲೆಯಲ್ಲಿ ದೂರದ ಉತ್ತರ ಕನ್ನಡ ಜಿಲ್ಲೆಯಿಂದ ವಿಜಾಪುರ ಜಿಲ್ಲೆಗೆ ಮೇವು ಬರುತ್ತಿದೆ. ಇದು ತೀರಾ ದುಬಾರಿ ಹಾಗೂ ಈ ಮೇವು ನಮ್ಮ ಜಾನುವಾರುಗಳಿಗೆ ಹೊಂದುತ್ತಿಲ್ಲ. ಇದರ ಬದಲಾಗಿ ಇಡೀ ಜಿಲ್ಲೆಯ ಸಮೀಕ್ಷೆ ನಡೆಸಿ, ಎರಡು ಮತ್ತು ಮೂರು ಚಕ್ಕಡಿ ಇರುವವರಿಗೆ 10 ವರ್ಷಗಳ ಹಿಂದೆ ಇದ್ದಂತೆ ಕನಕಿ ತರಾಯಿ ಸಾಲ ವ್ಯವಸ್ಥೆ ಮಾಡಿ ಎಂದು ನನ್ನ ಸಲಹೆ.

ಜೆ.ಹೆಚ್. ಪಟೇಲ್: ತಮ್ಮ ಸಲಹೆ ಯೋಗ್ಯವಾದದ್ದು, ಹೀಗೆಯೇ ಮಾಡುತ್ತೇವೆ.

ಬಿ.ಆರ್. ನೀಲಕಂಠಪ್ಪ: ಬರಗಾಲ ಪರಿಸ್ಥಿತಿ ಬಹು ದಾರುಣವಾಗಿ ಇರುವ ತಾಲ್ಲೂಕುಗಳಲ್ಲಿ ಸಹಕಾರ ಸಾಲ ವಸೂಲಾತಿಯನ್ನು ಮುಂದಕ್ಕೆ ಹಾಕಬೇಕು.

ಜೆ.ಹೆಚ್. ಪಟೇಲ್: ಮಾನ್ಯ ಸದಸ್ಯರ ಸಲಹೆಯನ್ನು ಸರ್ಕಾರ ಒಪ್ಪುತ್ತದೆ. ಎಲ್ಲಿ ಆರಾಣಿ ಬೆಳೆ ಕಡಿಮೆ ಇದೆ ಅಲ್ಲಿ ಸಹಕಾರ ಸಾಲ ವಸೂಲಾತಿ ಮುಂದೆಹೋಗಿದೆ.

ಎಂ..ಎಲ್. ಉಸ್ತಾದ್: ಕಳೆದ 52 ವರ್ಷಗಳಲ್ಲಿ 33 ಸಲ ಬರ ಬಂದಿರುವ ನಮ್ಮ ವಿಜಾಪುರ ಜಿಲ್ಲೆಗೆ ಮುನುವಳ್ಳಿ ಏತ ನೀರಾವರಿ ಬೇಕೇಬೇಕು. ಇದರೊಂದಿಗೆ ಎಲಿವೇಟೆಡ್ ರಿಸರ್ವಾಯರ್ ಬಗೆಗೂ ತಿಳಿಸಬೇಕು.

ಜೆ.ಹೆಚ್. ಪಟೇಲ್: ಈ ಪ್ರಶ್ನೆಗೆ ಈಗಲೇ ನಿರ್ದಿಷ್ಟ ಉತ್ತರ ಕೊಡುವುದು ಕಠಿಣ. ಎಸ್ಟಿಮೇಟ್ ಏನು? ಪ್ಲಾನ್ ಏನು? ಯಾವ ಹಂತದಲ್ಲಿದೆ ಎಂಬುದನ್ನು ತಿಳಿದು ಉತ್ತರ ಕೊಡುತ್ತೇನೆ.

ಹೆಚ್.ಕೆ. ಕುಮಾರಸ್ವಾಮಿ: ವಿಶೇಷ ಘಟಕ ಯೋಜನೆಯ ಹಣ ಪರಿಶಿಷ್ಟ ಜಾತಿ ಮತ್ತು ವರ್ಗದ ವಿದ್ಯಾರ್ಥಿಗಳ ಹಾಸ್ಟೆಲ್, ಜೀತವಿಮುಕ್ತರ ಮರುವಸತಿ ಮತ್ತು ನಿರುದ್ಯೋಗಿ ಪದವೀಧರರ ಸಲುವಾಗಿ ಹೆಚ್ಚು ಪ್ರಮಾಣದಲ್ಲಿ ಬಳಕೆಯಾಗಬೇಕು.

ಜೆ.ಹೆಚ್. ಪಟೇಲ್: ಅಧ್ಯಕ್ಷರೇ ಇದು ಸಹಿತ ಸೂಕ್ತ ಸಲಹೆ. ಆಗಬಹುದು. ಹಾಗೆಯೇ ಮಾಡುತ್ತೇವೆ.

ಬಿ.ಎಸ್. ಯಡಿಯೂರಪ್ಪ: ಶಿವಮೊಗ್ಗ ಜಿಲ್ಲೆಯಲ್ಲಿ ಕೊಳವೆ ಭಾವಿ ತೆರೆಯಲು ಸಮೀಕ್ಷೆ ಮತ್ತಿತರ ತುರ್ತುಕಾರ್ಯಕ್ಕಾಗಿ ಜಿಯೋಫಿಸಿಸ್ಟ್‌ಗಳು ಬೇಕಾಗಿದ್ದಾರೆ. ಹಾಲಿ ಈ ಕೊರತೆ ಇದೆ.

ಜೆ.ಹೆಚ್. ಪಟೇಲ್: ಈ ಬಗ್ಗೆ ಖಂಡಿತಾ ಕ್ರಮಕೈಗೊಳ್ಳೋಣ.

**ಸನ್ಮಾನ್ಯ ಅಧ್ಯಕ್ಷರು (ಬಿ.ಜಿ. ಬಣಕಾರ್)** : ಪ್ರಸ್ತಾಪ ಏನೆಂದರೆ, ಜನವರಿ 20, 1986 ರಂದು ಮಾನ್ಯ ರಾಜ್ಯಪಾಲರು ವಿಧಾನ ಮಂಡಲದ ಸದಸ್ಯರನ್ನು ಉದ್ದೇಶಿಸಿ ಮಾಡಿದ ಭಾಷಣಕ್ಕೆ ಈ ಅಧಿವೇಶನದಲ್ಲಿ ಸೇರಿರುವ ನಾವು ರಾಜ್ಯಪಾಲರಿಗೆ ಕೃತಜ್ಞತಾಪೂರ್ವಕ ವಂದನೆಗಳನ್ನು ಸಮರ್ಪಿಸುತ್ತೇವೆ.

ಪ್ರಸ್ತಾವ ಅಂಗೀಕೃತವಾಗಿದೆ
(ವಿಧಾನಸಭೆ ಕಲಾಪ: ಫೆಬ್ರವರಿ 7, 1986)

## ಕವಿ ಇದಿನಬ್ಬನವರ ಮಾತುಗಳು

ಬಿ.ಎಂ. ಇದಿನಬ್ಬ: ಸನ್ಮಾನ್ಯ ಉಪಾಧ್ಯಕ್ಷರೇ, ಈ ಸಾಲಿನ ರಾಜ್ಯಪಾಲರ ಭಾಷಣದ ಪ್ರಮುಖ ಅಂಶಗಳ ಬಗೆಗೆ ನನಗಾದ ನಿರಾಸೆಯನ್ನು ಹೇಳಲಿಚ್ಛಿಸುತ್ತೇನೆ.

ರಾಜ್ಯಪಾಲರ ಭಾಷಣ ಎನ್ನುವುದು ಜನಜೀವನಕ್ಕೆ ಬೇಕಾದಂತಹ ವಿಚಾರ. ಇದು ಬಡವರಿಗೆ ಬೇಕಾದ ವಿಷಯ. ರೈತರ ಕಷ್ಟ ನಿವಾರಿಸುವ ಮಾಹಿತಿ ಇದು. ಕೂಲಿಗಾರರ ಹಿತಚಿಂತನೆ ಈ ಭಾಷಣದಲ್ಲಿರಬೇಕು.

ಆರೂವರೆ ಪುಟಗಳಷ್ಟಿದೆ. ಇದರಲ್ಲಿ ಯಾವುದೇ ಪ್ರಗತಿಪರ ಚಿಂತನೆ ಇಲ್ಲ. ದುಂದುವೆಚ್ಚ, ಭ್ರಷ್ಟಾಚಾರ, ನಿರುದ್ಯೋಗ, ಕ್ಷಾಮ ಪರಿಹಾರ ಏನೇನೂ ಇಲ್ಲ. ನೋಡಲು ಚೆಂದಾಗಿದೆ ಅಷ್ಟೆ. ಪುಟ ತಿರುವಿ ಹಾಕಿದರೆ "ತೋಟ ಶೃಂಗಾರ ಒಳಗೆ ಗೋಣೀ ಸೊಪ್ಪು" ಎಂಬಂತಿದೆ. ನಾನೇ ಬರೆದ ಆರು ಚರಣಗಳಲ್ಲಿ ಈ ವಿಷಯ ಹೇಳಬಯಸುತ್ತೇನೆ.

ಮಾಮೂಲಿ ಸಪ್ಪೆ ರಾಜ್ಯಪಾಲರ ಭಾಷಣ,
ಬೆಲೆಯೇರಿಕೆಗೆ ಇದರಲ್ಲಿಲ್ಲ ನಿಯಂತ್ರಣ,
ಬಡಜನತೆಗೆ ಸದಾ ದುಃಖ ದುಮ್ಮಾನ,
ತರುವುದಿಲ್ಲ ಇದು ಕ್ಷಾಮಕ್ಕೆ ಭೂಷಣ,
ದುಂದು ವೆಚ್ಚಕ್ಕೆ ಎಲ್ಲಿದೆ ಕಡಿವಾಣ?
ಉಳ್ಳವರಿಗೆ ವರುಷ ವರುಷ ಏರಲಿದೆ ವರಮಾನ.

(ವಿಧಾನಸಭೆ ಫೆಬ್ರವರಿ 5, 1986)

(ಇದಕ್ಕೆ ಜೆ.ಹೆಚ್. ಪಟೇಲರ ಉತ್ತರ: 1986ರಲ್ಲಿ ರಾಜ್ಯಪಾಲರ ಭಾಷಣಕ್ಕೆ ಅಂದಿನ ಮುಖ್ಯಮಂತ್ರಿ ಮಾನ್ಯ ರಾಮಕೃಷ್ಣ ಹೆಗಡೆಯವರ ಬದಲಾಗಿ ಕೈಗಾರಿಕೆ ಖಾತೆ ಮಂತ್ರಿ ಜೆ.ಹೆಚ್. ಪಟೇಲ್ ಉತ್ತರಸಿದುದು ವಿಶೇಷ. ಈ ಸಂದರ್ಭದಲ್ಲಿ ಮಾನ್ಯ ಹೆಗಡೆಯವರು ಸದನದಲ್ಲಿ ಇದ್ದದ್ದು ಮತ್ತಷ್ಟು ವಿಶೇಷ)

ಜೆ.ಹೆಚ್. ಪಟೇಲ್: ಮಾನ್ಯ ಇದಿನಬ್ಬನವರೇ, ತಾವು ಸಹಿತ ಚರ್ಚೆಯಲ್ಲಿ ಮಾತನಾಡುವಾಗ ಕವನವನ್ನು ಓದಿದಿರಿ. ಇದನ್ನು ಕೇಳಿ ಬಹಳ ಸಂತೋಷಪಟ್ಟೆ. ತಮ್ಮ ಕನ್ನಡ ಭಾಷೆ ನಿಜವಾಗಿಯೂ ನನಗೆ ಹೆಮ್ಮೆ ಎನ್ನಿಸಿತು.

(ವಿಧಾನಸಭೆ, ಫೆಬ್ರವರಿ 7, 1986)

### ಪಕ್ಷಭೇಧ ಮಾಡದ ಹಿರಿಯ ನಾಯಕ

ನಾನು ಎರಡನೇ ಬಾರಿಗೆ ಪಟೇಲರ ಸಂಪುಟದಲ್ಲಿ ಸಚಿವನಾಗಿದ್ದಾಗ ನಡೆದ ಘಟನೆ. ಬೆಂಗಳೂರಿನಲ್ಲಿ ಲೋಕಾಯುಕ್ತರವರು ತೆರವು ಮಾಡಿದ ಸರ್ಕಾರಿ ನಿವಾಸವನ್ನು ಮಂತ್ರಿಯೊಬ್ಬರಿಗೆ ಕೊಡುವ ಸಂದರ್ಭ ಬಂತು. ನಾನು ಮತ್ತು ಸಚಿವ ಸಿ.ಎಂ. ಉದಾಸಿ - ಇಬ್ಬರೂ ನಿವಾಸ ಪಡೆಯಲು ಅರ್ಹರಾಗಿದ್ದೆವು. ಸಚಿವ ಉದಾಸಿ ಲೋಕೋಪಯೋಗಿ ಖಾತೆ ಮಂತ್ರಿ. ಹೀಗಾಗಿ ಸಹಜವಾಗಿ ಅವರಿಗೆ ನಿವಾಸ ಖಚಿತ ಎಂದು ಎಲ್ಲರೂ ಭಾವಿಸಿದ್ದೆವು.

ವಾಸ್ತವವಾಗಿ ಆ ಖಾಲಿ ನಿವಾಸ ನನಗೆ ಅಲಾಟ್ ಆದಾಗ ಎಲ್ಲರಿಗೂ ಆಶ್ಚರ್ಯ ಕಾದಿತ್ತು. 'ಸೋಮಶೇಖರ ಎರಡನೇ ಬಾರಿ ಮಂತ್ರಿಯಾದವ; ಅವನಿಗೇ ಅದು ಸಿಗಬೇಕು' ಎಂದಿದ್ದರು ಮುಖ್ಯಮಂತ್ರಿ ಪಟೇಲರು. ಸ್ವಜಾತಿ ಶಾಸಕ ಮಾನ್ಯ ಉದಾಸಿಯವರಿಗೆ ಕ್ವಾಟ್ರರ್ಸ್ ಅಲಾಟ್ ಆಗಬಹುದು ಎಂದು ಲೋಕಾರೂಢಿ ವ್ಯವಹಾರವನ್ನು ನಂಬಿದ್ದ ಎಲ್ಲರಿಗೂ ಪಟೇಲರ ಜಾತಿ - ಮತ ಬೇಧವಿಲ್ಲದ ಕಾರ್ಯನೀತಿ ಅಚ್ಚರಿ ತಂದಿತ್ತು.

ಇಷ್ಟೇ ಅಲ್ಲ; ಯಾವುದೇ ಪಕ್ಷದ ಯಾರೇ ಶಾಸಕರು ಇಂತಹ ಕೆಲಸ ಆಗಬೇಕೆಂದು ಮನವಿಮಾಡಿಕೊಂಡರೂ ಪಕ್ಷ ಬೇಧವಿಲ್ಲದೆ ಕೆಲಸ ಮಾಡಿಕೊಡುತ್ತಿದ್ದ ವಿಶಾಲ ಮನೋಭಾವದ ಮುತ್ಸದ್ದಿ - ಪಟೇಲರು.

(ಬಿ. ಸೋಮಶೇಖರ, ವಿಧಾನಸಭೆ ಫೆಬ್ರವರಿ 27, 2001)

### ತತ್ವಾಧಾರಿತ ಚಿಂತಕ

ನನ್ನ ಆತ್ಮೀಯ ಸಂಸದೀಯ ಮಿತ್ರರಾದ ಜೆ.ಹೆಚ್. ಪಟೇಲರು ಸಾಮಾಜಿಕ ನ್ಯಾಯದ ನೆಲೆಯ ಮೇಲೆ ಅಧಿಕಾರಕ್ಕೆ ಬಂದವರು. ಜೀವನವಿಡೀ ಸಮಾಜದಲ್ಲಿ ಸಮಾನತೆಯ ತತ್ವವನ್ನು ಆಚರಣೆಗೆ ತರಲು ಶ್ರಮಿಸಿದವರು. ಸಾಮಾಜಿಕ ಪರಿವರ್ತನೆಯ ಬಗ್ಗೆ ವಿಶ್ವಾಸವಿಟ್ಟುಕೊಂಡವರು. ಇವರದು ತತ್ವಾಧಾರಿತ ಚಿಂತನೆ.

(ಮಲ್ಲಿಕಾರ್ಜುನ ಖರ್ಗೆ (ವಿರೋಧ ಪಕ್ಷದ ನಾಯಕರು) ವಿಧಾನಸಭೆ, ಆಗಸ್ಟ್ 7, 1996)

# 9

# ಗಾಂಧಿ, ಎಚ್ಚಿನ್, ಶಿಶುನಾಳ

## ಬಿಡಿ ಚಿಂತನೆಗಳ (Random Thoughts) ಸರದಾರ

ಸಂಸದೀಯ ಚರ್ಚೆಗಳಲ್ಲಿ ಭಾಗವಹಿಸುವಾಗ ಆವಶ್ಯಕ ಎನಿಸಿದ ಸಂದರ್ಭಗಳಲ್ಲೆಲ್ಲಾ ವಿಶ್ವದ ಮಹಾನ್ ಚೇತನಗಳ ಜೀವನ ಸಂದೇಶ, ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಘಟನೆಗಳು, ರಾಜಕೀಯ ಸಿದ್ಧಾಂತ ಇವೇ ಮೊದಲಾದ ಪ್ರೌಢ ವಿಷಯಗಳನ್ನು ಸಾಮಾನ್ಯ ಶಾಸಕ ಮಿತ್ರರಿಗೆ ತಿಳಿಯುವ ಮಟ್ಟದಲ್ಲಿ ವಿವರಿಸುವುದು ಪಟೇಲರಿಗಿದ್ದ ಹವ್ಯಾಸ. ತನಗೆ ತಿಳಿದ ವಿಷಯವನ್ನು ಉಳಿದ ಶಾಸಕರಿಗೆ ತಿಳಿಹೇಳುವ ತವಕ ಈತನದು. ಮಂತ್ರಿ ಸ್ಥಾನ ಬಂದ ಬಳಿಕ ಶ್ರೀಮದ್ಗಾಂಭೀರ್ಯ ಬೆಳೆಸಿಕೊಳ್ಳದ ವಿಚಾರಪ್ರಿಯ ಈತ.

ಅನುಭವಿ ರಾಜಕಾರಣಿಗಳಿಗೆ ಮತ್ತು ಜನನಾಯಕರಿಗೆ ನಾಡಿನ ಹಿರಿಯ ಚೇತನಗಳ ಬಗೆಗೆ ಮುಂದಿನ ಜನಾಂಗಕ್ಕೆ ತಿಳಿ ಹೇಳಲು ಹಾಗೂ ತಮ್ಮ ಅನುಭವ ಹಂಚಿಕೊಳ್ಳಲು ವಿಧಾನ ಮಂಡಲ ಉತ್ತಮ ವೇದಿಕೆ ಎಂದು ಯಶಸ್ವಿಯಾಗಿ ತೋರಿಸಿಕೊಟ್ಟವರು ಪಟೇಲರು.

ಇತಿಹಾಸ ಪ್ರಸಿದ್ಧ ಚೇತನಗಳ ವೈಯಕ್ತಿಕ ಶೀಲಸ್ವಭಾವ, ಸಿದ್ಧಾಂತ ನಂಬಿಕೆಯನ್ನು ನಿದರ್ಶನಗಳ ಮೂಲಕ ಎತ್ತಿ ತೋರಿಸಿದ ಸಂಸದೀಯ ಪಟು ಇವರು. ಬದಲಾಗುತ್ತಿರುವ ಜೀವನ ಮೌಲ್ಯ, ಸ್ವದೇಶೀ ಚಿಂತನೆ, ಸ್ವಾವಲಂಬನೆ, ಬಂಡಾಯ, ದಾರ್ಶನಿಕರ ಒಳನೋಟ, ಸಾಹಿತಿಗಳದೃಷ್ಟಿ - ಹೀಗೆ ಜೀವನ ಆಯಾಮದ ಬಗೆಬಗೆಯ ಸ್ತರಗಳನ್ನು ವರ್ಣಿಸಿ, ಇವರೆಲ್ಲರ ಅನುಭವದ ನೆರಳಲ್ಲಿ ನಿಂತು, ತಾನು ಸೋತನೆಂದೋ, ಗೆದ್ದೆನೆಂದೋ ಗುರ್ತಿಸಿಕೊಳ್ಳುತ್ತಿದ್ದವರು ಪಟೇಲರು.

ಪಟೇಲರ ಬಹುತೇಕ ಮಾತುಗಳು ಬಿಡಿ (random) ಚಿಂತನೆಗಳು. ಸಂಘಟಿತವಾಗಿ ವಿಷಯ ಪ್ರತಿಪಾದಿಸುವ ಚಿತ್ತ ಇವರದಲ್ಲ. ಸತ್ಯದ ಮುಖ ಒರಟು ಎನ್ನುವ ನಾಣ್ಣುಡಿಯುಂಟು. ಪಟೇಲರ ಮಾತು ಇದಕ್ಕೆ ಹೊರತಾಗಿತ್ತು. ಇವರು ಹೇಳುತ್ತಿದ್ದ ಯುಕ್ತಾಯುಕ್ತ ವಿವೇಕದ ಮಾತುಗಳು ಸಂತೋಷಜನಕವಾಗಿರುತ್ತಿದ್ದವು.

ಆಶುಭಾಷಣದ ಧಾಟಿಯಲ್ಲಿ ಸಹ ಶಾಸಕರನ್ನು ಉದ್ದೇಶಿಸಿ ಸಲಿಗೆಯಿಂದ ಮಾತನಾಡುತ್ತಿದ್ದ ಕಾರಣ ಪಟೇಲರ ಭಾಷಣಕ್ರಮ ಶಾಸಕರ ಮನಸ್ಸನ್ನು ಅರಳಿಸುವ ಶಕ್ತಿ ಪಡೆದಿತ್ತು.

## ನಾನು ಮಹಾತ್ಮನಲ್ಲ; ಗಾಂಧೀಜಿ

ಗಾಂಧೀಜಿ ನೀವು ಮೌನ ಏಕೆ ಆಚರಿಸುತ್ತೀರಿ ಎಂದು ಕೇಳಿದಾಗ, The quest for truth cannot be prosecuted in a case. Silence makes no sense when it is necessary to speak ಎಂದು ಉತ್ತರಿಸಿದರು. ಅಂದರೆ ಯಾವಾಗ ಮಾತನಾಡಬೇಕು, ಯಾವಾಗ ಮಾತನಾಡಬಾರದು ಎಂಬುದು ಗಾಂಧೀಜಿಗೆ ಗೊತ್ತಿತ್ತು. ಗಾಂಧೀಜಿ ಹೇಳಿದ ಬಹುದೊಡ್ಡ ಮಾತೆಂದರೆ ನನ್ನನ್ನು ಮಹಾತ್ಮ ಎಂದು ಕರೆಯುತ್ತಾರೆ, ನಾನು ಮಹಾತ್ಮನಲ್ಲ. ನಾನು ಧರ್ಮದಲ್ಲಿ ವಿಶ್ವಾಸ ಇಟ್ಟಿರತಕ್ಕಂಥ ಒಬ್ಬ ಸಾಮಾನ್ಯ ರಾಜಕಾರಣಿ.

ಈ ಹಂತದಲ್ಲಿ ಇನ್ನೂ ಒಂದು ಮಾತು ಬರುತ್ತದೆ. ಧರ್ಮದ ಅವರ ವ್ಯಾಖ್ಯಾನವೇ ಬೇರೆ, ಬೇರೆಯವರ ವ್ಯಾಖ್ಯಾನವೇ ಬೇರೆ. ಧರ್ಮದ ಬಗ್ಗೆ ವ್ಯಾಖ್ಯಾನ ಮಾಡುವಾಗ ಅಂಬೇಡ್ಕರ್‌ರವರು ಒಂದು ಹೇಳಿದ್ದಾರೆ. 'The religion is there to explain the origion of the world, whereas Dhamman (Budha's Dhamman) is meant for restructuring the world'. ಇದು ಅಂಬೇಡ್ಕರ್‌ರವರ ಕಾನ್ಸೆಪ್ಟ್ ಆಫ್ ರಿಲಿಜನ್. ಗಾಂಧೀಜಿಯವರ ಕಾನ್ಸೆಪ್ಟ್ ಆಫ್ ರಿಲಿಜನ್ ಬೇರೆ. ಆದರೆ ನೆಹರೂರವರು ರಿಲಿಜನ್ ಬಗ್ಗೆ, ತಾವು ಇರ್‌ರಿಲೀಜಿಯಸ್ ಎಂದೂ ಹೇಳಲಿಲ್ಲ, ಆಂಟಿ ರಿಲಿಜಿಯನ್ ಎಂದೂ ಹೇಳಲಿಲ್ಲ ಅಥವಾ ಮೂಢನಂಬಿಕೆ ಇದೆ ಎಂದೂ ಹೇಳಲಿಲ್ಲ. ಅವರನ್ನೂ ರ್‍ಯಾಷನ್‌ಲಿಸ್ಟ್ ಎನ್ನುತ್ತಾರೆ. ಕಾಂಗ್ರೆಸ್‌ನಲ್ಲಿ ಮೂಲಭೂತವಾಗಿ ಐಡಿಯಾಲಾಜಿಕಲ್ ಗ್ರೂಪೇ ಇದೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಫೆಬ್ರವರಿ 27, 1997)

## ಗಾಂಧೀಜಿ : ಆಟಂಬಾಂಬ್

ಒಬ್ಬ ಇತಿಹಾಸಕಾರನ ಪ್ರಕಾರ 20ನೇ ಶತಮಾನದಲ್ಲಿ ಈ ಜಗತ್ತಿನ ಎರಡು ಮಹಾನ್ ಘಟನೆಗಳು ಯಾವುವೆಂದರೆ ಒಂದು ಆಟಂಬಾಂಬ್ ಮತ್ತೊಂದು ಮಹಾತ್ಮಾಗಾಂಧಿ.

ಆಟಂಬಾಂಬ್ ಪ್ರಪಂಚವನ್ನೇ ಸಂಪೂರ್ಣವಾಗಿ ನಾಶಮಾಡತಕ್ಕಂತಹ ಶಕ್ತಿಯಾದರೆ, ಪ್ರಪಂಚವನ್ನು ಉಳಿಸತಕ್ಕ, ವಿಕಾಸ ಮಾರ್ಗದಲ್ಲಿ ಕೊಂಡೊಯ್ಯುವ ಇನ್ನೊಂದು ಮಹಾಶಕ್ತಿ ಮಹಾತ್ಮಾಗಾಂಧಿ.

(ಜೆ.ಹೆಚ್. ಪಟೇಲ್ ವಿಧಾನ (ಪ್ರತಿಪಕ್ಷದ ಶಾಸಕ) ಸಭೆ : ಜನವರಿ 24, 1980)

## ಮಹಾನ್ ಚೇತನ ಜೆ.ಪಿ.

ಮಾನವೀಯ ಮೌಲ್ಯಗಳನ್ನು ಮತ್ತು ಪ್ರಜಾತಂತ್ರವನ್ನು ಮತ್ತೆ ಭಾರತೀಯರಿಗೆ ಒದಗಿಸಿಕೊಟ್ಟ ಮೇರು ಪರ್ವತದಂತಹ ಮಹಾನ್ ವ್ಯಕ್ತಿ ಜಯಪ್ರಕಾಶ್ ನಾರಾಯಣ್. ದಿವಂಗತ ಜಯಪ್ರಕಾಶರು ಒಂದು ಪಕ್ಷಕ್ಕೆ ಸಂಬಂಧಪಟ್ಟ ವ್ಯಕ್ತಿಯಲ್ಲ. ಯಾವುದೇ ಪಂಥದ ಅಥವಾ ಜಾತಿಯ ಸ್ವತ್ತಲ್ಲ. ಅವರು ವಿಶ್ವಮಾನವ. ಮಹಾತ್ಮಗಾಂಧಿ, ಮಾರ್ಟಿನ್ ಲೂಥರ್ ಕಿಂಗ್, ಜಯಪ್ರಕಾಶ್ ನಾರಾಯಣ್ ಇಂತಹ ವ್ಯಕ್ತಿಗಳು ಜಗತ್ತಿನಲ್ಲಿ ಬಹು ವಿರಳವಾಗಿ ಕಾಣುವ, ಜನ್ಮ ಎತ್ತಿ ಬರುವ ಮಹಾನ್ ಚೇತನಗಳು. ಭಾರತೀಯ ಪ್ರಜಾತಂತ್ರ ಜನರ ಕೈತಪ್ಪಿದಾಗ ಅದನ್ನು ಮತ್ತೆ ಜನರಿಗೆ ತಂದುಕೊಡುವ ಐತಿಹಾಸಿಕ ಪಾತ್ರ ಇವರದು."

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ ಜನವರಿ 24, 1979)

## ಸರ್ದಾರ್ ಪಟೇಲ್ ಮತ್ತು ನೆಹರೂ

ನೆಹರೂ, ಸುಭಾಷಚಂದ್ರ ಬೋಸ್, ಸರ್ದಾರ್ ಪಟೇಲ್, ಮೌಲಾನಾ ಅಬ್ದುಲ್ ಕಲಾಂ ಅಜಾದ್ ಇವರೇ ಮೊದಲಾದ ರಾಷ್ಟ್ರದ ಹಿರಿಯ ನಾಯಕರುಗಳನ್ನು ತಮ್ಮ ದಾರಿಯಲ್ಲಿ ಕೊಂಡೊಯ್ಯುವ ಶಕ್ತಿ ಗಾಂಧೀಜಿಗಿತ್ತು. ಭಾರತಕ್ಕೆ ವೆಸ್ಟನ್ ಎಕಾನಮಿ, ವೆಸ್ಟನ್ ಫಿಲಾಸಫಿ ಇನ್‌ಫ್ಲೂಯನ್ಸ್ ಆದದ್ದು ನೆಹರೂರವರಿಂದ. ಮಾರ್ಕ್ಸಿಸ್ಟ್ ಇನ್‌ಫ್ಲೂಯನ್ಸ್, ಮಾರ್ಕ್ಸಿಸ್ಟ್ ಐಡಿಯಾಲಜಿಯನ್ನು ತಂದವರು ನೆಹರು.

Eventhough he belived in the democratic system of the West, he also tried to bring Marxism which was represented by Patel and others. ಸುಭಾಷಚಂದ್ರ ಬೋಸರು ಬಿಡಿ. He rebelled totally and he went away. He did not belive in non-violence and all that. ಈ ಸಿದ್ಧಾಂತಗಳು ಕಾಂಗ್ರೆಸ್ಸಿನಲ್ಲಿ ಪ್ರಾರಂಭದಿಂದ ಹೇಗೆ ಬಂತು ಎಂಬುದಕ್ಕೆ ಬಿರ್ಲಾ ಹೌಸ್‌ನಿಂದ ಒಂದು ಪಬ್ಲಿಕೇಷನ್ ಬರುತ್ತದೆ. ಘನಶ್ಯಾಂದಾಸ್ ಬಿರ್ಲಾ ಆಗಿನ ಬಹುದೊಡ್ಡ ವ್ಯಕ್ತಿ. ವೈಸರಾಯ್ ಬಿರ್ಲಾರವರನ್ನು ಕೇಳಿದರು. ನಿನ್ನ ದೃಷ್ಟಿಯಲ್ಲಿ ನೆಹರೂ ಹೇಗೆ ಪಟೇಲ್ ಹೇಗೆ? ಬಿರ್ಲಾ ಹೇಳಿದರು. 'Patel is a dangerous fellow'. He mentioned here. When asked 'what about Nehru?' He said 'Nehru is alright. But, he is not meant for elderly people; he is for young boys. Nehru's

charm, charisma - it influenced the younger generation in those days. Patel, a farmer and stubborn leader was not acceptabe to the Congress.

ಗಾಂಧೀಜಿ 1936ರಲ್ಲಿ ನೀನೇ ಕಾಂಗ್ರೆಸ್ ಅಗು ಎಂದು ನೆಹರೂರವರಿಗೆ ಹೇಳಿದಮೇಲೆ ನಮ್ಮ ನಾಯಕರುಗಳಾದ ಜಯಪ್ರಕಾಶ್ ಮತ್ತು ಲೋಹಿಯಾ ಗಾಂಧೀಜಿಗೆ ಹತ್ತಿರ ಆದರು. ಲೋಹಿಯಾ ಪ್ರಕಾರ ಗಾಂಧೀಜಿ ವಿಜ್ಞಾನಿ ಅಲ್ಲ. 'Marx is a scientist'. Prophets are different. Scientists are different. 'Einstein is a scientist. Marx is a scientist. Mohammed is a prophet. Gandhiji combined both. He had the qualities of prophet as well as scientist'.

## ಓದದ ಮಹಾನ್ ನಾಯಕ ಕಾಮರಾಜ್

ಜಾಗರೂಕತೆಯಿಂದ, ತಪ್ಪುಗಳನ್ನು ಮಾಡದಿರುವ ಹಲವಾರು ರಾಜಕಾರಣಿಗಳು ನಮ್ಮಲ್ಲೂ ಇದ್ದಾರೆ. ಇವರು ದೊಡ್ಡ ವಿದ್ವಾಂಸ ಅಥವಾ ಓದಿದವರಾಗಿರುವ ಅವಶ್ಯಕತೆಯೂ ಇಲ್ಲ. ನಾನು ಕಾಂಗ್ರೆಸ್ ಸರ್ಕಾರಗಳನ್ನು ವಿರೋಧ ಮಾಡುತ್ತಲೇ ಬಂದವನು. ಅವರಲ್ಲೂ ಶ್ರೇಷ್ಠ ನಾಯಕರುಗಳಿದ್ದಾರೆ. ಕಾಮರಾಜ ನಾಡಾರ್ ವಿದ್ಯಾವಂತರೇನಲ್ಲ. ಆದರೆ ಬಹು ದಕ್ಷತೆಯಿಂದ ಆಡಳಿತ ನಡೆಸಿದವರು. ವಿದ್ಯೆಮುಖ್ಯವಲ್ಲ. ಆಡಳಿತ ನಡೆಸಲು ಬುದ್ಧಿ ಮತ್ತು ಸಂಕಲ್ಪ ಮುಖ್ಯ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ, ಜುಲೈ 25, 1980)

## 'ವಿದ್ಯಾ ಸಚಿವರಾಗಿ' ಎಂದ ಕುವೆಂಪು

ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ): ಮಹಾರಾಜ ಕಾಲೇಜಿನಲ್ಲಿ ನಾನು ಕುವೆಂಪು ಅವರ ವಿದ್ಯಾರ್ಥಿ; ಕನ್ನಡದಲ್ಲಿ ಪಾಠವನ್ನು ಹೇಳುವಾಗ ಅವರು ಹಾಗೇ ಭಾವುಕರಾಗುತ್ತಿದ್ದರು. ಅವರ ಬೋಧನಾಕ್ರಮವೇ ಬೇರೆ ರೀತಿಯದು ಅದೇ ಪರಮೇಶ್ವರ ಭಟ್ಟರು ಕನ್ನಡ ಹೇಳುವಾಗ ಬಹಳ ತಮಾಷೆಯಾಗಿ ಎಲ್ಲರಿಗೂ ತಿಳಿಯುವಂತೆ ಕಾವ್ಯಗಳನ್ನು ಎಲ್ಲಾ ಬಿಡಿಸಿ ಹೇಳುತ್ತಿದ್ದರು.

ಆ ನಂತರ ನಾನು ಪುಟ್ಟಪ್ಪನವರನ್ನು ಬಹಳ ಹತ್ತಿರದಿಂದ ನೋಡಲು ಅವರ ಮನೆಗೆ ಹೋದದ್ದು ಎಂದರೆ, ಲೋಕಸಭೆಯಲ್ಲಿ ನಾನು ಕನ್ನಡದಲ್ಲಿ ಮಾತನಾಡಿದೆ ಎಂಬುದನ್ನು ಕೇಳಿ ಒಂದು ಪತ್ರವನ್ನು ಬರೆದು ನನ್ನನ್ನು ಕರೆಸಿ ಸ್ವತಃ ಅವರೇ ಬಹಳ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ಆ ನಂತರ ನಮ್ಮ ಸರ್ಕಾರ ಬಂದಾಗ ಪುಟ್ಟಪ್ಪನವರ ಫೋನ್ ಬಂದಿದೆ ಎಂದಾಗ ನನಗೆ ಆಶ್ಚರ್ಯ ಆಯಿತು. ಅವರು ದೂರವಾಣಿ ಮಾಡಬೇಕಾದರೆ ಏನೋ ವಿಚಾರ

ಇರಬೇಕೆಂದು ಕೇಳಿದಾಗ ಅವರು ಹೇಳಿದರು. ತಾವು ಖಾತೆಯನ್ನು ತೆಗೆದುಕೊಳ್ಳುವಾಗ ಅದು, ಇದು ಬೇರೆ ಖಾತೆ ತೆಗೆದುಕೊಳ್ಳಬೇಡಿ, ವಿದ್ಯಾ ಇಲಾಖೆ ತೆಗೆದುಕೊಳ್ಳಿ ಎಂದು ಹೇಳಿದರು. ಆದರೆ ಅಷ್ಟು ಹೊತ್ತಿಗೆ ನನಗೆ ಬೇರೆ ಖಾತೆ ಹಂಚಿಕೆಯಾಗಿತ್ತು. ಅವರಿಗೆ ನಾನು ಉತ್ತರವನ್ನು ಕೊಡುವುದಕ್ಕೆ ಆಗಲಿಲ್ಲ.

ಅಧ್ಯಕ್ಷರು: ಅವರಿಗೆ ನಿಮ್ಮ ಅನಂತರೂಪದ ಪರಿಚಯ ಇರಲಿಲ್ಲ.

(ವಿಧಾನಸಭೆ ಕಲಾಪ ಡಿಸೆಂಬರ್ 24, 1994)

## ಅಕ್ಕಿ ಬದಲು ರಾಗಿ, ಜೋಳ

ಹೆಚ್. ನರಸಿಂಹಯ್ಯ: ನಾನು ಹುಟ್ಟಿನಿಂದಲೂ ಬಡತನದಲ್ಲಿಯೇ ಬೆಳೆದವನು. ಚಿಕ್ಕವನಿದ್ದಾಗ ಯಾವತ್ತು ಹೊಟ್ಟೆ ತುಂಬಾ ಊಟ ಮಾಡಿದ್ದೆನೋ ಗೊತ್ತಿಲ್ಲ. ಆಂಧ್ರದ ಮುಖ್ಯಮಂತ್ರಿ ಎನ್.ಟಿ. ರಾಮರಾಯರು ಕೆಜಿ ಅಕ್ಕಿಯನ್ನು 2 ರೂಪಾಯಿಗೆ ಮಾರಲು ಕ್ರಮ ಕೈಗೊಂಡಿದ್ದಾರೆ ಎಂದು ಕೇಳಿದೆ. ಸಂತೋಷ. ನಮ್ಮಲ್ಲಿಯೂ ನೀವು (ಸರ್ಕಾರ) ಇದೇ ರೀತಿ ರಿಯಾಯಿತಿ ದರದಲ್ಲಿ ಮಾರಾಟ ಮಾಡುತ್ತಿರಬಹುದು. ಇಲ್ಲ ಎನ್ನುವುದಿಲ್ಲ. ಆದರೆ ವಸ್ತು ಸ್ಥಿತಿ ಏನು ಗೊತ್ತೇ? ಕಡು ಬಡವನಿಗೆ ಅಕ್ಕಿ ಕೊಳ್ಳಲು ಶಕ್ತಿಯೇ ಇರುವುದಿಲ್ಲ. ರೊಟ್ಟಿ ಇಲ್ಲದಿದ್ದರೆ ಏನಾಯಿತು, ಕೇಕ್ ತಿನ್ನಿ ಎಂದು ಹೇಳಿದ ಹಾಗೆ ಆಗಿದೆ. ನಮ್ಮ ಕಡೆ ಅನ್ನ ಊಟ ಮಾಡೋದು ಹಬ್ಬದ ದಿನಗಳಲ್ಲಿ ಮಾತ್ರ. ನಮ್ಮ ಕಡೆ ಜನ ಉಪಯೋಗಿಸುವುದು ರಾಗೀನ. ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಜೋಳ ತಿನ್ನುತ್ತಾರೆ. ಹೀಗಾಗಿ ಅಕ್ಕಿ ಬದಲು 50 ಪೈಸೆಗೆ 1 ಕೆ.ಜಿ. ಜೋಳಕೊಡಿಸಿ. ರಾಗಿ-ಜೋಳವನ್ನು ಬಡವರಿಗೆ ಕಡಿಮೆ ಬೆಲೆಯಲ್ಲಿ ಕೊಡಿಸಿ.

ಜೆ.ಹೆಚ್. ಪಟೇಲ್ (ಭಾರಿ ಕೈಗಾರಿಕೆ ಮಂತ್ರಿ): ಇದನ್ನು ಸರ್ಕಾರ ಒಪ್ಪಿಕೊಳ್ಳುತ್ತದೆ. ಹಾಲಿ ರಾಜ್ಯಾದ್ಯಂತ ಕೆ.ಜಿ. ಅಕ್ಕಿಯನ್ನು ಎರಡು ರೂಪಾಯಿಗೆ ಕೊಡಲು ಸರ್ಕಾರಕ್ಕೆ 26 ಕೋಟಿ ರೂಪಾಯಿ ಸಬ್ಸಿಡಿ ಬಾಕಿ ಬೀಳುತ್ತಿದೆ. ಎಲ್ಲ ಕಡೆ ಅಕ್ಕಿ ಉಪಯೋಗಿಸುವುದಿಲ್ಲ ಎಂಬ ಮಾತನ್ನು ಸರ್ಕಾರ ಒಪ್ಪುತ್ತದೆ. ನೀರಾವರಿ ಪ್ರದೇಶದಲ್ಲಿ ಅಕ್ಕಿ ಬಳಕೆ ಆಗುತ್ತದೆಯೇ ವಿನಃ ಉಳಿದಂತೆ ರಾಗಿ-ಜೋಳವನ್ನೇ ಸಾಮಾನ್ಯ ಜನ ಬಳಸುತ್ತಾರೆ. ಆದುದರಿಂದ ಸನ್ಮಾನ್ಯ ನರಸಿಂಹಯ್ಯನವರ ಮಾತಿನಲ್ಲಿ ಸತ್ಯವಿದೆ. ಹೀಗೇ ಮಾಡ್ತೀವಿ.

(ವಿಧಾನ ಪರಿಷತ್ತು ಕಲಾಪ: ಆಗಸ್ಟ್ 20, 1985)

## ರಾಜ್ಯದಲ್ಲಿರುವ ಸ್ಥಿತಿ-ಗತಿ

ಒಬ್ಬ ತತ್ವಜ್ಞಾನಿ (ಫಿಲಾಸಫರ್) ಹೇಳಿದ ಸಮಾಜವೊಂದರ ಉದಾಹರಣೆಯನ್ನು ನಿಮಗಾಗಿ ಹೇಳಬಯಸುತ್ತೇನೆ.

ಭ್ರಷ್ಟಾಚಾರಕ್ಕೆ ಸಂಪೂರ್ಣ ಪೂರಕವಿರುವ ಸಮಾಜ ಮತ್ತು ವಾಸ್ತವಿಕ ಸ್ಥಿತಿಯಿಂದ ಭ್ರಷ್ಟಾಚಾರವೇ ಇಲ್ಲದಿರುವ ಸಮಾಜ ಎರಡು ರೀತಿಯ ಹೋಲಿಕೆ ಇಲ್ಲಿದೆ.

ತತ್ವಜ್ಞಾನಿಯ ಪ್ರಕಾರ ಎರಡು ಸ್ಥಿತಿಗಳು ಇಲ್ಲಿರುತ್ತವೆ. ಮೊದಲನೆಯದು ವ್ಯಕ್ತಿಗತ ಲಾಲಸೆ (individual greed); ಎರಡನೆಯದು ಯತಾರ್ಥ ಸನ್ನಿವೇಶ (objective conditions).

ಇದು ನಾನು ರಷ್ಯಾಕ್ಕೆ ಹೋಗಿದ್ದಾಗ ನನ್ನ ಅನುಭವಕ್ಕೆ ಬಂತು. ರಷ್ಯಾದ ಸಣ್ಣ ಪಟ್ಟಣವೊಂದಕ್ಕೆ ಹೋದೆ. ಅಲ್ಲಿ ನೂರಾರು ಮನೆಗಳು. ಸಣ್ಣ ಓಣಿಯೊಂದಕ್ಕೆ ಹೋದೆವು. ಆಶ್ಚರ್ಯವೆಂದರೆ ಯಾವ ಮನೆಗೂ ಬೀಗವೇ ಇಲ್ಲ.

ಏಕೆ ಯಾವ ಮನೆಗೂ ಬೀಗವೇ ಹಾಕಿದಂತಿಲ್ಲವಲ್ಲ ಎಂದು ಸಂಕೋಚದಿಂದ ನಮ್ಮ ಗೈಡ್‌ನ ಕೇಳಿದೆ. ಕಳ್ಳಕಾಕರು ಬೀಗ ಹಾಕದಿದ್ದಲ್ಲಿ ಒಳಗಿದ್ದುದನ್ನು ದೋಚಿಕೊಂಡು ಹೋದರೇನು ಗತಿ ಎಂಬ ಆತಂಕ ನನಗೆ.

ಆತ ಹೇಳಿದ. ಬೀಗ ಏತಕ್ಕೆ ಬೇಕು? ಈ ಮನೆಯಲ್ಲಿ ಏನಿರುತ್ತದೆಯೋ ಅದೇ ವಸ್ತು ಪಕ್ಕದ ಮನೆಯಲ್ಲೂ ಇರುತ್ತದೆ. ಇಲ್ಲಿ ಕೋಳಿ ಮೊಟ್ಟೆ ಇದ್ದರೆ ಅಲ್ಲೂ ಕೋಳಿ ಮೊಟ್ಟೆಯೇ ಇರುತ್ತದೆ. ಇಲ್ಲಿ ಹಂದಿ ಮಾಂಸ ಇದ್ದರೆ ಅಲ್ಲೂ ಅದೆ.

ಇದನ್ನು ಬಿಟ್ಟು ಬಂಗಾರವಿಲ್ಲ, ಬೆಳ್ಳಿ ಇಲ್ಲ. ಇದಕ್ಕಾಕೆ ಬೇಕು ಬೀಗ? ಎಂದ.

ಈ ತರಹದ ಆಬ್ಜೆಕ್ಟೀವ್ ಕಂಡೀಷನ್ಸ್ ಇರುವುದರಿಂದ ಅಲ್ಲಿ ಇಂಡಿವಿಜುಯಲ್ ಗ್ರೀಡ್‌ಗೆ ಆಸ್ಪದವೇ ಇಲ್ಲ.

(ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ) ವಿಧಾನ ಸಭೆ, ಫೆಬ್ರವರಿ 6, 1986)

## ಬೆಂಗಳೂರು - ಮೈಸೂರು ಹೈವೇ ಮುಗಿಯದ ಕಥೆ

ಕೆ.ಎನ್. ನಾಗೇಗೌಡ : ಮೈಸೂರು- ಬೆಂಗಳೂರು ರಾಜ್ಯ ಹೆದ್ದಾರಿಯನ್ನು ಎಕ್ಸ್‌ಪ್ರೆಸ್ ಹೈವೇ ಮಾಡುವ ಯೋಜನೆ ಎಲ್ಲಿವರೆಗೆ ಬಂದಿದೆ?

ಜೆ.ಹೆಚ್. ಪಟೇಲ್ (ಉಪಮುಖ್ಯ ಮಂತ್ರಿ): ತಾತ್ವಿಕವಾಗಿ ಮೈಸೂರು- ಬೆಂಗಳೂರು ನಡುವಣ ಹೈವೇ ರಸ್ತೆ ನಿರ್ಮಾಣವನ್ನು ಖಾಸಗಿ ಸಂಸ್ಥೆಗೆ ವಹಿಸಿಕೊಡುವ ತೀರ್ಮಾನ ಮಾಡಿದ್ದೇವೆ. ನಾನು ಮಲೇಷಿಯಾದಲ್ಲಿದ್ದಾಗ ಖಾಸಗಿ ಸಂಸ್ಥೆಯೊಂದಿಗೆ ತಿಳುವಳಿಕೆ ಒಪ್ಪಂದ ಮಾಡಿಕೊಂಡಿದ್ದಾಯಿತು. ಇದೇ ರೀತಿ ಮಾನ್ಯ ಮುಖ್ಯ ಮಂತ್ರಿ ದೇವೇಗೌಡರು ಅಮೇರಿಕೆಯ ಸಂಸ್ಥೆಯೊಂದರೊಡನೆ ತಿಳುವಳಿಕೆ ಒಪ್ಪಂದ ಮಾಡಿಸಿದ್ದಾರೆ. ಈ ಎರಡರ ಪೈಕಿ ಯಾವುದರಿಂದ ರಾಜ್ಯದ ಹಿತ ಸರಿಯಾದೀತೋ ಅದನ್ನು ಒಪ್ಪಿಕೊಳ್ಳುತ್ತೇವೆ.

ಶಿವಾನಂದ ಹೆಚ್. ಕೌಜಲಗಿ (ಲೋಕೋಪಯೋಗಿ ಖಾತೆ ಮಂತ್ರಿ) : ಬೆಂಗಳೂರು- ಮೈಸೂರು ಎಕ್ಸ್‌ಪ್ರೆಸ್ ಹೈವೇ ಯೋಜನೆಗೆ ಸುಮಾರು 500 ಕೋಟಿ ರೂಪಾಯಿಗಳ ವೆಚ್ಚ

ತಗುಲುವುದೆಂದು ಅಂದಾಜು ಮಾಡಲಾಗಿದೆ. ಹೈವೆ ನಿರ್ಮಾಣದ ಬಳಿಕ ಈಗಿರುವ 139 ಕಿಲೋಮೀಟರ್ ದೂರ 129 ಕಿಲೋಮೀಟರ್ ಇಳಿಯುವ ಸಾಧ್ಯತೆಗಳಿವೆ.

ವಾಟಾಳ್ ನಾಗರಾಜ್ : ಹೈವೆ ರಸ್ತೆ ಯೋಜನೆ ಮುಗಿದ ನಂತರ ಹಾಕಿದ ಹಣ ಹಿಂದಕ್ಕೆ ಪಡೆಯಲು ಯಾರ್‍ಯಾರ ತಲೆ ಮೇಲೆ ಈ ಹಣ ಹಾಕ್ತೀರಿ? ಜನಗಳಿಂದ ಎಷ್ಟು ವಸೂಲು ಮಾಡ್ತೀರಿ?

ಜೆ.ಹೆಚ್. ಪಟೇಲ್: ಹೈವೆ ಎಂದರೆ ಆರು ಲೈನು ಬರುತ್ತದೆ. ಹೋಗುವುದಕ್ಕೆ ಮೂರು, ಬರುವುದಕ್ಕೆ ಮೂರು. ಮಧ್ಯೆ ಮಧ್ಯೆ ವಿಶ್ರಮಿಸಿಕೊಳ್ಳುವ ಕೇಂದ್ರ, ಟೆಲಿಫೋನ್ ಬೂತ್, ಪೆಟ್ರೋಲ್ ಬಂಕ್ - ಇವೇ ಮೊದಲಾದ ಸೌಲಭ್ಯವಿರುತ್ತದೆ. ಇದೊಂದು ಡೆಡಿಕೇಟೆಡ್ ರಸ್ತೆ ಎಂದು ಆಗುತ್ತದೆ. ಇದಕ್ಕಾಗಿ ಟೋಲ್ ವ್ಯವಸ್ಥೆ ಆಗುತ್ತದೆ. ಖರ್ಚನ್ನು ಅವಲಂಬಿಸಿ ಸುಂಕ ಹಾಗೂ ಎಷ್ಟು ವರ್ಷ ಸುಂಕ ವಸೂಲು ಮಾಡಬೇಕು ಎಂಬುದು ನಿರ್ಧಾರವಾಗುತ್ತದೆ.

(ವಿಧಾನಸಭೆ ಕಲಾಪ : ಮಾರ್ಚ್ 27, 1995)

## ಪಾವಗಡದಲ್ಲಿ ತೋಳ,, ಮಂಡ್ಯದಲ್ಲಿ ಹಲ್ಲಿ

ಸಂದರ್ಭ: ಪರಿಶಿಷ್ಟ ಜಾತಿ ಮತ್ತು ವರ್ಗಗಳ ವಿದ್ಯಾರ್ಥಿ ನಿಲಯವೊಂದರಲ್ಲಿ ಆಹಾರದಲ್ಲಿ ವಿಷಮಿಶ್ರಿತವಾಗಿ ಸುಮಾರು 70 ಮಕ್ಕಳು ಅಸ್ವಸ್ಥರಾದ ಘಟನೆಯೊಂದರ ಬಗೆಗೆ ವಿಧಾನ ಪರಿಷತ್ತಿನಲ್ಲಿ ಪ್ರಸ್ತಾವ ನಡೆದಿರುತ್ತದೆ. ಮುಖ್ಯಮಂತ್ರಿ ಶ್ರೀ ರಾಮಕೃಷ್ಣಹೆಗಡೆಯವರ ನೇತೃತ್ವದ ಜನತಾ ಸರ್ಕಾರ ಆಡಳಿತದಲ್ಲಿದ್ದ ಕಾಲ. ಪ್ರತಿಪಕ್ಷದ ಶಾಸಕರಿಗೆ ಸರ್ಕಾರದ ಮತ್ತು ಮಂತ್ರಿಗಳ ಕಾರ್ಯವಿಧಾನವನ್ನು ಟೀಕಿಸುವ ಆಸಕ್ತಿ ಮತ್ತು ತವಕ. ಸದನದಲ್ಲಿದ್ದ ಅಬಕಾರಿ ಖಾತೆ ಮಂತ್ರಿ ಪಟೇಲರು ಪ್ರಸ್ತಾಪಕ್ಕೆ ತಮ್ಮದೇ ಆದ ಧಾಟಿಯಲ್ಲಿ ಉತ್ತರಿಸಿ ಚರ್ಚೆಯ ದಾರಿಯನ್ನು ಸುಗಮಗೊಳಿಸಿದ ಸನ್ನಿವೇಶ ಇದು.

ಕೆ.ಎನ್. ನಾಗೇಗೌಡ: ಮಂಡ್ಯದಲ್ಲಿ ಇತ್ತೀಚೆಗೆ-ಆಗಸ್ಟ್ 29 ರಂದು, ಸಾರ್ವಜನಿಕ ವಿದ್ಯಾರ್ಥಿನಿಲಯದಲ್ಲಿ ವಿಷಮಿಶ್ರಿತ ಆಹಾರ ಸೇವಿಸಿ 70-80 ಮಕ್ಕಳು ತೀವ್ರ ಅಸ್ವಸ್ಥರಾದ ವಿಷಯ ಪ್ರಸ್ತಾಪಿಸುತ್ತಿದ್ದೇವೆ. ಇಲ್ಲಿಂದ 70 ಮೈಲಿ ದೂರವಿರುವ ಮಂಡ್ಯದಲ್ಲಿ ನಡೆದ ದುರ್ಘಟನೆ ಬಗೆಗೆ ವಿಚಾರಿಸಲು ಈ ಸರ್ಕಾರದ ಯಾವ ಮಂತ್ರಿಗಳೂ ಹೋಗದಿರುವುದು ದುರಾದೃಷ್ಟ.

ಬಿ.ಜೆ. ಪುಟ್ಟಸ್ವಾಮಿ: ಮಾನ್ಯ ಸಭಾಪತಿಯವರೇ, ಇದು ಲಘುವಾಗಿ ತೆಗೆದುಕೊಳ್ಳುವ ವಿಷಯವಲ್ಲ. ಈ ಸದನದಲ್ಲಿ ಹಿಂದೊಮ್ಮೆ ಇಂತಹ ಪ್ರಸಂಗದ ಬಗೆಗೆ ಪ್ರಸ್ತಾಪಿಸಿದಾಗ ಪುನಃ ಹೀಗಾಗದಂತೆ ನೋಡಿಕೊಳ್ಳುವುದಾಗಿ ಸರ್ಕಾರ ಭರವಸೆ ನೀಡಿತ್ತು. ಆಟೋ ಸ್ಟ್ರೈಕ್ ನಡೆದರೆ ಮುಖ್ಯಮಂತ್ರಿ ಹೋಗುತ್ತಾರೆ. ಆದರೆ ಇಲ್ಲಿ ಹುಡುಗರು ಹಲ್ಲಿ ವಿಷ ತಿಂದು ಸಾಯುತ್ತಿರುವಾಗ ಯಾವುದೇ ಮಂತ್ರಿಯೂ ಹೋಗಿಲ್ಲ ಎಂದರೆ?

ಎಸ್. ಮಲ್ಲಿಕಾರ್ಜುನಯ್ಯ: ಶ್ರೀ ಪುಟ್ಟಸ್ವಾಮಿಗೌಡರು ಇಲ್ಲಿ ಕುಳಿತಿದ್ದರೆ ಬೇರೆ ವಿಷಯವನ್ನು ತೆಗೆದುಕೊಳ್ಳುವುದಕ್ಕೇ ಬಿಡುತ್ತಿರಲಿಲ್ಲ. ಮಾನ್ಯ ಕೃಷ್ಣಐಯ್ಯರವರೂ ಅಷ್ಟೆ. ಅವರು ಕುರ್ಚಿ ಮೇಲೆ ಕುಳಿತುಕೊಳ್ಳದೇ ಕುಪ್ಪಳಿಸಿ, ಕುಪ್ಪಳಿಸಿ ಕೇಳುತ್ತಿದ್ದರು - ಇದು ಸೂಕ್ಷ್ಮವಾದ ವಿಚಾರ.

ವಿ.ಎಸ್. ಕೃಷ್ಣ ಐಯ್ಯರ್: ಎಲ್ಲಿ ಸತ್ಯ, ನ್ಯಾಯ, ನೀತಿ, ಧರ್ಮಕ್ಕೆ ಅಡ್ಡಿ ಇದೆ. ಅದರ ಬಗ್ಗೆ ಹೇಳಲೇಬೇಕಾಗುತ್ತದೆ.

ಅಬ್ದುಲ್ ನಜೀರ್ ಸಾಬ್ (ಗ್ರಾಮೀಣಾಭಿವೃದ್ಧಿ ಖಾತೆ ಮಂತ್ರಿ): ಸಂಬಂಧಪಟ್ಟ ಸಚಿವರಿಗೆ ಹೇಳಿಕಳುಹಿಸಿದ್ದೇನೆ. ಅವರು ಕೆಳಗಿನ ಮನೆಯಲ್ಲಿದ್ದಾರೆ. ಅವರಿಂದ ಒಂದು ಹೇಳಿಕೆ ಕೊಡಿಸೋಣ.

ಸಭಾಪತಿಗಳು (ರೆಹಮಾನ್ ಖಾನ್): (ಇಂಗ್ಲೀಷಿನಲ್ಲಿ) ಇದು ಬಹಳ ಮುಖ್ಯವಾದ ವಿಚಾರ. ಸಂಬಂಧಪಟ್ಟ ಮಂತ್ರಿಗಳು ಅವರ ಖಾತೆ ವಿಷಯ ಚರ್ಚಿತವಾಗುತ್ತಿರುವಾಗ ಹಾಜರಿಲ್ಲದಿರುವುದು ಇದು ಎರಡನೇ ಬಾರಿ.

ಬಿ. ರಾಚಯ್ಯ (ಶಿಕ್ಷಣ ಖಾತೆ ಸಚಿವರು): (ಆಗತಾನೆ ಪ್ರವೇಶಿಸಿ) ಕೆಳ ಮನೆಯಲ್ಲಿದ್ದೆ.. ನಮ್ಮ ಅಧಿಕಾರಿಗಳ ಪ್ರಕಾರ ಮಂಡ್ಯದ ಸಾರ್ವಜನಿಕರ ಹಾಸ್ಟೆಲಿನಲ್ಲಿ ಮಕ್ಕಳಿಗೆ ಕೊಟ್ಟ ಬಿಳಿ ಅನ್ನದಲ್ಲಿ ಸತ್ತ ಹಲ್ಲಿ ಸಿಕ್ಕಿರುವುದಾಗಿ ವರದಿಯಾಗಿದೆ.

ಟಿ.ಎನ್. ನರಸಿಂಹಮೂರ್ತಿ(ವಿರೋಧ ಪಕ್ಷದ ನಾಯಕರು): (ಇಂಗ್ಲೀಷಿನಲ್ಲಿ) ನೀವು ಯಾವಾಗಲೂ ಮೈಸೂರು, ಬೆಂಗಳೂರು ನಡುವೆಯೇ ಓಡಾಡುತ್ತಿರುತ್ತೀರಿ. ನೀವೇ ಘಟನೆ ನಡೆದ ಸ್ಥಳಕ್ಕೆ ಭೇಟಿ ಕೊಡಬಹುದಾಗಿತ್ತು.

ಬಿ. ರಾಚಯ್ಯ: ಭಾನುವಾರ ನನಗೆ ಸೂರತ್ಕಲ್ ಎಂಜನಿಯರಿಂಗ್ ಕಾಲೇಜಿನಲ್ಲಿ ಜನರಲ್ ಬಾಡಿ ಮೀಟಿಂಗ್ ಇತ್ತು.

ಬಿ.ಜೆ. ಪುಟ್ಟಸ್ವಾಮಿ: ತಾವು ಹೋಗಬೇಕೆಂದೇನೂ ಇಲ್ಲ. ಸಂಬಂಧಪಟ್ಟ ಮಂತ್ರಿಗಳಾದರೂ ಹೋಗಬೇಕಿತ್ತು. ಇಲಾಖೆಯನ್ನು ವಹಿಸಿಕೊಂಡ ಮಂತ್ರಿಗಳು ಹೋಗಿ ಬರಬೇಕಾಗಿತ್ತು.

ಎ.ಕೆ. ಸುಬ್ಬಯ್ಯ: ಹಲ್ಲಿಗಳನ್ನು ಹಿಡಿತದಲ್ಲಿಟ್ಟುಕೊಳ್ಳತಕ್ಕ ಇಲಾಖೆ ಯಾವುದು ಎಂಬುದನ್ನು ನೋಡಬೇಕಾಗುತ್ತದೆ.

ಎಲ್.ಜಿ. ಹಾವನೂರ್: ಪಾವಗಡದಲ್ಲಿ ತೋಟಗಳ ಕಾಟವಾದರೆ, ಮಂಡ್ಯದಲ್ಲಿ ಹಲ್ಲಿಗಳ ಕಾಟ.

**ಜೆ.ಹೆಚ್. ಪಟೇಲ್ (ವಿದ್ಯುತ್ ಮತ್ತು ಅಬಕಾರಿ ಮಂತ್ರಿ):** ವಿರೋಧ ಪಕ್ಷದ ನಾಯಕರು ಮತ್ತು ನಾಗೇಗೌಡರು ಇಷ್ಟು ಹೃದಯ ಸ್ಪರ್ಶಿ ವಿಷಯವನ್ನು ನಾನು ಹಗುರವಾಗಿ ನೋಡುತ್ತಿದ್ದೇನೆಂದು ಹೇಳುತ್ತಿದ್ದಾರೆ. ಆದರೆ ಅವರು ಹೇಳುವ ರೀತಿ ಹಗುರವಾಗಿತ್ತು. ಹರಿಜನ ಮಕ್ಕಳು ವಿಷ ಸೇವಿಸಿ ಸಾಯುತ್ತಾರೆಂದರೆ ಯಾವ ಸರ್ಕಾರವಾಗಲೀ ಬೇಜವಾಬ್ದಾರಿ ಅಥವಾ ನಿರ್ಲಕ್ಷ್ಯದಿಂದ ನೋಡುತ್ತದೆಯೇ? ಇವರ ಕಾಲದಲ್ಲಿ ಹರಿಜನರ ಮೇಲೆ ಹೀಗಾಯಿತು ಎಂದರೆ ನನಗೇಕೋ ಅನುಮಾನ.

(ವಿಧಾನ ಪರಿಷತ್ತು ಕಲಾಪ: ಸೆಪ್ಟೆಂಬರ್ 8, 1983)

## "ತಾಳಿ" ಜಗಳ

**ಕೆ.ಹೆಚ್. ಪಾಟೀಲ್:** ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದವರನ್ನು ಮೇಲೆತ್ತಲು ತರ್ಕಬದ್ಧ ಮೀಸಲು ಅಗತ್ಯ ಎನ್ನುವುದು ಇಂದಿನ ಜನತಾಪಕ್ಷದ ಸರ್ಕಾರದ ವಾದ. ಇವತ್ತು ಪರಿಶಿಷ್ಟ ಜಾತಿಗೆ ಏನು ಮಾಡಿದ್ದೀರಿ ಎಂಬ ಬಗೆಗೆ ಸರ್ಕಾರದ ಹೇಳಿಕೆಯಲ್ಲಿ ವಿವರವಿಲ್ಲ. ಎಸ್.ಟಿ. ಯವರಿಗೆ ಏನು ಮಾಡಿದ್ದಾರೆ ಎಂಬ ವ್ಯಾಖ್ಯಾನವಿಲ್ಲ. ಅದು ಹೋಗಲಿ ಹೆಣ್ಣು ಮಕ್ಕಳ ಸಲುವಾಗಿ ಏನೆಲ್ಲಾ ಹೇಳಿಕೊಳ್ಳುತ್ತಿದ್ದೀರಲ್ಲಾ ಅವರ ಅಭಿವೃದ್ಧಿಗೆ ಈ ಸರ್ಕಾರ ಮಾಡಿದ್ದೇನು? ಎಷ್ಟು ವರ್ಕಿಂಗ್ ವುಮೆನ್ಸ್ ಹಾಸ್ಟೆಲ್ ತೆಗೆದಿದ್ದೀರಿ ಹೇಳಿ?

**ಜೆ.ಹೆಚ್. ಪಟೇಲ್ (ಭಾರಿ ಕೈಗಾರಿಕೆ ಮಂತ್ರಿ):** ಮೊನ್ನೆ ನೀವೇ ಹೇಳಿದಿರಿ ಇರಿಗೇಷನ್‌ಗೆ ದುಡ್ಡು ಹಾಕಿ, ಪವರ್‌ಗೆ ದುಡ್ಡು ಹಾಕಿ ಎಂದು. ಇದೇ ಸಂದರ್ಭದಲ್ಲಿ "ಇಂತಹ ಪ್ರಮುಖ ಯೋಜನೆಗಳನ್ನು ಬಿಟ್ಟು ಸೀರೆ ಕೊಡ್ತೀವಿ ಎಂದರೆ ಹೇಗೆ" ಎಂದು ಮೂದಲಿಸಿದಿರಿ. ಈಗ ಹೀಗೆ ಹೇಳ್ತಿದೀರಿ. ತಾಳಿಯನ್ನು ಗಂಡಸರಿಗೆ ಕಟ್ಟಲಾಗುತ್ತೇನು?

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ:-** ಊರಿಗೆಲ್ಲಾ ಕಟ್ಟಿಸ್ತೀರಾ ನೀವು ತಾಳೀನಾ?

**ಬಿ. ಬಸವಲಿಂಗಪ್ಪ:** ಮಾನ್ಯ ಜೆ.ಹೆಚ್. ಪಟೇಲರು ತಾಳಿ ಕಟ್ಟುವ ಯೋಜನೆಯನ್ನು ಹೇಳಿದರು. ಅದು ಗಂಡಸರು ಹೆಣ್ಣು ಮಕ್ಕಳಿಗೆ ಕಟ್ಟುವಂತಹದು. ಮದುವೆಯಾಗುವಾಗ ಗಂಡಸು ಹೆಂಗಸಿಗೆ ತಾಳಿ ಕಟ್ಟುತ್ತಾನೆ. ಈಗ ಹೆಣ್ಣುಮಕ್ಕಳಲ್ಲಿ ಪ್ರಗತಿಶೀಲವಾದಂತಹ ಒಂದು ನಿಲುವು-ಚಿಂತನೆ ಬರುತ್ತಿದೆ. ಅದು ನಿಮ್ಮ ಗಮನಕ್ಕೆ ಬಂದಂತಿಲ್ಲ. ಹೆಣ್ಣು ಮಕ್ಕಳೇ ಗಂಡಸಿಗೆ ತಾಳಿ ಬಿಗಿದು ಗಂಡ ಎಂದು ಕರೆಯಬೇಕೆಂಬುದೇ ಈ ಚಿಂತನೆ.

**ಜೆ.ಹೆಚ್. ಪಟೇಲ್:** ಪ್ರಗತಿಪರವಾದ ಯಾವುದೇ ಸಲಹೆ ಬಂದರೂ ನಾನು ಗಮನಿಸುತ್ತೇನೆ. ಅಷ್ಟೇ ಅಲ್ಲ ನಾನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಒಂದು ಸಲಹೆ ಮಾಡುತ್ತೇನೆ. ಎಲ್ಲರೂ ಶ್ರೀಮತಿ ಬಸವಲಿಂಗಪ್ಪ, ಶ್ರೀಮತಿ ಜೆ.ಹೆಚ್. ಪಟೇಲ್ ಎಂದು ಹೇಳಿಕೊಳ್ಳುವುದನ್ನ ಬಿಟ್ಟು ನಾವೇ ನಮ್ಮ ಹೆಂಡರ ಹೆಸರನ್ನು ನಮ್ಮ ಹೆಸರಿನ ಮುಂದೆ ಸೇರಿಸಿ ಕರೆದುಕೊಂಡರೆ ತಪ್ಪೇನು?

ಕೆ.ಎಚ್. ಪಾಟೀಲ್: ನಿಜ. ಜೆ.ಹೆಚ್. ಪಟೇಲರು ಪ್ರಗತಿಶೀಲರು. ಅವರು ಹೇಳಿದುದನ್ನು ಕಾರ್ಯರೂಪಕ್ಕೆ ತರುವ ಚಿಂತಕರು. ಹೀಗಾಗಿ ಈಗ ಏನು ಹೇಳಿದ್ದಾರೆ ಅದನ್ನು ಕಾರ್ಯರೂಪಕ್ಕೆ ಯಾವಾಗ ತರುತ್ತಾರೋ ನೋಡೋಣ.

(ವಿಧಾನ ಸಭೆ ಕಲಾಪ : ಫೆಬ್ರವರಿ 6, 1986)

## 'ತಾಳಿ'; ಭಾವನಾತ್ಮಕ ನೆರವು

ಶ್ರೀಮತಿ ಮುಕ್ತರುನ್ನಿಸಾ: (ಇಂಗ್ಲೀಷಿನಲ್ಲಿ) ಈ ಸರ್ಕಾರ ಕೆಲವು ಸಾಂಪ್ರದಾಯಿಕ ಆಚರಣೆಗಳಿಗೆ ಯಾಕೆ ಕೈಹಾಕಿತೋ ತಿಳಿಯದು. ವಿವಾಹ ಕಾಲದಲ್ಲಿ ತಾಳಿಕೊಳ್ಳುವಷ್ಟು ಯೋಗ್ಯತೆ ಸಾಮಾನ್ಯ ಜನಕ್ಕಿಲ್ಲ ಎಂದು ಹೇಗೆ ನಿರ್ಣಯಕ್ಕೆ ಬಂದಿರಿ? ಪ್ರತಿ ವ್ಯಕ್ತಿಗೂ ತನ್ನದೇ ಆದ ಗೌರವವಿದೆ.

ಬಿ.ಜಿ. ಕೊಟ್ರಪ್ಪ: ಸಭಾಧ್ಯಕ್ಷರೇ, ಹಿಂದೂ ಧರ್ಮದ ಕೆಲವು ಆಚರಣೆ ಬಗೆಗೆ ಮಾನ್ಯ ಸದಸ್ಯಣಿಯವರಿಗೆ ಪೂರ್ಣ ಮಾಹಿತಿ ತಿಳಿದಂತಿಲ್ಲ. ಹೀಗಾಗಿ ಟೀಕೆ ಏಕೆ?

ಜೆ.ಹೆಚ್. ಪಟೇಲ್ (ಭಾರಿ ಕೈಗಾರಿಕೆ ಮಂತ್ರಿ): ಬಡಜನರಿಗೆ ಭಾವನಾತ್ಮಕವಾದ ಕೆಲವು ಸಾಂಪ್ರದಾಯಿಕ ಆಚರಣೆಯಲ್ಲಿ ನೆರವಾಗುವುದೇ ನಮ್ಮ ಉದ್ದೇಶ. ಹೀಗಾಗಿ ತಾಳಿ ಯೋಜನೆ ತಂದಿದ್ದೇವೆ ವಿನಹ ಶಕ್ತಿ ಇಲ್ಲ ಎಂಬುದು ಇದರ ಅರ್ಥವಲ್ಲ. ಆಯಿತು... ಸರಕಾರ, ಕಟ್ಟುವ ಗಂಡಸಿಗೆ ತಾಳಿ ಕೊಡುತ್ತದೆಯೇ ವಿನಃ, ತಾನೇ ಹೋಗಿ ತಾಳಿಯನ್ನಂತೂ ಕಟ್ಟೋಲ್ಲವಲ್ಲಾ.

ಶ್ರೀಮತಿ ನಾಗರತ್ನಮ್ಮ: ಶ್ರೀಮತಿ ಮುಕ್ತರುನ್ನೀಸಾರವರ ಪ್ರಶ್ನೆ ಅದಲ್ಲ. ಬಹಳ ತೂಕದ ಚಿಂತನೆ ಅವರ ಪ್ರಶ್ನೆಯಲ್ಲಿದೆ. ಹಾಗೊಮ್ಮೆ ಲಗ್ನವಾದ ಹೆಣ್ಣು ಮಗಳು ಪತಿಯನ್ನು ಕಳೆದುಕೊಂಡಾಗ.....

ಕೆ.ಹೆಚ್. ಶ್ರೀನಿವಾಸ: ಮಾನ್ಯ ಸಭಾಧ್ಯಕ್ಷರೇ.. ಇಂತಹ ಸಂದರ್ಭದಲ್ಲಿ ಇವರ ಅಧಿಕಾರಿಗಳು ಅಲ್ಲಿಗೆ ಹೋಗಿ ತಾಳಿಯನ್ನು ವಾಪಸ್ ಕೇಳಿದರೂ ಆಶ್ಚರ್ಯವಿಲ್ಲ.

ಶ್ರೀಮತಿ ಮುಕ್ತರುನ್ನೀಸ: (ಇಂಗ್ಲೀಷಿನಲ್ಲಿ) ಶ್ರೇಷ್ಠತೆಯ ಮತ್ತು ಶುಭದ ಸಮಾರಂಭದಲ್ಲಿ ನೀವು ಕೊಡುವ ತಾಳಿಗಾಗಿ ಯಾರೂ ಕಾದು ಕುಳಿತುಕೊಳ್ಳುವುದಿಲ್ಲ. ಬದಲು ಬಡ ಹೆಣ್ಣು ಮಗಳಿಗೆ, ಬಡ ವರನಿಗೆ ಸಣ್ಣ ವ್ಯಾಪಾರ ಇಲ್ಲವೇ ಉದ್ಯೋಗ ಮಾಡಲು ನಿರ್ದಿಷ್ಟ ರೂಪದಲ್ಲಿ ಸಹಾಯಧನ ನೀಡಿ. ಅದೂ ಉಪಕಾರವೇ.

(ವಿಧಾನಸಭೆ ಕಲಾಪ: ಫೆಬ್ರವರಿ 6, 1986)

## ಚನ್ನಗಿರಿ ಸಹೋದ್ಯೋಗಿಗೆ ಕಂಬನಿ

ಸಂದರ್ಭ: ಪಟೇಲರ ರಾಜಕಾರಣದ ಎದುರಾಳಿ ಮಾನ್ಯ ಎನ್.ಜಿ. ಹಾಲಪ್ಪನವರು ಎರಡುಬಾರಿ ಪಟೇಲರ ವಿರುದ್ಧ ಗೆದ್ದು ರಾಜ್ಯ ಸಚಿವ ಸಂಪುಟದಲ್ಲಿ ಕೆಲಕಾಲ ಮಂತ್ರಿ ಆಗಿದ್ದವರು. ಸದನದಲ್ಲಿ ಅವರ ನಿಧನಕ್ಕೆ ಪಟೇಲರು ಸಂತಾಪ ಸೂಚಿಸಿ, ಎನ್.ಜಿ. ಹಾಲಪ್ಪನವರ ಗುಣಗಾನ ಮಾಡಿದರು.

ದಿವಂಗತ ಎನ್.ಜಿ. ಹಾಲಪ್ಪನವರನ್ನು ಇವತ್ತು ನೆನಪು ಮಾಡಿಕೊಳ್ಳುತ್ತಿದ್ದೇವೆ. ಅವರು ವೃತ್ತಿಯಲ್ಲಿ ವಕೀಲರಾಗಿದ್ದರು. ಅವರಿಗೆ ರಾಜಕಾರಣದಲ್ಲಿ ಅಂಥ ಆಸಕ್ತಿ ಇರಲಿಲ್ಲ. ಒಳ್ಳೆಯ ವಕೀಲರಾಗಿದ್ದರು. ಶಿವಮೊಗ್ಗದಲ್ಲಿದ್ದಾಗ ತುಂಬಾ ಚೆನ್ನಾಗಿ ಪ್ರಾಕ್ಟೀಸ್ ಇತ್ತು. 1967ನೇ ಇಸವಿಯಲ್ಲಿ ನಮ್ಮ ಪಾರ್ಟಿಯೇ ಆದ ಸೋಸಿಯಲಿಸ್ಟ್‌ನಲ್ಲಿ ಚನ್ನಗಿರಿ ಕ್ಷೇತ್ರದಲ್ಲಿ ಚುನಾವಣೆಗೆ ನಿಂತು ಸದಸ್ಯರಾದರು. ಮತ್ತೆ ಕಾರಣಾಂತರದಿಂದ ಏನೇನೋ ಬದಲಾವಣೆಗಳು ಆದುವು. ಅವರು ನಮ್ಮ ಪಾರ್ಟಿಯನ್ನು ಬಿಟ್ಟು ಕಾಂಗ್ರೆಸ್ ಪಾರ್ಟಿಯನ್ನು ಸೇರಿ ಅದೇ ಚನ್ನಗಿರಿಯಲ್ಲಿ ನನ್ನ ಎದುರು ಚುನಾವಣೆಗೆ ನಿಂತುಗೆದ್ದರು. ಎರಡು ಸಾರಿ ನನ್ನನ್ನು ಸೋಲಿಸಿದರು.

ಗೆದ್ದರೂ, ಸೋತರೂ ವೈಯಕ್ತಿಕವಾಗಿ ವಿಶ್ವಾಸ ಮತ್ತು ಸ್ನೇಹವನ್ನು ನಾವು ಕಳೆದುಕೊಳ್ಳಲಿಲ್ಲ. ಚನ್ನಗಿರಿ ಕ್ಷೇತ್ರದಲ್ಲಿ ಸ್ವಲ್ಪ ಒರಟುತನ, ಚುನಾವಣೆಯ ಸಮಯದಲ್ಲಿ ಹೊಡೆದಾಟ ಇದೆಲ್ಲ ಸ್ವಾಭಾವಿಕ. ಆದರೆ ನಮ್ಮಿಬ್ಬರ ಮಧ್ಯೆ ಯಾವುದೇ ತಾರತಮ್ಯ, ದ್ವೇಷವಾಗಲೀ ಇರಲಿಲ್ಲ.

ಮೊನ್ನೆ ಮೊನ್ನೆ ಅವರು ಅನಾರೋಗ್ಯದಿಂದ ಬಹಳವಾಗಿ ಬಳಲಿದ್ದರು. ನಾನು ಅವರ ಮನೆಗೆ ಹೋಗಿ ನೋಡಿ ನೀನು ಬೆಂಗಳೂರಿಗೆ ಬಾರಪ್ಪ ಇನ್ನೂ ಹೆಚ್ಚಿನ ಚಿಕಿತ್ಸೆ ಮತ್ತು ಪರೀಕ್ಷೆ ಮಾಡಿಸಲೇಬೇಕು ಎಂದು ಹೇಳಿದ್ದೆ. ಅದಕ್ಕೆ ಅವರು ಒಪ್ಪಿಕೊಂಡು ಬೆಂಗಳೂರಿಗೆ ಬಂದಿದ್ದರಂತೆ, ನಾನು ಆ ಸಮಯದಲ್ಲಿ ವಿದೇಶಕ್ಕೆ ಹೋಗಿದ್ದೆ. ಅನಂತರ ಅವರ ನಿಧನವಾಯಿತು.

ಎನ್.ಜಿ. ಹಾಲಪ್ಪನವರ ಕುಟುಂಬದವರೆಲ್ಲ ನನಗೆ ಬಹಳ ಹತ್ತಿರದವರು. ಅವರ ಊರಿಗೂ ಸಹ ಹೋಗಿದ್ದೆ. ನನ್ನ ದುಃಖವನ್ನು ಕೂಡ ಅವರಲ್ಲಿ ವ್ಯಕ್ತಪಡಿಸಿದ್ದೆ. ಇವತ್ತು ಸದನದಲ್ಲಿ ಮತ್ತೊಮ್ಮೆ ನೆನೆಸಿಕೊಂಡು ನನ್ನ ಸಂತಾಪವನ್ನು ವ್ಯಕ್ತಪಡಿಸುತ್ತೇನೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಜುಲೈ 28, 1997)

## ದೇವ ಚಿಂತನೆ; ಪಟೇಲರಿದ್ದ ಪರಿಸರ

ಸಂದರ್ಭ: ವಿವಿಧ ಇಲಾಖೆಗಳ ವಾರ್ಷಿಕ ಬೇಡಿಕೆ ಮೇಲಿನ ಚರ್ಚೆ ನಡೆದಿತ್ತು. ಕೈಗಾರಿಕಾ, ವಿದ್ಯುತ್, ರೇಷ್ಮೆ, ಸಂಸದೀಯ ಮತ್ತಿತರ ಇಲಾಖೆ ಬೇಡಿಕೆ ಸದನದಲ್ಲಿ ಪ್ರಸ್ತಾಪಿತವಾಗಿತ್ತು. ಕಾನೂನು ಮತ್ತು ಸಂಸದೀಯ ಸಚಿವ ಪ್ರೊ ಎ. ಲಕ್ಷ್ಮೀಸಾಗರ್ ಮತ್ತು ವಿದ್ಯುತ್ ಸಚಿವ ಜೆ.ಹೆಚ್. ಪಟೇಲರೇ ಅಂದು ಸದನದಲ್ಲಿ ಹಾಜರಿದ್ದ ಮುಂದಿನ ಪಂಕ್ತಿಯ ಮಂತ್ರಿಗಳು. ಪಟೇಲರು ನೋಟ್ಸ್ ಬರೆದುಕೊಳ್ಳುತ್ತಾ ಕುಳಿತಿದ್ದರು.

ಪ್ರೊ: ಲಕ್ಷ್ಮೀಸಾಗರ್: (ಮಾತಿನ ಮಧ್ಯೆ) ದೇವರು ಎಲ್ಲಾ ಕಡೆಯೂ ಇದ್ದಾನೆ. ಜನರ ಆಶೀರ್ವಾದವೂ ನಮಗಿದೆ.

ಕೆ.ಹೆಚ್. ಪಾಟೀಲರು: ಹೌದೌದು ನಿಮ್ಮ ಎಲ್ಲ ವ್ಯವಹಾರ-ಅವ್ಯವಹಾರ ಎಲ್ಲವನ್ನೂ ದೇವರು ಮೇಲೆ, ಕೆಳಗೆ ಎಲ್ಲಾ ಕಡೆಯಿಂದಲೂ ನೋಡ್ತಿದಾನೆ.

ಪ್ರೊ: ಲಕ್ಷ್ಮೀಸಾಗರ್: (ಪಟೇಲರನ್ನು ಉದ್ದೇಶಿಸಿ) ನೋಡಿದರಾ. ಹಿರಿಯರಾದ ಕೆ.ಹೆಚ್. ಪಾಟೀಲರು ಎಂತಹ ಮುತ್ತಿನಂತಹ ಮಾತು ಹೇಳಿದ್ದಾರೆ, ನನಗೆ ನೆನಪಾಗುತ್ತೆ, ಕೇಳಿ.

ತದ್ಯೆಚಿತಿ; ತನ್ನೈಚಿತಿ,
ತದ್ದೂರೆ; ತದ್ವಂತಿಕೆ
ತದ್ದಂತರಸ್ಯ ಸರ್ವಸ್ವ
ತದುಸರ್ವಸ್ವ ರಾಸ್ಯಾ ಬಾಹ್ಯತ

ದೇವರು ಎಲ್ಲೆಡೆಯಲ್ಲಿಯೂ ಇದ್ದಾನೆ ಎನ್ನುವುದೇ ಇದರರ್ಥ.

ಕೆ.ಹೆಚ್. ಪಾಟೀಲರು: ನನಗೂ ಹಿರಿಯ ಭಗವದ್ಭಕ್ತ ದಾಸರೊಬ್ಬರ ನುಡಿ ನೆನಪಾಗುತ್ತದೆ. ಕೇಳಿ ಪಟೇಲರೇ.

ಮಲಗಿ ಪರಮಾದರದಿ ಪಾಡಲು
ಕುಳಿತು ಕೇಳುವನು;
ಕುಳಿತು ಪಾಡಲು ನಿಲುವ;
ನಿಂತರೆ ನಲಿವ;
ನಲಿದರೆ ಒಲಿವೆ ನಿಮಗೆ ಎಂದ;
ಸುಲಭನೋ ಈ ಹರಿ ತನ್ನವರ
ಅರಘಳಿಗೆ ಬಿಟ್ಟಗಲನೋ
ಸೇವಿಸಲರಿಯದೆ ಪಾಮರರು ಬಳಲುವರು ಭವದೊಳಗೆ

ದೇವರು ನಮ್ಮೊಂದಿಗೆ ಹಿತವಾಗಿ, ಮಿತವಾಗಿ ಇರುತ್ತಾನೆ ಎಂಬ ಅರ್ಥ ಇದು.

(ಪಟೇಲರಿಂದ ಪ್ರತ್ಯುತ್ತರ ಮಿದುನಗೆ)
(ವಿಧಾನಸಭೆ ಕಲಾಪ, ಜೂನ್ 1, 1988)

**ಪ್ರಜಾತತ್ವ ವ್ಯವಸ್ಥೆಯನ್ನು ಜಾಗೃತವಾಗಿ ಇಡುವ ಗುಣ**

ಮಾನ್ಯ ಸಚಿವರಾದ ಜೆ.ಹೆಚ್. ಪಟೇಲರು ಸದನದಲ್ಲಿ ಚರ್ಚೆ ಮಧ್ಯೆ ಇಂಟರ್‌ವೆನ್‌ಷನ್ ಮಾಡಿದರೂ ತಪ್ಪಿಲ್ಲ. ಒಳ್ಳೆಯದೇ. ಯಾಕೆಂದರೆ ಮಧ್ಯಪ್ರವೇಶದ ಅವರ ಮಾತುಗಳು ಹಿತವಾಗಿರುತ್ತದೆ. ಜಾಲಿ ಆಗಿರುತ್ತೆ. ಪಟೇಲರ ಮಾತಿನಲ್ಲಿ ಸ್ವಲ್ಪ ಕಟುವಿದ್ದರೂ ಅದರಲ್ಲಿ ಅರ್ಥವಿರುತ್ತದೆ. He speaks sportively, entertains the House genuinely and takes the comments equally sportively. ಇದು ಅವರ ಸಹಜ ಸಂಸದೀಯ ಗುಣ. ಪ್ರಜಾತಂತ್ರ ವ್ಯವಸ್ಥೆಯನ್ನು ಜಾಗ್ರತವಾಗಿ ಇಡುವ ಗುಣ ಇದು. ಈ ವಿಷಯದಲ್ಲಿ ಪಟೇಲರು ಬಹುದೊಡ್ಡ ಪ್ರಜಾತಂತ್ರ ಪ್ರೇಮಿ.

(ವೀರಪ್ಪಮೊಯಿಲಿ (ವಿರೋಧಪಕ್ಷದ ನಾಯಕ) ವಿಧಾನಸಭೆ : ಆಗಸ್ಟ್ 26, 1983)

# 10

# ವೀರಪ್ಪನ್

## ಪಟೇಲರ ಕಾಲದಲ್ಲೂ ತಲೆ ಬೇನೆ!

ಸಾರ್ವಜನಿಕ ಆಸ್ತಿಪಾಸ್ತಿ, ಜೀವರಕ್ಷಣೆಗೆ ಸಂಬಂಧಿಸಿದ ಯಾವುದಾದರೊಂದು ಬಗೆಹರಿಯದ ಸಮಸ್ಯೆ ಕರ್ನಾಟಕದ ಜನತೆ ಮತ್ತು ಸರ್ಕಾರವನ್ನು ತಲೆಬೇನೆಗೆ ಗುರಿಮಾಡುವುದು ಸರ್ವೇಸಾಮಾನ್ಯ. ಒಂದೊಂದು ಸರ್ಕಾರಕ್ಕೆ ಒಂದೊಂದು ಸಮಸ್ಯೆ. ಹಾವು ಸಾಯುವುದಿಲ್ಲ; ಕೋಲು ಮುರಿಯುವುದಿಲ್ಲ ಎನ್ನುವ ಗಾದೆ ಸುಳ್ಳಲ್ಲ.

ದಂತ ಚೋರ, ಕಾಡುಗಳ್ಳ ವೀರಪ್ಪನ್ ಇಂತಹ ಸಮಸ್ಯೆಗಳಲ್ಲಿ ಒಬ್ಬ.

ಸುಮಾರು 1992-93 ರಲ್ಲಿ ಈ ಸಮಸ್ಯೆ ಬೆಳೆಯಲಾರಂಭಿಸಿತು ಎನ್ನಬಹುದು. ಗಂಧದ ಮರಗಳನ್ನು ಕಡಿದು ಕಳ್ಳಸಾಗಣೆ ಮಾಡುವುದರಲ್ಲಿ ಮತ್ತು ದಂತಕ್ಕಾಗಿ ವನ್ಯಪ್ರಾಣಿಗಳನ್ನು ಕೊಲ್ಲುವುದರಲ್ಲಿ ಕುಖ್ಯಾತನಾದ ಈ ಕಾಡುಗಳ್ಳ 1996 ರಿಂದೀಚೆಗೆ ಕರ್ನಾಟಕ ಮತ್ತು ತಮಿಳುನಾಡು ಸರ್ಕಾರಗಳಿಗೆ ಸಿಂಹಸ್ವಪ್ನವಾದ. ಕರ್ತವ್ಯ ನಿರತ ಅಧಿಕಾರಿಗಳು ಇವನಿಂದ ಹತರಾದದ್ದು ನಾಡಿನ ದುರ್ದೈವ. ಮಲೆಮಹಾದೇಶ್ವರ ಬೆಟ್ಟದ ಸುತ್ತಮುತ್ತ ದಟ್ಟ ಕಾಡು ಮತ್ತು ಘಟ್ಟಪ್ರದೇಶದ ಕೊರಕಲುಗಳಲ್ಲಿ ಅಡಗಿಕೊಳ್ಳುವ ಈತನನ್ನು ಹಿಡಿಯಲು ನಡೆಸಿದ ವ್ಯಾಪಕ ಪ್ರಯತ್ನ ಪಟೇಲರ ಆಡಳಿತಾವಧಿಯಲ್ಲೂ ಸಫಲವಾಗಲೇ ಇಲ್ಲ.

ಅಮಾಯಕರು, ಅಸಹಾಯಕರು, ಸರ್ಕಾರಿ ನೌಕರರು ಇಲ್ಲವೇ ಸಮಾಜದ ಗಣ್ಯರನ್ನು ಅರಣ್ಯದೊಳಗೆ ಒತ್ತೆಯಾಳುಗಳನ್ನಾಗಿ ಇಟ್ಟು, ಕರ್ನಾಟಕ ಮತ್ತು ತಮಿಳುನಾಡು ಸರ್ಕಾರಗಳಿಗೆ ಚಳ್ಳೆಹಣ್ಣು ತಿನ್ನಿಸುವ ಧಂದೆಯನ್ನು ವೀರಪ್ಪನ್ ಪಟೇಲರ ಕಾಲದಲ್ಲಿಯೂ ನಡೆಸಿದ್ದ. ಕಾಡಿನಿಂದ ಕ್ಯಾಸೆಟ್

ಬರುವ ಧಾರವಾಹಿ ಪ್ರಹಸನ ಇವರ ಕಾಲದಲ್ಲಿಯೂ ನಡೆಯಿತು. ಸುದ್ದಿ ಮಾಧ್ಯಮಗಳು ಏತನ್ಮಧ್ಯೆ ವೀರಪ್ಪನ್‌ನನ್ನು ಭೇಟಿಯಾಗುತ್ತಿದ್ದುದು ಮಾತ್ರ ಸರ್ಕಾರದ ವೈಫಲ್ಯತೆಯನ್ನು ಗುರುತಿಸುವ ಅಂಗೈ ಮೇಲಿನ ಹುಣ್ಣು ಆದವು.

ಜೆ.ಹೆಚ್. ಪಟೇಲರ ಆಡಳಿತ ಕಾಲದಲ್ಲಿಯೂ ವೀರಪ್ಪನ್ ಬಗೆಹರಿಯದ ಸಮಸ್ಯೆಯಾಗಿಯೇ ಕಾಡಿದ. ಅರಣ್ಯ ಮತ್ತು ಪೊಲೀಸು ಇಲಾಖೆಗಳ ದಕ್ಷತೆ ಮತ್ತು ವೈಫಲ್ಯಗಳ ಬಗೆಗೆ ವಿಧಾನ ಮಂಡಲದ ಉಭಯ ಸದನಗಳಲ್ಲಿಯೂ ವಿಪುಲ ಚರ್ಚೆ ಮುಂದುವರೆಯಿತು.

ವಿಧಾನ ಸಭೆಯಲ್ಲಿ ಚರ್ಚಿತವಾದ ಎರಡು ಸಂದರ್ಭಗಳನ್ನು ಮಾತ್ರ ಇಲ್ಲಿ ನಮೂದಿಸಲಾಗುತ್ತಿದೆ.

## ಕ್ಷಮಾಪಣೆಯಂತೆ, ನಿಜವೇ?

ವಾಟಾಳ್ ನಾಗರಾಜ್: ಮಾನ್ಯ ಉಪಾಧ್ಯಕ್ಷರೇ ಕಾಡುಗಳ್ಳ ವೀರಪ್ಪನ್ ವಿಷಯ. ತಮಿಳುನಾಡು ಸರ್ಕಾರ ವೀರಪ್ಪನ್‌ಗೆ ಕ್ಷಮಾಪಣೆ ಕೊಡಬೇಕೆಂಬ ಧೋರಣೆಯಲ್ಲಿ ಹೊರಟಿದೆಯಂತೆ. ನಿಮಗೇನಾದರೂ ಗೊತ್ತೆ?

ನಮಗೆ ಸಮನ್ವಯದ ಕೊರತೆ, ಒಂದು ಕಡೆ ತಮಿಳ್ನಾಡಿನವರ ಸಹಕಾರ ಇಲ್ಲ. ತಮಿಳ್ನಾಡು ಸಂಪೂರ್ಣವಾಗಿ ಹಿಡಿಯಬಾರದೆಂಬ ದೃಷ್ಟಿಯಿಂದ ವ್ಯವಸ್ಥಿತವಾಗಿ ಅಭಿಪ್ರಾಯವನ್ನು ಕ್ರೋಢೀಕರಿಸುತ್ತಿದೆ. ಇದರ ಬಗ್ಗೆ ಕರ್ನಾಟಕ ಸರ್ಕಾರದ ಜೊತೆ ತಮಿಳ್ನಾಡು ಸರ್ಕಾರದವರು ಮಾತುಕತೆ ಆಡಿದ್ದಾರೆಯೇ? ಅವನನ್ನು ಹಿಡಿಯುವ ಬಗ್ಗೆ ಕರ್ನಾಟಕ ಸರ್ಕಾರದ ಸ್ಪಷ್ಟವಾದ ನಿಲುವು ಏನು? ಸ್ಪಷ್ಟವಾದ ನೀತಿ ಏನು?

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮುಂಚೆ ಯಾವುದೇ ತಿಳುವಳಿಕೆ ಕೊಡದೇ ಈ ಪ್ರಶ್ನೆಯನ್ನು ಕೇಳಿದ್ದೀರಿ. ಮಾನ್ಯ ಸದಸ್ಯರಿಗೆ ಗೊತ್ತು. ನಾವು ಏನೇನು ವ್ಯವಧಾನಗಳನ್ನು ಮಾಡುತ್ತಿದ್ದೇವೆ, ಯಾವ ಅಧಿಕಾರಿಯನ್ನು ವಾಪಸ್ ತೆಗೆದುಕೊಂಡಿದ್ದೇವೆ, ಯಾವ ಅಧಿಕಾರಿಯನ್ನು ನಾವು ಕಳುಹಿಸಿದ್ದೇವೆ ಮತ್ತು ನಮ್ಮ ಕಾರ್ಯಾಚರಣೆಯ ವಿವರಗಳನ್ನು ಸದನದಲ್ಲಿ ಹೇಳುವುದು ಸೂಕ್ತ ಅಲ್ಲ. ಆದರೆ ಸರ್ಕಾರ ಮಾತ್ರ ಆತನನ್ನು ಬಂಧಿಸಬೇಕು, ಆತ ಮಾಡಿರತಕ್ಕ ಎಲ್ಲಾ ಪಾಪ ಮತ್ತು ಅಪರಾಧಗಳಿಗೆ ಆತನಿಗೆ ಶಿಕ್ಷೆಯಾಗಲೇಬೇಕು. ಕ್ಷಮಾದಾನ ಮಾಡುವ ಬಗ್ಗೆ ನಮ್ಮ ಸರ್ಕಾರ ಯಾವಾಗಲೂ ಹೇಳಿಲ್ಲ. ಅಲ್ಲಿ ಯಾರೋ ಇದನ್ನು ಕ್ಷಮಾದಾನ ಮಾಡುತ್ತಾರಂತೆ, ಫೂಲನ್ ದೇವಿಗೆ ಮಾಡಿದ ಹಾಗೆ ಅಂತ ಶುರು ಮಾಡಿದ್ದಾರೆ. ಫೂಲನ್ ದೇವಿ ಪ್ರಶ್ನೆ ಬೇರೆ, ಇದೇ ಪ್ರಶ್ನೆ ಬೇರೆ. ಆದ್ದರಿಂದ ಮಾನ್ಯ ಸದಸ್ಯರು ಈ ಬಗ್ಗೆ ಆತನ ಸುಳಿವು ಮತ್ತು ಆತನನ್ನು ಹೇಗೆ ಬಂಧಿಸಬೇಕು ಅಥವಾ ಆತನನ್ನು ಹತೋಟಿಗೆ ತರಬೇಕು ಅಥವಾ ಕೊಂದುಹಾಕಬೇಕು, ಈ ವಿಷಯಗಳ ಬಗ್ಗೆ ನಾವು ಸದನದಲ್ಲಿ ಚರ್ಚೆ ಮಾಡುವುದು ಸರಿಯಲ್ಲ ಎಂದು ಅವರೂ ಒಪ್ಪುತ್ತಾರೆ.

ವಾಟಾಳ್ ನಾಗರಾಜ್: ನಾನು ಸಂಪೂರ್ಣ ಚರ್ಚೆಗೆ ಹೋಗುವುದಿಲ್ಲ. ವಿವರ ಕೊಡಿ ಎಂದು ಕೇಳಲಿಲ್ಲ. ತಾವು ಸ್ಪಷ್ಟಪಡಿಸಿದ್ದೀರಿ ಶಿಕ್ಷೆಯಾಗಲೇಬೇಕು, ಕ್ಷಮಾದಾನ ಕೊಡುವುದಿಲ್ಲ ಅಂತ. ಅವನನ್ನು ಹಿಡಿಯುತಕ್ಕ ಸಂಘಟನೆಯ ವ್ಯವಸ್ಥೆಯನ್ನು ಚುರುಕುಗೊಳಿಸುವುದಕ್ಕೆ ಮತ್ತೆ ಗಡಿಭದ್ರತಾ ಪಡೆಯನ್ನು ಕರೆಸುತ್ತಿರೋ? ತಮಿಳುನಾಡಿನ ಸರ್ಕಾರದವರು ನಿಮ್ಮ ಜೊತೆಯಲ್ಲಿ ಏನಾದರೂ ಈ ವಿಚಾರದಲ್ಲಿ ಮಾತುಕತೆ ಆಡಿದ್ದಾರೆಯೇ.

ಜೆ.ಹೆಚ್. ಪಟೇಲ್: ತಮಿಳುನಾಡು ಸರ್ಕಾರ ಎಲ್ಲಾ ರೀತಿಯಿಂದ ನಮ್ಮ ಸರ್ಕಾರದೊಡನೆ ಸಹಕಾರ ಕೊಡುತ್ತಾ ಇದೆ. ಅವರಿಗೂ ನಮ್ಮ ಸರ್ಕಾರದಷ್ಟೇ ಆತನನ್ನು ಬಂಧಿಸಬೇಕು ಅನ್ನತಕ್ಕಂಥ ಚಿಂತೆ ಇದೆ. ಹಿಂದಿನವರು ಏನು ಮಾಡಿದ್ದರು ಅಥವಾ ಈಗ ಪೊಲಿಟಿಕಲ್ ಛೇಂಜ್ ಆಗಿರುವುದರಿಂದ we need not suspect their bonafide?

ಬಿ. ಮುನಿಯಪ್ಪ: ಲೋಕಸಭಾ ಚುನಾವಣೆಗೆ ಮುನ್ನ ಸನ್ ಟಿ.ವಿ. ಎನ್ನುವಂಥ ಒಂದು ಟಿ.ವಿ.ಯಲ್ಲಿ ವೀರಪ್ಪನ್ ಸಂದರ್ಶನ ಬಂದಿದೆ. ಸಂದರ್ಶನ ಮಾಡಿದಂಥ ಪತ್ರಕರ್ತರನ್ನು, ಅವನ ವೀಡಿಯೋ ತೆಗೆದವರನ್ನು ಬಂಧಿಸುವುದು ಅಗತ್ಯ ಎಂದೆನಿಸುತ್ತದೆ.

ಶ್ರೀಮತಿ ಪ್ರಮೀಳಾ ನೇಸರ್ಗಿ: ಹೀಗಾದರೆ ಪತ್ರಕರ್ತರು ಕೆಲಸ ಮಾಡುವುದಕ್ಕಾಗುವುದಿಲ್ಲ. ಅಭಿಪ್ರಾಯ ಸ್ವಾತಂತ್ರ್ಯ, ಸುದ್ದಿ ಸ್ವಾತಂತ್ರ್ಯಹರಣವಾದಂತಾಗುತ್ತದೆ. ನೀವು (ಸರ್ಕಾರ) ಮಾಡಲಾಗದುದನ್ನು ಪತ್ರಕರ್ತರು ಮಾಡಿತೋರಿಸಿದ್ದಾರೆ.

ಜೆ.ಹೆಚ್. ಪಟೇಲ್: ವೀರಪ್ಪನನ್ನು ಬಂಧಿಸುವುದಕ್ಕಾಗಲಿಲ್ಲ ಅಂತ ಪತ್ರಕರ್ತರನ್ನು ಬಂಧಿಸಿದರೆ ನಗುತ್ತಾರೆ ಜನ.

ಬಿ. ಮುನಿಯಪ್ಪ: ಸನ್ಮಾನ್ಯ ಮುಖ್ಯಮಂತ್ರಿಗಳೇ, ನಾನು ಪತ್ರಕರ್ತನನ್ನು ಬಂಧಿಸಿ ಅಂತ ಹೇಳಲಿಲ್ಲ. ಒಬ್ಬ ದೇಶದ್ರೋಹಿಯ ಸಂಪರ್ಕ ಇರತಕ್ಕಂಥ ಪತ್ರಕರ್ತರನ್ನು, ಅವನ ವೀಡಿಯೋ ಕ್ಯಾಸೆಟ್ ತೆಗೆದು ಪ್ರಪಂಚಕ್ಕೆ ತೋರಿಸಿ, ಅವನು ಮೇಧಾವಿ, ಹುತಾತ್ಮ ಅಂತ ಪಬ್ಲಿಷ್ ಮಾಡುತ್ತಾರಲ್ಲ ಅಂಥ ಪತ್ರಕರ್ತರನ್ನು.

ಜೆ.ಹೆಚ್. ಪಟೇಲ್: ಅಡ್ವೆಂಚರಸ್ ಜರ್ನಲಿಸಂ ಅಂತ ಇರುತ್ತದೆ. ಅವನೂ ಸಾಹಸ ಮಾಡಿದ್ದಾನೆ. ವೀರಪ್ಪನ್ ಹೇಗಿದ್ದಾನೆ ಎಂದು ನಾನೇ ನೋಡಿರಲಿಲ್ಲ. ಬರೀ ಫೋಟೊ ನೋಡಿದ್ದೆ. ಈಗ ವಿಡಿಯೋ ನೋಡಿದ ಮೇಲೆ ಅಂಥವರು ಯಾವ ವಾತಾವರಣದಲ್ಲಿರುತ್ತಾರೆ, ಹೇಗಿರುತ್ತಾರೆ ಅಂತ ನೋಡಿದ ಮೇಲೆ ಅವರನ್ನು ಬಂಧಿಸತಕ್ಕ ಅಧಿಕಾರಿಗಳಿಗೆ ಅನುಕೂಲ ಆಗುತ್ತದೆ ಆ ಲೋಕೋಷನ್ ನೋಡಿಕೊಂಡು.

ಸಿ.ಹೆಚ್. ವಿಜಯಶಂಕರ್: ನನ್ನ ಅಭಿಪ್ರಾಯ ಇಷ್ಟೆ. ಸರ್ಕಾರಕ್ಕೆ ಈ ಟಿ.ವಿ. ಮಾಧ್ಯಮದ ಮೇಲೆ ಹಿಡಿತ ಇದೆಯೋ ಅಥವಾ ಇಲ್ಲವೋ ಅಂತ. ಆದ್ದರಿಂದ ಈ ಚಾನೆಲ್ ಮೂಲಕ ಬರುವ ಕಾರ್ಯಕ್ರಮಗಳ ಬಗ್ಗೆ ವಿಶೇಷವಾದ ಗಮನಹರಿಸಿ ಅದನ್ನು ನಿಗ್ರಹಿಸುವುದಕ್ಕೆ

ಏನಾದರೂ ವಿಶೇಷ ವ್ಯವಸ್ಥೆ ಮಾಡಲಿ ಸರ್ಕಾರ. ಇಲ್ಲದಿದ್ದರೆ ನಾಗರೀಕ ಸಮಾಜ ರೂಪಿಸುವುದಕ್ಕೆ ಸಾಧ್ಯವಾಗುವುದಿಲ್ಲ.

ಕೆ.ಎಸ್. ಪುಟ್ಟಣ್ಣಯ್ಯ: ವೀರಪ್ಪನ್ ಇರುವ ಜಾಗಕ್ಕೆ ಹೋಗಿ ಬಂದಿರುವವನು ಸಾರ್ ನಾನು. ನಮ್ಮ ಮನಸ್ಸಿಗೆ ಸಮಾಧಾನವಾಗುವುದಕ್ಕೆ ಒಂದು ಮೀಟಿಂಗಾದರೂ ಕರೆದು ನಮ್ಮ ಜೊತೆಯಲ್ಲಿ ಯಾವ ರೀತಿ ಕಾರ್ಯ ರೂಪಿಸಿದ್ದೀರಿ ಎಂಬ ಬಗ್ಗೆ ಸ್ವಲ್ಪ ನಮಗೆ ಮಾಹಿತಿ ಕೊಟ್ಟರೆ ತುಂಬಾ ಒಳ್ಳೆಯದು. ಅದರ ಬಗ್ಗೆ ತಾವು ಸರ್ಕಾರ ಆಲೋಚನೆ ಮಾಡಬೇಕು.

ಪಿ.ಜಿ.ಆರ್. ಸಿಂಧ್ಯಾ (ಗೃಹ ಖಾತೆ ಮಂತ್ರಿ): ಮಾನ್ಯ ಅಧ್ಯಕ್ಷರೇ, ಈ ವಿಚಾರವನ್ನು ನಾವು ಇಲ್ಲಿ ಚರ್ಚೆ ಮಾಡತಕ್ಕಂಥದ್ದೇ ಸೂಕ್ತ ಅಲ್ಲ.

(ವಿಧಾನಸಭೆ ಕಲಾಪ, ಆಗಸ್ಟ್ 1997)

ವೀರಪ್ಪನ್ ಒಂಭತ್ತು ಮಂದಿ ಅರಣ್ಯ ಇಲಾಖಾ ನೌಕರರನ್ನು ಒತ್ತೆಯಾಳಾಗಿಟ್ಟು ಕೊಂಡಿರುವುದನ್ನು ಕುರಿತು.

ಎಂ. ಮಲ್ಲಿಕಾರ್ಜುನ ಖರ್ಗೆ (ಮಾನ್ಯ ವಿರೋಧ ಪಕ್ಷದ ನಾಯಕರು) : ಸನ್ಮಾನ್ಯ ಅಧ್ಯಕ್ಷರೇ, ಮೊನ್ನೆ ದಿವಸ ಸದನದಲ್ಲಿ ವೀರಪ್ಪನ್ ವಿಚಾರವನ್ನು ಪ್ರಸ್ತಾಪ ಮಾಡಿದಾಗ, ಇದು ಬಹಳ ಸೂಕ್ಷ್ಮವಾದಂತಹ ವಿಷಯ, 9 ಜನರ ಜೀವಕ್ಕೆ ಅಪಾಯ ಆಗಬಾರದು ಎಂದು ಹೇಳಿ ಈ ಸದನದಲ್ಲಿ ನಾವು ಎಲ್ಲರೂ ಅದನ್ನು ಒಪ್ಪಿಕೊಂಡಿದ್ದೆವು. ಅನಂತರ ಮಂಗಳವಾರ ದಿವಸ ಇದನ್ನು ಯಾವುದೇ ರೀತಿಯಿಂದ ಚರ್ಚೆ ಮಾಡಬಹುದು ಎನ್ನುವುದು ತೀರ್ಮಾನ ಆಯಿತು. ಇವತ್ತು ತಮ್ಮ ಸಮ್ಮುಖದಲ್ಲಿ ಮುಖ್ಯ ಮಂತ್ರಿಯವರು, ಕಾನೂನು ಮಂತ್ರಿಗಳು ಮತ್ತು ವಿರೋಧಪಕ್ಷದ ಎಲ್ಲಾ ಮುಖಂಡರುಗಳೂ ಇದ್ದರು. ಈ ಒಂದು ಮಾತುಕತೆಯಲ್ಲಿ ದೀರ್ಘವಾಗಿ ನಾವು ಚರ್ಚೆ ಮಾಡುವುದು ಬೇಡ ಎಂದು ತೀರ್ಮಾನ ಆಯಿತು.

ಮುಖ್ಯಮಂತ್ರಿಗಳು ಯಾವ ರೀತಿಯಿಂದ ಹೇಳಬೇಕೋ ಹೇಳಲಿ. ಇದರ ಬಗ್ಗೆ ನಾನು ಜಾಸ್ತಿ ಹೇಳುವುದಿಲ್ಲ. ಸಭ್ಯತೆಯ ದೃಷ್ಟಿಯಿಂದ ನಾವು ಹೆಚ್ಚಿಗೆ ಪ್ರಸ್ತಾಪ ಮಾಡುವುದಿಲ್ಲ. ಸುಮಾರು ಎರಡು ಸಾವಿರ ಆನೆಯನ್ನು ಕೊಲೆ ಮಾಡಿ ಸುಮಾರು ನೂರು ಕೋಟಿ ರೂಪಾಯಿಗಿಂತಲೂ ಹೆಚ್ಚಿನ ಸ್ಯಾಂಡಲ್‌ವುಡ್ ಕದ್ದ, ಸುಮಾರು 40 ಸಾವಿರ ಕೆ.ಜಿ. ಆನೆಯ ದಂತಗಳನ್ನು ಮಾರಿದ ಹಾಗೂ ಸರ್ಕಾರದ ಕೋಟ್ಯಾಂತರ ರೂಪಾಯಿ ಲೂಟಿ ಮಾಡಿದಂತಹ ಮನುಷ್ಯನಿರುವ ಸ್ಥಳಕ್ಕೆ ಗೋಪಾಲ್ ಅಂತ ಒಬ್ಬರು ಪತ್ರಕರ್ತರು ಹೋಗಿ ಭೇಟಿ ಮಾಡಬಹುದು, ಕಾಣಬಹುದು, ನೋಡಬಹುದು. ಆದರೆ ನಮಗೆ ಇನ್ನೂ ಕೂಡ ಆತನನ್ನು ನೇರವಾಗಿ ನೋಡುವ ಅವಕಾಶವಿಲ್ಲ, ಅವರ ಸಂಪರ್ಕ ಅಂತೂ ಇಲ್ಲವೇ ಇಲ್ಲ. ಆತನನ್ನು ಹಿಡಿಯತಕ್ಕಂತಹ ಪ್ರಯತ್ನ ಕೂಡ ಇವತ್ತು ಆಗುತ್ತಾ ಇಲ್ಲ. ಇದು ಇವತ್ತು ಜನರಲ್ಲಿ ಒಂದು ಕುತೂಹಲವನ್ನು ಉಂಟು ಮಾಡಿದೆ. ಒಬ್ಬ ಪತ್ರಕರ್ತರು, ಅವರು ಇರುವ ಸ್ಥಳಕ್ಕೆ ಹೋಗಬಹುದು, ಅವರ

ಜೊತೆಯಲ್ಲಿ 4,5 ಜನ ಹೋಗಬಹುದು, ವಿಡಿಯೋ ಕ್ಯಾಸೆಟ್ ಮಾಡಬಹುದು, ಟೇಪ್ ಮಾಡಿಕೊಂಡು ಬರಬಹುದು. ಆದರೆ ಇದುವರೆವಿಗೂ ಇಂಟಲಿಜೆಂಸ್ ಡಿಪಾರ್ಟ್‌ಮೆಂಟ್‌ಗೆ ಈತನ ಸುಳಿವು ಇಲ್ಲ.

ತಮಿಳುನಾಡು ಸರ್ಕಾರಕ್ಕೂ ಮತ್ತು ನಮ್ಮ ಕರ್ನಾಟಕ ಸರ್ಕಾರಕ್ಕೂ ಹೊಂದಾಣಿಕೆ ಇಲ್ಲವೆ? ಈ ಮಧ್ಯದಲ್ಲಿ ಏನಾದರೂ ಮಿಸ್ ಅಂಡರ್‌ಸ್ಟ್ಯಾಂಡಿಂಗ್ ಇದೆಯೇ? ನಮ್ಮ ಸರ್ಕಾರದವರು ಹಿಡಿಯಬೇಕು ಎಂದು ಇದ್ದಾರಾ? ತಮಿಳುನಾಡು ಸರ್ಕಾರದವರು ಬಿಡಬೇಕು ಎಂದು ಏನಾದರೂ ಇದ್ದಾರಾ? ಎನ್ನತಕ್ಕಂತಹ ಪ್ರಶ್ನೆ ನಮ್ಮ ಮುಂದೆ ಬಂದಿದೆ. ಏಕೆಂದರೆ ಇವತ್ತು ಅವನು ಕೋರುವ ಜೀವದಾನ ಅಥವಾ ಕ್ಷಮಾದಾನವನ್ನು ಕೊಡುವುದಕ್ಕೆ ಬರುವುದಿಲ್ಲ ಎನ್ನತಕ್ಕಂತಹ ಮಾತನ್ನು ತಾವು ಈ ಸದನದಲ್ಲಿ ಹೇಳಿದ್ದೀರಿ, ಆದರೆ ಪ್ರೆಸಿಡೆಂಟ್ ಆಫ್ ಇಂಡಿಯಾನೇ ಕ್ಷಮಾದಾನ ಮಾಡಬಹುದು. ಆದರೆ ಯಾವ ದೃಷ್ಟಿಯಿಂದ ಈ ಅಮಿನೆಸ್ಟಿ ಎಂಬ ಪದ ಬಂತು? ಮತ್ತು ಅದಕ್ಕೆ ಪ್ರಥಮವಾಗಿ ಸ್ಪಂದನೆ ನಮ್ಮ ಸರ್ಕಾರದವರೂ ಮಾಡಿದ್ದಾರೆ ಎಂದು ಪತ್ರಿಕೆಯಲ್ಲಿ ಬಂತು.

ವೀರಪ್ಪನ್ ಏನು 11 ಕಂಡೀಷನ್‌ಗಳನ್ನು ಹಾಕಿದ್ದಾನೆ, ಆ 11 ಕಂಡೀಷನ್ಸ್ ಕೂಡ ನಮ್ಮ ಸರ್ಕಾರದವರು ಒಪ್ಪಿದ್ದಾರೆ ಎಂದು ಒಂದು ಸಾರಿ ಬಂತು. ಆದರೆ ಮತ್ತೊಂದು ಸಾರಿ ಇಲ್ಲಾ, ನಾವು 11 ಕಂಡೀಷನ್ಸ್‌ಗೆ ಒಪ್ಪಿಲ್ಲ ಕೇವಲ 4,5 ಕಂಡೀಷನ್ಸ್‌ಗೆ ಮಾತ್ರ ನಾವು ಒಪ್ಪಿದ್ದೇವೆ ಎನ್ನತಕತ್ಕಂಹ ವಿಷಯವನ್ನು ನಾವು ಪತ್ರಿಕೆಯಲ್ಲಿ ಓದಿರುವುದು ಗೊತ್ತು. ಇವತ್ತು ಏನಾಗಿದೆ ಎಂದರೆ ಸುಮಾರು 133 ಕ್ರೈಂ ಮಾಡಿದಂತಹ ಮನುಷ್ಯ, ಸುಮಾರು 111 ಪೋಲೀಸ್ ಅಧಿಕಾರಿಗಳಿಗೆ ಮತ್ತು ಫಾರೆಸ್ಟ್ ಅಧಿಕಾರಿಗಳನ್ನು ಕೊಂದಂತಹ ಮನುಷ್ಯ, ಸುಮಾರು 60 ಜನರನ್ನು ಗಾಯಗೊಳಿಸಿದಂತಹ ಮನುಷ್ಯ, ಸರ್ಕಾರದ ಕೋಟ್ಯಾಂತರ ರೂಪಾಯಿ ಹಣವನ್ನು ಲೂಟಿ ಮಾಡಿದಂತಹ ಮನುಷ್ಯನಿಗೆ ನಾವು ಯಾವ ರೀತಿಯಿಂದ ಕ್ಷಮಾದಾನ ಕೊಡಬೇಕು? ಎನ್ನುವುದು ಒಂದು ಪ್ರಶ್ನೆ.

ಇಲ್ಲಿಯವರೆಗೆ ಆತನನ್ನು ಹಿಡಿಯಲು ಸುಮಾರು 100 ಕೋಟಿ ರೂಪಾಯಿವರೆವಿಗೆ ಖರ್ಚಾಗಿದೆ. ಪ್ರತಿ ತಿಂಗಳು ಇಂಟಲಿಜೆಂಸ್ ಡಿಪಾರ್ಟ್‌ಮೆಂಟ್ ಅವರು ಡಿಸ್‌ಕ್ರಿಷನರಿ ಅಮೌಂಟ್ ಎಂದು 62 ಲಕ್ಷ 772 ರೂಪಾಯಿ ಖರ್ಚು ಮಾಡಿರುತ್ತಾರೆ ಏಕೆಂದರೆ ಅವರಿಗೆ ಕೊಟ್ಟೆ ಇವರಿಗೆ ಕೊಟ್ಟೆ, ಮಾಹಿತಿ ಸಂಪಾದನೆ ಮಾಡುವರಿಗೆ ಕೊಟ್ಟೆನು ಎಂದು ಹೇಳುತ್ತಾರೆ, ಹೀಗೆ ಹೆಚ್ಚು ಕಡಿಮೆ ಪ್ರತಿ ತಿಂಗಳು 62 ಲಕ್ಷ ರೂಪಾಯಿ ಖರ್ಚು ಮಾಡುತ್ತಾರೆ. ಖರ್ಚಾಗಲಿ. ಆದರೆ ಹಿಡಿಯುವ ಕೆಲಸವಾದರೂ ಆಗಬೇಕಲ್ಲ. ಇಲ್ಲಿಯುವರೆಗೆ ಲೆಕ್ಕ ಹಾಕಿದರೆ ಸುಮಾರು ನೂರು ಕೋಟಿ ರೂಪಾಯಿಗಳು ಸಮೀಪ ಬರುತ್ತದೆ.

ಬಿ.ಎಸ್. ಯಡಿಯೂರಪ್ಪ : ಅಧ್ಯಕ್ಷರೇ, ತಮ್ಮ ಕೊಠಡಿಯಲ್ಲಿ ಮುಖ್ಯಮಂತ್ರಿಗಳ ಜೊತೆ ಮಾತನಾಡಿದಾಗ, ಬಹುಶಃ ಸರ್ಕಾರ ಇವತ್ತಿನ ಸ್ಥಿತಿಗತಿಗೆ ಅನುಕೂಲವಾಗಿ ಸ್ಟೇಟ್‌ಮೆಂಟ್

ಮಾಡುತ್ತಾರೆ ಎಂದು ಹೇಳಿದಿರಿ. ಈಗ ಬಂದಿರುವ ಆತಂಕಕಾರಿ ಸಂಗತಿ ಎಂದರೆ, ಸರ್ಕಾರದ ಪರವಾಗಿ ಮೆಸೇಜ್ ತೆಗೆದುಕೊಂಡು ಬರುವುದಕ್ಕೆ ಹೋದಂತಹ ಗೋಪಾಲ್‌ರವರೇ ಬಂಧನದಲ್ಲಿ ಇದ್ದಾರೆ ಎಂದು ಪತ್ರಿಕೆಯಲ್ಲಿ ಬಂದಿದೆ. ವಿಡಿಯೋ ಕ್ಯಾಸೆಟ್ ಕಳಿಸಿ ಕೊಟ್ಟಿದ್ದಾರೆ, ಆ ಕ್ಯಾಸೆಟ್ಟನ್ನು ತಮಿಳುನಾಡಿನ ಮುಖ್ಯ ಮಂತ್ರಿಯವರು ಮತ್ತು ನಮ್ಮ ಮುಖ್ಯ ಮಂತ್ರಿಯವರು ಸಹ ನೋಡುತ್ತಾ ಇದ್ದಾರೆ ಎಂಬ ಸುದ್ದಿ ಬಂದಿದೆ. ಒಂದು ರೀತಿ ಸರ್ಕಾರವನ್ನೇ ಬ್ಲಾಕ್‌ಮೇಲ್ ಮಾಡುವಂತಹದ್ದು ನಡೆಯುತ್ತಾ ಇದೆ.

ಸರ್ಕಾರ ಒಬ್ಬ ನರಹಂತಕನನ್ನು ಹಿಡಿದು ಆತನಿಗೆ ಶಿಕ್ಷೆ ವಿಧಿಸುವುದಕ್ಕೆ ಆಗದೆ, ಕೈ ಕಟ್ಟಿಕೊಂಡು ಕುಳಿತುಕೊಂಡಿರುವ ಪರಿಸ್ಥಿತಿ ನಾವು ಕಾಣುತ್ತಾ ಇದ್ದೇವೆ. ಜನ ಸಹ ಇದನ್ನು ಪತ್ರಿಕೆಯಲ್ಲಿ ನೋಡಿದಾಗ ಇಲ್ಲಿ ಯಾವುದೋ ನಾಟಕ ನಡೆಯುತ್ತಾ ಇದೆ. ಯಾರೂ ಈ ವಿಷಯವನ್ನು ನಂಬುವುದಕ್ಕಾಗದೆ ಇರುವಂತಹ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ಗೋಪಾಲನಂತವರಿಗೆ ಯಾರು ಸುದ್ದಿ ಕಳಿಸುತ್ತಾರೆ? ವೀರಪ್ಪನ್ ಎಲ್ಲಿ ಇದ್ದಾನೆ. ಅವನು ಜಾಗ ಬದಲಾವಣೆ ಮಾಡಿದರೆ ಆತನು ಅವನಿರುವ ಸ್ಥಳಕ್ಕೆ ಹೇಗೆ ಹೋಗುತ್ತಾನೆ, ಈ ಎಲ್ಲಾ ವಿಷಯಗಳು ಅವನಿಗೆ ಗೊತ್ತಾಗಬಹುದಾದರೆ, ನಿಮ್ಮ ಸರ್ಕಾರಕ್ಕೆ ಏಕೆ ಗೊತ್ತಾಗುವುದಿಲ್ಲ? ಇದು ಏನೂ ಅರ್ಥವಾಗದ ಪರಿಸ್ಥಿತಿ. ದಯಮಾಡಿ ಇವತ್ತಿನ ಪರಿಸ್ಥಿತಿ ಏನು? ಈ ಗೋಪಾಲ್ ಅವರನ್ನು ಬಂಧನದಲ್ಲಿ ಇಟ್ಟುಕೊಂಡಿರುವುದು ನಿಜವಾ? ಕ್ಯಾಸೆಟ್ ಏನಾದರೂ ಕಳಿಸಿದ್ದಾರಾ? ಏನಾದರೂ ಮಾಹಿತಿಯನ್ನು ಸದನದ ಮೂಲಕ ಕೊಡುತ್ತೀರಾ? ವಾಸ್ತವಿಕವಾದ ಸ್ಥಿತಿಯನ್ನು ತಾವು ದಯಮಾಡಿ ತಿಳಿಸಬೇಕು. ಆ ನಂತರ ಬೇಕಾದರೆ ತಾವು ಚರ್ಚೆ ಮಾಡುವುದಕ್ಕೆ ಅವಕಾಶ ಕೊಡಬೇಕು.

ವಾಟಾಳ್ ನಾಗರಾಜ್ (ಚಾಮರಾಜನಗರ) : ಮಾನ್ಯ ಅಧ್ಯಕ್ಷರೇ, ಈ ವಿಷಯದಲ್ಲಿ ಸದನದಲ್ಲಿ ಸಮಗ್ರವಾಗಿ ಚರ್ಚೆಯಾಗಬೇಕೆಂದು ತಾವು ಸದನಕ್ಕೆ ಭರವಸೆ ಏನು ಕೊಟ್ಟಿದ್ದೀರಿ, ಸರ್ಕಾರ ಸುಮ್ಮನೆ ಒಂದು ಹೇಳಿಕೆ ಕೊಡಬೇಕೆಂದಲ್ಲ. ಸಮಗ್ರವಾಗಿ ಚರ್ಚೆಯಾಗಬೇಕೆನ್ನುವುದರ ಬಗ್ಗೆ ತಾವು ಸ್ಪಷ್ಟವಾಗಿ ಹೇಳಿದ್ದೀರಿ.

ಇವೊತ್ತು ತಮ್ಮ ಕೊಠಡಿಯಲ್ಲಿ ವಿರೋಧ ಪಕ್ಷಗಳ ಮುಖಂಡರುಗಳ ಸಭೆ ನಡೆದಾಗ ಇನ್ನೂ ಒಂದೆರಡು ದಿವಸಗಳ ಕಾಲಾವಕಾಶ ಕೊಡಬೇಕೆಂದು ಮಾನ್ಯ ಮುಖ್ಯ ಮಂತ್ರಿಗಳು ಹೇಳಿದ್ದಾರೆ. ನೋಡೋಣ, ಅಲ್ಲಿಯವರೆಗೆ ಕಾಲಾವಕಾಶ ಕೊಡಬಾರದೆಂಬ ಉದ್ದೇಶ ನಮ್ಮದಲ್ಲ. ಆದರೆ, ಸಾಧನೆ ಏನು ಎನ್ನುವ ಪ್ರಶ್ನೆ ಬಂದಾಗ ಸರ್ಕಾರ ಮೋಸಕ್ಕೆ ಒಳಗಾಗಿರಬೇಕೆಂದು ನನಗನ್ನಿಸುತ್ತದೆ. ಕರ್ನಾಟಕ ಸರ್ಕಾರ ವೀರಪ್ಪನ್‌ನ ತಂತ್ರಗಾರಿಕೆಗೆ, ಪಿತೂರಿಗೆ ಬಲಿಯಾಗಿದೆಯೆಂಬ ಸಂಶಯ ನಮಗಿದೆ. ಇದರ ಬಗ್ಗೆ ಎರಡನೆ ಅಭಿಪ್ರಾಯವಿಲ್ಲ. ಈ ಸಂಶಯ ಮುಂದೆ ನಿಜವಾದರೂ ಆಗಬಹುದು. ಏಕೆಂದರೆ, ಇಂತಹ ನೂರಾರು ಪ್ರಕರಣಗಳಲ್ಲಿ ಆ ವ್ಯಕ್ತಿ ಎಲ್ಲರನ್ನೂ ಮೋಸ ಮಾಡಿದ್ದಾನೆ. ಇದು ನಿರಂತರವಾಗಿ ನಡೆದಿರತಕ್ಕಂಥಾದ್ದು.

ಪ್ರಾರಂಭದಲ್ಲಿ ಯಾವ್ಯಾವ ರೀತಿಯಾಯಿತು? ಕಳೆದ ಸುಮಾರು 10-15 ವರ್ಷಗಳಿಂದ ನಡೆದಿರತಕ್ಕಂಥ ಸಮಗ್ರ ವಿಚಾರಗಳು, ಅಂದರೆ, ಎಷ್ಟು ಜನರು ಸತ್ತಿದ್ದಾರೆ? ಎಸ್.ಟಿ.ಎಫ್‌ನಿಂದ ಎಷ್ಟು ಜನರು ಸತ್ತಿದ್ದಾರೆ? ಆತನ ಕಡೆಯಿಂದ ಎಷ್ಟು ಜನ ಸತ್ತಿದ್ದಾರೆ? ಅವರು ಯಾವ್ಯಾವ ಜೈಲಿನಲ್ಲಿದ್ದರು? ಇದುವರೆವಿಗೂ ಖರ್ಚಾಗಿರುವ ಹಣವೆಷ್ಟು? ಆಸ್ತಿ ನಷ್ಟ ಎಷ್ಟಾಗಿದೆ? ಮುಂತಾದ ವಿಚಾರಗಳನ್ನೊಳಗೊಂಡಂಥ ಒಂದು ಶ್ವೇತ ಪತ್ರವನ್ನು ತಾವು ಈ ಸದನದಲ್ಲಿ ಮಂಡಿಸಿದಲ್ಲಿ ಹೀಗಾದಲ್ಲಿ ಸುದೀರ್ಘವಾಗಿ ಚರ್ಚೆ ನಡೆಸಿದಾಗ ಅದರಿಂದ ಹೊಸ ಬೆಳಕು ದೊರಕುತ್ತದೆ. ಅತ್ಯಂತ ನೋವಿನ ವಿಷಯವೆಂದರೆ ಈ ಪತ್ರಿಕಾ ಸಂಪಾದಕರು ಯಾರು? ಆತನ ಜೊತೆಯಲ್ಲಿ ನೀವು ಯಾರ್ಯಾರು ಮಾತನಾಡಿದ್ದೀರಿ? ಏನೇನು ಮಾತನಾಡಿದ್ದೀರಿ? ತಮಿಳುನಾಡಿನ ಸರ್ಕಾರದವರು ಅವರ ಜೊತೆ ಏನು ಮಾತನಾಡಿದ್ದಾರೆ? ಗೋಪಾಲ್ ಎನ್ನುವವರು ಯಾವ ಕಾರಣಕ್ಕೆ ಪರಿಚಯವಾದದ್ದು? ಹೇಗೆ? ಗೋಪಾಲ್‌ರವರಿಗೂ ವೀರಪ್ಪನ್‌ಗೂ ಇರುವ ಸಂಬಂಧಗಳೇನು?

ನಿಮ್ಮನ್ನು ವೈಯಕ್ತಿಕವಾಗಿ ಆರೋಪಿಸುತ್ತಿಲ್ಲ. ನೀವು ಎಚ್ಚರದಲ್ಲಿಲ್ಲ. ಎಚ್ಚರ ತಪ್ಪುತ್ತಿದ್ದೀರಿ. ಎಲ್ಲೋ ಒಂದು ಹಂತದಲ್ಲಿ ನೀವು ಜಾರಿ ಬೀಳುತ್ತಿದ್ದೀರಿ ಎನ್ನುವ ಎಚ್ಚರಿಕೆ ಕೊಡುತ್ತಿದ್ದೇನೆ. ತಮಗೆ ಈ ವಿಷಯದಲ್ಲಿ ಕಾಲಾವಕಾಶ ಬೇಕೆನ್ನುವುದಾದರೆ ನನ್ನದೇನೂ ಅಭ್ಯಂತರವಿಲ್ಲ, ಇಷ್ಟು ದಿವಸಗಳೇ ಕಾಲಾವಕಾಶ ಕೊಟ್ಟಿದ್ದೇವೆ, ಆದರೆ, ಇದುವರೆವಿಗೂ ನಡೆದಿರತಕ್ಕಂಥ ಎಲ್ಲಾ ವಿಚಾರಗಳ ಬಗ್ಗೆ ತಾವು ಎಚ್ಚರ ವಹಿಸಿದ್ದೀರಾ? ಎನ್ನುವ ಒಂದು ಅನುಮಾನ ನಮ್ಮನ್ನು ಕಾಡುತ್ತಿದೆ. ಈ ಅನುಮಾನವನ್ನು ಹೋಗಲಾಡಿಸುವುದಕ್ಕಾದರೂ ನಿಮ್ಮಲ್ಲಿರತಕ್ಕಂಥ ಸಮಗ್ರ ಅಂಕಿ ಅಂಶಗಳನ್ನು ಈ ಸದನದ ಮುಂದೆ ತಾವು ಮಂಡಿಸಿ.

**ಜೆ.ಹೆಚ್. ಪಟೇಲ್ (ಮುಖ್ಯ ಮಂತ್ರಿ)** : ಸನ್ಮಾನ್ಯ ಅಧ್ಯಕ್ಷರೇ, ವೀರಪ್ಪನ್ ಸ್ವಯಂ ಪ್ರೇರಣೆಯಿಂದ ತನ್ನ ಭಾಷಣದ ಹಾಗೂ ದೃಶ್ಯದ ಎರಡು ಕ್ಯಾಸೆಟ್‌ಗಳನ್ನು ತಮಿಳು ನಾಡಿನ ಮುಖ್ಯ ಮಂತ್ರಿಗಳಿಗೆ, ನನಗೆ ಮತ್ತು ನಮ್ಮ ಅರಣ್ಯ ಮಂತ್ರಿಗಳಾದ ಗುರುಪಾದಪ್ಪ ನಾಗಮಾರಪಲ್ಲಿಯವರಿಗೆ ಕಳುಹಿಸಿದ ಆ ಕ್ಯಾಸೆಟ್‌ನಲ್ಲಿ ಅವನು ತಮಿಳಿನಲ್ಲಿ ಹೇಳಿರುವುದರಿಂದ ನನಗರ್ಥವಾಗುವುದಿಲ್ಲ. 'ಅಮ್ನೆಸ್ಟಿ' ಎಂದು ಹೇಳುತ್ತಿದ್ದ. ಅಮ್ನೆಸ್ಟಿ ಪದವೇನಿದೆ, ಕಾನೂನಿನ ಪ್ರಕಾರ ಸಾಧ್ಯವಿಲ್ಲವೆನ್ನುವುದು ಆತನಿಗೆ ಗೊತ್ತಿಲ್ಲದಿರಬಹುದು. ಅದಕ್ಕೋಸ್ಕರ ನಾನು ಆ ಕ್ಯಾಸೆಟ್ಟನ್ನು ವೀಕ್ಷಿಸಿದ ದಿವಸವೇ ತಮಿಳುನಾಡಿಗೆ ಹೋಗಿ ಅಲ್ಲಿನ ಮುಖ್ಯ ಮಂತ್ರಿಗಳಾದ ಕರುಣಾನಿಧಿಯವರೊಂದಿಗೆ ಸಂಭಾಷಿಸಿದೆ. ಏಕೆಂದರೆ, ಇದೊಂದು ವ್ಯಕ್ತಿಯ ಅಥವಾ ವ್ಯವಸ್ಥೆಯ ಹಾನಿ ಪ್ರಶ್ನೆಯಲ್ಲ. ಇಂತಹ ದುಷ್ಟ ಶಕ್ತಿಗೆ ಇಲ್ಲಿಯವರೆಗೆ ಬಹಳ ಜನ ಹತರಾದರು ಹಾಗೂ ಬಹಳಷ್ಟು ಪ್ರಾಣಿಗಳು ಹತವಾದವು ಎಂಬುದು ಚಿಂತೆಯ ವಿಷಯ.

ವೀರಪ್ಪನೇ ಮೊದಲು ಕ್ಯಾಸೆಟ್ ಕಳುಹಿಸಿರುವುದರಿಂದ ನಾವು ಎರಡೂ ಸರ್ಕಾರಗಳು ಹುಷಾರಾಗಿರುವುದು ಒಳ್ಳೆಯದೆಂದು ನಾನು ಸಚಿವರುಗಳಾದ ಎಂ.ಸಿ. ನಾಣಯ್ಯ, ಗುರುಪಾದಪ್ಪ ನಾಗಮಾರಪಲ್ಲಿ ಹಾಗೂ ರೋಷನ್ ಬೇಗ್‌ರವರು ಹೋಗಿ ತಮಿಳುನಾಡಿನ ಮುಖ್ಯ

ಮಂತ್ರಿಯವರ ಜೊತೆ ಮಾತುಕತೆಯಲ್ಲಿ ಹೇಳಿದೆವು. ಆತನ ವಿಚಾರದಲ್ಲಿ ಕಾನೂನಿನ ಪ್ರಕಾರ ಇದನ್ನು ಮಾಡುವುದಕ್ಕೆ ಬರುತ್ತದೆಯೇ? ಇಲ್ಲವೇ? ಎಂದು.

ಆತನಿಗೆ ಗೊತ್ತಿಲ್ಲದಿರಬಹುದು, ಆದರೆ, ಇನ್ನೊಂದು ಸಲ 'ನಕ್ಕೀರನ್' ವಾರಪತ್ರಿಕೆ ಸಂಪಾದಕರಾದ ಗೋಪಾಲ್‌ರವರನ್ನು ಕಳುಹಿಸಿಕೊಡೋಣವೆಂದು ಕ್ಯಾಸೆಟ್ ಅನ್ನು ಅವರೇ ತಂದಿದ್ದರಿಂದ ಗೋಪಾಲ್‌ರವರನ್ನು ಕರಿಸಿದರು. ನೀವೇ ಹೋಗಿ ಬನ್ನಿ ಎಂದು ಕಳುಹಿಸಿಕೊಡಲಾಯಿತು. ನಂತರ ಅವರಿಗೆ ಹೇಳಿದ್ದೇನೆಂದರೆ, ಅವರ ನಾಲ್ಕು ಬೇಡಿಕೆಗಳು, ಅಂದರೆ ಒಟ್ಟು ಸಂಖ್ಯೆಯಲ್ಲ, ಕೆಲವನ್ನು ಕೇಳಿದ್ದು, ಅದರಲ್ಲಿ ಟೋಟಲ್ ಫರ್‌ಗೀವನೇಸ್ ಕೊಡುವುದು, ತಮಿಳುನಾಡಿನ ಕೋರ್ಟಿನಲ್ಲೇ ನನ್ನ ವಿಚಾರಣೆಯಾಗಬೇಕೆಂಬುದು, ಹಾಗೂ ಆತನ ವಿರುದ್ಧ ಕರ್ನಾಟಕದಲ್ಲಿ ಹೂಡಲಾಗಿದ್ದ ಕೇಸುಗಳನ್ನೆಲ್ಲಾ ಸುಪ್ರಿಂ ಕೋರ್ಟ್ ಅನುಮತಿ ತೆಗೆದುಕೊಂಡು ತಮಿಳುನಾಡು ಕೋರ್ಟಿಗೆ ವರ್ಗಾಯಿಸುವುದು.

ಈ ಮೂರ್‍ನಾಲ್ಕು ಬೇಡಿಕೆಗಳ ಬಗ್ಗೆ ನಮಗೇನೂ ಅಭ್ಯಂತರವಿರಲಿಲ್ಲ. ತಮಿಳುನಾಡಿನ ಚೀಫ್ ಸೆಕ್ರೆಟರಿ ಮತ್ತು ನಮ್ಮ ರಾಜ್ಯದ ಚೀಫ್ ಸೆಕ್ರೆಟರಿಯವರಿಬ್ಬರೂ ಕುಳಿತು ಮಾತನಾಡಿದಾಗ ಕೆಲವು ಬೇಡಿಕೆಗಳಿಗೆ ಮಾತ್ರ ನಾವು ಒಪ್ಪಿಗೆ ಕೊಡುತ್ತೇವೆ, ಉಳಿದಿದ್ದಕ್ಕೆ ಒಪ್ಪಿಗೆ ಕೊಡುವುದಿಲ್ಲ, ಇದನ್ನು ಆತನ ಬಳಿಗೆ ಹೋಗಿ ತಿಳಿಸಿ ಎಂದು ಕಳುಹಿಸಿಕೊಟ್ಟೆವು. ಈ ವಿಚಾರವನ್ನು ನಾನು ಸದನಕ್ಕೆ ಏಕೆ ತಿಳಿಸಲಿಲ್ಲವೆಂದರೆ ಸದನಕ್ಕೆ ತಿಳಿಸುವುದು ನನ್ನ ಆದ್ಯ ಕರ್ತವ್ಯ. ಆದರೆ, ಆ ಕುರಿತು ಏನೂ ಬೆಳವಣಿಗೆಗಳಾಗಲಿಲ್ಲ, ಯಾವುದೇ ಹೊಸ ಸುದ್ದಿ ಬರಲಿಲ್ಲ.

ನಮ್ಮ ರಾಜ್ಯದ ಒಂಭತ್ತು ಅರಣ್ಯ ಇಲಾಖೆಯ ಸಿಬ್ಬಂದಿಗಳನ್ನು ಕರೆದುಕೊಂಡು ಹೋಗಿರುವುದರಿಂದ ಅವರುಗಳ ಪ್ರಾಣದ ಮತ್ತು ಕುಟುಂಬಗಳ ಹಿತದೃಷ್ಟಿಯಿಂದ ನಾನು ಮಾತನಾಡುವುದು ಸರಿಯಲ್ಲ. ಏಕೆಂದರೆ, ಆತನ ಮೇಲಿನ ಸಿಟ್ಟಿನಿಂದ ನಾವು ಏನೇನೋ ಹೇಳಬಹುದು, ನಮ್ಮ ಅಧಿಕಾರಿಗಳು ಹೇಳಬಹುದು. ಆದರಿಂದ ಏನೂ ಪ್ರಯೋಜನವಾಗುವುದಿಲ್ಲ. ಇದರಲ್ಲಿ ಕನ್‌ಸ್ಟ್ರಕ್ಟೀವ್ ಟರ್ನ್ ಏನಾದರೂ ತೆಗೆದುಕೊಂಡರೆ ಆಗ ಸದನಕ್ಕೆ ಹೇಳೋಣವೆಂದು ಇದ್ದೇನೆ.

ಎಂ. ಮಲ್ಲಿಕಾರ್ಜುನ ಖರ್ಗೆ : ಕ್ಯಾಸೆಟ್‌ನಲ್ಲಿ ಅವರು ಏನೇನು ಬೇಡಿಕೆಗಳನ್ನು ಕೇಳಿದ್ದಾರೆ? ಅದರಲ್ಲಿ ನಾಲ್ಕು ಬೇಡಿಕೆಗಳನ್ನು ಒಪ್ಪಿ ಪತ್ರ ಬರೆದಿರುವುದರಿಂದ ತಾವು ಏನೆಂದು ಪತ್ರ ಬರೆದಿದ್ದೀರಿ? ಒಪ್ಪಿರುವ ನಾಲ್ಕು ಬೇಡಿಕೆಗಳು ಯಾವುದೆಂದು ಗೊತ್ತಾಗಬೇಕಲ್ಲ?

ಬಿ.ಎಸ್. ಯಡಿಯೂರಪ್ಪ: ಇವೊತ್ತಿನ ಒಂದು ಸಂಜೆ ಪತ್ರಿಕೆಯಲ್ಲಿ ವರದಿಯಾಗಿರುವಂತೆ, ವೀರಪ್ಪನ್ ಗೋಪಾಲ್ ಅವರನ್ನು ಹಿಡಿದಿಟ್ಟುಕೊಂಡಿದ್ದಾನೆ ಎಂದು ಸುದ್ದಿ ಇರುವುದರಿಂದ ಇದರಲ್ಲಿ ಸತ್ಯಾಂಶವೇನಾದರೂ ಇದೆಯೇ?

ಜೆ.ಹೆಚ್. ಪಟೇಲ್: ಅದರ ಬಗ್ಗೆ ಯಾವುದೇ ಮಾಹಿತಿ ಬಂದಿಲ್ಲ.

ವಾಟಾಳ್ ನಾಗರಾಜ್: ಕ್ಯಾಸೆಟ್ ತಮಿಳಿನಲ್ಲಿ ಇತ್ತೆಂದು ತಾವು ಹೇಳಿದಿರಿ. ತಮಗೆ ತಮಿಳಿನಿಂದ ಕನ್ನಡಕ್ಕೆ ತರ್ಜುಮೆ ಮಾಡಿ ಹೇಳಿದವರು ಯಾರು? ಇಲ್ಲಿ ಏನಾಗುತ್ತದೆಂದರೆ ಆತ ಹೇಳಿರುವುದು ಒಂದಾದರೆ ತರ್ಜುಮೆ ಮಾಡಿ ಇನ್ನೊಂದು ರೀತಿಯಲ್ಲಿ ಹೇಳಿದರೆ ನಿಮಗೆ ಫಜೀತಿವುಂಟಾಗುತ್ತದೆ.

ಜೆ.ಹೆಚ್. ಪಟೇಲ್: ಪೋಲೀಸ್ ಅಧಿಕಾರಿಗಳೇ ಕನ್ನಡಕ್ಕೆ ಸರಿಯಾಗಿ ತರ್ಜುಮೆಗೊಳಿಸಿ ಹೇಳಿದರು.

ಎಂ. ಮಲ್ಲಿಕಾರ್ಜುನ ಖರ್ಗೆ: ಆತ ಒತ್ತೆಯಾಳಾಗಿ ಇರಿಸಿಕೊಂಡಿರುವ ಅರಣ್ಯ ಸಿಬ್ಬಂದಿಗಳ ಸ್ಥಿತಿ ಏನು? ಅವರ ಬಗ್ಗೆ ಯಾವುದೇ ಮಾಹಿತಿ ಬಂದಿಲ್ಲ.

ಜೆ.ಹೆಚ್. ಪಟೇಲ್: ಒತ್ತೆಯಾಳುಗಳಿಗೆ ಯಾವುದೇ ಅಪಾಯವಿಲ್ಲವೆಂದು ಪೋಲೀಸರು ಹೇಳಿದ್ದಾರೆ.

ಬಿ.ಎಸ್. ಯಡಿಯೂರಪ್ಪ: ಶ್ರಿ ಗೋಪಾಲ್ ಅವರು ವೀರಪ್ಪನ್‌ನ ಬಂಧನದಲ್ಲಿ ಇದ್ದಾನೆಂದು ಇವತ್ತು ಪತ್ರಿಕೆಗಳಲ್ಲಿ ವರದಿ ಬಂದಿದೆ. ಅದರ ಸತ್ಯಾಂಶ ಏನು?

ಜೆ.ಹೆಚ್. ಪಟೇಲ್: ಆ ಬಗ್ಗೆ ನಮಗೆ ಮಾಹಿತಿ ಇಲ್ಲ.

ಅಧ್ಯಕ್ಷರು: ಈಗ ಗಮನ ಸೆಳೆಯುವ ಸೂಚನೆ ತೆಗೆದುಕೊಳ್ಳೋಣ.

(ವಿಧಾನಸಭೆ, ಕಲಾಪ, ಆಗಸ್ಟ್ 6, 1997)

**ಅಜಾತಶತ್ರು**

ಅಜಾತಶತ್ರು ಇವರು. ಉಳುವವನಿಗೆ ಭೂಮಿ ಕೊಡಿಸಿಕೊಡಲು ಶ್ರಮಿಸಿದವರು. ಸರ್ವೋದಯ ಸಮಾಜದ ಕನಸು ಹೊತ್ತವರು. ಔದಾರ್ಯ ತುಂಬಿದ ಹೃದಯ ಶ್ರೀಮಂತ. ಸಿರಿವಂತಿಕೆ ಇದ್ದರೂ ಗೌಡಿಕೆಯ ಗತ್ತು ಅರಿಯದವರು. ಇವರಿಗೆ ಆಷಾಢಭೂತಿತನ ಹಿಡಿಸುತ್ತಿರಲಿಲ್ಲ. ನೇರ-ನಿಷ್ಠುರರಾದರೂ, ಸರಳ-ಸಜ್ಜನರು.

ಪಟೇಲರ ಸಂಸದೀಯ ಜೀವನದ ಸ್ಪಷ್ಟ ನಿಲುವಿನ ಘಟನೆ ಹೀಗಿದೆ. ಸಮಾಜಕ್ಕೆ ಒಳಿತಲ್ಲದ ಬರಹವನ್ನು ಮಾನ್ಯ ಬಸವಲಿಂಗಪ್ಪನವರು 'ಬೂಸಾ' ಎಂದು ಜರೆದದ್ದು ನಮ್ಮೆಲ್ಲರಿಗೂ ನೆನಪಿದೆಯಷ್ಟೆ. ಇದಕ್ಕಾಗಿ ಅವರು ನಿಂದನೆಗೆ ಒಳಗಾದಾಗ ಬಸವಲಿಂಗಪ್ಪನವರ ನೆರವಿಗೆ ಧಾವಿಸಿದವರು ಪಟೇಲರು. ಬಹಳ ಜನಕ್ಕೆ ನೆನಪಿರಲಾರದು. ಬಸವಲಿಂಗಪ್ಪನವರಿಗಿಂತಲೂ ಕಟುವಾಗಿ, ಸತ್ಯ ನಿಷ್ಠುರತೆಯಿಂದ 'ಬೂಸಾ' ಸಾಹಿತ್ಯವನ್ನು ಟೀಕಿಸಿದವರು ಪಟೇಲರು.

(ಎಚ್.ಕೆ. ಪಾಟೀಲ (ವಿಧಾನ ಪರಿಷತ್ ಸಭಾನಾಯಕರು), ಫೆಬ್ರವರಿ 27, 2001)

# 11

# ಸಂಸದೀಯ ಅಗ್ನಿಪರೀಕ್ಷೆ

## ಅವಿಶ್ವಾಸ ನಿರ್ಣಯ : 'ಒನ್‌ವೇ' ಚರ್ಚೆ

ಸಂಸದೀಯ ಕಲಾಪಗಳಲ್ಲಿ ಸರ್ಕಾರದ ಬಗೆಗೆ ವಿಶ್ವಾಸ ಕೋರುವ ಇಲ್ಲವೇ ಅವಿಶ್ವಾಸ ಸೂಚಿಸುವ ನಿರ್ಣಯದ ಮೇಲಿನ ಚರ್ಚೆ ಮತ್ತು ಉತ್ತರ ಬಹು ಗಂಭೀರದ ದೃಶ್ಯ. ಆಡಳಿತಾರೂಢ ಪಕ್ಷದ ಸರ್ಕಾರವನ್ನು ಸಂಸದೀಯ ರೀತಿಯಲ್ಲಿ ಕೆಳಗಿಳಿಸಲು ಪ್ರತಿಪಕ್ಷಗಳು ಬಳಸುವ ಅಂತಿಮ ಅಸ್ತ್ರ ಇದು. ಅಂತೆಯೇ ಸದನದಲ್ಲಿ ತನ್ನ ಬಹುಮತವನ್ನು ಸಾಬೀತುಗೊಳಿಸಲು ಮುಖ್ಯಮಂತ್ರಿಗೆ ದೊರಕುವ ಅಪೂರ್ವ ಅವಕಾಶ ಸಹಿತ.

ವಿಶ್ವಾಸ-ಅವಿಶ್ವಾಸ ನಿರ್ಣಯಗಳನ್ನು ಕುರಿತು ಸಂಸತ್ತಿನ 184 ರಿಂದ 189 ಮತ್ತು 198ನೆಯ ನಿಯಮಾವಳಿಗಳು ವಿವರವಾಗಿ ತಿಳಿಸುತ್ತವೆ. ಕರ್ನಾಟಕ ವಿಧಾನ ಸಭೆಯಲ್ಲಿ ನಿಯಮ 167 ಮಂತ್ರಿಮಂಡಲದ ಬಗೆಗೆ ಅವಿಶ್ವಾಸ ಸೂಚಿಸುವ ಪ್ರಸ್ತಾವವನ್ನು ವಿವರಿಸುತ್ತದೆ.

ಸಂಸತ್ತು ಮತ್ತು ದೇಶದ ವಿವಿಧ ವಿಧಾನಮಂಡಲಗಳಲ್ಲಿನ ಅವಿಶ್ವಾಸ ಪ್ರಸ್ತಾಪಗಳ ಬಗೆಗೆ ಶ್ರೀ ಸುಭಾಷ್ ಕಶ್ಯಪ್‌ರವರ Parliament of India, Myths & Realities 1988 (PP 35, 39-43), The Parliament and the Executive in India 1987 ಮತ್ತು ಎಂ.ಎನ್. ಕೌಲ್ ಮತ್ತು ಎಸ್.ಎಲ್. ಶಖ್‌ಧರ್‌ರವರ Practice and Procedure of Parliament, V Edition 2001, (PP 685-697) ಹೆಚ್ಚಿನ ವಿವರ ನೀಡುತ್ತವೆ.

ಸಾಮಾನ್ಯರ ಭಾಷೆಯಲ್ಲಿ ಅವಿಶ್ವಾಸ ನಿರ್ಣಯದ ಚರ್ಚೆ ಒಂದು ಅಖಾಡವಿದ್ದಂತೆ. ಪ್ರತಿಪಕ್ಷ ಮತ್ತು ಆಡಳಿತ ಪಕ್ಷದ ಶಾಸಕರ ಜಿದ್ದಾಜಿದ್ದಿ. ಸಂಸದೀಯ ಯುದ್ಧ. ಸತ್ವಪರೀಕ್ಷೆಯ ನಿರ್ಣಾಯಕ ಅಂಕ.

ಪ್ರತಿಪಕ್ಷಗಳ ವಿಚಾರ ಮಂಡನೆಯ ನಂತರ ಮುಖ್ಯಮಂತ್ರಿಯು ತನ್ನ ಸರ್ಕಾರದ ಬಗೆಗಿನ ಆರೋಪ, ಟೀಕೆ, ಟಿಪ್ಪಣಿ, ವೈಯಕ್ತಿಕ ವಿಷಯ ಕುರಿತ ಪ್ರಹಾರ, ಪಕ್ಷದ ಧ್ಯೇಯೋದ್ದೇಶ, ವಿಫಲತೆ – ಸಫಲತೆ, ಚುನಾವಣೆಯ ಕಾಲದ ಪ್ರಣಾಳಿಕೆಗಳಲ್ಲಿನ ವಾಗ್ದಾನ ಬದ್ಧತೆ, ಸರ್ಕಾರದ ಸಾಧನೆ – ಹೀಗೆ ಹಂತ ಹಂತವಾಗಿ ವಿರೋಧಪಕ್ಷಗಳ ಪ್ರಶ್ನೆಗೆ ಉತ್ತರ ನೀಡುವುದು ಸಂಸದೀಯ ನಡವಳಿಕೆ.

1996ರ ಆಗಸ್ಟ್ 26 ರಂದು, ಅಧಿಕಾರ ವಹಿಸಿಕೊಂಡ ಕೇವಲ ಮೂರು ತಿಂಗಳಿನ ಕ್ಷಿಪ್ರದಲ್ಲಿಯೇ, ಮುಖ್ಯಮಂತ್ರಿ ಜೆ.ಹೆಚ್. ಪಟೇಲ್ ನೇತೃತ್ವದ ಸರ್ಕಾರ ಅವಿಶ್ವಾಸ ನಿರ್ಣಯ ಎದುರಿಸಬೇಕಾಯಿತು.

ಅಂದಿನ ಪ್ರಧಾನ ಪ್ರತಿಪಕ್ಷ ಬಿ.ಜೆ.ಪಿ., ಕಾಂಗ್ರೆಸ್, ಕರ್ನಾಟಕ ರಾಜ್ಯ ರೈತ ಸಂಘ, ಕರ್ನಾಟಕ ಕಾಂಗ್ರೆಸ್ ಪಕ್ಷ, ಪಕ್ಷೇತರ ಗುಂಪಿನ ಪರವಾಗಿ ಶ್ರೀ ಶಿವನಂಜಪ್ಪ, ವಾಟಾಳ್ ಕನ್ನಡ ಪಕ್ಷ – ಈ ಎಲ್ಲ ಪ್ರತಿ ಪಕ್ಷಗಳು ಪಟೇಲರ ಮಂತ್ರಿಮಂಡಲಕ್ಕೆ ಅವಿಶ್ವಾಸ ಸೂಚಿಸುವ ನಿರ್ಣಯವನ್ನು ಮಂಡಿಸಿದ್ದವು.

1996ರ ಅವಿಶ್ವಾಸ ನಿರ್ಣಯ ಮಂಡನೆಯ ವಿರೋದಾಭಾಸವೆಂದರೆ ಪಟೇಲರಿಗೆ ತಮ್ಮ ಬಗೆಗಿನ ಅವಿಶ್ವಾಸ ನಿರ್ಣಯಕ್ಕೆ ಉತ್ತರ ಹೇಳುವ ಅವಕಾಶವೇ ಸಿಗಲಿಲ್ಲ. ಚರ್ಚೆಯ ಕೊನೆ – ಕೊನೆಯಲ್ಲಿ ಸದನದಲ್ಲಿ ಗೊಂದಲ ಉಂಟಾದಾಗ ಪ್ರಸ್ತಾವ ಅಲ್ಲಿಗೇ ಅಂತ್ಯಗೊಂಡಿತು. ಮತಕ್ಕೆ ಹಾಕದ ಸಂದರ್ಭ ಉಂಟಾಯಿತು. ಚರ್ಚೆಗೆ ಉತ್ತರ ಕೊಡಲು ಸಾಧ್ಯವಾಗದ ಉತ್ತಮವಾಗ್ಮಿ ಮುಖ್ಯಮಂತ್ರಿ ಜೆ.ಹೆಚ್. ಪಟೇಲರಿಗೆ ಇದರಿಂದ ನಿರಾಸೆಯಾಗಿರಲಿಕ್ಕೂ ಸಾಕು.

ಕರ್ನಾಟಕ ವಿಧಾನ ಮಂಡಲದಲ್ಲಿ ಅವಿಶ್ವಾಸ ನಿರ್ಣಯಗಳ ಮೇಲೆ ನಡೆದ ಹಲವಾರು ಕಲಾಪಗಳ ಪೈಕಿ ಪಟೇಲರ ಸರ್ಕಾರದ ಮೇಲಿನ ಅವಿಶ್ವಾಸ ಗೊತ್ತುವಳಿ ಚರ್ಚೆ ಮುಗಿದು ಉತ್ತರಿಸುವವರೆಗೂ ಗಂಭೀರವಾಗಿಯೇ ಇತ್ತು.

ಪಟೇಲರ ಆಡಳಿತ ವಿಧಾನ ಹಾಗೂ ಸರ್ಕಾರಿ ಯಂತ್ರದ ವಿಫಲತೆಯನ್ನು ಗುರುತಿಸಲು ಪ್ರತಿಪಕ್ಷಗಳು ಪ್ರಧಾನವಾಗಿ ಅಂದಿನ ರಾಜಕೀಯ ವಿದ್ಯಮಾನಗಳನ್ನು ಉದಹರಿಸಿದವು. ಆಗಷ್ಟೇ ಮೊದಲ ಕನ್ನಡಿಗ, ರೈತನ ಮಗ, ಮಾಜಿ ಮುಖ್ಯಮಂತ್ರಿ ಹೆಚ್.ಡಿ. ದೇವೇಗೌಡರು ದೇಶದ ಪ್ರಧಾನಮಂತ್ರಿಯಾದ ಕಾಲ. ಮತ್ತೊಬ್ಬ ಮಾಜಿ ಮುಖ್ಯಮಂತ್ರಿ ಮುತ್ಸದ್ದಿ ಮತ್ತು ರಾಜಕೀಯ ಧುರೀಣ ರಾಮಕೃಷ್ಣ ಹೆಗಡೆಯವರನ್ನು ಪಕ್ಷದಿಂದ

ಹೊರಹಾಕಿದ್ದು, ಹೆಗಡೆಯವರ ಬೆಂಬಲಿಗರು ಪಟೇಲರ ಮಂತ್ರಿಮಂಡಲದಲ್ಲಿ ಮುಂದುವರೆದದ್ದು ಮತ್ತು ನಂತರದ ರಾಜಕೀಯ ಬೆಳವಣಿಗೆ ಅವಿಶ್ವಾಸ ನಿರ್ಣಯದ ಮೇಲಿನ ಚರ್ಚೆಯಲ್ಲಿ ಹಾಸುಹೊಕ್ಕಾಗಿದ್ದವು.

ಗಜಗಾತ್ರದ 45 ಸಚಿವರ ಸಂಪುಟ, ಕೃಷ್ಣಾ ಮೇಲ್ದಂಡೆ ವಿವಾದದಲ್ಲಿ ಆಂಧ್ರಪ್ರದೇಶ ಕೇಂದ್ರದ ಮೇಲೆ ಒತ್ತಡ ತಂದಿದೆ ಎನ್ನುವ ದೂರು, ಇದರ ಫಲವಾಗಿ ಪ್ರಧಾನಮಂತ್ರಿಯವರು ವಿವಿಧ ರಾಜ್ಯಗಳ ಮುಖ್ಯಮಂತ್ರಿಗಳ ನಿಯೋಗವೊಂದನ್ನು ಕೃಷ್ಣಾ ಕಣಿವೆಗಾಗಿ ನಿಯೋಜಿಸಿರುವರೆಂಬ ಆರೋಪ, ರಾಜ್ಯ ಸರ್ಕಾರಿ ನೇಮಕಾತಿಯಲ್ಲಿ ಪರಿಶಿಷ್ಟ ಜಾತಿ - ವರ್ಗಗಳಿಗೆ ಅನ್ಯಾಯ ಆಗಿದೆ ಎಂಬ ಆರೋಪ, ಮಳೆಯಿಂದ ವಂಚಿತವಾದ ಪ್ರದೇಶಗಳಲ್ಲಿ ಪರಿಹಾರದ ಕೊರತೆ, ಅಬ್ಕಾರಿ ವಲಯದ ಹಸ್ತಕ್ಷೇಪ, ಕುಗ್ಗಿದ ರಾಜ್ಯದ ಸಂಪನ್ಮೂಲ - ಇವೇ ಮೊದಲಾದ ವಿಷಯಗಳು ಚರ್ಚೆಯಲ್ಲಿ ಪ್ರಸ್ತಾಪಿತವಾದವು.

(ಚರ್ಚೆಯ ಸಂಕ್ಷಿಪ್ತ-ಸಂಗ್ರಹ)

ಬಿ.ಎಸ್. ಯಡಿಯೂರಪ್ಪ (ವಿರೋಧ ಪಕ್ಷದ ನಾಯಕರು)

ಈ ಅವಿಶ್ವಾಸ ನಿರ್ಣಯವನ್ನು ಅನಿವಾರ್ಯವಾಗಿ ನಾವು ಮಂಡಿಸುವ ಸಂದರ್ಭ ಬಂದಿದೆ. ಪ್ರತಿ ಪಕ್ಷಗಳಾಗಿ ನಾವು ಈ ಮಹತ್ವಪೂರ್ಣ ಕಲಾಪದಲ್ಲಿ ಭಾಗಿಗಳಾಗಿದ್ದೇವೆ.

ಮಾನ್ಯ ಜೆ.ಹೆಚ್. ಪಟೇಲರು ಮುಖ್ಯಮಂತ್ರಿಗಳಾದ ಮೇಲೆ ಒಬ್ಬ ಬುದ್ಧಿಜೀವಿ, ಸಮಾಜ ಚಿಂತಕ, ದಿವಂಗತ ಗೋಪಾಲ ಗೌಡರ ಒಡನಾಡಿಯೊಬ್ಬರು ಕರ್ನಾಟಕದ ಹಿತವನ್ನು ಕಾಯುವರೆಂದು ನಾವು ಭಾವಿಸಿದ್ದೆವು.

ಜಡ್ಡುಗಟ್ಟಿದ ರಾಜ್ಯದ ಆಡಳಿತ ಯಂತ್ರವನ್ನು ಚುರುಕುಗೊಳಿಸಿ ರಾಜ್ಯಕ್ಕೆ ಸಮರ್ಥವಾದ ಆಡಳಿತವನ್ನು ಕೊಡುವರೆಂದು ರಾಜ್ಯದ ಜನತೆ ನಂಬಿದ್ದಾರೆ. ಆದರೆ ದುರ್ದೈವದಿಂದ ಈ ಕನ್ನಡ ನಾಡಿನ ಜನತೆಯ ಆಸೆ, ಅಪೇಕ್ಷೆ ಮತ್ತು ನಿರೀಕ್ಷೆ ಹುಸಿಯಾಗಿದೆ. ವಿವೇಕವಿದ್ದರೂ ಇಲ್ಲದಂತೆ ನಡೆದುಕೊಳ್ಳುತ್ತಿರುವ ನಾಯಕನಿಂದಾಗಿ ಈ ನಾಡಿನ ಜನಕೋಟಿಯ ಭವಿಷ್ಯ ಆಪತ್ತಿನಲ್ಲಿದೆ ಎಂಬ ಭಾವನೆ ಮೂಡುತ್ತಿದೆ.

ಕಳೆದ ಮೂರು ತಿಂಗಳ ಆಡಳಿತದ ವೈಖರಿ ಮತ್ತು ಈ ಹಿಂದಿನ ಸರ್ಕಾರದ ಆಡಳಿತದ ವಿಧಾನವನ್ನು ಅವಲೋಕಿಸಿದರೆ ಜನತಾದಳದ ಅಧಿಕಾರದ ಹೆಗ್ಗುರುತು ' ಸರ್ವಾಧಿಕಾರಿ ' ಪ್ರವೃತ್ತಿ ಎಂಬುದು ಸ್ಪಷ್ಟವಾಗುತ್ತದೆ.

ಪಟೇಲರಲ್ಲಿ ಸದ್ಗುಣಗಳೇನೋ ಅಪಾರವಾಗಿದೆ ನಿಜ. ಆದರೆ ಪಾಪ, ಕುಡುಕರ ಮೇಲೆ ಇವರಿಗೆ ವಿಪರೀತ ಕಾಳಜಿ. ಚೀಪ್‌ರೇಟ್ ಲಿಕ್ಕರ್ ಮಾಡಲು ಸರ್ಕಾರ ಅಬ್ಕಾರಿ ವಲಯಕ್ಕೆ ಕುಮ್ಮಕ್ಕು ನೀಡುತ್ತಿದೆ.

ಇದೊಂದು ರೀತಿಯಲ್ಲಿ ರಾಜ್ಯದ ಲೂಟಿ, ಇದು ನಿಲ್ಲಬೇಕು. ಅನ್ಯಾಯ ಇದೇ ರೀತಿ ಮುಂದುವರೆಯಬಾರದು, ಹಿಂದೇನಾಯಿತು? ನೆನಪಿದೆಯೇ, ದ್ರೌಪತಿಯ ವಸ್ತ್ರಾಪಹರಣ ಕಾಲದಲ್ಲಿ ಭೀಷ್ಮ, ದ್ರೋಣ, ವಿದುರ - ಎಲ್ಲ ಹಿರಿಯರೂ ಕೈಕಟ್ಟಿ ಕುಳಿತಿದ್ದರು. ಯಾವುದೋ ಧರ್ಮಸಂಕಟಕ್ಕೆ ಸಿಕ್ಕಿಕೊಂಡು ಅನ್ಯಾಯ ಎಂದು ಕಂಡರೂ ನಿಸ್ಸಹಾಯಕರಂತೆ ಕುಳಿತರು. ಈಗ ಹಾಗಾಗುವುದು ಬೇಡ. ಆಡಳಿತ ಪಕ್ಷದಲ್ಲೂ ಅನೇಕ ಜನ ಅನ್ಯಾಯದ ವಿರುದ್ಧ ಹೋರಾಡ ಬಲ್ಲಿರಿ. ಬನ್ನಿ ಹೊರಗೆ. ಈ ರಾಜ್ಯಕ್ಕೆ ಜನಹಿತದ ಅಧಿಕಾರಿ ನಡೆಸಿ. ನಮಗೆ ಬೇಡ ಇಂತಹ ಅಧಿಕಾರ.

ಈ ರೀತಿ ಅಧಿಕಾರದ ಸಲುವಾಗಿ ಸ್ವಾರ್ಥ ಮತ್ತು ಪಾಪ ಕೃತ್ಯವೆಸಗಿ ಹಗಲು ದರೋಡೆ, ಲೂಟಿ, ಅನ್ಯಾಯವೆಸಗುವ ಸರ್ಕಾರಕ್ಕೆ ಅಧಿಕಾರದಲ್ಲಿ ಮುಂದುವರೆಯಲು ಒಂದು ಕ್ಷಣವೂ ನೈತಿಕ ಹಕ್ಕಿಲ್ಲ ಎಂದು ಹೇಳಬಯಸುತ್ತೇನೆ.

ಮಲ್ಲಿಕಾರ್ಜುನ ಖರ್ಗೆ:

ಆಂದ್ರಪ್ರದೇಶ ಸರ್ಕಾರ ಕೃಷ್ಣಾಯೋಜನೆಯು ನಮ್ಮ ಭಾಗದ ಅತ್ಯಮೂಲ್ಯ ಕಾರ್ಯಕ್ರಮವಾದ ಆಲಮಟ್ಟಿ ಜಲಾಶಯದ ಎತ್ತರವನ್ನು ಕಡಿಮೆ ಮಾಡಲು ಸಂಘಟಿತ ಪ್ರಯತ್ನ ನಡೆಸಿದೆ, ಪ್ರಧಾನ ಮಂತ್ರಿಯವರ ಮೇಲೆ ಒತ್ತಡ ತಂದಿದೆ. ಹುನ್ನಾರ ನಡೆಸಿದೆ, ಎಂದು ಕಾಂಗ್ರೆಸ್ ಪಕ್ಷ ರಾಜ್ಯದಲ್ಲಿನ ಜನತಾದಳ ಸರ್ಕಾರವನ್ನು ಎಚ್ಚರಿಸಿದಾಗ ಮುಖ್ಯಮಂತ್ರಿಗಳು ಇದನ್ನು ಪ್ರಲಾಪ ಎಂದು ಹೀಯಾಳಿಸಿದರು. ಈ ಬಗೆಗೆ ಸದನದಲ್ಲಿ ದೀರ್ಘ ಚರ್ಚೆಯಾಯಿತು.

ಸೂಕ್ಷ್ಮಮತಿಗಳೂ, ಅಸಾಧಾರಣ ಬುದ್ಧಿವಂತರೂ ಆದ ಜೆ.ಹೆಚ್. ಪಟೇಲರು ನಮ್ಮ ಎಚ್ಚರಿಕೆಯ ಮಾತುಗಳನ್ನು ಗಂಭೀರವಾಗಿ ತೆಗೆದುಕೊಳ್ಳದಿದ್ದುದು ನಮ್ಮ ದುರ್ದೈವ.

ಇಂದು ತುರಾತುರಿಯಿಂದ, ಕೇಂದ್ರದಲ್ಲಿ ಸಂಯುಕ್ತ ಪಕ್ಷಗಳ ಸರ್ಕಾರ ಇರುವ ಕಾರಣ, ಕೇಂದ್ರ ಸರ್ಕಾರ ಬೆಂಬಲಪಕ್ಷಗಳ ಮಾತು ಕೇಳಿಕೊಂಡು ನೀರಿನ ಹಂಚಿಕೆಯಲ್ಲಿ ತಮ್ಮದೇ ಆದ ಒಂದು ಒಪ್ಪಂದಕ್ಕೆ ಬಂದಂತೆ ಕಾಣುತ್ತಿದೆ. ಮಾನ್ಯ ಪಟೇಲರೇನೋ ಯಾವುದೇ ಕಾರಣಕ್ಕೂ ಆಲಮಟ್ಟಿ ಜಲಾಶಯದ ಎತ್ತರವನ್ನು ಕಡಿಮೆ ಮಾಡುವುದಿಲ್ಲ ಎಂದಿದ್ದಾರೆ. ಕೆಲಸ ನಿಲ್ಲಿಸುವುದಿಲ್ಲ ಎಂದು ಎರಡು ಮೂರು ಬಾರಿ ಸ್ಪಷ್ಟಪಡಿಸಿದ್ದಾರೆ.

ಆದರೆ ಈ ವಿಷಯದ ಬಗ್ಗೆ ಚರ್ಚೆಮಾಡಲು ಯಾರ ಒತ್ತಡಕ್ಕಾಗಿ ಕನ್ನಡಿಗರೇ ಆದ ಪ್ರಧಾನಮಂತ್ರಿ ಮಾನ್ಯ ಹೆಚ್.ಡಿ. ದೇವೇಗೌಡರು ಸಭೆಯನ್ನು ಕರೆದಿದ್ದಾರೆ? ತಿಳಿಯುವುದಿಲ್ಲ. ಯಾವ ಕಾನೂನಿನ ಅಡಿಯಲ್ಲಿ ಈ ಸಭೆ ಕರೆಯಲಾಗಿದೆ? ಇದೂ ಸ್ಪಷ್ಟವಿಲ್ಲ.

ಇವತ್ತು ನಮ್ಮ ಹಣೇಬರಹ ಹೇಗಿದೆ ಎಂದರೆ, ತಮಿಳು ನಾಡಿನವರೂ ಇದೇ ರೀತಿ ಗುಲ್ಲೆಬ್ಬಿಸಿ ನಮ್ಮನ್ನು ಹೆದರಿಸುವ ಪ್ರಯತ್ನ ಮುಂದುವರೆಸಿದ್ದಾರೆ. ಈ ಕತ್ತಿ ಇನ್ನೂ ನಮ್ಮ ಮೇಲೆ ತೂಗುತ್ತಲೇ ಇದೆ.

ಆಡಳಿತ ವೈಖರಿಯೂ ಇಷ್ಟೆ. ಗೊತ್ತು-ಗುರಿ ಇಲ್ಲದೆ ನಡೆಯುತ್ತಿದೆ. ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ಆಗುತ್ತಿರುವ ಅನ್ಯಾಯ ಇದಕ್ಕೆ ಪ್ರತ್ಯಕ್ಷ ಸಾಕ್ಷಿ.

'ಅಂಧೇರಿ ನಗರಿ ಚೌಪಟ್ ರಾಜ, ಕಟೇಶೇರ್ ಕಾಯೇ ಕಟೇಶೇರ್ ಬಚೀ' ಅಂದ ಹಾಗೆ ಆಗಿದೆ. ಹಿಂದೆ ಯಾವ ರೀತಿಯಲ್ಲಿ ಇತ್ತೋ ಅದೇ ರೀತಿಯಲ್ಲಿ ಇಂದು ತಾವು ಆಡಳಿತವನ್ನು ನಡೆಸಿಕೊಂಡು ಬಂದಿದ್ದೀರಿ. ಯಾವುದೇ ಹೊಸ ಕಾರ್ಯಕ್ರಮವೂ ತಮ್ಮಲ್ಲಿ ಇಲ್ಲ. ಆಲಮಟ್ಟಿ, ಜುರಾಲ ಇಲ್ಲವೇ ಕೃಷ್ಣಾ ಮೇಲ್ದಂಡೆ ಯೋಜನೆ ಇರಬಹುದು, ಇಲ್ಲವೇ ಅಬಕಾರಿ ಆಡಳಿತ ಆಗಬಹುದು ನಿಮ್ಮ ಆಡಳಿತದ ವಿವಿಧ ಮಜಲುಗಳನ್ನು ನೋಡಿದುಂತೆಲ್ಲಾ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡಬೇಕು ಎನ್ನುವ ದೃಢ ನಿರ್ಧಾರ ಅಥವಾ ಮನಸ್ಸು ಈ ಸರ್ಕಾರಕ್ಕೆ ಇದ್ದಂತಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ.

ಹೀಗಾಗಿ ಅಧಿಕಾರದಲ್ಲಿ ಮುಂದುವರೆಯುವ ನೈತಿಕ ಹೊಣೆ ಈ ಸರ್ಕಾರಕ್ಕಿಲ್ಲ. ಪಟೇಲರು ಈ ಹೊಣೆಗಾರಿಕೆಯನ್ನು ಕಳೆದುಕೊಂಡಂತೆ ಭಾಸವಾಗುತ್ತಿದೆ. ಅಂತೆಯೇ ರಾಜ್ಯದ ರೈತರ ರಕ್ಷಣೆ ವಿಷಯದಲ್ಲಿಯೂ ಸರ್ಕಾರ ಆಸಕ್ತಿ ಕಳೆದುಕೊಂಡಿದೆ. ಕಾನೂನು ಪರಿಪಾಲನೆ, ಆಡಳಿತ, ನೀರಾವರಿ ವ್ಯವಸ್ಥೆ - ಎಲ್ಲ ವಲಯಗಳಲ್ಲಿಯೂ ಸರ್ಕಾರ ವಿಫಲವಾಗಿದೆ.

ಯು.ಆರ್. ಸಭಾಪತಿ: ಮಾನ್ಯ ಜೆ.ಹೆಚ್. ಪಟೇಲರು ಮುಖ್ಯಮಂತ್ರಿ ಪದವಿಯನ್ನು ಅಲಂಕರಿಸಿದಾಗ ನಮಗಂತೂ ದೊಡ್ಡ ಆಸೆ, ನಂಬಿಕೆ ಉಂಟಾಗಿತ್ತು. ಸಮಾಜವಾದಿ ತತ್ವದ ಆಧಾರದ ಮೇಲೆ ಸತತ ಹೋರಾಟ ನಡೆಸಿದ ಈ ದೊಡ್ಡ ವ್ಯಕ್ತಿ ಮುಖ್ಯ ಮಂತ್ರಿಗಳಾದರು ಎಂದುಕೊಂಡಿದ್ದೆವು. ಸಮರ್ಥವಾದ ಮತ್ತು ನಿರ್ದಿಷ್ಟ ಧೋರಣೆಯ ಸರ್ಕಾರ ಇದರಿಂದ ನಮಗೆ ಸಿಗುವುದೆಂದು ಜನ ಸಾಮಾನ್ಯರು ನಂಬಿದರು.

ಎಲ್ಲರಿಗೂ ಸಮಾಧಾನವಾಗಲಿ ಎಂದು ಜಂಬೋಜೆಟ್ ಮಂತ್ರಿ ಮಂತ್ರಿಮಂಡಲ ಮಾಡುವ ದುಸ್ಥಿತಿ ಇವರಿಗೆ ಬಂದದ್ದು ತೀರಾ ಅನ್ಯಾಯ. ವಿರೋಧ ಪಕ್ಷದಲ್ಲಿದ್ದಾಗ ಗಜಗಾತ್ರದ ಮಂತ್ರಿಮಂಡಲವನ್ನು ಖಂಡತುಂಡಾಗಿ ಟೀಕಿಸಿದ ಪಟೇಲರು, ಹಿಂದಿನವರೆಲ್ಲರನ್ನು ಮೀರಿಸಿ 45 ಜನರ ಸಂಪುಟ ಮಾಡಿದುದು ದುರ್ದೈವ.

ಮಾನ್ಯ ಮುಖ್ಯಮಂತ್ರಿಯವರೇ, ತಮ್ಮ ನೇತೃತ್ವದ ಸರ್ಕಾರ ಈ ರಾಜ್ಯದಲ್ಲಿ ಬಡ ಮೀನುಗಾರರಿರುವುದು ಕೇವಲ ಮೂರು ವಿಧಾನ ಸಭಾ ಕ್ಷೇತ್ರಗಳಲ್ಲಿ ಮಾತ್ರ ಎಂದು ಭಾವಿಸಿದಂತಿದೆ. ಒಂದು ಹೊಳೆನರಸೀಪುರ ಮತ್ತು ರಾಮನಗರ, ಇನ್ನೊಂದು ಶ್ರೀನಿವಾಸಪುರ, ಮತ್ತೊಂದು ಬ್ರಹ್ಮಾವರ. ಇದು ಬಿಟ್ಟರೆ ಬಾಕೀ ಭಾಗದಲ್ಲಿ ಮೀನುಗಾರರೇ ಇಲ್ಲವೇನು?

ವಾಟಾಳ್ ನಾಗರಾಜ್:

ಅವಿಶ್ವಾಸ ನಿರ್ಣಯವನ್ನು ಮಂಡಿಸುವಂತಹ ಪರಿಸ್ಥಿತಿ ಇಷ್ಟು ಬೇಗ ಬರುತ್ತದೆಂದು ನಾವು ಯಾರೂ ಅಂದುಕೊಂಡಿರಲಿಲ್ಲ. ಮುಖ್ಯಮಂತ್ರಿ ಶ್ರೀ ಜೆ.ಹೆಚ್. ಪಟೇಲರ ಚೈತನ್ಯವನ್ನು,

ಅವರ ಶಕ್ತಿಯನ್ನು ಅವರ ಪ್ರೌಢಿಮೆಯನ್ನು, ಅವರ ಸೇವೆಯನ್ನು ನಾನೆಂದೂ ಅಲ್ಲಗಳೆಯುವುದಕ್ಕೆ ಹೋಗುವುದಿಲ್ಲ. ಉದಾತ್ತ ತ್ಯಾಗ ಮಾಡಿದವರು ಇವರು. ಗೋಪಾಲಗೌಡ ಮತ್ತು ಲೋಹಿಯಾರಂತಹ ಉನ್ನತ ನಾಯಕರೊಂದಿಗೆ, ಕಾಗೋಡು ಸತ್ಯಾಗ್ರಹವೂ ಸೇರಿದಂತೆ, ಹಲವಾರು ಹೋರಾಟಗಳನ್ನು ನಡೆಸಿದವರು.

ಈ ಸರಕಾರ ಬಂದು 80 ದಿನಗಳಾಗಿವೆ. ದುರಾದೃಷ್ಟದ ಸಂಗತಿ ಎಂದರೆ ಕನ್ನಡದ ಬಗ್ಗೆ, ಕನ್ನಡ ಸಂಸ್ಕೃತಿಯ ಬಗ್ಗೆ, ಕನ್ನಡ ಆಡಳಿತದ ಬಗ್ಗೆ, ಕನ್ನಡ ಭಾಷೆಯ ಬಗ್ಗೆ ಈಗಿನ ಸರ್ಕಾರಕ್ಕೆ ಮುಖ್ಯವಾಗಿ ಹಿರಿಯ ಅಧಿಕಾರಿಗಳಿಗೆ, ಅದರಲ್ಲಿಯೂ ಐಎಎಸ್ ಅಧಿಕಾರಿಗಳಿಗೆ ಸ್ವಲ್ಪವೂ ಕಾಳಜಿ, ಚಿಂತನೆ ಅಥವಾ ಶ್ರದ್ಧೆ ಇದ್ದಂತಿಲ್ಲ.

ಕನ್ನಡವನ್ನು ಆಡಳಿತ ಭಾಷೆ ಎಂದು ಮಾಡಿಕೊಂಡಿದ್ದೇವೆ. ಇದು ಕೇವಲ ಮೋಸಕ್ಕೆ, ಷೋಕಿಗೆ, ಮೋಜಿಗೆ - ಮಾಡಿದ ವ್ಯವಸ್ಥೆ. ನಮ್ಮ ಹಣೆಯ ಬರಹ. ಕನ್ನಡ ನಾಡಿನ ಜನತೆಗೆ ತೆರೆಯ ಮರೆಯ ಮೋಸ ಹಾಗೂ ಅಪಚಾರ ಮಾಡುತ್ತಿರುವಂತೆ ನನಗನ್ನಿಸುತ್ತಿದೆ.

ಸರ್ಕಾರದ ಮಟ್ಟದಲ್ಲಿ ಮತ್ತು ಜಿಲ್ಲೆ, ತಾಲ್ಲೂಕು ಮಟ್ಟದ ಆಡಳಿತದಲ್ಲಿ ಇನ್ನೂ ಹಲವಾರು ಸರ್ಕಾರಿ ವರದಿಗಳು, ಕಾಗದ ಪತ್ರಗಳು ಇಂಗ್ಲೀಷಿನಲ್ಲಿಯೇ ಮುಂದುವರೆದಿವೆ. ಇದು ಅನ್ಯಾಯ, ಹೀಗಾಗಬಾರದಿತ್ತು. ಸಾಕಷ್ಟು ನಿದರ್ಶನಗಳು ನನ್ನಲ್ಲಿವೆ. ಇಂಗ್ಲೀಷಿನಲ್ಲಿಯೇ ಅಧಿಕೃತ ವ್ಯವಹಾರ ನಡೆಯುತ್ತಿರುವುದನ್ನು ಇಂದಿಗೂ ಕಾಣಬಹುದಾಗಿದೆ. ಉದಾಹರಣೆಗಾಗಿ ತೋರಿಸುತ್ತಿದ್ದೇನೆ. ದಕ್ಷಿಣ ಕನ್ನಡ ಜಿಲ್ಲೆ ಜಿಲ್ಲಾಪರಿಷತ್ತಿನ ವರದಿಯೊಂದು ಇಂಗ್ಲೀಷಿನಲ್ಲಿದೆ. ದಕ್ಷಿಣ ಕನ್ನಡ ಜಿಲ್ಲೆ ಲಂಡನ್ನಿನಲ್ಲಿದೆಯೇ? ಇದು ನನ್ನ ಕಳಕಳಿ. ವಿದ್ಯುಚ್ಛಕ್ತಿ ಮಂಡಲಿ ವರದಿ. ಇದೂ ಇಂಗ್ಲೀಷಿನಲ್ಲಿಯೇ.

(ಈ ಹಂತದಲ್ಲಿ ಮಾನ್ಯ ವಾಟಾಳ್ ನಾಗರಾಜರು ಇಂಗ್ಲೀಷಿನಲ್ಲಿದ್ದ ವರದಿಯನ್ನು ಹರಿದು ಹಾಕಿದರು.)

ಬಿ.ಎಸ್. ಯಡಿಯೂರಪ್ಪ (ಮಧ್ಯೆ ಪ್ರವೇಶಿಸಿ) ಮಾನ್ಯ ಜೆ.ಹೆಚ್. ಪಟೇಲರು ಲೋಕಸಭೆಗೆ ಮೊದಲ ಬಾರಿಗೆ ಹೋದಾಗ ಅಲ್ಲಿ ಕನ್ನಡದಲ್ಲಿ ಮಾತನಾಡಿದರು. ಅದನ್ನು ಓದಿ ನಾವುಗಳು ಹುಡುಗರಿದ್ದಾಗ ಆನಂದಪಟ್ಟಿದ್ದೆವು. ಅಂತಹವರು ಮುಖ್ಯಮಂತ್ರಿಯಾದಾಗ ಕನ್ನಡಕ್ಕೆ ಈ ಸ್ಥಿತಿ ಬಂದಿದೆ. ಹೀಗಾದಲ್ಲಿ ಇಂಗ್ಲೀಷಿನಲ್ಲಿರುವ ವರದಿಗಳನ್ನು ಹರಿದು ಹಾಕದೇ ಗತ್ಯಂತರವೇ ಇಲ್ಲ.

ಶ್ರೀಮತಿ ಪ್ರಮೀಳಾ ನೇಸರ್ಗಿ: ಒಬ್ಬರಿಗೊಂದು, ಮತ್ತೊಬ್ಬರಿಗೊಂದು ನ್ಯಾಯ ಎನ್ನುವಂತೆ ಮಾನ್ಯ ಪಟೇಲರು ಆಡಳಿತ ನಡೆಸಬೇಕಾಗಿದೆ. ಯಾವುದೋ ಕೇಸ್ ಇದೆ ಎನ್ನುವ ಕಾರಣದ ಮೇಲೆ ಶ್ರೀಮತಿ ಬಿ.ಟಿ. ಲಲಿತಾನಾಯಕರಿಗೆ ಮಂತ್ರಿ ಸ್ಥಾನ ತಪ್ಪಿದೆ. ಆದರೆ ವಾಸ್ತವವಾಗಿ ಎರಡು ಕೇಸ್‌ಗಳನ್ನು ಎದುರಿಸುತ್ತಿರುವ ಇನ್ನಿಬ್ಬರು ಶಾಸಕರು ಮಂತ್ರಿಗಳಾಗಿ ಮುಂದುವರೆದಿದ್ದಾರೆ. ಇದೊಂದು ವಿಪರ್ಯಾಸ. ಉಂಡವನೇ ಜಾಣ.

ಕೆ.ಎಸ್. ಪುಟ್ಟಣ್ಣಯ್ಯ: ಈ ಅವಿಶ್ವಾಸ ನಿರ್ಣಯದಲ್ಲಿ ಪಟೇಲರು ಉಳಿದುಕೊಳ್ಳಬಹುದು. ಇಲ್ಲವೇ ಅಧಿಕಾರ ಕಳೆದುಕೊಳ್ಳಬಹುದು. ಅದು ದೊಡ್ಡ ವಿಷಯವಲ್ಲ. ಜನತೆ ನಮ್ಮನ್ನು ಕುರಿತು ಏನು ಮಾತನಾಡಿಕೊಳ್ಳುತ್ತಿದ್ದಾರೆ ಎಂಬುದು ಅತ್ಯಂತ ಗಂಭೀರವಾದ ವಿಷಯ. ಈ ಬಗೆಗೆ ನಾವು ಜಾಗ್ರತರಾಗಬೇಕು. ಇದೊಂದು ಎಚ್ಚರಿಕೆ ಗಂಟೆ ಎಂದೇ ಭಾವಿಸಿ. ಇನ್ನು ಐದು ವರ್ಷಗಳಲ್ಲಿ ರಾಜಕಾರಣಿಗಳನ್ನು ಕಂಡರೆ ಜನ ಯಾವ ಮಟ್ಟಕ್ಕೆ ಹೋಗುತ್ತಾರೆ ಎಂದು ಹೇಳುವುದಕ್ಕಾಗುವುದಿಲ್ಲ.

ಅಶೋಕ ಎಸ್. ಕಾಟ್ವೆ:

ಜೆ.ಹೆಚ್. ಪಟೇಲರ ನೇತೃತ್ವದ ಸರ್ಕಾರ ನಮ್ಮ ಎರಡು ನ್ಯಾಯಯುತ ಬೇಡಿಕೆಗಳ ಬಗೆಗೆ ತೀರ್ಮಾನ ತೆಗೆದುಕೊಂಡಂತಿಲ್ಲ. ಮೊದಲನೆಯದು ಉತ್ತರ ಕರ್ನಾಟಕ ಭಾಗದಲ್ಲಿ ಹೈಕೋರ್ಟ್ ಸ್ಥಾಪನೆ. ಎರಡನೆಯದು ಹುಬ್ಬಳ್ಳಿಯಲ್ಲಿ ನೈರುತ್ಯ ರೈಲ್ವೆ ವಲಯ. ನಮ್ಮವರೇ ಆದ ಪ್ರಧಾನಿ ಮಂತ್ರಿ ಈಗಿದ್ದಾರೆ. ಈ ನಾಯಕರುಗಳ ಮುಂದಾಳುತ್ವದಲ್ಲಿ ನಮ್ಮ ಭಾಗದ ಎಂಟು ಜಿಲ್ಲೆಗಳಲ್ಲಿ ಬಂಗಾರದ ಹೊಳೆ ಹರಿಯುತ್ತದೆ ಎಂದು ಭಾವಿಸಿದ್ದೆವು. ಆದರೆ ಆದದ್ದೇನು ಹೇಳಲು ದುಃಖವಾಗುತ್ತದೆ.

ವಿ. ಮುನಿಯಪ್ಪ:

ನಮ್ಮ ಕೋಲಾರ ಜಿಲ್ಲೆಯಲ್ಲಿ 3650 ಕೆರೆಗಳಿವೆ. ಇಡೀ ರಾಜ್ಯದಲ್ಲಿ ಇಷ್ಟೊಂದು ಪ್ರಮಾಣದ ಕೆರೆಗಳನ್ನು ಹೊಂದಿರುವ ಪ್ರಥಮ ಜಿಲ್ಲೆ ಕೋಲಾರ. ನಮ್ಮ ಜಿಲ್ಲೆಯ ರೈತರ ಜೀವನಾಡಿ ಈ ಕೆರೆ-ಕುಂಟೆಗಳು. ನಮ್ಮ ಗ್ರಾಮ ಜೀವನದ ಏರುಪೇರುಗಳು ಕೆರೆ ನೀರಿನ ಪ್ರಮಾಣವನ್ನು ಅವಲಂಬಿಸಿರುತ್ತದೆ. ಕೆರೆಗಳು ದೇವರಿಗೆ ಪ್ರೀತಿ. ನೂರಕ್ಕೆ 75 ಭಾಗದ ಕೆರೆಗಳು ಹೂಳು ತುಂಬಿ ನಿಷ್ಕ್ರಿಯವಾಗಿವೆ. ಹೂಳು ತೆಗೆದು ರೈತನಿಗೆ ಸರ್ಕಾರ ನೆರವಾಗಬೇಕಿತ್ತು. ಜೀರ್ಣೋದ್ಧಾರಕ್ಕೆ ಈ ಸರ್ಕಾರ ಯಾವ ಕ್ರಮವನ್ನೂ ತೆಗೆದುಕೊಂಡಿಲ್ಲ.

ಅಂತರ್ ಜಲ ಬತ್ತು ಹೋದೀತು... ಎಚ್ಚರಿಕೆ!

ಎಂ. ಶ್ರೀನಿವಾಸ್

ಬೆಂಗಳೂರಿನಲ್ಲಿ ಅಂತರ್‌ಜಲ ಕಡಿಮೆ ಆಗುತ್ತಿದೆ ಎಂದು ಹಿರಿಯ ಆಡಳಿತ ತಜ್ಞ ಲಕ್ಷ್ಮಣರಾವ್ ಅಧ್ಯಯನ ಸಮಿತಿ ನಮ್ಮನ್ನು ಎಚ್ಚರಿಸಿದೆ. ಇದನ್ನು ಸರಕಾರ ಸದಾ ನೆನಪಿನಲ್ಲಿಡಬೇಕು. ಅಂತರ್‌ಜಲ ಬತ್ತದಂತೆ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಭವಿಷ್ಯದ ದೃಷ್ಟಿಯಿಂದ ಇದು ಅತಿಮುಖ್ಯ. ಕನಿಷ್ಠ 25 ರಿಂದ 50 ಕೆರೆಗಳನ್ನು ದುರಸ್ತಿ ಮಾಡಿ ಬೆಂಗಳೂರಿನಲ್ಲಿ ಅಂತರಜಲದ ಮಟ್ಟ ಮತ್ತಷ್ಟು ಕೆಳಗೆ ಇಳಿಯದಂತೆ ಜಾಗ್ರತೆ ವಹಿಸಬೇಕು.

ಚರ್ಚೆಯ ಮಧ್ಯೆ ಪ್ರವೇಶಿಸಿ ಸರಕಾರವನ್ನು ಸಮರ್ಥಿಸಿಕೊಂಡ ಸಚಿವರು

ಸಿದ್ಧರಾಮಯ್ಯ, ಉಪಮುಖ್ಯಮಂತ್ರಿ:

ಕನ್ನಡವೇ ಆಡಳಿತ ಭಾಷೆ ಆಗಬೇಕೆಂಬ ಬಗ್ಗೆ ಎರಡನೇ ವಿಚಾರವಿಲ್ಲ. ಕರ್ನಾಟಕದಲ್ಲಿ ಕನ್ನಡ ನಾಡಿನಲ್ಲಿ ಕನ್ನಡವೇ ಸಾರ್ವಭೌಮ. ಬೇರೆ ರಾಜ್ಯ ಮತ್ತು ಕೇಂದ್ರದೊಡನೆ ಸಂಪರ್ಕಿಸುವ

ಸಂದರ್ಭವೊಂದನ್ನುಳಿದು ಎಲ್ಲಾ ಸರ್ಕಾರಿ ಕಡತಗಳಲ್ಲಿಯೂ ನಾನು ಕನ್ನಡವನ್ನೇ ಬಳಸುತ್ತೇನೆ. ನಮ್ಮ ಅಧಿಕಾರಿಗಳಿಗೆ ಇನ್ನೂ ಮಾನಸಿಕ ಸಿದ್ಧತೆ ಆಗಬೇಕಾಗಿದ್ದು ಅದನ್ನು ಮಾಡುತ್ತೇವೆಂದು ಹೇಳಬಯಸುತ್ತೇನೆ.

ಪಿ.ಜಿ.ಆರ್. ಸಿಂಧ್ಯಾ (ಸಾರಿಗೆ ಖಾತೆ ಮಂತ್ರಿ):

ಊಹೆಗೂ ಮೀರಿದ ಘಟನಾವಳಿಗಳಿಂದಾಗಿ ಮಾನ್ಯ ಪಟೇಲರು ಮುಖ್ಯಮಂತ್ರಿಗಳಾಗಿಯೂ, ದೇವೇಗೌಡರು ರಾಷ್ಟ್ರದ ಪ್ರಧಾನ ಮಂತ್ರಿಗಳಾಗಿಯೂ ಅಧಿಕಾರ ಸ್ವೀಕರಿಸಿ ಇನ್ನೂ 90 ದಿನವೂ ಆಗಿಲ್ಲ. ಪ್ರತಿಪಕ್ಷಗಳು ಆರೋಪಣೆಯ ಪಟ್ಟಿಯನ್ನೇ ಹೆಣೆದಿವೆ. ನಾವು ನೆಲಗಳ್ಳರೊಂದಿಗೆ, ಕಾಡುಗಳ್ಳರೊಂದಿಗೆ ಸೇರಿರುವುದಾಗಿ ಆಪಾದಿಸಿದ್ದೀರಿ. ಭ್ರಷ್ಟ ಅಧಿಕಾರಿಗಳಿಗೆ ರಕ್ಷಣೆ ಕೊಟ್ಟಿರುವುದಾಗಿ ಹೇಳುತ್ತೀರಿ. ಪ್ರತಿ ಪಕ್ಷದ ಕೆಲ ನಾಯಕರು ದೇವೇಗೌಡರ ಚಾರಿತ್ರ್ಯವಧೆ ಮಾಡುವುದಕ್ಕೆ ಹೊರಟಂತಿದೆ. ಇವರಿಗೆ ಪ್ರಧಾನಿಯವರ ವರ್ಚಸ್ಸನ್ನು ತಡೆದುಕೊಳ್ಳಲಾಗುತ್ತಿಲ್ಲ. ನಾವು ಕಾನೂನು ಬದ್ಧವಾಗಿ ಕೆಲಸ ಮಾಡುತ್ತಿದ್ದೇವೆ. ಹಿಂದುಳಿದ ವರ್ಗಗಳಿಗೆ, ಅಲ್ಪಸಂಖ್ಯಾತರಿಗೆ ರಕ್ಷಣೆ ಕೊಡುತ್ತೇವೆ. ರೈತನ ಪರವಾಗಿ ಮಾಡಬೇಕಾದ ಕೆಲಸಗಳನ್ನು ಮಾಡಿ ಮುಗಿಸುತ್ತೇವೆ.

ಕೆ.ಎನ್. ನಾಗೇಗೌಡ (ಭಾರಿ ನೀರಾವರಿ ಸಚಿವರು):

ಕೃಷ್ಣಾ ನದಿ ಪಾತ್ರದ ಯೋಜನೆಗಳ ಖರ್ಚು ತಪಶೀಲು ಹೀಗಿದೆ: ದೇವರಾಜ ಅರಸುರವರ ಕಾಲದಲ್ಲಿ 228 ಕೋಟಿ ರೂಪಾಯಿ ಖರ್ಚಾಗಿತ್ತು. ಮಾನ್ಯ ಗುಂಡೂರಾಯರ ಕಾಲದಲ್ಲಿ 205 ಕೋಟಿ, ರಾಮಕೃಷ್ಣ ಹೆಗಡೆಯವರ ಕಾಲದಲ್ಲಿ 395 ಕೋಟಿ, ಬೊಮ್ಮಾಯಿಯವರ ಕಾಲದಲ್ಲಿ 210 ಕೋಟಿ, ವೀರೇಂದ್ರ ಪಾಟೀಲರ ಕಾಲದಲ್ಲಿ 133 ಕೋಟಿ, ಬಂಗಾರಪ್ಪನವರ ಕಾಲದಲ್ಲಿ 447 ಕೋಟಿ, ವೀರಪ್ಪ ಮೊಯಿಲಿಯವರ ಕಾಲದಲ್ಲಿ 629 ಕೋಟಿ, ದೇವೇಗೌಡರ ಕಾಲದಲ್ಲಿ ಸುಮಾರು 801 ಕೋಟಿ ರೂ ಮತ್ತು ಮಾನ್ಯ ಪಟೇಲರ ಆಡಳಿತದಲ್ಲಿ ಪ್ರಸ್ತುತ ಆರ್ಥಿಕ ವರ್ಷದಲ್ಲಿ 1000 ಕೋಟಿ ರೂಪಾಯಿ ಖರ್ಚು ಮಾಡಲಿದ್ದೇವೆ.

(ವಿಧಾನಸಭೆ ಕಲಾಪ 26 ಮತ್ತು 27 ಆಗಸ್ಟ್ 1996)

ಘಟನೆಯೊಂದರ ನೆನಪು

ಬಾಗಲಕೋಟೆ, ಕೂಡಲ ಸಂಗಮ ಮತ್ತಿತರ ಪ್ರಮುಖ ಸ್ಥಳಗಳು ನೀರಿನಿಂದ ಮುಳುಗುವ ಬೃಹತ್ ನೀರಾವರಿ ಯೋಜನೆ ವ್ಯಾಪ್ತಿಯ ರೈತರಿಗೆ ಕನ್ಸೆಂಟ್ ಅವಾರ್ಡ್ ಕೊಡುವ ಸಂದರ್ಭ ಬಂದೇ ಬಿಟ್ಟಿತು.

ಮಾನ್ಯ ಜೆ.ಹೆಚ್. ಪಟೇಲರು ಪ್ರತಿಪಕ್ಷದ ನಾಯಕ ಎಚ್.ಕೆ. ಪಾಟೀಲರನ್ನು ಉದ್ದೇಶಿಸಿ ಹೇಳಿದರು. "ಪಾಟೀಲರೇ ಬನ್ನಿ. ಮೀಟಿಂಗ್‌ನಲ್ಲಿಯೇ ಈ ಬಗ್ಗೆ ತೀರ್ಮಾನಿಸೋಣ. ನೀವೇ ಡಿಸಿಷನ್ ತೆಗೆದುಕೊಳ್ಳಿ. ರೈತರ ಕಮಿಟಿ ಎಂದರೆ ನೀವು ಹೇಳಿದಂತೆಯೇ ರೈತರ ಕಮಿಟಿ ಆಗಲಿ; ರೈತ ಪ್ರತಿನಿಧಿಗಳ ಸಮಿತಿ ಆಗಲಿ ಎಂದರೆ ಅದನ್ನೇ ಮಾಡೋಣ? ನೀವು ಏನು ತೀರ್ಮಾನ ತೆಗೆದುಕೊಳ್ಳುವಿರೋ ಅದಕ್ಕೆ ನಾನು ಬದ್ಧ".

ಇವತ್ತಿಗೂ ಕೂಡ ಮುಳುಗಡೆಯಾದ ಪ್ರದೇಶದ ರೈತರು ಮಾನ್ಯ ಜೆ.ಹೆಚ್. ಪಟೇಲರ ಮಾನವೀಯ ದೃಷ್ಟಿ, ದೃಢ ನಿರ್ಧಾರ ಮತ್ತು ಅನುಕಂಪದ ಆಡಳಿತ ರೀತಿಯನ್ನು ಸ್ಮರಿಸಿಕೊಳ್ಳುತ್ತಾರೆ.

(ಡಾ: ಎಂ.ಪಿ. ನಾಡಗೌಡ, ವಿಧಾನ ಪರಿಷತ್ತು, ಫೆಬ್ರವರಿ 27, 2001)

# 12

## "ರಾಮ, ಕೃಷ್ಣ, ಬುದ್ಧ, ಏಸು"

### ಕಾಲ, ಭಾಷೆ, ದೇಶಗಳ ಗಡಿ ದಾಟಿದ ಚರ್ಚೆ

ಸಂಸದೀಯ ಕಲಾಪಗಳಲ್ಲಿ ಪ್ರಸ್ತಾಪಕ್ಕೆ ಬಾರದಿರುವ ವಿಷಯಗಳೇ ಇಲ್ಲ. ಮೇಲು ನೋಟಕ್ಕೆ ವಿತ್ತೀಯ ಕಲಾಪ, ಕಾನೂನು ರಚನೆ, ನಿಯಮ ನಿಬಂಧನೆ, ಕ್ರಿಯಾಲೋಪ, ಹಕ್ಕುಚ್ಯುತಿ- ಇವೆಲ್ಲ ಇತಿಮಿತಿಗಳಿದ್ದರೂ ಎಷ್ಟೋ ಸಂದರ್ಭಗಳಲ್ಲಿ ಸಮಾಜದ ಆಚಾರ-ವಿಚಾರ, ನಂಬಿಕೆ, ಧಾರ್ಮಿಕ ಆಚರಣೆ, ಹಬ್ಬ, ಹರಿದಿನ, ಜಾತಿ, ವೇದಾಂತ - ಹೀಗೆ ನಿತ್ಯಜೀವನದ ಆಧ್ಯಾತ್ಮಿಕ, ಪೌರಾಣಿಕ, ವೈಚಾರಿಕ - ಇನ್ನೂ ಮುಂತಾದ ಸೂಕ್ಷ್ಮ ತರಂಗಗಳು ಸಂಸದೀಯ ವೇದಿಕೆಯ ಆ್ಯಂಟಿನಾಗಳನ್ನು ಅಲುಗಾಡಿಸುತ್ತವೆ. ಆಳವಾಗಿ ಅಲ್ಲದಿದ್ದರೂ ತಾತ್ಕಾಲಿಕವಾಗಿ ಹಾದು ಹೋಗುವ ಈ ಅಂಕಗಳು ಸದನದ ಮೂಲ ದೃಶ್ಯವನ್ನು ಬದಿಗೆ ಸರಿಸಿ ಸಂಸದೀಯ ವೇದಿಕೆಯ ಮೇಲೆ ದೊಡ್ಡಾಟ ಮಾಡಿ ಹೋಗುತ್ತವೆ.

ನಮ್ಮ ಸಂಸದೀಯ ರಂಗಮಂಚ ಮತ್ತು ಪರದೆಯ ಮೇಲೆ ರಾವಣ, ರಾಮ, ಕೃಷ್ಣ, ಕಂಸ, ಶಕುನಿ, ದುಶ್ಶಾಸನ, ಧರ್ಮರಾಯ, ದ್ರೌಪತಿ, ಬಸವ, ಬುದ್ಧ, ಪುರಂದರ, ಕ್ರಿಸ್ತ, ಪೈಗಂಬರ, ಗ್ರೀಕ್ ಸಂಸ್ಕೃತಿಯ ಪಾತ್ರಗಳು - ಹೀಗೆ ವಿಶ್ವಸಮುದಾಯದ ದೇವಾನುದೇವತೆಗಳು, ಯುಗಪುರುಷರು, ಸಂತರು, ಋಷಿಗಳು, ವಾಗ್ಗೇಯಕಾರರು, ದಾರ್ಶನಿಕರು, ಸುಧಾರಕರು, ರಾಜಮಹಾರಾಜರು, ವಿದೂಷಕರು, ವಿವಿಧ ಪ್ರಸಂಗಗಳು, ಇತಿಹಾಸದ ಝಲಕ್‌ಗಳು, ಮಹಾಕಾವ್ಯಗಳು - ಎಲ್ಲವೂ, ಎಲ್ಲರೂ ಬಂದು ಹೋಗುತ್ತಿರುತ್ತಾರೆ. ಸಮಾಧಾನದ ಸಂಗತಿ ಎಂದರೆ ಮುನ್ಸೂಚನೆಯ ನೋಟೀಸು ಕೊಡದೆ ಬರುವ ಈ ಮಹಾನ್ ಪಾತ್ರಗಳು ಬಂದಷ್ಟೇ ಶೀಘ್ರವಾಗಿ ಪರದೆಯಾಚೆ ಮಾಯವಾಗುತ್ತವೆ.

ಇದು ಕರ್ನಾಟಕ ವಿಧಾನ ಮಂಡಲಕ್ಕಷ್ಟೇ ಅನ್ವಯಿಸುವ ಕಲಾಪ-ಪ್ರಮೇಯಗಳ ಮಾತಲ್ಲ. ಉದಾಹರಣೆಗೆ, ಹಿಂದೊಮ್ಮೆ ಬಿಹಾರದ ವಿಧಾನ ಸಭೆಯಲ್ಲಿ ಗಧಾಯುದ್ಧವೇ ನಡೆಯಿತಂತೆ. ಶಾಸಕನೊಬ್ಬ ಗದೆ, ಇನ್ನೊಬ್ಬ ಕತ್ತಿಯನ್ನು ಬಾಡಿಗೆಗೆ ತಂದಿದ್ದರಂತೆ. ತಮಿಳುನಾಡು ವಿಧಾನಸಭೆ ಒಮ್ಮೆ ಶಿಶುಪಾಲ ನಾಚಿ ತಲೆ ತಗ್ಗಿಸುವಷ್ಟು ರಂಗೇರಿತ್ತಂತೆ. ಈ ರಸಮಯ ಸನ್ನಿವೇಶನಗಳು ನಮ್ಮ ಶಾಸಕರಿಗೆ ಮನರಂಜನೆ ನೀಡುವ ಇಂಟರ್‌ವೆಲ್‌ಗಳು.

ಮಹಾಕಾವ್ಯದ ವ್ಯಕ್ತಿ, ಪಾತ್ರ, ಘಟನೆ ಅಥವಾ ಕ್ಲೈಮ್ಯಾಕ್ಸ್‌ಗಳೊಂದಿಗೆ ತಮ್ಮನ್ನು ತಾವು ಹೋಲಿಸಿಕೊಳ್ಳುವುದು; ಇಲ್ಲವೇ ಪ್ರತಿ ಪಕ್ಷವನ್ನು ಉಪಮಾನವನ್ನಾಗಿ ಮಾಡಿ ಛೇಡಿಸುವುದು; ಅಥವಾ ಹಿಂದಿನ ಆಡಳಿತವನ್ನು ಪ್ಲೇಬ್ಯಾಕ್ ಎಂದು ಚಿತ್ರಿಸುವುದು – ಇದು ಶಾಸಕರ ತಾತ್ಕಾಲಿಕ ಉದ್ದೇಶ. ಆ ಪಾತ್ರ ಅಲ್ಲಿಗೇ ಖತಂ. ಮತ್ತೊಂದು ಸಮಾಧಾನವೆಂದರೆ ನಮ್ಮ ಶಾಸಕರ್‍ಯಾರೂ ಈ ಪಾತ್ರಗಳನ್ನು ಗಂಭೀರವಾಗಿ ತೆಗೆದುಕೊಳ್ಳದಿರುವುದು.

ಕಾಲ, ಭಾಷೆ, ದೇಶಗಳ ಗಡಿ ಮೀರಿ ಬೆಳೆಯುವ ಈ ಪಾತ್ರಗಳ ಹೋಲಿಕೆಗೆ ಪ್ರಸ್ತುತ ಇಲ್ಲವೇ ಅಪ್ರಸ್ತುತ ಎನ್ನುವ ತಾರತಮ್ಯ ಇರುವುದಿಲ್ಲ. ಇಲ್ಲಿಗೆ ನಾಗಾಲೋಟದಿಂದ ಬಂದು ಹಾದು ಹೋಗುವ ಪುಷ್ಪಕ ವಿಮಾನಕ್ಕೆ ಇಂಧನದ ಕೊರತೆ ಇರುವುದಿಲ್ಲ; ಇಂದ್ರನ ಐರಾವತವಂತೂ ಸದನದ ಪಾವಟಿಗಳನ್ನು ಹಾಳು ಮಾಡುವುದಿಲ್ಲ. ಇಲ್ಲಿಗೆ ಬರುವ ಭೀಮ ರೇಷನ್ ಕೊರತೆ ಇಲ್ಲದ ದಷ್ಟಪುಷ್ಟ ವ್ಯಕ್ತಿ; ಕೃಷ್ಣನಂತೂ ಸೆನ್ಸಾರ್ ದಾಟಿದವ.

ಸಹಜತೆಯ ಕಲ್ಪನೆ ಇಲ್ಲಿರುತ್ತದೆ. ಆಧ್ಯಾತ್ಮಿಕತೆಯ ಬೇರು ಕೀಳದ, ಧರ್ಮ-ನಂಬಿಕೆಗಳಿಗೆ ನೋವುಂಟುಮಾಡದ, ಪರರ ಸ್ವಂತಿಕೆಯನ್ನು ಚಿವುಟದ ಪರಿಶುದ್ಧ ಹಾಸ್ಯ ಸದನದ ಚರ್ಚೆಗಳಲ್ಲಿ ವಿಜೃಂಭಿಸುತ್ತದೆ. ರಾಮಾಯಣ-ಮಹಾಭಾರತದ ಘಟನೆಗಳಂತೂ ಬದಲಾಗುತ್ತಿರುವ ಸಮುದಾಯ ಜೀವನವನ್ನು ಅಂದವಾಗಿ ಮೂಡಿಸುವ ಕುಂಚದಂತೆ ಶಾಸಕರ ಕೈಯಲ್ಲಿ ಪ್ರತಿಭೆಯ ವಿಕಾಸಸಾಧನವಾಗುತ್ತವೆ. ಅಂಗೈಯಲ್ಲಿ ಅರಮನೆ ಕಟ್ಟಬಲ್ಲ ಚಿತ್ರಕಾರನಾಗುತ್ತಾನೆ ನಮ್ಮ ಶಾಸಕ.

ಸದನದ ಅವಿಭಾಜ್ಯ ಅಂಗವಾದ ಪತ್ರಕರ್ತರ ಗ್ಯಾಲರಿಗೆ ಬಾಕ್ಸ್ ಐಟಂ ಸಿಗುವ ಸಮಯ ಇದು. ರಂಗ, ರಂಗು ಅಥವಾ 'ಪಂಚ್' ಇಲ್ಲದ ಚರ್ಚೆ ಮತ್ತು ಕಲಾಪಗಳನ್ನು ನೀರಸ ಎಂದು ನಿರ್ಧರಿಸುವ ಥರ್ಡ್ ಅಂಪೈರ್‌ಗಳೇ ನಮ್ಮ ವರದಿಗಾರರು.

ಪಟೇಲರು ಮಿಂಚಿದ್ದು ಈ ವಿಭಾಗದಲ್ಲಿ. ಆಸಕ್ತಿ ಹುಟ್ಟಿಸುವ ಅರ್ಥಪೂರ್ಣ ವಿಶ್ಲೇಷಣೆಗಾಗಿ ರಾಮಾಯಣ-ಮಹಾಭಾರತ ಪ್ರಸಂಗಗಳನ್ನು ಮನೋಜ್ಞವಾಗಿ ಬಳಸಿದ ಕಲೆಗಾರ ಇವರು. ಚರ್ಚೆಯನ್ನು ಜೀವಂತವಾಗಿಡುವುದು ಇವರ ಹಿರಿಯಾಸೆ. ಬರೀ ಹಾಸ್ಯಕ್ಕೆ ಮಾತ್ರ ಸೀಮಿತಗೊಳ್ಳದೆ, ಪುರಾಣ-ಪುಣ್ಯಕಥೆಗಳನ್ನು ಉಲ್ಲೇಖಿಸಿ ಇವರು ಚಿತ್ರಿಸುತ್ತಿದ್ದ ಪಾತ್ರಗಳು ಗಂಭೀರ ಪ್ರತಿಪಾದನೆಗೆ ಸಹಿತ ಸೂಕ್ತ ನಿದರ್ಶನಗಳಾಗುತ್ತಿದ್ದವು.

ವಿನಾಕಾರಣ, ಉದ್ವೇಗಕ್ಕೆ ಸಿಕ್ಕಿ ಗಂಟು ಮೋರೆಯಿಂದ ಬಳಲುವ ಸದನವನ್ನು ಸಹಜ ಸ್ಥಿತಿಗೆ ತರಲು ಜನಪದ ಅನುಭಾವದ ಬತ್ತಳಿಕೆಯಿಂದ ಸಮ್ಮೋಹನಾಸ್ತ್ರವನ್ನು ಬಿಡುತ್ತಿದ್ದರು ಜಾದೂಗಾರ ಪಟೇಲರು.

## ದುಶ್ಯಾಸನ, ದ್ರೌಪದಿ; ದೊಡ್ಡಾಟ

ಸಂದರ್ಭ: ಜೆ.ಹೆಚ್. ಪಟೇಲ್ ನೇತೃತ್ವದ ಸರ್ಕಾರದ ಮೇಲೆ ಪ್ರತಿಪಕ್ಷಗಳು ವಿಧಾನ ಸಭೆಯಲ್ಲಿ ಮಂಡಿಸಿದ ಅವಿಶ್ವಾಸ ನಿರ್ಣಯದ ಮೇಲಿನ ಚರ್ಚೆ.

**ವಾಟಾಳ್ ನಾಗರಾಜ್:** ಇನ್ನೂ 80 ದಿನವೂ ಆಗಿಲ್ಲ ನಿಮ್ಮ ನೇತೃತ್ವದ ಸರ್ಕಾರ ಆಡಳಿತಕ್ಕೆ ಬಂದು. ಇಷ್ಟರೊಳಗಾಗಿ ಅವಿಶ್ವಾಸ ನಿರ್ಣಯ ಮಂಡಿತವಾಯಿತು ಎಂದರೆ ನಿಜಕ್ಕೂ ಇದೊಂದು ಗ್ರಹಚಾರವಲ್ಲವೇ ಸ್ವಾಮಿ? ಆದರೂ ಪಟೇಲರು ಗ್ರಹ-ಜೋತಿಷ್ಯ ಮೇಲೆ ನಂಬಿಕೆ ಇಟ್ಟವರಲ್ಲ ಬಿಡಿ.

**ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):** ಹೌದೌದು ಎರಡು ಗ್ರಹಗಳು ನಮ್ಮನ್ನು ಕಾಡುತ್ತಿವೆ. ಒಂದು ಯಡಿಯೂರಪ್ಪನವರು, ಇನ್ನೊಂದು ಖರ್ಗೆಯವರು.

**ವಾಟಾಳ್ ನಾಗರಾಜ್:** ಗ್ರಹಗಳು ಎಂದು ನಂಬಬಹುದಾದರೂ ಅವರು ಶನಿಗ್ರಹಗಳಲ್ಲ ಬಿಡಿ. ನಿಮಗೆ ಅವರು ಅನುಕೂಲವಾಗುವ ಗ್ರಹಗಳೇ. ಆದರೆ ನಿಮ್ಮಲ್ಲೇ ಕೆಲವು ಗ್ರಹಗಳಿವೆ. ಶನಿಗ್ರಹವಿದೆ. ಯಾರೆಂದು ಹೇಳುವುದಿಲ್ಲ. ಅವುಗಳಿಂದ ನೀವು ಬಿಡಿಸಿಕೊಂಡರೆ ಸಾಕು ಸಾಕಲ್ಲವೇ?

**ಬಿ.ಎಸ್. ಯಡಿಯೂರಪ್ಪ:** ವಾಟಾಳರೇ ಒಂದು ನಿಮಿಷ. ಮಾನ್ಯ ಪಟೇಲರು ನಮ್ಮನ್ನು ಗ್ರಹಗಳೆಂದರು. ಹಿರಿಯರಾದ ಅವರಿಗೆ ಇನ್ನು ನಾಲ್ಕೈದು ಗಂಟೆ ಒಳಗಾಗಿ ನಿಜವಾದ ಗ್ರಹಗಳ್ಯಾರು ಎಂದು ಗೊತ್ತಾಗುತ್ತೆ. ನಿನ್ನೆ ದ್ರೌಪತಿ ವಸ್ತ್ರಾಪಹರಣದ ಬಗ್ಗೆ ಚರ್ಚೆ ಆಯಿತು. ದ್ರೌಪತಿ ಯಾರು? ದುಶ್ಯಾಸನ ಯಾರು ಎಂದು ತಾವು ಕೇಳಿದಿರಿ. ನಿಜವಾದ ಸಾಧ್ವಿಯಾರೆಂದರೆ ಈ ನಾಡಿನ ಜನ. ಹಾಗಾದರೆ ಮಾನಾಪಹರಣ ಮಾಡುತ್ತಿರುವವರು ಯಾರು? ದುಶ್ಯಾಸನ-ಈ ಸರ್ಕಾರ ಅಲ್ಲವೆ? ಮಾನ್ಯ ಪಟೇಲರು ನನ್ನನ್ನು ಮತ್ತು ಮಾನ್ಯ ಖರ್ಗೆ ಅವರನ್ನು ಗ್ರಹ ಎಂದು ಕರೆದ ಬಳಿಕ ದುಶ್ಯಾಸನ, ದ್ರೌಪತಿ ಯಾರ್‍ಯಾರು ಎಂದು ಕ್ಲಿಯರ್ ಆಗಲೇಬೇಕಲ್ಲವೇ?

**ಜೆ.ಹೆಚ್. ಪಟೇಲ್:** ಮಾನ್ಯ ಉಪಾಧ್ಯಕ್ಷರೇ, ಮಾನ್ಯ ವಿರೋಧ ಪಕ್ಷದ ನಾಯಕರು ಸರ್ಕಾರವನ್ನು ದುಶ್ಯಾಸನನ ಪಾರ್ಟ ಮಾಡುತ್ತಿದ್ದಾರೆ. ಜನತೆಯನ್ನು ದ್ರೌಪತಿ ಎಂದರು. ಅಲ್ಲಿ ಮುದುಕರೇ ಒಂದಿಷ್ಟು ಜನ ದ್ರೋಣ, ಭೀಷ್ಮ, ಅಶ್ವತ್ಥಾಮ ಇವರೆಲ್ಲಾ ಕುಳಿತು ನೋಡುತ್ತಿದ್ದರಲ್ಲಾ ಇವರೇಕೆ ದುಶ್ಯಾಸನ ದ್ರೌಪತಿಯ ಸೀರೆ ಸೆಳೆಯುವುದನ್ನು ಬಿಡಿಸಲಿಲ್ಲ. ಅಲ್ಲಿದೆ ನೋಡಿ ಸ್ವಾರಸ್ಯ. ಅವರ ಕೆಲಸ; ಇವರ ನೋಟ.

ಕೆ.ಎಸ್. ಈಶ್ವರಪ್ಪ: ಮಾನ್ಯ ಉಪಾಧ್ಯಕ್ಷರೇ, ಭೀಷ್ಮಾಚಾರ್ಯರು, ದ್ರೋಣರು ಇವರೆಲ್ಲಾ ಇದ್ದರಾದರೂ ಪಾಪ ಅವರದೊಂದು ಧರ್ಮ ಸಂಕಟ. ದುಶ್ಶಾಸನನ ದೌರ್ಜನ್ಯ ಮತ್ತು ದ್ರೌಪದಿಯ ಅಸಹಾಯಕತೆ ತಿಳಿದರೂ ರಕ್ಷಣೆ ಮಾಡುವ ಸ್ಥಿತಿಯಲ್ಲಿಲ್ಲ ಎಂದು ರಾಮಕೃಷ್ಣಹೆಗಡೆಯವರ ಬೆಂಬಲಿಗರಾದ ಇವರು ಒದ್ದಾಡುತ್ತಿದ್ದಾರೆ. ಇವರು ಸಂಜೆಯೊಳಗಾಗಿ ಹೊರಗೆ ಬರಲಿದ್ದಾರೆ.

ವಾಟಾಳ್ ನಾಗರಾಜ್: ನನ್ನ ದೃಷ್ಟಿಯಲ್ಲಿ ಅವಿಶ್ವಾಸ ಮಂಡಿಸಿದ್ದರೂ ಒಂದು ರೀತಿಯಲ್ಲಿ ಪಟೇಲರು ಕರ್ಣ ಇದ್ದಂತೆ. ಒಂದು ಕಡೆ ವಜ್ರ ಕವಚವನ್ನು ಕಳೆದುಕೊಳ್ಳುತ್ತಿದ್ದಾರೆ. ಮತ್ತೊಂದು ಕಡೆ ಕರ್ಣಕುಂಡಲವನ್ನು ಕಳೆದುಕೊಳ್ಳುತ್ತಿದ್ದಾರೆ. ಇನ್ನೊಂದು ಕಡೆ ಹೃದಯದಲ್ಲಿರುವ ಅಮೃತ ಕಳಸದಿಂದ ಕ್ಷೀರವನ್ನು ಧಾರೆ ಎರೆಯಿರಿ ಎಂದು ಹೇಳುತ್ತಿದ್ದಾರೆ. ಕೊನೆಗೆ ವಿಷ್ಣುದರ್ಶನ ಆಗಬೇಕಾಗಿದೆ. ಒಟ್ಟಿನಲ್ಲಿ ಕರ್ಣ ನಮ್ಮ ಪಟೇಲರು.

40 ದಿನದಿಂದ ಒಂದು ರೀತಿ ತಳಮಳ. ಒಂದು ಕಡೆ (ದೇವೇಗೌಡರ ಕಡೆಯಿಂದ) ನಿಷ್ಠುರ; ಮತ್ತೊಂದು ಕಡೆ - ಹೆಗಡೆಯವರ ಆಪ್ತರಿಂದ ಒತ್ತಡ. ಇನ್ನೊಂದು ಕಡೆ ಯಾರ ಕಡೆಗೂ ಸೇರದ ಮಂದಿ. ಹೀಗೆ ಮೂರು ಹೆಂಡಿರ ಕಾಟ. ಮೂವರು ಗಯ್ಯಾಳಿಗಳ ಸಹವಾಸ.

ಶ್ರೀಮತಿ ಪ್ರಮೀಳ ನೇಸರ್ಗಿ: ಮಾನ್ಯ ಉಪಾಧ್ಯಕ್ಷರೇ ಹೆಣ್ಣುಮಕ್ಕಳು ಎಂದರೆ ಗಯ್ಯಾಳಿಗಳೇ? ದಯಮಾಡಿ ಈ ಪದ ಉಪಯೋಗಿಸಬಾರದು.

ವಾಟಾಳ್ ನಾಗರಾಜ್: ಗಯ್ಯಾಳಿ ಅಂದರೆ ದರ್ಪದಿಂದ ಹೆಚ್ಚಿಗೆ ಮಾತಾಡುವವರು.

ಶ್ರೀಮತಿ ಪ್ರಮೀಳ ನೇಸರ್ಗಿ: ಇಲ್ಲ, ಇಲ್ಲ, ಹಾಗಲ್ಲ. ತಾವು ಅಪಾರ್ಥ ಮಾಡುತ್ತಿದ್ದೀರಿ. ಹೆಚ್ಚಿಗೆ ಮಾತನಾಡುವವರು ಎನ್ನುವುದಾದರೆ ಇಡೀ ಸದನದಲ್ಲಿ ಹೆಚ್ಚು ಮಾತನಾಡುವವರು ನೀವೇ. ನಿಮ್ಮನ್ನೇನನ್ನಬೇಕು. ಅಂತಹ ಭಾಷೆ ನನ್ನ ಬಾಯಲ್ಲಿ ಬರುವುದಿಲ್ಲ.

ಕೆ.ಎಸ್. ಈಶ್ವರಪ್ಪ: ಹಾಗಾದರೆ ಗಯ್ಯಾಳಿ ಗಂಡಸು ಅನ್ನಿ.

ಶ್ರೀಮತಿ ಪ್ರಮೀಳ ನೇಸರ್ಗಿ: ಛೇ, ಛೇ ಸಾಧ್ಯವಿಲ್ಲ. ಅಂತಹ ಪದಗಳನ್ನು ಸದನದಲ್ಲಿ ಬಳಸಬೇಡಿ.

ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್: ಮಾನ್ಯ ಉಪಾಧ್ಯಕ್ಷರೇ ಕನ್ನಡವನ್ನು ಶುದ್ಧವಾಗಿ ಸ್ಪಷ್ಟವಾಗಿ ಬಳಸುವ ವಾಟಾಳರು ಹೀಗೇಕಾದರು?

ಜೆ.ಹೆಚ್. ಪಟೇಲ್: ಮಾನ್ಯ ಉಪಾಧ್ಯಕ್ಷರೇ, ಗಯ್ಯಾಳಿ ಅಂದ ಮಾತ್ರಕ್ಕೆ ಕೆಟ್ಟ ಅರ್ಥ ಬೇಡ. ಹೆಚ್ಚು ಹಠ ಇಲ್ಲವೇ ತಾನು ಹೇಳಿದ್ದು ಮಾತ್ರ ಸರಿ ಎನ್ನುವಾಕೆ ಗಯ್ಯಾಳಿ ಆಗುತ್ತಾಳೆ. ತಪ್ಪು ತಿಳಿದುಕೊಳ್ಳುವುದು ಬೇಡ.

ಶ್ರೀಮತಿ ಪ್ರಮೀಳಾ ನೇಸರ್ಗಿ: ಈ ನಾಡಿನ ಮುಖ್ಯಮಂತ್ರಿಗಳ ಅನುಭವ ಇಷ್ಟಾದರೆ, ಈ ದೇಶದ ಹೆಣ್ಣು ಮಕ್ಕಳ ಗತಿಯೇನು? ನನಗೆ ಅರ್ಥವಾಗುವುದಿಲ್ಲ.

(ವಿಧಾನಸಭೆ ಕಲಾಪ, ಆಗಸ್ಟ್ 27, 1996)

## ರ‍್ಯಾಗಿಂಗ್

ಶ್ರೀಮತಿ ಪ್ರಮೀಳ: ರ‍್ಯಾಗಿಂಗ್ ಅಂದರೆ ಕನ್ನಡದಲ್ಲಿ ಏನು?

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ದುರ್ಯೋಧನನ ಆಸ್ಥಾನದಲ್ಲಿ ದ್ರೌಪತಿಗೆ ಆದದ್ದೇ ರ‍್ಯಾಗಿಂಗ್

ಶ್ರೀಮತಿ ಎಸ್. ಪ್ರಮೀಳ: ದ್ರೌಪತಿಯ ಬಗ್ಗೆ ಮಾತನಾಡುವುದಕ್ಕೆ ಜೆ.ಹೆಚ್. ಪಟೇಲರಿಗೆ ಅಧಿಕಾರ ಇಲ್ಲ ಅಂದುಕೊಂಡಿದ್ದೇನೆ. ದ್ರೌಪದಿಯ ಕಾಲ ಯಾವುದು? ಆಕೆಯು ಮಾಡಿದ ಕೆಲಸಗಳೇನು ನೋಡಿ... ದ್ರೌಪದಿ ಇಲ್ಲದಿದ್ದರೆ ನಿಮ್ಮ ಮಹಾಭಾರತವಾಗಲೀ, ಕುರುಕ್ಷೇತ್ರ ಧರ್ಮ ಯುದ್ಧವಾಗಲೀ ನಡೀತಿತ್ತೇ... ಕುರುಕ್ಷೇತ್ರ ಬಂದ ಕಾರಣ ಶ್ರೀ ಕೃಷ್ಣ ಯಾರು. ಈತನ ಚಿಂತನೆಗಳೇನು ಎಂಬುದಕ್ಕೆ ಅವಕಾಶ ಸಿಗ್ತು... ಅಧ್ಯಕ್ಷರೇ ನಮಗೆ ಅಂತಹ ದ್ರೌಪದಿ ಬೇಕು. ಅಂಥವರು ಸಾರ್ವಜನಿಕ ಕ್ಷೇತ್ರದಲ್ಲಿರಬೇಕು.

ಎಂ.ಸಿ. ನಾಣಯ್ಯ: ಅಂತಹ ದ್ರೌಪದಿ ಇದ್ದರೆ ಹೇಳಿ.

ಎಸ್.ಎಸ್. ಅರಕೇರಿ: ಇವತ್ತಿಗೂ ಅನೇಕ ಕಡೆಗಳಲ್ಲಿ ದೇವದಾಸಿ ಪದ್ಧತಿ ಇದೆ. ಅದು ಶ್ರೀಮತಿ ಪ್ರಮೀಳರಿಗೆ ಗೊತ್ತಿಲ್ಲ ಎಂದು ಕಾಣುತ್ತದೆ.

ಶ್ರೀಮತಿ ಎಸ್. ಪ್ರಮೀಳಾ: ನನಗೂ ಗೊತ್ತಿದೆ... ಈ ವಿಷಯ ದೇವದಾಸಿಯರನ್ನು ಕುರಿತ ಮಸೂದೆ ಬಂದಾಗ ಖಂಡಿತ ಚರ್ಚಿಸೋಣ.

(ವಿಧಾನ ಸಭೆ ಕಲಾಪ : ಜೂನ್ 18, 1982)

## ಸದನದಲ್ಲಿ ಲಂಕಾಪಟ್ಟಣ

ಆರ್. ಶ್ರೀನಿವಾಸ್: ಸನ್ಮಾನ್ಯ ಸಭಾಧ್ಯಕ್ಷರೇ ನಾನು ಈ ಸಂದರ್ಭದಲ್ಲಿ ಇಷ್ಟೇ ಹೇಳಬಯಸುತ್ತೇನೆ. ಬಹುಶಃ ನಮ್ಮ ಸರ್ಕಾರದ ಸಾಧನೆಗಳನ್ನು ಯಾವ ರೀತಿ ಹೇಳಬೇಕೆಂದರೆ, ತ್ರೇತಾಯುಗದಲ್ಲಿ ಶ್ರೀ ರಾಮಚಂದ್ರ ಸೀತಾದೇವಿಗೆ ಮುದ್ರಿಕೆ ಕೊಡಲು ಆಂಜನೇಯನನ್ನು ಲಂಕೆಗೆ ಕಳುಹಿಸುತ್ತಾನೆ. ಆಂಜನೇಯ ಲಂಕೆಗೆ ಹೋಗಿ ಮುದ್ರಿಕೆಯನ್ನು ಸೀತಾದೇವಿಗೆ ಕೊಟ್ಟು ಮರಳಿ ಬಂದಾಗ ಶ್ರೀರಾಮಚಂದ್ರ ಲಂಕೆ ಹೇಗಿತ್ತು ಎಂದು ಕೇಳುತ್ತಾನ. ಅದರ ವರ್ಣನೆಯನ್ನು ತೆಲುಗಿನಲ್ಲಿ ವಾಲ್ಮೀಕಿ ರಾಮಾಯಣದಲ್ಲಿ ತುಂಬಾ ಚೆನ್ನಾಗಿ ವರ್ಣಿಸಲಾಗಿದೆ. ಸುಮಾರು ಒಂದೂವರೆ ಗಂಟೆಗಳ ಕಾಲ ಆಂಜನೇಯ ಭವ್ಯತೆಯನ್ನು, ಅದ್ಭುತವಾದಂಥ ಮತ್ತು

ಸುಂದರತೆಯನ್ನು ಶ್ರೀರಾಮಚಂದ್ರನಿಗೆ ವರ್ಣಿಸುತ್ತಾನೆ. ಅದೇ ರೀತಿ ನಮ್ಮ ರಾಷ್ಟ್ರದಲ್ಲಿಯೇ ಕೇವಲ ಎರಡೂವರೆ ವರ್ಷಗಳಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅದರಲ್ಲಿ ಪ್ರಗತಿಯನ್ನು ಸಾಧಿಸಿದ ಸರ್ಕಾರ ನಮ್ಮ ಕರ್ನಾಟಕ ರಾಜ್ಯ ಎಂದು ಹೇಳಿದರೆ ತಪ್ಪಾಗಲಾರದು.

**ಮಾನ್ಯ ಸದಸ್ಯರು:** ರಾವಣ ರಾಜ್ಯವಾಗಿದೆ.

**ಆರ್. ಶ್ರೀನಿವಾಸ್:** ರಾಮರಾಜ್ಯ.

**ಕೆ. ವಿಶ್ವೇಶ್ವರ ಹೆಗಡೆ:** ರಾವಣ ರಾಜ್ಯವಾಗಿದೆಯೆಂದು ನಿಮ್ಮ ಪಕ್ಷದವರೇ ಹೇಳುತ್ತಿದ್ದಾರೆ. ನೀವು ಅದನ್ನು ಕೇಳಿ.

**ರಮೇಶ್ ಸಿ. ಜಿಗಜಿಣಗಿ (ಕಂದಾಯ ಸಚಿವರು):** ರಾವಣ ರಾಜ್ಯ ಜೆ.ಹೆಚ್. ಪಟೇಲ್ ಸರ್ಕಾರ ಇದ್ದಾಗ ಆಗುವುದಿಲ್ಲ. ನೀವೇನಾದರೂ ನಾಳೆ ಆಡಳಿತಕ್ಕೆ ಬಂದರೆ ಆಗ ಆದರೂ ಆಗಬಹುದು.

**ಆರ್. ಶ್ರೀನಿವಾಸ್:** ಅಧ್ಯಕ್ಷರೇ, ರಾವಣ ಕೂಡ ಬ್ರಹ್ಮನ ಅವತಾರದಲ್ಲಿ ಹುಟ್ಟಿರತಕ್ಕಂಥವನು. ರಾವಣ ಸಾಮಾನ್ಯವಾದ ಮನುಷ್ಯ ಅಲ್ಲ. ಆತನ ಅವತಾರ ಬ್ರಹ್ಮಾವತಾರ. ಬೆಳಿಗ್ಗೆ ಬ್ರಹ್ಮಾವತಾರ, ಮಧ್ಯಾಹ್ನ ಮಾತ್ರ ರಾಕ್ಷಸನ ಅವತಾರ. ಮುಖ್ಯಮಂತ್ರಿಗಳಿಗೆ ಇದು ಗೊತ್ತಿರಬೇಕು.

**ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):** ಕೇಳ್ತಾ ಇದೀನಿ, ತಾವು ತಮ್ಮ ಮಾತನ್ನ ಮುಂದುವರಿಸಿ. ಬಹು ಸ್ವಾರಸ್ಯವಾಗಿದೆ.

**ಕೆ. ವಿಶ್ವೇಶ್ವರ ಹೆಗಡೆ:** ಸೀತೆಯನ್ನು ಆತ ಏಕೆ ಕದ್ದುಕೊಂಡು ಹೋದ ಎಂಬುದನ್ನು ಹೇಳಿಬಿಡಿ.

**ಆರ್. ಶ್ರೀನಿವಾಸ್:** ಆ ಲಂಕಾ ಪಟ್ಟಣ ಬಹಳ ಸುಂದರವಾದ ನಗರವಾಗಿತ್ತು.

**ಎಸ್. ಕೃಷ್ಣಪ್ಪ:** ವಿಶ್ವೇಶ್ವರ ಹೆಗಡೆಯವರೇ, ನೀವು ಕೇವಲ ರಾಮನ ಗುಡಿಯನ್ನು ಕಟ್ಟುವುದಕ್ಕೆ ಹೋಗುತ್ತಿದ್ದೀರಿ, ಆದರೆ ನಮ್ಮ ಸರ್ಕಾರ ರಾಮರಾಜ್ಯವನ್ನೇ ಮಾಡಲು ಹೋಗುತ್ತಿದೆ. ಕೇವಲ ಗುಡಿ ಕಟ್ಟುವುದಲ್ಲ, ನಾವು ರಾಮರಾಜ್ಯವನ್ನು ಕಟ್ಟುವುದಕ್ಕೆ ಹೋಗುತ್ತಿದ್ದೇವೆಯೇ ವಿನಹ ಕೇವಲ ಗುಡಿಯಲ್ಲ ಅನ್ನುವುದನ್ನು ಮಾನ್ಯ ಸದಸ್ಯರು ತಿಳಿದುಕೊಳ್ಳಬೇಕು.

**ಆರ್. ಶ್ರೀನಿವಾಸ್:** ಈ ರೀತಿಯ ಪ್ರಗತಿಯನ್ನು ಸಾಧನೆ ಮಾಡಿ ತೋರಿಸುವುದಕ್ಕೆ ಅವರ ಕನಸು ಬಹುಶಃ ನನಸಾಗಲಿಲ್ಲ.

**ಮಾನ್ಯ ಸದಸ್ಯರು:** ಬಿ.ಜೆ.ಪಿ. ಯವರಿಗೆ ವ್ಯಥೆ ಏನೆಂದರೆ, ನಮ್ಮ ರಾಮನನ್ನು ಇವರು ಏಕೆ ಹಿಡಿದರು ಎಂಬುದಾಗಿದೆ.

ಕೆ. ವಿಶ್ವೇಶ್ವರ ಹೆಗಡೆ: ನೀವು ರಾಮನ ಸುದ್ದಿಯನ್ನು ಹೇಳಲಿಲ್ಲ. ನೀವು ಹೇಳಿದ್ದು ರಾವಣನ ವಿಷಯ. ನೀವು ಏನು ಹೇಳಿದ್ದೀರೋ ಅದರ ಪ್ರಕಾರ ನಡೆದುಕೊಳ್ಳುತ್ತಿದ್ದೀರಿ.

(ವಿಧಾನಸಭೆ ಕಲಾಪ, ಸೆಪ್ಟೆಂಬರ್ 2, 1997)

## "ದಯೆ, ದಾನ, ಸಂಯಮ" ಒಂದು ಕಥೆ

ಮಾನ್ಯ ಅಧ್ಯಕ್ಷರ ಅನುಮತಿ ಪಡೆದು ಇಂದಿನ ನಮ್ಮೆಲ್ಲರ ಸ್ಥಿತಿ ಹೇಗಿದೆ ಎಂಬುದಕ್ಕೆ ಕವಿಯೊಬ್ಬನ ಮಾತನ್ನು ಉದಾಹರಿಸುತ್ತೇನೆ.

ಟಿ.ಎಸ್. ಈಲಿಯಟ್ ಎಂಬ ಕವಿ ನೈತಿಕ ಅಧಃಪತನ ಹೊಂದಿದ ಸಮಾಜವನ್ನು ಕಂಡು ಮರುಗಿ " ವೇಸ್ಟ್ ಲ್ಯಾಂಡ್ " ಎಂಬ ಕಾವ್ಯ ರಚಿಸಿದ್ದಾನೆ. ಅದರಲ್ಲಿ ಬರುವ ಉಪಮೇಯ ಹೀಗಿದೆ...

ರಾಕ್ಷಸರು ಕ್ರೂರಿಗಳು; ಮಾನವವರು ಲೋಭಿಗಳು; ದೇವತೆಗಳು ಲೋಲುಪ್ತರು ಎನ್ನುವ ಜಿಜ್ಞಾಸೆ ಬರುತ್ತದೆ. ಏನು ಮಾಡುವುದು ತೋಚುವುದಿಲ್ಲ.

ಇದಕ್ಕೆ ಪರಿಹಾರ ಕಂಡು ಹಿಡಿಯದಿದ್ದಲ್ಲಿ ಕಷ್ಟ ಎಂದು ಅರಿತ ಎಲ್ಲರೂ ದೇವರ ಬಳಿ ಹೋಗಿ ಮೊರೆ ಇಡುತ್ತಾರೆ.

ದೇವರು ಎಲ್ಲಕ್ಕೂ ' ದ ' ಎಂದು ಉತ್ತರಿಸುತ್ತಾನೆ.

ನೀನು ಹೇಳುವುದೇನು? ತಿಳಿಯಲಿಲ್ಲವೇ ಎಂದಾಗ ' ದತ್ತ, ದಯತ್ವಂ, ದಮ್ಯತಾ:' ಎಂದು ದೇವರು ವಿವರಿಸುತ್ತಾನೆ. ಇವುಗಳ ಅರ್ಥವನ್ನು ಸಹಿತ ದೇವನೇ ಹೇಳುತ್ತಾನೆ.

ಮೊದಲು ಮನುಷ್ಯರೇ ನೀವು ಲೋಭಿಗಳಾಗಿದ್ದೀರಿ. ನಿಮಗೆ ಕೊಡುವುದು - ದಾನಮಾಡುವುದು - ಈ ಗುಣವೇ ತಿಳಿಯುತ್ತಿಲ್ಲ ಮೊದಲು ನೀವು 'ದ' ಎಂದರೆ ದತ್ತ-ಕೊಡುವುದನ್ನು ಕಲಿಯಿರಿ ಎನ್ನುತ್ತಾನೆ.

ರಾಕ್ಷಸರಿಗೆ ದೇವನ ಉಪದೇಶ ಹೀಗಿರುತ್ತದೆ; ನೀವು ಕ್ರೂರಿಗಳಾಗಿದ್ದೀರಿ.. 'ದ' ಎಂದರೆ ದಯೆಯನ್ನು ಮೊದಲು ಕಲಿಯಿರಿ.

ಇನ್ನು ದೇವತೆಗಳು : ರಂಭ-ಊರ್ವಶಿಯರಂತಹ ಸುರಸುಂದರಿಯರ ಸದಾಕಾಲದ ಸಂಗದಿಂದ ಮತ್ತು ಸುರಾಪಾನದಿಂದ ಹಾಳಾಗಿ ಹೋಗಿದ್ದೀರಿ : ನೀವು ಸಹಿತ 'ದ' ಎಂದರೆ ದಮ್ಯತ: ಹೀಗೆಂದರೆ ಸಂಯಮ ಕಲಿಯಿರಿ ಎಂದು ಉಪದೇಶಿಸುತ್ತಾನೆ.

ನಮ್ಮಲ್ಲಿ ಈ ಮೂರೂ ಗುಣಗಳಿರುವ ಜನರಿದ್ದಾರೆ...

ನಾನು ಎಲ್ಲಿ ಎಂದರೆ ನಿಮ್ಮ ಜೊತೆ ನಿಮ್ಮಲ್ಲಿ ಈ ಮೂರೂ ತರಹದ ಗುಣಗಳು ಜಾಸ್ತಿ ಇವೆ.. ನನ್ನಲ್ಲಿ ಇಲ್ಲವೆಂದು ಹೇಳುವುದಿಲ್ಲ ಸ್ವಲ್ಪ ಕಡಿಮೆ ಇದೆ. ಹೀಗಾಗಿ ನಾವು ಇಂದು ಈ ಸ್ಥಿತಿ ತಲುಪಿದ್ದೇವೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ಫೆಬ್ರವರಿ 3, 1981)

## ರಾಮಾಯಣ; ಮಹಾಭಾರತ

ಕೆ.ಹೆಚ್. ಶ್ರೀನಿವಾಸ: ಅಧ್ಯಕ್ಷರೇ ನಮ್ಮ ಹಿಂದಿನವರು ಬರೆದ ಮಹಾಕಾವ್ಯ ಮತ್ತು ಪುರಾಣಗಳನ್ನು ಜನ ತಮ್ಮದ್ದೇ ಆದ ರೀತಿಯಲ್ಲಿ ಅರ್ಥೈಸಿಕೊಳ್ಳುತ್ತಾರೆ ಎನ್ನುವುದಕ್ಕೆ ಶಾಸಕ ಮಿತ್ರರಾದ ಜೆ.ಹೆಚ್. ಪಟೇಲರು ನೂರಾರು ಕಥೆ ಮತ್ತು ನಿದರ್ಶನಗಳನ್ನು ಹೇಳುತ್ತಿರುವುದನ್ನು ನಾವೆಲ್ಲಾ ಕೇಳ್ತಾನೆ ಇದ್ದೀವಿ. ಇಂತಹ ಒಂದು ಸಿಮಿಲಿಯನ್ನು ಹೇಳಬಯಸುತ್ತೇನೆ.

ಔರಂಗಜೇಬ ಒಂದು ಸಲ ಮಹಾಭಾರತವನ್ನು ಓದಿಸಿ ಕೇಳಿದನಂತೆ.

ಜೊತೆಗಿದ್ದವರು ಔರಂಗಜೇಬನನ್ನು ಪ್ರಶ್ನಿಸಿದರಂತೆ. ಮಹಾಭಾರತ ಕೇಳಿದ್ದಾಯ್ತಲ್ಲಾ ನಿನ್ನ ಅನಿಸಿಕೆ ಏನು?

ಅವನೆಂದನಂತೆ, ಹೇಗಪ್ಪಾ ನನ್ನ ಅಭಿಪ್ರಾಯ ಹೇಳೋದೂ..

ಇಡೀ ಮಹಾಭಾರತದಲ್ಲಿರೋದು ಮೂರೇ ಅಂಶ. ಏಕ್ ಚೋಕ್ರಾ, ಏಕ್ ಬುಡ್ಡಾ, ಏಕ್ ಬದ್ಮಾಷ್ ಅಂದನಂತೆ.

ಹಾಗಂದ್ರೇ? ಏಕ್ ಚೋಕ್ರ - ಅಭಿಮನ್ಯು, ಏಕ್ ಬುಡ್ಡಾ ಎಂದರೆ - ಭೀಷ್ಮ, ಏಕ್ ಬದ್ಮಾಷ್ ಅಂದ್ರೆ - ಶ್ರೀಕೃಷ್ಣ.

ಮೊಯಿದ್ದೀನ್: ಮಹಾಭಾರತವೋ, ರಾಮಾಯಣವೋ - ಎಲ್ಲ ಕಥೆಗಳಲ್ಲೂ ಇದೇ ಸತ್ಯವೇ.

ಜೆ.ಹೆಚ್. ಪಟೇಲ್: ಹೌದು ಸ್ವಾಮಿ. ಮಹಾಭಾರತದಲ್ಲಿಯೂ ಇದು ಸತ್ಯವೇ. ರಾಮಾಯಣದಲ್ಲೂ ಅಷ್ಟೆ. ಅವತ್ತಿಗೂ ಇವತ್ತಿಗೂ ಕೊಂಚವೂ ವ್ಯತ್ಯಾಸವಿಲ್ಲ. ಜನಜೀವನ ಇಷ್ಟೇ.

(ವಿಧಾನಸಭೆ ಕಲಾಪ ಮಾರ್ಚಿ 24, 1982)

## ಸೀತೆಯನ್ನು ಕಾಡಿಗಟ್ಟಿದ ರಾಮ; ಎಂಥವ?

**ಕೆ.ಹೆಚ್. ಶ್ರೀನಿವಾಸ:** ಮಾನ್ಯ ಬೊಮ್ಮಾಯಿಯವರು ವ್ಯಾಲ್ಯೂ ಬೇಸ್ಡ್ ಪಾಲಿಟಿಕ್ಸ್ ಬಗ್ಗೆ ಹೇಳಿದರು. ವ್ಯಾಲ್ಯು ಬೇಸ್ಡ್ ಪಾಲಿಟಿಕ್ಸ್ ಬಗ್ಗೆ ಅತಿಯಾಗಿ ಮಾತನಾಡಿ, ಕೊನೆಗೆ ಯಾರು ಎಷ್ಟು ಹೇಳಿಕೊಳ್ಳುತ್ತಾರೆ, ಅದಕ್ಕೆ ಹೊಂದಿಸಿ ವ್ಯಾಲ್ಯು ನೋಡಿಕೊಳ್ಳಬೇಕಾಗುತ್ತದೆ. ಹಳೆಯ ಉದಾಹರಣೆ ತೆಗೆದುಕೊಂಡು ಹೇಳಿದರೆ ಇವತ್ತು ಇಂದಿರಾಗಾಂಧಿಯವರ ಬಗ್ಗೆ ಅಲಹಾಬಾದ್ ಹೈಕೋರ್ಟ್ ಜಡ್ಜಮೆಂಟ್ ಬಗ್ಗೆ ಜನರು ಜಡ್ಜ್ ಮಾಡುವುದಿಲ್ಲ. ಒಂದು ಸಂದರ್ಭದಲ್ಲಿ ತಮ್ಮ ಪ್ರಾಣಕ್ಕೆ ಅಪಾಯ ಇದ್ದರೂ ಒಂದು ನಿರ್ಧಾರವನ್ನು ತೆಗೆದುಕೊಂಡರು ಎಂದು ನೆನಪಿನಲ್ಲಿ ಇಟ್ಟುಕೊಳ್ಳುತ್ತಾರೆಯೇ ವಿನಹ ಅಲಹಾಬಾದ್ ಜಡ್ಜಮೆಂಟ್‌ನ್ನು ಯಾರೂ ಇಟ್ಟುಕೊಳ್ಳುವುದಿಲ್ಲ. ಪಂಜಾಬ್ ಬಗ್ಗೆ ಅವರು ಯಾವ ಒಂದು ತ್ಯಾಗ ಮಾಡಿದರು ಅದನ್ನು ಜನರು ನೆನಸಿಕೊಳ್ಳುತ್ತಾರೆ. ಯಾವುದೇ ವ್ಯಕ್ತಿಯನ್ನು ಯಾವಾಗ ಟೆಸ್ಟ್ ಮಾಡುತ್ತಾರೆ ಅಂದರೆ ಕೃಷಿಯಲ್ ಟೈಮ್‌ನಲ್ಲಿ ಮಾಡುತ್ತಾರೆ. ಪ್ರತಿದಿವಸ ವ್ಯಾಲ್ಯು ಮಾಡಲಿಕ್ಕೆ ಆಗುವುದಿಲ್ಲ.

ಇವತ್ತು ಶ್ರೀ ರಾಮಚಂದ್ರನ ಉದಾಹರಣೆ ಇದೆ. ಅವನು ಪಿತೃವಾಕ್ಯ ಪರಿಪಾಲನೆಗೋಸ್ಕರ ಯಾರಿಗೋಸ್ಕರ ರಾಜ್ಯವನ್ನು ಬಿಟ್ಟುಕೊಟ್ಟು ಹೋದನೋ, ಅದೇ ಭರತನೇ ಹೋಗಿ ರಾಜ್ಯವನ್ನು ತೆಗೆದುಕೊಳ್ಳಬೇಕೆಂದು ಹೇಳಿದಾಗ ಹದಿನಾಲ್ಕು ವರ್ಷಗಳು ಕಳೆಯದೇ ಬರುವುದಿಲ್ಲ ಎಂದು ಹೇಳಿದ. ಅದೇ ರೀತಿ ಕರ್ಣನ ಉದಾಹರಣೆ ಇದೆ. ಮೊದಲನೆಯದಾಗಿ ಕೃಷ್ಣ ಏನು ಹೇಳುತ್ತೇನೆ ಎಂದರೆ ಎರಡು ಜನರಿಗೆ ಹಿರಿಯಣ್ಣ ನೀನೇ ಇದ್ದೀಯಾ. ನಿನ್ನನ್ನೇ ಚಕ್ರವರ್ತಿ ಮಾಡುತ್ತೇನೆಂದು ಹೇಳಿದರೂ ಒಪ್ಪಲಿಲ್ಲ. ಎಲ್ಲಕ್ಕಿಂತಲೂ ಮಿಗಿಲಾಗಿ ಭೀಷ್ಮನ ಉದಾಹರಣೆ ಇದೆ.

ಅವನು ತನ್ನ ತಂದೆಯ ಆಸೆಯನ್ನು ಪೂರೈಸುವುದಕ್ಕೋಸ್ಕರ ಬ್ರಹ್ಮಚರ್ಯ ವ್ರತವನ್ನು ಒಪ್ಪಿಕೊಂಡ, ಆದರೆ ಏನಾಯಿತು. ಅವನ ವಂಶ ನಿರ್ವಂಶವಾಯಿತು. ಆಗ ಅವನ ಮಲತಾಯಂದಿರು ಬಂದು ಅತ್ತೂ ಕರೆದು ಮದುವೆಯಾಗೆಂದು ಹೇಳಿದರು. ಇಡೀ ಒಂದು ಕುರುವಂಶವೇ ನಾಶವಾಗಿರುವಾಗ ಜನತ ಪಕ್ಷದ್ದು ಏನು ಹೇಳುತ್ತೀರಿ. ಅವನ ತಾಯಂದಿರು ಹೇಳಿದರು, ಮಹಾನ್ ಮಹಾನ್ ಋಷಿಗಳು ಹೇಳಿದರು. ಅವನು ತನ್ನ ಬ್ರಹ್ಮಚರ್ಯ ವ್ರತವನ್ನು ಬಿಡಲಿಲ್ಲ.

**ಎಚ್.ಡಿ. ದೇವೇಗೌಡ:** ನಾನು ವಾದವಿವಾದಕ್ಕೆ ಎಳೆಯುವುದಕ್ಕೆ ಹೋಗುವುದಿಲ್ಲ. 1962 ರಲ್ಲಿ ಪಾರ್ಲಿಮೆಂಟ್ ಚುನಾವಣೆಯಾದ ಮೇಲೆ ಮಾನ್ಯ ವೀರೇಂದ್ರಪಾಟೀಲ್‌ರವರು ರಾಜೀನಾಮೆ ಕೊಟ್ಟಾಗ ಸದನ ನಡೆಯುತ್ತಿತ್ತು. ಆದರೂ ಅವರು ಸದನದಲ್ಲಿ ರಾಜೀನಾಮೆ ಕೊಡುತ್ತೇನೆಂದು ಹೇಳಲಿಲ್ಲ. ಇವತ್ತು ಸದನದಲ್ಲಿ ನಿಮ್ಮ ಪಕ್ಷದ ಅನೇಕ ಜನ ಮುಖಂಡರು ಇದ್ದಾರೆ, ಅದಕ್ಕೆ ಕಾರಣ ಏನೇ ಇರಲಿ ಸದನ ನಡೆಯುತ್ತಿದ್ದಾಗ, ಸದನದಲ್ಲಿ ರಾಜೀನಾಮೆ ಕೊಡುತ್ತೇನೆಂದು ಘೋಷಣೆ ಮಾಡಿ ರಾಜಭವನಕ್ಕೆ ಹೋಗಿ ರಾಜೀನಾಮೆ ಕೊಡಲಿಲ್ಲ. ಪಕ್ಷದ

ಮುಖಂಡರಾಗಿ, ನಾಯಕರಾಗಿ ಅಂದಿನ ಪರಿಸ್ಥಿತಿಯನ್ನು ಗಮನಕ್ಕೆ ತೆಗೆದುಕೊಂಡು ರಾಜೀನಾಮೆ ಕೊಟ್ಟರೂ, ಸದನಕ್ಕೆ ಹೇಳಲಿಲ್ಲ.

ಎಂ. ವೀರಪ್ಪಮೊಯ್ಲಿ: ಕಾರಣ ಮುಖ್ಯ, There was a crisis in the Ministry itself.

**ಹೆಚ್.ಡಿ. ದೇವೇಗೌಡ:** ಅನಾವಶ್ಯಕವಾಗಿ ನಾನು ವಾದವಿವಾದಕ್ಕೆ ಎಳೆಯುವುದಕ್ಕೆ ಹೋಗುವುದಿಲ್ಲ. "ಇವತ್ತು ಒಬ್ಬ ಮಂತ್ರಿ ರಾಜಿನಾಮೆ ಕೊಡುವಾಗ ಈ ಸದನ ನಡೆಯುತ್ತಿದ್ದರೆ ಸದನದಲ್ಲಿ ಹೇಳಿಕೆ ಮಾಡುವ ಅವಕಾಶವನ್ನು ನಮ್ಮ ನಿಯಮಾವಳಿಯಲ್ಲಿ ಕಲ್ಪಿಸಿಕೊಡಲಾಗಿದೆ" ಎಂದು ಉಲ್ಲೇಖ ಮಾಡಿದ್ದಾರೆ. ಆದರೆ ಮುಖ್ಯಮಂತ್ರಿಗಳ ರಾಜೀನಾಮೆ ಕೊಡತಕ್ಕಂಥ ಕಾಲದಲ್ಲಿ ಅಂಥ ಹೇಳಿಕೆಯನ್ನು ಮಾಡತಕ್ಕಂಥ ವ್ಯವಸ್ಥೆ ನಮ್ಮ ನಿಯಮಾವಳಿಯಲ್ಲಿ ಇಲ್ಲ ಎಂದು ಹೇಳುತ್ತೇನೆ. ಇದನ್ನು ಇಷ್ಟೊಂದು ಸೀರಿಯಸ್ಸಾಗಿ ತೆಗೆದುಕೊಳ್ಳುವ ಆವಶ್ಯಕತೆ ಇರಲಿಲ್ಲ.

ಎರಡನೆಯದಾಗಿ ಸ್ವಾಮಿ, ರಾಜೀನಾಮೆ ಏತಕ್ಕೆ ಕೊಟ್ಟರು. ಅದು ಸರಿಯೋ ತಪ್ಪೋ ಎಂದು ಚರ್ಚೆ ಮಾಡುತ್ತಾ ಭೀಷ್ಮ ಕರ್ಣ ಎಂದೆಲ್ಲ ಹೇಳಿದರು. ಮಹಾಭಾರತದಲ್ಲಿ ಭೀಷ್ಮ ಒಬ್ಬನೇ ಏಕೆ. ಶಲ್ಯನನ್ನು ಹೇಳಬೇಕು, ಶಕುನಿಯನ್ನೂ ಹೇಳಬೇಕು. ಅಲ್ಲಿ ಒಬ್ಬೊಬ್ಬರದು ಒಂದೊಂದು ಪಾತ್ರ ಇದೆ. ಶಲ್ಯನದೆ ಒಂದಾದರೆ, ಭೀಷ್ಮನದು ಇನ್ನೊಂದು ಪಾತ್ರ. ಒಂದು ಪಕ್ಷ ಮಹಾಭಾರತದ ಬಗ್ಗೆ ಯಾರ್‍ಯಾರು ಚೆನ್ನಾಗಿ ಮಾತನಾಡುತ್ತಾರೆ ಎಂದು ತಿಳಿಯುವುದಕ್ಕೆ ಬೇಕಾದರೆ ಒಂದು ಚರ್ಚಾ ಸ್ಪರ್ಧೆಯನ್ನು ಇಟ್ಟು ಮಾತನಾಡಲಿ. ಆದರೆ ಈ ಸದನದ ಸಮಯವನ್ನು ಅದಕ್ಕಾಗಿ ಬಳಸುವುದಕ್ಕೆ ನಾನು ಸಿದ್ಧನಿಲ್ಲ.

ಎಂ. ವೀರಪ್ಪ ಮೊಯ್ಲಿ: ಇವರಿಗೆ ಮಹಾಭಾರತ, ರಾಮಾಯಣ ಎರಡೂ ಅಪ್ಲೈ ಆಗುವುದಿಲ್ಲ.

**ಹೆಚ್.ಡಿ. ದೇವೇಗೌಡ:** ಹಾಗಾದರೆ ಇನ್ನಾವ ರಾಮಾಯಣ ಮಾಡೋಣ ಇಂದಿರಾಯಣ ಮಾಡೋಣವೆ?

**ಪ್ರೊ: ಎ. ಲಕ್ಷ್ಮೀಸಾಗರ್:** ದೇವೇಗೌಡರೇ ಇಂದಿರಾಗಾಂಧಿ ಕೃಪಾಪೋಷಿತ ನಾಟಕ ಮಂಡಲಿ ಮಾಡೋಣವೇ?

ಎಂ. ವೀರಪ್ಪ ಮೊಯ್ಲಿ: ತೆನಾಲಿ ರಾಮಕೃಷ್ಣ ಪ್ರಸಂಗ ನಾವು ಹೇಳೋಣವೇ?

**ಪ್ರೊ: ಎ. ಲಕ್ಷ್ಮೀಸಾಗರ್:** ಅಯ್ಯೋ, ಅದು ನಾನು ಹೇಳಿದ್ದಲ್ಲ. ನಿಮ್ಮ ಗುಂಡೂರಾಯರೇ ಹೇಳಿದ್ದು.

**ಜೆ.ಹೆಚ್. ಪಟೇಲ್:** ಮಾನ್ಯ ಅಧ್ಯಕ್ಷರೇ, ವೀರಪ್ಪ ಮೊಯ್ಲಿಯವರು ಮತ್ತು ಶ್ರೀನಿವಾಸರು ಕೆಲವು ಮೌಲ್ಯಾಧಾರಿತ ರಾಜಕಾರಣದ ಬಗ್ಗೆ ಉಲ್ಲೇಖ ಮಾಡಿ ಮಹಾಭಾರತ

ರಾಮಾಯಣಗಳಿಂದ ಉದಾಹರಣೆ ಕೊಟ್ಟಿದ್ದಾರೆ. ಮೊದಲನೆಯದಾಗಿ, ರಾಮಾಯಣದಲ್ಲಿ ರಾಮನನ್ನು ಜ್ಞಾಪಿಸಿಕೊಳ್ಳುವುದು ತಂದೆಗೆ ಕೊಟ್ಟ ಮಾತು ಉಳಿಸುವುದಕ್ಕಾಗಿ ಕಾಡಿಗೆ ಹೋದ ಎಂದಲ್ಲ. ಅಗಸ ಹೇಳಿದಾಗ ಹೆಂಡತಿಯನ್ನು ಕಾಡಿಗಟ್ಟಿ ಅವಳನ್ನು ಪರೀಕ್ಷೆ ಮಾಡಿದ ಎಂದು. ಆಗಿನ ಕಾಲದಲ್ಲಿ ಅಂದಿನ ಪ್ರಭುತ್ವದಲ್ಲಿ ಒಬ್ಬ ಸಾಮಾನ್ಯ ಅಗಸ ಹೇಳಿದ್ದಕ್ಕೂ ರಾಜನಾದವನು ಕೇಳಿದ ಎಂದು. ಆದರೆ ಈಗ ಕೋರ್ಟ್ ಹೇಳಿದರೂ ಅಧಿಕಾರ ಬಿಟ್ಟಿಳಿಯದಂಥ ಶ್ರೀ ರಾಮಚಂದ್ರರ ಕಾಲದಲ್ಲಿ ನಾವಿದ್ದೇವೆ.

ನಾನು ಹೇಳುತ್ತೇನೆ, ಈ ರಾಮಚಂದ್ರ ಅಗಸ ಹೇಳಿದ್ದರಿಂದಲೇ ಹೆಂಡತಿಯನ್ನು ಕಾಡಿಗೆ ಕಳಿಸಿದ್ದು ಸರಿಯಲ್ಲ. ಒಬ್ಬ ಹೆಣ್ಣನ್ನು ಕಾಡಿಗಟ್ಟುವುದು, ಬೆಂಕಿಯಲ್ಲಿ ಬಿದ್ದು ಬಾ ಎನ್ನುವುದು ಇವೆಲ್ಲ ಯಾರೂ ಮಾಡುವುದಲ್ಲ. ಆದರಲ್ಲೂ ನಮ್ಮ ಪಾರ್ಟಿಯಂತೂ ಈ ಅನ್ಯಾಯವನ್ನು ಸ್ವೀಕರಿಸುವುದಕ್ಕೆ ತಯಾರಿಲ್ಲ. ರಾಮನಿಂದ ಒಂದು ಹೆಣ್ಣಿಗೆ ಎಷ್ಟೊಂದು ಅನ್ಯಾಯವಾಯಿತು. ಇದು ನಮ್ಮ ಮೌಲ್ಯವಲ್ಲ. ಇನ್ನೊಂದು ಮಾತು ಹೇಳುತ್ತೇನೆ.

ಎನ್.ಎಂ. ಅಡ್ಯಂತಾಯ: ಪಟೇಲರು ಅಡಿ ಬಿದ್ದರೂ ಮೂಗು ಮೇಲೆ ಎನ್ನುವವರು.

ಜೆ.ಹೆಚ್. ಪಟೇಲ್: ಭೀಷ್ಮ ಮತ್ತು ಕರ್ಣ ಎಂಥ ತ್ಯಾಗಿಗಳೆಂದು ಹೇಳಿದರು. ಆದರೆ ಇವರುಗಳು-

ಕೆ.ಹೆಚ್. ಶ್ರೀನಿವಾಸ್: ನಾನು ಹೇಳಿದ್ದು ಏನೆಂದರೆ ಒಬ್ಬ ಮನುಷ್ಯನನ್ನು ಟೆಸ್ಟ್ ಮಾಡುವುದು ಅವನು ಏನೇನು ಮಾಡಿದ ಎಂಬುದರಿಂದಲ್ಲ. ಯಾವ ಸಮಯದಲ್ಲಿ ಹೇಳಿದ್ದನ್ನು ಉಳಿಸಿಕೊಳ್ಳುವುದಕ್ಕಾಗಿ ಏನೇನೆಲ್ಲ ತ್ಯಾಗ ಮಾಡಿದ ಎಂದು.

ಜೆ.ಹೆಚ್. ಪಟೇಲ್: ಆಯಿತು. ಅಂಥಾ ಭೀಷ್ಮ, ಕರ್ಣ ಇದ್ದರೂ ಕೂಡ ಇವರು ಎಲ್ಲವನ್ನೂ ಏಕೆ ಕಳೆದುಕೊಂಡರು? ಇವರು ಕೌರವರಾದ್ದರಿಂದ. ಆದರೆ ನಮ್ಮದು ಪಾಂಡವರ ಪಾರ್ಟಿ. ಆದರೆ ಭೀಷ್ಮ ಕರ್ಣರಿದ್ದರೂ ಅವರಿಗಾಗಿರುವ ಗತಿ ನೋಡಿ.

ಕೆ.ಹೆಚ್. ಶ್ರೀನಿವಾಸ್: ನಾವು ಪಾಂಡವರು, ಸ್ವಲ್ಪ ಕಾಲ ಮಾತ್ರ ಪದಚ್ಯುತರಾಗಿದ್ದೇವೆ. ಆದರೆ ಕೌರವರಾದ ನಿಮ್ಮನ್ನು ಕೆಳಗುರುಳಿಸಿ ಮತ್ತೆ ನಾವು ಬರುತ್ತೇವೆ.

ಆರ್. ವೆಂಕಟರಾಮಯ್ಯ: ಒಂದು ಅಭಿಪ್ರಾಯ ಏನಿದೆ ಎಂದರೆ ಕೇವಲ ಅಗಸನ ಮಾತನ್ನು ಕೇಳಿ ರಾಮ ಹೆಂಡತಿಯನ್ನು ಕಾಡಿಗಟ್ಟಿದ ಎಂಬುದು ನಿಜವಲ್ಲ, ರಾಮಾಯಣದಲ್ಲೇ ನಾಲ್ಕೈದು ಥರ ಉಂಟು, ಅದರಲ್ಲಿ ಒಂದರ ಪ್ರಕಾರ.

ಕೆ.ಹೆಚ್. ಶ್ರೀನಿವಾಸ್: ಪಟೇಲರೇ, ರಾಮ ಮತ್ತೆ ರಾಜ್ಯ ಒಪ್ಪಿಸಿಕೊಂಡಿದ್ದರೆ, ಭೀಷ್ಮ ಬ್ರಹ್ಮಚರ್ಯ ಮುರಿದಿದ್ದಿದ್ದರೆ ಕರ್ಣ ರಾಜನಾಗಿದ್ದಿದ್ದರೆ ಅದನ್ನು ನೀವು ನಾಟಕ ಎಂದು ಹೇಳುತ್ತಿದ್ದಿರೋ ಇಲ್ಲವೋ ಹೇಳಿಬಿಡಿ.

ಜೆ.ಹೆಚ್. ಪಟೇಲ್: ವಿಶ್ವಾಮಿತ್ರನಂಥ ಮಹಾತಪಸ್ವಿ ಅಥವಾ ಅಂಥ ಋಷಿಗಳು ನಮ್ಮ ದೇಶದಲ್ಲಿ ಎಂಥದನ್ನು ಬೇಕಾದರೂ ಸಾಧ್ಯ ಎಂದು ತೋರಿಸಿದ್ದಾರೆ. ಆದರೆ ವಿಶ್ವಾಮಿತ್ರ ಮೇನಕೆಯರಿಗೆ ಒಬ್ಬ ಮಗು ಹುಟ್ಟಿದ ತಕ್ಷಣ ಅದು ನನಗೆ ಬೇಡ ಎಂದ. ಆದರೆ ನಮ್ಮ ಹೆಗಡೆ ಆ ಮಗು ನನ್ನದು ಎಂದು ಹೇಳಿದ್ದಾರೆ.

ಅಧ್ಯಕ್ಷರು: ಶ್ರೀನಿವಾಸರ ಪಾತ್ರವೋ ಚಲೋ, ಪಟೇಲರ ಪಾತ್ರವೂ ಚಲೋ.

ಶ್ರೀಮತಿ ಕೆ.ಎಸ್. ನಾಗರತ್ನಮ್ಮ ಇಬ್ಬರೂ ಬಹಳ ಹಾನೆಸ್ಟಾಗಿ ಮಾತನಾಡಿದ್ದಾರೆ. ಅವರನ್ನು ಅಭಿನಂದಿಸಲೇಬೇಕು.

ಎಸ್. ಬಂಗಾರಪ್ಪ: ಪಟೇಲರೇ, ಮಹಾಭಾರತದಲ್ಲಿ ಕರ್ಣನ ಪಾತ್ರ ತಮಗೂ ಕೂಡ ಗೊತ್ತಿದೆ. ಅವನು ಏನು ಹೇಳುತ್ತಾನೆಂದರೆ 'ನಾನು ತೊಟ್ಟ ಬಾಣ ತೊಡುವುದಿಲ್ಲ' ಎನ್ನುತ್ತಾನೆ. ಒಂದು ಸಲ ರಾಜೀನಾಮೆ ಕೊಟ್ಟ ಮೇಲೆ ಹಿಂದಕ್ಕೆ ತೆಗೆದುಕೊಳ್ಳುವ ನಿಮ್ಮ ಕೆಲಸದ ಅರ್ಥ ಏನು?

ಹೆಚ್.ಡಿ. ದೇವೇಗೌಡ: ಅಧ್ಯಕ್ಷರೇ, ನಾನು ಕೆಲವು ಗಂಭೀರ ವಿಷಯಗಳನ್ನು ಪ್ರಸ್ತಾಪ ಮಾಡುತ್ತಿದ್ದಾಗ ಸನ್ಮಾನ್ಯ ಪಟೇಲರು ಮಧ್ಯೆ ಎದ್ದು ಸಭೆಯನ್ನು ನಗೆಯ ಲಹರಿಯಲ್ಲಿ ತೆಗೆದುಕೊಂಡು ಹೋಗಿಬಿಟ್ಟರು.

ಶ್ರೀ ಎಂ. ವೀರಪ್ಪ ಮೊಯ್ಲಿ: ಪಟೇಲರು ಹೇಳಿದ ರಾಮ, ಕೃಷ್ಣರ ವಿಚಾರ ಈ ರಾಮಕೃಷ್ಣರ ಬಗ್ಗೆ ಬಹಳ ಆನೆಸ್ಟಾದ ಒಪಿನಿಯನ್.

ಎಸ್. ಬಂಗಾರಪ್ಪ: ಶ್ರೀಮಾನ್ ಜೆ.ಹೆಚ್. ಪಟೇಲರ್‌ರವರು ಅಗಸ ಹೇಳಿದ್ದಕ್ಕಾಗಿ ಶ್ರೀ ರಾಮಚಂದ್ರ ಸೀತಾದೇವಿಯನ್ನು ಅಗ್ನಿಪರೀಕ್ಷೆ ಮಾಡಿಸಿದ ಎಂಬುದಾಗಿ ಹೇಳಿದರು. ಆದರೆ ಮಾನ್ಯ ಮುಖ್ಯಮಂತ್ರಿಗಳು ಹೈಕೋರ್ಟು ಕೊಟ್ಟಂತಹ ಜಡ್ಜ್‌ಮೆಂಟ್‌ನ ಯಾವ ಟೆಸ್ಟ್‌ಗೂ ತಯಾರಾಗುತ್ತಿಲ್ಲ. ಹೈಕೋರ್ಟು ಕೊಟ್ಟಂತಹ ತೀರ್ಪಿನ ಮೇಲೆ ನಾವು ಮತ್ತೆ ಅಪೀಲು ಹೋಗುವುದಿಲ್ಲ ಎನ್ನುವ ಮಾತನ್ನು ಹೇಳಿದ್ದಾರೆ. ಅದನ್ನು ಒಪ್ಪಿಕೊಳ್ಳುತ್ತೇವೆಂದು ಹೇಳಿದಂತಹ ಮಾನ್ಯ ಮುಖ್ಯಮಂತ್ರಿಗಳು.

ಜೆ.ಹೆಚ್. ಪಟೇಲ್: ನಾನು ಹೇಳಿದ ಮಾತಿಗೆ ಅಪಾರ್ಥ ಬರಬಾರದು. ಹೈಕೋರ್ಟಿನ ಜಡ್ಜ್‌ಮೆಂಟ್‌ಗೂ-ಅಗಸ ಹೇಳಿದಂತಹ ಮಾತಿಗೂ ಹೋಲಿಸುವುದಕ್ಕೆ ಹೋಗಬೇಡಿ. ಹೈಕೋರ್ಟು ಜಡ್ಜ್‌ಮೆಂಟ್ ಆ ರೀತಿ ಹೇಳಿದ್ದಕ್ಕೋಸ್ಕರ ಅದನ್ನು ಮಾನ್ಯತೆ ಮಾಡಿ ಬಿಟ್ಟುಕೊಟ್ಟು ಹೋದರು. ಆದರೆ ಇವತ್ತು ಪುನಃ ಅವರನ್ನೇ ನಮ್ಮ ಪಕ್ಷ ತಂದು ಆ ಸ್ಥಾನದಲ್ಲಿಟ್ಟಿದೆ. ಎರಡನೇ ಮಾತು ಏನೆಂದರೆ, ಶ್ರೀ ರಾಮಚಂದ್ರ ತಂದೆ ಮಾತನ್ನು ಒಪ್ಪಿ ಕಾಡಿಗೆ ಹೋಗಿಬಿಟ್ಟ ಎಂಬುದಾಗಿ ಶ್ರೀಮಾನ್ ಶ್ರೀನಿವಾಸ್‌ರವರು ಹೇಳಿದರು. ಶ್ರೀರಾಮಚಂದ್ರ ಅಗಸ ಹೇಳಿದ್ದಕ್ಕೆ ಹೆಂಡತಿಯನ್ನು ಅಗ್ನಿ ಪರೀಕ್ಷೆ ಮಾಡಿಸಿದ. ಆದರೆ ಇಲ್ಲಿ ಆ ರೀತಿ ಮಾಡುವುದಕ್ಕಾಗುವುದಿಲ್ಲ. ಆದ್ದರಿಂದ

ಹೈಕೋರ್ಟಿನ ಜಡ್ಜ್‌ಮೆಂಟ್‌ಗೂ ಅಗಸನಿಗೂ ಹೋಲಿಕೆ ಮಾಡುವುದಕ್ಕೆ ಹೋಗಬೇಡಿ. ಯಾವುದೇ ಸರ್ಕಾರವನ್ನು ರಚನೆ ಮಾಡಬೇಕಾದರೆ ಅಥವಾ ಯಾವುದೇ ಒಂದು ಸರ್ಕಾರವನ್ನು ಪಡೆಯಬೇಕಾದ್ದು ಜನತೆ, ಆ ಸರ್ಕಾರಕ್ಕೆ ಒಬ್ಬರು ನಾಯಕರು ಇರಬೇಕಾಗುತ್ತದೆ. Political leadership becomes father of it. ಸರ್ಕಾರ ಬಂದರೆ ಆ ಸರ್ಕಾರದ ಜವಾಬ್ದಾರಿಯನ್ನು ಜನತೆ ಮತ್ತು ಪಾರ್ಟಿ ಹೊತ್ತುಕೊಳ್ಳಬೇಕಾಗುತ್ತದೆ. ಆದ್ದರಿಂದ ಆ ರೀತಿ ಹೇಳಿದಾಗ ಬಿಟ್ಟು ಹೋಗತಕ್ಕ ಹೇಡಿತನ ಮಾಡಲಿಲ್ಲ. ಶ್ರೀಮಾನ್ ರಾಮಕೃಷ್ಣ ಹೆಗಡೆಯವರು ಎನ್ನುವ ಮಾತನ್ನು ಹೇಳಿದೆ. ಆದ್ದರಿಂದ ಹೈಕೋರ್ಟಿನ ಜಡ್ಜ್‌ಮೆಂಟ್‌ಗೂ-ಅಗಸನಿಗೂ ಹೋಲಿಕೆ ಮಾಡುವುದಕ್ಕೆ ಹೋಗಬೇಡಿ.

ಎಸ್. ಬಂಗಾರಪ್ಪ: ಮಾನ್ಯ ಪಟೇಲ್‌ರವರು ಬಹಳ ಎಚ್ಚರಿಕೆಯಿಂದ ಇರಬೇಕು. ಇನ್‌ಕಂಟ್ಯಾಕ್ಸ್‌ನ ಲೆಕ್ಕ ಕೊಡುವಾಗ ರಾಮನ ಲೆಕ್ಕ, ಕೃಷ್ಣನ ಲೆಕ್ಕ ಎಂಬುದಾಗಿ ಕೊಡುತ್ತಾರೆ. ರಾಮನ ಲೆಕ್ಕ ಅಂದರೆ ಸರಿಯಾದ ಲೆಕ್ಕ ಅಂದರೆ ಕಾನೂನು ಪ್ರಕಾರವಾದ ಲೆಕ್ಕವನ್ನು ಕೊಡುವುದೆಂತಲೂ, ಕೃಷ್ಣ ಲೆಕ್ಕ ಅಂದರೆ ಅಸತ್ಯದಿಂದ ಕೂಡಿರತಕ್ಕಂತಹ ಲೆಕ್ಕ ಎಂತಲೂ ಇದೆ. ಆದ್ದರಿಂದ ಅವರ ಹೆಸರೇ ಎರಡನ್ನೂ ಸೂಚಿಸುತ್ತದೆ. ಆದ್ದರಿಂದ ತಾವು ಬಹಳ ಎಚ್ಚರಿಕೆಯಿಂದ ಇರಬೇಕಾಗಿತ್ತು ಎಂಬುದು ನನ್ನ ಭಾವನೆ. ರಾಮಕೃಷ್ಣ ಹೆಗಡೆ ಎಂಬುದಾಗಿ ಅವರ ಹೆಸರೇ ಇದೆ.

ಎಸ್.ಆರ್. ಬೊಮ್ಮಾಯಿ: ಹೆಸರಿನ ಮೇಲೆ ಹೆಚ್ಚು ಹೋಗಬೇಡಿ. ತಮ್ಮ ಹೆಸರು ಬಂಗಾರಪ್ಪ ಎಂಬುದಾಗಿ ಇದೆ. ಅದರಂತೆ ಇದ್ದೀರಾ?

ಎಸ್. ಬಂಗಾರಪ್ಪ: ನೋಡಿ ಒಂದೇ ಹೆಸರು "ಬಂಗಾರಪ್ಪ" ಅಂತ ಎಷ್ಟು ಚೆನ್ನಾಗಿದೆ.

(ವಿಧಾನಸಭೆ ಕಲಾಪ, ಫೆಬ್ರವರಿ 21, 1986)

## ಪಟೇಲರು ಹೇಳಿದ ಕಥೆ

ಜನೋಪಕಾರಿ ವ್ಯಕ್ತಿ ಕಳ್ಳನಾದರೇನು? ಸುಳ್ಳನಾದರೇನು? ಸಾಕ್ಷಾತ್ ದೇವನೊಂದಿಗೆ ಇದ್ದರೂ ಇವನನ್ನೇ ಜನ ಆಯ್ಕೆ ಮಾಡುತ್ತಾರೆ ಎಂಬುದಕ್ಕೆ ಪಟೇಲರು ಹೇಳುತ್ತಿದ್ದ ಕಥೆ.

ಬೈಬಲ್‌ನಲ್ಲಿ ಈ ಉದಾಹರಣೆ ಬರುತ್ತದೆ. ಏಸುಕ್ರಿಸ್ತನನ್ನು ಶಿಲುಬೆಗೆ ಹಾಕುವಾಗ ಅವನೊಂದಿಗೆ ಒಬ್ಬ ಕಳ್ಳ ಮತ್ತು ಒಬ್ಬ ಕೊಲೆಗಾರನನ್ನೂ ಶಿಲುಬೆಗೆ ಏರಿಸಿರುವ ಕಾರ್ಯಕ್ರಮವಿರುತ್ತದೆ. ಆಗಿನ ಕಾನೂನಿನ ಪ್ರಕಾರ ಯಾರನ್ನಾದರೂ ಗಲ್ಲಿಗೆ ಹಾಕುವಾಗ ಜನರನ್ನು ಕೇಳಿ, ಜನರ ಒತ್ತಾಸೆಯ ಮೇಲೆ ಯಾರಾದರೊಬ್ಬನನ್ನು ಉಳಿಸುವ ಜೀವದಾನದ ಅಧಿಕಾರ ನ್ಯಾಯಾಧೀಶನಿಗಿರುತ್ತದೆ. ಅದರಂತೆ ನ್ಯಾಯಾಧೀಶ ಜನರನ್ನು ಕೇಳುತ್ತಾನೆ.

ಇಲ್ಲಿ ಏಸುಕ್ರಿಸ್ತನೂ ಇದ್ದಾನೆ, ಒಬ್ಬ ಕ್ರೂರಿಯೂ ಇದ್ದಾನೆ, ಮತ್ತೊಬ್ಬ ಕಳ್ಳನಿದ್ದಾನೆ, ಇವರಲ್ಲಿ ಯಾರನ್ನು ಗಲ್ಲು ಶಿಕ್ಷೆಯಿಂದ ಉಳಿಸಲಿ?

"ಕಳ್ಳನನ್ನು" ಎನ್ನುತ್ತಾರೆ ಜನ. ಕಳ್ಳ ಖುಲಾಸ್ ಆಗುತ್ತಾನೆ. ಕಳ್ಳನನ್ನೇಕೆ ಜನ ಆರಿಸಿದರು? ದಯಾಮೂರ್ತಿ ಏಸು ಇರಲಿಲ್ಲವೇ? ಅಂತಹ ಕರುಣಾಮಯಿಯನ್ನು ಬಿಟ್ಟು ಕಳ್ಳನನ್ನು ಆರಿಸುವ ಕಠಿಣ ಹೃದಯ ಜನರಲ್ಲೇಕೆ ಬಂತು - ಎಂದು ನೀವು ಪ್ರಶ್ನಿಸಬಹುದು.

ಉತ್ತರ ಇಲ್ಲಿದೆ: ಈ ಕಳ್ಳ ತಾನು ಕದ್ದ ಮಾಲಿನಲ್ಲಿ ಸುತ್ತಮುತ್ತಲಿನ ಜನಕ್ಕೂ ಒಂದಂಶ ದಾನ ಮಾಡುತ್ತಿರುತ್ತಾನೆ. ಸುಖ ದುಃಖವನ್ನು ಹಂಚಿಕೊಳ್ಳುತ್ತಾನೆ.

ಹೀಗೆ ಅನೂಚಾನವಾಗಿ, ಕಾರಣೇತರಗಳಿಂದ, ಅಜ್ಞಾನದಿಂದ, ಬಡತನದಿಂದ, ಅನಿವಾರ್ಯ ಕಾರಣಕ್ಕಾಗಿ ಜನ ಸಾಮಾಜಿಕ ಹಿಡಿತದಿಂದ ದಾರಿತಪ್ಪಿದ ಸಮಾಜ ಘಾತುಕನನ್ನು ಆಯ್ಕೆ ಮಾಡಿದರೆ ಅಚ್ಚರಿ ಇಲ್ಲ.

ಪ್ರಜಾತಂತ್ರದಲ್ಲಿಯೂ ಹೀಗೆಯೇ; ತೀರ್ಪಿತ್ತ ಜನರ ಮೂಲ ಭಾವನೆಗಳು ಒಮ್ಮೊಮ್ಮೆ ಬೇರೆ ಬೇರೆ ಕಾರಣಗಳಿಂದ ಪ್ರಭಾವಿತವಾಗಿದ್ದರೆ ಆಶ್ಚರ್ಯವಿಲ್ಲ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಜೂನ್ 30, 1978)

## ರಾಮ, ಕೃಷ್ಣ, ಪೈಗಂಬರ, ಕ್ರೈಸ್ಥ

ನಮ್ಮ ದೇವರುಗಳ ಕಲ್ಪನೆಯಲ್ಲಿ ಪ್ರಕೃತಿಯ ಬಗ್ಗೆ ಒಂದು ರೀತಿಯ ಧಾರ್ಮಿಕ ದೃಷ್ಟಿಯ ಭಾವನೆ ಇರುತ್ತದೆ. ನಾವು ತಿರುಪತಿ ಬೆಟ್ಟವನ್ನು ಕಲ್ಲುಗುಡ್ಡವೆಂದು ಪರಿಗಣಿಸುವುದಿಲ್ಲ, ತಿರುಪತಿಯನ್ನು ಒಂದು ಪವಿತ್ರ ಸ್ಥಳವೆಂದು ಹೇಳುತ್ತೇವೆ. ಗಂಗೆಯನ್ನು ಕೂಡ ಪವಿತ್ರವೆಂದು ಹೇಳುತ್ತೇವೆ. ಹಾಗೆಯೇ ಪ್ರತಿಯೊಂದಕ್ಕೂ ನಮ್ಮ ಕಲ್ಪನೆಗಳೇನಿವೆ, ಆ ಕಲ್ಪನೆಗಳೇ ನಮ್ಮ ಮಹಾ ಕಾವ್ಯಗಳು. ಮೈಥಾಲಜಿ, ರಾಮ, ಕೃಷ್ಣ, ಶಿವ, ಪೈಗಂಬರ, ಏಸುಕ್ರಿಸ್ತ ಇದ್ದರು. ಈ ಎಲ್ಲ ಮಹಾತ್ಮರು ಹುಟ್ಟಿದ, ಅವರು ಓಡಾಡಿದ ಸ್ಥಳಗಳು ಇವತ್ತು ಕೂಡ ನಮಗೆ ಪುಣ್ಯ ಸ್ಥಳಗಳು. ಆದರೆ ಈ ರಾಮ, ಕೃಷ್ಣ, ಶಿವ ಮಹಾ ಕಾವ್ಯದಲ್ಲಿ ಸೃಷ್ಟಿಯಾದ ವ್ಯಕ್ತಿಗಳು. They have themselves a different entity. ಭಾರತದಲ್ಲಿ ಅವನ್ನು ಹೇಳುವಾಗ ನಾವು, ರಾಮನ ಹೆಸರನ್ನು ಕೇಳದೇ ಇರುವವರು ಯಾರೂ ಇಲ್ಲ. ಹಳ್ಳಿಗಾಡಿನ ಜನ ಹಲವಾರು ವಿಧಾನದಿಂದ, ಮಾರ್ಗಗಳಿಂದ, ನಾಟಕವಿರಬಹುದು, ಪದಗಳಿರಬಹುದು, ಜಾನಪದವಿರಬಹುದು They are closer to our cultural India. Our Cultural India was so big.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಫೆಬ್ರವರಿ 27, 1997)

## ಭ್ರಷ್ಟಾಚಾರ ನಿಗ್ರಹಿಸಲು ಉಗ್ರನರಸಿಂಹ

ಈ ಭ್ರಷ್ಟಾಚಾರದ ಬಗ್ಗೆ ಬರೀ ಮಾತಾಗುತ್ತಿದೆ. ಬರೀ ಮಾತಾಗುತ್ತಿದೆ ಎಂದು ಮೊನ್ನೆ ಪ್ರಧಾನ ಮಂತ್ರಿಗಳ ಜೊತೆ ಮಾತನಾಡುವಾಗ ಹೇಳಿದೆ. ಪ್ರಹ್ಲಾದನ ಅಪ್ಪ ಹಿರಣ್ಯ ಕಶ್ಯಪು ಕೇಳಿದ. ದೇವರು ಎಲ್ಲಿದ್ದಾನೆ? ಎಲ್ಲಿದ್ದಾನೆ ಎಂದು ಕೇಳಿದ. ಹಾಗೆ ಇವತ್ತು ಭ್ರಷ್ಟಾಚಾರ ಎಲ್ಲಿದೆ ಎಲ್ಲಿದೆ ಎಂದು ಕೇಳಿದಂತಾಗಿದೆ. ಉಗ್ರ ನರಸಿಂಹ ಒಂದು ಸಾರಿ ಹೊರಗೆ ಬಂದನೆಂದರೆ ಆ ಕೋಪಕ್ಕೆ ಎಷ್ಟು ಜನ ಈಗಾಗಲೇ ಒಲಿಯಾಗುತ್ತಿದ್ದಾರೆ? ಈಗ ಜಪಾನಿನ ತನಾ-ಕಾವೆಗೆ ಎರಡು ವರ್ಷ ಶಿಕ್ಷೆಯಾಯಿತು, ಅವನು ರಾಜಕೀಯದಿಂದ ನಿವೃತ್ತನಾದ, ಗ್ರೀಸ್ ಪ್ರೆಸಿಡೆಂಟಿಗೂ ಅದೇ ರೀತಿಯಾಯಿತು. ಹಾಗೆ ಮೊನ್ನೆ ಬಾಂಗ್ಲಾ ದೇಶದ ಪ್ರೆಸಿಡೆಂಟ್ ಜಾಮೀನಿನ ಮೇಲೆ ಹೊರಗಡೆ ಬಂದರು. ಈ ರೀತಿಯಾದ ಸ್ಥಿತಿ ನಮ್ಮ ದೇಶದಲ್ಲಿ ಯಾವಾಗಲೂ ಬಂದಿರಲಿಲ್ಲ.

ಆನಂತರ ಬರು ಬರುತ್ತಾ ಈಗ ಎಲ್ಲರೂ ನಿರೀಕ್ಷಣಾ ಜಾಮೀನಿನ ಮೇಲೆ ಓಡಾಡುತ್ತಾರೆ. ಅದನ್ನು ಹೇಗೆ ಸರಿಪಡಿಸಬೇಕು?

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಫೆಬ್ರವರಿ 27, 1997)

## ಅರಮನೆಯನ್ನೇ ಮಾರಿದ ಕಂದಾಯ ಇಲಾಖೆ

ಪಟೇಲರು ಅಧಿಕಾರದಲ್ಲಿರುವ ಕಾಲ ಇದು. ಹಳೇ ರಾಜಮಹಾರಾಜರ ದರ್ಬಾರನ್ನು ನೆನಪಿಗೆ ತರುವಂತಹ ಆಡಳಿತ ನಡೆದಿದೆ. ರಾಜ್ಯದಲ್ಲಿನ ವಿಲೇಜ್ ಅಕೌಂಟೆಂಟ್‌ಗಳು, ರೆವಿನ್ಯೂ ಇನ್ಸ್‌ಪೆಕ್ಟರುಗಳು, ಕಂದಾಯ ಇಲಾಖೆ, ಸರಕಾರಿ ಯಂತ್ರ, ಸಚಿವ ಸಂಪುಟ ಇವರನ್ನು ನೋಡಿದರೆ ಕಥೆಯೊಂದು ನೆನಪಾಗುತ್ತದೆ.

ಒಬ್ಬ ರಾಜ ಇದ್ದನಂತೆ. ಅವನಿಗೆ ಕಿವಿ ಕೇಳುತ್ತಿರಲಿಲ್ಲ, ಬಹಳ ಹುಷಾರಿ ರಾಜ. ತನ್ನ ಹುಳುಕು ಯಾರಿಗೂ ತಿಳಿಯದಂತೆ ಜಾಗ್ರತೆ ವಹಿಸಿದ್ದ. ರಾಜ ಸಭೆ ನಡೆದಿದೆ. ರಾಜ ಸೇನಾಧಿಪತಿಯನ್ನು ಕೇಳಿದನಂತೆ " ನಮ್ಮ ಸೇನೆ ಹೇಗಿದೆ " ಸೇನಾಧಿಪತಿ ಕೊಂಚ ಸಂಕೋಚದಿಂದ ಹೇಳಿದನಂತೆ. " ಮಹಾಪ್ರಭು, ನಮ್ಮ ಸೇನೆ ಶತ್ರು ಸೇನೆಯನ್ನು ಕಂಡರೆ ಗಡಗಡನೆ ನಡುಗುತ್ತೆ". ಕಿವಿ ಕೇಳದ ರಾಜನಿಗೆ ಇದು ಅರ್ಥವಾಗುವುದಾದರೂ ಹೇಗೆ? ಆದರೆ ಸೋಗು ಹಾಕುವ ಬುದ್ಧಿ. ನಿನ್ನಂತಹ ಸೇನಾಧಿಪತಿಯನ್ನು ಪಡೆದ ನಾನೇ ಧನ್ಯ. ಸ್ಥಾನವನ್ನು ಅಲಂಕರಿಸು ಎಂದನಂತೆ. ಮತ್ತೊಬ್ಬನನ್ನು ಕೇಳಿದನಂತೆ. ಆತ ಕಂದಾಯ ಇಲಾಖೆ ಮುಖ್ಯಸ್ಥ 'ಕಂದಾಯ ಇಲಾಖೆಯನ್ನು ವಿವರಿಸುವಂತಹವನಾಗು' ಎಂದನಂತೆ ರಾಜ. 'ಏನೆಂದು ಬಣ್ಣಿಸಲಿ ಪ್ರಭು, ಯಾರು ಯಾರು ಅನುಭವದಲ್ಲಿದ್ದಾರೋ ಅವರನ್ನು ಬಿಟ್ಟು ಬೇರೆಯವರ ಹೆಸರಿಗೆ ಖಾತೆಯನ್ನು ಮಾಡಿಸಿಕೊಂಡು ನಾವೆಲ್ಲರೂ ಸುಖದಿಂದ್ದೀವೆ. ನಿಮ್ಮ ಅರಮನೆಯನ್ನು ಬೇರೆಯವರ ಹೆಸರಿಗೆ ಮಾರಿದ್ದೇವೆ. ಮಹಾಪ್ರಭೂ ಎಂದನಂತೆ.' ಮೂರ್ಖ ರಾಜ ಅದಕ್ಕೂ ಸಂತೋಷ ಪಟ್ಟನಂತೆ. ಹೀಗಾಗಿದೆ ನಮ್ಮ ಪರಿಸ್ಥಿತಿ.

(ಕೆ.ಎಸ್. ಪುಟ್ಟಣ್ಣಯ್ಯ, ವಿಧಾನಸಭೆ ಆಗಸ್ಟ್ 26, 1996)

## ಬಾಲಕೃಷ್ಣನ ಲೀಲೆ

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ):** ಮಾನ್ಯ ಸಭಾಧ್ಯಕ್ಷರೇ, ನಮ್ಮ ಜನರ ಅಭಿರುಚಿಗಳನ್ನು ಕರೆಕ್ಟಾಗಿ ಅರ್ಥ ಮಾಡಿಕೊಂಡಿರುವವರು ಈ ಸಿನಿಮಾ ಜಗತ್ತಿನವರು. ಹೀಗಾಗಿ ದುಡ್ಡು ಮಾಡುವುದಕ್ಕೆ ಮತ್ತು ಜನರನ್ನು ಮೆಚ್ಚಿಸುವುದಕ್ಕೆ ಚಿತ್ರರಂಗದವರು ಹಿಂಸೆ, ಲೈಂಗಿಕತೆ ಮತ್ತು ಭಕ್ತಿ ಪ್ರಚೋದನೆ ಎಂಬ ಮೂರು ವರ್ಗದ ಚಿತ್ರಗಳನ್ನು ತೆಗೆಯುತ್ತಾರೆ.

ಈ ಮೂರು ಬಗೆಯನ್ನು ವಿಮರ್ಶೆ ಮಾಡುವುದಾದರೆ ಭಕ್ತಿ ಪ್ರಚೋದಕ ಚಿತ್ರವಾದ "ಜೈ ಸಂತೋಷಿಮಾ" ಹತ್ತು ಕೋಟಿ ರೂಪಾಯಿಗಳಿಗೂ ಮೀರಿ ಲಾಭ ಗಳಿಸಿತು. ಅದಕ್ಕಿಂತಲೂ ಜಾಸ್ತಿ ಹಣವನ್ನು ಹಿಂಸಾ ಪ್ರಚೋದಕ ಚಿತ್ರವಾದ "ಶೋಲೆ" ಗಳಿಸಿತು. ಅದೇ ರೀತಿ ರಾಜಕಪೂರರ "ಬಾಬಿ" ಚಿತ್ರ ಇವೆರಡಕ್ಕಿಂತಲೂ ಹೆಚ್ಚು ಹಣ ಗಳಿಸಿತು. ಇದು ನಮ್ಮ ದೇಶದ ಜನರ ಮನಸ್ಸಿನಲ್ಲಿರತಕ್ಕ ಹಲವಾರು ಭಾವನೆಗಳ ಸತ್ಯದರ್ಶನ. ಇದು ನಮ್ಮ ಸಂಸ್ಕೃತಿ ಅಥವಾ ಇನ್ನೊಬ್ಬರ ಸಂಸ್ಕೃತಿ ಎಂದಲ್ಲ. ನಮ್ಮವನೇ ಆದ ಕೃಷ್ಣ ಬೇರೆಯವರ ಸೀರೆ ಕದ್ದು ಮರದ ಮೇಲೆ ಏತಕ್ಕೆ ಕುಳಿತಿದ್ದ?

**ಶ್ರೀಮತಿ ಗಜಾನನ ಶರ್ಮ:** ಮಾನ್ಯ ಸದಸ್ಯರು ಈ ವಿಷಯವನ್ನು ಇಷ್ಟು ಹಗುರವಾಗಿ ತೆಗೆದುಕೊಳ್ಳಬಾರದು.

**ಜೆ.ಹೆಚ್. ಪಟೇಲ್:** ಹಾಗಾದರೆ ಅಶ್ಲೀಲವೆಂದರೆ ಯಾವುದು?

**ಎಸ್.ವಿ. ನಾಯಕ್:** ಕೃಷ್ಣ ಬಾಲಕನಾಗಿದ್ದಾಗ ಹಾಗೆ ಮಾಡಿದ.

**ಜೆ.ಹೆಚ್. ಪಟೇಲ್:** ಬಾಲಕನಾಗಿದ್ದಾಗಲೇ ಅಷ್ಟು ಮಾಡಿರಬೇಕಾದರೆ ಇನ್ನು ವಯಸ್ಸಾದ ಮೇಲೆ ಇನ್ನೆಷ್ಟು ಮಾಡಿರಬೇಕೆಂದು ಲೆಕ್ಕ ಹಾಕಿ.

**ಅಜೀಜ್ ಸೇಠ್:** ಅದೇ ಈಗಿರುವ ವಿಷಯ.

(ವಿಧಾನಸಭೆ ಕಲಾಪ, ಜುಲೈ 31, 1980)

## ರಾಮು, ರಾವಣೇಶ್ವರರಿಗೆ ಸಿಕ್ಕ ಫಲ

**ಆರ್. ಗುಂಡೂರಾವ್ (ಮುಖ್ಯಮಂತ್ರಿ):** ಸದನದಲ್ಲಿ ಇನ್ನೂ ಒಂದು ವಿಷಯ ಹೇಳಿಬಿಡುತ್ತೇನೆ. ಯಾರು ಹೇಗೆ ತಿಳಿದುಕೊಂಡರೂ ಚಿಂತಿಲ್ಲ. ನನಗೆ ಪೂಜೆ, ಪುನಸ್ಕಾರ, ಜ್ಯೋತಿಷ್ಯ ಇವುಗಳಲ್ಲಿ ನಂಬಿಕೆ ಜಾಸ್ತಿ. ಇಲ್ಲಿರುವ ಶಾಸಕರಲ್ಲಿ ಪೂಜೆ ಪುನಸ್ಕಾರದಲ್ಲಿ ನಂಬಿಕೆ ಇಲ್ಲದವರು ಯಾರು ಇದ್ದಾರೆ ಹೇಳಿ? ಶಾಸ್ತ್ರೋಕ್ತವಾಗಿಯೇ ಸೇರಿಸಿಕೊಳ್ಳೋಣ.

ಮಾನ್ಯ ಪಟೇಲರಿಗೆ ಆ ಬಗ್ಗೆ ಆಸಕ್ತಿ ಇಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಆದರೆ ನಿಮ್ಮ ನಾಯಕರಾದ ಅರಸರಿಗೆ ಅದರ ಬಗ್ಗೆ ಜಾಸ್ತಿ ಆಸಕ್ತಿ ಇದೆ ಎಂಬುದು ನನಗೆ ಗೊತ್ತು.

ಹೇಗೆಂದರೆ, ನಾವೆಲ್ಲ ಒಟ್ಟಿಗೆ ಸೇರಿ ಪೂಜೆ ಮಾಡಿದ್ದೇವೆ. ನಾನೂ ಇಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಮತ್ತು ಅವರೂ ಸಹ ಇಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಪೂಜೆಯ ಫಲದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಆಗಿದ್ದರೆ ನಾವು ಅಡ್ಜಸ್ಟ್ ಮಾಡಿಕೊಳ್ಳೋಣ. ಆದರೆ ಮಾನ್ಯ ಕೆ.ಹೆಚ್. ಶ್ರೀನಿವಾಸ್‌ರವರಿಗೆ ಇನ್ನೂ ಆ ಫಲ ದೊರಕಿಲ್ಲ.

ಡಿ. ದೇವರಾಜ ಅರಸ್ (ವಿರೋಧಪಕ್ಷದ ನಾಯಕ): ರಾವಣೇಶ್ವರನಿಗೂ ಫಲ ದೊರಕಿತ್ತು.

ಆರ್. ಗುಂಡೂರಾವ್: ರಾಮನಿಗೂ ಫಲ ದೊರಕಿತ್ತು. ಇಲ್ಲವೆಂದು ಹೇಳುವುದಿಲ್ಲ. ಆದರೆ ಆ ಫಲ ತೆಗೆದುಕೊಳ್ಳುವುದಕ್ಕೆ ಏನು ಮಾಡಿದಿರಿ, ಎಷ್ಟು ಮಾಡಿದಿರಿ ಎಂದು ಕೇಳುವುದು ಸರಿಯಲ್ಲ.

ಡಿ. ದೇವರಾಜ ಅರಸ್: ಅದೆಲ್ಲ ನನಗೆ ಗೊತ್ತಿದೆ. ಸುಮ್ಮನೆ ಏತಕ್ಕೆ ಮಾತನಾಡುತ್ತೀರಿ?

ಆರ್. ಗುಂಡೂರಾವ್: ವಿರೋಧ ಪಕ್ಷದ ನಾಯಕರು ಸರ್ಕಾರ ಉತ್ತರ ಕೊಡುವಾಗ ಒಂದು ಗಳಿಗೆಯೂ ಸದನದಲ್ಲಿ ಇರುವುದಿಲ್ಲ. ಆಮೇಲೆ ಬರುತ್ತಾರೆ.

ಡಿ. ದೇವರಾಜ ಅರಸ್: ನಿಮಗೆ ಉತ್ತರ ಕೊಡುವ ಕಾಲ ಬಂದಾಗ ಕೊಡೋಣ.

ಆರ್. ಗುಂಡೂರಾವ್: ಈಗಲೇ ಕೊಡಿ.

ಡಿ. ದೇವರಾಜ್ ಅರಸ್: ಈಗ ನೀವು ಕೊಡುತ್ತೀರಿ, ಕೊಡಿ. ದೇವರು ಫಲವನ್ನು ಎಲ್ಲರಿಗೂ ಕೊಟ್ಟಿದ್ದಾನೆ. ರಾವಣೇಶ್ವರನಿಗೂ ಕೊಟ್ಟಿದ್ದ, ರಾಮನಿಗೂ ಕೊಟ್ಟಿದ್ದ. ಫಲ ಎಲ್ಲರಿಗೂ ಬರುತ್ತದೆ, ಹೋಗುತ್ತದೆ. ಈಗ ನಿಮಗೂ ಬಂದಿದೆ, ಮುಂದೆ ಹೋಗಬಹುದು.

(ವಿಧಾನಸಭೆ ಕಲಾಪ, ಮಾರ್ಚ್ 6, 1981)

## ಯೋಗಿ ವೇಮನ್ನ; ಅಕ್ಕಮಹಾದೇವಿ

ಕು. ಪ್ರಮೀಳ: ರಾಜ್ಯದಲ್ಲಿ ಹಿಂಸೆ, ಕ್ರೌರ್ಯ, ಅಶ್ಲೀಲತೆ ಮತ್ತು ದೌರ್ಜನ್ಯಗಳ ಪ್ರಚೋದನೆಗೆ ಕಾರಣವಾದ ಸಿನಿಮಾ ಭಿತ್ತಿ ಚಿತ್ರಗಳ ಅವಾಂತರ ಹೆಚ್ಚುತ್ತಿದ್ದು, ಹಲವಾರು ರೀತಿಯ ಅನಾಹುತಗಳಾಗುತ್ತಿವೆ. ದಯವಿಟ್ಟು ಸರ್ಕಾರ ಈ ದಿಶೆಯಲ್ಲಿ ಕಾರ್ಯಪ್ರವೃತ್ತವಾಗಬೇಕು.

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಮಾನ್ಯ ಸದಸ್ಯೆ ಪ್ರಮೀಳಾರವರು ಹೇಳಿದ ವಿಷಯವನ್ನು ಕುರಿತು ಒಂದೆರಡು ಮಾತು ಹೇಳಬೇಕೆನ್ನಿಸುತ್ತದೆ. ಸಮಾಜದ ಮೇಲೆ ವಿಕಾರವಾದ ಪ್ರಭಾವ ಬೀರತಕ್ಕ ಯಾವುದೇ ವಿಷಯ ಇದ್ದರೆ ಅದನ್ನು ಬಹಿಷ್ಕರಿಸುವುದು ಸರಿ. ವಿಕಾರ

ಪ್ರಭಾವ ಬೀರುವ ಭಿತ್ತಿಚಿತ್ರ ಏನಿದೆ ಅದು ಆಯಾ ಸಮಾಜದ ಮೌಲ್ಯಗಳ ಮೇಲೂ ಅವಲಂಬಿಸುತ್ತದೆ.

ಭಿತ್ತಿ ಚಿತ್ರಗಳನ್ನು ನೋಡುವಾಗ ಕೆಲವರ ದೃಷ್ಟಿಯಲ್ಲಿ ಅಶ್ಲೀಲ ಅನಿಸುವುದಿಲ್ಲ. ಈಗ ನಾವು ಯೋಗಿ ವೇಮಣ್ಣ ರೆಡ್ಡಿ ಕತೆಯನ್ನು ಕೇಳಿದ್ದೇವೆ. ವೇಮಣ್ಣ ರೆಡ್ಡಿ ಎಷ್ಟೇ ಪ್ರಯತ್ನ ಪಟ್ಟರೂ ಯೋಗಿ ಆಗಲು ಸಾಧ್ಯವಾಗಲಿಲ್ಲ. ಕೊನೆಗೆ ಹೆಂಡತಿಯ ಬಳಿ ಹೋಗುತ್ತಾನೆ. ಹೆಂಡತಿಯು ನೀನು ಹೆಣ್ಣಿನ ನಗ್ನತೆಯನ್ನು ನೋಡಿದರೆ ಸಾಧ್ಯವೆಂದು ಹೇಳಿ ಗಂಡನನ್ನು ಕಳುಹಿಸಿ ಕೊಡುತ್ತಾಳೆ. ಆಗ ಅವನು ಯೋಗಿ ಆಗುತ್ತಾನೆ.

ಯೋಗಿ ವೇಮಣ್ಣ, ಅಕ್ಕಮಹಾದೇವಿಯರಂತಹ ಮಹಾನ್ ಚೇತನಗಳು ಸಂಪೂರ್ಣ ನಗ್ನವಾಗಿ ಹಾದಿಯಲ್ಲಿ ಹೋದಾಗ ಯಾರೂ ಕಾಮದೃಷ್ಟಿಯಿಂದ ನೋಡುವುದಕ್ಕೆ ಆಗಲಿಲ್ಲ. ಅಕ್ಕಮಹಾದೇವಿಯವರು ಸ್ಪಷ್ಟವಾಗಿ ಹೇಳಿದ್ದಾರೆ. ಯಾರು ನನ್ನನ್ನು ಯಾವ ದೃಷ್ಟಿಯಿಂದ ನೋಡಿದರೆಂಬುದು ನನಗೆ ಮುಖ್ಯವಲ್ಲ. ದೇವರನ್ನು ಕಾಣಬೇಕೆನ್ನುವ ಗುರಿ ನನಗೆ ಮುಖ್ಯ. ಯಾರು ಯಾವ ದೃಷ್ಟಿಯಿಂದ ಬೇಕಾದರೂ ನೋಡಲಿ ಎಂದು ಹೇಳಿದ್ದಾರೆ. ನಾವು ಅಕ್ಕಮಹಾದೇವಿಯ ತರಹ ಓಡಾಡುವುದಕ್ಕಾಗುವುದಿಲ್ಲ, ಗೊಮ್ಮಟನ ತರಹ ನಿಲ್ಲುವುದಕ್ಕಾಗುವುದಿಲ್ಲ. ಒಂದು ಮಿತಿ ಇರಬೇಕು. ಹೇಗೆ ಎಲ್ಲಿಯವರೆಗೆ ಮುಚ್ಚಬೇಕು, ಎಲ್ಲಿಯವರೆಗೆ ತೆರೆದಿರಬೇಕು, ಈ ವಿಷಯದಲ್ಲಿ ಒಂದು ಹದ್ದುಬಸ್ತು ಇರಬೇಕು. ಅದನ್ನು ನಾನು ಒಪ್ಪುತ್ತೇನೆ.

ಮಳ್ಳೂರು ಆನಂದರಾವ್: ಬೆಂಗಳೂರು ನಗರದಲ್ಲಿ ಆ ರೀತಿ ಚಿತ್ರಗಳನ್ನು ತೆಗೆಯಲಿಕ್ಕೆ ಅವಕಾಶ ಕೊಡಬಾರದು. ಈ ರೀತಿ ಚಿತ್ರಗಳನ್ನು ತೆಗೆಯಲಿಕ್ಕೆ ವಿವಿಧ ಭಂಗಿಗಳಲ್ಲಿ ಪೋಸ್ ಕೊಡುವವರು ಯಾರು? ಮಹಿಳಾ ಸಮಾಜಗಳಲ್ಲಿ ಜಾಗೃತಿ ಏರ್ಪಾಡು ಆಗಬೇಕು. ಸ್ತ್ರೀಯರಿಗೆ ನಿಮ್ಮನ್ನು ಶೋಷಿಸಲು ಅವಕಾಶ ಕೊಡಬೇಡಿ, ಇಂತಹದನ್ನು ಪ್ರದರ್ಶಿಸಬೇಡಿ ಎಂದು ಹೇಳಬೇಕು.

ಶೀರನಾಳಿ ಚಂದ್ರಶೇಖರ್: ಅಧ್ಯಕ್ಷರೇ, ಮಾನ್ಯ ಸದಸ್ಯರೊಬ್ಬರು ನಮ್ಮ ದೇಶದ ಸಂಸ್ಕೃತಿ ವಿರುದ್ಧ ಚಿತ್ರಗಳು ಬರುತ್ತಿವೆ ಎಂದು ಹೇಳಿದರು. ನಮ್ಮ ಸಂಸ್ಕೃತಿ ಪುರಾತನವಾದ ಸಂಸ್ಕೃತಿ. ಸುಮಾರು 5 ಸಾವಿರ ವರ್ಷದ ಹಿಂದಿನಿಂದಲೂ ಎಲ್ಲಾ ನಡೆದುಕೊಂಡು ಬಂದಿದೆ, ಕುಜರಾಹೋ ದೇವಸ್ಥಾನಗಳನ್ನು ನೋಡಿದರೆ ಮಾನ್ಯ ಸದಸ್ಯರಿಗೆ ಅರ್ಥವಾಗುತ್ತದೆ.

ಜೆ.ಹೆಚ್. ಪಟೇಲ್: ಅಧ್ಯಕ್ಷರೇ, ಮಾನ್ಯ ಸದಸ್ಯರು ಮಾತನಾಡುತ್ತಾ ಇರುವುದನ್ನು ನೋಡಿದರೆ, ದ್ರೌಪದಿ ವಸ್ತ್ರಾಪಹರಣವಾದಾಗ ಇವರು ಅಲ್ಲಿಯೇ ಇದ್ದರು ಎನ್ನುವ ಹಾಗೆ ಹೇಳುತ್ತಿದ್ದಾರೆ.

ಎಸ್.ಎಂ. ಶೀರನಾಳಿ ಚಂದ್ರಶೇಖರ್: ಅಧ್ಯಕ್ಷರೇ, ಪ್ರತಿಯೊಬ್ಬರೂ ನೋಡತಕ್ಕ ದೃಷ್ಟಿಯನ್ನು ಅವಲಂಬಿಸಿ ಈ ಪ್ರಶ್ನೆಗೆ ಉತ್ತರ ಸಿಗುತ್ತದೆ. ಭಗವಾನ್ ಬಾಹುಬಲಿಯನ್ನು ನೋಡತಕ್ಕ ದೃಷ್ಟಿಕೋನವೇ ಬೇರೆ.

(ವಿಧಾನಸಭೆ ಕಲಾಪ, ಮಾರ್ಚ್ 23, 1981)

## 'ಮುನಿಸುಕೊಳ್ಳುವ ದೂರ್ವಾಸ'

ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ): ಪಾರ್ಲಿಮೆಂಟರಿ ಪ್ರಾಕ್ಟೀಸ್‌ನಲ್ಲಿ ನಮ್ಮೆಲ್ಲರಿಗೂ ಚೆನ್ನಾಗಿ ಅನುಭವ ಇದೆ. ಒಂದೊಂದು ಸಾರಿ ಇಲ್ಲಿ ಮಾತುಗಳು ಸ್ವಲ್ಪ ಅತಿರೇಕಕ್ಕೆ, ಆವೇಶಕ್ಕೆ ಹೋಗುತ್ತವೆ. ಹಾಗೆಂದು ಯಾರೂ ಹೆಂಗಸರ ತರಹ ಮುನಿಸಿಕೊಳ್ಳುವುದು ಬೇಡ. ನೀವು ಏನು ಕೇಳಿದರೂ ಉತ್ತರ ಕೊಡುವುದಕ್ಕೆ ನಾವು ತಯಾರಿದ್ದೇವೆ.

ಶ್ರೀಮತಿ ಬಿ.ಟಿ. ಲಲಿತಾನಾಯಕ್: ಮಾನ್ಯ ಅಧ್ಯಕ್ಷರೇ, ದಯವಿಟ್ಟು ಹೆಂಗಸರ ಬಗ್ಗೆ ಆ ರೀತಿಯ ಪದಗಳನ್ನು ಬಳಸಬಾರದು. 'ಹೆಂಗಸರ ತರಹ ಸಿಟ್ಟು' ಎನ್ನುವುದು ಸರಿಯಲ್ಲ.

ಸಭಾಧ್ಯಕ್ಷರು (ಮಾನ್ಯ ರಮೇಶ್‌ಕುಮಾರ್): ಹೆಂಗಸರ ಸುದ್ದಿ ಬಂದ ಕೂಡಲೇ ಚರ್ಚೆ ಬೇರೆಡೆಗೆ ತಿರುಗುತ್ತದೆ.

ಜೆ.ಹೆಚ್. ಪಟೇಲ್: ವಿನಾಕಾರಣ ಯಾರೂ ನಾನು ಆಡಿದ ಮಾತನ್ನು ಅಪಾರ್ಥ ಮಾಡಿಕೊಳ್ಳಬಾರದು. ನಾನು ಹೇಳಿದ್ದಿಷ್ಟು. ಸಾಮಾನ್ಯ ಸಂದರ್ಭದಲ್ಲಿ ಅನಗತ್ಯವಾಗಿ ಬಹಳ ಕೋಪ ಬೇಗ ಬಂದಿದೆ ಎನ್ನುವುದಕ್ಕೆ ಹೆಂಗಸರು ಮುನಿಸಿಕೊಂಡಂತೆ ಮುನಿಸಿಕೊಳ್ಳುತ್ತಾರೆ ಎನ್ನುತ್ತಾರೆ. ಅದು ಗಾದೆ ಮಾತು.

ಶ್ರೀಮತಿ ಬಿ.ಟಿ. ಲಲಿತಾನಾಯಕ್: ಬೇಕಾದರೆ ದೂರ್ವಾಸ ಮುನಿಯ ತರಹದ ಸಿಟ್ಟು ಎಂದು ಹೇಳಿ.

ಜೆ.ಹೆಚ್. ಪಟೇಲ್: ನಿಮ್ಮ ಮನೆಯವರು ಮುನಿಸಿಕೊಳ್ಳುವುದಿಲ್ಲವೇ? ಆ ತರಹ. 'ಹೆಂಗಸರ ಸಿಟ್ಟು' ಎಂದು ನಾನು ಒಮ್ಮೆ ಹೇಳಿದ್ದರಿಂದ ಮಾನ್ಯ ಖರ್ಗೆಯವರು ಆ ಬಗ್ಗೆ ಆಕ್ಷೇಪಣೆ ಎತ್ತಿದರು. ನಾನು ಆ ರೀತಿ ಹೇಳಿದ ತಕ್ಷಣ ಅದು ಹೆಂಗಸರಿಗೆ ಅವಮಾನ ಮಾಡಿದಂತಾಗಲಿಲ್ಲ. ಹೆಂಗಸರು ಗುಣದಲ್ಲಿ ಗಂಡಸಿಗಿಂತ ಸಾವಿರಪಾಲು ವಾಸಿ. ತಾಳ್ಮೆಯಲ್ಲಿಯೂ ಅಷ್ಟೇ. ನಮಗಿಂತ ನೀವೇ ಮೇಲು.

(ವಿಧಾನಸಭೆ ಕಲಾಪ, ಮಾರ್ಚ್ 7, 1996)

## 11 ದಿನದ ಪ್ರಧಾನಿ ವಾಜಪೇಯಿ; ಒಂದು ಇತಿಹಾಸ

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಯಾವ ಯಾವ ರಥದಲ್ಲಿ ಯಾವ ಯಾವ ಗಾಲಿಗಳಿವೆ, ಯಾವ ಯಾವ ರಥವನ್ನು ಯಾವ ಯಾವ ಕುದುರೆಗಳು ಎಳೆಯುತ್ತಿವೆ, ಎಂಬುದನ್ನು

ನೋಡಿ. ಇದು ಹಿಂದಿನ ರಾಮಾಯಣ, ಮಹಾಭಾರತದ ಕಥೆ ಬೇರೆ. ಈಗಿರತಕ್ಕ ರಥದ ಗಾಲಿಗಳೇ ಬೇರೆ. ಕುದುರೆಗಳ ಬಣ್ಣವೇ ಬೇರೆ. ಒಂದೊಂದು ರಥವೂ ಒಂದೊಂದು ದಾರಿಯಲ್ಲಿ ಹೋಗುತ್ತಿವೆ. ಯಾವ ರಥದಲ್ಲಿ ಯಾರು ಬಹಳ ಹೊತ್ತು ಇದ್ದರು, ಯಾರು ಕಡಿಮೆ ಹೊತ್ತು ಇದ್ದರು. ಯಾರ ರಥದ ಗಾಲಿ ಎಲ್ಲಿ ಬಿತ್ತು ಎಂಬುದನ್ನು ಇತಿಹಾಸ ಹೇಳುತ್ತದೆ. ಅದನ್ನು ನಾವೂ, ನೀವೂ ಹೇಳುವುದಲ್ಲ.

ವೈಯಕ್ತಿಕವಾಗಿ ಹೇಳುವುದಾದರೆ ಮಾನ್ಯ ಅಟಲ್ ಬಿಹಾರಿ ವಾಜಪೇಯಿಯವರಂಥ ರಾಷ್ಟ್ರೀಯ ನಾಯಕರು ಕೇವಲ 11 ದಿವಸ ಮಾತ್ರ ಪ್ರಧಾನಿಯಾಗಿದ್ದರು. ಅದು ಇತಿಹಾಸ. There are certain situations in history which man has never been able to foresee, otherwise he would be God. ಆದ್ದರಿಂದಲೇ ಭವಿಷ್ಯದ ಗರ್ಭದಲ್ಲಿ ಏನಿದೆ ಎಂದು ಹೇಳುವುದು ಕಷ್ಟ.

ಜಿ.ವಿ. ಶ್ರೀರಾಮರೆಡ್ಡಿ: ಒಂದೆರಡು ಸ್ಪಷ್ಟೀಕರಣ ಕೇಳುತ್ತೇನೆ. ಮಾನ್ಯ ಮುಖ್ಯಮಂತ್ರಿಗಳು ಹೇಳುವಾಗ ಬ್ರಾಹ್ಮಣ ಮತ್ತು ಮಹಾ ಬ್ರಾಹ್ಮಣ ಎಂದರೆ ವಶಿಷ್ಠರು, ಕೌಶಿಕರು ಎಂದು ಹೇಳಿದರು. ಆದರೆ ಅದು ಮಿಸ್ ಇಂಟ್ರೆಪ್ರಿಟ್ ಆಗಿದೆ. ಮುಖ್ಯಮಂತ್ರಿಗಳು ಹೇಳಿದ್ದರಲ್ಲಿ ವ್ಯತ್ಯಾಸವಿದೆ. ಬ್ರಾಹ್ಮಣ, ಮಹಾ ಬ್ರಾಹ್ಮಣ ಎಂದು ಅದು ಅಲ್ಲ. ಮಹರ್ಷಿ ಆದದ್ದು ವಿಶ್ವಾಮಿತ್ರ ಇಂತಹ ಪರಿಸ್ಥಿತಿಯಲ್ಲಿ. ಮನಷ್ಯನೊಬ್ಬ ಅಜ್ಞಾನದಿಂದ ಹೊರಬಂದು ಜ್ಞಾನವನ್ನು ಸಂಪಾದನೆ ಮಾಡಲಿಕ್ಕೆ ಮಾಡಿದಂತಹ ಪ್ರಯತ್ನ ಇದು. ಕ್ಯಾಸ್ಟ್‌ಗೆ ಬದಲಾವಣೆ ಮಾಡಿದಂತಹ ಇತಿಹಾಸವೇ ಭಾರತದ ದುರಂತದ ಇತಿಹಾಸ. ಎರಡನೆಯದು Caste is immobile. It is right. But class is mobile. ಇನ್ನೊಂದು ಯಾವುದೆಂದರೆ A class is having two faces. One class controls the means of production and another class does not have any means of production. ಆ ಕ್ಲಾಸ್ ಬಗ್ಗೆ ಪಟೇಲರು ಏನೂ ಹೇಳಲಿಲ್ಲ.

(ವಿಧಾನಸಭೆ ಕಲಾಪ, ಆಗಸ್ಟ್ 7, 1996)

## ಮೂಢನಂಬಿಕೆ ಮತ್ತು ಚಾಮರಾಜನಗರ

ಮಲ್ಲಿಕಾರ್ಜುನ ಖರ್ಗೆ (ಪ್ರತಿಪಕ್ಷದ ನಾಯಕರು): ಚಾಮರಾಜನಗರಕ್ಕೆ ಯಾರೂ ಹೋಗುವುದಿಲ್ಲ. ಅಲ್ಲಿಗೆ ಹೋದರೆ ಅಧಿಕಾರ ಕಳೆದುಕೊಳ್ಳುತ್ತೇವೆಂಬ ಉದ್ದೇಶದಿಂದ ಬಹಳಷ್ಟು ಜನ ಅಧಿಕಾರಸ್ಥರು ಅಲ್ಲಿಗೆ ಹೋಗುವುದು ಬೇಡ ಎನ್ನುತ್ತಾರೆ.

ವಾಟಾಳ್ ನಾಗರಾಜ್: ನಾನು ಚಾಮರಾಜನಗರಕ್ಕೆ ಬೈರೇಗೌಡರನ್ನು ಹಾಗೂ ಚಂದ್ರೇಗೌಡರನ್ನು ಕರೆದುಕೊಂಡು ಹೋಗಿದ್ದೇನೆ. ಚಾಮರಾಜನಗರ ಪವಿತ್ರ ಸ್ಥಳ.

**ಅಧ್ಯಕ್ಷರು (ರಮೇಶ್‌ಕುಮಾರ್):** ಈಗ ಮಲ್ಲಿಕಾರ್ಜುನ ಖರ್ಗೆಯವರು ಹೇಳಿದ್ದು ಸತ್ಯವೆಂದು ಮನದಟ್ಟಾಯಿತು. ತಾವು ಮಾತನಾಡುತ್ತಾ ಚಾಮರಾಜನಗರಕ್ಕೆ ಚಂದ್ರೇಗೌಡರು ಹಾಗೂ ಬೈರೇಗೌಡರು ಇಬ್ಬರೂ ಬಂದಿದ್ದರೆಂದು ಹೇಳಿದ್ದಿರಲ್ಲಾ. ಈಗ ಅವರಿಬ್ಬರ ಸ್ಥಿತಿ ಏನೆಂದು ನನಗೆ ಗೊತ್ತಿದೆ.

**ವಾಟಾಳ್ ನಾಗರಾಜ್:** ಚಾಮರಾಜನಗರಕ್ಕೆ ಮುಖ್ಯಮಂತ್ರಿಗಳಾದ ಪಟೇಲರು ಬಂದೇ ಬರುತ್ತಾರೆ, ಇದರಲ್ಲಿ ನೀವೇನೂ ಅನುಮಾನ ಪಡಬೇಡಿ.

**ಕಾಗೋಡು ತಿಮ್ಮಪ್ಪ:** ಇದುವರೆವಿಗೂ ಮುಖ್ಯಮಂತ್ರಿಗಳು ಚಾಮರಾಜನಗರಕ್ಕೆ ಬಂದಿದ್ದಾರೆಯೇ?

**ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):** ಕಾಗೋಡು ತಿಮ್ಮಪ್ಪನವರೇ, ಚಾಮರಾಜನಗರದಲ್ಲಿ ಯಾವುದೇ ಸಮಾರಂಭ ಮಾಡಿಲ್ಲ. ಆದರೆ, ನಾನು ಚಾಮರಾಜನಗರಕ್ಕೆ ಹೋಗಿ ಬಂದಿದ್ದೇನೆ.

**ಕಾಗೋಡು ತಿಮ್ಮಪ್ಪ:** ಚಾಮರಾಜನಗರ ಹೊಸ ಜಿಲ್ಲೆಯಾಗಿ ರಚನೆಯಾದ ನಂತರ ಉದ್ಘಾಟನಾ ಸಮಾರಂಭವನ್ನು ಚಾಮರಾಜನಗರದಲ್ಲಿಯೇ ಮಾಡಬೇಕಾಗಿತ್ತು. ಮಲೆ ಮಹದೇಶ್ವರ ಬೆಟ್ಟದಲ್ಲಿ ಮಾಡಿದ ಉದ್ದೇಶವೇನು?

**ವಾಟಾಳ್ ನಾಗರಾಜ್:** ಮಲೆ ಮಹದೇಶ್ವರ ಬೆಟ್ಟದಲ್ಲಿ ಉದ್ಘಾಟನಾ ಸಮಾರಂಭವನ್ನು ಮಾಡಿದ ಉದ್ದೇಶವೇನೆಂದರೆ, ಮಹದೇಶ್ವರರ ಆಶೀರ್ವಾದ ಪಡೆದು ಹೊಸದಾಗಿ ಏಳು ಜಿಲ್ಲೆಗಳನ್ನು ಆರಂಭಿಸಬೇಕೆಂಬ ಕಾರಣಕ್ಕಾಗಿ ಸಮಾರಂಭವನ್ನು ಅಲ್ಲಿ ನಡೆಸಲಾಯಿತು.

**ಕಾಗೋಡು ತಿಮ್ಮಪ್ಪ:** ಹೊಸ ಜಿಲ್ಲೆಯನ್ನು ಉದ್ಘಾಟನೆ ಮಾಡುವುದು ಜಿಲ್ಲಾ ಕೇಂದ್ರದಲ್ಲೋ ಅಥವಾ ಮಹದೇಶ್ವರ ಬೆಟ್ಟದಲ್ಲೋ?

**ಜೆ.ಹೆಚ್. ಪಟೇಲ್:** ಚಾಮರಾಜನಗರಕ್ಕೆ ಹೋದ ಮುಖ್ಯಮಂತ್ರಿಗಳು ಸ್ಥಾನವನ್ನು ಕಳೆದುಕೊಳ್ಳುತ್ತಾರೆ ಎಂದು ಹೇಳುತ್ತಿದ್ದಾರೆ. ಹಾಗೇನಾದರೂ ಇದ್ದಲ್ಲಿ ನಾನು ಅಲ್ಲಿಗೆ ಹೋಗಿಯೇ ಹೋಗುತ್ತೇನೆ.

(ವಿಧಾನಸಭೆ ಕಲಾಪ, ಮಾರ್ಚ್ 11, 1999)

**ಮೇಲು ಕೀಳೆಂಬ ಭೇದ ಅರಿಯದವರು**

ನುಡಿದಂತೆ ನಡೆಯುವುದು ಸುಲಭದ ಮಾತಲ್ಲ. ಅಣ್ಣ ಬಸವಣ್ಣನವರು ಹೇಳಿರುವುದನ್ನು ನಾವೂ ಹೇಳುತ್ತೀವೆಯೇ ವಿನಃ ಕೃತಿಯಲ್ಲಿ ತರುತ್ತಿಲ್ಲ. ನಾನು ಕಂಡ ಪಟೇಲರು ನುಡಿದಂತೆ ನಡೆದವರು. ಅವರ ಸೊಸೆ ಹಿಂದುಳಿದ ಜಾತಿಯವರು. ಪಟೇಲರು ಆಕೆಯನ್ನು ಒಡಲಲ್ಲಿ ಹುಟ್ಟಿದ ಮಗಳಿನಂತೆ ನೋಡಿಕೊಳ್ಳುತ್ತಿದ್ದರು. ಹುಟ್ಟಿನಲ್ಲಿ ಮತ್ತು ಬಾಳ್ವೆಯಲ್ಲಿ ಮೇಲುಕೀಳೆಂಬ ಬೇಧಭಾವ ಬೇಡವೆಂದು ಸದನದಲ್ಲಿ ಹೇಳುವ ಮುನ್ನ ನಿಜ ಜೀವನದಲ್ಲಿ ಈ ತತ್ವವನ್ನು ಅಳವಡಿಸಿಕೊಂಡವರು ಪಟೇಲರು.

(ಎಸ್.ಎಸ್. ಪಾಟೀಲ (ಮುಂಡರಗಿ) ವಿಧಾನಸಭೆ ಫೆಬ್ರವರಿ 27, 2001)

# 13

# 'ಕನ್ನಡಕ್ಕಾಗಿ ಕೈ ಎತ್ತು'

## ಜನಮನದ ಭಾಷೆಗಾಗಿ ಪಟೇಲರ ಚಳುವಳಿ

ಜನಮನದ ಭಾಷೆಯ ಆಧಾರದ ಮೇಲೆ ದೇಶದಲ್ಲಿ ರಾಜ್ಯಗಳು ಪುನರ್‌ವಿಂಗಡಣೆಯಾದಾಗ 1956ರಲ್ಲಿ ಅಸ್ತಿತ್ವಕ್ಕೆ ಬಂದಿತು ಕರ್ನಾಟಕ ರಾಜ್ಯ. ಆಡಳಿತದಲ್ಲಿ ಜನರಿಗೆ ಸಮೀಪವಾದ ಭಾಷೆಯನ್ನು ಬಳಸುವ ವಿಷಯ ದೇಶದ ಉಳಿದ ರಾಜ್ಯಗಳಲ್ಲಿ ಒಂದು ಸಮಸ್ಯೆಯೇ ಅನಿಸಲಿಲ್ಲ. ಭಾರತದ ಯಾವುದೇ ವಿಧಾನ ಮಂಡಲ ಆಡಳಿತ ಭಾಷೆಯ ಬಗೆಗೆ ಕರ್ನಾಟಕ ಪಟ್ಟ ಬವಣೆಯನ್ನು ಎದುರಿಸದಿರುವ ಅಂಶ ದೇಶದ ಸಂಸದೀಯ ಇತಿಹಾಸದಿಂದ ಸ್ಪಷ್ಟವಾಗುತ್ತದೆ.

ಜನಪ್ರತಿನಿಧಿಯಾಗಿ ಜೆ.ಹೆಚ್. ಪಟೇಲರು ಬಹುಶ್ರದ್ಧೆಯಿಂದ ಕೈಗೆತ್ತಿಕೊಂಡ ಸಾಮಾನ್ಯ ಜನರ ಸಮಸ್ಯೆ - ಕನ್ನಡ.

1967-70ರ ಅವಧಿಯ ನಾಲ್ಕನೆಯ ಲೋಕಸಭೆಯಲ್ಲಿ ಪಟೇಲರು ಕನ್ನಡದಲ್ಲಿ ಮಾತನಾಡಿದ್ದು ಜನನಾಡಿಯ ಮಿಡಿತವನ್ನು ವ್ಯಕ್ತಪಡಿಸಲು ಅವರೇ ನಡೆಸಿದ ಹೋರಾಟದ ಕುರುಹು. ಇದಕ್ಕಾಗಿ ಅವರು ಸಂಸತ್ತಿನಲ್ಲಿ ತೀವ್ರ ಆಂದೋಲನವನ್ನೇ ನಡೆಸಬೇಕಾಯಿತು. ಭಾಷೆಯ ನಿಸ್ಸಂಕೋಚ ಬಳಕೆಗೆ ಪ್ರಚಾರವಿಲ್ಲದ ಚಳುವಳಿ ನಡೆಸಿದ ರಾಷ್ಟ್ರಮಟ್ಟದ ಜನನಾಯಕರಲ್ಲಿ ಪಟೇಲರೇ ಮೊದಲಿಗರು. ಇದು ಜನಾಭಿಪ್ರಾಯಕ್ಕೆ ಪಟೇಲರ ಸಂಸದೀಯ ಕೊಡುಗೆ.

ರಾಷ್ಟ್ರದ ಹಿರಿಯ ರಾಜಕಾರಣಿ ಮಧುಲಿಮಯೆಯವರು ಪಟೇಲರು ಪಾರ್ಲಿಮೆಂಟಿನಲ್ಲಿ ಕನ್ನಡದಲ್ಲಿ ಮಾತನಾಡುವ ದೀಕ್ಷೆತೊಟ್ಟಾಗ ಅವರ ನಿರ್ಧಾರಕ್ಕೆ ಆಸರೆಯಾಗಿ ನಿಂತವರು. ಜೊತೆ ಇದ್ದವರು. ಕನ್ನಡದ

ಪರಿಚಯವೇ ಇಲ್ಲದ ಮಧುಲಿಮೆಯೆಯವರಿಗೆ ಜನರಾಡುವ ಭಾಷೆಯಲ್ಲಿ ಸಂಸದೀಯ ಕಲಾಪಗಳನ್ನು ನಡೆಸುವುದು ಮಹಾಪರಾಧವೇನಲ್ಲ ಎಂಬ ಪಟೇಲರ ವಾದ ಬಹುವಾಗಿ ಹಿಡಿಸಿತು. ಇಂಗ್ಲೀಷಿನಲ್ಲಿ ವ್ಯವಹರಿಸುವ ದಾಸ್ಯಕ್ಕೆ ಜೋತುಬಿದ್ದ ಪಾರ್ಲಿಮೆಂಟಿಗೆ ಕನ್ನಡಪದಗಳು ಹಿತವಾಗಬಾರದೇಕೆ? ಪಟೇಲರ ಪರವಾಗಿ ಸಂಸದೀಯ ಪಟು ಮಧುಲಿಮೆಯ ವಾದ ಮಾಡಿದ ಭಾಷಣದ ಕೆಲ ಮಾತುಗಳು ಲೋಕಸಭೆಯಲ್ಲಿ ಉಲ್ಲೇಖಾರ್ಹವಾಗಿವೆ.

"ಇಂದಿನ ಸಮಾವೇಶದಲ್ಲಿ ಲೋಕಸಭೆಗೆ ಕನ್ನಡ ಎಂಬ ಭಾಷೆಯೊಂದಿದೆ ಎಂದು ಪರಿಚಯಿಸಿದವನೇ ಈತ. ಈತ ಹಠಮಾರಿಯಲ್ಲ. ಭಾರತದ ಒಂದು ಅಂಗವಾದ ಕರ್ನಾಟಕದ ಜನಸಾಮಾನ್ಯರ ಆಶೋತ್ತರಗಳನ್ನು, ಅವರಾಡುವ ಭಾಷೆಯಲ್ಲಿ ತಿಳಿಸಿ, ಸಂಸದೀಯ ಕಲಾಪಗಳು ಜನಮನದ ಸ್ಪಂದನೆ ಆಗಬೇಕೆಂಬ ಹಿರಿಯಾಸೆಯವ. ಈತನ ಅಭಿಲಾಷೆ, ನಾವೆಲ್ಲರೂ ಅನುಮೋದಿಸಲೇಬೇಕಾದ ಸಂಸದೀಯ ಹಕ್ಕು".

(ಲೋಕಸಭೆ ಕಲಾಪ, ಮಾರ್ಚಿ 30, 1967)

ದೂರದ ದಿಲ್ಲಿಯಲ್ಲಿರುವ ಸಂಸತ್ತಿನಲ್ಲಿ ಕನ್ನಡ ಭಾಷೆಗಾಗಿ ಹೋರಾಟ ನಡೆಸಿದ ಪಟೇಲರಿಗೆ ವಿಧಾನಸಭೆಗೆ ಆರಿಸಿ ಬಂದ ಬಳಿಕ ರಾಜ್ಯದ ರಾಜಧಾನಿ ಬೆಂಗಳೂರಿನಲ್ಲಿ ಅಧಿಕೃತ ವ್ಯವಹಾರದಲ್ಲಿ ಕನ್ನಡದ ಬಳಕೆ ಬಗೆಗೆ ಕಂಡು ಬಂದ ನಿರುತ್ಸಾಹ, ತಾತ್ಸಾರ, ಸ್ವಾಭಿಮಾನರಹಿತ ಪರಿಸರ, ಇಂಗ್ಲೀಷ್ ಬಗೆಗಿನ ಕುರುಡು ವ್ಯಾಮೋಹ, ಬುದ್ಧಿಜೀವಿಗಳ ದ್ರೋಹ ಕಂಡು ಅಪಾರ ನೋವಾಯಿತು. 1978-1983ರ ಅವಧಿಯ ವಿಧಾನಸಭೆಯ ಅವರ ಭಾಷಣಗಳಲ್ಲಿ ಈ ನೋವು ಸ್ಪಷ್ಟವಾಗಿ ಎದ್ದು ಕಾಣುತ್ತದೆ.

ಐದು ಕೋಟಿ ಕನ್ನಡಿಗರ ಭಾಷೆ ಕನ್ನಡ. ಇದೊಂದು ಸಮೃದ್ಧ ಸಂಪದ್ಭರಿತ ಭಾರತೀಯ ಭಾಷೆ. ಕನ್ನಡ ಮಾತನಾಡುವ ಜನ ಸಹನಾಶೀಲರು. ಈ ಗುಣ ಅವರ ಹೆಗ್ಗಳಿಕೆಯೂ ಹೌದು; ದೋಷವೂ ಹೌದು. ಸೌಜನ್ಯ, ವಿನಯ ಮತ್ತು ಸಹಿಷ್ಣುತೆಯನ್ನು ಮೈಗೂಡಿಸಿಕೊಂಡ ಕನ್ನಡಿಗರು ಸ್ವಾಭಿಮಾನವನ್ನು ಮರೆತರಲ್ಲಾ ಎಂದು ಜೀವನವಿಡೀ ಪರಿತಪಿಸಿದವರು ಪಟೇಲರು.

ಸಂಸತ್ತು ಮತ್ತು ವಿಧಾನ ಮಂಡಲಗಳಲ್ಲಿನ ಅವರ ಭಾಷಣ ಮತ್ತು ಚರ್ಚೆಗಳನ್ನು ಅವಲೋಕಿಸಿದರೆ ಆಡಳಿತ ಭಾಷೆಯಾಗಿ ಕನ್ನಡ ನಿರೀಕ್ಷಿತ ಮಟ್ಟದಲ್ಲಿ ಬೆಳೆಯದಿರಲು ಪಟೇಲರು ಲೋಪದೋಷಗಳ ಪಟ್ಟಿಯೊಂದನ್ನು ಮಾಡಿದಂತೆ ಕಾಣುತ್ತದೆ. ಅವರ ಮುಖ್ಯ ವಿಚಾರಗಳು ಹೀಗಿದ್ದವು:

* ರಾಜಧಾನಿಯಾದ ಬೆಂಗಳೂರಿನಲ್ಲಿ ಕನ್ನಡ ಬೆಳಸಬೇಕೆಂಬ ಸಂಘಟಿತ ಪ್ರಯತ್ನವಿಲ್ಲ. ಸಾಮಾನ್ಯ ಕನ್ನಡಿಗ ಇಲ್ಲಿ ಅನಾಥ; ತಬ್ಬಲಿ.
* ಸರ್ಕಾರದ ಹಿರಿಯ ಅಧಿಕಾರಿಗಳು ಕನ್ನಡದ ಬಗೆಗೆ ಕನಿಷ್ಠ ಪ್ರಮಾಣದಲ್ಲಾಗಲೀ ನಿಷ್ಠೆ, ಶ್ರದ್ಧೆ ಮತ್ತು ಆಸಕ್ತಿ ತೋರುತ್ತಿಲ್ಲ.

* ಹೊರರಾಜ್ಯಗಳಿಂದ ಕನ್ನಡನಾಡಿಗೆ ಬರುವ ಜನ ಕನ್ನಡವನ್ನು ಮಾತನಾಡಲು ಇರಬೇಕಾದ ವಾತಾವರಣ ಇಲ್ಲಿಲ್ಲ.

* ಕನ್ನಡಿಗರ ಪರಭಾಷಾ ವ್ಯಾಮೋಹದಿಂದ ಜನಸಾಮಾನ್ಯರಿಗೆ ಅನ್ಯಾಯವಾಗುತ್ತಿದೆ. ಕನ್ನಡಿಗರ ಕರುಣೆಯ ಶೋಷಣೆ ಇಲ್ಲಿ ನಡೆದಿದೆ.

* ಇಂಗ್ಲೀಷ್ ಬಗೆಗಿನ ದಾಸ್ಯಮನೋಭಾವ ಇನ್ನೂ ಕಡಿಮೆಯಾದಂತಿಲ್ಲ.

* ವಿಧಾನ ಮಂಡಲಗಳಲ್ಲಿ ಸಹಿತ ಕನ್ನಡವನ್ನು ಜನರಿಗೆ ಮುಟ್ಟಿಸುವ ಬಗೆಗೆ ನಿರ್ದಿಷ್ಟ ನಿಲುವು ಬೇಕಾಗಿದೆ.

ಆಡಳಿತ ಭಾಷೆಯಾಗಿ ಕನ್ನಡದ ಬಳಕೆ ಬಗೆಗೆ ಉಪದೇಶ ಮತ್ತು ಅನುಷ್ಠಾನ ಹೇಳಿದಷ್ಟು ಸುಲಭ ಸಾಧ್ಯವಿಲ್ಲ ಎಂಬ ಸತ್ಯದ ಅರಿವು ಪಟೇಲರಿಗಾದದ್ದು ಅವರು ಅಧಿಕಾರ ಸೂತ್ರವನ್ನು ವಹಿಸಿಕೊಂಡ ಬಳಿಕ.

ಸಂದರ್ಭ: ಶಿಕ್ಷಣ ಮತ್ತು ಆಡಳಿತದಲ್ಲಿ ಕನ್ನಡ ಭಾಷೆಗೆ ಆದ್ಯತೆ ಇರಲೆಂದು ಕರ್ನಾಟಕದಾದ್ಯಂತ ನಡೆದ ಚಳುವಳಿಯ ಉತ್ತರಾರ್ಧ ಗೋಕಾಕ್ ಸಮಿತಿಯ ವರದಿ. ಕನ್ನಡದ ಹಿರಿಯ ಲೇಖಕ ಪ್ರೊ|| ವಿನಾಯಕ ಕೃಷ್ಣ ಗೋಕಾಕರ ಅಧ್ಯಕ್ಷತೆಯಲ್ಲಿ ರಚಿತವಾಗಿದ್ದ ಭಾಷಾ ಸಮಿತಿಯ ವರದಿಯನ್ನು ಯಥಾವತ್ತಾಗಿ ಅಂದಿನ ರಾಜ್ಯ ಸರ್ಕಾರ ಒಪ್ಪಿ, ಜಾರಿಗೆ ತರುವ ಪೂರ್ವದಲ್ಲಿ ವಿಧಾನ ಮಂಡಲದಲ್ಲಿ ವರದಿಯ ಶಿಫಾರಸ್ಸುಗಳನ್ನು ಮಂಡಿಸಿತು. ಆ ದಿನಗಳಲ್ಲಿ ಜೆ.ಹೆಚ್. ಪಟೇಲರು ಪ್ರತಿಪಕ್ಷದ ಶಾಸಕರು. ಅಂದು ಪಟೇಲರು ಮಾಡಿದ ಭಾಷಣದ ಮುಖ್ಯಾಂಶ ಹೀಗಿದ್ದವು:

ಸನ್ಮಾನ್ಯ ಅಧ್ಯಕ್ಷರೇ, ಮೊಟ್ಟಮೊದಲನೆಯದಾಗಿ ಈ ಸದನದಲ್ಲಿ ಮಂಡಿಸಿರತಕ್ಕ ನಿರ್ಣಯವನ್ನು ನಾನು ಹೃತ್ಪೂರ್ವಕವಾಗಿ ಬೆಂಬಲಿಸುತ್ತೇನೆ.

ಈ ಒಂದು ಘಟನೆ ಐತಿಹಾಸಿಕ ಎನ್ನುವ ಮಾತನ್ನು ಮಾನ್ಯ ಸ್ನೇಹಿತರು ಹೇಳಿದ್ದಾರೆ. ನಾವು ಇತಿಹಾಸವನ್ನು ಎರಡು ದೃಷ್ಟಿಯಿಂದ ನೋಡಬಹುದು. ಒಂದು ಘಟನೆಯಿಂದ ಇತಿಹಾಸವಾಗುತ್ತದೆ. ಎರಡನೆಯದು ಪೂರ್ವ ಇತಿಹಾಸದಿಂದ ಘಟನೆಯಾಗುತ್ತದೆ. ಈ ಘಟನೆಯ ಹಿಂದೆ ಇತಿಹಾಸವೇನೂ ಇಲ್ಲ. ಘಟನೆಯಿಂದ ಇತಿಹಾಸ ನಿರ್ಮಾಣವಾಗಿದೆ. ಈ ದೃಷ್ಟಿಯಿಂದ ಇದೊಂದು ಐತಿಹಾಸಿಕ ಘಟನೆ. ನಾನು ವೈಯಕ್ತಿಕವಾಗಿ ಹೇಳುವುದಾದರೆ, ಗೋಕಾಕ್ ಅವರ ವರದಿಯನ್ನು ಪೂರ್ತಿಯಾಗಿ ಜಾರಿಗೆ ಕೊಡತಕ್ಕ ಕೆಲಸವನ್ನು ನಮ್ಮ ಸರ್ಕಾರದವರು ಮಾಡಿದ್ದರೆ ಮತ್ತಷ್ಟು ಸಂತೋಷವಾಗುತ್ತಿತ್ತು.

ನಾವು ಸಂತೋಷಪಡುವಾಗ ಬೇರೆಯವರನ್ನು ದುಃಖಕ್ಕೆ ಈಡು ಮಾಡುವುದು ಸರಿಯಲ್ಲ. ಹೀಗಾಗಿ ಯಾರ ಮನಸ್ಸಿಗೂ ನೋವಾಗದ ರೀತಿಯಲ್ಲಿ ಪೂರ್ಣ ವಿಚಾರ ನಡೆಸಿ ಈ ತೀರ್ಮಾನವನ್ನು ಕೈಗೊಂಡಿರುವುದು ನಿಜವಾಗಿಯೂ ಒಂದು ಐತಿಹಾಸಿಕ ಘಟನೆಯೇ.

ಇನ್ನೊಂದು ನನ್ನ ಹೃದಯದಿಂದ ಬರುವ ಮಾತು ಎಂದರೆ, ನಮ್ಮ ತಾಯಿಯನ್ನು ತಾಯಿ ಎಂದು ಗುರುತಿಸಬೇಕಾದವರು ನಾವು. ನಮ್ಮ ತಾಯಿಯನ್ನು ತಾಯಿ ಎಂದು ಹೇಳಿ ಶಹಬಾಸ್‌ಗಿರಿಯನ್ನು ಪಡೆದುಕೊಳ್ಳಬೇಕಾಗಿಲ್ಲ. ಇದರಲ್ಲಿ ನಾವು ಸ್ವಲ್ಪ ತಡಮಾಡಿದ್ದು ನಿಜ. ಇದನ್ನು ಯಾರು ಮಾಡಿದ್ದರೂ ಈ ಶುಭ ಸಮಯದಲ್ಲಿ ಜ್ಞಾಪಿಸಿಕೊಂಡು ಸಂತೋಷಪಡಬೇಕು. ತಾಯಿಯನ್ನು ಗುರುತಿಸತಕ್ಕ ಮಕ್ಕಳಷ್ಟೇ ಅಲ್ಲದೆ, ಇನ್ನೂ ಬೇರೆಯ ಮಕ್ಕಳೂ ಇದ್ದಾರೆ. ತಾಯಿಯ ಮೊಲೆಯ ಹಾಲಿನಿಂದ ದೇಹ ಬೆಳೆಯುತ್ತದೆ - ತಾಯಿ ಭಾಷೆಯಿಂದ ಬುದ್ಧಿ ಬೆಳೆಯುತ್ತದೆ. ಭಾಷೆ ಇಲ್ಲದೇ ಹೋದರೆ ಮನುಷ್ಯನಿಗೂ ಪ್ರಾಣಿಗೂ ವ್ಯತ್ಯಾಸವೇ ಇಲ್ಲ ಎಂದು ತಜ್ಞರು ಹೇಳಿದ್ದಾರೆ.

ನಮ್ಮ ಕನ್ನಡ ಭಾಷೆಯ ಬೆಳವಣಿಗೆ ಬರೀ ಇಷ್ಟಕ್ಕೆ ನಿಲ್ಲುವುದಿಲ್ಲ. ಇಂಥ ತೀರ್ಮಾನವನ್ನು ಮಾಡುವುದಕ್ಕೆ ಸಹಾಯಕವಾಗಿರತಕ್ಕ ಸರ್ಕಾರ ಕನ್ನಡ ಜನತೆಯ ಸರ್ವಾಂಗೀಣ ಅಭಿವೃದ್ಧಿಯ ಬಗ್ಗೆ ಅವರ ಆರ್ಥಿಕ ಸಾಮಾಜಿಕ ಬೆಳವಣಿಗೆಯ ಬಗ್ಗೆಯೂ ಪ್ರಯತ್ನ ಮಾಡಬೇಕು.

ಯಾವ ದಾರಿಯಲ್ಲಿ ಹೋಗಬೇಕಾಗಿತ್ತೋ ಆ ದಾರಿಯಲ್ಲಿ ಈಗಲಾದರೂ ನಾವು ಒಂದು ಸರಿಯಾದ ಹೆಜ್ಜೆಯನ್ನು ಇಟ್ಟಿದ್ದೇವೆ. ಶಿಕ್ಷಣ ಮಾಧ್ಯಮದಲ್ಲಿ, ವಿಶ್ವವಿದ್ಯಾನಿಲಯ ಮಟ್ಟದಲ್ಲಿ, ನಮ್ಮ ಸಾಮಾಜಿಕ ಪರಿಸರದಲ್ಲಿ, ಬಹಳ ಮಟ್ಟಿಗೆ ಕನ್ನಡವನ್ನು ಕಲಿಯದೇ ಹೋದರೆ ವ್ಯವಹಾರ ಮಾಡುವುದಕ್ಕಾಗುವುದಿಲ್ಲ ಎಂದೇ ಮಾಡಿದರೆ ಆಗ ಇದು ಸರಿಹೋಗಬಹುದು. ಅದು ಮುಂದೆ ಆಗಬೇಕು. ಮತ್ತು ಮುಂದೆ ಆಗುವ ರೀತಿಯಲ್ಲಿ ನಾವೆಲ್ಲಾ ಶಾಸಕರೂ ಪ್ರಯತ್ನಪಡೋಣ.

ಈಗಿನ ಪರಿಸ್ಥಿತಿಯಲ್ಲಿ ಯಾರು ಎಲ್ಲೇ ಇರಲಿ, ನಾಡಿನ ಹೊರಗಿರಲಿ, ಒಳಗಿರಲಿ, ಕನ್ನಡಮ್ಮನ ಏಳ್ಗೆಗಾಗಿ ನಾವೆಲ್ಲರೂ ಗೌರವ ಕೊಡಬೇಕು. ನಮ್ಮ ನಾಡಿಗೆ, ನುಡಿಗೆ, ತಾಯ್ನುಡಿಗೆ ಕೊಟ್ಟ ಗೌರವ ಇದು. ಈ ಗೌರವಕ್ಕೆ ಸದನದ ನಾಯಕರು, ಆ ಕಡೆ ಇರುವವರು, ಈ ಕಡೆ ಇರುವವರು, ಎಲ್ಲರೂ ಸಹಭಾಗಿಗಳೆಂದು ಹೇಳುತ್ತೇನೆ. ಜನತೆ ನಮ್ಮ ಆಶಯವನ್ನು ಅರ್ಥ ಮಾಡಿಕೊಂಡು ಶುಭ ವಾತಾವರಣದಲ್ಲಿ ಶಾಂತ ವಾತಾವರಣದಲ್ಲಿ ಭಾಷೆಯ ಪ್ರಶ್ನೆಯನ್ನು ಸೌಹಾರ್ದಯುತವಾಗಿ ನಡೆಸಿಕೊಂಡು ಹೋಗಬೇಕೆಂದು ಹೇಳಿ ನಾನು ನನ್ನ ಮಾತುಗಳನ್ನು ಮುಗಿಸುತ್ತೇನೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ), ವಿಧಾನಸಭೆ, ಜೂನ್ 24, 1982)

## ತಿಳಿಯದ ಇಂಗ್ಲೀಷಿಗೆ ಕೈ ಎತ್ತ ಬೇಕೇ?

ಕನ್ನಡದ ಬಗ್ಗೆ ನಾನು ಬಹಳಷ್ಟು ಬಾರಿ ಹೇಳುತ್ತ ಬಂದಿದ್ದೇನೆ. ಎಷ್ಟು ಹೇಳಿದರೂ ಕಡಿಮೆಯೇ. ಕನ್ನಡವನ್ನು ಆಡಳಿತ ಭಾಷೆ ಎಂದು ತಾತ್ವಿಕವಾಗಿ ಸರ್ಕಾರಗಳು ಒಪ್ಪಿವೆಯೇ ವಿನಃ ವಾಸ್ತವಿಕವಾಗಿ ಮತ್ತು ಪ್ರಾಮಾಣಿಕವಾಗಿ ಅಲ್ಲ. ಕನ್ನಡ ನಾಡಿನ ಜನರು ನೀಡುವ ಮತದಿಂದ, ಅವರು ಕೊಡುವ ಅನ್ನದಿಂದ ಬದುಕಿರುವ ಜನ ನಾವು. ಅಂತಹ ನಾವು ಇಂದು

ಸಾಮಾನ್ಯ ಕನ್ನಡಿಗರಿಗೆ ಬೇಕಾದ ಕನ್ನಡದಲ್ಲಿ ಮಾತನಾಡಲು, ವ್ಯವಹರಿಸಲು ಸಿದ್ಧರಿಲ್ಲ ಎಂದರೆ ಇನ್ನೇನು ಮಾಡಲಿಕ್ಕೆ ನಾವು ಸಿದ್ಧರಿದ್ದೇವೆ. ಹೇಳಿ?

ಉದಾಹರಣೆಗೆ ನಮ್ಮ ವಿಧಾನಸಭೆಯ ನಡವಳಿಕೆಗಳನ್ನೇ ತೆಗೆದುಕೊಳ್ಳಿ. ಇಲ್ಲಿ ನಮ್ಮ ಮುಂದೆ ಮಂಡಿಸಲಾಗುವ ವಿಷಯಗಳೆಲ್ಲಾ ಇಂಗ್ಲೀಷಿನಲ್ಲಿಯೇ ಬರುತ್ತವೆ. ನಮ್ಮಲ್ಲಿ ಬಹಳ ಮಂದಿಗೆ ಇಂಗ್ಲೀಷ್ ಓದುವುದಕ್ಕೆ, ಬರೆಯುವುದಕ್ಕೆ, ಅರ್ಥಮಾಡಿಕೊಳ್ಳುವುದಕ್ಕೆ, ಮಾತನಾಡುವುದಕ್ಕೆ ಬರುವುದಿಲ್ಲ ಎಂದರೆ ದಯವಿಟ್ಟು ಯಾರೂ ಅಪಮಾನ ಎಂದು ಭಾವಿಸಬಾರದು, ಹೇಳಿ? ಇಂತಹವರು ಏನು ಮಾಡಬೇಕು? ಸುಮ್ಮನೇ ಕೈಎತ್ತಿಬಿಡಬೇಕೇ?

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ, ಮಾರ್ಚ 29, 1978

## ಬನ್ನಿ, ಕನ್ನಡ ಬಳಸೋಣ

1963ರಲ್ಲಿ ಕರ್ನಾಟಕದಲ್ಲಿ ಕನ್ನಡ ಆಡಳಿತ ಭಾಷೆಯಾಗಬೇಕೆಂಬ ಮಸೂದೆ ವಿಧಾನ ಮಂಡಲದಲ್ಲಿ ಅಂಗೀಕೃತವಾಯಿತು. ಇಷ್ಟಾದರೂ ಆಡಳಿತದಲ್ಲಿ ಇಂಗ್ಲೀಷಿನ ಪ್ರಾಬಲ್ಯ ಮುಂದುವರೆಯುತ್ತಲೇ ಇದೆ. ಇದೊಂದು ದೌರ್ಭಾಗ್ಯ.

ಒಂದು ಎಚ್ಚರಿಕೆಯ ಮಾತು ಹೇಳಬಯಸುತ್ತೇನೆ. ಈ ದಾಸ್ಯ ಮನೋಭಾವ ಸುಲಭವಾಗಿ ಹೋಗುವಂತಹದಲ್ಲ. ಇಂಗ್ಲೀಷ್ ಮಾತನಾಡುವ ವರ್ಗದ ಜನರ ಮನಸ್ಸು ಬದಲಾವಣೆಯಾಗದ ವಿನಃ ನಮ್ಮ ಜನರಿಗೆ ಆಡಳಿತದ ಫಲ ಮುಟ್ಟುವುದಿಲ್ಲ.

ನಮ್ಮಲ್ಲಿ ಕನ್ನಡ ಪದಗಳಿಗೆ ಕೊರತೆ ಏನಿದೆ ಹೇಳಿ? ಒಂದು ಉದಾಹರಣೆ ಹೇಳುತ್ತೇನೆ. ನಾವು ಬಳಸುವ ಪಾತ್ರೆಯನ್ನೇ ತೆಗೆದುಕೊಳ್ಳಿ. ಆ ಪಾತ್ರೆಯನ್ನು ಹಾಗೆಯೇ ಇಟ್ಟರೆ ಕಪ್ಪಾಗಿ ಬಿಡುತ್ತದೆ. ಅದನ್ನು ಉಪಯೋಗಿಸದೇ ಇದ್ದರೆ ಕಪ್ಪು ಬಂದುಬಿಡುತ್ತದೆ. ಆ ಪಾತ್ರೆಯನ್ನು ಪದೇ ಪದೇ ಬಳಸಿದರೆ, ಪದೇ ಪದೇ ಉಪಯೋಗಿಸಿದರೆ ಕೊನೆಗೆ ಅದಕ್ಕೆ ಹೊಳಪು ಬರುತ್ತದೆ. ಹಾಗೆಯೇ ನಮ್ಮ ರಾಜ್ಯದ ಭಾಷೆಯನ್ನು, ಅಂದರೆ ಕನ್ನಡ ಭಾಷೆಯನ್ನು ಆಡಳಿತ ವ್ಯವಹಾರದಲ್ಲಿ ತರದೇ ಇದ್ದುದರಿಂದ ಹೀಗಾಗಿದೆ. ಈ ಬಗ್ಗೆ ಕನ್ನಡದಲ್ಲಿ ಆಡಳಿತದಲ್ಲಿ ವ್ಯವಹಾರ ಮಾಡುವ ಸಂಕಲ್ಪ ಬೇಕಾಗಿದೆ. ಶಾಸಕರಲ್ಲಿ ನನ್ನ ಕಳಕಳಿಯ ಮನವಿ ಹೀಗಿದೆ: ಇಂಗ್ಲೀಷ್ ಪದಗಳ ಬಳಕೆಯನ್ನು ಕಡಿಮೆ ಮಾಡುತ್ತಾ ಬನ್ನಿ. ತಾನಾಗಿಯೇ ಮನಸ್ಸಿನ ಅಂತರಾಳದಿಂದ ಸೂಕ್ತ ಕನ್ನಡ ಪದಗಳು ಹೊರಗೆ ಬರುತ್ತವೆ. ಆಗ ಕನ್ನಡ ಬೆಳೆಯುತ್ತದೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ, ಮಾರ್ಚ 11, 1981)

## ಕನ್ನಡದ ಬಗೆಗೆ ಪ್ರಾಮಾಣಿಕ ಪ್ರಯತ್ನ ಬೇಕು

**ಸಂದರ್ಭ: ವಿಧಾನ ಮಂಡಲದಲ್ಲಿ ಇಂಗ್ಲೀಷ್ ಭಾಷೆಯಲ್ಲಿಯೇ ಕರಡು ಮಸೂದೆಗಳು ಪರಿಶೀಲನೆಗೆ ಬರುತ್ತಿದ್ದ ಕಾಲವೊಂದಿತ್ತು. ಕನ್ನಡ ಆಡಳಿತ**

> ಭಾಷೆಯಾದರೂ ಇಲಾಖೆಯ ಹಿರಿಯ ಅಧಿಕಾರಿಗಳ ಇಂಗ್ಲೀಷ್ ವ್ಯಾಮೋಹ ಈ ನ್ಯೂನತೆಗೆ ಕಾರಣ ಎಂಬು ವಾದಿಸಿದರು ಪಟೇಲರು. ಸರ್ಕಾರದ ಉನ್ನತ ಅಧಿಕಾರಿಗಳಲ್ಲಿ ಕನ್ನಡ ಬಳಕೆಗೆ ಮನ ಪರಿವರ್ತನೆಯಾಗುವ ಅವಶ್ಯಕತೆ ಇದೆ ಎಂಬುದು ಪಟೇಲರ ಅಭಿಮತವಾಗಿತ್ತು.

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ನಮ್ಮ ರಾಜ್ಯದಲ್ಲಿ ಕನ್ನಡ ರಾಜ್ಯಭಾಷೆಯಾದ ಮೇಲೆ ನನಗೆ ತಿಳಿದ ಮಟ್ಟಿಗೆ ನಮ್ಮ ರಾಜ್ಯದ ಶ್ರೇಷ್ಠ ನ್ಯಾಯಾಲಯ ಕನ್ನಡವನ್ನು ರಾಜ್ಯ ಭಾಷೆಯೆಂದು ಒಪ್ಪಿಕೊಂಡಿದೆ. ಈಗ ಬಹುಷಃ ಜಿಲ್ಲಾ ಮಟ್ಟದ ನ್ಯಾಯಾಲಯಗಳಲ್ಲಿ ಕೂಡ ಕನ್ನಡದಲ್ಲೇ ವಾದವನ್ನು ಮಾಡುತ್ತಿದ್ದಾರೆ.

ವೈ. ರಾಮಕೃಷ್ಣ: ಈಗ ಹೈಕೋರ್ಟ್‌ನಲ್ಲಿ ಕನ್ನಡದಲ್ಲೇ ಜಡ್ಜ್‌ಮೆಂಟ್ ಕೊಡುವಂತೆ ಮಾಡಿದ್ದಾರೆ. ನಾವೂ ಕೂಡ ರೂಲ್ಸ್ ಮಾಡಿದ್ದೇವೆ.

ಅಧ್ಯಕ್ಷರು: ಹಾಗೆ ಮೊದಲೂ ಕೂಡ ಇತ್ತು ಜಡ್ಜ್‌ಮೆಂಟನ್ನು ಕನ್ನಡದಲ್ಲೇ ಕೊಡುತ್ತಿದ್ದರು. ಅವರ ರಿಪ್ಲೈ ಕೂಡ ಕನ್ನಡದಲ್ಲೇ ಇತ್ತು. ಸಾಕ್ಷಿ ವಿಚಾರಣೆಯನ್ನು ಕನ್ನಡದಲ್ಲೇ ಮಾಡುತ್ತಿದ್ದರು. ಈಗ ಇದು ಹೊಸದೇನೂ ಅಲ್ಲ.

ಜೆ.ಹೆಚ್. ಪಟೇಲ್: ಇದರಲ್ಲಿ ಅಂತಹ ತೊಂದರೆಗಳು ಏನೂ ಇಲ್ಲ. ಜಪಾನ್ ದೇಶ ಸ್ವತಂತ್ರವಾದ ಮೇಲೆ ಅಲ್ಲಿ ಮೊದಲನೇ ಜವಾಬ್ದಾರಿ ಸರ್ಕಾರ ಬಂದಾಗ ಅವರು ಕೊಟ್ಟ ಮೊದಲನೇ ಆದೇಶ ಏನೆಂದರೆ 'ನೀವೆಲ್ಲಾ ಜಪಾನ್ ಭಾಷೆಯನ್ನೇ ಬಳಸಬೇಕು' ಎಂದು. ಅದೇ ರೀತಿ ನಮ್ಮಲ್ಲೂ ಕೂಡ ಕನ್ನಡವನ್ನೇ ಬಳಸಬೇಕು. ರೈಲ್ವೆ ಫ್ಲಾಟ್‌ಫಾರಂನ್ನು ಇಂಗ್ಲೀಷಿನಲ್ಲಿ ಬರೆಯುವುದಕ್ಕೆ ಬದಲು ರೈಲ್ವೆ ಪ್ಲಾಟ್‌ಫಾರಂ ಎಂದು ಕನ್ನಡದಲ್ಲೇ ಬರೆಯಿರಿ ಎಂದು ಹೇಳುತ್ತೇನೆ. ಪೋಲೀಸ್‌ನವರಿಗೆ....

ಒಬ್ಬ ಮಾನ್ಯ ಸದಸ್ಯರು:- ಪೊಲೀಸರಿಗೆ ಕನ್ನಡದ 'ಆರಕ್ಷಕ' ಎಂದು ಹೇಳುತ್ತಾರೆ.

ಜೆ.ಹೆಚ್. ಪಟೇಲ್:- ಯಾವ ಪೊಲೀಸರಿಂದ ಯಾರಿಗೂ ರಕ್ಷಣೆ ಸಿಕ್ಕುವುದಿಲ್ಲವೋ ಅವರಿಗೆ ಅರಕ್ಷಕ ಎಂದು ಸಂಸ್ಕೃತದಲ್ಲಿ ಹೇಳುತ್ತಾರೆ. ಇದು ಜನರಿಗೆ ಅರ್ಥವಾಗುವುದಿಲ್ಲ. ಜನರಿಗೆ ಅರ್ಥವಾಗದೇ ಇರುವಂಥ ಪದಗಳನ್ನು ಜಾರಿಗೆ ತರುವುದರಿಂದ ಏನೂ ಪ್ರಯೋಜನವಿಲ್ಲ.

ಜನರಿಗೆ ಅರ್ಥವಾಗದಂಥ ಯಾವುದೇ ಒಂದು ಸಿದ್ಧಾಂತವನ್ನು ಆಚರಣೆಗೆ ತಂದರೆ ಆ ಸಿದ್ಧಾಂತದ ಬಗ್ಗೆ ಜನರಿಗೆ ನಂಬಿಕೆ ಹೋಗುತ್ತದೆ. ಹೆಚ್ಚು ಕಡಿಮೆ ನಮ್ಮ ಪ್ರಜಾತಂತ್ರವೂ ಕೂಡ ಅದೇ ಸ್ಥಿತಿಗೆ ಬಂದಿದೆ.

ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಆಚರಣೆಗೆ ತರುವ ಪ್ರಯತ್ನದಲ್ಲಿ ಮತ್ತೊಂದು ಮುಖ್ಯ ದೋಷ ಇದೆ. ಕಾರ್ಯದರ್ಶಿ ಮಟ್ಟದ ಉನ್ನತ ಅಧಿಕಾರಿಗಳಲ್ಲಿ, ಈಗಲೂ ಕೆಲವರಿಗೆ

ಬಲು ಕೆಟ್ಟ ಪ್ರಮಾಣದ ಇಂಗ್ಲೀಷ್ ವ್ಯಾಮೋಹವಿದೆ. ಇದೇ ಈಗ ಬಂದಿರುವ ಸಮಸ್ಯೆ. ಕಾರ್ಯದರ್ಶಿಗಳೂ ಹೀಗೆಯೇ ಮಾಡುತ್ತಾರೆ. ಈ ಕಾರ್ಯದರ್ಶಿ ಯಾರು? ಕೂಡ ಅವರು ನಮ್ಮ ದೇಶದಲ್ಲಿ ಹುಟ್ಟಿ ಬೆಳೆದವರು - ಅವರಿಗ ಲಂಡನ್ ವ್ಯಾಮೋಹ ಹೋಗಿಲ್ಲ, ಲಂಡನ್ ಸಂಪರ್ಕ ಹೋಗಿಲ್ಲ, ಇಂಗ್ಲೀಷ್ ದೃಷ್ಟಿಕೋನ ಅವರಿಗಿನ್ನೂ ಹೋಗಿಲ್ಲ. ನೀವು ಇಂತಹ ಪ್ರಾವಿಸೋಗಳನ್ನು ಕಟ್ಟಿಕೊಂಡಲ್ಲಿ ಆಗುವುದಿಲ್ಲ. ಕನ್ನಡ ಭಾಷೆಯನ್ನು ಜಾರಿಗೆ ತರಬೇಕು ಎನ್ನುವ ಆಸೆಯಿದ್ದರೆ ನಾನು ನೇರವಾಗಿ ಸ್ಪಷ್ಟವಾಗಿ ಹೇಳುತ್ತೇನೆ. ಎಲ್ಲಾ ಮಟ್ಟದಲ್ಲಿಯೂ ಕನ್ನಡ ಭಾಷೆಯಲ್ಲಿಯೇ ವ್ಯವಹಾರವಾಗಬೇಕು. ಇದು ಸರ್ಕಾರದ ಗಮನಕ್ಕೆ ಬಂದರೆ ತಕ್ಷಣ ಇದರ ಬಗ್ಗೆ ಕ್ರಮ ತೆಗೆದುಕೊಂಡು ಕಾನೂನು ಮಾಡಿ ಆಚರಣೆಗೆ ತರಬೇಕು. ಕನ್ನಡದಲ್ಲಿ ವ್ಯವಹಾರ ಮಾಡುವಾಗ ಲೈಬ್ರರಿಗೆ ಹೋಗಿ ಪುಸ್ತಕಗಳಲ್ಲಿ ಶಬ್ದ ಹುಡುಕಿಕೊಂಡು ಬಂದು ಬರೆಯುತ್ತಾರೆ. ಇದು ಸರಿಯಲ್ಲ. ಜವಾಬ್ದಾರಿಯಿಂದ ಎಲ್ಲಾ ವ್ಯವಹಾರಗಳು ಕನ್ನಡದಲ್ಲಿಯೇ ನಡೆಯುವಂತೆ ವ್ಯವಸ್ಥೆ ಆಗಬೇಕು.

(ವಿಧಾನ ಸಭೆ ಕಲಾಪ, ಮಾರ್ಚ್ 11, 1981)

## ಕೆಟ್ಟ ಕೆಟ್ಟ ಇಂಗ್ಲೀಷ್ ಬಳಕೆ ಸಾಕು ಮಾರಾಯರೇ - ಪಟೇಲ್

ಸಂದರ್ಭ: ಕುರಿ ಮತ್ತು ಕುರಿ ಉತ್ಪನ್ನಗಳ ಅಭಿವೃದ್ಧಿ ತಿದ್ದುಪಡಿ ಮಸೂದೆ-1980, ಈ ಮಸೂದೆಯ ಬಗ್ಗೆ ವಿಧಾನ ಸಭೆ ಪ್ರಸ್ತಾವನೆ ತೆಗೆದುಕೊಂಡಿತ್ತು. ವಿಧಾನ ಮಂಡಲದಲ್ಲಿ ಪರಿಶೀಲನೆಗೆ ಬರುವ ಮಸೂದೆ ಮತ್ತು ಇತರ ಸಂಸದೀಯ ದಾಖಲೆಗಳನ್ನು ಆಡಳಿತ ಭಾಷೆಯಾದ ಕನ್ನಡದಲ್ಲಿ ಮಂಡಿಸಬೇಕು. ಜನ ಭಾಷೆಯ ಬಗೆಗೆ ಪ್ರಾಮಾಣಿಕ ಒಲವು ತೋರಲು ಇದು ಋಜು ಮಾರ್ಗ ಎಂಬುದು ಪಟೇಲರ ನಿಶ್ಚಲ ಅಭಿಪ್ರಾಯ.

ಈ ನಿದರ್ಶನ ಸಣ್ಣದೆನಿಸಿದರೂ ಕನ್ನಡದ ಸಲುವಾಗಿ ಎಚ್ಚರಿಕೆ ಮತ್ತು ಕಾಳಜಿಯನ್ನು ಪಟೇಲರು ಮತ್ತು ಇತರ ಶಾಸಕರು ವ್ಯಕ್ತಪಡಿಸಿ ಸಭಾಧ್ಯಕ್ಷರ ಗಮನ ಸೆಳೆಯುವ ಪರಿಸ್ಥಿತಿ ಆಗಿತ್ತು ಎನ್ನುವುದು ಮುಖ್ಯ.

ಪಂಪಾಪತಿ: ಅಧ್ಯಕ್ಷರೇ ಬಿಲ್ ಅಂತ ಹೇಳುತ್ತೀರಿ. ಇದು ಇಂಗ್ಲೀಷಿನಲ್ಲಿದೆ. ಇದು ನಮ್ಮ ಕರ್ನಾಟಕ. ಕರ್ನಾಟಕದಲ್ಲಿ ಲಂಡನ್ನಿನಲ್ಲಿ ಮಾಡಿದ ಹಾಗೆ ಮಾಡುತ್ತಿದ್ದೀರಿ. ನಾವು ಇಲ್ಲಿಗೆ ಸದಸ್ಯರಾಗಿ ಬಂದು ಮೂರು ವರ್ಷಗಳಾದುವು. ಪ್ರತಿ ಸಲವೂ ನಾವು ಕೇಳಿದಾಗಲೆಲ್ಲಾ ಕನ್ನಡದಲ್ಲಿ ಮಾಡುತ್ತೇವೆಂದು ಹೇಳುತ್ತಲೇ ಬಂದಿದ್ದೀರಿ. ನೀವು ಎಲ್ಲಾ ಇಂಗ್ಲೀಷ್‌ನಲ್ಲಿಯೇ ವ್ಯವಹಾರ ಮಾಡುವ ಹಾಗಿದ್ದಲ್ಲಿ ಹಾಗೆಂದು ಒಂದು ಬೋರ್ಡ್ ಹಾಕಿ ಬಿಡಿ ಸ್ವಾಮಿ. ನಾವು ಹೊರಗೆ ಹೋಗಿಬಿಡುತ್ತೇವೆ.

ಅಧ್ಯಕ್ಷರು (ವೆಂಕಟರಮಣ): ಇಂಗ್ಲೀಷಿನಲ್ಲಿ ಪ್ರಿಂಟ್ ಆಗಿ ಬಿಟ್ಟಿದೆ. ಇದೊಂದು ಸಾರಿ ಸಹಿಸಿಕೊಳ್ಳಿ. ಮುಂದಿನ ಬಾರಿ ಹೀಗಾಗದಂತೆ ಕನ್ನಡದಲ್ಲಿಯೇ ವ್ಯವಹಾರ ಮಾಡುವ ಎಚ್ಚರಿಕೆ ವಹಿಸೋಣ. ದಯಮಾಡಿ ಕುಳಿತುಕೊಳ್ಳಿ.

ಪಂಪಾಪತಿ: ತಾವೂ ಇದನ್ನು ಲಘುವಾಗಿ ತೆಗೆದುಕೊಂಡರೆ ಹೇಗೆ ಸ್ವಾಮಿ? ಯಾಕಂತೆ ಇವರ್‍ಯಾರಿಗೂ ಕನ್ನಡದಲ್ಲಿ ಮಾತನಾಡಲು, ಬರೆಯಲು, ವಿಚಾರ ಮಾಡಲು ಮನಸ್ಸಿಲ್ಲವಂತೋ. ಜನರಾಡುವ ಭಾಷೆ ಕುರಿತಂತೆ ಏತಕ್ಕೆ ಈ ರೀತಿಯ ಅನಾದರಣೆ ಹೇಳಿ ಸ್ವಾಮಿ?

ಅಧ್ಯಕ್ಷರು: ಖಂಡಿತ ಮುಂದಿನ ಸಾರಿಯಿಂದ ಮಾಡಿಸೋಣ.. ಕೂಡಿ.

ಜೆ.ಹೆಚ್. ಪಟೇಲ್: ಮಾನ್ಯ ಸಭಾಧ್ಯಕ್ಷರೇ, ತಮ್ಮ ಕಾಳಜಿ, ಸಮಾಧಾನ ಮತ್ತು ಭರವಸೆ ನಮಗೆ ಅರ್ಥವಾಗುತ್ತೆ. ಆದರೆ ಪಂಪಾಪತಿಯವರು ಇಂತಹ ಗಂಭೀರವಾದ ಪ್ರಶ್ನೆಯನ್ನು ಎತ್ತಿದ್ದೂ ಇದು ಮೂರನೆಯ ಇಲ್ಲವೇ ನಾಲ್ಕನೇ ಸಲ. ದೇಶದ ಬೇರೆಲ್ಲಾ ವಿಧಾನ ಸಭೆಗಳಲ್ಲಿ ಅವರವರ ಭಾಷೆಯಲ್ಲಿಯೇ ಕಲಾಪ ನಡೆಯುತ್ತೆ. ಆದರೆ ನಾವು ಇಲ್ಲಿ ನಮ್ಮ ಭಾಷೆಯನ್ನು ಕಡೆಗಣಿಸಿ ಅನ್ಯ ಭಾಷೆಯ ಗೀಳು ಬೆಳಸಿಕೊಂಡಿದ್ದೀವಿ. ನಾಚಿಕೆಗೇಡು. ಕನ್ನಡದ ಬಗ್ಗೆ ಉಗ್ರವಾದ ನಿರ್ಣಯ ತೊಗೋಳಿ. ತೀರಾ ಕನ್ನಡ ಬರುವುದೇ ಇಲ್ಲ ಎನ್ನುವವರು ಇಂಗ್ಲೀಷಿನಲ್ಲಿ ಮಾತಾಡಲಿ. ಕನ್ನಡ ತಿಳಿದವರೂ ಪರಭಾಷಾ ವ್ಯಾಮೋಹಕ್ಕೊಳಗಾಗಿ ಕೆಟ್ಟ ಕೆಟ್ಟ ಇಂಗ್ಲೀಷ್‌ನಲ್ಲಿ ಮಾತನಾಡುತ್ತಾರಲ್ಲಾ ಇದನ್ನು ಕೇಳಿಸಿಕೊಳ್ಳುವುದೇ ಒಂದು ಹಿಂಸೆ. ಸ್ವಾಮಿ ಇದೇ ರೀತಿ ಮುಂದುವರೆದರೆ ನಾನೂ ಮಾನ್ಯ ಶಾಸಕ ಪಂಪಾಪತಿಯವರೊಂದಿಗೆ ಸತ್ಯಾಗ್ರಹ ಮಾಡುತ್ತೇನೆ.

(ವಿಧಾನ ಸಭೆ ಕಲಾಪ : ಮೇ 5, 1980)

## ಮುಂದೆ ಹೋಗುತ್ತಿಲ್ಲ : ಪಟೇಲರ ಕಳಕಳಿ

**ಕನ್ನಡ ನಾಡಿನಲ್ಲಿ ಕನ್ನಡವೇ ಆಡಳಿತ ಭಾಷೆಯಾಗಲು ಸಾಧ್ಯ. ಇದು ಸಾಮಾನ್ಯ ಪ್ರಜೆಯ ಕನಿಷ್ಠ ನಿರೀಕ್ಷೆ. ತನಗೆ ಅರ್ಥವಾಗುವ ಭಾಷೆಯಲ್ಲಿ ಆಡಳಿತ ನಡೆಯಲಿ ಎಂದೇ ಆತ ಮತಹಾಕಿದ್ದಾನೆ. ಜನ ಸಾಮಾನ್ಯರ ಈ ಆಶೋತ್ತರಗಳಿಗೆ ಸ್ಪಂದಿಸಿ, ಜನತೆಯು ಕಷ್ಟಕಾರ್ಪಣ್ಯಗಳನ್ನು ಅರ್ಥಮಾಡಿಕೊಳ್ಳಲು ಜನರಾಡುವ ಭಾಷೆಯಿಂದ ಮಾತ್ರ ಸಾಧ್ಯವೆಂದು ವಿಧಾನಮಂಡಲದ ಉಭಯಸದನಗಳಲ್ಲಿ ಪ್ರತಿಪಾದಿಸಿದವರು ಪಟೇಲರು. ಮುಂಚೆ ಪ್ರತಿಪಕ್ಷದಲ್ಲಿದ್ದಾಗ ಕನ್ನಡ ಅಭಿವೃದ್ಧಿ ಇಲಾಖೆಯ ಮೇಲಿನ ಬೇಡಿಕೆಗಳ ಬಗೆಗೆ ನಡೆದ ಚರ್ಚೆಯಲ್ಲಿ ಪಟೇಲರು ಹೇಳಿದ ಮಾತುಗಳು:**

ಜನರಾಡುವ ಕನ್ನಡ ಆಡಳಿತ ಭಾಷೆಯನ್ನು ಆಡಳಿತದಲ್ಲಿ ತರಲು ಮೊದಲು ಬೇಕಾದದ್ದು ಮನಸ್ಸು. ಇದೆಲ್ಲಾ ಎಲ್ಲಿ ಅಡಕವಾಗಿದೆ ಎಂದರೆ ಐಎಎಸ್ ಅಧಿಕಾರಿಗಳ ಮಟ್ಟದಲ್ಲಿ, ಅವರ ನಿಷ್ಠೆಯಲ್ಲಿ. ಕನ್ನಡ ಯಾವ ಕಾರಣದಿಂದಲೋ ಬೆಂಗಳೂರು ವಿಧಾನ ಸೌಧದಿಂದ ಕೆಳಗೆ ಇಳಿದು ಹೋಗುತ್ತಿಲ್ಲ.

ತಹಶೀಲ್ದಾರರ ಕಛೇರಿಯಲ್ಲಿ ಹೇಗೆ ತಾನು ಕನ್ನಡದಲ್ಲಿ ವ್ಯವಹಾರವನ್ನು ಮಾಡಬೇಕೆಂಬ ಪ್ರಶ್ನೆ ಇದೆಯೋ ಇದೇ ತರಹದ ಪ್ರಶ್ನೆ ಬರುವಂತೆ ರಾಜ್ಯ ಮಟ್ಟದ ಎಲ್ಲ ಇಲಾಖೆಗಳ ಉನ್ನತ ಅಧಿಕಾರಿಗಳ ಮೇಲೆ ನಿಯಮ ಹಾಕಬೇಕೋ ಏನೋ.

ಇಂತಹ ನಿಯಮವನ್ನು ವಿಧಾನ ಸೌಧದ ಮಟ್ಟದಲ್ಲಿ ಹಾಕದೆ ಕೇವಲ ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ಹಾಕಿದರೆ ನೂರು ವರ್ಷಗಳು ಕಳೆದರೂ ನಮಗೆ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಜಾರಿಗೆ ತರುವುದಕ್ಕೆ ಸಾಧ್ಯವಿಲ್ಲ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ, ಆಗಸ್ಟ್ 23, 1978)

## ಕನ್ನಡಿಗರ ಕರುಣೆಯ ಶೋಷಣೆ

ಸನ್ಮಾನ್ಯ ಅಧ್ಯಕ್ಷರೇ, ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡುವ ಕೆಲಸ ಸಂಪೂರ್ಣ ಅರ್ಥದಲ್ಲಿ ಬಹಳ ಹಿಂದೆಯೇ ಆಗಬೇಕಾಗಿತ್ತು. ಈಗ ಆಗಿದೆ.

ಈಗ ಮಾನ್ಯ ಮಂತ್ರಿಗಳು ಮಾತನಾಡುವಾಗ ಕಳೆದ 34 ವರ್ಷದಿಂದಲೂ ನಮ್ಮ ಜನರಿಗೆ ಗೊತ್ತಾಗದೇ ಇರುವ ಭಾಷೆಯಲ್ಲೇ ನಾವು ಆಡಳಿತ ನಡೆಸಿಕೊಂಡು ಬಂದಿದ್ದೇವೆ ಎಂದರು. ಸರ್ಕಾರಕ್ಕೆ ಈವಾಗಲಾದರೂ ತಿಳುವಳಿಕೆ ಬಂದು ಪಶ್ಚಾತ್ತಾಪ ಪಡುವಂಥಾ ಪರಿಸ್ಥಿತಿ ಬಂದಿದ್ದು ಜನರ ಸೌಭಾಗ್ಯ. ಅಥವಾ ಸರ್ಕಾರವನ್ನು ಇಷ್ಟು ದಿವಸದವರೆಗೆ ಜನರು ಸುಮ್ಮನೆ ಬಿಟ್ಟದ್ದು ಇದು ಯಾರ ದೌರ್ಭಾಗ್ಯವೋ ಗೊತ್ತಿಲ್ಲ. ಈ ಜನರ ಅನ್ನ ತಿಂದು, ಉಪ್ಪು ತಿಂದು, ಇದುವರೆಗೂ ಅವರು ಆಡುವ ಭಾಷೆಯನ್ನು ಆಡಳಿತ ಭಾಷೆಯನ್ನಾಗಿ ಮಾಡದೇ ಇದ್ದಾರಲ್ಲಾ, ಈ ಸರ್ಕಾರವನ್ನು ಏನೂ ಮಾಡದೇ ನಮ್ಮ ಜನರು ಸುಮ್ಮನೆ ಬಿಟ್ಟಿದಾರಲ್ಲಾ, ಇದು ನಮಗೆ ಏನು ತೋರಿಸುತ್ತದೆ ಎಂದರೆ ನಮ್ಮ ನಾಡಿನ ಜನರ ಸಹನೆ, ಔದಾರ್ಯ ಮತ್ತು ಕರುಣೆ.

ಜನರ ಸಹೃದಯ ಮನಸ್ಸನ್ನು ಭಾಷೆಯ ವಿಷಯದಲ್ಲಿ ನಾವು ಶೋಷಿಸಬಾರದಿತ್ತು. ಈಗಲೂ ಕಾಲ ಮಿಂಚಿಲ್ಲ; ನಾವೆಲ್ಲರೂ ಎಚ್ಚೆತ್ತುಕೊಳ್ಳೋಣ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ, ಮಾರ್ಚ್ 11, 1981)

## ಕನ್ನಡದಲ್ಲಿ ಲೀನವಾಗಿರುವ ಸಂಸ್ಕೃತ

**ಜೆ.ಹೆಚ್. ಪಟೇಲ್:** ಮಾನ್ಯ ಗಂಗಾಧರನ್‌ರವರು ತಂದಿರತಕ್ಕ ನಿರ್ಣಯ ಈ ರಾಜ್ಯದಲ್ಲಿ ಸರ್ಕಾರ ಒಂದು ಸಂಸ್ಕೃತ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಬೇಕು ಎಂಬುದಾಗಿದೆ. ಸಂಸ್ಕೃತದ ವಿಷಯವನ್ನು ಇವರು ಪ್ರಸ್ತಾಪ ಮಾಡುವಾಗ ಇದು ಬಹಳ ಗಂಭೀರವಾದ ಸಮಸ್ಯೆ ಎಂದರು. ಇದು ಬರೀ ಭಾಷೆ ಎಂಬ ದೃಷ್ಟಿಯಿಂದ ಅಲ್ಲ. ಅದರ ಘನತೆ, ಗಾಂಭೀರ್ಯವನ್ನು ಗಮನಿಸಬೇಕೆಂದರು. ಹೀಗೆ ನೋಡುವುದಾದರೆ, ಟೊರೆಂಟೋದಲ್ಲಿ, ಬರ್ಲಿನ್‌ನಲ್ಲಿ, ಲಂಡನ್‌ನಲ್ಲಿ ಏನು ಓದುತ್ತಾರೆ, ಗ್ರೀಕ್, ಲ್ಯಾಟಿನ್ ಭಾಷೆಗಳು ಹೇಗೆ ಹುಟ್ಟಿದವು, ಕ್ರಿಸ್ತ ಮಾತನಾಡಿದ ಭಾಷೆ ಹೇಗಿತ್ತು. ಹಾಗೂ ಮೊದಲು ಭಾರತದ ಭಾಷೆ ಹೇಗಿತ್ತು ಎಂಬುದನ್ನೆಲ್ಲ ನಾವು ನೋಡುತ್ತಾ ಹೋಗುವುದಾದರೆ ತಜ್ಞರನ್ನಾಗಲೀ ವಿಶ್ವವಿದ್ಯಾನಿಲಯಗಳನ್ನಾಗಲೀ ಕೇಳಬೇಕಾಗುತ್ತದೆ. ಆದರೆ ಆಗಲೇ ಅವುಗಳೆಲ್ಲ ಸತ್ತು ಹೋಗಿರತಕ್ಕ ಭಾಷೆಗಳು, ಅದೇ ರೀತಿ ಸಂಸ್ಕೃತವೂ ಸತ್ತು ಹೋಗಿದೆ. ಆದರೆ ಅದರ ಜೀವ ನಮ್ಮ ಎಲ್ಲ ಭಾಷೆಗಳಲ್ಲೂ ಸೇರಿದೆ.

ಕನ್ನಡದಲ್ಲಿ, ತೆಲುಗಿನಲ್ಲಿ ಹಾಗೂ ತಮಿಳಿನಲ್ಲಿ ಕೂಡ ಸ್ವಲ್ಪ ಭಾಗ ಸೇರಿದೆ. ಯಾರೇ ಎಷ್ಟೇ ತೀವ್ರವಾಗಿ ವಿರೋಧಿಸಿದರೂ ಕೂಡ ಎಲ್ಲ ಭಾರತೀಯ ಭಾಷೆಗಳಲ್ಲೂ ಸಂಸ್ಕೃತ ಲೀನವಾಗಿದೆ. ಆದುದರಿಂದ, ಅದರ ಬಗ್ಗೆ ವಿಚಾರ ಮಾಡುವಾಗ ಹೊಸದಾಗಿ ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಬೇಕೆಂಬ ಅವಶ್ಯಕತೆ ಏನು ಇಲ್ಲ; ಅದಕ್ಕೆ ಖರ್ಚು ಮಾಡುವ ಹಣವನ್ನು, ಹಾಲಿ ಬೆಳೆಯಬೇಕಾಗಿರತಕ್ಕ ಭಾಷೆಗಳು ಏನು ಬೆಳೆದಿಲ್ಲ, ಅವಕ್ಕೆ ಖರ್ಚು ಮಾಡಿದರೆ ಬಹಳ ಅನುಕೂಲವಾಗುತ್ತದೆ. ಅವಕ್ಕೆ ಇನ್ನೂ ರಕ್ತ ಮಾಂಸ ಸರಿಯಾಗಿ ಸಂದಿಲ್ಲ. ಸಂಸ್ಕೃತದ ಹಿಡಿತದಿಂದ ತಪ್ಪಿದ ತಕ್ಷಣ ನಾವೆಲ್ಲ ಇಂಗ್ಲೀಷಿನ ಹಿಡಿತಕ್ಕೆ ಸಿಕ್ಕಿದೆವು. ನಮ್ಮ ಮಾತೃಭಾಷೆ ಏನಿದೆ ಅದು ಒಂದಲ್ಲಾ ಒಂದು ರೋಗದಿಂದ ನರಳುತ್ತಿದೆ. ಅದನ್ನು ನೋಡುವುದು ಬಿಟ್ಟು, ಈಗ ನಮ್ಮ ಕಣ್ಣಿಗೆ ಕಾಣುವ ಮಗಳು ಕಾಯಿಲೆಯಲ್ಲಿರುವಾಗ ಸತ್ತಿರುವ ಅಜ್ಜಿಯ ಬಗ್ಗೆ ಚರ್ಚಿಸುವುದು ಅಂಥ ಬುದ್ಧಿವಂತಿಕೆಯ ಮಾತಲ್ಲ.

ಎಸ್.ಎಸ್. ಅರಕೇರಿ: ಅಜ್ಜಿ ಬಗ್ಗೆ ಪ್ರೀತಿ.

ಜೆ.ಹೆಚ್. ಪಟೇಲ್: ಅಜ್ಜಿ ಬಗ್ಗೆ ನನಗೂ ಪ್ರೀತಿ ಇದೆ, ಇಲ್ಲವೆಂದು ಅಲ್ಲ, ಆದರೆ ಅವರು ಸತ್ತು ಹೋಗಿದ್ದಾರೆ. ಜೀವಂತವಾಗಿರತಕ್ಕ ಯಾವುದೇ ಭಾಷೆಯಾಗಲೀ ಅದು ಬಹಳ ಮುಖ್ಯವಾದ ಪಾತ್ರವನ್ನು ವಹಿಸತಕ್ಕ ಶಕ್ತಿ. ನಮಗೆ ಆಹಾರ, ಬಟ್ಟೆ ಇತ್ಯಾದಿಗಳು ಹೇಗೆ ಜೀವನದ ಅವಶ್ಯಕತೆಗಳೋ ಹಾಗೆ ಭಾಷೆ ಕೂಡ ಒಂದು ರಾಜ್ಯದ, ರಾಷ್ಟ್ರದ, ಜನಾಂಗದ ಸಾಂಸ್ಕೃತಿಕ ಜೀವನವನ್ನು ನಿರೂಪಿಸತಕ್ಕ ಶಕ್ತಿ. ಸಂಸ್ಕೃತ ಮತ್ತು ಇಂಗ್ಲೀಷಿನಲ್ಲಿ ಎಲ್ಲೋ ಕೆಲವರು ತಲೆಕೆಡಿಸಿಕೊಂಡು ಪಾಂಡಿತ್ಯವನ್ನು ಪಡೆದಿರುತ್ತಾರೆ. ನಾನು ಸಂಸ್ಕೃತ ಭಾಷೆಯನ್ನು ಸಣ್ಣ ಭಾಷೆ ಎಂದು ಹೇಳುವುದಿಲ್ಲ, ಅದು ಮಹಾನ್ ಭಾಷೆ. ಅದು ದೇವತೆಗಳ ಭಾಷೆಯಾದ್ದರಿಂದ ಅದನ್ನು ದೇವತೆಗಳೇ ಮಾತನಾಡಿಕೊಳ್ಳಲಿ. ನಾವು ನೀವೆಲ್ಲ ಮನುಷ್ಯರಾದ್ದರಿಂದ ಮಾನವ ಸಹಜ ಭಾಷೆಯನ್ನು ಮಾತನಾಡೋಣ. ನೀವು ಬೇಕಾದರೆ ದೇವತೆಗಳಾದಾಗ ಸಂಸ್ಕೃತವನ್ನು ಮಾತನಾಡಿಕೊಳ್ಳಿ. ಈ ಲೋಕದಲ್ಲಿದ್ದಾಗ ನಾವು ನಮ್ಮ ಭಾಷೆಯನ್ನು ಬೆಳಸೋಣ. ನಮ್ಮ ಮಾತೃಭಾಷೆ ಕನ್ನಡ, ಅದನ್ನು ಇವತ್ತು ರಾಜ್ಯಭಾಷೆಯನ್ನಾಗಿ ಮಾಡಿದ್ದೇವೆಂದು ಸರ್ಕಾರ ಹೇಳಿದ ಮೇಲೆ ಮತ್ತು ಹಲವಾರು ಸರ್ಕಾರಿ ಪ್ರಕಟಣೆಗಳಾದ ಮೇಲೂ ಕೂಡ ನಮ್ಮ ವಿಧಾನ ಸಭೆಯಲ್ಲಿ ಸಹ ಕನ್ನಡಕ್ಕೆ ಯಾವ ಸ್ಥಾನ ಇರಬೇಕಾಗಿತ್ತೋ ಆ ಸ್ಥಾನವನ್ನು ಇವತ್ತು ನಾವು ಕಾಣುತ್ತಿಲ್ಲ.

ಇನ್ನು ಇಂಗ್ಲೀಷ್ ಮಾತನಾಡತಕ್ಕ ಸದಸ್ಯರ ಬಗ್ಗೆ ಹೇಳುವುದಾದರೆ ಅವರಿಗೆ ಇಂಗ್ಲೀಷ್ ಬರದಿದ್ದರೂ ಕೂಡ ಇಂಗ್ಲೀಷನ್ನೇ ಮಾತನಾಡುತ್ತಾರೆ. ಅದನ್ನು ಕೇಳುವುದಕ್ಕಾಗುವುದಿಲ್ಲ. ಆ ಇಂಗ್ಲೀಷನ್ನು ಕೇಳುವುದಕ್ಕಿಂತ ಮತ್ತೊಂದು ಶಿಕ್ಷೆ ಇಲ್ಲ. ಯಾವ ಭಾಷೆ ಜನಪದದಲ್ಲಿ ಬಳಕೆಯಿಲ್ಲವೋ ಆ ಭಾಷೆಗೆ ರಕ್ತ, ಮಾಂಸ ಇರುವುದಿಲ್ಲ. ಹಾಗಾಗಿ ಜನಪದ ಇಲ್ಲದೇ ಸಂಸ್ಕೃತ ಸತ್ತುಹೋಯಿತು. ಸಂಸ್ಕೃತ ಯಾವ ಹಂತದಲ್ಲೂ ಜನರ ಭಾಷೆಯಾಗಿರಲಿಲ್ಲ. ಬುದ್ಧ ಜನರ ಭಾಷೆಯಲ್ಲಿ ಏತಕ್ಕೆ ಉಪದೇಶ ಮಾಡಿದ. ಅವನಿಗೆ ಸಂಸ್ಕೃತ ಬರುತ್ತಿರಲಿಲ್ಲ ಎಂದಲ್ಲ. ಅವನಿಗೆ ಸಂಸ್ಕೃತದ ಜ್ಞಾನವಿದ್ದರೂ ಜನರ ಭಾಷೆಯಾದ ಪಾಳಿ ಮತ್ತು ಪ್ರಾಕೃತದಲ್ಲಿ

ಉಪದೇಶ ಮಾಡಿದ. ಜನರ ಬಗ್ಗೆ ಚಿಂತೆ ಇರತಕ್ಕ ಯಾವುದೇ ಸರ್ಕಾರವಾಗಲೀ ಯಾವುದೇ ವಿಶ್ವವಿದ್ಯಾನಿಲಯವಾಗಲೀ ಜನರ ಭಾಷೆಯ ಬಗ್ಗೆ ಹೆಚ್ಚು ಗಮನ ಕೊಡಬೇಕು.

ಕನ್ನಡವನ್ನು ಹೇಗೆ ಬೆಳೆಸಬೇಕು, ಲೋಕಭಾಷೆಯನ್ನು ಹೇಗೆ ಬೆಳೆಸಬೇಕು, ಸಂಪತ್ತನ್ನು ಯಾವ ರೀತಿ ಹೆಚ್ಚಿಸಬೇಕು, ಅದನ್ನು ಯಾವ ರೀತಿ ಹಂಚಿಕೆ ಮಾಡಬೇಕು ಎಂಬುದರ ಕಡೆ ಗಮನ ಕೊಡೋಣ. ಸಂಪತ್ತು ಎಂದರೆ ದುಡ್ಡು ಮಾತ್ರವಲ್ಲ. ಜ್ಞಾನ ಸಂಪತ್ತು ಯಾವ ರೀತಿ ಹಂಚಬೇಕು ಎಂಬುದನ್ನು ನೋಡಬೇಕು. ಟಾಟಾ ಬಿರ್ಲಾ ಅವರ ಕೈಯಲ್ಲಿ ಧನಸಂಪತ್ತು ಯಾವ ರೀತಿ ಕ್ರೋಢೀಕರಣವಾಗಿದೆಯೋ ಹಾಗೆ ಇಂಗ್ಲೀಷಿನ ಮೂಲಕ ನಮ್ಮಲ್ಲಿರತಕ್ಕ ಜ್ಞಾನ ಸಂಪತ್ತು ಕೆಲವರಲ್ಲೇ ಕ್ರೋಢೀಕರಣ ಆಗಿದೆ. ಜನಸಾಮಾನ್ಯರ ಪ್ರಜ್ಞೆಯ ಮಟ್ಟ ಜಾಸ್ತಿಯಾಗಿಲ್ಲ. ಆದ್ದರಿಂದ ಜನಸಾಮಾನ್ಯರಿಗೆ ಜ್ಞಾನ ಸಂಪತ್ತನ್ನು ಹೆಚ್ಚಿಸುವ ಬಗ್ಗೆ ನಮ್ಮ ವಿಶ್ವವಿದ್ಯಾನಿಲಯಗಳು ಪ್ರಯತ್ನಪಡಬೇಕು.

ಮುಳ್ಳೂರು ಆನಂದರಾವ್: ಮಾನ್ಯ ಜೆ.ಹೆಚ್. ಪಟೇಲ್‌ರವರು ಅವರದೇ ಆದಂತ ಧಾಟಿಯಲ್ಲಿ ಸಂಸ್ಕೃತವಾದ ಕನ್ನಡ ಭಾಷೆಯಲ್ಲಿ ಸಂಸ್ಕೃತವನ್ನು ಅವಹೇಳನ ಮಾಡಿದ್ದಾರೆ. ಅವರು ಸಂಸ್ಕೃತ ಭಾಷೆ ಸತ್ತು ಹೋಗಿದೆ. ಅಜ್ಜಿ ಎಂದು ಹೇಳಿದರು. ಸಂಸ್ಕೃತ ಭಾಷೆ ಸತ್ತು ಹೋಗಿಲ್ಲ? ಅದು ಅಜ್ಜಿಯೂ ಅಲ್ಲ? ಜೀವಂತವಾಗಿ ಇದೆ. ಅವರು ಷುರು ಮಾಡಿದ್ದು. ಸನ್ಮಾನ್ಯ ಅಧ್ಯಕ್ಷರೇ ಎಂದು. ಸನ್ಮಾನ್ಯ ಎನ್ನುವ ಪದವೂ ಸಂಸ್ಕೃತ ಪದವೇ. ಪಟೇಲರ ಭಾಷಣದಲ್ಲಿ ಶೇಕಡ 30-40 ರಷ್ಟು ಸಂಸ್ಕೃತ ಪದಗಳು ಇದ್ದವು. ಸತ್ತು ಹೋದ ಮೇಲೆ ಜೀವಂತವಾಗಿರುವುದಕ್ಕೆ ಸಾಧ್ಯವಿಲ್ಲ.

ಜೆ.ಹೆಚ್. ಪಟೇಲ್: ಲೀನವಾಗಿದೆ ಎಂದು ಹೇಳಿದೆ.

ಮಳ್ಳೂರು ಆನಂದರಾವ್: ಸತ್ತು ಹೋದಮೇಲೆ ಅದು ಸಮಾಧಿ, ಲೇಶವೂ ಕೂಡ ಉಳಿಯುವುದಿಲ್ಲ. ಅವರ ಮಾತಿನಲ್ಲಿಯೇ ಹೇಳುವುದುದರೆ, ಭಾರತದ ಎಲ್ಲ ಭಾಷೆಗಳಲ್ಲಿಯೂ ಸಂಸ್ಕೃತ ಭಾಷೆ ಸಜೀವವಾಗಿದೆ. ಅಷ್ಟೇ ಅಲ್ಲ ವಿಶ್ವದ ಅನೇಕ ಭಾಷೆಗಳಲ್ಲಿ ಸಂಸ್ಕೃತದ ಛಾಯೆ ಕಾಣುತ್ತೆ. ಸಂಸ್ಕೃತ ಸತ್ತು ಹೋಗಿದೆ ಎಂದು ಹೇಳಿದರೆ, ಅದು ಪೂರ್ವಗ್ರಹ ಪೀಡಿತದಿಂದ ಕೂಡಿದ್ದು. ಯಾವುದೇ ಒಂದು ದೃಷ್ಟಿಕೋನ ಇಟ್ಟುಕೊಂಡು, ಕಲ್ಮಶ ಇಟ್ಟುಕೊಂಡು ಹೇಳುವಂತ ವಿಚಾರವೆಂದು ಹೇಳುವುದಕ್ಕೆ ಇಷ್ಟಪಡುತ್ತೇನೆ.

ಜೆ.ಹೆಚ್. ಪಟೇಲ್: ನಿಮ್ಮ ಅಜ್ಜನವರ ರಕ್ತ ನಿಮ್ಮಲ್ಲಿ ಜೀವಂತವಾಗಿದೆ, ನಿಮ್ಮ ತಂದೆಯವರ ರಕ್ತ ನಿಮ್ಮಲ್ಲಿ ಜೀವಂತವಾಗಿದೆ. ಆದರೆ, ನಿಮ್ಮ ಅಜ್ಜ ಜೀವಂತವಾಗಿಲ್ಲ.

(ವಿಧಾನ ಸಭೆ ಕಲಾಪ ಜನವರಿ 30, 1982)

# ಭಾಷೆಯ ಬಗೆಗೆ ಭ್ರಮೆ ಬೇಡ

ಜೆ.ಹೆಚ್. ಪಟೇಲ್: ಸಂಸ್ಕೃತ ಒಂದು ಭಾಷೆ, ತಿರುಳಿಲ್ಲದ ಭಾಷೆ ಎಂದು ನಾನು ಹೇಳಲಿಲ್ಲ. ಅದು ಎಲ್ಲಾ ಭಾಷೆಗೂ ಮಾತೃ ಸ್ಥಾನದಲ್ಲಿದೆ. ಇಂಗ್ಲೆಂಡ್‌ನಲ್ಲಿ ಅಲ್ಲಿಯ ಭಾಷೆಯಾದ ಇಂಗ್ಲೀಷ್‌ನ್ನು ಓದತಕ್ಕಂಥವರು ಅದರ ಮೂಲವಾಗಿರತಕ್ಕ ಭಾಷೆಗಳೇನಿದೆ ಗ್ರೀಕ್, ಲ್ಯಾಟೀನ್ ಭಾಷೆಗಳಿಗೆ ಅಷ್ಟೇ ಗೌರವವನ್ನು ಕೊಡುತ್ತಾರೆ. ಅಷ್ಟೇ ಗೌರವದಿಂದ ನಾವು ಸಂಸ್ಕೃತವನ್ನು ಕಾಣುತ್ತಿದ್ದೇವೆ, ಸಂಸ್ಕೃತಕ್ಕೆ ಅಗೌರವವನ್ನು ಸೂಚಿಸುತ್ತಿಲ್ಲ. ಸಂಸ್ಕೃತವನ್ನು ಅಧ್ಯಯನ ಮಾಡುವುದೂ ಹಾಗೂ ಅದನ್ನು ಕೆಲವರಿಗೆ ಮಾತ್ರ ಓದಿಸಿ ಪಂಡಿತರನ್ನಾಗಿ ಮಾಡುವುದು ಬೇರೆ. ಇವತ್ತು ದಿನನಿತ್ಯ ಜೀವನದಲ್ಲಿ, ಶಿಕ್ಷಣ ಮಟ್ಟದಲ್ಲಿ, ಆಡಳಿತದಲ್ಲಿ ನಾವು ಕನ್ನಡವನ್ನು ಕಾಣುತ್ತೇವೆ. ಸಂಸ್ಕೃತಕ್ಕೆ ಪ್ರಥಮ ಸ್ಥಾನವಿಲ್ಲವೆಂದು ಗೋಕಾಕ್ ವರದಿಯಲ್ಲಿ ಸಹ ನಿರ್ಣಯ ಬಂದಿದೆ. ಗೋಕಾಕ್ ವರದಿ ಈ ಸದನದ ಮುಂದೆ ಬಂದಾಗ ಅದರ ಬಗ್ಗೆ ಚರ್ಚೆ ಮಾಡೋಣ. ಆದರೆ ಇವತ್ತು ಏನು ಇಲ್ಲಿ ಸಂಸ್ಕೃತ ವಿಶ್ವವಿದ್ಯಾನಿಲಯ ತೆರೆಯಬೇಕು ಎನ್ನುವ ಬಗ್ಗೆ ಚರ್ಚೆ ಬಂದಿದೆ, ಅದರ ಅವಶ್ಯಕತೆ ಇಲ್ಲವೆಂದು ಹೇಳುತ್ತಿದ್ದೇನೆ. ಏತಕ್ಕೆಂದರೆ ಈಗಾಗಲೇ ಸಾಕಷ್ಟು ವಿಶ್ವವಿದ್ಯಾನಿಲಯಗಳು ಇವೆ. ಅವು ಹೆಚ್ಚಾಗುತ್ತಲೇ ಇವೆ. ನಮಗೆ ಸ್ವಾತಂತ್ರ್ಯ ಬಂದಾಗ ಸಂಸ್ಕೃತ ವಿಶ್ವವಿದ್ಯಾನಿಲಯಗಳು 35, 36 ಇದ್ದವು. ಇವತ್ತು 125, 130 ಆಗಿರಬಹುದು. ಇನ್ನು ಹೋಗುತ್ತಾ ಹೋಗುತ್ತಾ 150,200 ಆಗಬಹುದು. ಆದರೆ ಈಗಿರತಕ್ಕ ವಿಶ್ವವಿದ್ಯಾನಿಲಯಗಳಲ್ಲಿ ಶಿಕ್ಷಣ ಹೇಗೆ ನಡೆಯುತ್ತಿದೆ? ಜನರನ್ನು ಹೇಗೆ ತಯಾರು ಮಾಡುತ್ತಿದ್ದಾರೆ ಎಂಬುದನ್ನು ನೋಡಿದಾಗ, ಈ ದೇಶದಲ್ಲಿ 75 ಭಾಗ ನಿರಕ್ಷರಸ್ಥರಾಗಿರುವಾಗ ನಾವು ಈ ಆರ್ಯಭಟ್ಟ, ಭಾಸ್ಕರನನ್ನು ಕಳುಹಿಸುವುದಕ್ಕಾಗಿ ಕೇವಲ ಇಬ್ಬರು ವಿಜ್ಞಾನಿಗಳನ್ನು ತಯಾರು ಮಾಡಿದರೆ ಏನು ಬಂತು? ಎಂದು ಹೇಳಿದ್ದು ಅಷ್ಟೇ. ಈ ಸಂಸ್ಕೃತ ಭಾಷೆ ನಮ್ಮ ದಿನ ನಿತ್ಯದ ಜೀವನದಲ್ಲಿ ಅಪ್ರಕೃತ ಭಾಷೆ; ನಮ್ಮ ಜೀವನಕ್ಕೆ ಸರಿಹೊಂದುವುದಿಲ್ಲವೆಂಬುದು ನನ್ನ ಅಭಿಪ್ರಾಯ. ಆ ದೃಷ್ಟಿಯಿಂದ ನಾನು ಹೇಳಿದ್ದನ್ನು ಇನ್ನೊಂದು ಸಾರಿ ಹೇಳುತ್ತಿದ್ದೇನೆ. ಈಗಿರತಕ್ಕ ವಿಶ್ವವಿದ್ಯಾನಿಲಯಗಳೇ ಸಾಕು, ಇವತ್ತು ನಾವು ಏನು ಜಗದ್ಗುರುಗಳು ಎನ್ನತಕ್ಕ ಶಬ್ದಗಳನ್ನು ಬಹಳ ಹಗುರವಾಗಿ ಉಪಯೋಗಿಸುತ್ತಿದ್ದೇವೆ. ಒಂದು ಜಗತ್ತಿಗೆ ಒಬ್ಬ ಜಗದ್ಗುರವೇ ಸಾಕು.

ಜಿ.ಬಿ. ಶಂಕರ್ ರಾವ್: ಹಾಗಿದ್ದರೆ ವಿಶ್ವವಿದ್ಯಾನಿಲಯ ಒಂದೇ ಇರಬೇಕೇ?

ಜೆ.ಎಚ್. ಪಟೇಲ್: ಒಂದು ಜಗತ್ತಿಗೆ ಒಂದೇ ಗುರು ಇರಬೇಕು, ಒಂದು ಊರಿಗೆ ಒಬ್ಬರೇ ಗುರುಗಳು ಇರಬೇಕು. ಅದನ್ನು ಬಿಟ್ಟು ಒಂದು ಊರಿಗೆ, ಒಂದು ಗಲ್ಲಿಗೆ ಇಬ್ಬರು ಮೂವರು ಜಗದ್ಗುರುಗಳು ಇದ್ದರೆ ಹೇಗೆ? ಇಬ್ಬರು ಮೂವರು ಜಗದ್ಗುರುಗಳು ಇದ್ದರೆ ಎಷ್ಟು ಜಗತ್ತು ಇರಬೇಕು ಸ್ವಾಮಿ? ಆದುದರಿಂದ ಒಂದು ಜಗತ್ತಿಗೆ ಒಬ್ಬ ಜಗದ್ಗುರು ಇರಬೇಕು. ಜಾಸ್ತಿ ಇದ್ದರೆ ಅದು ಎಕ್ಸ್‌ಟ್ರೀಮ್ ಆಗುತ್ತದೆ. ಅದೇ ರೀತಿ ವಿಶ್ವವಿದ್ಯಾನಿಲಯಗಳು ಜಾಸ್ತಿ ಇದ್ದರೆ ಎಕ್ಸ್‌ಟ್ರೀಮ್ ಆಗುತ್ತದೆ.

ಮಳ್ಳೂರು ಆನಂದರಾವ್: ಅಧ್ಯಕ್ಷರೇ, ಮಾನ್ಯ ಜೆ.ಹೆಚ್. ಪಟೇಲ್‌ರವರು ಮಾತನಾಡುತ್ತಾ, ನಮ್ಮ ದೇಶದಲ್ಲಿ ಶೇಕಡ 70 ರಷ್ಟು ಭಾಗ ಅನಕ್ಷರಸ್ಥರೇ ಇರುವಾಗ, ಈ ಸಂಸ್ಕೃತ ವಿದ್ಯಾಭ್ಯಾಸದಿಂದ ಮತ್ತು ಈ ಸಂಸ್ಕೃತ ಅಧ್ಯಯನದಿಂದ, ವೇದ ಶಾಸ್ತ್ರ, ಉಪನಿಷತ್ತುಗಳನ್ನು ಓದುವುದರಿಂದ ಏನೂ ಪ್ರಯೋಜನವಾಗುವುದಿಲ್ಲವೆಂದು ಹೇಳಿದರು. ಆದಕ್ಕೆ ನಾನು ಒಂದು ವಿಷಯವನ್ನು ಅವರಿಗೆ ಹೇಳುವುದಕ್ಕೆ ಇಷ್ಟಪಡುತ್ತೇನೆ. ಸಂಸ್ಕೃತ ಸಾಹಿತ್ಯ ಎಂದರೆ ಕೇವಲ ವೇದಗಳು ಅಥವಾ ಉಪನಿಷತ್ತುಗಳು, ದೇವರು ಧರ್ಮ ಆಗಮಗಳು ಅಷ್ಟೇ ಸಂಬಂಧಪಟ್ಟದ್ದು ಅಲ್ಲ. ಅದು ಅವರಿಗೆ ಗೊತ್ತಿದೆ ಎಂದು ತಿಳಿದುಕೊಂಡಿದ್ದೇನೆ. ಸಂಸ್ಕೃತ ಸಾಹಿತ್ಯದಿಂದ ಲೌಕಿಕ ವಿಷಯಗಳ ಬಗ್ಗೆ ಕೂಡ ಎಷ್ಟೆಷ್ಟೋ ರಿಸರ್ಚ್ ಮಾಡಬಹುದಾಗಿದೆ. ಅದರಿಂದ ಇವತ್ತು ಎಷ್ಟೋ ಸಂಶೋಧನೆಗಳಾಗಿ, ಪ್ರತಿಫಲವನ್ನು ಇತರ ರಾಷ್ಟ್ರಗಳವರು ಪಡೆಯುತ್ತಿದ್ದಾರೆ. ಅಥರ್ವಣ ವೇದದಲ್ಲಿರುವುದನ್ನು ತಮಗೆ ಹೇಳುವುದಾದರೆ..

ಜೆ.ಹೆಚ್. ಪಟೇಲ್: ಸ್ವಾಮಿ ಅದರ ಬಗ್ಗೆ ಏನೂ ವಾದ ವಿವಾದ ನಾನು ಮಾಡಲಿಲ್ಲ. ವೇದ, ಉಪನಿಷತ್ತುಗಳಲ್ಲಿರತಕ್ಕ ಮಹಾ ಜ್ಞಾನವನ್ನು ಒಂದು ಕಾಲದಲ್ಲಿ ಕೆಲವೇ ಪಂಡಿತರು ತಮ್ಮ ಸ್ವತ್ತನ್ನಾಗಿ ಮಾಡಿಕೊಂಡಿದ್ದರು. ಸಂಸ್ಕೃತವನ್ನು ಓದುವುದೇ ಹಿಂದೆ ಒಂದು ಅಪರಾಧವಾಗಿತ್ತು. ಕೌಟಿಲ್ಯನ ಅರ್ಥಶಾಸ್ತ್ರವನ್ನಾಗಲೀ ಅಥವಾ ವೇದ ಶಾಸ್ತ್ರವನ್ನಾಗಲೀ ಸಂಶೋಧನೆ ಮಾಡುವುದಕ್ಕೆ ಪ್ರತ್ಯೇಕ ವಿಶ್ವವಿದ್ಯಾನಿಲಯಗಳು ಬೇಕಾಗಿಲ್ಲ. ಇರತಕ್ಕ ವಿಶ್ವವಿದ್ಯಾನಿಲಯಗಳಲ್ಲೇ ಆದಕ್ಕೆ ಬೇಕಾದ ಪಂಡಿತರುಗಳನ್ನು ಇಟ್ಟರೆ ಸಾಕು. ಮಾನ್ಯ ಸದಸ್ಯರು ಮಾತನಾಡುತ್ತಾ, ಅಥರ್ವಣ ವೇದ, ಸ್ಪುಟ್ನಿಕ್, ಅಮೆರಿಕನ್ನರು ಇತ್ಯಾದಿ ವಿಷಯಗಳನ್ನು ಪ್ರಸ್ತಾಪಿಸಿದರು. ಈಗ್ಗೆ ಮೂರು ಸಾವಿರ ವರ್ಷಗಳ ಹಿಂದೆ ಮೊದಲು ಸ್ಪುಟ್ನಿಕ್ ಹಾರಿಸಿದರು ರಷ್ಯನ್ನರು.

ಜೆ.ಬಿ. ಶಂಕರ್‌ರಾವ್: ಅವರು ಹಾರಿಸಿರಬಹುದು; ಈಗ ನೀವು ಪಟಾಕಿ ಹಾರಿಸುತ್ತಿದ್ದೀರಿ.

ಜೆ.ಹೆಚ್. ಪಟೇಲ್: ಜ್ಞಾನದ ಅಧ್ಯಯನಕ್ಕೆ ನಾನು ಅಡ್ಡಿ ಬರುವುದಿಲ್ಲ. ಕೌಟಿಲ್ಯನ ಅರ್ಥ ಶಾಸ್ತ್ರ ಓದಿದವರು ಎಲ್ಲ ಧರ್ಮದ ಮೂಲ ಭಾವನೆಗಳನ್ನು ತಿಳಿದುಕೊಂಡಿದ್ದಾರೆಯೆ? ಮಾನ್ಯ ಸದಸ್ಯರು ಮಾತನಾಡುತ್ತಾ, ನನ್ನ ರಕ್ತದ ಕಣದಲ್ಲಿ ಧರ್ಮವಿದೆ ಎಂದರು. ರಕ್ತದಲ್ಲಿ ಧರ್ಮವನ್ನು ತುಂಬಿಕೊಂಡಿರುವ ಮನೋಧರ್ಮಿಗಳು ಏನಿದ್ದೇವೆ ನಮ್ಮಂಥವರು ಈ ದೇಶವನ್ನು (ಬ್ರಿಟಿಷರ ಕೈಯಲ್ಲಿದ್ದಾಗ ಬೇರೆ ವಿಷಯ) ನಮ್ಮ ಕೈಗೆ ತೆಗೆದುಕೊಂಡ ಮೇಲೆ ನಮಗೆ ಆದ್ಯತೆಗಳು ಗೊತ್ತಿಲ್ಲದೆ ಇರುವುದರಿಂದ, ತಾರತಮ್ಯಗಳು ಗೊತ್ತಿಲ್ಲದೆ ಇರುವುದರಿಂದ ಬಡತನದ ರೇಖೆಯ ಹಿಂದೆ ಹೋಗುತ್ತಿದ್ದೇವೆ. ಜನಗಳು ಸಾಯುತ್ತಿದ್ದಾರೆ. ತಾವು ಇದಕ್ಕೂ ಸಂಸ್ಕೃತಕ್ಕೂ ಏನು ಸಂಬಂಧವೆಂದು ಕೇಳಬಹುದು. ಕೌಟಿಲ್ಯನ ಅರ್ಥ ಶಾಸ್ತ್ರವನ್ನು ಓದಿರುವವರಿಗೆ ಇದು ಗೊತ್ತಿಲ್ಲವೆ?

ಮಳ್ಳೂರು ಆನಂದರಾವ್: ಅವರು ಓದಲೇ ಇಲ್ಲ.

ಜೆ.ಹೆಚ್. ಪಟೇಲ್: ಮಹಾ ಪದವೀಧರರನ್ನು, ಪಂಡಿತರನ್ನು ಶಾಸ್ತ್ರಿಗಳು ಎಂದು ಹೇಳುತ್ತೇವೆ. ಅದೇ ರೀತಿ, ಆಚಾರ್ಯರು, ಭಟ್ಟರು, ಆರಾಧ್ಯರು, ಸ್ವಾಮಿಗಳು ಇದ್ದಾರೆ.

ಜಿ.ಬಿ. ಶಂಕರ್ ರಾವ್: ನೀವು ಯಾವ ಶಾಸ್ತ್ರಿಗಳು?

ಜೆ.ಹೆಚ್. ಪಟೇಲ್: ನಾನು ವಿದ್ಯಾರ್ಥಿ. ನಾನು ಯಾವ ಶಾಸ್ತ್ರಿಯೂ ಅಲ್ಲ.

ಜಿ.ಬಿ. ಶಂಕರರಾವ್: ಇಷ್ಟು ವಾದ ಮಾಡುತ್ತೀರಿ?

ಜೆ.ಹೆಚ್. ಪಟೇಲ್: ವಿದ್ಯಾರ್ಜನೆ ಇರುವುದೇ ಅದರಲ್ಲಿ. ಇಂಥವರ ಕೈಗೇ ಅಲ್ಲವೆ ದೇಶವನ್ನು ಕೊಟ್ಟಿದ್ದು? ಅದಕ್ಕೇ ಮತ್ತೆ ನಾನು ತಮಗೆ ಹೇಳುತ್ತೇನೆ. ಅಭ್ಯಾಸ, ಅಧ್ಯಯನ, ಸಂಶೋಧನೆ ಮತ್ತು ಭಾಷೆಗೆ ಏನಾದರೂ ಹೊಸ ಆಯಾಮಗಳು ಇದ್ದರೆ ಅವನ್ನು ಹುಡುಕಿ ಕಂಡು ಹಿಡಿಯುವ ಕೆಲಸ ಬೇರೆ. ಆದರೆ ನಮ್ಮ ದೃಷ್ಟಿಯಲ್ಲಿ ಹೊಸ ವಿಶ್ವವಿದ್ಯಾನಿಲಯಗಳನ್ನು ತೆರೆಯುವುದಕ್ಕಿಂತ ಇರುವವನ್ನೇ ವ್ಯವಸ್ಥಿತವಾಗಿ ಕೆಲಸ ಮಾಡುವಂತೆ ಮಾಡಬೇಕು ಎಂಬುದು. ಈ ಕಾರ್ಯ ಏತಕ್ಕೆ ಆಗಿಲ್ಲವೆಂದರೆ ಅದಕ್ಕೆ ಮೂಲ ಕಾರಣ ನಾವು ಇಂಗ್ಲೀಷ್ ಭಾಷೆಯಿಂದ ನೇರವಾಗಿ ಸೊರಗಿದ್ದೇವೆ ಮತ್ತು ವೈಚಾರಿಕವಾಗಿ ಸತ್ತು ಹೋಗಿರತಕ್ಕ ಭಾಷೆಗಳ ಬಗ್ಗೆ ಇನ್ನೂ ವಕೀಲಿ ಮಾಡತಕ್ಕ ಜನರು ಏನಿದ್ದಾರೆ, ಆ ವಿಚಾರ ಸರಣಿಯಲ್ಲಿ ಬಂದಿರತಕ್ಕ ಜನರ ಕೈಯಲ್ಲಿ ದೇಶವನ್ನು ಕೊಟ್ಟಿದ್ದೇವೆ. ಅದಕ್ಕೆ ಹಾಗೆ ಆಗಿದೆ.

ಮಳ್ಳೂರು ಆನಂದರಾಯರು: ಸ್ವಾಮೀ

**Deputy Speaker:** It is enough. When the Minister has started giving reply, you have started a debate.

(ವಿಧಾನ ಸಭೆ ಕಲಾಪ, ಫೆಬ್ರವರಿ 6, 1982)

## ಇಂಗ್ಲೀಷ್ ಆಗಬಹುದು; ಮರಾಠಿ ಆದರೆ ತಪ್ಪೇನು? – ಪಟೇಲ್

ಸಂದರ್ಭ: ಮಹಾರಾಷ್ಟ್ರ ಏಕೀಕರಣ ಸಮಿತಿಯ ಶಾಸಕ ಶ್ರೀ ಬಿ.ಬಿ. ಸಯನಕ್‌ರವರು ವಿಧಾನ ಸಭೆಯಲ್ಲಿ ಸಾಮಾನ್ಯವಾಗಿ ಇಂಗ್ಲೀಷಿನಲ್ಲಿಯೇ ಮಾತನಾಡುತ್ತಿದ್ದುದು ರೂಢಿ. ವಿಧೇಯಕವೊಂದರ ಚರ್ಚೆ ಸಮಯದಲ್ಲಿ ಅವರು ತಮ್ಮ ಮಾತೃ ಭಾಷೆ ಮರಾಠಿಯಲ್ಲಿ ಮಾತನಾಡಲು ನಿರ್ಧರಿಸಿದರು. ಇಂಗ್ಲೀಷ್ ಸಹಿಸಿಕೊಳ್ಳುವ ಉಳಿದ ಶಾಸಕರು ಮರಾಠಿಗೆ ಏಕೆ ವಿರೋಧಿಸಬೇಕು? ಪಟೇಲರು ಸಯನಕ್‌ರವರ ಮಾತೃ ಭಾಷೆಯ ಮಮತೆಯನ್ನು ಸಮರ್ಥಿಸಿಕೊಂಡರು.

ಬಿ.ಬಿ. ಸಯಾನಕ್ (ಮರಾಠಿಯಲ್ಲಿ ಮಾತನಾಡಿದಾಗ)

ಗದ್ದಲ

ಶ್ರೀಮತಿ ಪ್ರಮೀಳ: ಅವರ ಭಾಷಣ ನಮಗೆ ಅರ್ಥವಾಗುವುದಿಲ್ಲ .

ಕಡಿದಾಳ್ ದಿವಾಕರ - ಕನ್ನಡದಲ್ಲಿ ಮಾತನಾಡಿ

**Speaker:** Sri Sarnayak, please donot speak in Marathi. If you speak in Marathi, then your speech will not be recorded. None of the Hon. Members can understand your speech.

**B.B. Sayanak** (Again spoke in Marathi)

**Speaker:** Sri Sayanak please speak in English.

**B.B. Sayanak:** I spoke in Marathi. Kannada is my sister language. There are five legislators belonging to Maharashtra Ekikaran Samiti (MES). I can speak in English but the others four cannot. Therefore, it is the duty of the Government to have Marathi Reporters to record our speeches. When I had been to Kerala legislative Assembly, I was told that they are having Kannada Reporters. Like wise, why cannot the Government of Karnataka appoint Marathi Reporters to record our speeches sir.

ಜೆ.ಹೆಚ್. ಪಟೇಲ್: ನಾನು ಮಾನ್ಯ ಸದಸ್ಯರಾದ ಸಯನಕ್ ಅವರನ್ನು ಬೆಂಬಲಿಸುತ್ತೇನೆ. ಅವರ ಮಾತೃ ಭಾಷೆಯಲ್ಲಿ ಮಾತನಾಡಲು ಅವರಿಗೆ ಹಕ್ಕಿದೆ. ರಾಜ್ಯಾಂಗ ಇಂತಹ ಹಕ್ಕು ನೀಡುತ್ತದೆ. ಆದ್ದರಿಂದ ಮರಾಠಿಯಲ್ಲಿ ಮಾತನಾಡಿದರೆ ಯಾರೂ ವಿರೋಧ ಮಾಡಕೂಡದು.

ಶ್ರೀಮತಿ ಪ್ರಮೀಳ: ಅವರ ಭಾಷಣ ನಮಗೆ ಅರ್ಥವಾಗುವುದಿಲ್ಲವಲ್ಲಾ?

ಜೆ.ಹೆಚ್. ಪಟೇಲ್: ನೀವು ಹೇಳುವುದೂ ಸರಿಯೆ. ಆದರೆ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳೋಣ. ಮಾನ್ಯ ಸಯಾನಕ ಅವರಿಗೆ ಕನ್ನಡದಲ್ಲಿ ಉತ್ತರ ಕೊಟ್ಟರೆ ಅರ್ಥವಾಗುವುದಿಲ್ಲ. ಆಗ ಅವರ ಪ್ರಶ್ನೆಗೆ ಇಂಗ್ಲೀಷ್‌ನಲ್ಲಿ ಉತ್ತರ ಕೊಡುವುದು ಸರಿ. ಆದರೆ ಉಳಿದಂತೆ, ಕನ್ನಡನಾಡಿನಲ್ಲಿ ಕನ್ನಡಕ್ಕೆ ಸ್ಥಾನವಿಲ್ಲವೆಂದರೆ ನಾಚಿಕೆಯಾಗುತ್ತೆ. ಮಂತ್ರಿಗಳು ಕಡ್ಡಾಯವಾಗಿ ಕನ್ನಡದಲ್ಲಿಯೇ ಮಾತನಾಡಲಿ, ಉತ್ತರಕೊಡಲಿ. ಯಾರಿಗಾದರೂ ಕನ್ನಡ ಬರದ ಮಂತ್ರಿ ಇದ್ದರೆ ಅವರನ್ನು ಯಾವುದಾದರೊಂದು ಶಾಲೆಗೆ ಕಳುಹಿಸಿ. ತರಬೇತಿ ಕೊಡಿ.

(ವಿಧಾನ ಸಭೆ ಕಲಾಪ : ಮಾರ್ಚ 3, ಮತ್ತು 5, 1980)

## ಕನ್ನಡವನ್ನು ಹಗುರವಾಗಿ ಕಾಣಬೇಡಿ : ಪಟೇಲ್

**ಪಿ.ಕೆ. ಕಳ್ಳಿಗುಡ್ಡ:** ಈ ಸದನದಲ್ಲಿ ಕೆಲವು ಮಂತ್ರಿಗಳು ಆಡಳಿತ ಭಾಷೆ ಕನ್ನಡವಾದರೂ ಇಂಗ್ಲೀಷಿನಲ್ಲಿಯೇ ವ್ಯವಹರಿಸುವ ಅಭ್ಯಾಸ ಬೆಳೆಸಿಕೊಂಡಿದ್ದಾರೆ. ಈ ಗೀಳು ಯಾವಾಗ ಹೋಗುತ್ತೆ? ಉದಾಹರಣೆಗೆ ಆರೋಗ್ಯ ಸಚಿವ ಎ.ಕೆ. ಅಬ್ದುಲ್ ಸಮ್ಮದ್‌ರವರು.

**ಅಧ್ಯಕ್ಷರು:** ಅದಕ್ಕೆ ನೀವೆಲ್ಲರೂ ಮನಸ್ಸು ಮಾಡಬೇಕು.

**ಪಿ.ಕೆ. ಕಳ್ಳಿಗುಡ್ಡ:** ಮಾನ್ಯ ಸಭಾಧ್ಯಕ್ಷರೇ ಈ ವಿಷಯದಲ್ಲಿ ತಾವು ದೃಢ ಮನಸ್ಸು ಮಾಡಿ ಕನ್ನಡ ಬಳಕೆ ತರದಿದ್ದರೆ ನಾವು ಸದನದ ಹೊರಗೇ ಕುಳಿತಿರುತ್ತೇವೆ. ಒಳಗಡೆ ಬರುವುದಿಲ್ಲ. ಮಾನ್ಯ ಶ್ರೀ ಲಕ್ಷ್ಮೀಸಾಗರ ಅವರು ಯಾವಾಗಲೂ ಇಂಗ್ಲೀಷಿನಲ್ಲಿಯೇ ಮಾತನಾಡುತ್ತಾರೆ. ಅವರು ಬೆಂಗಳೂರು ನಗರದಿಂದ ಆರಿಸಿ ಬಂದಿದ್ದರೂ ಕನ್ನಡದಲ್ಲಿ ಮಾತನಾಡುವುದಿಲ್ಲ.

**ಜೆ.ಹೆಚ್. ಪಟೇಲ್:** ಈ ಪ್ರಶ್ನೆ ಇಲ್ಲಿ ಬಂದಾಗಲೆಲ್ಲಾ ಕನ್ನಡ ಭಾಷೆಯನ್ನು ಇಷ್ಟು ಹಗುರದಿಂದ ಕಾಣುವುದು ಸರಿಯಲ್ಲ. ಇದು ಒಂದು ರೀತಿ ಪರಿಹಾಸ್ಯವಾಗಿದೆ. ಇದು ತಪ್ಪು. ಕನ್ನಡ ರಾಜ್ಯದಲ್ಲಿ ಹುಟ್ಟಿ, ಬೆಳೆದು ಕನ್ನಡ ಮಾತನಾಡದಿರುವುದು ನಾಚಿಕೆ ವಿಷಯವೇ. ಏನು ಖಾಯಿಲೆ ಸ್ವಾಮಿ ಇದು?

**ಬಿ. ಬಸವಲಿಂಗಪ್ಪ:** ಮಹಾರಾಷ್ಟ್ರ ಏಕೀಕರಣ ಸಮಿತಿಯ ಶಾಸಕರು ನಿಪ್ಪಾಣಿ ಮಹಾರಾಷ್ಟ್ರಕ್ಕೆ ಸೇರಬೇಕೆಂದು ನಮ್ಮ ವಿಧಾನ ಸಭೆಯಲ್ಲಿ ಪ್ರತಿ ವರ್ಷವೂ ರಾಜ್ಯಪಾಲರ ಭಾಷಣದ ದಿವಸ ಕೇಸರಿ ಪೇಟ ಹಾಕಿಕೊಂಡು ಬಂದು ಕೂಗುತ್ತಾರೆ. ಕಿರಿಚುತ್ತಾರೆ. ಮಹಾರಾಷ್ಟ್ರ ಏಕೀಕರಣ ಸಮಿತಿ ಸದಸ್ಯರಿಗೆ ಕನ್ನಡ ಮಾತನಾಡಕ್ಕೆ ಬರಲ್ವೇ?

**ಜೆ.ಹೆಚ್. ಪಟೇಲ್:** ಯಾಕೆ ಬರೋಲ್ಲಾ. ಖಂಡಿತಾ ಬರುತ್ತೆ, ಆದರೆ ಮಾತನಾಡಲು ಹೋಗುವುದಿಲ್ಲ ಅಷ್ಟೆ. ಅವರಿಗೆ ಕನ್ನಡ ಬರುತ್ತದೆಯೋ ಇಲ್ಲವೇ ಎಂದು ನಿಮಗೆ ಗೊತ್ತಾಗಬೇಕಾದರೆ, ಸಿಕ್ಕಾ ಪಟ್ಟೆ ಅವರನ್ನು ಬಯ್ಯಿರಿ. ಆಗ ಗೊತ್ತಾಗುತ್ತದೆ.

(ವಿಧಾನ ಸಭೆ ಕಲಾಪ : ಮಾರ್ಚಿ 5, 1980)

## ಸ್ವರ್ಗದಲ್ಲಿ ಪಟೇಲರ ಭಾಷೆ ಯಾವುದು?

**ಜೆ.ಹೆಚ್. ಪಟೇಲ್:** ಸ್ವಾಮಿ, ಸ್ವರ್ಗ, ಮರ್ತ್ಸ್ಯ, ಪಾತಾಳ ಎಂದು ಮೂರು ಲೋಕಗಳಿವೆ. ಆದುದರಿಂದ ಸ್ವರ್ಗದಲ್ಲಿರುವವರು ಸಂಸ್ಕೃತವನ್ನು ಮಾತನಾಡುತ್ತಾರೆ. ಇನ್ನು ಮರ್ಥ್ಸ್ಯ ಲೋಕದಲ್ಲಿರುವವರು ಕನ್ನಡ ಮಾತನಾಡುತ್ತಾರೆ. ಕೊನೆಯದಾಗಿ ಪಾತಾಳ ಲೋಕದಲ್ಲಿರುವವರು ಇಂಗ್ಲೀಷ್ ಕಲಿತುಕೊಳ್ಳಲಿ. ಆದುದರಿಂದ ನಾವು ಇಲ್ಲಿರಬೇಕಾದರೆ ಕನ್ನಡವೇ ನಮಗೆ ಇರಲಿ. ಇನ್ನು ಯಾವುದೂ ಬೇಡ.

**ಎಚ್. ಗಂಗಾಧರನ್:** ಸಂಸ್ಕೃತ ದೇವಭಾಷೆಯಲ್ಲ ದೇವನಾಗರಿ ಲಿಪಿ. ಸ್ವರ್ಗದಲ್ಲಿರುವವರು ದೇವಭಾಷೆಯನ್ನಾಡುತ್ತಾರೆಂದು ಭಾವಿಸಿಕೊಂಡಿದ್ದೇವಷ್ಟೆ. ಸಂಸ್ಕೃತವನ್ನು ಕಲಿತವರು ಮರ್ತ್ಯದಲ್ಲಿದ್ದರೆ ಅದೇ ಸ್ವರ್ಗ.

**ಎಸ್.ಆರ್. ಬೊಮ್ಮಾಯಿ:** ಒಂದಲ್ಲ ಒಂದು ದಿವಸ ಇಲ್ಲಿರುವವರೆಲ್ಲಾ ಸ್ವರ್ಗಕ್ಕೆ ಹೋಗಬೇಕಾಗುತ್ತದೆ. ಆದುದರಿಂದ ಸಂಸ್ಕೃತ ಸ್ವಲ್ಪ ಗೊತ್ತಿದ್ದರೆ ಅನುಕೂಲವಾಗುತ್ತದೆಯೇನೋ.

**ಪ್ರೊ: ಎ. ಲಕ್ಷ್ಮೀಸಾಗರ್:** ಅದಕ್ಕೋಸ್ಕರ ನಮ್ಮ ಜೆ.ಹೆಚ್. ಪಟೇಲರು ಬೇಗ ಸಂಸ್ಕೃತವನ್ನು ಕಲಿತುಕೊಳ್ಳುವುದು ಒಳ್ಳೆಯದೆಂದು ಕಾಣುತ್ತದೆ.

(ವಿಧಾನಸಭೆ ಕಲಾಪ, ಫೆಬ್ರವರಿ 4, 1981)

(ಸಂದರ್ಭ: ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ಮಂಡಿಸಿದ
ವಿಶ್ವಾಸ ಕೋರುವ ನಿರ್ಣಯದ ಬಗೆಗೆ ಸಮರ್ಥನೆಯ ಮಾತುಗಳು)

**ರಾಮಕೃಷ್ಣ ಹೆಗಡೆ (ಮಾನ್ಯ ಮುಖ್ಯಮಂತ್ರಿ):** ಮಾನ್ಯ ಜೆ.ಹೆಚ್. ಪಟೇಲರು ನಮ್ಮ ಸರ್ಕಾರವನ್ನು ಕುರಿತಂತೆ ಆಡಿದ ಮಾತುಗಳು ಯತಾರ್ಥವಾದದ್ದು. ನಾವು ಅಧಿಕಾರ ಸ್ವೀಕರಿಸುವಾಗ ಈ ರಾಜ್ಯದ ಪ್ರತಿ ವ್ಯಕ್ತಿಗೂ ನ್ಯಾಯಕೊಡುವ ಪ್ರತಿಜ್ಞೆ ಮಾಡಿದ್ದೇವೆ. ನ್ಯಾಯದ ದೃಷ್ಟಿಯಲ್ಲಿ ಸ್ವಲ್ಪ ಮಟ್ಟಿಗೆ ಮಾರ್ಪಾಟು ಮಾಡುವ ಪ್ರಸಂಗವಿದ್ದಲ್ಲಿ ಅದು ಕನ್ನಡಕ್ಕೆ ಆದ ಅನ್ಯಾಯ ಎಂದು ಭಾವಿಸಲಾಗದು. ಇವತ್ತು ಜೆ.ಹೆಚ್. ಪಟೇಲರು ಹೇಳಿದ ಪ್ರತಿಯೊಂದು ಮಾತೂ ಸತ್ಯ. ಕನ್ನಡಕ್ಕಾಗಿ, ಕನ್ನಡ ಸ್ಥಾನಕ್ಕಾಗಿ, ಮಾನಕ್ಕಾಗಿ, ಇಲ್ಲಿರುವ ಪ್ರತಿಯೊಬ್ಬ ಸದಸ್ಯನೂ ತನ್ನ ಪ್ರಾಣ ಕೊಡಲು ಸಿದ್ದನಿದ್ದಾನೆ.

(ರಾಮಕೃಷ್ಣ ಹೆಗಡೆ (ಮುಖ್ಯಮಂತ್ರಿ) ವಿಧಾನ ಸಭೆ: ಜನವರಿ 17, 1984)

ಕನ್ನಡಕ್ಕೆ ಯಾವುದೇ ಕಾರಣದಿಂದ ಧಕ್ಕೆ ಬಾರದಂತೆ ನೋಡಿಕೊಳ್ಳುವ ವಿಶ್ವಾಸ ನನಗಿದೆ. ಆ ಬಗ್ಗೆ ನಮಗೆ ಎಚ್ಚರವಿದೆ. ಕನ್ನಡದ ಬಗ್ಗೆ ಜವಾಬ್ದಾರಿ ಇದೆ. ಕನ್ನಡದ ಬಗ್ಗೆ ನಾವೂ ಕೂಡ ಶಕ್ತಿ ಮೀರಿ ದುಡಿದಿದ್ದೇವೆ. ಕನ್ನಡಮ್ಮನ ಪ್ರಚಾರಪುತ್ರರು ನಾವಲ್ಲ. ನಿಜವಾಗಿಯೂ ಕನ್ನಡಮ್ಮನ ಸೇವೆಗೆ ಬದ್ಧವಾದ ಸರ್ಕಾರ ನಮ್ಮದಾಗಿದೆ.

(ಜೆ.ಹೆಚ್. ಪಟೇಲ್ (ವಿದ್ಯುಚ್ಛಕ್ತಿ ಮತ್ತು ಅಬಕಾರಿ ಮಂತ್ರಿ), ವಿಧಾನ ಸಭೆ: ಜನವರಿ 17, 1984)

## ಕನ್ನಡಿಗರ ಔದಾರ್ಯದ ದುರುಪಯೋಗ

ಪೂನಾದಲ್ಲಿರತಕ್ಕಂತಹ ಕನ್ನಡಿಗರು ಮರಾಠಿ ಭಾಷೆಯನ್ನು ಕಲಿತೇ ಕಲಿಯುತ್ತಾರೆ. ಮದ್ರಾಸಿನಲ್ಲಿರತಕ್ಕಂತಹ ಕನ್ನಡಿಗರು ತಮಿಳನ್ನು ಕಲಿತೇ ಕಲಿಯುತ್ತಾರೆ. ಹೈದರಾಬಾದ್‌ನಲ್ಲಿರತಕ್ಕಂತಹ ಕನ್ನಡಿಗರು ತೆಲುಗನ್ನು ಮಾತನಾಡೇ ಮಾತನಾಡುತ್ತಾರೆ. ಹೊರ ರಾಜ್ಯದಲ್ಲಿರತಕ್ಕಂತಹ ಕನ್ನಡಿಗರು ಆಯಾ ರಾಜ್ಯದ ಭಾಷೆಯನ್ನು ಕಲಿತೇ ಕಲಿಯುತ್ತಾರೆ.

ಅವರುಗಳು ನಮ್ಮ ಭಾಷೆಯ ಚಿತ್ರಗಳು ಬೇಕೇ ಬೇಕು ಎಂದು ಹೇಳುವುದಿಲ್ಲ ಮತ್ತು ಅಲ್ಲಿರತಕ್ಕಂತಹ ಭಾಷೆಯನ್ನು ಕಲಿತೇ ಕಲಿಯುತ್ತಾರೆ.

ಆದರೆ ಬೆಂಗಳೂರಿನಲ್ಲಿರತಕ್ಕಂತಹ ಹೊರರಾಜ್ಯದವರು 50 ವರ್ಷಗಳ ಕಾಲ ಬೆಂಗಳೂರಿನಲ್ಲಿದ್ದರೂ ಕನ್ನಡವನ್ನು ಕಲಿಯಬೇಕು ಎನ್ನುವ ಮನಸೇ ಇಲ್ಲ. ಅದು ನಮ್ಮ ನಾಡಿನ ಜನರ ವೀಕ್‌ನೆಸ್. ನನ್ನ ಭಾಷೆಯನ್ನು ಕಲಿತರೆ ಮಾತ್ರ ನೀನು ಇಲ್ಲಿರಲು ಸಾಧ್ಯ. ಇಲ್ಲ ಎಂದರೆ ಸಾಧ್ಯವಿಲ್ಲ ಎನ್ನಬೇಕು. ಸರ್ಕಾರ ಅದನ್ನು ಕಂಪೆಲ್ ಮಾಡಬೇಕು; ಇಲ್ಲ ಎಂದರೆ ಅವರನ್ನು ಓಡಿಸಬೇಕು ಎಂದು ಏನಲ್ಲ. ಆ ರೀತಿಯ ಭಾಷೆಯ ಒತ್ತಡ ನಮ್ಮ ರಾಜ್ಯದಲ್ಲಿ ಇಲ್ಲ. ಇದನ್ನು ಬಹಳ ಸಾರಿ ನಾವು ಹೇಳುತ್ತಿದ್ದೇವೆ.

(ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ) ಫೆಬ್ರವರಿ 26, 1996)

## ಸ್ವಾಭಿಮಾನವಿಲ್ಲ: ಕನ್ನಡ ಹೇಗೆ ಬೆಳೆಯುತ್ತದೆ?

ಕನ್ನಡ ಬೆಳೆಯಬೇಕು, ಕನ್ನಡ ಬೆಳೆಯಬೇಕು ಎಂದರೆ ಹೇಗೆ ಬೆಳೆಯುತ್ತದೆ. ಹೊರರಾಜ್ಯದವನು 50 ವರ್ಷಗಳಿಂದ ಬೆಂಗಳೂರಿನಲ್ಲಿ ಇದ್ದರೂ ಅವನಿಗೆ ಕನ್ನಡವೇ ಬರುವುದಿಲ್ಲ. ಅವನ ಭಾಷೆಯನ್ನು ಕಲಿತುಕೊಳ್ಳುವುದಕ್ಕೆ ನಮ್ಮವರು ತಯಾರು ಆಗುತ್ತಾರೆಯೇ ಹೊರತು, ಅವನೊಂದಿಗೆ ಕನ್ನಡದಲ್ಲಿ ಮಾತನಾಡುವುದಿಲ್ಲ. ನಮ್ಮ ಭಾಷೆಯ ಅಭಿಮಾನ ನಮ್ಮ ಜನರಿಂದಲೇ ಬರಬೇಕು. ಇದನ್ನೆಲ್ಲ ಸರ್ಕಾರ ಮಾಡುವುದಕ್ಕೆ ಸಾಧ್ಯವಾಗುತ್ತದೆಯೇ? ಎಲ್ಲಿ ಆಗಲಿ, ಯಾವ ದೇಶದಲ್ಲಿ ಆಗಲೀ ಜನಶಕ್ತಿಯಿಂದ, ಜನರ ಒತ್ತಡದಿಂದ ಭಾಷೆಯು ಬೆಳೆಯಬೇಕೇ ಹೊರತು ಸರ್ಕಾರಗಳಿಂದಲ್ಲ.

(ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ) ವಿಧಾನಸಭೆ, ಫೆಬ್ರವರಿ 27, 1996)

## ಇದ್ಯಾವ ಮೋಷನ್ನು .. ಲೂಸ್ ಮೋಷನ್ನೇ?

ಸಂದರ್ಭ: ಒಮ್ಮೆಲೇ ವಿಧಾನಸಭೆಯಲ್ಲಿ ಇಂಗ್ಲೀಷ್ ಬಳಸಿದ ಮಾರುಕಟ್ಟೆ ಮತ್ತು ಮುಜರಾಯಿ ಖಾತೆಯವರನ್ನು ರೇಗಿಸುವ ಧನಿಯಲ್ಲಿ.

ಮಾನ್ಯ ಮಂತ್ರಿಗಳು ಇಲ್ಲಿಯವರೆಗೂ ಕನ್ನಡದಲ್ಲಿ ಮಾತನಾಡುತ್ತಿದ್ದರು. ಈಗ ಮಾನ್ಯ ಮಂತ್ರಿಗಳು ಯಾವ ಭಾಷೆಯಲ್ಲಿ ಮಾತನಾಡಿದರೋ ನಮಗೆ ಗೊತ್ತಾಗಲಿಲ್ಲ. ತಾವು ಸಹ ಯು ಪ್ಲೀಸ್ ಮೂವ್ ಎಂದಿರಿ. ಅವರು ಮೋಷನ್ ಮೂವ್ಡ್ ಎಂದರು. ಅದು ಯಾವ ಮೋಷನ್ ಎಂದು ನಮಗೆ ಗೊತ್ತಾಗಲಿಲ್ಲ. ಮಾನ್ಯ ಮಂತ್ರಿಗಳು ಹೊಸಬರು. ಲೂಸ್ ಮೋಷನ್ ಏನಾದರೂ ಆಯಿತೋ ಏನೋ? ಕನ್ನಡದಲ್ಲಿ ಹೇಳಿದ್ದರೆ ಚೆನ್ನಾಗಿತ್ತು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ, ಮಾರ್ಚಿ 26, 1980)

## ಕೊಟ್ಟು, ಕೊಳ್ಳುವ ಹಿರಿತನ

ಜೆ.ಹೆಚ್. ಪಟೇಲ್ (ವಿದ್ಯುತ್ ಖಾತೆ ಮಂತ್ರಿ): ನಾನು ಕನ್ನಡದ ಅಭಿಮಾನದ ಬಗೆಗೆ ಯಾರಿಂದಲೂ ಕಲಿಯಬೇಕಾಗಿಲ್ಲ. ಉದಾಹರಣೆಗೆ ಶ್ರೀಮಾನ್ ಎಸ್. ಬಂಗಾರಪ್ಪನವರು ಸಹಿತ ಸಿನಿಮಾ ನಟರಾಗಿದ್ದರು. ಉಳಿದಂತೆ ಹೇಗಾದರೂ ಇರಲಿ, ಕಲಾವಿದರಾದ ಇವರಿಂದ ನಾನು ಕನ್ನಡದ ಅಭಿಮಾನದ ವಿಷಯವನ್ನು ಕಲಿಯಬೇಕು ಎಂದು ನಿರೀಕ್ಷಿಸುವುದು... ಸರಿಯೇನು?

ಎಸ್. ಬಂಗಾರಪ್ಪ: ಭೇಷ್. ನೀವು ಹೇಳುವುದನ್ನು ನಾನು ಮೆಚ್ಚುತ್ತೇನೆ. ಬಹಳ ಸಂತೋಷ.

(ವಿಧಾನಸಭೆ ಕಲಾಪ ಜನವರಿ 18, 1984)

## ಕನ್ನಡ ಲೇಖಕರು ಇಡೀ ದೇಶಕ್ಕೆ ತಿಳಿಯಬೇಕು

ನಾನು ಇಂಗ್ಲೀಷ್ ಸಾಹಿತ್ಯದ ವಿದ್ಯಾರ್ಥಿ. ಮಿಲ್ಟನ್, ವರ್ಡ್ಸ್‌ವರ್ತ್ ಅಂತಹ ಮಹಾಕವಿಗಳನ್ನು ಕರ್ನಾಟಕದಲ್ಲಿ ಹುಟ್ಟಿದ ನಾನು ಓದಿದ್ದೇನೆ. ಅದೇ ಮಿಲ್ಟನ್, ವರ್ಡ್ಸ್‌ವರ್ತ್‌ರಂತೆಯೇ, ಅವರ ಮಟ್ಟದಲ್ಲಿ ವಿಚಾರ ಮಾಡಿದ ಒಬ್ಬ ಕನ್ನಡ ಕವಿಯನ್ನು ಜಗತ್ತಿನ ಬೇರೆ ಕಡೆ ಯಾರೂ ಓದುವುದಿಲ್ಲ. ಬಸವಣ್ಣರನ್ನು ಅರ್ಥ ಮಾಡಿಕೊಂಡಿದ್ದರೆ ಕಾರ್ಲ್‌ಮಾರ್ಕ್ಸ್‌ಗಿಂತ ಮುಂಚೆ ಬಸವಣ್ಣನವರ ಬಗ್ಗೆ ಪ್ರಪಂಚದ ಜನ ತಿಳಿದುಕೊಳ್ಳಬಹುದಾಗಿತ್ತು. ವಿಶ್ವ ಸಾಹಿತ್ಯದಲ್ಲಿ ಇದೂ ಒಂದು ದೊಡ್ಡ ಕೊರತೆಯೇ. ಕಾಲದ ಒತ್ತಡದಿಂದ, ಆ ಸಂದರ್ಭದಿಂದ ನಮ್ಮಲ್ಲಿರತಕ್ಕ ಮಹಾನ್ ಕವಿಗಳು ಹೊರಗಡೆಯ ಜಗತ್ತಿಗೆ ಪರಿಚಯ ಆಗಲಿಲ್ಲ. ಕೊನೆಯ ಪಕ್ಷ ನಮ್ಮ ದೇಶದಲ್ಲಿಯಾದರೂ ಕನ್ನಡದಲ್ಲಿ ಇರತಕ್ಕಂತಹ ಸಾಹಿತ್ಯ ಭಂಡಾರ, ವಿಚಾರಗಳು ಬೇರೆಯವರಿಗೆ ತಿಳಿಯಲೇಬೇಕು.

ಕನ್ನಡದ ರಾಷ್ಟ್ರಕವಿ ಕುವೆಂಪು ಪ್ರತಿಭಾನ್ವಿತ ಲೇಖಕ ಡಾ: ಯು.ಆರ್. ಅನಂತಮೂರ್ತಿ -ಇವರೆಲ್ಲರಿಗೆ ಭಾರತೀಯ ಜ್ಞಾನಪೀಠ ಪ್ರಶಸ್ತಿ ದೊರೆತಿರುವುದು ತಮಗೆ ತಿಳಿದಿದೆ. ಕನ್ನಡದಲ್ಲಿ ಎಷ್ಟು ಉತ್ತಮ ಚಿಂತನೆ ಇದೆ, ಕರ್ತೃತ್ವ ಶಕ್ತಿ ಇದೆ, ಪ್ರಬುದ್ಧ ಹಾಗೂ ವೈಜ್ಞಾನಿಕ ವಿಷಯಗಳ ಪ್ರತಿಪಾದನೆ ಇದೆ ಎಂಬುದಕ್ಕೆ ಇದೊಂದು ನಿದರ್ಶನ.

(ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ) ವಿಧಾನ ಸಭೆ ಕಲಾಪ, ಡಿಸೆಂಬರ್ 24, 1994)

## ಕುವೆಂಪು ಅವರ ಭಾಷಾ ಸಾಮರಸ್ಯ ದೃಷ್ಟಿ

ರಾಷ್ಟ್ರಕವಿ ಕುವೆಂಪು ಅವರಿಗೆ ಭಾರತೀಯ ಭಾಷೆಗಳ ಬೆಳವಣಿಗೆ ಬಗೆಗೆ ವಿಶಾಲ ದೃಷ್ಟಿಯಿತ್ತು; ಹಠಮಾರಿತನ ಇರಲಿಲ್ಲ.

ದಿಲ್ಲಿಯಲ್ಲಿ, ರಾಷ್ಟ್ರಮಟ್ಟದಲ್ಲಿ ತ್ರಿಭಾಷಾ ಸೂತ್ರವನ್ನು ಕುರಿತು ಉನ್ನತ ಮಟ್ಟದ ಚರ್ಚೆ ನಡೆಯಿತು. ಕುವೆಂಪು ಈ ಚರ್ಚೆಯಲ್ಲಿ ಪಾಲ್ಗೊಳ್ಳಲು ದಿಲ್ಲಿಗೆ ಬಂದಿದ್ದರು. ನಮ್ಮನ್ನು ಕರೆಸಿಕೊಂಡರು. ಡಾ: ರಾಂ ಮನೋಹರ್ ಲೋಹಿಯಾ, ಗೋಪಾಲಗೌಡರು ಮತ್ತು ನಾನು ಕುವೆಂಪುರವರೊಂದಿಗೆ ಈ ವಿಷಯ ಕುರಿತು ದೀರ್ಘ ಚರ್ಚೆ ನಡೆಸಿದೆವು.

ಕುವೆಂಪುರವರು ಲೋಹಿಯಾರವರ ದೃಷ್ಟಿಕೋನವಾದ ಇಂಗ್ಲೀಷ್ ಬೇಡ ಎಂಬ ವಾದವನ್ನು ಒಪ್ಪಿದ್ದರು. ಕುವೆಂಪು ಮತ್ತು ಲೋಹಿಯಾ ಇಂಗ್ಲೀಷಿನಿಂದ ಈ ದೇಶಕ್ಕೆ ಆಗಬಹುದಾದ ಹಾನಿ ಮತ್ತು ಮಾತೃ ಭಾಷೆಗಳು ಬೆಳೆಯದೇ ಇರತಕ್ಕ ಸ್ಥಿತಿ ಕುರಿತು ಎರಡು-ಮೂರು ಗಂಟೆ ಚರ್ಚಿಸಿದರು.

ನಾವು ಯಾರೂ ಇಂಗ್ಲೀಷ್ ವಿರೋಧಿಗಳಲ್ಲ ಎಂದು ಸ್ಪಷ್ಟಪಡಿಸಿದ ಕುವೆಂಪುರವರು, ಲೋಹಿಯಾರವರಾಗಲೀ, ಅವರ ಶಿಷ್ಯರಾಗಲೀ ಇಂಗ್ಲೀಷಿನ ಸಾಹಿತ್ಯಿಕ ಇಲ್ಲವೇ ಸಾಂಸ್ಕೃತಿಕ ಬೆಳವಣಿಗೆಗೆ ಎಂದೂ ಅಡ್ಡಿಯಾಗಿಲ್ಲ ಎಂಬ ಅಂಶವನ್ನು ಬಿಡಿಸಿ ಬಿಡಿಸಿ ಹೇಳಿದರು.

"ನಾನು ಸಹಿತ ಡಾಂಟೆ, ಈಲಿಯಟ್‌ರಿಂದ ಪ್ರಭಾವಿತನಾದವನು. ನಾನು ಇಂಗ್ಲೀಷ್ ಭಾಷೆಯನ್ನು ಎಂದೂ ದ್ವೇಷಿಸುವುದಿಲ್ಲ. ಆದರೆ ಎಲ್ಲವೂ ಇಂಗ್ಲೀಷ್‌ನಿಂದಲೇ ನಡೆಯಬೇಕು ಎಂದು ಪಟ್ಟುಹಿಡಿದರೆ ನಮ್ಮ ಭಾಷೆಯಾಗಲೀ, ಕರ್ತೃತ್ವವಾಗಲೀ ಬೆಳೆಯುವುದಿಲ್ಲ" ಹೀಗೆಂದು ಸ್ಪಷ್ಟಪಡಿಸಿದರು ಕುವೆಂಪು.

(ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ) ವಿಧಾನಸಭೆ, ಡಿಸೆಂಬರ್ 24, 1994)

### ಅಸಾಧಾರಣ ಮನೋಬಲ

ಮಾನ್ಯ ಜೆ.ಹೆಚ್. ಪಟೇಲರು ಯಾರಿಗೂ ಇಲ್ಲದಂತಹ ವಿಲ್‌ಪವರ್ ಹೊಂದಿದ್ದ ಮನುಷ್ಯ. ಅಪ್ರತಿಮ ಧೈರ್ಯಶಾಲಿ. ಬಂಗಾರದಷ್ಟು ಅಪ್ಪಟ ಪರಿಶುದ್ಧ ವ್ಯಕ್ತಿತ್ವ. Simultaneously he was both feudal and social. We could see many other facets of his life as well. He had no inhibitions and that was his charm.

ನಾನೇ ಎಷ್ಟೋ ಸಾರಿ ಸದನದಲ್ಲಿ ಇವರು ಏನು ಮಾತನಾಡುತ್ತಿದ್ದಾರೆ ಎಂದು ಯೋಚಿಸುವುದರೊಳಗಾಗಿ ಅವರ ವ್ಯಕ್ತಿತ್ವದ ಮತ್ತೊಂದು ಮೆರಗು ಮಿಂಚಿ, ಸದಾಕಾಲ ಇವರ ಬಗೆಗೆ ಗೌರವದ ಮನೋಸ್ಥಿತಿಯನ್ನು ಮೂಡಿಸುತ್ತಿತ್ತು.

ಪ್ರಬುದ್ಧ ಮುತ್ಸದ್ದಿ. ಜನಪ್ರಿಯತೆ ಅಥವಾ ಮುಂದಿನ ಚುನಾವಣೆ ಇವರ ದೃಷ್ಟಿಯಲ್ಲಿ ಇರಲೇ ಇಲ್ಲ. ನಿಷ್ಠುರವಾಗಿ, ರಾಜ್ಯಕ್ಕೆ ಯಾವುದು ಹಿತ, ಯಾವುದನ್ನು ಮಾಡಲೇ ಬೇಕು - ಅದನ್ನು ಮಾಡುತ್ತಿದ್ದವರು ನನ್ನ ಆತ್ಮೀಯ ಮಿತ್ರ ಪಟೇಲರು.

(ಕೆ.ಹೆಚ್. ಶ್ರೀನಿವಾಸ (ವಿರೋಧಪಕ್ಷದ ನಾಯಕರು) ವಿಧಾನ ಪರಿಷತ್ತು, ಫೆಬ್ರವರಿ 27, 2001)

# 14

# ಸಂಸತ್ತಿನಲ್ಲಿ ಪಟೇಲರು

## ಸಂಸತ್ತಿನಲ್ಲಿ ಕನ್ನಡದ ಕಹಳೆ

ನಾಲ್ಕನೆಯ ಲೋಕಸಭೆಯಲ್ಲಿ 1967-70ರ ಅವಧಿಯಲ್ಲಿ, ಕರ್ನಾಟಕದ ಶಿವಮೊಗ್ಗ ಸಂಸದೀಯ ಕ್ಷೇತ್ರವನ್ನು ಪ್ರತಿನಿಧಿಸಿದವರು ಜೆ.ಹೆಚ್. ಪಟೇಲರು.

ಸಂಸತ್ತಿನಲ್ಲಿ ಅದುವರೆವಿಗೂ ಪ್ರಧಾನವಾಗಿ ಬಳಸಲಾಗುತ್ತಿದ್ದ ಭಾಷೆಗಳೆಂದರೆ ಹಿಂದಿ ಮತ್ತು ಇಂಗ್ಲೀಷ್. ಉಳಿದ ಭಾರತೀಯ ಭಾಷೆಗಳು ಗೌಣ. ಕನ್ನಡವನ್ನಂತೂ ಕೇಳಿದವರೇ ಇಲ್ಲ.

ತಾವು ಪ್ರತಿನಿಧಿಸುವ ಸಾಮಾನ್ಯ ಮತದಾರರ ಆಶೋತ್ತರ ಮತ್ತು ಸಮಸ್ಯೆಗಳನ್ನು ಸಂಸದೀಯ ವೇದಿಕೆಯಲ್ಲಿ ಆತನ ಭಾಷೆಯಲ್ಲಿಯೇ ವ್ಯಕ್ತಪಡಿಸಬಾರದೇಕೆ - ಎಂದಿತು ಪಟೇಲರ ಸಂಸದೀಯ ಮನಸ್ಸು.

ಸಂಸತ್ತಿನಲ್ಲಿ ಕನ್ನಡ ಬಳಸುವುದು ಹೇಳಿದಷ್ಟು ಸುಲಭವಲ್ಲ. ಪಟೇಲರು ಇದಕ್ಕಾಗಿ ಹೋರಾಟವನ್ನೇ ನಡೆಸಬೇಕಾಯಿತು. ಪಟೇಲರೇ ಗೆದ್ದರು. ಐದು ವರ್ಷಕಾಲ ಕನ್ನಡದಲ್ಲಿ ಮಾತನಾಡಿದ ಹೆಗ್ಗಳಿಕೆ ಇವರದಾಯಿತು. ಸಂವಿಧಾನಬದ್ಧವಾದ ತಮ್ಮ ಹಕ್ಕನ್ನು ಚಲಾಯಿಸಿ ಕನ್ನಡವನ್ನು ಲೋಕಪ್ರಿಯಗೊಳಿಸಿದ ಇವರ ಅಳಿಲು ಸೇವೆ ಸಂಸದೀಯ ಇತಿಹಾಸವಾಯಿತು.

ಪಟೇಲರು ಪಟ್ಟುಹಿಡಿದು ತಾವು ಪ್ರತಿನಿಧಿಸುವ ಕ್ಷೇತ್ರದ ಜನರ ಭಾಷೆಯಾದ ಕನ್ನಡದಲ್ಲಿ ಮಾತನಾಡೇ ತೀರುತ್ತೇನೆಂಬ ದೀಕ್ಷೆತೊಟ್ಟ ಕಾರಣದಿಂದ ಸಂಸತ್ತಿಗೆ ಲಾಭವೇ ಆಯಿತು. ಸಂಸತ್ತಿನ ಕಛೇರಿ (ಪಾರ್ಲಿಮೆಂಟ್ ಸೆಕ್ರೆಟೇರಿಯಟ್) ಉಭಯ ಸದನಗಳಲ್ಲಿ ಭಾರತೀಯ ಭಾಷೆಗಳ ಅನುವಾದಕರನ್ನು ಆಗಿಂದಾಗಲೆ ನೇಮಿಸಲು ಮುಂದಾಯಿತು.

ಭಾರತೀಯ ಭಾಷೆಗಳನ್ನು ಮಾತನಾಡುವ ಸಂಸದರಿಗೆ ಪಟೇಲರು ಹೊಸ ಸ್ಫೂರ್ತಿ, ಉತ್ಸಾಹ ಮತ್ತು ಆಸಕ್ತಿ ತಂದಿತ್ತರು.

(ಪಟೇಲರ ಕೆಲವು ಮಾತುಗಳಷ್ಟನ್ನೇ ಆಯ್ದು ಇಲ್ಲಿ ಪ್ರಕಟಿಸಲಾಗಿದೆ. ಇದರ ಮೂಲ - ಮಾಜಿ ಶಾಸಕ ಕೋಣಂದೂರು ಲಿಂಗಪ್ಪನವರು ಬರೆದ "ಪಾರ್ಲಿಮೆಂಟಿನಲ್ಲಿ ಪಟೇಲರು" ಗ್ರಂಥ ಮತ್ತು ಲೋಕಸಭೆಯ ಸಂಶೋಧನಾ ವಿಭಾಗ ಒದಗಿಸಿದ ಅಧಿಕೃತ ಕಲಾಪಗಳ ದಾಖಲೆ LS IV/PS/Vol.KXIX/1967-70)

## "ಕನ್ನಡಕ್ಕಾಗಿ ಕೈಎತ್ತು"

ಜೆ.ಹೆಚ್. ಪಟೇಲ್ (ಲೋಕಸಭಾ ಕ್ಷೇತ್ರ): (ಕನ್ನಡದಲ್ಲಿ) ಮಾನ್ಯ ಅಧ್ಯಕ್ಷರೇ, ಸ್ವಾಮಿ, ಸಂವಿಧಾನಬದ್ಧವಾದ ನನ್ನ ಹಕ್ಕು ಚಲಾಯಿಸಲು, ಎಂದರೆ ನನ್ನ ಮಾತೃಭಾಷೆಯಲ್ಲಿ ಮಾತನಾಡಲು ತಾವು ಅವಕಾಶ ಕೊಟ್ಟಿದ್ದಕ್ಕೆ, ನನಗೆ ತುಂಬಾ ಸಂತೋಷವಾಗಿದೆ. ಇದಕ್ಕಾಗಿ ತಮಗೆ ವಂದಿಸುತ್ತೇನೆ. ಮೇಲಾಗಿ ತಾವು ಸಹ ನನ್ನ ಭಾಷೆಯನ್ನು ಅರ್ಥಮಾಡಿಕೊಳ್ಳಬಲ್ಲಿರೆಂದು ತಿಳಿದು ಬಹಳ ಆನಂದವಾಗಿದೆ.

ಸ್ವಾಮಿ, ನಾವೀಗ ಹಿಂದಿ ಅಥವಾ ಇಂಗ್ಲಿಷ್ ಭಾಷೆಗಳ ಸಮಸ್ಯೆ ಕುರಿತು ಚರ್ಚಿಸುತ್ತಿಲ್ಲ. ನಮ್ಮ ಮುಂದೆ ಮತ್ತು ಈ ದೇಶದ ಮುಂದಿರುವ ಈಗಿರುವ ಸಮಸ್ಯೆ ಆಹಾರದ ಕೊರತೆ. ಸಮಗ್ರ ಆಹಾರ ಕೊರತೆಯ ಸಮಸ್ಯೆಯ ಬಗ್ಗೆ ಒಂದು ರಾಷ್ಟ್ರೀಯ ಸಮಿತಿಯನ್ನು ನೇಮಿಸಬೇಕೆಂದು ನಾನು ಅಪೇಕ್ಷಿಸುತ್ತೇನೆ. ಈ ಸಮಿತಿಗೆ ದೇಶದ ಎಲ್ಲಾ ರಾಜಕೀಯ ಪಕ್ಷಗಳ ಸಹಕಾರವೂ ಲಭ್ಯವಾಗಬೇಕು.

ಈಗ ನಾನು ಮೈಸೂರು ರಾಜ್ಯದ ಕೆಲವು ಬರಗಾಲ ಪೀಡಿತ ಜಿಲ್ಲೆಗಳಲ್ಲಿರುವ ಆಹಾರ ಸಮಸ್ಯೆ ಕುರಿತು, ತಮ್ಮ ಹಾಗೂ ಭಾರತ ಸರ್ಕಾರದ ಗಮನ ಸೆಳೆಯ ಬಯಸುತ್ತೇನೆ.

ಮೈಸೂರು ರಾಜ್ಯದಲ್ಲಿ ಶೇಕಡ 8 ರಷ್ಟು ನೀರಾವರಿ ಪ್ರದೇಶವಿದ್ದರೆ, ಪಕ್ಕದ ರಾಜ್ಯಗಳಾದ ಆಂಧ್ರಪ್ರದೇಶ ಮತ್ತು ಮದರಾಸು ಇದರ ಎರಡು ಅಥವಾ ಮೂರು ಪಟ್ಟು ನೀರಾವರಿ ಪ್ರದೇಶವಿದೆ. ಹೀಗಿದ್ದರೂ 'ದಿ ರಿವ್ಯೂ ಆಫ್ ಸ್ಕೇರ್ಸಿಟಿ ಅಂಡ್ ಫುಡ್ ಸಿಚುಯೇಶನ್ ಇನ್ ಇಂಡಿಯಾ' ಈ ಪುಸ್ತಕದಲ್ಲಿ, ಮೈಸೂರು ರಾಜ್ಯವನ್ನು ಹೆಚ್ಚುವರಿ ಆಹಾರ ಹೊಂದಿರುವ ರಾಜ್ಯವೆಂದು ಪರಿಗಣಿಸಿ ನಮೂದಿಸಿರುವುದು ನನಗೆ ಆಶ್ಚರ್ಯವನ್ನು ಮಾಡಿದೆ. ಆದ್ದರಿಂದ ಭಾರತ ಸರ್ಕಾರ ಮೈಸೂರು ರಾಜ್ಯದ, ವಿಶೇಷವಾಗಿ ಬರಗಾಲಕ್ಕೊಳಗಾದ ಬಳ್ಳಾರಿ, ಗುಲಬರ್ಗಾ, ವಿಜಾಪುರ ಮತ್ತು ಮೈಸೂರು ಜಿಲ್ಲೆಗಳ ಆಹಾರದ ಅವಶ್ಯಕತೆಗಳನ್ನು ಪೂರೈಸಬೇಕು. ಸರ್ಕಾರ ಈ ಜಿಲ್ಲೆಗಳನ್ನು 'ಬರಪೀಡಿತ ಪ್ರದೇಶ' ಎಂದು ಘೋಷಿಸುವಂತೆ ನಾನು ಒತ್ತಾಯಿಸುತ್ತೇನೆ.

(ಲೋಕಸಭೆ ಕಲಾಪ, ಮಾರ್ಚ್ 3, 1967)

## ಹೀನಾಯ ಸ್ಥಿತಿಯಲ್ಲಿ ಪರಿಶಿಷ್ಟ ಜನ

ಜೆ.ಹೆಚ್. ಪಟೇಲ್: ಸನ್ಮಾನ್ಯ ಅಧ್ಯಕ್ಷರೇ, ದೇಶಕ್ಕೆ ಸ್ವಾತಂತ್ರ್ಯ ಬಂದು 20 ವರ್ಷಗಳಾದರೂ ನಮ್ಮ ಸಮಾಜದಲ್ಲಿನ ಪರಿಶಿಷ್ಟ ವರ್ಗ ಮತ್ತು ಜಾತಿಗಳಿಗೆ ಯಾವುದೇ ಮಾನ್ಯತೆ ಸಂದಿಲ್ಲವೆಂಬುದು ಖೇದಕರ. ಕೇಂದ್ರ ಸರಕಾರದ ಸಚಿವಾಲಯಗಳಲ್ಲೂ ಕೂಡ ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ಸರಿಯಾದ ಉದ್ಯೋಗಾವಕಾಶಗಳನ್ನು ಕೊಟ್ಟಿಲ್ಲವೆಂದು ಈ ವರದಿಯೇ ತಿಳಿಸುತ್ತಿರುವಾಗ, ಇನ್ನು ನಾವು ಏನು ಹೇಳುವುದಿದೆ? ಅನೇಕ ಸಾರ್ವಜನಿಕ ಸ್ವಾಮ್ಯದ ಉದ್ದಿಮೆಗಳಲ್ಲಿ ಕೂಡ ಈ ವರ್ಗದ ಜನರಿಗೆ ಉದ್ಯೋಗ ನೀಡಲು ಯಾವುದೇ ಅವಕಾಶವಿಲ್ಲ. ಇದೊಂದು ರೀತಿಯ ದಿವ್ಯ ನಿರ್ಲಕ್ಷ್ಯ. ಬರಲಿರುವ ಉದ್ಯೋಗಗಳಲ್ಲೂ ಈ ವಿಚಾರದ ಸುಳಿವಿಲ್ಲ ಎಂಬುದು ಸ್ಪಷ್ಟವಾಗಿದೆ.

ಬಹುಶಃ ಪರಿಸ್ಥಿತಿಯ ವಿಕಟತೆ ಏನೆಂದರೆ, ಜಾತಿ ಪದ್ಧತಿಯ ಆಧಾರದ ಮೇಲೆ ಬದುಕಿರುವ ನಾವು, ಅಂತರರಾಷ್ಟ್ರೀಯ ಜಾತಿ ವ್ಯವಸ್ಥೆಯಲ್ಲಿ ಮುಂದುವರೆದ ರಾಷ್ಟ್ರಗಳಿಂದ, ನಮ್ಮ ಆರ್ಥಿಕ ಸ್ಥಿತಿಗನುಗುಣವಾಗಿ ಕೀಳು ಜಾತಿಯವರಂತೆ ನಮ್ಮನ್ನು ಪರಿಗಣಿಸಲ್ಪಡುವ ದುರಂತಕ್ಕೆ ನಾವೇ ಹೊಣೆಯಾಗುತ್ತೇನೆ.

(ಲೋಕಸಭೆ ಕಲಾಪ (ಸಂಕ್ಷಿಪ್ತ), ಆಗಸ್ಟ್ 7, 1967)

## ಇಂಗ್ಲೀಷ್‌ಗಾಗಿ ಹುನ್ನಾರ

ಜೆ.ಹೆಚ್. ಪಟೇಲ್: (ಕನ್ನಡದಲ್ಲಿ ಮಾತನಾಡುತ್ತಾರೆ) ನಮ್ಮ ರಾಜ್ಯಾಂಗದಲ್ಲಿ ನಮಗೆ ಸಮಾನ ಅವಕಾಶ, ಸ್ಥಾನಮಾನ ಮತ್ತು ಅಭಿವ್ಯಕ್ತ ಸ್ವಾತಂತ್ರ್ಯ ಕೊಟ್ಟಿದ್ದರೂ ಕೂಡಾ, ನನಗೆ ಮನವರಿಕೆಯಾದಂತೆ ನಮ್ಮ ಈ ಲೋಕಸಭೆಯಲ್ಲಿ ಅಂತಹ ವಾಕ್‌ಸ್ವಾತಂತ್ರ್ಯ ನಮಗೆ ಇಲ್ಲವಾಗಿದೆ. ನಾನು ಅಧಿಕೃತ ಭಾಷೆಗಳ ತಿದ್ದುಪಡಿ ವಿಧೇಯಕದ ಸಂಬಂಧದಲ್ಲಿ ಒಂದು ವಿಧಿ ಬಿಂದುವಿನ ಬಗ್ಗೆ ಮಾತನಾಡಲು ಬಯಸುತ್ತೇನೆ. ಸಂವಿಧಾನದಲ್ಲಿ ಹಿಂದಿ ನಮ್ಮ ಅಧಿಕೃತ ಭಾಷೆಯಾಗಿದೆ. ಇಂಗ್ಲೀಷ್ ಭಾಷೆ 15 ವರ್ಷಗಳ ಕಾಲ ಅಂದರೆ, 1965 ರವರೆಗೆ ಮುಂದುವರಿಯಬಹುದಾಗಿದೆ. 1963ರ ಅಧಿಕೃತ ಭಾಷಾಕಾಯ್ದೆ ಇಂಗ್ಲೀಷ್‌ನ್ನು ದೆಹಲಿಯಲ್ಲಿ ಮಾತ್ರವಲ್ಲದೆ, ಭಾರತದ ಎಲ್ಲ ರಾಜ್ಯಗಳಲ್ಲೂ ಅಧಿಕೃತವಾಗಿ ಶಾಶ್ವತಗೊಳಿಸುವ ಹವಣಿಕೆಯಾಗಿದೆ. ಈ ಮಸೂದೆ ಕೂಡಾ ಇಂಗ್ಲೀಷ್‌ನ್ನು ಅಧಿಕೃತ ಭಾಷೆಯಾಗಿ ಮುಂದುವರೆಸುವ ತಂತ್ರವಾಗಿದೆ. ಇದು ಸಂವಿಧಾನ ಬಾಹಿರ.

(ಲೋಕಸಭೆ ಕಲಾಪ (ಸಂಕ್ಷಿಪ್ತ) ಡಿಸೆಂಬರ್ 7, 1967)

## ಬೆಂಗಳೂರಿನಲ್ಲಿ ಪಾರ್ಲಿಮೆಂಟ್ ಅಧಿವೇಶನ?

ವಿಷಯ: ಬೆಂಗಳೂರಿನಲ್ಲಿ ವರ್ಷದಲ್ಲೊಂದು ಸಾರಿ ಪಾರ್ಲಿಮೆಂಟ್ ಅಧಿವೇಶನ ನಡೆಯಬೇಕೆಂಬ ಶ್ರೀ ಪ್ರಕಾಶವೀರ ಶಾಸ್ತ್ರಿಯವರ ಖಾಸಗಿ ನಿರ್ಣಯ.

ಜೆ.ಹೆಚ್. ಪಟೇಲ್: (ಕನ್ನಡದಲ್ಲಿ) ಮಾನ್ಯ ಸಭಾಧ್ಯಕ್ಷರೆ, ನಾನು ವಿಧೇಯಕವನ್ನು ಬೆಂಬಲಿಸುತ್ತಾ ಈ ಸದನದಲ್ಲಿರುವ ಕಾಂಗ್ರೆಸ್ಸು ಸೇರಿ ಎಲ್ಲ ರಾಜಕೀಯ ಪಕ್ಷಗಳು ಇದಕ್ಕೆ ಒಪ್ಪಿರುವುದಕ್ಕೆ ಸಂತೋಷಿಸುತ್ತೇನೆ. ಆದರೆ ಇದು ಕಾರ್ಯಗತಗೊಳ್ಳುವುದರ ಬಗ್ಗೆ ನನಗೆ ಅನುಮಾನವಿದೆ. ಕಾಂಗ್ರೆಸ್ಸು ಕೇವಲ ಭರವಸೆ ನೀಡುತ್ತಿದೆಯೇ ಹೊರತು, ಕಾರ್ಯಗತ ಮಾಡುವುದಿಲ್ಲ. ಮುಂದಿನ ಕಾರಣಗಳಿಗೋಸ್ಕರ ನಾನು ವಿಧೇಯಕಕ್ಕೆ ಬೆಂಬಲ ಕೊಡುತ್ತೇನೆ.

ಮೊದಲನೆಯದಾಗಿ, ಭಾವನಾತ್ಮಕ ಏಕತೆಯತ್ತ ಇದು ಮೊದಲ ಹೆಜ್ಜೆ. ಕೇವಲ ಭೌಗೋಳಿಕ ಗಡಿಗಳು ಮಾತ್ರ ರಾಷ್ಟ್ರವೆನ್ನಿಸುವುದಿಲ್ಲ. ಆದರೆ ಅಲ್ಲಿರುವ ಜನರ ಮನೋಭಾವನೆಗಳು ಎಲ್ಲೆ ದಾಟಿ ಒಂದಾದಾಗ ಅದು ದೇಶವಾಗುತ್ತದೆ. ಇನ್ನೊಂದು ಅಂಶವೆಂದರೆ, ರಾಜ್ಯಾಂಗದಲ್ಲಿ ವಿಕೇಂದ್ರೀಕೃತ ವ್ಯವಸ್ಥೆಯ ಪ್ರತಿಪಾದನೆ ಇದ್ದರೂ, ಕೇಂದ್ರೀಕೃತ ವ್ಯವಸ್ಥೆಯತ್ತ ಸಾಗುತ್ತಿದ್ದೇವೆ. ಡೆಲ್ಲಿಯಿಂದ ಅಧಿಕಾರದ ಕೇಂದ್ರೀಕರಣವಾಗುವುದರ ವಿರುದ್ಧ ನಾನು ಬೆಂಗಳೂರಿನಲ್ಲಿ ಸಂಸತ್ತಿನ ಅಧಿವೇಶನ ನಡೆಯುವುದನ್ನು ಸ್ವಾಗತಿಸುತ್ತೇನೆ.

ಕಡೆಯದಾಗಿ ಅನಾವಶ್ಯಕವಾಗಿ ಹಣ ಖರ್ಚಾಗುವುದೆಂಬ ವಾದದಲ್ಲಿ ಸ್ವಲ್ಪ ಅರ್ಥವಿದೆ. ಆದರೆ 2-3 ಕೋಟಿ ರೂಪಾಯಿಯನ್ನು ಈ ಸರ್ಕಾರ, ಸುತ್ತುವ ಗೋಪುರಕ್ಕೆ ಖರ್ಚು ಮಾಡುವಾಗ, ಬೆಂಗಳೂರಿನಲ್ಲಿ ಸಂಸತ್ ಅಧಿವೇಶನ ಸೇರುವ ಉಪಯುಕ್ತ ಕಾರ್ಯಕ್ಕೆ ಸ್ವಲ್ಪವೇ ವೆಚ್ಚವಾದರೆ ತಪ್ಪಿಲ್ಲ.

(ಲೋಕಸಭೆ ಕಲಾಪ; ಮಾರ್ಚ್ 1, 1968)

## ಪಟೇಲರ ದಸ್ತಗಿರಿ : ಲೋಕಸಭೆಯಲ್ಲಿ ಮಾರ್ದನಿ

ಅಧ್ಯಕ್ಷರು (ನೀಲಂಸಜೀವರೆಡ್ಡಿ): ಬೆಂಗಳೂರು ಪೊಲೀಸ್ ಕಮೀಷನರ್‌ರವರಿಂದ ನಾನು ದಿನಾಂಕ: 17.3.1969 ರಂದು ಪಡೆದಿರುವ ಎರಡು ವೈರ್‌ಲೆಸ್ ಸಂದೇಶಗಳ ಮೂಲಕ ಪಡೆದಿರುವ ಮಾಹಿತಿ ಪ್ರಕಾರ-

ಮೈಸೂರು ಪೊಲೀಸ್ ಕಾಯ್ದೆಯ ಸೆಕ್ಷನ್ 92 (ಓ) ಮತ್ತು (ಆರ್) ಅನ್ವಯ ತನಗಿರುವ ಅಧಿಕಾರದಂತೆ ಶ್ರೀ ಜೆ.ಹೆಚ್. ಪಟೇಲ್, ಲೋಕಸಭಾ ಸದಸ್ಯ, ಇವರನ್ನು ಸಂಚಾರಕ್ಕೆ ಅಡ್ಡಿಪಡಿಸಿದ್ದಕ್ಕಾಗಿ ಮತ್ತು ಸಾರ್ವಜನಿಕವಾಗಿ ಅಶಿಸ್ತಿನಿಂದ ವರ್ತಿಸಿದ್ದಕ್ಕಾಗಿ ದಸ್ತಗಿರಿ ಮಾಡಲು ನಿರ್ದೇಶಿಸಿದ್ದೇನೆ.

ಮಧು ಲಿಮಯೆ (ಮಾಂಘಿರ್, ಲೋಕಸಭಾ ಕ್ಷೇತ್ರ): ಅವರು ತುಂಬಾ ಶಿಸ್ತಿನ ಮನುಷ್ಯ.

ಮಾನ್ಯ ಅಧ್ಯಕ್ಷರು: ಈ ದಿನ ಮಧ್ಯಾಹ್ನ 12.30ಕ್ಕೆ ಪೊಲೀಸ್ ಕಾಯ್ದೆಯನ್ವಯ ಶ್ರೀ ಜೆ.ಹೆಚ್. ಪಟೇಲ್, ಲೋಕಸಭಾ ಸದಸ್ಯ ಮತ್ತು ಇತರ 14 ಜನರನ್ನು ಬೆಂಗಳೂರಿನ

ವಿಧಾನಸೌಧದ ಎದುರು ಬಂಧಿಸಲಾಗಿದೆ. ಅವರನ್ನು ಈಗ ಕಬ್ಬನ್ ಪಾರ್ಕ್ ಪೊಲೀಸ್ ಠಾಣೆಯಲ್ಲಿಡಲಾಗಿದೆ. ಅವರನ್ನು ಇತರ 14 ಜನರೊಂದಿಗೆ ಬೆಂಗಳೂರಿನ ಸಿವಿಲ್ ಏರಿಯಾ ಪ್ರಥಮ ದರ್ಜೆ ನ್ಯಾಯಾಧೀಶರೆದುರು ಹಾಜರುಪಡಿಸಲಾಯಿತು. ತಾವು ತಪ್ಪಿತಸ್ಥರೆಂದು ಅವರು ಒಪ್ಪಿಕೊಂಡಿದ್ದಾರೆ.

ಮಧು ಲಿಮಯೆ: ನಿರ್ದಿಷ್ಟ ಕಾರಣಗಳನ್ನು ತಿಳಿಸಬೇಕೆಂದು ನಿಯಮಾವಳಿಯಲ್ಲಿ ಖಚಿತವಾಗಿ ಬರೆಯಲಾಗಿದೆ. ಇಲ್ಲದಿದ್ದಲ್ಲಿ ಹಕ್ಕುಚ್ಯುತಿ ನಿರ್ಣಯ ಮಂಡಿಸಬೇಕಾಗುತ್ತದೆ.

(ಲೋಕಸಭೆ ಕಲಾಪ; ಮಾರ್ಚ್ 18, 1969)

## ಬೆಂಗಳೂರಲ್ಲಿ ದಕ್ಷಿಣ ವಿಶ್ವವಿದ್ಯಾಲಯ

ಜೆ.ಹೆಚ್. ಪಟೇಲ್: (ಕನ್ನಡದಲ್ಲಿ ಮಾತನಾಡುವರು) ದಕ್ಷಿಣದಲ್ಲಿ ಕೇಂದ್ರ ವಿಶ್ವವಿದ್ಯಾಲಯ ಸ್ಥಾಪಿಸಬೇಕೆಂದು ನನ್ನ ಸಹೋದ್ಯೋಗಿ ಶ್ರೀ ದಿನಕರ ದೇಸಾಯಿಯವರ ಸಲಹೆಯನ್ನು ನಾನು ಒಪ್ಪುತ್ತೇನೆ. ಇದು ದಕ್ಷಿಣ ಅಥವಾ ಉತ್ತರದ ಪ್ರಶ್ನೆಯಲ್ಲ. ದೇಶದ ನಾಲ್ಕು ದಿಕ್ಕುಗಳಲ್ಲೂ ಇದಾಗಬೇಕು. ಬೆಂಗಳೂರಿನಲ್ಲಿ ಈ ವಿಶ್ವವಿದ್ಯಾಲಯ ಸ್ಥಾಪಿಸಬೇಕೆಂಬುದಕ್ಕೆ ನನ್ನ ಸಂಪೂರ್ಣ ಬೆಂಬಲವಿದೆ. ದಕ್ಷಿಣದಲ್ಲಿ ಬೆಂಗಳೂರೇ ಯೋಗ್ಯವಾದ ಸ್ಥಳ. ಪ್ರಾಚ್ಯ ವಸ್ತು ಇಲಾಖೆಯ ಬಗೆಗೆ ಒಂದು ವಿಚಾರ ಹೇಳಬೇಕೆಂದರೆ, ಎರಡು ಉಪ ವೃತ್ತಗಳು ಮೈಸೂರು ರಾಜ್ಯದಲ್ಲಿವೆ. ಒಂದು ಮದರಾಸು ವೃತ್ತದ ಅಧೀನದಲ್ಲಿದ್ದರೆ ಇನ್ನೊಂದು ಔರಂಗಾಬಾದ್ ವೃತ್ತದ ಅಧೀನದಲ್ಲಿದೆ. ಈ ರೀತಿ ಬೇರೆ ಬೇರೆ ದೂರ ದೂರದ ವೃತ್ತಗಳಲ್ಲಿರುವ ಕಾರಣದಿಂದ, ಅವರ ನಿರ್ಲಕ್ಷ್ಯದಿಂದ ನಮ್ಮ ರಾಜ್ಯದ ಐತಿಹಾಸಿಕ ಸ್ಮಾರಕಗಳು ಶಿಥಿಲಾವಸ್ಥೆಯ ಪರಾಕಾಷ್ಠೆ ಮುಟ್ಟಿವೆ. ಇದಕ್ಕೋಸ್ಕರ ಇವುಗಳ ಮೇಲ್ವಿಚಾರಣೆಗಾಗಿ ಮೈಸೂರು ರಾಜ್ಯಕ್ಕೆ ಸೀಮಿತವಾದ ಒಂದು ವೃತ್ತ ರಚಿಸಬೇಕು. ಈ ಎರಡು ವೃತ್ತಗಳು ಒಂದೇ ಅಧಿಕಾರದ ವ್ಯಾಪ್ತಿಗೆ ಒಳಪಡಬೇಕು. ಕಾಶಿ ಹಿಂದೂ ವಿಶ್ವವಿದ್ಯಾನಿಲಯ ಮತ್ತು ಜಮಾತ್-ಎ-ಉಲ್-ಮಿಲಿಯ ವಿಶ್ವವಿದ್ಯಾನಿಲಯಗಳಿಗೆ ನೀಡಿರುವ ಅನುದಾನದಲ್ಲಿ, ಕಾಶಿಗೆ ಕಡಿಮೆ ಕೊಟ್ಟು ಜಮಾತ್-ಎ-ಉಲ್-ಮಿಲಿಯಗೆ ಅದಕ್ಕಿಂತ ಹೆಚ್ಚು ಹಣ ನೀಡಿರುವುದು ಸರಿಯಲ್ಲ. ಎರಡರಲ್ಲೂ ಒಂದೇ ಮಟ್ಟದ ಶಿಕ್ಷಣವಿರುವಾಗ, ಈ ತಾರತಮ್ಯವಾದರೂ ಏಕೆ?

(ಲೋಕಸಭೆ ಕಲಾಪ; ಏಪ್ರಿಲ್ 17, 1969)

## ದುಬಾರಿಯಾದ ಭಾರತದ ಪ್ರಧಾನಿ

ಜೆ.ಹೆಚ್. ಪಟೇಲ್: (ಕನ್ನಡದಲ್ಲಿ) ಸನ್ಮಾನ್ಯ ಅಧ್ಯಕ್ಷರೇ, ಈ ಬಡದೇಶದ ಶ್ರೀಮಂತ ಪ್ರಧಾನಿಗಾಗಿ ದಿನ ಒಂದಕ್ಕೆ 25,000.00 ರೂ. ಖರ್ಚು ಮಾಡುತ್ತಿದ್ದೇವೆ ಎಂಬ ವಿಚಾರವನ್ನು ಕೆಲ ವರ್ಷಗಳ ಹಿಂದೆ ಡಾ: ಲೋಹಿಯಾರವರು ಈ ಸದನದಲ್ಲೇ ತಿಳಿಸಿದಾಗ ಯಾರೂ ನಂಬಲಿಲ್ಲ. ಅಮೆರಿಕೆಯಲ್ಲಿ ಅಧ್ಯಕ್ಷರಿಗಾಗಿ ದಿನ ಒಂದಕ್ಕೆ ಕೇವಲ 15,000.00 ರೂ. ಮಾತ್ರ

ಖರ್ಚು ಮಾಡಲಾಗುತ್ತಿದೆ. ಬ್ರಿಟನ್‌ನಲ್ಲಿ ಪ್ರಧಾನಿಗೆ 5,000.00 ರೂ. ಮಾತ್ರ ದಿನಕ್ಕೆ ಖರ್ಚು ಮಾಡುತ್ತಿದ್ದಾರೆ. ನಾವು ಈ ದೇಶದಲ್ಲಿ ಭ್ರಷ್ಟಾಚಾರ ನಿವಾರಣೆಗೆ ಕಾನೂನು ಮಾಡಿದ್ದೇವೆ. ಆದರೆ ಕೇವಲ ಕಾನೂನುಗಳು ಸಮಸ್ಯೆಯನ್ನು ಪರಿಹರಿಸಲಾರವು. ಜನರಿಗೆ ಅಥವ ಪೊಲೀಸ್ ಪೇದೆಗೆ ಭ್ರಷ್ಟಾಚಾರದ ವಿರುದ್ಧ ಉಪದೇಶ ಮಾಡುವುದರಿಂದ, ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಿಲ್ಲ. ಕೇವಲ ಪ್ರವಚನಗಳು ಏನೂ ಮಾಡಲಾರವು. ಮೇಲ್ಮಟ್ಟದಲ್ಲಿರುವ ವ್ಯಕ್ತಿಗಳು ಸರಳ ಜೀವನ, ಉತ್ತಮ ಆಚರಣೆಗಳನ್ನು ನಡೆಸಿ ಆದರ್ಶಪ್ರಾಯರಾಗುವ ಮೂಲಕ ಮಾತ್ರ ಇದನ್ನು ಸಾಧಿಸಲು ಸಾಧ್ಯ. ಕೆಲ ದಿನಗಳ ಹಿಂದೆ ಸಂಸತ್ ಸದಸ್ಯರಿಗೆ ಕೆಲವು ಅನುಕೂಲಗಳು ಮತ್ತು ಸೌಲಭ್ಯಗಳನ್ನು ಒದಗಿಸುವ ಕುರಿತು ವಿಧೇಯಕ ಒಂದನ್ನು ತರಲಾಯಿತು. ಆ ವಿಧೇಯಕದನ್ವಯ ನಾವು ಕೆಲವು ಹಕ್ಕು ಮತ್ತು ಸೌಕರ್ಯಗಳಿಗೆ ಅರ್ಹರಾಗಿದ್ದೇವೆ. ಸದಸ್ಯರಿಗೆ ಹೆಚ್ಚು ಸೌಲಭ್ಯಗಳು ದೊರಕಿದವೆಂಬ ಕಾರಣದಿಂದ ಈಗ ಮಂತ್ರಿಗಳು ತಮ್ಮ ಸೌಲಭ್ಯಕ್ಕೆ ಈ ವಿಧೇಯಕ ತಂದಿದ್ದಾರೆ. ಈ ಸೌಲಭ್ಯಗಳು ನಿಜಕ್ಕೂ ಖಜಾನೆಗೆ ಹೆಚ್ಚು ಖರ್ಚಿನದ್ದಾಗಿವೆ. ಈ ದೇಶದ ಬಹುಸಂಖ್ಯಾತರಾದ 29 ಕೋಟಿ ಬಡವರು ಕೇವಲ ದಿನಕ್ಕೆ 30 ಪೈಸೆಗಳ ಆದಾಯದಲ್ಲಿ ಬದುಕುತ್ತಿರುವಾಗ, ಈ ವಿಧೇಯಕದ ಮಂಡನೆ ಒಂದು ವಿಪರ್ಯಾಸ. ಸದಸ್ಯರಿಗೆ ಹೆಚ್ಚಿನ ಹಕ್ಕು ಮತ್ತು ಸೌಲಭ್ಯಗಳನ್ನು ನೀಡುವುದರ ಮೂಲಕ ಮಂತ್ರಿಗಳಾಗಲೀ, ಸದ್ಯಸ್ಯರಾಗಲೀ, ಜ್ವಲಂತ ಆದರ್ಶ ವ್ಯಕ್ತಿಗಳಾಗಲೀ ಜನರ ಹತ್ತಿರ ಬರುವ ಬದಲು, ಜನರಿಂದ ದೂರವಾಗುತ್ತಾರೆ ಎಂಬ ವಾಸ್ತವತೆಯನ್ನು ಅರಿಯಬೇಕು. ಆದ್ದರಿಂದ ನಾನು ಈ ವಿಧೇಯಕದಲ್ಲಿ ಅಡಕವಾಗಿರುವ ಮೃತ ಸಚಿವರ ಕುಟುಂಬದವರಿಗೆ ನೀಡಿರುವ ಮಾನವೀಯ ಕಾರಣದ ಸೌಲಭ್ಯವನ್ನು ಮಾತ್ರ ಬೆಂಬಲಿಸುತ್ತಾ, ಮಿಕ್ಕೆಲ್ಲವನ್ನು ಉಗ್ರವಾಗಿ ವಿರೋಧಿಸುತ್ತೇನೆ.

(ಲೋಕಸಭೆ ಕಲಾಪ; ನವೆಂಬರ್ 11, 1969)

## ರಾಜ್ಯಪಾಲರಿಂದ ಅಪಚಾರ

ಜೆ.ಹೆಚ್. ಪಟೇಲ್: (ಕನ್ನಡದಲ್ಲಿ ಮಾತನಾಡುವರು) ನಮ್ಮ ಸಂವಿಧಾನವು ಸರ್ವಸಮರ್ಪಕವಾಗಿದೆ ಎಂದು ನನ್ನ ಅಭಿಮತವಲ್ಲ. ಅದರಲ್ಲಿ ಹಲವು ನ್ಯೂನತೆಗಳಿವೆ. ಅದೇನೇ ಇರಲಿ, ಶ್ರೀಸಾಮಾನ್ಯರ ಒಳಿತಿಗಾಗಿ ಈಗಿರುವ ಸಂವಿಧಾನದ ಪರಿಧಿಯಲ್ಲಿಯೇ ಕೆಲಸ ಮಾಡುವುದು ನಮ್ಮ ಕರ್ತವ್ಯ. ನಾವು ಹಾಗೆ ಮಾಡದಿದ್ದರೆ, ನಾವೆಲ್ಲರೂ ಕರ್ತವ್ಯಭ್ರಷ್ಟತೆಯ ಆರೋಪಕ್ಕೆ ಗುರಿಯಾಗುತ್ತೇವೆ. ಈಗ ಬಲಿಷ್ಠರಾದವರು ತಪ್ಪು ಮಾಡಿಯೂ ರಾಜ್ಯಾಂಗದ ರಕ್ಷಣೆಯನ್ನು ಪಡೆದುಕೊಳ್ಳುತ್ತಿದ್ದಾರೆ. ಇನ್ನೊಂದು ಕಡೆ ಸತ್ಯ ಹೇಳಿದರೂ ದುರ್ಬಲ ಮನುಷ್ಯನಿಗೆ ನ್ಯಾಯ ಮರುಭೂಮಿಯಲ್ಲಿನ ನೀರಿನಂತಾಗಿದೆ. ಸಂವಿಧಾನದಲ್ಲಿರುವ ಲೋಪದೋಷಗಳೇ ಇದಕ್ಕೆ ಕಾರಣ.

ಹರಿಯಾಣದಲ್ಲಿರುವ ರಾಜ್ಯಪಾಲರು ತಮಗಿರುವ ವಿವೇಚನೆಯ ಅಧಿಕಾರವನ್ನು ಚಲಾಯಿಸದೇ ಅಕ್ಷಮ್ಯ ಅಪರಾಧ ಮಾಡಿದ್ದಾರೆ. ಸದನವನ್ನು ಅನಿರ್ದಿಷ್ಟಕಾಲ ಮುಂದೂಡುವ

ಮೂಲಕ ಅಲ್ಲಿಯ ವಿಧಾನಸಭಾಧ್ಯಕ್ಷರೂ ಕೂಡ ರಾಜ್ಯಪಾಲರಂತೆಯೇ ಸಮಾನ ಅಪರಾಧ ಎಸಗಿದ್ದಾರೆ. ಇದರಿಂದ ಶ್ರೀ ಬನ್ಸಿಲಾಲ್‌ರ ಸರ್ಕಾರದ ವಿರುದ್ಧ ಮಂಡನೆಯಾಗುತ್ತಿದ್ದ ಅವಿಶ್ವಾಸ ನಿರ್ಣಯಕ್ಕೆ ಅವಕಾಶ ಕೊಡದೆ ಮುಚ್ಚಿಹಾಕಿದ್ದಾರೆ. ಆದ್ದರಿಂದ ರಾಜ್ಯಪಾಲರ ಹುದ್ದೆಗಳನ್ನೆಲ್ಲಾ ತಕ್ಷಣ ರದ್ದು ಮಾಡಬೇಕು. ಎರಡನೆಯದಾಗಿ ಸಂವಿಧಾನವನ್ನು ಪುನರ್ರಚಿಸಲು (ಹೊಸದಾಗಿ ರಾಜ್ಯಾಂಗ ರಚಿಸಲು) ನೂತನ ಸಂವಿಧಾನ ಸಭೆಯನ್ನು ರಚಿಸಿ ಕರೆಯಬೇಕು. ಈ ಮಾತುಗಳೊಂದಿಗೆ ಶ್ರೀನಾಥ್ ಪೈ ಅವರ ನಿರ್ಣಯಕ್ಕೆ ಪೂರ್ಣ ಬೆಂಬಲ ನೀಡುತ್ತೇನೆ.

(ಲೋಕಸಭೆ ಕಲಾಪ; ಮಾರ್ಚ್ 4, 1970)

## ಇಂಗ್ಲೀಷನ್ನು ಓಡಿಸೋಣ

ಜೆ.ಹೆಚ್. ಪಟೇಲ್: (ಕನ್ನಡದಲ್ಲಿ) ಈ ದೇಶದ ಮಣ್ಣಿನಿಂದ ಇಂಗ್ಲಿಷ್‌ನ್ನು ಒದ್ದೋಡಿಸಬೇಕೆಂಬ ನನ್ನ ಹಿಂದಿನ ಸಲಹೆಯನ್ನು ಪುನಃ ಪ್ರಸ್ತಾಪಿಸಿ, ಸಮರ್ಥಿಸಬಯಸುತ್ತೇನೆ. ಪ್ರಾದೇಶಿಕ ಭಾಷೆಗಳನ್ನು ಪ್ರೋತ್ಸಾಹಿಸುವುದರಿಂದ ಮಾತ್ರವೇ ಈ ದೇಶದ ಪ್ರಗತಿ ಸಾಧ್ಯ. ಯೋಜನೆಯ ಸಮರ್ಥ ಕಾರ್ಯಾಚರಣೆಯೊಡನೆ ಶಿಕ್ಷಣಕ್ಕಾಗಿ ಮೀಸಲಿಟ್ಟ ಹಣದ ಸಂಪೂರ್ಣ ಮತ್ತು ಸರಿಯಾದ ರೀತಿ ಖರ್ಚು ಆಗಬೇಕು. ಇಷ್ಟನ್ನು ಹೇಳುತ್ತಾ ವಿಶ್ವವಿದ್ಯಾನಿಲಯಗಳ ಧನಸಹಾಯ ಆಯೋಗ ತಿದ್ದುಪಡಿ (1970) ವಿಧೇಯಕದಲ್ಲಿರುವ ಇತರ ವಿಚಾರಗಳನ್ನು ವಿರೋಧಿಸುತ್ತಾ, ವಿಶ್ವವಿದ್ಯಾನಿಲಯಗಳ ಧನ ಸಹಾಯ ಆಯೋಗದ ಕಾರ್ಯ ನಿರ್ವಹಣೆಯ ಬಗ್ಗೆ ನನ್ನ ಸಂಪೂರ್ಣ ಅತೃಪ್ತಿ, ಅಸಮಾಧಾನಗಳನ್ನು ವ್ಯಕ್ತಪಡಿಸಬಯಸುತ್ತೇನೆ.

(ಲೋಕಸಭೆ ಕಲಾಪ (ಸಂಕ್ಷಿಪ್ತ) ಮೇ 15, 1970 - ಕನ್ನಡದಲ್ಲಿ ಭಾಷಣ)

## ನಕ್ಸಲೀಯರ ಚಳುವಳಿಗೆ ಕಾರಣವೇನು?

ಜೆ.ಹೆಚ್. ಪಟೇಲ್: (ಕನ್ನಡದಲ್ಲಿ) ಸನ್ಮಾನ್ಯ ಅಧ್ಯಕ್ಷರೇ, ನಕ್ಸಲೀಯರ ಚಳುವಳಿ ಏಕೆ ಪ್ರಾರಂಭವಾಯಿತು? ಈ ದೇಶದಲ್ಲಿ ಅದು ಏಕೆ ತಲೆಯೆತ್ತಿತು ಎಂಬುದನ್ನು ಅತ್ಯಂತ ಆಳವಾಗಿ ವಿಚಾರಮಾಡುವುದು ಅತಿ ಅವಶ್ಯಕವೆಂಬುದು ನನ್ನ ಭಾವನೆ. ಇದಕ್ಕೊಂದು ನಿದರ್ಶನದ ಉದಾರಣೆ ನೀಡಬಯಸುತ್ತೇನೆ. ಮಲೇರಿಯಾ ರೋಗವನ್ನು ನಿಗ್ರಹಿಸಲು, ಅನೇಕ ಕ್ರಮಗಳನ್ನು ಕೈಗೊಂಡಿದ್ದರೂ ಕೂಡ, ಅವುಗಳಿಂದ ಅದು ಪರಿಹಾರವಾಗಿಲ್ಲ. ಇಲ್ಲಿ ಮೂಲಭೂತವಾಗಿ, ಮಲೇರಿಯಾಕ್ಕೆ ಕಾರಣವಾದ ಕ್ರಿಮಿಗಳನ್ನು ನಾಶಮಾಡುವುದೇ ಪರಿಹಾರಕ್ಕಿರುವ ಒಂದೇ ಮಾರ್ಗ. ವೈದ್ಯರುಗಳು ಮಲೇರಿಯಾ ರೋಗಕ್ಕೆ ಔಷಧವನ್ನು ಸೂಚಿಸಿದರೂ, ಅದು ಶಾಶ್ವತ ಪರಿಹಾರವನ್ನು ನೀಡದೆ, ರೋಗದ ವ್ಯಾಪಕತೆಗೆ ಕಾರಣವಾದಂತೆ, ಇಲ್ಲಿ ಮೂಲ ಸಮಸ್ಯೆ ಪರಿಹರಿಸದೆ, ಕೇವಲ ಮೇಲುಪಚಾರದ ಮಾತುಗಳ ಆರೈಕೆ ನಡೆದಿದೆ. ಅಲ್ಲದೆ ಕಳೆದ 23 ವರ್ಷಗಳಿಂದ ನಡೆದ ಕಾಂಗೆಸ್ಸಿನ ದುರಾಡಳಿತ, ಮುಖ್ಯವಾಗಿ ನಕ್ಸಲೀಯರ ಚಟುವಟಿಕೆಗಳಿಗೆ ಮೂಲ ಕಾರಣವಾಗಿದೆಯೆಂಬುದನ್ನು ಮರೆಯಬಾರದು. ಮೇಲಿನ ಉದಾಹರಣೆಯಂತೆ, ನಕ್ಸಲೀಯರ

ಉಪಟಳ ವ್ಯಾಪಕವಾಗದಿರಲು ಮತ್ತು ಅದನ್ನು ಬಗೆಹರಿಸಲು ಮುಖ್ಯವಾಗಿ, ಆರ್ಥಿಕ ಸಮಸ್ಯೆಯನ್ನು ಸಂಪೂರ್ಣವಾಗಿ ಪರಿಹರಿಸುವುದೊಂದೇ ಮಾರ್ಗ. ಇದಲ್ಲದೆ, ಕೇವಲ ತಾತ್ಕಾಲಿಕ ಉಪಶಮನಗಳಿಂದ ಸಮಸ್ಯೆ ಪರಿಹಾರವಾಗದು.

(ಲೋಕಸಭೆ ಕಲಾಪ; ನವೆಂಬರ್ 20, 1970)

## ಭಾರತೀಯ ವೈದ್ಯಕೀಯ ಪದ್ಧತಿಗೆ ಪ್ರೋತ್ಸಾಹ

ಜೆ.ಹೆಚ್. ಪಟೇಲ್: (ಕನ್ನಡದಲ್ಲಿ) ಮಾನ್ಯ ಅಧ್ಯಕ್ಷರೇ, ಸರ್ಕಾರದಿಂದ ಭರವಸೆಯನ್ನು ಅಪೇಕ್ಷಿಸಿ ನಾನು ಒಂದು ಅಂಶವನ್ನು ಪ್ರಸ್ತಾಪಿಸಬಯಸುತ್ತೇನೆ. ಮಾನ್ಯ ಶ್ರೀ ಪಂಡಿತ ಶಿವಶರ್ಮರವರು ಹೇಳಿದಂತೆ, ಆಯುರ್ವೇದ, ಸಿದ್ಧ, ಯುನಾನಿ ಪದ್ಧತಿಗಳನ್ನು ಅಲೋಪತಿ ಪದ್ಧತಿಯೊಂದಿಗೆ ಹೊಂದಿಸಲು ಅಥವಾ ಒಂದುಗೂಡಿಸಲು ಸಾಧ್ಯವಿಲ್ಲ. ನಾನು ಇದರ ಸಾಧ್ಯತೆ ಅಥವಾ ಸಾಮ್ಯತೆ ಬಗ್ಗೆ ವ್ಯಾಖ್ಯಾನ ಮಾಡಲು ನಿಂತಿಲ್ಲ. ಈ ಪದ್ಧತಿಯ ವೈದ್ಯಕೀಯದಲ್ಲಿ ಸೇವೆ ಸಲ್ಲಿಸುತ್ತಿರುವ ತಜ್ಞ ವೈದ್ಯರುಗಳಿಗೆ ಸೂಕ್ತ ಹಾಗೂ ಸಾಕಷ್ಟು ರಕ್ಷಣೆ ಒದಗಿಸಬೇಕೆಂದು ಕೋರುತ್ತೇನೆ. ನಮ್ಮ ದೇಶದಲ್ಲಿ ಈಗ ಸುಮಾರು 50 ಇಂತಹ ಇಂಟಿಗ್ರೇಟೆಡ್ ಸಿಸ್ಟಂ ಆಫ್ ಮೆಡಿಸಿನ್ ಬೋಧಿಸುವ ಶಾಲೆಗಳಿವೆ. ಹಾಗೆಯೇ ಸುಮಾರು 50 ಸಾವಿರ ವೈದ್ಯರುಗಳು ನಮ್ಮ ದೇಶದ ನಾನಾ ಕಡೆಗಳಲ್ಲಿ ತಮ್ಮ ವೃತ್ತಿ ನಡೆಸುತ್ತಿದ್ದಾರೆ. ಸರ್ಕಾರ ಇವರ ಹಿತರಕ್ಷಣೆ ಬಗ್ಗೆ ಮತ್ತು ಇವರ ಭವಿಷ್ಯದ ಬಗ್ಗೆ ಏನು ಮಾಡುತ್ತದೆ ಎಂಬುದನ್ನು ತಿಳಿಯಬಯಸುತ್ತೇನೆ.

(ಲೋಕಸಭೆ ಕಲಾಪ (ಸಂಕ್ಷಿಪ್ತ); ಡಿಸೆಂಬರ್ 12, 1970)

### ಕನ್ನಡಕ್ಕಾಗಿ ಕೈ ಎತ್ತಿದವರು

ಈ ದೇಶದಲ್ಲಿ ಕನ್ನಡ ಭಾಷೆ ಇದೆ. ಜನರಿಗೆ ತಿಳಿಯತಕ್ಕಂತಹ ಭಾಷೆಯಲ್ಲಿ ಆಡಳಿತ ನಡೆದರೆ ಮಾತ್ರ ಪ್ರಜಾತಂತ್ರ ಯಶಸ್ವಿ ಆಗುತ್ತದೆಯೆಂದು ಪಟೇಲರು ನಂಬಿದ್ದರು. ಇದಕ್ಕಾಗಿ ಅವರು ಲೋಕಸಭೆಯಲ್ಲಿ ಅಪಾರ ಪರಿಶ್ರಮ ನಡೆಸಿದರು. ಇದು ನಮ್ಮೆಲ್ಲರಿಗೂ ಮಾದರಿ. ಕನ್ನಡ ಭಾಷೆ ನಾಲ್ಕು ಕೋಟಿ ಜನರ ಹೃದಯದ ಭಾಷೆ ಎಂದು ರಾಷ್ಟ್ರಮಟ್ಟದ ರಾಜಕಾರಣದಲ್ಲಿ ಕನ್ನಡಿಗರ ಪರವಾಗಿ ಸೊಲ್ಲೆತ್ತಿದ ಧೀರ ಜೆ.ಹೆಚ್. ಪಟೇಲರು. ಅವರಿಗೆ ಹಿಂದುಳಿದ ವರ್ಗಗಳ ಬಗೆಗೆ ಅಪಾರ ಕಾಳಜಿ ಇದ್ದಿತು.

(ಕೆ.ಎಂ. ಕೃಷ್ಣಮೂರ್ತಿ (ಕಡೂರು) ವಿಧಾನಸಭೆ, ಫೆಬ್ರವರಿ 27, 2001)

### ವಿಶಾಲ ದೃಷ್ಟಿ; ಕೋಮಲ ಮನಸ್ಸು

J.H. Patel was a treasury of knowlege and experience. ಇವರಿಗೆ ಸಾಟಿ ಎನಿಸುವ ಮುತ್ಸದ್ದಿ ಸಿಗುವುದು ಕಠಿಣ. ಸಮಾಜವಾದದ ಚಿಂತನೆಗಳಿಂದ ಪ್ರಭಾವಿತರಾದ ಪಟೇಲರು ಬಹುಜನ ಹಿತವೆನಿಸುವ ಕಾರ್ಯ ಯೋಜನೆಗಳನ್ನು ದೀರ್ಘವಾಗಿ ಯೋಚಿಸಿದ ಬಳಿಕ ಕಾರ್ಯ ರೂಪಕ್ಕೆ ತರುತ್ತಿದ್ದರು. ವಿಶಾಲ ದೃಷ್ಟಿ ಇರುವಂತೆಯೇ ಕೋಮಲ ಮನಸ್ಸು ಇವರದು.

(ವಿ.ಆರ್. ಸುದರ್ಶನ್ (ವಿಧಾನ ಪರಿಷತ್) ಫೆಬ್ರವರಿ 27, 2001)

# 15

# ಪೊಲೀಸರನ್ನಷ್ಟೇ ದೂಷಿಸುವುದು ಸಲ್ಲ

ಸರಕಾರದ ಹಲವಾರು ಇಲಾಖೆಗಳ ಪೈಕಿ ಸಂಸದೀಯ ವೇದಿಕೆಯಲ್ಲಿ ಮೇಲಿಂದ ಮೇಲೆ ಪ್ರಸ್ತಾಪಕ್ಕೆ ಬರುವ ಖಾತೆ ಎಂದರೆ ಪೊಲೀಸು. ದೇಶದಲ್ಲಿ ಪೊಲೀಸು ಇಲಾಖೆಯನ್ನು ಪ್ರಸ್ತಾಪಿಸದ ವಿಧಾನ ಮಂಡಲಗಳೇ ಇಲ್ಲ. ತಮ್ಮ ಸೇವಾವಧಿಯಲ್ಲಿ ಯಾವುದಾದರೊಂದು ಕಾರಣಕ್ಕಾಗಿ ಪೊಲೀಸು ಇಲಾಖೆಯ ಕಾರ್ಯವೈಖರಿ ಕುರಿತು ಟೀಕಿಸದ ಶಾಸಕರೇ ಇಲ್ಲ. ಈ ಮಾತುಗಳು ಉತ್ಪ್ರೇಕ್ಷೆಯಲ್ಲ. ಕೆಲವೊಂದು ಪ್ರಸಂಗಗಳಲ್ಲಿ ಹಲವಾರು ರಾಜ್ಯಗಳಲ್ಲಿನ ಮಂತ್ರಿ ಅಥವಾ ಮಂತ್ರಿಮಂಡಲದ ರಾಜೀನಾಮೆಗೆ ಈ ಇಲಾಖೆ ಕಾರಣವಾಗಿದ್ದರೂ ಅಚ್ಚರಿಯೇನಲ್ಲ.

ಪಟೇಲರು ಪ್ರತಿಪಕ್ಷದ ಶಾಸಕರಿದ್ದ ಕಾಲದಿಂದಲೂ ಪೊಲೀಸ್ ಇಲಾಖೆಯ ಆಡಳಿತದಲ್ಲಿನ ಕಾರ್ಯವಿಧಾನ, ಪೊಲೀಸ್ ಸಿಬ್ಬಂದಿಯಲ್ಲಿ ಜನಸೇವೆಗೆ ಇರಬೇಕಾದ ವ್ಯವಸ್ಥಿತ ಮನೋಧರ್ಮ ಮತ್ತು ಕಡ್ಡಾಯವಾಗಿ ಬೇಕಾಗುವ ಪ್ರಾಮಾಣಿಕತೆಯ ಬಗೆಗೆ ಎಳೆ ಎಳೆಯಾಗಿ ವಿಶ್ಲೇಷಿಸಿದ್ದುಂಟು. ಬ್ರಿಟೀಷ್ ಆಳರಸರು ವಸಾಹತುಷಾಹಿ ಬೆಂಗಾವಲಿಗೆ ಪೊಲೀಸು ಇಲಾಖೆಯನ್ನು ಬಳಸಿದರೆಂದು ಕಟುವಾಗಿ ಟೀಕಿಸಿದವರು ಪಟೇಲರು. ಸ್ವಾತಂತ್ರ್ಯಾನಂತರ ಪೊಲೀಸು ಇಲಾಖೆಯ ಕಾರ್ಯವೈಖರಿಯಲ್ಲಿ ಆಮೂಲಾಗ್ರ ಬದಲಾವಣೆಗಾಗಿ ಹಲವಾರು ಸಲಹೆಗಳನ್ನಿತ್ತ ಪಟೇಲರು, ತಾವೇ ಸ್ವತಃ ಅಧಿಕಾರಕ್ಕೆ ಬಂದಮೇಲೆ ಇಲಾಖೆಯ ಸುಧಾರಣೆಗಾಗಿ ಕೆಲವೊಂದು ಪರಿಣಾಮಕಾರಿ ಕ್ರಮಗಳನ್ನು ಜಾರಿಗೆ ತಂದರು.

ಪೊಲೀಸರನ್ನಷ್ಟೇ ಟೀಕಿಸುವುದನ್ನು ಪಟೇಲರು ಸಹಿಸುತ್ತಿರಲಿಲ್ಲ. ಸಮಾಜದಲ್ಲಿ ಕಂಡುಬರುವ ನೀತಿಭ್ರಷ್ಟತೆ, ದಗಲಬಾಜಿತನ, ದ್ವಂದ್ವ, ಸ್ವಾರ್ಥ ಮತ್ತು ಸಮಯಸಾಧಕತನದಿಂದ ಪೊಲೀಸು ಇಲಾಖೆಯ ಮೇಲಾಗುವ ದುಷ್ಪರಿಣಾಮಗಳನ್ನು ನಿದರ್ಶನಗಳೊಂದಿಗೆ ವಿವರಿಸುವುದು ಪಟೇಲರ

ಅಭ್ಯಾಸವಾಗಿತ್ತು. ಜನತೆ ಮತ್ತು ಪೊಲೀಸರ ನಡುವೆ ನಂಬುಗೆಯ ಬಾಂಧವ್ಯ ಬೇಕೆಂಬುದು ಅವರ ವಾದ.

## "ಲಾಕಪ್ ಡೆತ್" ಪಟೇಲರು ಪ್ರತಿಪಕ್ಷದಲ್ಲಿದ್ದಾಗ

ಸಂದರ್ಭ: ಬೆಂಗಳೂರು ನಗರದ ಪೊಲೀಸ್ ಠಾಣೆಯೊಂದರಲ್ಲಿ 1978ರ ಜುಲೈನಲ್ಲಿ 'ಲಾಕಪ್' ಸಾವಿನ ಪ್ರಕರಣ ವರದಿಯಾಯಿತು. ವಿಧಾನ ಸಭೆಯಲ್ಲಿ ಈ ಬಗೆಗೆ ಪ್ರತಿಪಕ್ಷಗಳು ನಿಲುವಳಿ ಸೂಚನೆ ತರಲು ಪ್ರಯತ್ನ ನಡೆಸಿದವು. ಸರ್ವಶ್ರೀ ಎಚ್.ಡಿ. ದೇವೇಗೌಡ, ಎಸ್.ಆರ್. ಬೊಮ್ಮಾಯಿ, ಬಿ.ವಿ. ಕಕ್ಕಿಲಾಯ, ಜೆ.ಹೆಚ್. ಪಟೇಲ್, ಬಿ.ಕೆ. ತಮ್ಮಯ್ಯ, ಸಿ.ಎಂ. ಇಬ್ರಾಹಿಂ, ಎಂ. ಲಕ್ಷ್ಮೀಸಾಗರ್, ಪಿ. ರಾಮದೇವ್, ಪಂಪಾಪತಿ, ವೈ. ರಾಮಕೃಷ್ಣ, ಮಳ್ಳೂರು ಆನಂದರಾವ್ ಮತ್ತಿತರರು ನಿಲುವಳಿ ಸೂಚನೆಗಾಗಿ ಸಭಾಧ್ಯಕ್ಷರ ಮನಒಲಿಸಲು ಪೊಲೀಸು ಇಲಾಖೆಯ ಬಗೆಗೆ ಪ್ರಸ್ತಾಪಿಸಿದರು. ಪ್ರತಿ ಪಕ್ಷದಲ್ಲಿದ್ದ ಜೆ.ಎಚ್. ಪಟೇಲರು ಅಂದು ಹೇಳಿದ ಕೆಲ ಮಾತುಗಳು ಇಂದಿಗೂ ಪ್ರಸ್ತುತ.

ಪೊಲೀಸಿನವರು ಅಂದೂ ಹಾಗೆಯೇ, ಇಂದೂ ಹಾಗೆಯೇ, ಮುಂದೂ ಹಾಗೆಯೇ. ಬ್ರಿಟೀಷರ ಕಾಲದಲ್ಲಿ ನಾಯಿಗಳನ್ನು ಹಸಿವಿನಲ್ಲಿಡುತ್ತಿದ್ದರಂತೆ. ಅದನ್ನು ಗೂಡಿನಲ್ಲಿ ಕೂಡಿ ಹಾಕುತ್ತಿದ್ದರು. ಬೇಟೆಗೆ ಬಿಟ್ಟಾಗ ಈ ನಾಯಿಗಳು ದಾರಿಯಲ್ಲಿ ಸಿಕ್ಕುವ ಯಾವುದೇ ಪ್ರಾಣಿ ಆಗಲಿ ಹಸು, ಕರು, ಎಮ್ಮೆ, ಜಿಂಕೆ, ಮೊಲ - ಹೀಗೆ ಯಾವ ಪ್ರಾಣಿ ಸಿಕ್ಕರೂ ಅವುಗಳತ್ತ ಜಿಗಿಯುತ್ತಿದ್ದವಂತೆ.

ಈಗ ಸರ್ಕಾರವೂ ಈ ಪೊಲೀಸರನ್ನು ಹೀಗೆಯೇ ಇಟ್ಟಿದೆ. ಸಬ್‌ಇನ್ಸ್‌ಪೆಕ್ಟರ್ ಸ್ಟೇಷನ್ನಿಗೆ ಬರುತ್ತಿದ್ದಂತೆಯೇ ದಫೇದಾರನನ್ನು ಅವಾಚ್ಯ ಶಬ್ದಗಳೊಂದಿಗೇ ಮಾತನಾಡಿಸುತ್ತಾನೆ. ಇದೇ ಸಂಸ್ಕೃತಿಯ ಪುನರಾವರ್ತನೆ ದಫೇದಾರನದು. ಆತ ಕಾನ್‌ಸ್ಟೇಬಲ್ಲನನ್ನು ಇನ್ನಷ್ಟು ಉಗ್ರ ಗುಣವಾಚಕಗಳಿಂದ ಮಾತನಾಡಿಸುತ್ತಾನೆ.

ಈ ಸಾಧಾರಣ ಪೇದೆ ತನಗೆ ಸಿಕ್ಕುವ ಸ್ಟೇಷನ್ ಸತ್ಕಾರವನ್ನು ಬೇರೆಯವರಿಗೂ ಉಣ ಬಡಿಸುತ್ತಾನೆ.

ಪೊಲೀಸರು ದುರ್ಬಲ ಜನ ಯಾವುದೇ ಜಾತಿಯವರಾಗಿದ್ದರೂ ಅವರ ಮೇಲೆ ಹರಿಹಾಯುತ್ತಲೇ ಇರುತ್ತಾರೆ. ಈ ಸಂಸ್ಕೃತಿ ಬದಲಾಗಬೇಕು. ತನ್ನ ಹೆಂಡತಿ ಮಕ್ಕಳನ್ನು ಹಗುರವಾಗಿ ಮಾತನಾಡಿಸುವ ಪೊಲೀಸಿನ ಮನೋಧರ್ಮ ಬದಲಾಗುವಂತೆ ಸಮಾಜ ಪ್ರಭಾವಶಾಲಿಯಾಗಬೇಕು.

ನಮಗಂತೂ ಪೊಲೀಸ್ ಸ್ಟೇಷನ್‌ಗೆ, ಜೈಲಿಗೆ, ಹೋಗಿ ಅಭ್ಯಾಸವಾಗಿಬಿಟ್ಟಿದೆ. ಪಾಪ ಬಡಜನರ ಸ್ಥಿತಿ ಏನೆಂದು ನಾವು ಯೋಚಿಸಬೇಕು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಜುಲೈ 7, 1978)

## ಬ್ರಿಟೀಷರಿಂದ ಕೆಟ್ಟ ಭಾರತೀಯ ಪೊಲೀಸು

ಬ್ರಿಟೀಷರ ಕಾಲದಲ್ಲಿದ್ದ ಪೊಲೀಸರಿಗೂ, ಸ್ವಾತಂತ್ರ್ಯ ನಂತರದ ಪೊಲೀಸರಿಗೂ ಸಾಮಾನ್ಯ ಜನರೊಡನೆ ವ್ಯವಹರಿಸುವ ಸಂದರ್ಭದಲ್ಲಿ ಬೇಕಾದಂತಹ ಮನಸ್ಸಿನ ಬದಲಾವಣೆ ಇಲ್ಲದಿರುವುದು ದುರ್ಭಾಗ್ಯ. ನಾವು ಸ್ವಾತಂತ್ರ್ಯ ನಂತರ ಪೊಲೀಸರಿಂದ ಏನು ನಿರೀಕ್ಷಿಸಿದ್ದೆವು ಅದು ಕಾರ್ಯರೂಪಕ್ಕೆ ಬಂದಂತಿಲ್ಲ.

ಬ್ರಿಟೀಷರು ಭಾರತೀಯರನ್ನು ಹೆದರಿಸಲು, ದಾಸ್ಯದಲ್ಲಿ ಇಡಲು ಪೊಲೀಸರನ್ನು ಬಳಸಿಕೊಳ್ಳುತ್ತಿದ್ದರು. ಬಹುತೇಕ ಜನ ಸರ್ಕಾರದ ವಿರುದ್ಧವಾಗಿದ್ದಾರೆ ಎಂಬ ನಂಬಿಕೆ ಅವರಲ್ಲಿತ್ತು. ಹೀಗಾಗಿ ಜನರನ್ನು ಹತ್ತಿಕ್ಕಲು ಅವರಿಗೆ ಪೊಲೀಸು ಬೇಕಾಗಿತ್ತು.

ಮಹಾತ್ಮಾಗಾಂಧೀಜಿಯವರು ಈ ಧೋರಣೆಯನ್ನು ಬದಲು ಮಾಡಲು ಪ್ರಾಮಾಣಿಕ ಪ್ರಯತ್ನ ನಡೆಸಿದ್ದುಂಟು.

ಇಂದಿಗೂ ಬ್ರಿಟನ್‌ನಲ್ಲಿ ಪ್ರಜೆಗಳಿಗೆ ತಮ್ಮ ಮಕ್ಕಳು ತಮಗಿಂತಲು ಪೊಲೀಸರ ಕೈಯಲ್ಲೇ ಹೆಚ್ಚು ಸುರಕ್ಷಿತ ಎಂದು ನಂಬುವಷ್ಟು ಹತ್ತಿರದವರಾಗಿದ್ದಾರೆ.

1968ರಲ್ಲಿ ನಾನು ಲಂಡನ್ನಿನಲ್ಲಿದ್ದಾಗ ನೆರೆ ರಾಷ್ಟ್ರವಾದ ಫ್ರಾನ್ಸ್ ನಾಯಕರುಗಳಲ್ಲಿದ್ದ ಒಂದು ಮಹತ್ವದ ಧೋರಣೆಯನ್ನು ಕಂಡೆ. ಫ್ರಾನ್ಸಿನ ನಾಯಕ ಚಾರ್ಲ್ಸ್ ಡಿಗಾಲ್ ವಿರುದ್ಧ ಇಡೀ ಪ್ರಾನ್ಸ್‌ನ ರಾಷ್ಟ್ರದ 10 ಲಕ್ಷ ಯುವಜನರು ಪ್ರದರ್ಶನ ನಡೆಸಿದರು.

ತನ್ನ ವಿರುದ್ಧ ಪ್ರದರ್ಶನವನ್ನು ಆತ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಆದರೆ ಯಾವನೇ ಒಬ್ಬ ಯುವಕನಿಗೆ, ಯುವತಿಗೆ ತೊಂದರೆ ಅಥವಾ ಕಿರುಕುಳ ಆಗದಂತೆ ನೋಡಿಕೊಳ್ಳಿ ಎಂದು ಪೊಲೀಸರಿಗೆ ಆತ ಆದೇಶಿಸಿದ. "ಈ ಯುವಜನರೇ ನಿಜವಾದ ಫ್ರಾನ್ಸಿನ ನಾಯಕರು. ನಾನಲ್ಲ. ಅವರಿಗೆ ಸಂಪೂರ್ಣ ಮರ್ಯಾದೆ ನೀಡಿ" ಎಂದು ಡಿಗಾಲ್ ತಾಕೀತು ಮಾಡಿದ್ದ.

ಜನರು ಮತ್ತು ಪೊಲೀಸರ ನಡುವೆ ತಾಯಿ ಮಕ್ಕಳ ಸಂಬಂಧವಿರಬೇಕು. ಅಂತೆಯೇ ಪೊಲೀಸರ ಬಗೆಗೆ ಜನ ಸಾಮಾನ್ಯರು ಸಂಶಯಪಡದಂತಹ ವಾತಾವರಣವಿರಬೇಕು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ ಕಲಾಪ: ಜುಲೈ 26, 1978)

## ಪೊಲೀಸರು: ಪಟೇಲ್, ಅರಸು ಸಂವಾದ

ಪೊಲೀಸು ಇಲಾಖೆಯ ಕಾರ್ಯವಿಧಾನ ಮತ್ತು ದಕ್ಷತೆ ಕುರಿತಂತೆ ಬಹುತೇಕ ಎಲ್ಲ ಶಾಸಕರೂ ತಮ್ಮದೇ ಆದ ವ್ಯಾಖ್ಯಾನ ಮಾಡುವುದು ವಿಧಾನಮಂಡಲದ ಕಲಾಪಗಳಿಂದ ತಿಳಿದುಬರುತ್ತದೆ. ಜನತೆ ಮತ್ತು ಪೊಲೀಸರ ನಡುವೆ ನಂಬಿಕೆಯ ವಾತಾವರಣ ಮೂಡಿಸಬೇಕೆನ್ನುವುದು ನಾಡಿನ ಸಂಸದೀಯ ನಾಯಕರ ಏಕೈಕ ಆಸೆ. ಪೊಲೀಸರ ದಕ್ಷತೆ, ಶ್ರದ್ಧೆ

ಮತ್ತು ಶಿಸ್ತಿನ ಬಗೆಗೆ ಸಂದೇಹ ಬರಲು ಕಾರಣಗಳೇನು? ನಮ್ಮ ಸಮಾಜದಲ್ಲಿರುವ ಕೆಲವು ಲೋಪದೋಷಗಳತ್ತ ಅರಸರು - ಪಟೇಲರು ಅವಲೋಕನ ನಡೆಸಿದ ಸಂದರ್ಭ ಇಲ್ಲಿದೆ.

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಪೊಲೀಸರ ಬಗೆಗೆ ಜನರಿಗೆ ಅಪನಂಬಿಕೆ, ಒಂದು ರೀತಿಯ ಭಯ. ಅದೇ ರೀತಿ ಜನರನ್ನು ಕಂಡರೆ ಪೊಲೀಸರಿಗೂ ಒಂದು ಬಗೆಯ ಸಂದೇಹ, ಸಂಶಯ, ತಾತ್ಸಾರ. ಏಕೆ ಹೀಗಾಗಿದೆ? ಒಳ್ಳೆ ಸಂಬಂಧ ತರಲು ಏನು ಮಾಡಬಹುದು? ವಿದೇಶಗಳಲ್ಲಿ ಪೊಲೀಸರನ್ನು ಜನ ತಮ್ಮ ಸಹೋದರ ಎನ್ನುವಂತೆ ಕಾಣುತ್ತಾರೆ. ಸ್ನೇಹಿತನಂತೆ ನೋಡುತ್ತಾರೆ. ಆತನನ್ನು ನಂಬುತ್ತಾರೆ. ಆತನಿಗೆ ಅಪಾರ ಗೌರವಕೊಡುತ್ತಾರೆ. ನಮ್ಮಲ್ಲೇಕೆ ಪರಸ್ಪರ ಮಧುರ ಸಂಬಂಧವಿಲ್ಲ.

ಡಿ. ದೇವರಾಜ ಅರಸು (ಮುಖ್ಯಮಂತ್ರಿ): ಬೇರೆ ದೇಶಗಳಿಗೆ ನಮ್ಮ ಪೊಲೀಸರನ್ನು ಹೋಲಿಸುವುದು ಸಾಧುವಲ್ಲ ಎಂದು ನನಗನ್ನಿಸುತ್ತದೆ. ಬೇರೆ ದೇಶದಲ್ಲಿ ಒಬ್ಬ ಪೊಲೀಸ್ ಕಾನ್‌ಸ್ಟೇಬಲ್‌ಗೆ ಇರುವ ಅಧಿಕಾರ ನಮ್ಮ ದೇಶದಲ್ಲಿ ಒಬ್ಬ ಇನ್ಸ್‌ಪೆಕ್ಟರಿಗೂ ಇರುವುದಿಲ್ಲ. ಪೊಲೀಸರ ಬಗ್ಗೆ ಜನಕ್ಕೆ ಕೊಂಚ ಭೀತಿ ಇದ್ದರೆ ತಪ್ಪಲ್ಲ. ಶಿಸ್ತು ಪಾಲನೆಯಿಂದ ಮಾತ್ರ ಸಮಾಜ ಮುಂದುವರೆಯಬಲ್ಲದು.

ನಮ್ಮಲ್ಲೂ ಶಿಸ್ತು ಇದೆ. ಉದಾಹರಣೆಗೆ ಮಲೆನಾಡಿನಲ್ಲಿ, ಕೊಡಗಿನಲ್ಲಿ, ಕೇರಳದಲ್ಲಿ ಇನ್ನೂ ಹಲವೆಡೆಗಳಲ್ಲಿ ಮಕ್ಕಳು ಸ್ಕೂಲಿಗೆ ಹೋಗಬೇಕಾದರೆ ಯಾವಾಗಲೂ ರಸ್ತೆ ಬದಿಯಲ್ಲಿಯೇ ಹೋಗುತ್ತಾರೆ. ಈ ಮಕ್ಕಳಿಗೆ ಹಾರ್ನ್ ಮಾಡಿ ದೂರ ಹೋಗಿ ಎಂದು ಯಾರೂ ಹೇಳಬೇಕಾಗಿಲ್ಲ. ಅದೇ ಸಿಟಿಗಳಲ್ಲಿ ಮತ್ತಿತರ ಕಡೆ ರಸ್ತೆಯ ಮಧ್ಯಭಾಗದಲ್ಲಿ ನಡೆಯುವವರನ್ನು ಬದಿಗೆ ಹೋಗಿ ಎಂದು ಹೇಳಿದರೆ ಪೊಲೀಸರ ಮೇಲೆಯೇ ಜಗಳಕ್ಕೆ ಬರುತ್ತಾರೆ. ಪೊಲೀಸರಿಂದ ನಮಗೆ ಗೌರವ, ಪ್ರೀತಿ ಸಿಗಬೇಕಾದಲ್ಲಿ ನಾವೂ ಕೂಡ ಅವರಿಗೆ ಪ್ರೀತಿ-ಗೌರವ ತೋರಿಸಬೇಕಲ್ಲವೇ.

ಜೆ.ಹೆಚ್. ಪಟೇಲ್: ಈ ವಿಷಯ ಕುರಿತಂತೆ ಸ್ವೀಡನ್ನಿನಲ್ಲಿ ಚುನಾವಣೆಗೆ ಪೂರ್ವದ ದಿನದಲ್ಲಿ ನಡೆದ ಘಟನೆಯೊಂದನ್ನು ನಮ್ಮ ಶಾಸಕರ ಗಮನಕ್ಕೆ ತರಬಯಸುತ್ತೇನೆ.

ಸ್ವೀಡನ್ನಿನ ಪ್ರಧಾನಮಂತ್ರಿ ಖಾಸಗಿ ಕೆಲಸಕ್ಕಾಗಿ ತನ್ನ ಕಾರನ್ನು ತಾನೇ ಡ್ರೈವ್ ಮಾಡಿಕೊಂಡು ಬರುತ್ತಿದ್ದ. ಕಾರಿನ ವೇಗ ನಿಯಮಿತ ವೇಗಕ್ಕಿಂತ ಹೆಚ್ಚಿತ್ತು. ಸಾಮಾನ್ಯ ಪೊಲೀಸ್ ಪೇದೆಯೊಬ್ಬ ಕಾರನ್ನು ನಿಲ್ಲಿಸಿ ಕೇಳಿದ. ಇಷ್ಟು ವೇಗವಾಗಿ ಡ್ರೈವ್ ಮಾಡಿ ಅಪರಾಧ ಮಾಡಿದ್ದೀಯ, ಮಿಗಿಲಾಗಿ ಕುಡಿದಂತೆ ಕಾಣುತ್ತೆ. ನಿನ್ನ ಮೇಲೆ ಕೇಸ್ ಹಾಕುವ ಅವಶ್ಯಕತೆ ಇದೆ ಎಂದ.

ಪ್ರಧಾನಮಂತ್ರಿಗೂ ಕೊಂಚ ಪಿತ್ತ ಏರಿದಂತಿತ್ತು. ಕೆಳಗೆ ಇಳಿದು ಹೇಳಿದ 'ನಾನು ಯಾರು ಗೊತ್ತೆ, ಈ ದೇಶದ ಪ್ರಧಾನ ಮಂತ್ರಿ, ನನ್ನನ್ನೇ ತಡೆದು ನಿಲ್ಲಿಸುತ್ತಿದ್ದೀಯಲ್ಲಾ.'

ಪೊಲೀಸನಿಗೆ ಈ ಪ್ರಶ್ನೆ ಅಗತ್ಯ ಎನಿಸಲಿಲ್ಲ, ನೀನು ಯಾರಾದರೂ ಅಷ್ಟೆ, ತಪ್ಪು ತಪ್ಪೇ, ಎಲ್ಲಿ ನಿನ್ನ ಲೈಸೆನ್ಸ್ ತಗೀ. ಜೋರು ಮಾಡಿದ.

ಪ್ರಧಾನಮಂತ್ರಿ ಹತ್ತಿರ ಲೈಸೆನ್ಸ್ ಇಲ್ಲ. ತನ್ನ ಕಾರ್ಯದರ್ಶಿಗೆ ಫೋನ್ ಮಾಡಿ, ಡ್ರೈವಿಂಗ್ ಲೈಸೆನ್ಸ್ ತರಿಸಿ, ಅಕನಾಲೆಡ್ಜ್‌ಮೆಂಟಿಗೆ ಸಹಿ ಹಾಕಿ, ಕ್ಷಮೆ ಕೇಳಿ ಮುಂದೆ ಹೋದ.

ತಾನು ಪ್ರಧಾನಮಂತ್ರಿ, ತನಗೆ ವಿಶೇಷ ರಿಯಾಯಿತಿ ಬೇಕು ಎಂದು ಆತ ಪ್ರಭಾವ ಬೀರಲಿಲ್ಲ. ಕಾನೂನಿಗೆ ಗೌರವ ಕೊಟ್ಟ.

ಜನರೂ ಅಷ್ಟೆ, ಅಲ್ಲಿನ ಜನ ಪ್ರಧಾನಮಂತ್ರಿಯ ಕಾನೂನು ಪರಿಪಾಲನೆಯ ಪ್ರಜ್ಞೆಯನ್ನು ಮೆಚ್ಚಿದರು. ಇದು ಅಲ್ಲಿನ ವಿಶೇಷ.

(ವಿಧಾನ ಸಭೆ ಕಲಾಪ, ಜುಲೈ 12, 1978)

## ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಒಂದೇ

ಜೆ.ಹೆಚ್. ಪಟೇಲ್(ವಿದ್ಯುತ್ ಖಾತೆ ಮಂತ್ರಿ): ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಒಂದೇ. ಹರಿಜನ ಮಹಿಳೆಯ ಮೇಲೆ ಹಲ್ಲೆ ಆದರೆ ಅದು ದೊಡ್ಡದು; ಬ್ರಾಹ್ಮಣ ಮಹಿಳೆಯ ಮೇಲೆ ಹಲ್ಲೆಯಾದರೆ ಅದು ಕಡಿಮೆ ಎಂದು ಹೇಳುವುದಕ್ಕೆ ಬರುವುದಿಲ್ಲ. ಹಲ್ಲೆ ಯಾರ ಮೇಲೇ ಆಗಲೀ ಸತ್ಯಾಂಶ ಏನು ಎಂಬುದನ್ನು ಪತ್ತೆ ಹಚ್ಚಬೇಕಾದದ್ದು ನಮ್ಮ ಕರ್ತವ್ಯ. ಮಾನ್ಯ ವಿರೋಧಪಕ್ಷದ ನಾಯಕರಲ್ಲಿ ನನ್ನ ಮನವಿ ಏನು ಎಂದರೆ, ಇಂತಹ ಪ್ರಸಂಗಗಳಲ್ಲಿ ನಮ್ಮ ಸರ್ಕಾರ ಅಥವಾ ನಿಮ್ಮ ಸರ್ಕಾರ ಎಂಬುದು ಮುಖ್ಯವಲ್ಲ. ಹಲವಾರು ಶತಮಾನಗಳಿಂದ ಭದ್ರವಾಗಿ ಬೇರೂರಿರುವ ದುಷ್ಟಶಕ್ತಿ ಮತ್ತು ಪಟ್ಟಭದ್ರ ಹಿತಾಸಕ್ತಿಗಳನ್ನು ಬಲಿ ಹಾಕಿ ದುರ್ಬಲರನ್ನು ರಕ್ಷಿಸಬೇಕಾಗಿದೆ. ಮಾನ್ಯ ಸುಬ್ಬಯ್ಯನವರು ಸರ್ಕಾರದಲ್ಲಿ ಪೋಲೀಸಿನವರು ಇರುವುದೇತಕ್ಕೆ ಎಂದು ಪ್ರಶ್ನಿಸಿದ್ದಾರೆ. ಬಹಳ ಸಲ ನಾನೂ ಈ ಬಗ್ಗೆ ಯೋಚಿಸಿದ್ದೇನೆ. ಪೋಲೀಸರ ಬಗೆಗೆ ಜನಕ್ಕೆ ಸಂದೇಹದ ದೃಷ್ಟಿ ಇರುವುದು ಸಹಿತ ನಿಜ. ಆದರೆ ಈ ಪೋಲೀಸರ್ಯಾರೂ ದಕ್ಷಿಣ ಆಫ್ರಿಕಾ ಅಥವಾ ಮತ್ತಾವುದೇ ದೇಶದಿಂದ ಬಂದ ಹೊರಗಿನವರಲ್ಲ. ಇವರೂ ನಮ್ಮ ಅಣ್ಣ ತಮ್ಮಂದಿರೇ.

ಎಸ್. ಮಲ್ಲಿಕಾರ್ಜುನಯ್ಯ: ಒಮ್ಮೊಮ್ಮೆ ಪೋಲೀಸರು ತಮ್ಮ ತಲೆಯ ಮೇಲೆ ತಾವೇ ಹೊಡೆದುಕೊಳ್ಳುತ್ತಾರೆ. ಇದಕ್ಕೇನು ಮಾಡೋಣ?

ಜೆ.ಹೆಚ್. ಪಟೇಲ್: ಈಗ ಕೆಲಸ ಮಾಡುತ್ತಿರುವ ಪೋಲೀಸರ ಮನೋಗುಣ ಬದಲಾಗಬೇಕು. ಈ ಬಗೆಗೆ ಪ್ರಾಮಾಣಿಕ ಪ್ರಯತ್ನ ನಡೀ ಬೇಕು.

ಹೆಚ್. ಶ್ರೀಕಂಠಯ್ಯ: ನನ್ನ ಸ್ವಂತ ತಮ್ಮ ಒಬ್ಬ ನಿವೃತ್ತ ಪೋಲೀಸ್ ಅಧಿಕಾರಿ ಎಂಬುದನ್ನು ಸದನದ ಗಮನಕ್ಕೆ ತರಲು ಇಚ್ಛಿಸುತ್ತೇನೆ.

ಜೆ.ಹೆಚ್. ಪಟೇಲ್: ವಿನಾಕಾರಣ ನಾಗರೀಕರ ಮೇಲೆ, ಪತ್ರಕರ್ತರ ಮೇಲೆ, ಚಹ ಅಂಗಡಿಯವರ ಮೇಲೆ- ಹೀಗೆ ಜನ ಸಾಮಾನ್ಯರ ಮೇಲೆ ಪೋಲೀಸರು ತೊಂದರೆ ಕೊಡುವುದು ತಪ್ಪಬೇಕು. ಇಂತಹ ಸಂದರ್ಭಗಳಲ್ಲಿ ತನಿಖೆ ಮಾಡಿ ಮೊದಲು ಸತ್ಯಾಸತ್ಯತೆ ತಿಳಿದುಕೊಳ್ಳಬೇಕೇ ಹೊರತು ಮಾನ್ಯ ನರಸಿಂಹಮೂರ್ತಿಯವರು ಹೇಳಿದರೆಂದು ಸಸ್ಪೆಂಡ್ ಮಾಡುವುದಕ್ಕಾಗುತ್ತದೆಯೇ?

ಟಿ.ಎನ್. ನರಸಿಂಹಮೂರ್ತಿ: ಈಗಾಗಲೇ ಶ್ರೀ ಸಿದ್ಧರಾಮೇಶ್ ಅವರ ದೂರಿನ ಮೇಲೆ ಪೋಲೀಸರ ವಿರುದ್ಧ ಕೇಸ್ ದಾಖಲೆಯಾಗಿದೆ. ಇಂತಹ ಸಂದರ್ಭವಿರುವಾಗ ನಾನು ಹೇಳಿದ ಕೂಡಲೇ ಸಸ್ಪೆಂಡ್ ಮಾಡುವುದಕ್ಕಾಗುತ್ತದೆಯೇ ಎಂದು ಹೇಳಿದರೆ ಹೇಗೆ? ಸರ್ಕಾರಿ ನೌಕರರು ಕಾಯಿದೆ ಚೌಕಟ್ಟಿನಲ್ಲಿ ತಪ್ಪು ಮಾಡಿದಾಗ ನಿಮ್ಮ ಒಂದು ನೀತಿಯ ಪ್ರಕಾರ ಸಸ್ಪೆಂಡ್ ಮಾಡುವುದು ಸರಿ.

ಅಬ್ದುಲ್ ನಜೀರ್ ಸಾಬ್ (ಗ್ರಾಮೀಣ ಅಭಿವೃದ್ಧಿ ಸಚಿವರು): ದೂರನ್ನು ದಾಖಲೆ ಮಾಡಿಕೊಳ್ಳಲಾಗಿದೆ. ವಿಚಾರಣೆ ಮಾಡಿದ ನಂತರ ತಪ್ಪು ಯಾರದೆಂದು ಗೊತ್ತಾಗುತ್ತದೆ.

ಜೆ.ಹೆಚ್. ಪಟೇಲ್: ಕೊಟ್ಟಂತಹ ದೂರುಗಳನ್ನು ದಾಖಲೆ ಮಾಡಿದ್ದಾಗಿದೆ. ಸತ್ಯಾಸತ್ಯತೆ ವಿಚಾರಣೆಯಾಗಬೇಕು. ತಪ್ಪಿತಸ್ಥರು ಯಾರಿದ್ದಾರೆ, ಅವರಿಗೆ ಶಿಕ್ಷೆ ಖಂಡಿತ.

ಟಿ.ಎನ್. ನರಸಿಂಹಮೂರ್ತಿ: ಮಾನ್ಯ ಸಭಾಪತಿಗಳೇ, 40 ರೂಪಾಯಿ ಲಂಚ ತೆಗೆದುಕೊಂಡ ಅಂತ ಹೇಳಿ ಹರಿಜನ ನೌಕರರ ಕೇಸನ್ನು ವಿಜಿಲೆನ್ಸ್‌ಗೆ ರೆಫರ್ ಮಾಡಿ ಒಂದೆರಡು ವರ್ಷ ಅನ್ನ ಬಟ್ಟೆಗೂ ಗತಿ ಇಲ್ಲದ ಹಾಗೆ ಮಾಡಿ ಅವರನ್ನು ಸಸ್ಪೆಂಡ್ ಮಾಡುತ್ತೀರಿ. ಅದೇ ಹಲ್ಲೆ ಇಲ್ಲಿ ನಡೆದಿದೆ; ಈ ಅಧಿಕಾರಿಗಳನ್ನು ಸಸ್ಪೆಂಡ್ ಮಾಡುವುದಕ್ಕಾಗುವುದಿಲ್ಲ ಅಂದರೆ ನಾಚಿಗೇಡಿತನ ವಿಷಯ.

ಜೆ.ಹೆಚ್. ಪಟೇಲ್: ಹಿಂದೆ ಮಾಡಿರುವುದು ಹಾಗೆಯೇ. ನಿಜವಾಗಿ ನಾಚಿಕೆ ಬರುವ ಹಾಗೆ ಮಾಡಿದ್ದಾರೆ. ಮಂತ್ರಿಗಳು ಎಂದರೆ ನಾಚಿಕೊಳ್ಳಬೇಕು ಜನ ಈ ತರಹ ಮಾಡಿದ್ದಾರೆ.

ಎಲ್.ಜಿ. ಹಾವನೂರ್: ನೀವು ಮಂತ್ರಿ ಪದವಿಗಾಗಿ ಬೆನ್ನು ಹತ್ತಿ ಹೊರಟಿದ್ರಿ. ಮೂರು ವರ್ಷಗಳಾದ ಮೇಲೆ ಇಂದು ಮಂತ್ರಿ ಪದವಿಗೆ ಬಂದಿದ್ದೀರಿ.

ಟಿ.ಎನ್. ನರಸಿಂಹಮೂರ್ತಿ: ನಮ್ಮ ಸರಕಾರ ಇರುವಾಗ ನಡೆದಿರತಕ್ಕ ಅಪರಾಧಗಳ ಸಂಖ್ಯೆಯನ್ನು ಹೇಳುತ್ತಿದ್ದೀರಿ. ಆದರೆ ನಮ್ಮ ಕಾಲದಲ್ಲಿ ಈ ರೀತಿ ಪತ್ರಿಕಾಕರ್ತರ ಮೇಲೆ ನಿಮ್ಮ ಕಾಲದಲ್ಲಿ ಆಗಿರುವಷ್ಟು ಹಲ್ಲೆ, ಚಿತ್ರಹಿಂಸೆ ನಡೆದಿಲ್ಲ.

ಜೆ.ಹೆಚ್. ಪಟೇಲ್: ಇಲ್ಲಿ ಯಾರೋ ಒಬ್ಬ ಪತ್ರಕರ್ತರು, ಇನ್ನೊಬ್ಬ ಪತ್ರಕರ್ತರ ಮೇಲೆ ದೂರು ಕೊಟ್ಟಿದ್ದರಿಂದ ಪೋಲೀಸಿನವರು ಅವರನ್ನು ಕರೆದುಕೊಂಡು ಹೋಗಿದ್ದಾರೆ.

ಆದರೆ ನಿಮ್ಮ ಕಾಲದಲ್ಲಿ ಪಾರ್ಟಿ ಆಫೀಸಿನವರೇ ಪ್ರಜಾವಾಣಿ ಮತ್ತು ಡೆಕ್ಕನ್ ಹೆರಾಲ್ಡ್ ಪತ್ರಿಕೆ ಕಾರ್ಯಾಲಯಗಳ ಬಾಗಿಲು ಮುಚ್ಚಿಸುವುದಕ್ಕೆ ಮುಂದಾಗಿದ್ದಿರಿ!

ಟಿ.ಎನ್. ನರಸಿಂಹಮೂರ್ತಿ: ಅದಕ್ಕೆ ನೀವು ಜವಾಬ್ದಾರರು ಎನ್ನುವುದು ನಿಮಗೆ ಗೊತ್ತಿದೆ.

ಜೆ.ಹೆಚ್. ಪಟೇಲ್: ಇದೇ ಸಂದರ್ಭದಲ್ಲಿ ಇನ್ನೊಂದು ವಿಷಯ ಪ್ರಸ್ತಾಪಕ್ಕೆ ಬಂದಿದೆ. ಮಂತ್ರಿಗಳೊಬ್ಬರು ಇದಕ್ಕೆ ಬೆಂಬಲ ಕೊಟ್ಟಿದ್ದಾರೆ ಎನ್ನಲಾಗಿದೆ. ಇದನ್ನು ನಾನು ಖಂಡತುಂಡವಾಗಿ ಅಲ್ಲಗಳೆಯುತ್ತೇನೆ. ಇದರಲ್ಲಿ ಯಾವ ಮಂತ್ರಿಗಳ ಕೈವಾಡವೂ ಇಲ್ಲ. ಮಾನ್ಯ ನರಸಿಂಹ ಮೂರ್ತಿಗಳು ಕರ್ನಾಟಕದ ನಾಲ್ಕು ಕೋಟಿ ಜನರ ಮೂಲಕ ಹೇಳುತ್ತಿದ್ದೇನೆ. ನೀವು ರಾಜೀನಾಮೆ ಕೊಡಬೇಕು ಎಂದರು. ಇವರು ಯಾವ ರೀತಿ ನಾಲ್ಕು ಕೋಟಿ ಜನಗಳ ಮನಸ್ಸನ್ನು ಹಿಡಿದಿದ್ದಾರೆ ಎನ್ನುವುದನ್ನು ಆಮೇಲೆ ಹೇಳುತ್ತೇನೆ. ಹಾಗೆಯೇ ನಾವು ಬಹಳ ದಿವಸ ಉಳಿಯುವುದಿಲ್ಲವೆಂದು ಅವರು ಹೇಳುತ್ತಾರೆ. 'ಯಾರೂ ಬಹುದಿವಸ ಇರುವುದಿಲ್ಲ' ಎನ್ನುವುದಕ್ಕೆ ಆಗಾಗ ನಡೆಯುವ ಚುನಾವಣೆಗಳೇ ಸಾಕ್ಷಿ.

(ವಿಧಾನ ಪರಿಷತ್ತು ಕಲಾಪ: ಆಗಸ್ಟ್ 30, 1983)

## ಮಟ್ಕಾ, ಜೂಜು, ಕಳ್ಳಭಟ್ಟಿ

ಸರ್ಕಾರದಲ್ಲಿ ಜಾತಿಯ ಸಲುವಾಗಿ ಹೊಸ ಹುದ್ದೆಗಳನ್ನು ಸೃಷ್ಟಿಸುವ ಪರಿಪಾಠ ಆರಂಭವಾಗಿದೆ. ಇದು ತಪ್ಪು. ಯೋಗ್ಯತೆ ಮೇಲೆ ಬಡ್ತಿ ಸಿಗದಾತ ಜಾತಿ ಹೆಸರಿನಲ್ಲಿ ರಾಜಕೀಯ ಮಾಡುವುದರಿಂದ ಹೀಗಾಗುತ್ತಿದೆ.

ಇದು ಎಲ್ಲಿಂದ ಆರಂಭವಾಗುತ್ತದೆ? ಎಷ್ಟೋ ಹಿರಿಯ ಅಧಿಕಾರಿಗಳಿಗೆ ನೇರವಾಗಿ ಭ್ರಷ್ಟತನ ಬಂದಿರುವುದಿಲ್ಲ. ಉದಾಹರಣೆಗೆ ಒಬ್ಬ ಡಿಐಜಿ ಯಾರನ್ನೂ ದುಡ್ಡುಕೊಡಿ ಎಂದು ಕೇಳುವುದಕ್ಕಾಗುವುದಿಲ್ಲ. ಆದುದರಿಂದ ಒಬ್ಬ ಸಬ್ ಇನ್ಸ್‌ಪೆಕ್ಟರ್ ಕಲೆಕ್ಟ್ ಮಾಡಲು ಸಿದ್ಧನಾಗುತ್ತಾನೆ. ಮಟಕ, ಸೂಳೆಗಾರಿಕೆ, ಜೂಜು, ಕಳ್ಳಭಟ್ಟಿ ಇವು ಕೆಲವು ಸಮಾಜದ್ರೋಹಿ ಚಟಗಳು. ಸತತವಾಗಿ ಬೆಳೆದುಕೊಂಡು ಬರಲಿಕ್ಕೆ ಕಾರಣ ಅವರಿಂದ ತಿಂಗಳಿಗೆ ಇಷ್ಟು ದುಡ್ಡು ಸಂಗ್ರಹ ಆಗುವುದು. ಇವು ಸಮಾಜ ಮತ್ತು ಪೊಲೀಸರ ರೋಗಗಳು.

ನಮ್ಮ ತಾಲ್ಲೂಕಿನ ಒಬ್ಬ ಸಬ್ ಇನ್ಸ್‌ಪೆಕ್ಟರನನ್ನು ಕಾನ್ಫಿಡೆನ್ಷಿಯಲ್ಲಾಗಿ ಕರೆದು ಕೇಳಿದೆ. ನೀವು ಯಾವ ರೀತಿ ಕಲೆಕ್ಟ್ ಮಾಡ್ತೀರಿ? ಯಾರ್‍ಯಾರಿಗೆ ಕೊಡ್ತೀರಿ?

ಆತ ಹೇಳಿದ, ಮಟಕಾದಿಂದ ತಿಂಗಳಿಗೆ ಮೂರು ಸಾವಿರ ಬರುತ್ತೆ. ಒಂದು ಸಾವಿರವನ್ನು ಎಸ್.ಪಿ. ಯವರಿಗೆ ಕೊಡುತ್ತೇವೆ. ಉಳಿದ ಎರಡು ಸಾವಿರವನ್ನು ನಾವು ಐದಾರು ಜನ ನಾನೂರು ಐನೂರು ಈ ರೀತಿ ಹಂಚಿಕೊಳ್ಳುತ್ತೇವೆ. ಈ ಸಬ್‌ಇನ್ಸ್‌ಪೆಕ್ಟರ್ ಹೆಸರು ನಾನು ಹೇಳುವುದಿಲ್ಲ.

ಇನ್ನೊಬ್ಬರು ಆಪ್ತರಾದವರು ನನ್ನ ಬಳಿ ಬಂದರು. ಅವರನ್ನೂ ಕೇಳಿದೆ. ಅವರು ನಮ್ಮ ಶಿವಮೊಗ್ಗ ಜಿಲ್ಲೆ ಎಸ್.ಪಿ. ಗೆ ತಿಂಗಳಿಗೆ 25 ಸಾವಿರ ರೂಪಾಯಿ ಬರುತ್ತದೆ ಎಂದರು. ಎಲ್ಲಿಂದ ಬರುತ್ತದೆ ಎನ್ನುವ ನಿಜಾಂಶವನ್ನು ಹೇಳಲಿಲ್ಲ. ವಾಸ್ತವವಾಗಿ ಸಮಾಜದ ರೋಗಗಳಾದ ಮಟಕಾ, ಕಳ್ಳಭಟ್ಟಿ, ಜೂಜು ಮತ್ತು ಸೂಳೇಗಾರಿಕೆ ಇವುಗಳಿಂದ ಹಣ ಧಾರಾಳವಾಗಿ ಬರುತ್ತದೆ. ಇವುಗಳ ವಿರುದ್ಧ ಯಾರಾದರೂ ಕಠಿಣ ಕ್ರಮಕೈಗೊಳ್ಳುವ ಪ್ರಯತ್ನ ಮಾಡಿದರೆ ಅವರ ಮೇಲೆ ಗೂಬೆ ಕೂರಿಸಿ, ಪೊಲೀಸ್ ಸ್ಟೇಷನ್ನಿಗೆ ಕರೆದೊಯ್ಯುತ್ತಾರೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ), ವಿಧಾನಸಭೆ, ಜುಲೈ 21, 1982)

## ಕರೆದಲ್ಲಿಗೆ ಧಾವಿಸುವ ಪ್ಯಾದೆಗಳು

ಪೊಲೀಸ್ ಕಾನ್‌ಸ್ಟೇಬಲ್‌ಗಳಿಗೆ ಪೇದೆ ಎಂದು ಕರೆಯುತ್ತಾರೆ. ಇದು ಯಾಕೆ ಎಂದು ನನಗೆ ಇಂದಿಗೂ ಅರ್ಥವಾಗುತ್ತಿಲ್ಲ. ಈ ಪೇದೆ ಬಂದಿದ್ದಾನೆಯೆ, ಹೋಗಿದ್ದಾನೆಯೆ, ಅವನು ಬಂದಿದ್ದಾನೇನೊ, ಹೀಗೇ ಹೇಳುವುದು. ಇದು ಸರಿಯಲ್ಲ. ಕೆಳಮಟ್ಟದಲ್ಲಿ ಕೆಲಸ ಮಾಡುವಂತಹ ಈ ಕಾನ್‌ಸ್ಟೇಬಲ್‌ಗಳನ್ನು ಕರೆಯುವಾಗ ಒಂದು ಸುಂದರವಾದ, ಅರ್ಥೋಚಿತವಾದ, ಗೌರವವಾದ ಪದವನ್ನು ಉಪಯೋಗಿಸಿ ವ್ಯವಸ್ಥಿತವಾದ ರೀತಿಯಲ್ಲಿ ಕರೆಯಬೇಕು.

ಶ್ರೀಮತಿ ಬಿ.ಟಿ. ಲಲಿತಾನಾಯಕ್: ಕಾನ್‌ಸ್ಟೇಬಲ್‌ಗಳಿಗೆ ಸುಂದರವಾದ ಹೆಸರನ್ನು ಇಟ್ಟರೂ ಅವರ ಮನಸ್ಸು ಸುಂದರವಾಗಿ ಇರಬೇಕಲ್ಲಾ? ಪೇದೆ ಎಂದು ಕರೆಯುವುದು ತಪ್ಪಿದರೂ ಅವರ ನಡವಳಿಕೆಗಳು ಬದಲಾವಣೆಯಾಗಬೇಕಲ್ಲಾ?

ವಾಟಾಳ್ ನಾಗರಾಜ್: ಇತ್ತೀಚೆಗೆ ಪೊಲೀಸ್‌ನವರು ಬೊಜ್ಜು ಕರಗಿಸಬೇಕೆಂದು ಸರ್ಕಾರ ಆದೇಶವನ್ನು ಹೊರಡಿಸಿದ್ದಾರೆಂದು ತಿಳಿದು ಬಂದಿದೆ. ಬೊಜ್ಜು ಕರಗಿಸದಿದ್ದರೆ ಅವರಿಗೆ ಯಾವ ಅನುಕೂಲಗಳನ್ನೂ ಕೊಡುವುದಿಲ್ಲವೆಂದು ಆದೇಶದಲ್ಲಿ ಇದೆ ಎಂದು ತಿಳಿದುಬಂದಿದೆ. ಇದು ಎಲ್ಲಾ ಪತ್ರಿಕೆಗಳಲ್ಲಿ ಬಂದಿದೆ. ನನಗೆ ಅರ್ಥವಾಗುತ್ತಿಲ್ಲ. ಅವರು ಹೇಗೆ ತಾನೆ ಬೊಜ್ಜು ಕರಗಿಸುವುದು? ಪೊಲೀಸ್ ಮಂತ್ರಿಗಳಿಗೆ ಮೂರು ಅಡಿ ಬೊಜ್ಜು ಬಂದಿದೆ. ಇನ್ನು ಪೊಲೀಸ್ ಕಾನ್‌ಸ್ಟೇಬಲ್ ಬೊಜ್ಜು ಕರಗಿಸಿಕೊಂಡು ಬರತಕ್ಕಂಥದ್ದು ಎಂದರೆ ಹೇಗೆ? ಈ ಬೊಜ್ಜು ಬರುವುದಕ್ಕೆ ಕಾರಣವೇನು ಎಂಬುದು ಗೊತ್ತಿಲ್ಲ.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಕೆಲವು ಸಾರಿ ಇದು ಒಂದು ರೋಗ. ಅದು ತಿಂದರೆ ಬರುತ್ತದೆ ಎಂದು ಅಲ್ಲ. ಜಿಂದಾಲ್ ನ್ಯಾಚೂರೊಪತಿ ಎಂದು ಇದೆ, ತಾವು ಅಲ್ಲಿ ಹೋಗಿ ನೋಡಬಹುದು.

ಅಧ್ಯಕ್ಷರು (ಮಾನ್ಯ ರಮೇಶ್‌ಕುಮಾರ್): ನಾನು ಅಲ್ಲಿಗೆ ನಿಮ್ಮನ್ನು ನೋಡಲು ಬಂದಿದ್ದೆ.

ಜೆ.ಹೆಚ್. ಪಟೇಲ್: ಅಲ್ಲಿ ನಾನು ಹೋಗಿದ್ದು ಬೊಜ್ಜು ಕರಗಿಸುವುದಕ್ಕಲ್ಲ, ಬೇರೆ ಚಿಕಿತ್ಸೆಗೆ ಹೋಗಿದ್ದೆ, ಅಲ್ಲಿ ವ್ಯವಸ್ಥೆ ತುಂಬಾ ಚೆನ್ನಾಗಿದೆ.

ವಾಟಾಳ್ ನಾಗರಾಜ್: ಶಾಸಕರಿಗೂ, ಮಂತ್ರಿಗಳಿಗೂ ಈ ಸಲಹೆ ಕೊಡಿ. ಅವರಿಗೂ ಈ ರೀತಿ ಹೊಟ್ಟೆ ಇರಬೇಕು, ಇಷ್ಟೇ ತೂಕವಿರಬೇಕು ಎಂದು ಮಾಡಿ.

ಅಧ್ಯಕ್ಷರು (ಮಾನ್ಯ ರಮೇಶ್‌ಕುಮಾರ್): ಈಗ ಲೆಜಿಸ್ಲೇಚರ್ಸ್ ಹೋಂನಲ್ಲಿ ಹೆಲ್ತ್ ಕ್ಲಬ್ ಮಾಡಿಸುತ್ತಿದ್ದೇವೆ. ಇನ್ನು 15 ದಿವಸಗಳಲ್ಲಿ ಅಂದರೆ ಬಜೆಟ್ ಅಧಿವೇಶನಕ್ಕೆ ನಾವು ಬರುವಾಗ ಎಲ್ಲಾ ರೆಡಿಯಾಗಿರುತ್ತದೆ. ಅಲ್ಲಿ ಯೋಗ ಮತ್ತು ಇನ್ನಿತರ ಎಕ್ಸ್‌ಸೈಜ್‌ಗಳನ್ನು ಮಾಡುವುದಕ್ಕೆ ವ್ಯವಸ್ಥೆ ಆಗುತ್ತಿದೆ. ಬಜೆಟ್ ಅಧಿವೇಶನಕ್ಕೆ ಮಾರ್ಚ್ 14 ರಂದು ಸೇರಿದಾಗ ಅಲ್ಲಿ ಪ್ರಾರಂಭೋತ್ಸವವನ್ನು ಮಾಡುತ್ತೇವೆ.

ಆ ಪೊಲೀಸರು ಸಮವಸ್ತ್ರವನ್ನು ದಪ್ಪನೆಯ ಡ್ರಮ್‌ಗೆ ಹಾಕುವ ರೀತಿಯಲ್ಲಿ ಹಾಕಿಕೊಂಡು, ಉಸಿರು ಬಿಗಿ ಹಿಡಿದುಕೊಂಡು ಅಟೆನ್‌ಷನ್‌ನಲ್ಲಿ ನಿಂತರೆ ನೋಡುವುದಕ್ಕೆ ಆಗುವುದಿಲ್ಲ. ಅವರು ವ್ಯಾಯಾಮ ಮಾಡಬೇಕು, ಶಿಸ್ತಿನಿಂದ ಇರಬೇಕು. ಅವರು ಏನು ಡ್ರೆಸ್ ಹಾಕಿಕೊಳ್ಳುತ್ತಾರೆ ಅದನ್ನು ವಿಕಾರವಾಗಿ ಹಾಕುತ್ತಾರೆ.

ಜೆ.ಹೆಚ್. ಪಟೇಲ್: ಮಾನ್ಯ ಅಧ್ಯಕ್ಷರೇ, ಪೊಲೀಸ್‌ನವರ ಕಷ್ಟವನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಪ್ರತಿಯೊಂದು ವಿಷಯಕ್ಕೂ, ಅದು ಸಂತೆ ಇರಲಿ, ಜಾತ್ರೆ ಇರಲಿ, ಕಾರ್ಖಾನೆ, ರೈಲು ನಿಲ್ದಾಣ, ಯುನಿವರ್ಸಿಟಿಯಲ್ಲಾಗಲೀ, ಆಸ್ಪತ್ರೆಯಲ್ಲಾಗಲಿ, ಇಂತಹ ಡಿಪಾರ್ಟ್‌ಮೆಂಟ್ ಎಂದು ಇಲ್ಲ. ಎಲ್ಲೇ ತೊಂದರೆ ಆದರೂ ಅವರೇ ಹೋಗಬೇಕು. ರಸ್ತೆಗಳಿಗೂ ಅವರು ಬೇಕು. ವಿಧಾನಸೌಧವನ್ನು ಅವರೇ ಕಾಯಬೇಕಾಗುತ್ತದೆ. ಇವರಲ್ಲಿ ಎಲ್ಲರೂ ದಪ್ಪ ಇರುವುದಿಲ್ಲ. ಕೆಲವರು ಎಷ್ಟು ತೆಳ್ಳಗೆ ಇದ್ದಾರೆಂದರೆ ಅವರ ಕೈಯಲ್ಲಿ ಲಾಠಿಯೂ ಉಳಿಯುವ ಹಾಗಿಲ್ಲ. ಅವರ ಕಾಲೂ ಅವರ ಕೈಯಲ್ಲಿರುವ ಕೋಲೂ ಒಂದೇ ತರಹ ಕಾಣುತ್ತದೆ. ಪಾಪ, ಬಹಳ ಕಷ್ಟದಲ್ಲಿ ಇದ್ದಾರೆ. ಆದರೆ ಬೊಜ್ಜು ಬರುವುದು ಏಕೆಂದರೆ ಅವರು ವ್ಯಾಯಾಮ ಮಾಡುವುದಿಲ್ಲ ಅದಕ್ಕೆ.

(ವಿಧಾನ ಸಭೆ ಕಲಾಪ, ಫೆಬ್ರವರಿ 24, 1997)

## ಕಷ್ಟದ ನಡುವೆ ಪೊಲೀಸರು

ಎಲ್ಲೋ ಒಂದೆರಡು ಕಡೆ ದುಷ್ಟ ಪೊಲೀಸ್ ಆಫೀಸರ್ಸ್ ಇರಬಹುದು. By and large our police is really doing well at the district level.

ಕೆಲವು ಕಡೆ ಇದ್ದೇ ಇರುತ್ತಾರೆ. ಆ್ಯಂಟಿ ಸೋಷಿಯಲ್ ಎಲಿಮೆಂಟ್ಸ್ ಸಹಿತ ಇದ್ದೇ ಇರುತ್ತಾರೆ. ವಿನಾಕಾರಣ ಜನರನ್ನು ಪ್ರೋಬ್ ಮಾಡಿ ಅಥವಾ ಗುಂಡು ಹಾಕಿ ಲಾಠಿ ಚಾರ್ಜ್ ಮಾಡಿರುವುದು ಇಲ್ಲ. ಎಲ್ಲೋ ಒಂದೆರಡು ಕಡೆ ಆಯಿತು; ಅನಿವಾರ್ಯವಾಗಿ ಆಯಿತು. ನಮ್ಮ ಪೊಲೀಸ್ ಆಫೀಸರ್ಸ್ ಮಾಬ್ ವಯಲೆನ್ಸ್‌ಗೆ ತುತ್ತಾದರು. ಶಿರಾದಲ್ಲಿ ಒಬ್ಬರು ಒಳ್ಳೆಯ ಆಫೀಸರ್ ಸತ್ತುಹೋದರು. By and large the maintenance of law and order is exemplary in Karnataka.

ಇನ್ನು ಬಾಬಾಬುಡನ್‌ಗಿರಿ ವಿಚಾರ. We handled it very peacefully ಅಲ್ಲಿ ಏನು ಎಕ್ಸ್‌ಪ್ಲೋಸಿವ್ ಸಿಚ್ಯುಯೇಷನ್ ಇತ್ತು, ಆ ಸ್ಥಳ ಕೂಡ ಐತಿಹಾಸಿಕವಾದುದ್ದು. ಅಲ್ಲಿ ದತ್ತಾತ್ರೇಯ ಪೀಠ ಎಂದು ಇದೆ ಹಾಗೂ ಪೀರ್ ಸಾಹೇಬರ ದರ್ಗಾನೂ ಇದೆ. ಈ ರೀತಿ ಹಿಂದೂ ಮುಸಲ್ಮಾನರು ಒಟ್ಟೊಟ್ಟಿಗೆ ಹೋಗತಕ್ಕಂಥ ಯಾತ್ರಾಸ್ಥಳಗಳು ಬಹಳ ಕಡಿಮೆ. ಈ ಪವಿತ್ರ ಕ್ಷೇತ್ರ ಎರಡೂ ಜನಾಂಗಗಳನ್ನು ಒಟ್ಟಿಗೆ ತರತಕ್ಕಂಥಾದ್ದು. ಅಲ್ಲಿ ಈ ಸಾರಿ ಸ್ವಲ್ಪ ಪ್ರೊವೋಕೇಷನ್ ಇತ್ತು. ಆದರೂ ಅದನ್ನು we have managed it very well. ಹೀಗಾಗಿ ನಾನು ನಮ್ಮ ಪೊಲೀಸ್ ಇಲಾಖೆಯನ್ನು ಅಭಿನಂದಿಸುತ್ತೇನೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ಏಪ್ರಿಲ್ 3, 1999)

## ಪೊಲೀಸರ ಹೊಟ್ಟೆ : ವ್ಯಾಯಾಮ ಅಗತ್ಯ

ಪ್ರಶ್ನೆ: ಎಸ್.ಎಸ್. ಪೂಜಾರಿ: ಕೆಲವು ಕಡೆ ಪೊಲೀಸಿನವರು ತಮ್ಮ ಸಮವಸ್ತ್ರದ ಮೇಲೆ ಬ್ಯಾಡ್ಜ್ ನಂಬರ್ ಹಾಕಿರುವುದಿಲ್ಲ. ಇದನ್ನು ನಾನು ಬೆಳಗಾವಿ ಮತ್ತಿತರ ಕಡೆ ಗಮನಿಸಿದ್ದೇನೆ. ಎರಡನೆಯದು ಅವರ ಹೆಸರು ಸ್ಪಷ್ಟವಾಗಿ ಕಾಣಿಸುವಂತೆ ಇರಬೇಕು. ಈ ದಿಶೆಯಲ್ಲಿ ಸರ್ಕಾರ ಏನು ಮಾಡುತ್ತೆ ತಿಳಿಸಿ?

ಡಾ: ಸಿದ್ದಲಿಂಗಯ್ಯ: ಮಾನ್ಯ ಪೂಜಾರಿಯವರು ಒಳ್ಳೆ ಪ್ರಶ್ನೆ ಕೇಳಿದ್ದಾರೆ. ಪೊಲೀಸರು ಸಮವಸ್ತ್ರದ ಮೇಲೆ ಬ್ಯಾಡ್ಜ್ ಧರಿಸುತ್ತಾರೆ ಎಂದು ಮಂತ್ರಿಗಳೇನೋ ಉತ್ತರ ಕೊಟ್ಟಿದ್ದಾರೆ. ಈ ಕರ್ನಾಟಕದ ಪೊಲೀಸರಿಗೆ ಹೊಟ್ಟೆ ಬಂದಿದೆ. ಓಡಲಾರರು. ಕಳ್ಳರು ಸಣ್ಣದಾಗಿರುತ್ತಾರೆ. ವ್ಯಾಯಾಮ ಮಾಡುತ್ತಾರೆ, ಚುರುಕಾಗಿಯೂ ಇರ್‍ತಾರೆ. ನಮ್ಮ ಪೊಲೀಸಿನವ ಹೊಟ್ಟೆ ಎತ್ತಿಕೊಂಡು ಓಡಲಾರ. ಹೀಗಾಗಿ ಕೆಟ್ಟ ಹೆಸರು ಬಂದಿದೆ. ಇದರ ಜೊತೆಗೆ, ಮಾನ್ಯ ಗೃಹ ಸಚಿವ ಶ್ರೀ ರೋಷನ್ ಬೇಗ್ ನನ್ನ ಆತ್ಮೀಯ ಮಿತ್ರರು, ನಾವಿಬ್ಬರೂ ಜೊತೆಗೆ ಓದಿದವರು, ಅವರು ಸಹಿತ ತಮ್ಮ ಹೊಟ್ಟೆ ಇಳಿಸಲು ಯಾವ ಪ್ರಯತ್ನ ನಡೆಸಿದ್ದಾರೆ. ತಿಳಿಸಿ?

ಆರ್. ರೋಷನ್ ಬೇಗ್ (ಸಚಿವರು): ಶ್ರೀ ಪೂಜಾರಿಯವರ ಪ್ರಶ್ನೆಗೆ ಉತ್ತರವೆಂದರೆ ಇನ್ನು ಮುಂದೆ ಕಡ್ಡಾಯವಾಗಿ ಎಲ್ಲ ಪೊಲೀಸರೂ ಹೆಸರು ಮತ್ತು ನಂಬರ್ ಇರುವ ಬ್ಯಾಡ್ಜ್ ಧರಿಸಿಯೇ ಧರಿಸುತ್ತಾರೆ.

ಇನ್ನು ಡಾ: ಸಿದ್ದಲಿಂಗಯ್ಯ ಪೊಲೀಸರ ಹೊಟ್ಟೆ ಬಗ್ಗೆ ಪ್ರಶ್ನಿಸಿದ್ದಾರೆ. ಗೃಹ ಸಚಿವನಾಗಿ ನಾನು ಕೂಡ ಹೊಟ್ಟೆ ಸುತ್ತಳತೆ ಕಡಿಮೆ ಮಾಡಲು ವ್ಯಾಯಾಮ ಮಾಡಬೇಕೆಂದು ಕಡ್ಡಾಯ ಮಾಡಿಕೊಂಡಿದ್ದೇನೆ. ಇದು ನಿಜ. ಸರ್ಕಲ್‌ಗಳಲ್ಲಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಮತ್ತು ಪೇದೆಗಳು ಹೊಟ್ಟೆ ಇಟ್ಟುಕೊಂಡಿರುವುದನ್ನು ನೋಡಿದರೆ ಸರಿ ಎನಿಸುವುದಿಲ್ಲ. ಪೊಲೀಸರು ಕಡ್ಡಾಯವಾಗಿ ಡೈಯಟ್ ಮಾಡಬೇಕೆಂದು ನಾನು ಸೂಚನೆ ನೀಡಿದ್ದೇನೆ.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಅಧ್ಯಕ್ಷರೇ, ಪೊಲೀಸಿನವರ ದೇಹದಾರ್ಢ್ಯತೆ, ಬ್ಯಾಡ್ಜ್ ಬಗ್ಗೆ ಕೇಳಿದೆ. ಈ ಪೊಲೀಸರಿಗೆ ತಮ್ಮ ಹೊಟ್ಟೆ ಬಗ್ಗೆ ಗಮನ ಕಡಿಮೆ ಮಾಡಿ ಬೇರೆಯವರ ತಲೆ ಬಗ್ಗೆ ಹೆಚ್ಚು ಗಮನ ಕೊಡಿ ಎಂದು ಹೇಳುವುದೇ ಸೂಕ್ತ.

(ವಿಧಾನ ಪರಿಷತ್ ಕಲಾಪ, ಫೆಬ್ರವರಿ 20, 1992)

# 16

# ಕಾಲ ಪ್ರವಾಹದಲ್ಲಿ ಕಾವೇರಿ

ಕರ್ನಾಟಕ ಮತ್ತು ತಮಿಳುನಾಡು ರಾಜ್ಯಗಳ ನಡುವೆ ಕಳೆದ ನೂರು ವರುಷಗಳಿಂದ ನೀರಿನ ಹಂಚಿಕೆ ವಿಷಯದಲ್ಲಿ ವಿವಾದ ಹಾಗೂ ವಿರಸ ಎಬ್ಬಿಸಿದ ಸಮಸ್ಯೆ - ಕಾವೇರಿ. ನದಿನೀರಿನ ಬಳಕೆಯನ್ನು ಕುರಿತ ಹಕ್ಕಿನ ಪ್ರಶ್ನೆ ಈ ವಿವಾದದ ಒಂದು ಮುಖ. ವರ್ಷದಿಂದ ವರ್ಷಕ್ಕೆ, ತಲೆಮಾರಿನಿಂದ ತಲೆಮಾರಿಗೆ, ಆಡಳಿತ ಪಕ್ಷ ಮತ್ತು ನಾಯಕರ ಬದಲಾವಣೆಯೊಂದಿಗೆ, ಕೇಂದ್ರ ಹಾಗೂ ರಾಜ್ಯಗಳಲ್ಲಿನ ವಿವಿಧ ರಾಜಕೀಯ ಪಕ್ಷಗಳ ಸಂಬಂಧ ಇಲ್ಲವೇ ವೈಮನಸ್ಯ ಅವಲಂಬಿಸಿದಂತೆ, ನ್ಯಾಯಾಲಯದ ಪ್ರವೇಶದ ನಂತರ, ಕಾವೇರಿ ಪ್ರಾಧಿಕಾರ ಅಧಿಕಾರಕ್ಕೆ ಬಂದಮೇಲೆ - ಹೀಗೆ ವಿವಿಧ ಹಂತಗಳಲ್ಲಿ ಕಾವೇರಿ ಸಮಸ್ಯೆ ಹೊಸ ಹೊಸ ರೂಪ ತಾಳುತ್ತಿದೆ. ಕಾಲದ ಪ್ರವಾಹದೊಂದಿಗೆ ಕಾವೇರಿಯ ಪ್ರವಾಹವೂ ಸೇರಿಕೊಂಡಿದೆ.

ಪಟೇಲರ ಕಾಲದ ಕಾವೇರಿ ವಿವಾದದ ಒಂದೆರಡು ಮಜಲುಗಳನ್ನು ಗುರುತಿಸುವ ಪ್ರಯತ್ನ ಈ ಅಧ್ಯಾಯದಲ್ಲಿದೆ. ಕೇಂದ್ರದಲ್ಲಿ ಕನ್ನಡಿಗ ಎಚ್.ಡಿ. ದೇವೇಗೌಡರು ಪ್ರಧಾನ ಮಂತ್ರಿಗಳಾದ ದಿನಗಳಲ್ಲಿ ಈ ಸಮಸ್ಯೆ ಕುರಿತ ಚರ್ಚೆ ನಡೆದಾಗ ಪ್ರಧಾನಿಯ ಕುರ್ಚಿಯನ್ನು ಉಳಿಸಲು ಪಟೇಲರು ಪ್ರಯತ್ನಿಸುತ್ತಿದ್ದಾರೆಂಬ ಆರೋಪ ಸಹಿತ ಕೇಳಿ ಬಂತು. ಸದನದಲ್ಲಿ ಕಾವೇರಿದ ಚರ್ಚೆಗೆ ಕಾವೇರಿ ಕಾರಣಳಾದಳು.

ಉಭಯ ರಾಜ್ಯಗಳ ನಡುವಣ ಸದ್ಭಾವನೆ ಮತ್ತು ಸೌಹಾರ್ದತೆ ಸಲುವಾಗಿ ಕರ್ನಾಟಕ ತಮಿಳುನಾಡಿಗೆ ಕಠಿಣ ಪರಿಸ್ಥಿತಿಯಲ್ಲೂ ನೀರು ಬಿಡಬೇಕಾಗಿ ಬರುವ ಸಂದರ್ಭವನ್ನು ಮೊದಲ ಬಾರಿಗೆ ಸಮರ್ಥಿಸಿದವರು ಪಟೇಲರು. ಕಾವೇರಿ ಸುಲಭದಿಂದ ಬಗೆಹರಿಯುವ ಸಮಸ್ಯೆಯಲ್ಲವೆಂಬ ಕಠೋರ ಸತ್ಯ ಪಟೇಲರಿಗೆ ಮನದಟ್ಟಾಗಿತ್ತು.

ಕಾವೇರಿ ಕುರಿತ ಪಟೇಲರ ಕಾಲದ ಒಂದೆರಡು ಚರ್ಚೆ ಇಲ್ಲಿದೆ;

# ವಿಧಾನ ಸಭೆಯಲ್ಲಿ

ವಾಟಾಳ್ ನಾಗರಾಜ್: ಸ್ವಾಮಿ, ಕಾವೇರಿ ನೀರನ್ನು ತಮಿಳುನಾಡಿಗೆ ಬಿಟ್ಟು ಬಿಟ್ಟಿದ್ದಾರೆ. ಇವತ್ತು ಬೆಳಿಗ್ಗೆಯಿಂದ ಕಪಿಲಾ ನದಿಯಲ್ಲಿ ಸುಮಾರು ಮೂರು ಟಿ.ಎಂ.ಸಿ. ನೀರು ಹರಿದು ಹೋಗುತ್ತಿದೆ. ಇದು ಬೇಜವಾಬ್ದಾರಿತನ.' ಇಲ್ಲಿ ವಿರೋಧ ಪಕ್ಷಗಳ ಮುಖಂಡರುಗಳು, ಈ ರಾಜ್ಯದ ವಿಧಾನಸಭೆ ಇವುಗಳನ್ನು ಯಾರೂ ಕೇಳುವವರಿಲ್ಲ. ಈ ಸರ್ಕಾರ ಅವರುಗಳನ್ನು ಕಾಲಕಸ ಮಾಡಿದೆ. ಪ್ರಧಾನ ಮಂತ್ರಿಯವರು ಈ ಸರ್ಕಾರವನ್ನು ಹೀನಾಯವಾಗಿ ಕಂಡಿದ್ದಾರೆ.

ಬಿ.ಎಸ್. ಯಡಿಯೂರಪ್ಪ: ಸರ್ಕಾರದವರು ಇವತ್ತು ಐದು ಟಿ.ಎಂ.ಸಿ ನೀರನ್ನು ಬಿಡುವುದಕ್ಕೆ ಏಕಾಏಕಿ ತೀರ್ಮಾನ ತೆಗೆದುಕೊಂಡಿದ್ದಾರೆ. ಬಹುಶಃ ಈ ಶಾಸನ ಸಭೆಯಲ್ಲಿ ಅದನ್ನು ಕೇಳುವವರಿಲ್ಲ ಎಂದು ತಿಳಿದಂತೆ ಕಾಣುತ್ತದೆ. ನಿನ್ನೆ ಎಲ್ಲಾ ವಿರೋಧಪಕ್ಷಗಳ ನಾಯಕರ ಸಭೆಯನ್ನು ಕರೆದು ಜಲಾಶಯದಲ್ಲಿ ನೀರಿಲ್ಲ, ನೀರನ್ನು ಬಿಡುವಂಥ ಪರಿಸ್ಥಿತಿ ಉದ್ಭವವಾಗುವುದಿಲ್ಲ ಎನ್ನುವಂಥ ಮಾತನ್ನು ಹೇಳಿದ್ದರು. ಆದರೆ ಪ್ರಧಾನ ಮಂತ್ರಿಯವರ ಒತ್ತಡಕ್ಕೆ ಮಣಿದು ಇವತ್ತು ನೀರನ್ನು ಬಿಡುತ್ತಿರುವುದು ಅಕ್ಷಮ್ಯ ಅಪರಾಧ.

ಮಲ್ಲಿಕಾರ್ಜುನ ಖರ್ಗೆ: ಸನ್ಮಾನ್ಯ ಅಧ್ಯಕ್ಷರೇ, ಇದೊಂದು ರಾಜ್ಯದ ಹಿತಕಾಪಾಡುವಂತಹ ಅತ್ಯಂತ ಮಹತ್ವದ ಪ್ರಶ್ನೆ. ಇಲ್ಲಿ ಯಾರ ಪ್ರತಿಷ್ಠೆಯೂ ಮುಖ್ಯವಲ್ಲ. ನಾಡಿನ ರೈತರ ಹಿತವೇ ನಮ್ಮೆಲ್ಲರ ಗುರಿ.

ಕೆ.ಎಸ್. ಪುಟ್ಟಣ್ಣಯ್ಯ: ಕರ್ನಾಟಕ ಸಕಾರದ ಸೌಂಡೇ ಇಲ್ಲವಲ್ಲ?

ಅಧ್ಯಕ್ಷರು (ರಮೇಶ್‌ಕುಮಾರ್): ತಾವೆಲ್ಲರೂ ಹಿರಿಯ ನಾಯಕರುಗಳಿದ್ದೀರಿ. ಶಾಂತಿಯಿಂದ ಒಬ್ಬೊಬ್ಬರಾಗಿ ನಿಮ್ಮ ಅನಿಸಿಕೆ-ಅಭಿಪ್ರಾಯಗಳನ್ನು ತಿಳಿಸಿ. ಈ ಪ್ರಶ್ನೆಯೇ ಇಂದಿನ ಸದನದ ಕಲಾಪದ ಅತಿ ಮುಖ್ಯ ಅಂಶ. ನಾಡಿನ ಈ ಪ್ರಮುಖ ಸಮಸ್ಯೆಯನ್ನು ಶಾಸಕರಾಗಿ ನಾವೆಲ್ಲರೂ ಕುಳಿತು, ಚರ್ಚಿಸಿ ಪರಿಹರಿಸೋಣ.

ಬಿ.ಎಸ್. ಯಡಿಯೂರಪ್ಪ: ನಿನ್ನೆ ನಡೆದಂಥ ಸಭೆಯಲ್ಲಿ ಯಾವ ಸಂದರ್ಭದಲ್ಲಿಯೂ ಈ ರಾಜ್ಯದ ಸನ್ಮಾನ್ಯ ಮುಖ್ಯ ಮಂತ್ರಿಗಳಿಗೆ ಪ್ರಧಾನಮಂತ್ರಿಯವರ ಜೊತೆ ಮಾತುಕತೆಯಾಡಿ ನಿಮಗೆ ಬೇಕಾದಂಥ ತೀರ್ಮಾನವನ್ನು ತೆಗೆದುಕೊಳ್ಳುವಂಥ ಅಧಿಕಾರವನ್ನು ನಾವೇನೂ ಕೊಡಲಿಲ್ಲ. ನಮ್ಮೆಲ್ಲರ ಅಭಿಪ್ರಾಯವನ್ನು ಕೇಳಿದರು. ಚರ್ಚೆಯಾಯಿತು. ಅಲ್ಲಿಗೆ ನಿನ್ನೆಯ ಸಭೆ ಸಮಾಪ್ತಿಯಾಯಿತು. ಇವತ್ತು ನಾವು ಪತ್ರಿಕೆಯನ್ನು ನೋಡುತ್ತಾ ಇದ್ದೇವೆ. ನಮ್ಮ ಜಲಾಶಯಗಳಲ್ಲಿ ನೀರು ಇಲ್ಲದೇ ಇರುವಂಥ ಕಾಲದಲ್ಲಿ, ಎಲ್ಲಾ ಜಲಾನಯನ ಪ್ರದೇಶಗಳಲ್ಲಿ ಮಳೆ ಇಲ್ಲದೇ ಇರುವಂಥ ಈ ಸಂದರ್ಭದಲ್ಲಿ, ಒಂದು ರೀತಿಯಲ್ಲಿ ಬರಗಾಲವನ್ನು ಎದುರಿಸುತ್ತಿರುವಂಥ ಸಂದರ್ಭದಲ್ಲಿ ಇದ್ದಕ್ಕಿದ್ದ ಹಾಗೆ ಪ್ರಧಾನಿಯವರ ಒಂದು ಆದೇಶದ ಮೇರೆಗೆ 5 ಟಿ.ಎಂ.ಸಿ. ನೀರನ್ನು ಬಿಡುವುದಕ್ಕೆ ಈ ಸರ್ಕಾರ ಒಪ್ಪಿಕೊಂಡಿದೆ. ಇವತ್ತು ಬೆಳಿಗ್ಗೆ

ಶಾಸಕಾಂಗ ಪಕ್ಷದ ಸಭೆಯಲ್ಲಿಯೂ ಸಹ 5 ಟಿ.ಎಂ.ಸಿ. ನೀರನ್ನು ಕಬಿನಿಯಿಂದ ಬಿಡಬೇಕು ಎನ್ನುವಂಥ ತೀರ್ಮಾನವನ್ನು ಮಾಡಿ ಬೆಳಿಗ್ಗೆಯಿಂದ ನೀರು ಬಿಡುವುದಕ್ಕೆ ಈ ಸರ್ಕಾರ ಕಾರ್ಯಪ್ರವೃತ್ತವಾಗಿದೆ ಎನ್ನತಕ್ಕಂಥ ಮಾತನ್ನು ಹೇಳಿದ್ದಾರೆ.

ನಿಮ್ಮ ಕುರ್ಚಿ, ಪ್ರಧಾನಿ ಕುರ್ಚಿಯನ್ನು ಉಳಿಸಿಕೊಳ್ಳುವುದಕ್ಕೆ ಈ ರೀತಿ ಜನತೆಗೆ ದ್ರೋಹ ಮಾಡುವುದಕ್ಕೆ ನಾವು ಬಿಡುವುದಿಲ್ಲ. ಅದು ಯಾವ ಒಂದು ವಿಶೇಷವಾದಂತಹ ಸಂದರ್ಭ? ಏಕಾಏಕಿ 5 ಟಿ.ಎಂ.ಸಿ. ನೀರನ್ನು ತಮಿಳು ನಾಡಿಗೆ ಬಿಡುವುದಕ್ಕೆ ತಾವು ಆದೇಶವನ್ನು ನೀಡಿದ್ದೀರಿ ಅದರ ಸ್ಪಷ್ಟತೆಯನ್ನು ನೀಡಿದ ಮೇಲೆ ಉಳಿದ ವಿವರಗಳನ್ನು ಕೇಳುವುದಕ್ಕೆ ಪ್ರಯತ್ನ ಮಾಡುತ್ತೇವೆ.

**ಎಂ. ಮಲ್ಲಿಕಾರ್ಜುನ ಖರ್ಗೆ:** ಮಾನ್ಯ ಅಧ್ಯಕ್ಷರೇ, ತಮಿಳುನಾಡಿಗೆ 5 ಟಿ.ಎಂ.ಸಿ. ನೀರನ್ನು ಬಿಟ್ಟಿರುವುದು ಬಹುಗಂಭೀರದ ಸಂಗತಿ. 5 ಟಿ.ಎಂ.ಸಿ. ನೀರನ್ನು ತಮಿಳುನಾಡಿಗೆ ಬಿಡಬೇಕೆಂಬ ಪ್ರಸ್ತಾವನೆಯು ಸರ್ಕಾರದ ಮುಂದೆ ನಿನ್ನೆಯ ಸಾಯಂಕಾಲ 3½, 4 ಗಂಟೆಯವರೆಗೆ ಇರಲಿಲ್ಲ. ನಂತರ ಈ ಬೆಳವಣಿಗೆ ಆಗಿದೆ. ಏಕೆ ಆಯಿತು? ಯಾರ ಹೇಳಿಕೆಯ ಮೇಲೆ ಆಯಿತು? ಇವತ್ತು ನಮ್ಮ ಕರ್ನಾಟಕ ರಾಜ್ಯದವರೊಬ್ಬರು ಪ್ರಧಾನ ಮಂತ್ರಿಗಳಾಗಿದ್ದಾರೆ ಅವರ ಒಂದು ಹಿತದೃಷ್ಟಿಯಿಂದ ರಾಜ್ಯದ ಹಿತವನ್ನು ಬಲಿ ಕೊಡೋಣ ಎನ್ನುವ ದೃಷ್ಟಿಯಿಂದ ಬಹುಶಃ ಈ ನಿರ್ಧಾರವನ್ನು ತೆಗೆದುಕೊಂಡಿದ್ದಾರೋ ಏನೋ ನನಗೆ ಗೊತ್ತಿಲ್ಲ. ನನ್ನ ಗಮನಕ್ಕೆ ಬಂದಿದ್ದು ಮತ್ತು ಪೇಪರ್‌ನಲ್ಲಿ ಬಂದಿರತಕ್ಕಂತಹ ರಿಪೋರ್ಟನ್ನು ಓದಿದ ಪ್ರಕಾರವಾಗಿ ಏನಿದೆ ಎಂದರೆ, ಶ್ರೀಮಾನ್ ಬೊಮ್ಮಾಯಿಯವರು ಮದ್ರಾಸ್‌ಗೆ ಹೋಗಿ ಅಲ್ಲಿ ಕರುಣಾನಿಧಿಯವರನ್ನು ಭೇಟಿಯಾಗಿ ಅವರನ್ನು ಸಮಜಾಯಿಸಿ, ಆಮೇಲೆ ನಾವು ಕರ್ನಾಟಕದಿಂದ ನೀರನ್ನು ಬಿಡುತ್ತೇವೆಂದು ಹೇಳಿ, ಬಹುಶಃ ಅವರು ಅದಕ್ಕೆ ಒಪ್ಪಿಗೆ ಕೊಟ್ಟ ಮೇಲೆ ಪ್ರಧಾನ ಮಂತ್ರಿಗಳು ಮತ್ತು ಬೊಮ್ಮಾಯಿಯವರುಗಳ ನಡುವೆ ಚರ್ಚೆಯಾದ ಮೇಲೆ, ಆ ಚರ್ಚೆಯ ಫಲಿತಾಂಶವಾಗಿ, ಪುನಃ ಮುಖ್ಯಮಂತ್ರಿಗಳಿಗೆ ಒತ್ತಡವನ್ನು ತಂದು, ದೂರವಾಣಿಯ ಮೂಲಕ ಸಂಪರ್ಕ ಮಾಡಿ, ನೀರನ್ನು ಬಿಡದಿದ್ದರೆ ನಿಮ್ಮ ಪರಿಸ್ಥಿತಿಯೂ ಕೂಡ ಬಹಳ ಕಷ್ಟವಾಗುತ್ತದೆ ಎನ್ನತಕ್ಕಂತಹ ಮಾತನ್ನು ಹೇಳಿದ ಮೇಲೆ ಬಹುಶಃ ಮಾನ್ಯ ಮುಖ್ಯಮಂತ್ರಿಗಳು ಮಣಿದಿರಬಹುದು ಎನ್ನತಕ್ಕಂತಹ ಸಂಶಯ ನನಗೆ ಬರುತ್ತದೆ.

**ಯು.ಆರ್. ಸಭಾಪತಿ:** ಮಾನ್ಯ ಅಧ್ಯಕ್ಷರೇ, ಇವತ್ತು ಸರ್ವ ಪಕ್ಷಗಳ ನಾಯಕರ ಸಭೆಯನ್ನು ಕರೆದು ಈ ರೀತಿ ಮಾನ್ಯ ದೇವೇಗೌಡರು ಹೇಳಿದ್ದಾರೆ, ನಾವು ಏನು ಮಾಡಬೇಕೆಂದು ಕೇಳುವಂಥ ಒಂದು ಔದಾರ್ಯತೆಯನ್ನೂ ತೋರಿಸದೆ ಏಕಾಏಕಿಯಾಗಿ ಸರ್ಕಾರ ತಮಿಳುನಾಡಿಗೆ ನೀರನ್ನು ಬಿಡುವಂಥ ನಿರ್ಣಯವನ್ನು ಮಾಡಿದ್ದು ಸಂಪೂರ್ಣವಾಗಿ ತಪ್ಪು ಎನ್ನುವಂಥ ಮಾತನ್ನು ಹೇಳಬಯಸುತ್ತೇನೆ. ಇವತ್ತು ನಾವು ಜನತೆಗೆ ಉತ್ತರಿಸಬೇಕಾಗಿದೆ.

**ವಾಟಾಳ್ ನಾಗರಾಜ್:** ನಿಮ್ಮ ವ್ಯಕ್ತಿತ್ವದ ಬಗ್ಗೆ ನನಗೆ ಅಪಾರವಾದ ಪ್ರೀತಿ ವಿಶ್ವಾಸ ಇದೆ. ಆದರೆ ಈಗ ಸಂಶಯ ಏತಕ್ಕೆ ಬಂದಿದೆ ಎಂದರೆ ನೀವು ಯಾವಾಗ ನೀರನ್ನು ಅವರಲ್ಲಿಗೆ

ಬಿಡತಕ್ಕ ಕೆಲಸವನ್ನು ಮಾಡಿದಿರಿ ಆಗ ನನಗೆ ಸಂಶಯ ನಿಮ್ಮ ಬಗ್ಗೆ ಬಂತು. ನೀವು ಇವತ್ತು ಈ ರಾಜ್ಯದ ಜನತೆಯನ್ನು ಕಡೆಗಾಣಿಸಿದ್ದೀರಿ. ಜನತೆಯ ಪ್ರತಿನಿಧಿಗಳ ಸಾರ್ವಭೌಮತ್ವವನ್ನು ಪಡೆದಿರತಕ್ಕ ಈ ಸಭೆಯನ್ನು ಕಡೆಗಾಣಿಸಿದ್ದೀರಿ. ವಿರೋಧಪಕ್ಷದ ಮುಖಂಡರನ್ನು ಒಂದು ರೀತಿಯ ತೋರಿಕೆಗೆ ಇಟ್ಟುಕೊಂಡಿದ್ದೀರಿ. ಕೇಂದ್ರದಲ್ಲಿ ಪ್ರಧಾನಮಂತ್ರಿಗಳ ಅಧಿಕಾರದ ಗದ್ದುಗೆಯನ್ನು ಉಳಿಸಿಕೊಳ್ಳುವ ಒಂದೇ ಒಂದು ತೀರ್ಮಾನಕ್ಕಾಗಿ ಈ ಕರ್ನಾಟಕವನ್ನು ಬಲಿಕೊಡುತ್ತಿದ್ದೀರಿ.

ಕೆ.ಎಸ್. ಪುಟ್ಟಣ್ಣಯ್ಯ: ಇಲ್ಲಿ ಏನಾಗಿದೆ ಎಂದರೆ, ಕರ್ನಾಟಕ ಸರ್ಕಾರ ಒಂದು ರೀತಿ ನೀರು ಗಂಟಿ ಕೆಲಸ ಮಾಡುತ್ತಿದೆ ಎಂಬ ಅನುಮಾನ ಬಂದಿದೆ. ಎಕ್ಸಿಕ್ಯೂಟೀವ್ ಇಂಜಿನೀಯರ್ ಸವಡೆಗಳ ನೀರು ಎತ್ತು ಎಂದರೆ ಬಚ್ಚಲು ನೀರು ಎತ್ತುವಂತಹ ಸ್ಥಿತಿ ಆಗಿದೆ. ಈಗ ಕರ್ನಾಟಕದಲ್ಲಿ ಹಿಂಗಾರೂ ಇಲ್ಲ, ಮುಂಗಾರೂ ಇಲ್ಲ. ಅತ್ಯಂತ ಬರಗಾಲದ ಪರಿಸ್ಥಿತಿ ಇದ್ದು ಇಡೀ ರಾಜ್ಯದಲ್ಲಿ ಇಷ್ಟೊಂದು ಕ್ಷೋಭೆ ಇರಬೇಕಾದರೆ ವಿನಾಕಾರಣ, ರಾಜಕೀಯದ ಉಳಿವಿಗೆ, ಸಂಯುಕ್ತ ರಂಗ ಅಧಿಕಾರದಲ್ಲಿ ಉಳಿದುಕೊಳ್ಳಬೇಕೆಂಬ ಭಾವನೆಯಿಂದ ಇದು ನಡೆಯುತ್ತಿದೆ. ಪ್ರಧಾನಮಂತ್ರಿಗಳು ಹಿಂದೆ ಹೇಳಿದ್ದರು; ಟ್ರಿಬ್ಯುನಲ್ ಮಧ್ಯಂತರ ತೀರ್ಪು ಏನಿದೆ ಇದು ಕರ್ನಾಟಕ ಜನತೆಗೆ ಮರಣ ಶಾಸನ ಎಂದು ಅವರೇ ಘೋಷಣೆ ಮಾಡಿದ್ದರು. ಆದರೆ ಪ್ರಧಾನಮಂತ್ರಿಗಳು, ಹಿಂದೆ ಮುಖ್ಯಮಂತ್ರಿಗಳಾಗಿದ್ದವರು, ಇವತ್ತು ಆ ಮರಣ ಶಾಸನದ ಮೂಲಕ ನೀರು ಬಿಟ್ಟಿದ್ದಾರೆ. ಕರ್ನಾಟಕದ ಜನತೆಗೆ ಬಹಳ ಅನ್ಯಾಯ ಮಾಡಿದ್ದಾರೆ.

ಜಿ.ವಿ. ಶ್ರೀರಾಮರೆಡ್ಡಿ: ಸನ್ಮಾನ್ಯ ಅಧ್ಯಕ್ಷರೇ, ಚರ್ಚೆ ಮಾಡಿ, ಸೌಹಾರ್ದಯುತವಾಗಿ, ಯಾವುದೇ ರೀತಿಯಲ್ಲಿ ಭಾವೋದ್ವೇಗಕ್ಕೆ ಒಳಗಾಗದ ರೀತಿಯಲ್ಲಿ, ಎರಡೂ ರಾಜ್ಯಗಳ ಮತ್ತು ನಮ್ಮ ದೇಶದ ಹಿತದೃಷ್ಟಿಯಿಂದ ಈ ಸಮಸ್ಯೆಯನ್ನು ಪರಿಹಾರ ಮಾಡಿಕೊಳ್ಳಬೇಕು. ಪರಿಹಾರ ಮಾಡಿಕೊಳ್ಳದಿದ್ದರೆ ನಿರಂತರವಾಗಿ ಇದು ಚರ್ಚೆಯ ವಿಷಯ ಆಗುತ್ತದೆ ಮತ್ತು ಹಲವಾರು ರಾಜಕೀಯ ಲಾಭನಷ್ಟಗಳ ದೃಷ್ಟಿಯಿಂದ ನೋಡತಕ್ಕ ಪ್ರಶ್ನೆ ಆಗುತ್ತದೆ. ಅದಕ್ಕೆ ದಯವಿಟ್ಟು ಸರ್ಕಾರ ಅವಕಾಶ ಮಾಡಿಕೊಡಬಾರದು. ಆ ರಾಜಕೀಯ ಲಾಭನಷ್ಟಗಳ ದೃಷ್ಟಿಯಿಂದ ಈ ಸಮಸ್ಯೆಯನ್ನು ನೋಡಬಾರದು. ಮತ್ತು ಬೀದಿಗಳಲ್ಲಿ ಇದನ್ನು ಪರಿಹಾರ ಮಾಡಲಿಕ್ಕೆ ಸಾಧ್ಯ ಇಲ್ಲ. ಗಂಭೀರವಾದ ಚರ್ಚೆಯಾಗಬೇಕು. ಈ ಸಮಸ್ಯೆ ಪರಿಹಾರಕ್ಕೆ ಇವತ್ತು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಮತ್ತು ತಮಿಳುನಾಡಿನ ಸರ್ಕಾರ, ಎಲ್ಲ ಸರ್ಕಾರಗಳೂ ಒಂದು ಕಡೆ ಕುಳಿತು ಮಾತನಾಡುವುದಕ್ಕೆ ಅವಕಾಶ ಇದೆ. ಅಂಥ ಅವಕಾಶವನ್ನು ತಪ್ಪಿಸಬಾರದು. ಇಂಥ ಅವಕಾಶ ಮತ್ತೆ ನಮಗೆ ಸಿಗುವುದು ಕಷ್ಟ ಇದೆ. ಈಗ ಪ್ರಧಾನ ಮಂತ್ರಿಗಳಾಗಿರುವವರಿಗೆ ಸಮಸ್ಯೆ ಸ್ಪಷ್ಟವಾಗಿ ಗೊತ್ತಿದೆ. ಸನ್ಮಾನ್ಯ ದೇವೇಗೌಡರು ಅನುಭವಿರಾಜಕಾರಣಿ. ಅವರಿಗೆ ಈ ಸಮಸ್ಯೆಯ ಪೂರ್ಣ ಪರಿಜ್ಞಾನವಿದೆ.

**ಅಧ್ಯಕ್ಷರು (ರಮೇಶ್‌ಕುಮಾರ್)**: ಸಭಾನಾಯಕರು ಏನು ಹೇಳುತ್ತಾರೋ ಕೇಳೋಣ.

**ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):** ಮಾನ್ಯ ಅಧ್ಯಕ್ಷರೇ, ಈ ವಿಷಯದಲ್ಲಿ ಮುಕ್ತವಾಗಿ ಚರ್ಚೆಯಾಗಬೇಕೆನ್ನುವುದು ಒಪ್ಪಿಕೊಳ್ಳುವ ವಿಚಾರ. ಆದರೆ ಸದನದಲ್ಲಿ ಕೆಲವು ವಿವರಗಳನ್ನು ಕೊಡುವುದು ರಾಜ್ಯದ ಹಿತದೃಷ್ಟಿಯಿಂದ ಸರಿಯಲ್ಲ. ಆ ಕಾರಣಕ್ಕೋಸ್ಕರ ಮಾನ್ಯ ಅಧ್ಯಕ್ಷರು ಸಲಹೆ ಕೊಟ್ಟಹಾಗೆ, ತಮ್ಮನ್ನೆಲ್ಲ ಕರೆಸಿ ಏಕೆ ಕೇಳಲಿಲ್ಲವೆಂದು ಈಗ ಮಾನ್ಯ ರೆಡ್ಡಿಯವರು ಹೇಳಿದರು. ಈಗ ಏಕೆ ಆಗಲಿಲ್ಲವೆನ್ನುವುದನ್ನು ಹೇಳುತ್ತೇನೆ. ಬೇಕಾದರೆ ನಾವು ಸೇರೋಣ. ಎಲ್ಲ ವಿರೋಧಪಕ್ಷದ ನಾಯಕರು ನಮ್ಮ ಸರ್ಕಾರದ ವತಿಯಿಂದ ನಾವು ಬರುತ್ತೇವೆ ಮಾತನಾಡುತ್ತೇವೆ. ಎಂತಹ ಸಂದರ್ಭವಿತ್ತು, ಏನಿದೆ ಅಥವಾ ಈಗ ಏನಿದೆ ಅಥವಾ ಮುಂದೆ ಏನಾಗುತ್ತದೆನ್ನುವುದರ ಬಗ್ಗೆ ತಮ್ಮ ಕೊಠಡಿಯಲ್ಲೇ ಸೇರಿ ಮಾತನಾಡೋಣ. ಆದರ ನಂತರ ಚರ್ಚೆ ಅವಶ್ಯಕತೆ ಇದ್ದರೆ ಮಾಡೋಣ. ಇಲ್ಲದಿದ್ದರೆ ಬೇಡ.

**ಕೆ.ಎನ್. ನಾಗೇಗೌಡ (ಭಾರೀ ನೀರಾವರಿ ಮಂತ್ರಿಗಳು):** ಮಾನ್ಯ ಅಧ್ಯಕ್ಷರೇ, ವಿರೋಧ ಪಕ್ಷದ ನಾಯಕರು ಹಾಗೂ ಇತರೆ ಪಕ್ಷಗಳ ನಾಯಕರುಗಳು ಗಂಭೀರವಾದಂಥ ಕಾವೇರಿ ವಿಚಾರವನ್ನು ಚರ್ಚೆ ಮಾಡಿದ್ದು ಸೂಕ್ತವೆಂದು ನಾನು ಭಾವಿಸುತ್ತೇನೆ. ಇದನ್ನು ಎಷ್ಟು ಗಂಭೀರವಾಗಿ ಗೋಪ್ಯವಾಗಿಡುತ್ತೇವೆ ಅಷ್ಟೂ ಸಮಸ್ಯೆಗಳು ಜಾಸ್ತಿಯಾಗುತ್ತದೆ ಎನ್ನತಕ್ಕಂಥದ್ದು ನನ್ನ ಅನಿಸಿಕೆ.

**ಜೆ.ಹೆಚ್. ಪಟೇಲ್:** ಇದರ ಬಗ್ಗೆ ಯಾವುದೇ ಚರ್ಚೆಯನ್ನು ನಾವು ಇಲ್ಲಿ ಮಾಡುವುದು ರಾಜ್ಯದ ಹಿತದೃಷ್ಟಿಯಿಂದ ಬೇಡ. ಸರ್ಕಾರ ಉಳಿಸಿಕೊಳ್ಳುವುದಕ್ಕೆ ಇನ್ನೊಬ್ಬರನ್ನು ಯಾರನ್ನೊ ಉಳಿಸುವುದಕ್ಕೆ ಅಲ್ಲ. ತಾವೆಲ್ಲ ಏನು ಹೇಳಿದಿರಿ ಎಂದರೆ ರಾಜ್ಯದ ಹಿತದೃಷ್ಟಿಯಿಂದ ನಾವೇನು ತೀರ್ಮಾನ ತೆಗೆದುಕೊಳ್ಳಬೇಕೆಂದು. ಆ ದೃಷ್ಟಿಯಿಂದಲೇ ಹೇಳುವುದು. ಬನ್ನಿ ಚರ್ಚೆ ಮಾಡೋಣವೆಂದು. ನೀರು ಬಿಟ್ಟದ್ದಿರೋ ಇಲ್ಲವೋ? ಅಂದರೆ ಹೇಗೆ?

**ಕಾಗೋಡು ತಿಮ್ಮಪ್ಪ:** ಬಿಡದೇ ಹೋಗಿದ್ದರೆ ಆ ಚರ್ಚೆಯ ಸ್ವರೂಪವೇ ಬೇರೆಯಾಗುತ್ತದೆ. ಈಗ ಹಾಲಿ ತಾವು ನೀರನ್ನು ಬಿಟ್ಟದ್ದಿರೋ ಇಲ್ಲವೋ?

**ಅಧ್ಯಕ್ಷರು:** ಅದೇ ಚರ್ಚೆಗೆ ಯಾವ ಸ್ವರೂಪ ಕೊಡೋಣವೆಂದು ಚರ್ಚೆ ಮಾಡೋಣ ಅಲ್ಲಿಗೆ ಬನ್ನಿಯೆಂದು ಕರೆದೆ.

**ಕಾಗೋಡು ತಿಮ್ಮಪ್ಪ:** ಇದಕ್ಕೇನು ಚರ್ಚೆ ಸಾರ್? ಒಂದು ವೇಳೆ ನೀರೇ ಬಿಡದೆ ಹೋಗಿದ್ದರೆ ನಾವು ಇಷ್ಟೆಲ್ಲ ಮಾಡಬೇಕಾದ ಅಗತ್ಯವಿಲ್ಲ.

**ಜೆ.ಹೆಚ್. ಪಟೇಲ್:** ಸದನದಲ್ಲಿ ಚರ್ಚೆಗೆ ತೆಗೆದುಕೊಳ್ಳುವುದಕ್ಕೆ ಆಗದೆ ಇರತಕ್ಕ ವಿಷಯಗಳನ್ನು ನಾನು ತಿಳಿಸುತ್ತೇನೆಂದು ಹೇಳಿದೆ. ಇದಕ್ಕಿಂತ ದೊಡ್ಡದು ಯಾವುದೂ ಇಲ್ಲ. I know the importance of the Assembly. ಆದರೆ ಇಲ್ಲಿ ಹೇಳುವುದರಿಂದ ರಾಜ್ಯದ ಹಿತಕ್ಕೆ ಧಕ್ಕೆಯಾಗತಕ್ಕ ವಾತಾವರಣವಿದೆ.

ಜೊತೆಗೆ ನೀರನ್ನು ಗೌಪ್ಯವಾಗಿ ಬಿಡುವುದಕ್ಕಾಗುವುದಿಲ್ಲ. ನೀರನ್ನು ಬಿಟ್ಟಿದ್ದೇವೆ. ಇಷ್ಟು ನೀರು ಇವತ್ತು ಬಿಟ್ಟಿದ್ದೇವೆ, ಇಷ್ಟು ನೀರನ್ನು ನಾಳೆ ಬಿಡುತ್ತೇವೆ ಎಂದು ಅದರ ವಿವರ ಹೇಳುವುದಕ್ಕೆ ನಾನು ನಿಮ್ಮನ್ನು ಕರೆಯುತ್ತಿದ್ದೇನೆ. ನಾವು ಮಾತನಾಡಿದ ಮೇಲೆ ಅವಶ್ಯಕತೆ ಇದ್ದರೆ ಚರ್ಚೆ ಮಾಡೋಣ. ಚರ್ಚೆಗೆ ನಾನು ಹಿಂಜರಿಯುವುದಿಲ್ಲ. ಅವಶ್ಯಕತೆ ಬೀಳಲಾರದು. ಚರ್ಚೆಯನ್ನು ಮಾಡಲೇಬಾರದು ಅಥವಾ ಈ ವಿಷಯ ಹೇಳುವುದೇ ಇಲ್ಲವೆಂದು ಹೇಳಿದ್ದೇನೋ?

(ವಿಧಾನ ಸಭೆ ಕಲಾಪ, ಜುಲೈ 9, 1996)

## ವಿಷಯ:- ತಮಿಳುನಾಡಿಗೆ ಕಾವೇರಿ ನೀರನ್ನು ಬಿಟ್ಟಿರುವ ಬಗ್ಗೆ ವಿಶೇಷ ಪ್ರಸ್ತಾವ ಮಂಡನೆ.

**ಬಿ.ಎಸ್. ಯಡಿಯೂರಪ್ಪ (ವಿರೋಧ ಪಕ್ಷದ ನಾಯಕರು):** ನಾವು ಯಾರಾದರೂ ಇಬ್ಬರು ಮೂರು ಜನ ಕೆಆರ್ಎಸ್ ಗೆ ಹೋಗಿಬರುತ್ತೇವೆ. ಆ ಕಡೆಯಿಂದ ಯಾರಾದರೂ ಮಂತ್ರಿಗಳು ಅಥವಾ ಅಧಿಕಾರಿಗಳು ಬಂದರೆ ಕೆಆರ್ಎಸ್ ನಲ್ಲಿ ನೀರಿನ ಮಟ್ಟ ಎಷ್ಟಿದೆಯೆಂದು ಸತ್ಯಸಂಗತಿಯನ್ನು ತಿಳಿದುಕೊಂಡು ಬಂದು ವರದಿಯನ್ನು ಕೊಟ್ಟರೆ, ಇದು ಹೆಚ್ಚು ಉಪಯೋಗವಾಗುತ್ತದೆ. ಸರ್ಕಾರ ಎಷ್ಟರಮಟ್ಟಿಗೆ ಸತ್ಯಸಂಗತಿಯನ್ನು ಹೇಳುತ್ತಿದೆ ಎಂಬುದು ಗೊತ್ತಾಗುತ್ತದೆ. ನಾನು ಸಲಹೆ ಕೊಡುತ್ತಾ ಇದ್ದೇನೆ, ಇದನ್ನು ತಾವು ದಯಮಾಡಿ ಯೋಚನೆ ಮಾಡಿ ನೋಡಿ.

**ಅಧ್ಯಕ್ಷರು:** ಇದು ಅತ್ಯುತ್ತಮ ಸಲಹೆ. ಇದಕ್ಕೆ ನನ್ನದೇನೂ ಆಕ್ಷೇಪಣೆ ಇಲ್ಲ.

**ಕೆ.ಎನ್. ನಾಗೇಗೌಡ (ಬೃಹತ್ ನೀರಾವರಿ ಸಚಿವರು):** ನಾವು ನೀವು ಎಲ್ಲಾ ಬೇಕಾದರೆ ಕೆಆರ್ಎಸ್ ಗೆ ಹೋಗಿ ಬರೋಣ.

**ವಾಟಾಳ್ ನಾಗರಾಜ್:** ನೀರು ಬಿಟ್ಟಿದ್ದಾರೆ, ನೀರು ಹೋಗುತ್ತಾ ಇದೆ. ಆಮೇಲೆ ಮಾನ್ಯ ನೀರಾವರಿ ಸಚಿವರು ನಮ್ಮಲ್ಲಿ ನೀರು ಬರುತ್ತಾ ಇದೆ. ಅದಕ್ಕೋಸ್ಕರ ನೀರು ಬಿಟ್ಟಿದ್ದೇವೆಂದು ಹೇಳಿದ್ದಾರೆ. ಮತ್ತು ನಮ್ಮ ವಿರೋಧ ಪಕ್ಷದ ನಾಯಕರು ಅಲ್ಲಿಗೆ ಹೋಗಿ ನಾವೆಲ್ಲಾ ನೋಡಿಕೊಂಡು ಬರೋಣ, ಬಂದ ಮೇಲೆ ಚರ್ಚೆ ಮಾಡೋಣವೆಂದು ಹೇಳುತ್ತಿದ್ದಾರೆ.

**ಬಿ.ಎಸ್. ಯಡಿಯೂರಪ್ಪ:** ನನ್ನ ಉದ್ದೇಶ ಇಷ್ಟೆ. ನೀರು ಇಲ್ಲದೆಯೇ ದೇಶದ ಜನಕ್ಕೆ ನೀರು ಇದೆಯೆಂದು ಹೇಳುವಂಥದ್ದು ಆಗಬಾರದು. ಇದರಿಂದ ಮುಂದಕ್ಕೆ ಈ ಸರ್ಕಾರಕ್ಕೆ ಕಷ್ಟ ಆಗಬಹುದು. ಆ ಇಕ್ಕಟ್ಟನ್ನು ಬಗೆಹರಿಸುವುದಕ್ಕೆ ಹೋಗಿಬರುತ್ತೇವೆ. ನಿಮಗೆ ಒಂದು ವರದಿಯನ್ನು ಕೊಡುತ್ತೇವೆ. ನಿಮ್ಮ ಸರ್ಕಾರದ ಪ್ರತಿನಿಧಿಗಳನ್ನೂ ಕಳುಹಿಸಿಕೊಡಿ.

**ಅಧ್ಯಕ್ಷರು:** ಯಾವುದೇ ಒಬ್ಬ ಕನ್ನಡ ಪ್ರಜೆ, ಕರ್ನಾಟಕಕ್ಕೆ ಸೇರಿದಂಥವರು ಕಾವೇರಿ ವಿಷಯವನ್ನು ಪ್ರಮುಖವಲ್ಲ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಕಾವೇರಿಯ ವಿಷಯದಲ್ಲಿ ಮತ್ತು ಗಂಭೀರವಾದಂತಹ ವಿಷಯಗಳು ಚರ್ಚೆಗೆ ಬಂದಾಗ ನಾವೆಲ್ಲರೂ ಒಗ್ಗಟ್ಟಿನಿಂದ

ಇರಬೇಕು. ನೀವು ಈ ರೀತಿಯಾಗಿ ನಿಮ್ಮ ನಿಮ್ಮಲ್ಲಿಯೇ ಜಗಳವನ್ನು ಮಾಡಿಕೊಂಡರೆ ನಮ್ಮ ವಾದ ಸ್ವಲ್ಪ ಸಡಿಲವಾಗುತ್ತದೆ. ದಯಮಾಡಿ ಸಹಕಾರ ಕೊಡಬೇಕು.

## ನಿಯಮ 159ರ ಮೇರೆಗೆ

### ವಿಷಯ: ತಮಿಳ್ನಾಡಿಗೆ ಕಾವೇರಿ ನೀರನ್ನು ಬಿಟ್ಟ ವಿಚಾರ

(ಮಾನ್ಯ ಉಪಾಧ್ಯಕ್ಷರು ಅಧ್ಯಕ್ಷ ಪೀಠಕ್ಕೆ ಆಗಮಿಸಿದರು)

ಎಂ. ವೀರಪ್ಪಮೊಯಿಲಿ: ಮಾನ್ಯ ಅಧ್ಯಕ್ಷರೇ, ನಿನ್ನೆ ನಾನು ಕೆಲವು ವಿಚಾರಗಳನ್ನು ಪ್ರಸ್ತಾಪ ಮಾಡಿದ್ದೇನೆ. ಇವತ್ತು ಇನ್ನೂ ಕೆಲವು ಸೂಕ್ತ ವಿಚಾರಗಳನ್ನು ಆದಷ್ಟು ಜಾಗ್ರತೆ ಪ್ರಸ್ತಾಪ ಮಾಡಿ ಮುಗಿಸುತ್ತೇನೆ. ಮುಖ್ಯವಾಗಿ 16.4.96 ರಂದು ತಾವು ಒಂದು ಅರ್ಜಿಯನ್ನು ಹಾಕಿ, ಈ ಟ್ರಿಬ್ಯುನಲ್ ಪ್ರೊಸೀಡಿಂಗ್ಸ್‌ನ್ನು ಮುಂದುವರೆಸಬೇಕು, ವಾಟರ್ ರಿಸೋರ್ಸಸ್ ಕೌನ್ಸಿಲ್ ಏನಿದೆ ಅದು ತನ್ನ ಮಾರ್ಗ ಸೂಚಿಯನ್ನು ಕೊಡುವುದಕ್ಕೆ ಮುಂಚೆ ಈ ಪ್ರೊಸೀಡಿಂಗ್ಸ್‌ನ್ನು ತಡೆಹಿಡಿಯಬೇಕೆಂದು ತಾವು ಏನು ಅರ್ಜಿಯನ್ನು ಕೊಟ್ಟಿದ್ದೀರಿ, ಅದರ ಬಗ್ಗೆ 16.4.96 ರಂದು ಟ್ರಿಬ್ಯುನಲ್ ಪುರಸ್ಕರಿಸಲಿಲ್ಲ. ಆ ಸಂದರ್ಭದಲ್ಲಿ ಒಂದು ಮಾತನ್ನು ಇಲ್ಲಿ ಏನು ಹೇಳಿದ್ದಾರೆ ಅದನ್ನು ತಮ್ಮ ಕಾನೂನು ಇಲಾಖೆ ಅಥವಾ ನೀರಾವರಿ ಇಲಾಖೆಯವರು ತಮ್ಮ ಗಮನಕ್ಕೆ ತಂದಿದ್ದಾರೋ ಅಥವಾ ಇಲ್ಲವೋ ಗೊತ್ತಿಲ್ಲ. ಅವರು ಆ ಆರ್ಡರ್‌ನಲ್ಲಿ ಏನು ಹೇಳಿದ್ದಾರೆಂದರೆ:

"It may be stated here that the National Water Resources Development Council was set-up by the Government of India by Notification dated 10th March, 1983, issued by the Government of India, Ministry of Irrigation."

Prima facie it is not an Inter-State problem as contemplated under Article 263 of the Constitution of India.

ಇನ್ನೊಂದು ಬಹಳ ಪ್ರಾಮುಖ್ಯವಾದ ವಿಚಾರ ಎಂದರೆ, ಡಾ: ಅಲಘ್ ಸಮಿತಿಯವರು ಅನೇಕ ವಿಚಾರಗಳನ್ನು ಹೇಳಿದ್ದಾರೆ. ಅದರಲ್ಲಿ ಬಹಳ ಮುಖ್ಯವಾಗಿ ಪುಟ 22ರಲ್ಲಿ ಅವರು ಏನು ಹೇಳಿದ್ದಾರೆಂದರೆ "Doubts were expressed in Tamilnadu regarding accuracy of total supplies being made by Karnataka to Tamilnadu." ಇದರಲ್ಲಿ ಅನುಮಾನಕ್ಕೆ ಅವಕಾಶವೇ ಇಲ್ಲ. ಕಾರಣ ಏನೆಂದರೆ, ಗೇಜಿಂಗ್ ಸ್ಟೇಷನ್ ಸೆಂಟ್ರಲ್ ವಾಟರ್ ಪವರ್ ಕಮಿಷನ್‌ನವರದ್ದೇ ಇದೆ. ನಾವು ಎಷ್ಟು ನೀರನ್ನು ಉಪಯೋಗ ಮಾಡುತ್ತೇವೆ ಅದು it is absolutely hundred percent transparent. ನಾವು ಬಿಡುಗಡೆ ಮಾಡುವುದೂ ಕೂಡ ಬಹಳ ಸುಸ್ಪಷ್ಟ "Similar doubts were also expressed in

Karnagaka regarding the accuracy of measurements made by Tamilnadu at Mettur in respect of supplies received by Tamilnadu. The inflow at Mettur is assessed by the Government of Tamilnadu by an indirect method by calculating the outflow through power houses and under sluices and increase in storage of the reservoir, it is suggested...." ಇದನ್ನು ಅಲಫ್ ಸಮಿತಿಯವರು ಸಜೆಸ್ಟ್ ಮಾಡುತ್ತಿದ್ದಾರೆ.

ಇವತ್ತು 5 ಟಿ.ಎಂ.ಸಿ; ಕೊಡಿ ನೀರು 15-20-25 ಟಿ.ಎಂ.ಸಿ. ನೀರು ಕೊಡಿ ಎಂದು ಹೇಳುವುದು ಏನಿದೆ ಇದು ಸರಿಯಾದ ಮಾರ್ಗ ಆಗುವುದಿಲ್ಲ ಮತ್ತು ನ್ಯಾಯವಾದ ರೀತಿಯಲ್ಲಿ ನೀರನ್ನು ಹಂಚಿಕೊಳ್ಳತಕ್ಕ ವಿಧಾನ ಆಗುವುದಿಲ್ಲ. ಇಂಥ ಹಲವಾರು ಸೂಚನೆಗಳನ್ನು ಇವತ್ತು ಅಲಫ್ ಕಮಿಟಿಯವರು ಕೊಟ್ಟಿದ್ದಾರೆ. ಈಗ ಅದನ್ನೆಲ್ಲ ಪ್ರಸ್ತಾಪ ಮಾಡುವುದಕ್ಕೆ ಹೋದರೆ, ಬಹಳ ಸಮಯವಾಗುತ್ತದೆ.

ಬಿ.ಎಸ್. ಯಡಿಯೂರಪ್ಪ: ಕರ್ನಾಟಕ ರಾಜ್ಯದ ಅಭಿಪ್ರಾಯವನ್ನು ಪ್ರಧಾನಿಯವರಿಗೆ ತಿಳಿಸುವುದರಿಂದ, ಸುಪ್ರೀಂ ಕೋರ್ಟನ್ನು ನಾಳೆ ಕನ್‌ವಿನ್ಸ್ ಮಾಡಬಹುದು. ನಾಳೆ ಸುಪ್ರೀಂ ಕೋರ್ಟ್ ಮುಂದೆ ನಾವು ಹೋದಾಗ ಹೇಗೂ ಟ್ರಿಬ್ಯುನಲ್ ಅಧ್ಯಕ್ಷರು ರಾಜೀನಾಮೆ ಕೊಟ್ಟಿದ್ದಾರೆ, ನ್ಯಾಷನಲ್ ವಾಟರ್ ಪಾಲಿಸಿ ಫ್ರೇಂ ಮಾಡುವ ಸಂದರ್ಭ ಬರುತ್ತಿದೆ ಎಂಬುದನ್ನು ಸುಪ್ರೀಂ ಕೋರ್ಟ್ ಗಮನಕ್ಕೆ ತರುವುದಕ್ಕೆ ಸಾಧ್ಯವಾದರೆ ಹೆಚ್ಚು ಅನುಕೂಲವಾಗಬಹುದೆಂದು ನನ್ನ ಅಭಿಪ್ರಾಯ.

ಎಂ. ವೀರಪ್ಪಮೊಯಿಲಿ: ತಾವು ದಯಮಾಡಿ ಕೇಂದ್ರ ಸರ್ಕಾರಕ್ಕೆ ಹೇಳಬೇಕಾಗುತ್ತದೆ, ಟ್ರಿಬ್ಯುನಲ್ ಅನ್ನು ರೀ-ಕಾನ್‌ಸ್ಟಿಟ್ಯೂಟ್ ಮಾಡುವಾಗ ಬರೀ ಜಡ್ಜ್‌ಗಳನ್ನು ಮಾತ್ರ ಹಾಕಬೇಡಿ; ಇರಿಗೇಷನ್ ಎಕ್ಸ್‌ಪರ್ಟ್ಸ್ ಹಾಕಬೇಕಾಗುತ್ತದೆ, ಅಗ್ರಿಕಲ್ಚರಲ್ ಸೈಂಟಿಸ್ಟ್ ಹಾಕಬೇಕಾಗುತ್ತದೆ, ಜಡ್ಜಸ್ ಕೂಡ ಇರಲಿ.

ಜೆ.ಹೆಚ್. ಪಟೇಲ್: ಕೆ.ಆರ್. ಸಾಗರದಲ್ಲಿ ನೀರು ಬಿಟ್ಟಿದ್ದಾಗಿದೆ. ಅದೂ ನಮ್ಮ ರೈತರಿಗೆ ಬಿಟ್ಟಿದ್ದಾರೆ.

ಎಂ. ವೀರಪ್ಪಮೊಯಿಲಿ: ನಮ್ಮ ರೈತರಿಗೆ ಬಿಟ್ಟಿದ್ದಾರೆ ಎಂದು ಹೇಳುತ್ತೀರಿ. ಆದರೆ ಇವತ್ತು ಈ ವರದಿ ಸರಿಯಿಲ್ಲ ಎನ್ನತಕ್ಕದ್ದು ತಮ್ಮ ಅಭಿಪ್ರಾಯ ಇದ್ದರೆ ಅದು ತಮ್ಮ ಮಾಹಿತಿಗೆ ಒಳಪಟ್ಟಿದ್ದು, ದಯಮಾಡಿ ಹೇಳಿ. 10-12 ದಿವಸ ಕಬಿನಿ ಮತ್ತು ಕೆ.ಆರ್. ಸಾಗರದಿಂದ ನಮ್ಮ ರೈತರಿಗೆ ನೀರು ಬಿಡಲಿಕ್ಕೆ ಅವರು ತಡಮಾಡಿದ್ದಾರೆ. ಅಂದರೆ ಅಲ್ಲಿ ನೀರಿಲ್ಲ. ಜೂನ್‌ನಲ್ಲಿ...

ಹೆಚ್.ಸಿ. ಮಹದೇವಪ್ಪ (ಆರೋಗ್ಯ ಖಾತೆ ಮಂತ್ರಿ): ಆ ರೈತರೇ ನೀರು ಬಿಡುವುದನ್ನು ಒಂದು ವಾರ ಮುಂದಕ್ಕೆ ಹಾಕಿ ಎಂದು ಹೇಳಿದ್ದರು.

ಎಂ. ವೀರಪ್ಪಮೊಯಿಲಿ: ತಾವು ಹೇಳಿ. ಆದರೆ ಅಲ್ಲಿ ರೈತರು ಹೇಳಿದ್ದಾರೋ ಇಲ್ಲವೋ ಎಂಬುದನ್ನು ಪುಟ್ಟಣ್ಣಯ್ಯನವರು ನಮಗೆ ಹೇಳಬೇಕು. ನನಗೆ ಗೊತ್ತಿದ್ದಮಟ್ಟಿಗೆ ಇಲ್ಲ.

ನಮ್ಮ ರೈತರ ಬಗ್ಗೆ ಬಂದಾಗ ಇದೆಲ್ಲ ಆಲೋಚನೆ, ಲೆಕ್ಕಾಚಾರ ಹಾಕಿದಿರಿ. ಆದರೆ ತಮಿಳುನಾಡಿನ ರೈತರ ಬಗ್ಗೆ ಬಂದಾಗ ಕೇಳಿದ ಕೂಡಲೇ ಬಿಟ್ಟುಬಿಟ್ಟರಿ. ಯಾವ ಯೋಚನೆ ಕೂಡ ಮಾಡಲಿಲ್ಲ. ನಮ್ಮ ಜೊತೆಯೂ ಯೋಚನೆ ಮಾಡಲಿಲ್ಲ. ಅಥವಾ ರೈತರ ಬಗ್ಗೆ ಕೂಡ ಯೋಚನೆ ಮಾಡಲಿಲ್ಲ. ನೀರಾವರಿ ಇಲಾಖೆಯವರ ಅಭಿಪ್ರಾಯ ಕೂಡ ತಾವು ಕೇಳಲಿಲ್ಲ ಅಂತ ಹೇಳಿದರೆ ಅದು ಅತಿಶಯೋಕ್ತಿ ಆಗುವುದಿಲ್ಲ. ಏಕೆಂದರೆ ಜುಲೈ 10ನೇ ತಾರೀಖಿನ ಟೈಮ್ಸ್ ಆಫ್ ಇಂಡಿಯಾದಲ್ಲಿ ಕೂಡ ಹೇಳಿದ್ದಾರೆ.

ಜೆ.ಹೆಚ್. ಪಟೇಲ್: ಮಾನ್ಯ ಸಭಾಧ್ಯಕ್ಷರೇ ಅಲ್ಲಿ ಜನ, ರೈತರು ಏನು ಬೆಳೆದಿದ್ದಾರೆ ಏನು ಬಿಟ್ಟಿದ್ದಾರೆ ಎನ್ನುವುದನ್ನು ದಿವಸ ನೋಡುವವರು ಮಹದೇವಪ್ಪನವರು. ಟೈಮ್ಸ್ ಆಫ್ ಇಂಡಿಯಾದೊಳಗೆ ಕ್ರಾಪ್ ನೋಡುವವರು ಮೊಯಿಲಿಯವರು.

ಎಂ. ವೀರಪ್ಪ ಮೊಯಿಲಿ: ಇದು ಮೈಸೂರು ರಿಪೋರ್ಟ್. ಜರ್ನಲಿಸ್ಟ್ ಅಲ್ಲಿಗೆ ಭೇಟಿ ಕೊಟ್ಟು ವರದಿ ಮಾಡಿದ್ದಾರೆ. ತಮಗೆ ಮಹದೇವಪ್ಪನವರು ಹೇಳುವುದೇ ವೇದವಾಕ್ಯವಾದರೆ ನಮ್ಮ ಆರ್ಗ್ಯುಮೆಂಟ್ ಇಲ್ಲ. ಆದರೆ ನಾವೂ ರೈತರ ಪ್ರತಿನಿಧಿಗಳಿದ್ದೇವೆ.

ಎಲ್.ಆರ್. ಶಿವರಾಮೇಗೌಡ: ಅವರು ಅಲ್ಲಿನ ಪ್ರತಿನಿಧಿ.

ಎಂ. ವೀರಪ್ಪ ಮೊಯಿಲಿ: ಲೆಕ್ಕಾಚಾರ ಮಾಡಬೇಕಾದದ್ದು 131 ದಿವಸಕ್ಕೆ. ಮಳೆ ರಾತ್ರಿ ಬೆಳಗಾದರೆ ಬರುವುದಿಲ್ಲ. ಮಳೆಗಾಲ ಹೋದಮೇಲೆ ನೀರು ನಿಲ್ಲಿಸಬೇಕಾಗುತ್ತದೆ. ಇದು ಇವತ್ತಿನ ಪ್ರಶ್ನೆಯಲ್ಲ. ಇದು ನಾಳೆಯ ಪ್ರಶ್ನೆ. 131 ದಿವಸಗಳ ಒಂದು ಪ್ರಶ್ನೆಯನ್ನು ಒಂದು ವಿಚಾರವನ್ನು ನಮ್ಮ ಮುಂದಿಟ್ಟುಕೊಂಡು ನೀರು ಬಿಡುಗಡೆ ಮಾಡಬೇಕೇ ಹೊರತು, ಇವತ್ತು ನೀರು ಇದೆ, ನಾಳೆ ನೀರು ಇದೆ, 31ನೇ ತಾರೀಖು ಜುಲೈವರೆಗೆ ನೀರು ಇದೆಯೆಂದು ವಿಚಾರ ಮಾಡಿ ನೀರು ಬಿಡುಗಡೆ ಮಾಡತಕ್ಕಂತಹ ಯಾವ ಧೋರಣೆಯನ್ನು ತಾವು ವ್ಯಕ್ತಪಡಿಸುತ್ತಾ ಇದ್ದೀರಿ. ಇದರ ಬಗ್ಗೆ ನನ್ನ ಆಕ್ಷೇಪಣೆಯನ್ನು ಮಾಡುತ್ತಿದ್ದೇನೆ. What is the guarantee?

Distress formula in not a formula given by the State Government. Distress formula is a formula given by the Tribunal, in their clarificatory order. We have not agreed for it. Interim order, we have not agreed for it. because the House itself has passed a resolution that it is incapable of implementation. Don't divert the subject.

**M.C. Nanaiah:** I think while you were the Chief Minister, all these things have taken place. Now you say 'We have not accepted the Tribunal order and we should not follow it and we should not have followed it.' Well, I think, while you were the Chief Minister, what had gone in the Tribunal, kindly tell us. Kindly enlighten.

**M. Veerappa Moily:** We have already enlightened on this matter number of times. The question is, my responsiblility, we own it. But, at the same time what is the resolution of the House? It is incapable of implementation.

**ಜೆ.ಹೆಚ್. ಪಟೇಲ್:** ಸ್ವಾಮಿ, ಈಗ ನಮ್ಮಲ್ಲಿ ಸಾಕಷ್ಟು ನೀರು ಇದೆ. ಇನ್ನು ನಾಲ್ಕುವರೆ ತಿಂಗಳಿಗೆ ಆಗುವಷ್ಟು ನೀರು ಇದೆ. ಆದಕ್ಕಾಗಿ ಹೆಚ್ಚಿಗೆ ಬಿಟ್ಟಿದ್ದೇವೆಂದು ನಾವು ಹೇಳಿಲ್ಲ. ನಮ್ಮಲ್ಲಿರತಕ್ಕಂಥ ಈ ನೀರು 15 ದಿವಸ ಅಥವಾ ಮಳೆ ಬರುತ್ತಿದೆ ಎಂದು ಆಸೆಯಿಂದಲೇ ಹೋಗುವುದು. ಮಳೆ ಬರುವುದಿಲ್ಲ ಎಂದರೆ ನಾನು ಬಿಡುವುದಕ್ಕೆ ಆಗುವುದಿಲ್ಲ. ಮಳೆ ಬಂದಾಗ ನೀರು ತಾನಾಗಿಯೇ ಹರಿದುಹೋದರೆ ಅದು ನಮ್ಮ ಲೆಕ್ಕಕ್ಕೆ ಸಿಗುವುದಿಲ್ಲ. ಅದು ಓವರ್‌ಫ್ಲೋ ಆದರೆ ನಮ್ಮ ಲೆಕ್ಕಕ್ಕೆ ಸಿಗುವುದಿಲ್ಲ. ಈಗ ಒಂದು ಟಿ.ಎಂ.ಸಿ. ಕೊಟ್ಟು ಮತ್ತೆ ನಮ್ಮ ಜಲಾಶಯ ಭರ್ತಿಯಾದರೆ ಅದು ನಮ್ಮ ಲೆಕ್ಕಕ್ಕೆ ಸಿಗುತ್ತದೆ. ಆ ಬುದ್ಧಿವಂತಿಕೆ ಮಾಡಬಾರದು ಎಂದು ನೀವು ಹೇಳಿದರೆ ನಾನು ಒಪ್ಪುತ್ತೇನೆ.

ಎಂ. ವೀರಪ್ಪ ಮೊಯಿಲಿ: ತಾನಾಗಿ ಹೋಗತಕ್ಕಂಥ ನೀರು ಕೊಟ್ಟಿದ್ದಲ್ಲ. ನಮಗೆ ಇರತಕ್ಕಂಥ ಕೊರತೆಯ ನೀರನ್ನು ಬಿಟ್ಟುಕೊಟ್ಟಿದ್ದೀರಿ. ಆದ್ದರಿಂದ ನೀರಿನ ವಿಚಾರದಲ್ಲಿ ಚೆಲ್ಲಾಟ ಆಡಬಾರದು. ಅದು ರೈತರ ಜೀವನದಲ್ಲಿ ಆಡತಕ್ಕಂಥ ಚೆಲ್ಲಾಟ. ಇಷ್ಟು ಮಾತ್ರ ಸೂಕ್ಷ್ಮವಾಗಿ ಮಾನ್ಯ ಸಭಾನಾಯಕರಿಗೆ ಹೇಳಿ ನನಗೆ ಅವಕಾಶ ಕೊಟ್ಟದ್ದಕ್ಕಾಗಿ ತಮಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಹೆಚ್.ಎನ್. ನಂಜೇಗೌಡ (ಬಸವನಗುಡಿ):** ಮಾನ್ಯ ಅಧ್ಯಕ್ಷರೇ, ಮೊನ್ನೆಯಿಂದ ಕಾವೇರಿ ವಿಚಾರ ಚರ್ಚೆಯಾಗುತ್ತಾ ಇದೆ. ನಾವೇನು ಸಂತೋಷಪಡಬೇಕೋ ದುಃಖಪಡಬೇಕೋ ನನಗೆ ಅರ್ಥವಾಗುತ್ತಾ ಇಲ್ಲ. ನೇರವಾಗಿ ಹೇಳತಕ್ಕಂಥ ಮಾತು. ಎಷ್ಟೋ ವಿಚಾರಗಳು ಪ್ರಸ್ತಾಪವಾಗದಿರತಕ್ಕಂಥಾದ್ದು ಪ್ರಸ್ತಾಪವಾಗಿದೆ. ಎಷ್ಟೋ ವಿಚಾರಗಳು ಪ್ರಸ್ತಾಪವಾಗಬೇಕಾದ್ದು ಪ್ರಸ್ತಾಪವಾಗಿಲ್ಲ. ಈ ಮಧ್ಯೆ ಸರ್ಕಾರ ಎಡವುತ್ತಲೇ ಇದೆ.

In a lower peripheral State like Tamilnadu, any lower peripheral State as a matter of fact, they cannot claim to have a free run of the riverflow. Run of the river scheme ಎಂದು ಹೇಳುತ್ತಾರೆ. They cannot 100

ಪರ್ಸೆಂಟ್ ನಮಗೇ ಬರಬೇಕೆಂದು ಅವರು ಹೇಳುವುದಕ್ಕಾಗುವುದಿಲ್ಲ. ಅದೇ ರೀತಿ, Let it be any upper peripheral State, they cannot have the cease of the river flow. ನಾವು ಒಂದು ತೊಟ್ಟು ಬಿಡುವುದಿಲ್ಲ; ಎಲ್ಲಾ ಕಟ್ಟಿಕೊಂಡು ಬಿಡುತ್ತೇವೆ ಎಂದು ಇದನ್ನು ಮೇಲಿನ ರಾಜ್ಯಗಳೂ ಹೇಳುವುದಕ್ಕಾಗುವುದಿಲ್ಲ. ಯಾವುದೋ ಓಬಿರಾಯನ ಕಾಲದಲ್ಲಿ, ನೂರಾರು ವರ್ಷಗಳ ಹಿಂದೆ ಡೆವಲಪ್ ಆಗದೇ ಇದ್ದಾಗ, ನಮಗೆ run of the river free ಇತ್ತು, 100 ಪರ್ಸೆಂಟ್ ನಮಗೇ ಬರುತ್ತಿತ್ತು. ಅದನ್ನು ಬಿಡಿ ಎಂದು ಕೆಳಗಿನ ರಾಜ್ಯಗಳವರೂ ಹೇಳುವುದಕ್ಕಾಗುವುದಿಲ್ಲ. We are living in a modern society where technology has advanced, science has advanced and dam technolgoy has come to be there in all parts of the World. ಈಗ ಚಿಂತನೆಯೇ ಬೇರೆಯಾಗಿದೆ. ಅಂತರಾಜ್ಯ ಜಲವಿವಾದದಂಥ ಸೂಕ್ಷ್ಮ ಗಂಭೀರ ಹಾಗೂ ವ್ಯಾಪಕ ಪರಿಣಾಮಗಳನ್ನುಂಟುಮಾಡುವ ವಿವಾದಗಳನ್ನು ಸಂಬಂಧಿಸಿದ ರಾಜ್ಯಗಳ ಮುಖ್ಯಮಂತ್ರಿಗಳು ಕರೆದು, ಚರ್ಚಿಸಿ, ಸೌಹಾರ್ದಯುತವಾದಂಥ, ಸರ್ವಸಮರ್ಪಕವಾದಂಥ ನಿರ್ಣಯಕ್ಕೆ ಬರುವುದು ಕಾರ್ಯಸಾಧುವು ಹಾಗೂ ಅಪೇಕ್ಷಣೀಯವೆಂದು ಭಾವಿಸಿ, ಈ ವಿವೇಕಯುತವಾದ ನೀತಿಯನ್ನು ಇಲ್ಲಿಯವರೆಗೂ ಅನುಸರಿಸಿಕೊಂಡು ಬಂದಿರುವುದು ಇತ್ತೀಚಿನ ಇತಿಹಾಸ. ರಾಷ್ಟ್ರೀಯ ಜಲನೀತಿಯ ಮಾರ್ಗದರ್ಶನವೇ ನಮಗೆ ಲಭ್ಯವಿಲ್ಲದಿರುವಾಗ ಅಂತಹ ರಾಷ್ಟ್ರೀಯ ಜಲನೀತಿಯ ಮಾರ್ಗಸೂಚಿಯನ್ನು ರೂಪಿಸಬೇಕಾದ ಅನಿವಾರ್ಯತೆ ಹಾಗೂ ಅಗತ್ಯತೆ ಇದೆಯೆಂದು ಮನಗಂಡು, ಕೇಂದ್ರ ಸರ್ಕಾರದ ಜಲಸಂಪನ್ಮೂಲ ಸಚಿವರ ಅಧ್ಯಕ್ಷತೆಯಲ್ಲಿ ಇತ್ತೀಚೆಗೆ ಸೇರಿದ ಸಭೆಯಲ್ಲಿ ರಾಷ್ಟ್ರದ ನೀರಾವರಿ ಮಂತ್ರಿಗಳು ತೆಗೆದುಕೊಂಡ ನಿರ್ಣಯವನ್ನು ಸ್ವಾಗತಿಸುತ್ತಾ ಶೀಘ್ರವಾಗಿ ಅಂತಹ ಮಾರ್ಗಸೂಚಿಯನ್ನು ರೂಪಿಸಬೇಕೆಂದು ಈ ಸದನವು ಅತ್ಯಂತ ಕಳಕಳಿಯಿಂದ ಒತ್ತಾಯಪಡಿಸುತ್ತದೆ. ಇಂತಹ ಭಾವನಾತ್ಮಕ ಹಾಗೂ ಜಟಿಲ ಸಮಸ್ಯೆಗಳನ್ನು ನ್ಯಾಯಾಲಯದ ವ್ಯಾಪ್ತಿಯ ಹೊರಗಡೆ ಬಗೆಹರಿಸುವುದು ಒಳ್ಳೆಯದು. 6.7.91 ರಂದು ಈ ಸದನವು, 25.6.91 ರಂದು ಕಾವೇರಿ ಜಲವಿವಾದದ ಬಗ್ಗೆ ಟ್ರಿಬ್ಯುನಲ್ ಮಾಡಿದ ತೀರ್ಪು, ರಾಜ್ಯದ ಹಿತಕ್ಕೆ ಬಾಧಕವೂ ಅನುಷ್ಠಾನಗೊಳಿಸಲಾರದ ತೀರ್ಮಾನವಾಗಿರುವುದರಿಂದ, ಈ ಸದನವು ತೀರ್ಪನ್ನು ತಿರಸ್ಕರಿಸಬೇಕೆಂದೂ, ಹಾಗೂ ರಾಷ್ಟ್ರೀಯ ಜಲನೀತಿಯು ಮಾರ್ಗಸೂಚಿಗಳನ್ನು ರೂಪಿಸುವವರೆಗೆ ಎಲ್ಲಾ ವಿವಾದಗಳ ಇತ್ಯರ್ಥಗಳನ್ನು ಸ್ಥಗಿತಗೊಳಿಸಬೇಕೆಂದೂ ತೆಗೆದುಕೊಂಡಿರುವ ನಿರ್ಣಯಕ್ಕೆ ಈ ಸದನವು ಬದ್ಧವಾಗಿದೆ".

"ರಾಜ್ಯ ರಾಜ್ಯಗಳ ನಡುವಿನ ಇಂತಹ ಗಂಭೀರವಾದ ವಿವಾದಗಳನ್ನು ಸರ್ವಸಮ್ಮತವಾಗಿ ಬಗೆಹರಿಸಲು ಪ್ರಧಾನ ಮಂತ್ರಿಗಳು ಸಂಬಂಧಿಸಿದ ಮುಖ್ಯಮಂತ್ರಿಗಳನ್ನು ಕರೆದು ಚರ್ಚಿಸಿ ನ್ಯಾಯ ಸಮ್ಮತವಾದ ಹಾಗೂ ಸರ್ವಸಮ್ಮತವಾದ ತೀರ್ಮಾನವನ್ನು ತೆಗೆದುಕೊಳ್ಳುವುದು ಹೆಚ್ಚು ಸಮಂಜಸವೂ ಕಾರ್ಯಸಾಧುವೂ ಎಂದು ಈ ಸಭೆಯು ಕೇಂದ್ರ ಸರ್ಕಾರವನ್ನು ಈ ನಿರ್ಣಯದ ಮೂಲಕ ಸರ್ವಾನುಮತದಿಂದ ಒತ್ತಾಯಿಸುತ್ತದೆ." ಎಂದು ಹೇಳಿ ಈ ಸದನ ಸರ್ಕಾರಕ್ಕೆ ಒಂದು ಸೂಚನೆ ಕೊಟ್ಟಿದೆ.

ಟ್ರಿಬ್ಯುನಲ್ ರಚನೆ ಆಯಿತು ಎನ್ನಬೇಕಾದರೆ ಛೇರ್ಮನ್‌ರು ಇರಬೇಕು. ಛೇರ್ಮನ್ ಇಲ್ಲದೆ ಟ್ರಿಬ್ಯುನಲ್ ಹೇಗೆ ಇರುತ್ತದೆ? When the Chairman is not there how can there be a Tribunal. ನೀವು ಏನು ಮಾಡಿದ್ದೀರಿ. ನಿನ್ನೆ ಅವರು ಓದುತ್ತಿದ್ದರು. ನಾನು ಪತ್ರಿಕೆಯಲ್ಲಿ ನೋಡಿದೆ. 'State asks Disputes Tribunal to define distress formula' ನೀವು ಅಲ್ಲಿಗೆ ಹೋಗಿ ಅರ್ಜಿಕೊಡುತ್ತೀರೋ? ಟ್ರಿಬ್ಯುನಲ್‌ನ್ನು ಸ್ಥಗಿತಗೊಳಿಸಿ ಅಂತ ಒಂದು ಕಡೆ ಹೇಳುತ್ತಿದ್ದೇವೆ. ಈಗ ಒಂದು ರೀತಿ ನ್ಯಾಚುರಲ್ ಡೆತ್ ಬಂದಿದೆ, ಅದು ಟೆಂಪರರಿ ಡೆತ್ ಇರಬಹುದು.

ಕೆ.ಎನ್. ನಾಗೇಗೌಡ (ನೀರಾವರಿ ಸಚಿವ): ಒಂದು ನಿನ್ನೆಯೂ ಅವರು ಟೈಮ್ಸ್ ಆಫ್ ಇಂಡಿಯಾ ತೋರಿಸಿ ಹೇಳಿದರು. 1993ನೇ ಡಿಸ್ಟ್ರೆಸ್ ಫಾರ್ಮುಲಾ ಬಗ್ಗೆ ವರ್ಕ್‌ಔಟ್ ಮಾಡಿ ನಾವು ಕೊಟ್ಟಾಗ ತಮಿಳುನಾಡು ಒಪ್ಪಲಿಲ್ಲ. ಕೊನೆಗೆ ಟ್ರಿಬ್ಯುನಲ್ ಮುಂದೆ ಹೋಗಬೇಕು ಎಂದು ತೀರ್ಮಾನ ಆಯಿತು. 1995 ರಲ್ಲಿ ರಿಜಿಸ್ಟ್ರಾರ್ ಮುಂದೆ ಹೋದಾಗ ಅವರು ಆಗುವುದಿಲ್ಲ ಎಂದು ಹೇಳಿದ ಮೇಲೆ ಫುಲ್ ಟ್ರಿಬ್ಯುನಲ್ ಕೊಡಬೇಕು ಅಂತ ಬಂತು. ಸೇಮ್ ಥಿಂಗ್ ಕಂಟಿನ್ಯೂ ಆಗಿ 9ನೇ ತಾರೀಖು ದಿವಸ ಅದನ್ನೇ ನಾವು ಟ್ರಿಬ್ಯುನಲ್‌ಗೆ ಕೊಟ್ಟಿದ್ದೇವೆ. ಛೇರ್ಮನ್ ಇಲ್ಲ ಅಂತ ಹೇಳಿ ಹಿಯರಿಂಗ್ ಡೇಟ್ ಫಿಕ್ಸ್ ಆಗಿಲ್ಲ.

ಹೆಚ್.ಎನ್. ನಂಜೇಗೌಡ: ನಾನು ಹೇಳುವುದೇ ಬೇರೆ. ಅದು ಕೋಮಾದಲ್ಲಿದೆ ಅಂತ ಇಟ್ಟುಕೊಳ್ಳಿ, ಸತ್ತುಹೋಗಿಲ್ಲ. ಛೇರ್ಮನ್ ಇಲ್ಲವಲ್ಲ. It is not constituted now. ಆಯಿತೆ? ಟ್ರಿಬ್ಯುನಲ್ ಅನ್ನು ಸ್ಥಗಿತಗೊಳಿಸಿ ಅಂತ ನಾವು ವಾದ ಮಾಡುತ್ತಿರಬೇಕಾದರೆ ಆ ಟ್ರಿಬ್ಯುನಲ್ ಮುಂದೆ ನೀವು ಅರ್ಜಿ ಕೊಡುತ್ತೀರಲ್ಲ! ಇಲ್ಲದಿದ್ದರೆ ಒಂದು ಮಾತು ಹೇಳಿ. ಡೆಫನೆಟ್ ಸ್ಟ್ಯಾಂಡ್‌ನ್ನು ಗೌರ್ನಮೆಂಟ್ ತೆಗೆದುಕೊಳ್ಳಬೇಕು. ಇಲ್ಲ ನೀವು ಹೇಳಿಬಿಡಿ. 100% we are going by the decision of the Tribunal. ಸುಮ್ಮನೆ ತೌಡು ಕುಟ್ಟುವ ವ್ಯವಹಾರ ಬೇಡ. ನಾನು ಬೇಕಾದರೆ ನೂರೆಂಟು ಅಂಕಿಅಂಶಗಳನ್ನು ಇಟ್ಟುಕೊಂಡಿದ್ದೇನೆ. ತೌಡು ಕುಟ್ಟುವ ವ್ಯವಹಾರ ಬೇಡವೇ ಬೇಡ. ಅದನ್ನು ಹೇಳಿಕೊಂಡು, ಇದನ್ನು ಹೇಳಿಕೊಂಡು, ಹೋಗುವುದು ಬೇಡ. ಏಕೆಂದರೆ.

ಜೆ.ಹೆಚ್. ಪಟೇಲ್: ಟ್ರಿಬ್ಯುನಲ್ ಆಗಬೇಕೆಂದು ಆರ್ಡರ್ ಇಶ್ಯೂ ಮಾಡಿದಾಗ ಹೆಡ್ ಆಫ್ ದಿ ಟ್ರಿಬ್ಯುನಲ್ ಯಾರು? ಮೊನ್ನೆ ಅವರು ರಾಜೀನಾಮೆ ಕೊಟ್ಟಾಗ Tribunal automatically ceases to exist ಎಂದು ಏನಾದರೂ ಇದೆಯೇ? ಹಾಗಿಲ್ಲ.

**H.N. Nanje Gowda:** Without the Chairman there cannot be a Tribunal.

**J.H. Patel:** When Chairman has resigned it automatically cease to exist. ಅಂತ ಅರ್ಥ ಬರುವ ರೀತಿಯಲ್ಲಿ ಇದ್ದರೆ, ನಾನು ತಮ್ಮ ವಾದವನ್ನು ಅಪ್ರಿಷಿಯೇಟ್ ಮಾಡುತ್ತೇನೆ. ಹಾಗಿದ್ದರೆ ನಾವು ಹೋಗಿ ಅವರಿಗೆ ಅರ್ಜಿ ಹಾಕುವ ಅವಶ್ಯಕತೆ ಇಲ್ಲ.

ಹೆಚ್.ಎನ್. ಸಂಜೀಗೌಡ: ನಾವು ಸ್ವಲ್ಪ ನಮ್ಮ ಆತ್ಮಶೋಧನೆಯನ್ನೂ ಸಹ ಮಾಡಿಕೊಳ್ಳಬೇಕಾಗುತ್ತದೆ. Karunanidhi- he wanted to buy political protection, he used V.P. Singh. ಟ್ರಿಬ್ಯುನಲ್ ಅಪಾಯಿಂಟ್ ಮಾಡಿಸಿದರು. ಆದರೆ ಫೇಲ್ ಆದರು. ಜಯಲಲಿತಾರವರು ಅಧಿಕಾರಕ್ಕೆ ಬಂದರು. ಜಯಲಲಿತಾ ಮಾಡಬಾರದ್ದೆಲ್ಲಾ ಮಾಡಿ ಆಯಿತು. It never helped. She wanted to buy political protection out of this issue but she failed. ಏನಂತೀರಿ ಖರ್ಗೆಯವರೇ, ದುರ್ದೈವದ ಸಂಗತಿ ಅಂದರೆ, ಉದ್ದಕ್ಕೂ ತಮಿಳುನಾಡಿನಲ್ಲಿ ಆಗಲಿ ಕರ್ನಾಟಕದಲ್ಲಿ ಆಗಲಿ ಯಾರು ಅಧಿಕಾರದಲ್ಲಿ ಇದ್ದರೋ always they were interested to buy political protection out of this issue or gain political alienates. ಇನ್ನು ಅದು ಆಗದೇ ಇದ್ದರೆ ಏನು ಮಾಡುವುದು?

**J.H. Patel:** There is a slight amendment. Those who were there before and those who played the role of opposition they wanted to get protection out of this issue.

**H.N. Nanje Gowda:** We also attempted to play to the gallery. I also say that... ನಾನು ಇಲ್ಲ ಎಂದು ಹೇಳಲೇ ಇಲ್ಲವಲ್ಲ! ಈಗ ಮಾನ್ಯ ಅಧ್ಯಕ್ಷರೇ ನೋಡಿ ಸುಪ್ರೀಂ ಕೋರ್ಟ್ ಆರ್ಡರ್ ಡೇಟೆಡ್ 26.4.91 ಈ ಟ್ರಿಬ್ಯುನಲ್ ನೇಮಕ ಆಯಿತಲ್ಲ ಟರ್ಮ್ಸ್ ಆಫ್ ರೆಫರೆನ್ಸ್ ಏನು ಅಂದರೆ, ಜುಲೈ 6, 86ನೇ ಇಸವಿಯಲ್ಲಿ ತಮಿಳುನಾಡು ಸೆಕ್ರೆಟರಿಯವರು ಒಂದು ಲೆಟರ್ ಬರೆದರು. ಅದು 12-14 ಪೇಜು ಇದೆ. ಅದನ್ನೇ ಟರ್ಮ್ಸ್ ಆಫ್ ರೆಫರೆನ್ಸ್ ಎಂದು ಹಾಕಿಬಿಟ್ಟರು. ಅದೂ ಒಂದು ಇಶ್ಯೂ. Even framing that letter whether that could form terms of reference. ಅಷ್ಟಕ್ಕೆ ಮಾಡುವುದು ಸರಿಯೋ ಏನೋ ಅಂತ ಹೇಳಿ ಕೊನೆಗೆ ಏನಾಯಿತು ಸಹಾಯ್ ಎನ್ನತಕ್ಕಂಥ ಜಡ್ಜ್ ಬರೆದರು.

ದೇವರಾಜ ಅರಸ್ ಮುಖ್ಯಮಂತ್ರಿಯಾಗಿದ್ದಾಗ ತಮಿಳುನಾಡಿನ ಸೂಪರಿಂಟೆಂಡಿಂಗ್ ಇಂಜಿನೀಯರ್ ಮತ್ತು ಎಕ್ಸಿಕ್ಯುಟಿವ್ ಇಂಜಿನೀಯರ್‌ಗಳನ್ನು ಕೆ.ಆರ್.ಎಸ್. ಬಳಿ ಇಟ್ಟು ಅವರು ದಿನಾ ಸೂಪರ್‌ವೈಸ್ ಮಾಡಿ ರೆಕಾರ್ಡ್ ನೋಡುತ್ತಿದ್ದರು. ಈಗಲೂ ಇಟ್ಟಿದ್ದಾರೋ?

**K.N. Nage Gowda:** Even, today, they have got their own office.

ಹೆಚ್.ಎನ್. ನಂಜೇಗೌಡ: ಅದು ಬೇರೆ, ಅವರು ದಿನ ಬಂದು ಚೆಕ್ ಮಾಡುತ್ತಿದ್ದರು. ಆಗ ನಾವು ಒಂದು ಸ್ಟ್ಯಾಂಡ್ ತೆಗೆದುಕೊಂಡೆವು, ಲಿಮಿಟೆಡ್ ಫ್ಲೋ ತಪ್ಪು ಆಗಬಾರದೆಂದು ಹೇಳುತ್ತೀರಿ, ಲಿಮಿಟೆಡ್ ಫ್ಲೋ ತಪ್ಪಾಗುವುದಕ್ಕೆ ನಾವು ಕಾರಣವೇ? ನೀವು ಆಮೇಲೆ ಮೆಟ್ಟೂರ್ ಡ್ಯಾಮ್ ಕಟ್ಟಲಿಲ್ಲವೇ, ಭವಾನಿ ಡ್ಯಾಮ್ ಕಟ್ಟಲಿಲ್ಲವೇ? ಅಮರಾವತಿ ಡ್ಯಾಮ್ ಕಟ್ಟಲಿಲ್ಲವೇ? ನೋಯಲ್ ಡ್ಯಾಮ್ ಕಟ್ಟಲಿಲ್ಲವೇ? ಪುಲ್ಲಬಂಗಾಡಿ ಬೆಡ್ ರೆಗ್ಯುಲೇಟರ್ಸ್‌ನ್ನು ಅವರೇ ಹಾಕಿಕೊಳ್ಳಲಿಲ್ಲವೇ? ಎಲ್ಲಾ ಮಾಡಿದ ಮೇಲೆ ನಾವು ಏಕೆ ಬಿಡಬೇಕು? ಅವರ ವಾದ ಇದ್ದದ್ದು ಲಿಮಿಟೆಡ್ ಫ್ಲೋ ಮೇಲೆ. 1986ನೇ ಇಸವಿಯಲ್ಲಿ ಬರೆದ ಲೆಟರ್‌ನಲ್ಲೂ ಅದೇ ಇರುವುದು. ಅವರೇ ಮಾಡಿದ್ದಾರಲ್ಲಾ ಕಾರಣವ? ಆಗ ನಾವು ಬಿಡುವುದಿಲ್ಲವೆಂದು ಹೇಳಿದೆವು. ಆಮೇಲೆ ನಮ್ಮನ್ನು ಅವರು ರಾಜೀಗೆ ಕರೆದರು. 1972ರ ಮೇ 29, 30 ಎರಡು ದಿನ ಮಾತುಕತೆ ಆಯಿತು, ದೇವರಾಜ ಅರಸ್‌ರವರು, ಕರುಣಾನಿಧಿಯವರು ಅಚ್ಯುತಮೆನನ್‌ರವರು ಅದರಲ್ಲಿ ಭಾಗವಹಿಸಿದ್ದರು. ಇದೇ ಕರುಣಾನಿಧಿಯವರು ಇನ್ನೂ ಬದುಕಿದ್ದಾರೆ, ಒಂದು ರೀತಿ ಡೀನೋ ಕನ್ಸಿಡರೇಷನ್ ಅಂತೆ, ಅದು ಆವತ್ತು ಆಗಿ ಹಳೆಯದೆಲ್ಲಾ ಬಿಟ್ಟು ರಾಜೀ ಮಾಡಿಕೊಳ್ಳಬೇಕು, ಅದಕ್ಕೆ ಅನುಕೂಲವಾಗುವ ಹಾಗೆ ಫ್ಯಾಕ್ಟ್ ಫೈಂಡಿಂಗ್ ಕಮಿಟಿ ಮಾಡಬೇಕು ಎಂದು ಇವೆಲ್ಲಾ ಅವತ್ತು ಆಯಿತು. ಆದಾದ ಮೇಲೆ ಒಂದು ಹಂತ. 1947ನೇ ಇಸವಿ ಆಯಿತು, ಆಮೇಲೆ ಟ್ರಿಬ್ಯುನಲ್ ಬಂತು, ಅವತ್ತು ಯಾರ್‍ಯಾರು ಅಪರಾಧ ಮಾಡಿದ್ದಾರೋ ಅವರೆಲ್ಲಾ ಇವತ್ತು ಹುತಾತ್ಮರಾಗಿದ್ದಾರೆ. ವೀರೇಂದ್ರಪಾಟೀಲರ ಕಾಲಿಗೆ ಬಹಳ ಜನ ಅಡ್ಡ ಬೀಳಲಿಲ್ಲ. ಎಷ್ಟೆಲ್ಲಾ ಹೇಳಿದರು ಟ್ರಿಬ್ಯುನಲ್‌ಗೆ ಒಪ್ಪಿಕೊಳ್ಳಬೇಡಿ ಅದಕ್ಕೆ ನ್ಯಾಷನಲ್ ವಾಟರ್ ಪಾಲಿಸಿ ಮಾಡಲಿ ಎಂದು ಸ್ಟ್ಯಾಟುಟರಿ ಗೈಡ್‌ಲೈನ್ಸ್ ಇಲ್ಲದೇ ನೀರು ಹಂಚಿಕೆ ಮಾಡುವುದು ಅಂದರೆ, ನೀವು ಕುರುಡನ ಕೈಗೆ ದೊಣ್ಣೆಯನ್ನು ಕೊಟ್ಟ ಹಾಗೆ ಮಾಡಿದರೆ, ಆತನು ತಲೆಗೆ ಹೊಡೆಯಬಹುದು, ಕಣ್ಣಿಗೆ ಹೊಡೆಯಬಹುದು. ಮೈಗೆ ಹೊಡೆಯಬಹುದು. ಆದ್ದರಿಂದ ಒಂದು ಗೈಡ್‌ಲೈನ್ಸ್ ಬೇಕಾಗುತ್ತದೆ. ನ್ಯಾಶನಲ್ ವಾಟರ್‌ಪಾಲಿಸಿ ಮಾಡಿ, ಆಮೇಲೆ ಟ್ರಿಬ್ಯುನಲ್ ಮಾಡಿ ಎಂದು ಹೇಳಿದರು.

ಎಂ. ಮಲ್ಲಿಕಾರ್ಜುನ ಖರ್ಗೆ: ಇಷ್ಟು ಹೊತ್ತು ಹಿಂದಿನ ಸರ್ಕಾರಕ್ಕೆ ಬೈಯುವುದೇ ಆಯಿತು. ಈ ಸರ್ಕಾರಕ್ಕೆ ಯಾವಾಗ ಬೈಯುತ್ತೀರಿ, ಮುಗಿಸುತ್ತೇನೆ ಅಂತಿದ್ದೀರಿ.

ಎಚ್.ಎನ್. ನಂಜೇಗೌಡ: ಸ್ವಲ್ಪ ತಡೆಯಿರಿ, ನಮಗೆ ಕಷ್ಟ ಏನೂ ಎಂದರೆ ಖರ್ಗೆಯವರೇ, ಜೆ.ಹೆಚ್. ಪಟೇಲರು ಮುಖ್ಯಮಂತ್ರಿಗಳು, ಅವರ ಕಂಡರೆ ಪ್ರೀತಿ ನನಗೆ ಏಕೆ ಅಂತ ಕೇಳಬೇಕು ನೀವು? ಏಕೆಂದರೆ ಅವರಿಗೆ ಹಿಂದೊಂದು ಹೇಳಿ ಮುಂದೊಂದು ಹೇಳಿ ಅಭ್ಯಾಸ ಇಲ್ಲ. ನೇರವಾಗಿ ಮಾತನಾಡುತ್ತಾರೆ. ಚೀಟಿ ಕಳಿಸಿ ನೀವೆಲ್ಲ ಸಹಾಯ ಮಾಡುತ್ತೀರಿ ಅಂತ ನಂಬಿಕೊಂಡು ನೀರು ಬಿಟ್ಟರು. ದೇವೇಗೌಡರಾಗಿದ್ದರೆ ಅಷ್ಟು ಸುಲಭವಾಗಿ ನೀರು ಬಿಡುವವರೆ? ನಿಮ್ಮನ್ನೆಲ್ಲ ಕರೆದು ಕೂರಿಸಿ, ಕೊಳೆಹಾಕಿ ಸಧ್ಯ ಎದ್ದುಹೋದರೆ ಸಾಕಲ್ಲಪ್ಪ ಎನ್ನುವಷ್ಟು ಕೂರಿಸಿ, ಅಯ್ಯೋ ನಮ್ಮನ್ನು ಬಿಟ್ಟರೆ ಸಾಕು; ಏನಾದರೂ ಮಾಡಿಕೊಳ್ಳೋ ಮಾರಾಯಾ ಅಂತ ಅನಿಸಿಕೊಂಡು ಆಮೇಲೆ ನೀರು ಬಿಡೋರು.

ಎಂ. ಮಲ್ಲಿಕಾರ್ಜುನ ಖರ್ಗೆ: ನಾವೆಷ್ಟು ಹೇಳಿದರೂ ಅವರು ನೀರು ಬಿಡುತ್ತಿರಲಿಲ್ಲ ಕೊನೆಯಲ್ಲಿ ನಿಮ್ಮದೊಂದು ಶಬ್ದ ಅವರ ಕಿವಿಯಲ್ಲಿ ಬಿದ್ದರೇ ಅವರು ನೀರು ಬಿಡುತ್ತಿದ್ದರು.

ಎಚ್.ಎನ್. ನಂಜೇಗೌಡ: ಇವರನ್ನೂ ನಂಬಿ, ಏಕೆಂದರೆ ದುಉದ್ದೇಶ ಇಲ್ಲವಲ್ಲ.

ಕೆ.ಎಸ್. ಪುಟ್ಟಣ್ಣಯ್ಯ: ಪಟೇಲರು ನೀರು ಬಿಟ್ಟರು ಎನ್ನುತ್ತಾರೆ ಅಲ್ಲಿಂದ ಆದೇಶ ಕೊಟ್ಟವರು ಯಾರು?

ಜೆ.ಎಚ್. ಪಟೇಲ್: ನಿಜವಾದ ಮಾತು, ಯಾರೂ ಆದೇಶ ಕೊಡಲಿಲ್ಲ, ಇದರಿಂದ ರಾಜ್ಯದ ಹಿತಕ್ಕೆ ಧಕ್ಕೆಯಾಗುವುದಿಲ್ಲ ಆದಕ್ಕಾಗಿ ಹೇಳುತ್ತೇನೆ, 8ನೇ ತಾರೀಖು ಬೆಳಿಗ್ಗೆ 9 ಗಂಟೆಗೆ ನಾವೆಲ್ಲ ಸೇರಿದ್ದೆವು, ಆಗ ಎಲ್ಲರೂ ಒಪ್ಪಿದ್ದರು, ಈಗ ನಮ್ಮವರೇ ಪ್ರಧಾನಮಂತ್ರಿಯಾಗಿರುವ ಕಾರಣ ರಾಜ್ಯದ ಹಿತ ಕಾಯುವ ಅಧಿಕಾರ ಅವರಿಗೆ ವಹಿಸಿದ್ದೇವೆ, ನೀವು ಅವರ ಹತ್ತಿರ ಮಾತಾಡಿ ಅಂತ ಹೇಳಿದಿರಿ. ಆಮೇಲೆ ಸುಪ್ರೀಂ ಕೋರ್ಟ್‌ಗೆ ಅವರು ಅರ್ಜಿ ಹಾಕುತ್ತಿದ್ದಾರೆ. ಆದಕ್ಕೆ ಮುಂದೆ ಏನಾದರೂ ಪ್ರಯತ್ನಮಾಡಿ ಸಂಧಾನ ಏನಾದರೂ ಆಗುತ್ತದೇನೋ ಎಂದು ಬೇರೆಯವರು ನನ್ನ ಹತ್ತಿರ ಮಾತನಾಡಿದರು. ನನಗೆ ಅಲ್ಲಿಗೂ ಗೊತ್ತಿರಲಿಲ್ಲ. ನಾಲ್ಕೂವರೆಗಂಟೆ ಇರಬಹುದು, ನಾನು ಮನೆಯಿಂದ ಬರುತ್ತಾ ಇದ್ದೆ. ಆಗ ನನಗೆ ಮೆಸೇಜ್ ಬಂತು; ಅವರು ಸುಪ್ರೀಂಕೋರ್ಟಿಗೆ ಹೋಗುತ್ತಾರೆ, ಆದರೆ 5 ಟಿಎಂಸಿ ನೀರು ನಾವು ಬಿಡುವುದು ಸೂಕ್ತ ಅಂತ ಒಬ್ಬರು ಹೇಳಿದರು.

(ಗೊಂದಲ)

ಲಾಯರ್ ಹತ್ತಿರ ಮಾತಾಡಿ ಬೊಮ್ಮಾಯಿಯವರು ನನಗೆ ಹೇಳಿದರು, ಇದರಲ್ಲಿ ಸೀಕ್ರೆಟ್ಟಿಲ್ಲ, ಆದೇನು ದೊಡ್ಡ ಕ್ರೈಮಾ? In the interest of the State. ಆಮೇಲೆ ವಾಟರ್ ಪೊಜಿಶನ್ ಹೇಗಿದೆ? ಅವರು 15 ಟಿಎಂಸಿ ಕೇಳಿದರೆ ನಾವು ಕೊಡುವುದಕ್ಕಾಗುವುದಿಲ್ಲ. 40 ಕೇಳಿದರಂತೂ ನೀರೇ ಇಲ್ಲ, 5 ಆದರೆ ಏನು ಮಾಡಬಹುದು ಅಂತ ನಾನು ಬಂದು we have decided to release 5 TMC of water ಎಂದು ಯಡಿಯೂರಪ್ಪನವರಿಗೆ ಒಂದು ಚೀಟಿ ಕಳಿಸಿದೆ, ಖರ್ಗೆಯವರಿಗೊಂದು ಚೀಟಿ ಕಳಿಸಿದೆ. I did not want to keep it as a secret. ನೀವಿದ್ದಿದ್ದರೆ ನಿಮಗೂ ಹೇಳೇ ಹೇಳುತ್ತಿದ್ದೆ.

ಎಂ. ಶ್ರೀನಿವಾಸ್: ನಾವು ವಿರೋಧಪಕ್ಷದವರಿಗೆ ಹೇಳಿ ನೀರು ಬಿಟ್ಟಿದ್ದೇವೆಂದು ಹೇಳಿರುವುದು ಪತ್ರಿಕೆಯಲ್ಲಿ ಬಂದಿದೆ, ನಾವು ಒಪ್ಪಲಿಲ್ಲವಲ್ಲ.

ಎಂ. ಮಲ್ಲಿಕಾರ್ಜುನ ಖರ್ಗೆ: ಬೊಮ್ಮಾಯಿಯವರು ಮಾಹಿತಿ ಕೊಟ್ಟರು ಅದಕ್ಕೆ ನಾನು ನೀರು ಬಿಟ್ಟೆ ಅಂತ ಮುಖ್ಯಮಂತ್ರಿಗಳು ಹೇಳುತ್ತಾರೆ; ಅದು ಬಂದಿರಬಹುದು, ಸುಪ್ರೀಂಕೋರ್ಟ್ ಮುಂದೆ ಅವರು ಪಿಟಿಶನ್ ಹಾಕಿದ್ದಾರೆ, ಅದಕ್ಕೇನು ಮಾಡಬೇಕು ಎಂದು ತಿಳಿದುಕೊಂಡು ಅವರು ಸಲಹೆ ಕೊಟ್ಟಿರಬಹುದು. ಇದಲ್ಲದೇ ಮದರಾಸಿನಿಂದಲೂ ಇವರಿಗೆ

ಫೋನ್ ಬಂತು. ನಿಮಗೆ ದಿಲ್ಲಿಯಿಂದ ಬಂತು, ಇಲ್ಲಾಂತ ಹೇಳಬೇಡಿ. ಇವರೂ ಸ್ವಲ್ಪ ಮಾತನಾಡಿದ್ದಾರೆ. ಅದನ್ನು ಪೂರ್ತಿ ಇಲ್ಲಿ ನಾನು ಹೇಳುವುದಿಲ್ಲ.

ಎಚ್.ಎನ್. ನಂಜೇಗೌಡ: ಇದೇನು ಹೋಗಿ ನನ್ನ ಬುಡಕ್ಕೆ ಕೈಹಾಕುತ್ತಿದ್ದೀರಲ್ಲ, ನಾನು ಏನು ಹೇಳುವುದಕ್ಕೆ ಹೊರಟೆ ಅಂದರೆ ಜೆ.ಎಚ್. ಪಟೇಲರಿಗೆ ಸುದುದ್ದೇಶದ ಅಭಾವ ಇಲ್ಲ. That is all what I wanted to tell. ಅದರಲ್ಲಿ ಎಡವುತ್ತಾರೆ, ಆಗಲೇ ಎಡವಿಬಿಟ್ಟರು, ಎಡವುದಿಲ್ಲ ಅಂತಲೂ ನಾನು ಹೇಳುವುದಿಲ್ಲ. ನಾವು ಒಂದು ತೊಟ್ಟು ನೀರು ಬಿಡುವುದಿಲ್ಲ ಅಂದರು, ಟ್ರಿಬ್ಯುನಲ್‌ನಲ್ಲಿ ಭಾಗವಹಿಸುತ್ತೇನೆ ಅಂದರು, ಉಪಮುಖ್ಯಮಂತ್ರಿಗಳು ನಾವು ಭಾಗವಹಿಸುವುದಿಲ್ಲ ಬಹಿಷ್ಕಾರ ಹಾಕುತ್ತೇವೆ ಅಂದರು, ಆ ಕಾಂಟ್ರವರ್ಸಿಗಳನ್ನು ನಾವು ಏತಕ್ಕೆ ತೆಗೆದುಕೊಳ್ಳೋಣ. ಅದು ಬೇಡ. ನಾವು ಒಂದನ್ನು ತಮಿಳುನಾಡಿಗೆ ಅರ್ಥ ಮಾಡಿಸಬೇಕಾಗಿದೆ. ಕೇಂದ್ರ ಸರ್ಕಾರಕ್ಕೂ ಅರ್ಥ ಮಾಡಿಸಬೇಕಾಗುತ್ತದೆ. ನಮ್ಮ ರಾಜ್ಯಕ್ಕೆ ಮಾರಕವಾಗುವ ತೀರ್ಮಾನ ಯಾರೇ ಕೊಡಲಿ ನಾವು ಅನುಷ್ಠಾನಕ್ಕೆ ತರುವುದಿಲ್ಲ. ಏಕೆ ತರಬೇಕು, ಇಲ್ಲ ಎಂದರೆ ಪಾಲಿಸಿ ಗೈಡ್‌ಲೈನ್ಸ್ ಮಾಡಲಿ.

ಆದರಿಂದ ನಮಗೆ ಅನುಕೂಲವಾಗುತ್ತದೆಯೋ, ಅನಾನುಕೂಲವಾಗುತ್ತದೆಯೋ, ಆ ಮಾತು ಬೇರೆ. ಅನುಕೂಲವಾದರೂ ಸಂತೋಷ ಅನಾನುಕೂಲವಾದರೂ ಸಂತೋಷ ಪಡಬೇಕಾಗುತ್ತದೆ. Because, there will be set statutory guidelines. A statutory guidelines for sharing of inter-state waters should be formulated and you are a Member of the National Resources Commission. ನೀವೇ ಇನ್‌ಷಿಯೇಟೀವ್ ತೆಗೆದುಕೊಂಡು ಬೇಗ ಮಾಡತಕ್ಕಂತಹ ದಿಸೆಯಲ್ಲಿ ಪ್ರಯತ್ನ ಪಡಬೇಕೆಂದು ನಾನು ಒತ್ತಾಯ ಪೂರ್ವಕವಾಗಿ ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ. ಇದು ಆಗಲೇಬೇಕು. ಅಲ್ಲಿಯವರೆಗೆ ನಿಮ್ಮ ಸ್ಟ್ಯಾಂಡ್ ಏನು ಎಂದು ನನಗೆ ಅರ್ಥವಾಗಿಲ್ಲ. ಮಾನ್ಯ ಖರ್ಗೆಯವರೇ, ಸರಕಾರದ ಸ್ಟ್ಯಾಂಡ್ ಏನೆಂದು ಅರ್ಥವಾಗಿದೆಯೇ? ಸರಕಾರದ ಸ್ಟ್ಯಾಂಡ್ ಏನು ಎಂದು ಎನ್ನುವುದಕ್ಕೆ ಇನ್ನೂ ನಮಗೆ ಕನ್‌ಫ್ಯೂಷನ್ನೇ. ಬಂಗಾರಪ್ಪನವರಿದ್ದಾಗ ಮಾತ್ರ ಕನ್‌ಫ್ಯೂಷನ್ ಇರಲಿಲ್ಲ. Let us be frank. ಅವರಿದ್ದಾಗ ಖಚಿತವಾಗಿತ್ತು ನಿಲುವು. ಮೊಯಿಲಿಯವರು ಬಂದಾಗ ಕನ್‌ಫ್ಯೂಷನ್ನೇ. ಸಾಧ್ಯವಾದರೆ ಅವರು ಈಗಲೂ ಕನ್‌ಫ್ಯೂಸ್ ಮಾಡುತ್ತಾರೆ. ಪ್ರಶ್ನೆ ಬೇರೆ.

ಎಂ. ಮಲ್ಲಿಕಾರ್ಜುನ ಖರ್ಗೆ: ಮುಂದೆ ಹೋಗಿ ಅಂದರೆ ಹಿಂದೆ ಬರುತ್ತೀರಿ. ಈಗೇನು ತಪ್ಪು ಮಾಡಿದ್ದಾರೆ ಅದಕ್ಕೆ ಸಲ್ಯೂಷನ್ ಏನು ಇದೆ ಅದರ ಮೇಲೆ ಮಾತನಾಡುವುದು ಬಿಟ್ಟು ತಿರುಗಿ ಮುರುಗಿ ಹಿಂದೆ ಮುಂದೆ ಬರುತ್ತಾರೆ.

ಜೆ.ಹೆಚ್. ಪಟೇಲ್: ಬಹು ಸೂಕ್ಷ್ಮವಾದ ಮಾತುಗಳನ್ನು ಮೊದಲು ಹೇಳಿದಿರಿ. ನಾವು ಒಂದು ರಾಷ್ಟ್ರದಲ್ಲಿ ಬದುಕಬೇಕು. ನೀರಿನ ಮೇಲು ಭಾಗದವರು ನೀರಿನ ಕೆಳಭಾಗದವರು

ಇವರು ಹಠ ಮಾಡುವುದು ಬೇಡ ಅವರೂ ಹಠ ಮಾಡುವುದಕ್ಕಾಗುವುದಿಲ್ಲ. ಈ ಹಿಂದೆ ಜಯಲಲಿತಾ ಅವರ ಮುಖವನ್ನು ಬಂಗಾರಪ್ಪನವರು ನೋಡಿದರೋ ಬಿಟ್ಟರೋ, ಅಂತೂ ಆಗ ರಾಜ್ಯಗಳ ಮಧ್ಯೆ ಒಂದು ರೀತಿ ವಿರಸ ಇತ್ತು, ಬರೀ ಸರಕಾರಗಳ ಮಧ್ಯೆ ಅಲ್ಲ. ಆಗ ವಿರಸ ಆಗಿದ್ದಂತಹ ದೆಹಲಿಯ ರಾಜಕೀಯ ಪರಿಸ್ಥಿತಿ ಈಗ ಇಲ್ಲ. ಇದನ್ನು ನಾವೆಲ್ಲರೂ ಗಮನಿಸಬೇಕು. ಟ್ರಿಬ್ಯುನಲ್ ಅನ್ನು ಬಾಯ್‌ಕಾಟ್ ಮಾಡುತ್ತೇವೆಂದು ಯಾವಾಗಲೂ ಯಾರೂ ಹೇಳಿಲ್ಲ. ಟ್ರಿಬ್ಯುನಲ್‌ಗೆ ಹೋಗಬೇಕೆಂದು ವಕೀಲರ ಅಡ್ವೈಸ್. ಟ್ರಿಬ್ಯುನಲ್ ಬಾಯ್‌ಕಾಟ್ ಮಾಡಿದರೆ ಅಥವಾ ಇವತ್ತು ನಾವು ಹೋಗಿ ನಮ್ಮ ಎವಿಡೆನ್ಸ್ ಕೊಡದಿದ್ದರೆ, ultimately it may be damage legally.

ಒಂದು ಸಲ ಜಡ್ಜ್‌ಮೆಂಟ್ ಬಂದ ಮೇಲೆ ಮತ್ತೆ ರಿಪೇರಿ ಮಾಡುವುದಕ್ಕಾಗುವುದಿಲ್ಲವೆಂದು ಲೀಗಲ್ ಒಪೀನಿಯನ್ ಕೊಟ್ಟರು: ಅದು ನಿಮಗೂ ಗೊತ್ತಿದೆ. ಅದಕ್ಕೋಸ್ಕರ ನಾನು ಹೇಳಿದೆ. We may not boycot it. ಟ್ರಿಬ್ಯುನಲ್ ಬಾಯ್‌ಕಾಟ್ ಮಾಡುತ್ತೇನೆಂದು ಅಲ್ಲ. ಟ್ರಿಬ್ಯುನಲ್‌ಗೆ ಹೋಗಿ ನೀವು ಇಂತಿಂಥಾದ್ದು ಮಾಡುವುದಾದರೆ, ಮಾಡಿ ಮಾಡದಿದ್ದರೆ ನಮ್ಮ ದಾರಿ ಬೇರೆ ಎಂದು ಹೇಳುವುದಕ್ಕಾದರೂ ಹೋಗಬೇಕಲ್ಲ. ಆ ಕಾರಣದಿಂದ ಟ್ರಿಬ್ಯುನಲ್ ಬಾಯ್‌ಕಾಟ್ ಮಾಡುವುದಿಲ್ಲವೆಂದು ಹೇಳಿದೆ.

In other words ಟ್ರಿಬ್ಯುನಲ್‌ನಲ್ಲಿ ನಮ್ಮ ಮುಂದಿನ ವ್ಯವಹಾರಗಳು ಮುಂದಿನ ಹೆಜ್ಜೆ ಮೇಲೆ ಹೋಗುತ್ತದೆ. ಅಡ್ಜರ್ನ್‌ಮೆಂಟ್ ಕೇಳಬೇಕು ಎಂದು ಮೊದಲು ಹೇಳಿದರು. ಅಡ್ಜರ್ನ್‌ಮೆಂಟ್ ಕೇಳುವುದಕ್ಕಾದರೂ ಹೋಗಬೇಕಲ್ಲ. ಅಡ್ಜರ್ನ್‌ಮೆಂಟ್ ಕೊಡಿ ಎಂದು ಟ್ರಿಬ್ಯುನಲ್‌ಗೆ ಯಾರಾದರೂ ಬರೆಯುವುದಕ್ಕಾಗುತ್ತದೆಯೇ?

ಮೊನ್ನೆ ತಾವು ಹೇಳಿದಿರಿ. ಅದು ಎಗ್ಸಿಸ್‌ಟೆನ್ಸ್‌ನಲ್ಲಿ ಲೀಗಲೀ ಇಲ್ಲ, ಆದರೂ ನಾವು ಅರ್ಜಿ ಹಾಕಿದ್ದೆವು. ಹಾಕದೆ ಡಿಫಾಲ್ಟರ್ ಆಗಬಾರದು. ಅವರೇನು ಮಾಡುತ್ತಾರೆ ಬಿಡುತ್ತಾರೆ ಅದು ಬೇರೆ. ನಮ್ಮ ಅರ್ಜಿ ಅವನು ಸತ್ತಿದ್ದಾನೆಂದಾದರೂ ಸತ್ತಿದ್ದಾನೆಂದು ಖಾಯಂ ಆಗುತ್ತದೆ.

ಇಲ್ಲಿ ಸದನದಲ್ಲಿ ಒಂದು ಅತ್ಯಂತ ಒಳ್ಳೆಯ ಮಾತನ್ನು ಅಂದರೆ ನಾವ್ಯಾರೂ ಇದನ್ನು ರಾಜಕೀಯ ಲಾಭ ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡಬಾರದು ಎಂದು ಹೇಳಿದಿರಿ. ಯಾವ ಪಾರ್ಟಿ ಎಂದು ಅಲ್ಲ. ರಾಜ್ಯದ ಹಿತ ಇದು. ಪ್ರತಿಯೊಬ್ಬ ಕಾವೇರಿ ರೈತ, ಇಲ್ಲಿರುವವರಿಗೂ ತಮಿಳುನಾಡಿನಲ್ಲಿರುವವರಿಗೂ ಅದು ಆಯಿತು. ಅಷ್ಟು ವಿಶಾಲವಾಗಿ ನಾವು ಆಲೋಚನೆ ಮಾಡಿದಂತೆ ತಮಿಳುನಾಡಿನವರೂ ಆಲೋಚನೆ ಮಾಡಬೇಕು. ಮಾಡದಿದ್ದರೆ ಅಲ್ಲಿ ಹಾಗೆ ನಾನು ಆಲೋಚನೆ ಮಾಡಿದ ಕೂಡಲೇ ನನಗೇನೋ ಸಂಚಕಾರ ಬರುತ್ತದೆಂದು ನಾನು ಮಾಡಿಯೇ ಮಾಡುತ್ತೇನೆ, ನಾನು ನಂಜೇಗೌಡರ ತಲೆ ತೆಗೆಯುತ್ತೇನೆಂದು ಆತ ಹೇಳಿದರೆ ಆತನ ಕೈಯ್ಯಲ್ಲೂ ಆಗುವುದಿಲ್ಲ. ಇಲ್ಲವೇ ಇಲ್ಲಿ ನಾನು ಬೇಕಾದ್ದು ಆಗಲಿ ಹೆಣ ಬಿದ್ದು ಹೋಗಲಿ, ಜನ ಲೂಟಿಯಾದರು ಚಿಂತೆ ಇಲ್ಲ ನಾನು ಸರಕಾರ ನಡೆಸೇ ನಡೆಸುತ್ತೇನೆ ತಮಿಳುನಾಡಿನವರನ್ನು ನೋಡಿಕೊಂಡೇ ಬಿಡುತ್ತೇನೆಂದು ತೋಳು ಮುದುರಿದರೆ ಅದು ಶೌರ್ಯ ಅಲ್ಲ.

ಸಮಸ್ಯೆಯನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಂಡು ಇವತ್ತಿನ ಬದಲಾದ ಪರಿಸ್ಥಿತಿಯಲ್ಲಿ ದೆಹಲಿಯಲ್ಲಿ ನಮ್ಮ ಪ್ರಧಾನಿಯಿರುವಾಗ 4 ರಾಜ್ಯಗಳೂ ಒಮ್ಮತದಿಂದ ಅವರನ್ನು ಬೆಂಬಲಿಸಿರುವಾಗ ಈಗ ಅದನ್ನು ಬಗೆಹರಿಸಿಕೊಳ್ಳುವುದಕ್ಕೆ ಒಂದು ಇತಿಹಾಸದಲ್ಲಿ ಅವಕಾಶ ಇದೆ ಎನ್ನುವುದು ಮಾತ್ರ ನನ್ನ ತಲೆಯಲ್ಲಿ ಇತ್ತೇ ಹೊರತು ಬೇರೇನೂ ಇಲ್ಲ.

ಮಾನ್ಯ ಮೊಯಿಲಿಯವರದ್ದು ಒಂದು ಪಾಯಿಂಟ್. ಅವರದ್ದು ಡಿಬೇಟಿಗೆ ಒಂದು ಪಾಯಿಂಟ್. But he never won the battle. ನಾನು ಹಾಗೆ ಹೇಳಿರಲಿಲ್ಲ ಶನಿವಾರ ಮಧ್ಯಾಹ್ನ ಹೀಗೆ ಹೇಳಿದ್ದೆ ಭಾನುವಾರ ಬೆಳಿಗ್ಗೆ ಹಾಗೆ ಹೇಳಿದ್ದೆ. ಅದು ಅಲ್ಲ. I entirely agree with you, we all of us, the whole House ನಾವು ಒಂದು ಸಾರಿ ಸದನದಲ್ಲಿ ಹೇಳಿದ್ದೆವು ಸಂಪೂರ್ಣ ಬಾಯ್‌ಕಾಟ್ ಮಾಡಬೇಕೆಂದು ವಿಧಾನಪರಿಷತ್ತಿನಲ್ಲಿ ಹೇಳಿದ್ದೆವು. ಆ ಸಮಯದಲ್ಲಿ ಆಗಿದ್ದ ಅಸೆಂಬ್ಲಿ ಆಗಿದ್ದ ಕೌನ್ಸಿಲ್‌ಗಳ ಸ್ಥಿತಿ ಆಗ ತೀರ್ಮಾನ ತೆಗೆದುಕೊಂಡಿದ್ದುದು ಯುಕ್ತವಾಗಿತ್ತು. ಸಕಾಲಿಕವಾಗಿತ್ತು. ಈಗ ಮತ್ತೆ ಸದನ ಈಗಿರತಕ್ಕಂತಹ ಸ್ಥಿತಿ ನಾವು ಪಾರ್ಟಿಯನ್ನು ತೆಗೆದುಕೊಳ್ಳವುದು ಬೇಡ.

ನಿಮ್ಮ ಖರ್ಚಿಯನ್ನು ಗಟ್ಟಿ ಮಾಡಿಕೊಳ್ಳುವುದಕ್ಕೆ ಈ ರೀತಿ ಮಾತನಾಡಿದರೆ it looses the sanctity of the discussion itself. I really appreciate your stand. ಅದೇ ರೀತಿ ಸದನದಲ್ಲಿ ಆ ನಿಲುವು ತೆಗೆದುಕೊಂಡರೆ ನಾವು ಇಲ್ಲಿ ಚರ್ಚೆ ಮಾಡಿಕೊಂಡೇ ಹೇಳಿಬಿಡಬಹುದು ಏನು ಮಾಡುತ್ತೇವೆ, ಏನು ಬಿಡುತ್ತೇವೆಂದು ಇಲ್ಲಿಯೇ ಹೇಳಬಹುದು.

ಕೆ.ಎಸ್. ಪುಟ್ಟಣ್ಣಯ್ಯ: ರಾಷ್ಟ್ರೀಯ ಜಲ ನೀತಿ ರೂಪಿಸುವವರೆಗೆ ರಾಜ್ಯದ ಪೂರ್ಣ ಬೆಳೆ, ರಾಜ್ಯದ ಜಲವೆಲ್ಲಾ ಬತ್ತಿ ಹೋಗಿರುತ್ತದೆ. ಆದ್ದರಿಂದ ದಯವಿಟ್ಟು ಪೂರ್ಣವಾಗಿ ಏನನ್ನು ಮಾತನಾಡುತ್ತೇವೆ ಅದನ್ನು ಅನುಷ್ಠಾನಕ್ಕೆ ತರಬೇಕು.

ಇರಬಹುದು, ನಾವು ಒಪ್ಪಿಕೊಳ್ಳುತ್ತೇವೆ. ನಮ್ಮ ರಾಜ್ಯದವರೇ, ಪ್ರಧಾನಮಂತ್ರಿಯಾಗಿ ಇವತ್ತಿನ ಪರಿಸ್ಥಿತಿಯಲ್ಲಿ ಮಾತುಕತೆಗೆ ಉತ್ತಮವಾದಂತಹ ವಾತಾವರಣವನ್ನು ಸೃಷ್ಟಿ ಮಾಡತಕ್ಕಂಥಹ ವ್ಯವಸ್ಥೆ ಇದೆ. ಪ್ರಯತ್ನ ಪಟ್ಟರೆ, ಆದರೆ ಪ್ರಯತ್ನ ಪಟ್ಟಿಲ್ಲ. ಆದರೆ ಇನ್ನೂ ಅಪಾಯವಿದೆ ಈಗ ಎಷ್ಟು ಒಳ್ಳೆಯ ಕಾಲ ಇದೆಯೋ ಅಷ್ಟೆ ಅಪಾಯ ಕಾಲಾನೂ ಇದೆ. ಏಕೆಂದರೆ ಈ ಐದು ಟಿಎಂಸಿ ನೀರು ಬಿಟ್ಟಿರುವುದು ನೋಡಿದರೆ, ಅಲ್ಲಿ ಯಾರೋ ಚುಚ್ಚುತ್ತಾರೆ, ಅಲ್ಲಿಂದ ಇಲ್ಲಿಗೆ ಚುಚ್ಚುತ್ತಾರೆ, ಇಲ್ಲಿಂದ ಅಲ್ಲಿಗೆ ಚುಚ್ಚುತ್ತಾರೆ. ಸುತ್ತಮುತ್ತ ಚುಚ್ಚಾಟದಿಂದ ನಾವು ರೈತರು ಬಹಳ ಅನಾನುಕೂಲ ಪರಿಸ್ಥಿತಿಯನ್ನು ಅನುಭವಿಸತಕ್ಕ ಸ್ಥಿತಿಗೆ ಬಂದಿದ್ದೇವೆ. ಏಕೆಂದರೆ ನಾವು ಬಹಳ ಗಂಭೀರವಾಗಿ ಯೋಚನೆ ಮಾಡಬೇಕು.

11.2 ಲಕ್ಷ ಎಕರೆ ನೀರನ್ನು ನಾವು ಉಪಯೋಗಿಸಿಕೊಳ್ಳುತ್ತಿದ್ದೆವು. ಆದರೆ ನಮ್ಮ ಕಾವೇರಿ ಜಲಾನಯನ ಪ್ರದೇಶದ ನೀರು ಹರಿಯತಕ್ಕ ಜಾಗ 67 ಪರ್ಸೆಂಟ್. ನಾವು ಉಪಯೋಗಿಸುತ್ತಿರುವುದು 11.2 ಲಕ್ಷ ಎಕರೆಗೆ ಮಾತ್ರ. ಅದರಲ್ಲೂ ಅರೆ ಖುಷ್ಕಿ ಬೆಳೆ,

ಪೂರ್ಣ ನೀರಾವರಿ ಇಲ್ಲ. ಆದರೆ ತಮಿಳುನಾಡಿನಲ್ಲಿ 33 ಪರ್ಸೆಂಟ್ ಕಾವೇರಿ ನೀರು ಹರಿಯುತ್ತಿರುವುದು 28 ಲಕ್ಷ ಎಕರೆಗೆ ನೀರಾವರಿ ಮಾಡತಕ್ಕ ವ್ಯವಸ್ಥೆ ಇದೆ. ಆದ್ದರಿಂದ ಮೇಲ್ದಂಡೆ ಹಾಗೂ ಕೆಳದಂಡೆ ರಾಜ್ಯಗಳಲ್ಲಿ ಏಕೆಂದರೆ ಮೇಲ್ದಂಡೆಯಲ್ಲಿ ಒಂದು ಟಿಎಂಸಿ ನೀರು ಇದ್ದರೆ ಯಾವಾಗಲಾದರೂ ಕೆಳದಂಡೆಯಲ್ಲಿ ಬಿಡಬಹುದು. ಆದರೆ ಕೆಳದಂಡೆಯಿಂದ ಒಂದು ಟಿಎಂಸಿ ನೀರನ್ನೂ ಮೇಲ್ದಂಡೆಗೆ ತರುವುದಕ್ಕೆ ಸಾಧ್ಯ ಇಲ್ಲ.

ಆದ್ದರಿಂದ ದಯವಿಟ್ಟು ಬಹಳ ಗಂಭೀರವಾಗಿ ಸರ್ಕಾರ ಯೋಚನೆ ಮಾಡಬೇಕು. ಇವತ್ತು ಆಗಲೇ ಮಂಡ್ಯ ಜಿಲ್ಲೆಯಲ್ಲಿ ಚಳುವಳಿ ಶುರು ಆಗಿದೆ. ಆದರೆ ಮೈಸೂರು ಜಿಲ್ಲೆಯಲ್ಲಿ ಕಬಿನಿ, ಹಾರಂಗಿಯಲ್ಲಿ ಅದು ಏಕೆ ಎಂದು ನನಗೆ ಗೊತ್ತಿಲ್ಲ. ಅವರೇನು ಅನಾಥ ಮಕ್ಕಳೋ ಏನೋ ಗೊತ್ತಿಲ್ಲ. ಮಾತೆತ್ತಿದರೆ, ಬಹಳ ಸುಲಭವಾಗಿ ಗೇಟ್ ಎತ್ತಿ ನೀರು ಬಿಡುತ್ತಾರೆ.

**ಕಾಗೋಡು ತಿಮ್ಮಪ್ಪ (ಸಾಗರ):** ಮಾನ್ಯ ಅಧ್ಯಕ್ಷರೆ, ಈಗ ನಮಗೆ ಏನೋ ಒಂದು ಆಸೆ ಹುಟ್ಟಿದೆ. ಈ ಕಾವೇರಿ ನದಿಯನ್ನು ಯಾರು ಈಜಿದರೋ ಮತ್ತು ಆ ಸುಳಿಯಲ್ಲಿ ಯಾರು ತೇಲಿ ಬಂದರೋ ಅವರೇ ಈ ದೇಶದ ಪ್ರಧಾನಮಂತ್ರಿಗಳಾದ ನಂತರ ಕಾವೇರಿ ಜಲ ವಿವಾದದ ಸಮಸ್ಯೆ ಬಹಳ ಸುಲಭವಾಗಿ ಬಗೆಹರಿಯುತ್ತದೆಂಬ ಆಸೆ ಸ್ವಲ್ಪ ಮರುಕಳಿಸಿದೆ. ಆದರೆ, ಮೊನ್ನೆ ತಮಿಳುನಾಡಿಗೆ ಐದು ಟಿಎಂಸಿ ಯಷ್ಟು ನೀರನ್ನು ಬಿಡುಗಡೆ ಮಾಡಿದಂಥ ಸನ್ನಿವೇಶ ಮತ್ತು ವಿಧಾನಗಳೇನಿವೆ, ಇದು ನಮ್ಮ ಕರ್ನಾಟಕಕ್ಕೆ ಮತ್ತೆ ಸಂಕಟ ತರತಕ್ಕಂಥ ಒಂದು ದೃಷ್ಟಾಂತವಾಗಿದೆಯೆನ್ನುವ ಮಾತನ್ನು ಹೇಳುತ್ತೇನೆ.

ರಾಜ್ಯದ ವಿಚಾರದಲ್ಲಿ ಬೊಮ್ಮಾಯಿಯವರು ಮತ್ತು ನೀವು ಸ್ನೇಹ ಸಂಬಂಧದಿಂದ ನಡೆದುಕೊಳ್ಳುವುದಕ್ಕೆ ಇವೊತ್ತು ನೀವು ಕೇವಲ ಪಟೇಲರಲ್ಲ. ಈ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದೀರಿ. ಸ್ನೇಹ ಬೇರೆ ಇರುತ್ತದೆ. ಒಂದೇ ಪಕ್ಷದಲ್ಲಿರಬಹುದು. ಆದರೆ, ಇಡೀ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸುತ್ತಿರುವ ನೀವು ಇಂತಹ ಸಂದರ್ಭ ಸನ್ನಿವೇಶ ಬಂದಾಗ ಗಡಸು ಧ್ವನಿ ಎತ್ತಿದ್ದರೆ ಬಹುಶಃ ಇಷ್ಟೊಂದು ಸುಲಭವಾಗಿ ತೀರ್ಮಾನ ಮಾಡುತ್ತಿರಲಿಲ್ಲ. ನಮ್ಮಲ್ಲಿ ಬೇಕಾದಷ್ಟು ನೀರು ಇತ್ತೆಂದು ಹೇಳಿದರು. ಇದೇ ರೀತಿ ನಾವು ಬಹಳ ಸಲ ಹೇಳುತ್ತಲೇ ಬಂದಿದೇವೆ. ಇದನ್ನೆಲ್ಲಾ ನಾವು ಬಿಚ್ಚಿ ಹೇಳಬೇಕೇ? ಬಿಚ್ಚಿಹೇಳಲಿಲ್ಲ. ನಾವು ನ್ಯಾಯಾಲಯಗಳ, ಕೇಂದ್ರ ಸರ್ಕಾರದ ಮುಂದೆ ಇಟ್ಟಂಥ ವಾದ-ವಿವಾದಗಳ ದೃಷ್ಟಿಯಿಂದ ಅನೇಕ ವಿಷಯಗಳನ್ನು ಬಹಿರಂಗಪಡಿಸಲಿಲ್ಲ. ಇತ್ತ ಕಡೆ ಇರುವ ನಾವು ಕೂಡ ಬಹಿರಂಗಪಡಿಸಲಿಲ್ಲ. ನೀವು ಕೂಡ ಬಹಿರಂಗಪಡಿಸಲಿಲ್ಲ. ಇದು ದಿವಂಗತ ಚನ್ನಬಸಪ್ಪನವರ ಕಾಲದಿಂದಲೂ ಇದೆ. ಅಲ್ಲದೆ, ದಿವಂಗತ ದೇವರಾಜ ಅರಸು ಮತ್ತು ಈಗಿನ ಮಾನ್ಯ ದೇವೇಗೌಡರ ಸರ್ಕಾರದ ಕಾಲದಿಂದಲೂ ಎಲ್ಲರೂ ಕೂಡ ಇದನ್ನು ಒಂದು ವಿಧಿ-ವಿಧಾನದ ರೂಪದಲ್ಲಿ ಅನುಸರಿಸಿಕೊಂಡು ಬಂದಿದ್ದಾರೆ. ಶ್ರೀಮಾನ್ ನಂಜೇಗೌಡರು ಹೇಳಿದಂತೆ, ಇದು 1924ನೇ ಇಸವಿಗಿಂತಲೂ ಮುಂಚಿನಿಂದ ಕರ್ನಾಟಕಕ್ಕೆ ಸಂಕಟಗಳು ಬಂದ ಕಾಲಕ್ಕೆ ನಾವು ನೀರನ್ನು ಬಳಸಿಕೊಳ್ಳುವುದಕ್ಕಾಗುವುದಿಲ್ಲ. ಬಳಸಿಕೊಳ್ಳುವುದಕ್ಕಾಗದಿದ್ದರೆ ಈ ಕಾಲ ತಳ್ಳಬೇಕು. ಏಕೆಂದರೆ, ಇವೊತ್ತಿನವರೆಗೂ ಕಾವೇರಿ

ಜಲಾನಯನ ಪ್ರದೇಶದ ಯೋಜನೆಗಳಿಗೆ ಕೇಂದ್ರ ಸರ್ಕಾರದವರು ಅನುಮತಿ ಕೊಟ್ಟಿದ್ದಾರೆಯೇ? ಇಲ್ಲ. ಯೋಜನೇತರ ಹಣದಲ್ಲಿಯೇ ಇವೊತ್ತು ರಾಜ್ಯದಲ್ಲಿ ಅಣೆಕಟ್ಟುಗಳನ್ನು ಕಟ್ಟಿದ್ದು, ಎಲ್ಲಾ ಯೋಜನೆಗಳನ್ನು ನಿರ್ಮಿಸಿ ರಾಜ್ಯದ ಜನತೆಗೆ ನೀರಿನ ಸೌಲಭ್ಯ ಕೊಡುವ ಕೆಲಸ ಮಾಡಿದ್ದೇವೆ. ಇದರಿಂದ ರಾಜ್ಯದ ಬೇರೆ ಅಭಿವೃದ್ಧಿ ಕೆಲಸ-ಕಾರ್ಯಗಳಿಗೇನೂ ಹೊಡೆತ ಬೀಳಲಿಲ್ಲ.

ಜೆ.ಹೆಚ್. ಪಟೇಲ್: ಮಾನ್ಯ ಅಧ್ಯಕ್ಷರೇ, ಬೊಮ್ಮಾಯಿಯವರ ಸ್ನೇಹಕ್ಕಾಗಿ ನೀರುಬಿಟ್ಟರೆಂದು ದಯವಿಟ್ಟು ತಪ್ಪು ಅರ್ಥಬರುವಂತೆ ಮಾಡಬೇಡಿ. ಬೊಮ್ಮಾಯಿಯವರು ನಮ್ಮ ವಕೀಲರೊಡನೆ ಮಾತನಾಡಿ ಈ ಸಲಹೆ ಕೊಟ್ಟರು, ಆ ರೀತಿ ಕೊಟ್ಟ ಸಲಹೆ ಸರಿಯೆಂದು ಇವತ್ತು ಸುಪ್ರೀಂಕೋರ್ಟ್ ನೀಡಿರತಕ್ಕ ತೀರ್ಪಿನಿಂದ ಗೊತ್ತಾಗುತ್ತದೆ. ಸುಪ್ರೀಂ ಕೋರ್ಟ್‌ನಿಂದೇನು ತೀರ್ಪು ಬಂದಿದೆ ಅದು ಬೊಮ್ಮಾಯಿವರು ಅಂದು ನಮಗೇನು ಸಲಹೆ ಕೊಟ್ಟಿದ್ದಾರೋ ಅದಕ್ಕೆ ಪೂರಕವಾಗಿದೆ.

ಕಾಗೋಡ್ ತಿಮ್ಮಪ್ಪ: ಹಾಗಾದರೆ ಇಂದಿನ ಪ್ರಧಾನಮಂತ್ರಿಗಳು ಸುಪ್ರೀಂ ಕೋರ್ಟ್ ಕೊಟ್ಟ ತೀರ್ಮಾನದ ಪ್ರಕಾರ ಅವರು ಅಲ್ಲೇ ಕುಳಿತುಕೊಂಡು ತೀರ್ಮಾನ ಮಾಡಬಹುದಾಗಿತ್ತು. ನಿಮ್ಮನ್ನು ಅಲ್ಲಿಗೇಕೆ ಕರೆಯಿಸಬೇಕಾಗಿತ್ತು. ಇಲ್ಲಿನ ಮುಖ್ಯಮಂತ್ರಿಯವರನ್ನು ತಮಿಳುನಾಡಿನ ಮುಖ್ಯಮಂತ್ರಿಗಳನ್ನು ಮತ್ತು ಬೇರೆ ಬೇರೆ ವಿರೋಧ ಪಕ್ಷದ ನಾಯಕರನ್ನೇಕೆ ಕರೆದು ಸಮಾಲೋಚನೆ ಮಾಡಬೇಕಾಗಿತ್ತು? ಏಕೆಂದರೆ ರಾಜ್ಯಗಳಿವೆ, ಅಲ್ಲಿನ ಮುಖ್ಯಮಂತ್ರಿಗಳನ್ನು ಗೌರವಿಸಬೇಕು. ಅವರುಗಳ ಅಭಿಪ್ರಾಯವನ್ನು ಕೇಳಬೇಕೆಂದು ತಮ್ಮನ್ನೆಲ್ಲ ಕರೆಸಿ ಸಮಾಲೋಚನೆ ಮಾಡಿದ್ದರು.

ಅಧ್ಯಕ್ಷರು: ಮಾನ್ಯ ಕಾಗೋಡು ತಿಮ್ಮಪ್ಪನವರೆ, ತಮಗೆ ಸಹಾಯ ಮಾಡುವುದಕ್ಕೆ, ಮುಖ್ಯಮಂತ್ರಿಗಳು ಏನು ಹೇಳಿದರೆಂದರೆ, ಮಾನ್ಯ ಬೊಮ್ಮಾಯಿಯವರು ನಮ್ಮ ವಕೀಲರ ಜೊತೆ ಚರ್ಚೆ ಮಾಡಿ ಅನಂತರ ಮುಖ್ಯಮಂತ್ರಿಗಳಿಗೇನು ಸಲಹೆಯನ್ನು ಕೊಟ್ಟರೋ, ಅದಕ್ಕೆ ಅನುಗುಣವಾಗಿ ನೀರು ಬಿಡುವ ಬಗ್ಗೆ ತೀರ್ಮಾನ ತೆಗೆದುಕೊಂಡರು. ಬೊಮ್ಮಾಯಿಯವರು ಸಲಹೆ ಕೊಟ್ಟದ್ದು, ವಕೀಲರು ಬೊಮ್ಮಾಯಿಯವರಿಗೆ ಹೇಳಿರತಕ್ಕದ್ದು, ಮುಖ್ಯಮಂತ್ರಿಗಳು ತೆಗೆದುಕೊಂಡಿರುವ ತೀರ್ಮಾನ ಸರಿಯೆಂದು ಇವತ್ತು ಸುಪ್ರೀಂ ಕೋರ್ಟ್‌ನವರು ನೀಡಿರತಕ್ಕ ತೀರ್ಮಾನದಲ್ಲಿ ಉಚ್ಚಾರವಾಗಿದೆಯೆಂದು ಅವರು ಹೇಳಿದ್ದಾರೆ. ತಮಿಳುನಾಡಿನವರು ಸುಪ್ರೀಂಕೋರ್ಟ್‌ಗೆ ಅರ್ಜಿಯನ್ನು ಸಲ್ಲಿಸಿರುವ ಬಗ್ಗೆ ನ್ಯಾಯಮೂರ್ತಿ ಅಹಮದಿಯವರು ಏನು ತೀರ್ಮಾನ ನೀಡಿದ್ದಾರೆಂಬುದನ್ನು ಗಮನಿಸಿದ್ದೀರೋ?

ಕಾಗೋಡು ತಿಮ್ಮಪ್ಪ: ಗಮನಿಸಿದ್ದೇನೆ, One of the reasons ಹೇಳಿದ್ದಾರೆ.

ಅಧ್ಯಕ್ಷರು: ಇನ್ನೊಬ್ಬರು ನ್ಯಾಯಮೂರ್ತಿ ಇಲ್ಲವೆಂದು ಹೇಳುತ್ತಾ ಅದರ ಜೊತೆಯಲ್ಲಿಯೇ ಈಗಾಗಲೇ ರಿಲೀಫ್ ಸಿಕ್ಕಿದೆ. By way of release of 5 TMC of water,

Tamil Nadu has already got the required relief ಎಂದು ಹೇಳಿದ್ದಾರೆ. I hope that is the order.

**ಕಾಗೋಡು ತಿಮ್ಮಪ್ಪ:** ಹಾಗಿದ್ದರೆ ತಮಿಳುನಾಡಿನವರು ಮತ್ತು ಇವರು ಕುಳಿತುಕೊಂಡು ಮಾತುಕತೆಯ ಮೂಲಕ ಒಮ್ಮತದ ನಿರ್ಧಾರಕ್ಕೆ ಬಂದುಬಿಡಲಿ. ಆಗ ಟ್ರಿಬ್ಯೂನಲ್ ತಾನೇ ತಾನಾಗಿ ರದ್ದಾಗುತ್ತದೆ.

**ಜೆ.ಹೆಚ್. ಪಟೇಲ್:** ಆದರೆ ಮಾನ್ಯ ಹೆಚ್.ಎನ್. ನಂಜೇಗೌಡರು ಭಾಷಣ ಮಾಡುತ್ತ ಹೇಳಿದ ಹಾಗೆ Don't try to find fault with me. ಇಂಥ ಒಂದು ಅವಕಾಶ ಹಿಂದೆ ಯಾವಾಗಲೂ ಇರಲಿಲ್ಲ. ಹಿಂದೆ ಬೇರೆ ಪ್ರಧಾನಮಂತ್ರಿಯವರು ಇದ್ದರು, ಅಲ್ಲೊಂದು ಸರ್ಕಾರವಿರುತ್ತಿತ್ತು, ಇಲ್ಲೊಂದು ಸರ್ಕಾರವಿರುತ್ತಿತ್ತು. ಏನೇನೋ ಗೊಂದಲಗಳು ಇರುತ್ತಿದ್ದವು. ಆದರೆ ಈಗ ಇರತಕ್ಕ ಅವಕಾಶ ಇರಲಿಲ್ಲ. ಈಗ ವೀರಾವೇಶದ ಮಾತುಗಳನ್ನಾಡುವುದು ಬೇಡ. ಈಗ ವಿಶೇಷವಾದ ಸಂದರ್ಭವಿದೆ, ಆದಕ್ಕಾಗಿ ತಮಿಳುನಾಡಿನವರಿಗೂ, ನಮಗೂ ಏನು ಶತಮಾನಗಳಿಂದ ವೈರತ್ವವಿದೆಯೆಂದಾಗಲೀ ಅಥವಾ ಅವರು ನಮ್ಮ ಮೇಲೆ ದಂಡೆತ್ತಿ ಬರುವಂತಾಗುವುದು ಬೇಡ, ಸಾಧ್ಯವಾದರೆ ಕರುಣಾನಿಧಿಯವರಿಗೆ ಅಲ್ಲಿನ ವಿರೋಧ ಪಕ್ಷದವರು ಆ ರೀತಿಯಾದ ಸಹಕಾರ ಕೊಡದಿದ್ದರೂ ಚಿಂತೆ ಇಲ್ಲ, ಕರ್ನಾಟಕ ಸರ್ಕಾರಕ್ಕೆ ವಿರೋಧ ಪಕ್ಷದವರು ಸಹಕಾರ ಕೊಡುತ್ತಿದ್ದೀರಿ. ಈ ಸಂದರ್ಭವನ್ನು ಉಪಯೋಗ ಮಾಡಿಕೊಂಡು ಇದಕ್ಕೆ ಪರಿಹಾರವನ್ನು ಕಂಡುಹಿಡಿಯಬೇಕೆಂಬುದೇ ನಮ್ಮ ಉದ್ದೇಶ.

**ಕಾಗೋಡು ತಿಮ್ಮಪ್ಪ:** ಮಾನ್ಯ ಅಧ್ಯಕ್ಷರೇ, ತಮಿಳುನಾಡು ಸರ್ಕಾರ ರಾಜಕೀಯವಾಗಿ ಇಂದು ಯಾವ ಸ್ಥಾನದಲ್ಲಿಯೋ, ಅದು ಎಐಡಿಎಂಕೆಯಾಗಿರಬಹುದು. ಅವರು ಕಳೆದ 1972ನೇ ಇಸವಿಯಿಂದ ಇದೇ ರೀತಿ ಇದ್ದಾರೆ. ನಾವು ಹೇಗೆ ಆಡಳಿತ ಪಕ್ಷ ಮತ್ತು ವಿರೋಧ ಪಕ್ಷಗಳು ಒಂದಾಗಿ ಒಂದೇ ರೀತಿಯಾದ ಅಭಿಪ್ರಾಯವನ್ನು ರೂಢಿಸಿಕೊಂಡು ಬಂದಿದ್ದೇವೋ ಅದೇ ರೀತಿ ತಮಿಳುನಾಡಿನಲ್ಲಿ ಸಹ ಯಾವುದೇ ಪಕ್ಷ ಅಧಿಕಾರದಲ್ಲಿ ಇದ್ದರೂ ಅವರೂ ಒಂದಾಗಿ, ಒಂದೇ ವಾದವನ್ನಿಟ್ಟುಕೊಂಡು ಬಂದಿದ್ದಾರೆ.

**ಸಿದ್ಧರಾಮಯ್ಯ (ಉಪಮುಖ್ಯಮಂತ್ರಿ):** ಮಾನ್ಯ ಅಧ್ಯಕ್ಷರೇ, 1972ನೇ ಇಸವಿಯಿಂದ ಈ ರೀತಿಯಾದ ಚರ್ಚೆಗಳು ನಡೆದುಕೊಂಡು ಬರುತ್ತಲೇ ಇವೆ. ನೀರನ್ನು ಬಿಟ್ಟುಕೊಂಡು ಬರುತ್ತಲೇ ಇದ್ದೇವೆ. ಬೇರೆ ಬೇರೆ ಸಂದರ್ಭಗಳಲ್ಲಿ ಎರಡು, ಮೂರು, ಐದು ಟಿಎಂಸಿ ನೀರನ್ನು ಬಿಟ್ಟಿದ್ದಾರೆ. ಎಂ.ಜಿ.ಆರ್. ರವರು ಮುಖ್ಯಮಂತ್ರಿಗಳಾಗಿದ್ದಂಥ ಸಂದರ್ಭದಲ್ಲಿ ಈ ವಿವಾದ ಒಂದು ಅಂತಿಮ ತೀರ್ಮಾನಕ್ಕೆ ಬರುವ ಮಟ್ಟಕ್ಕೆ ಬಂದಿತ್ತು. ಅವತ್ತು ಟ್ರಿಬ್ಯೂನಲ್ ರಚನೆಯಾದದ್ದು ಅದರಿಂದ ಮಧ್ಯಂತರ ಆದೇಶ ಬಂದದ್ದು ಆ ಸನ್ನಿವೇಶಗಳು ಬೇರೆ. ಇವತ್ತು ಕೇಂದ್ರದಲ್ಲಿ ನಮ್ಮವರೇ ಆದಂಥ ಪ್ರಧಾನಿ ಇದ್ದಾರೆ. ತಮಿಳುನಾಡಿನಲ್ಲಿ ಬೇರೆ ಪಕ್ಷದ ಸರ್ಕಾರವಿದೆ. ಈ ಹಿನ್ನೆಲೆಯನ್ನು ನೋಡಬೇಕು. ಆದನ್ನು ಬಿಟ್ಟು ಇಲ್ಲಿ ಕುರ್ಚಿ ಉಳಿಸಿಕೊಳ್ಳಲು, ಕೇಂದ್ರದಲ್ಲಿ

ಕುರ್ಚಿ ಉಳಿಸಿಕೊಳ್ಳಲು ನೀರು ಬಿಟ್ಟುಬಿಟ್ಟಿದ್ದಾರೆಂದು ಹೇಳತಕ್ಕದ್ದು ಸರಿಯಾದುದಲ್ಲ. ಈ ರಾಜ್ಯದ ಹಿತವನ್ನು ಕಾಪಾಡಬೇಕು ಎನ್ನತಕ್ಕದ್ದು ನಮ್ಮಿಬ್ಬರ ಉದ್ದೇಶವಾಗಿದೆ. ಇದರಲ್ಲಿ ಯಾವುದೇ ಭಿನ್ನಾಭಿಪ್ರಾಯವಿಲ್ಲ. ಆದ್ದರಿಂದ ಮಾತುಕತೆಗೆ ಒಂದು ಒಳ್ಳೆಯ ವಾತಾವರಣವನ್ನು ಮಾಡಿಕೊಂಡು, ಮಾತುಕತೆಯ ಮೂಲಕ ಈ ಸಮಸ್ಯೆಯನ್ನು ಇತ್ಯರ್ಥಮಾಡಿಕೊಳ್ಳಬೇಕು ಎಂಬುದು ನಮ್ಮೆಲ್ಲರ ಅಭಿಪ್ರಾಯ, ಆ ದಿಕ್ಕಿನಲ್ಲಿ ಇದು ಪೂರಕವಾದಂಥ ಹೆಜ್ಜೆಯಾಗಿದೆ.

**ಕಾಗೋಡು ತಿಮ್ಮಪ್ಪ:** ಮಾನ್ಯ ಅಧ್ಯಕ್ಷರೇ, ನಮ್ಮವರೇ ಪ್ರಧಾನಮಂತ್ರಿಗಳಾಗಿದ್ದ ಮೇಲೆ ಅದರಲ್ಲೂ ಕಾವೇರಿ ಜಲಾನಯನ ಪ್ರದೇಶದಿಂದ ಹೋರಾಟ ಮಾಡಿದ್ದವರೇ ಅಲ್ಲಿದ್ದ ಮೇಲೆ ಎರಡೂ ರಾಜ್ಯಗಳ ಮಧ್ಯೆ ಬಾಂಧವ್ಯ ಬೆಳೆದು ಈ ಸಮಸ್ಯೆಯನ್ನು ನಮ್ಮ ನಮ್ಮ ಮಧ್ಯದಲ್ಲೇ ಬಗೆಹರಿಸಿಕೊಳ್ಳಬೇಕು ಎನ್ನತಕ್ಕ ಪ್ರಾಮಾಣಿಕತನ ನಿಮ್ಮ ಹೃದಯದಿಂದ ಮೂಡಿಬಂದಿದ್ದರೆ, ಬಹುಶಃ ಅವರು ಎಸ್‌ಎಲ್‌ಪಿ ಯನ್ನು ಹಾಕತಕ್ಕ ಕೆಲಸವನ್ನು ಮಾಡಲು ಹೊರಟ ಸುದ್ದಿ ಕೇಳಿದ ತಕ್ಷಣ ನಿಮ್ಮ ಎದೆ ನಡುಗತಕ್ಕ ಕೆಲಸವೇಕೆ ಪ್ರಾರಂಭವಾಯಿತು? ಹಾಗಿದ್ದ ಮೇಲೆ ತಾವು ಮೊದಲೇ ಮಾತುಕತೆಯ ಮೂಲಕ ನೀರನ್ನು ಬಿಡುಗಡೆ ಮಾಡಬಹುದಾಗಿತ್ತು. ತಮ್ಮ ಹತ್ತಿರ ಇಂಟಲಿಜೆನ್ಸ್ ಇದೆ. ನೀವು ಅಲ್ಲಿನ ಮುಖ್ಯಮಂತ್ರಿಯವರ ಜೊತೆ ಮಾತನಾಡಿ, ಅಥವಾ ಅವರು ನಿಮ್ಮ ಜೊತೆ ಮಾತನಾಡಿ, ಅಥವಾ ಪ್ರಧಾನಮಂತ್ರಿಗಳು ಕೇಂದ್ರದ ಸಂಬಂಧಪಟ್ಟ ಮಂತ್ರಿಗಳು ತಮ್ಮಿಬ್ಬರನ್ನು ಕರೆಸಿಕೊಂಡು, ನಮ್ಮ ನಿಮ್ಮ ಹೊಸ ಸ್ನೇಹ ಸಂಬಂಧ ಬೆಳೆದಿದೆ, ಈ ಸನ್ನಿವೇಶದಲ್ಲಿ ರಾಷ್ಟ್ರದಲ್ಲಿ ಕಚ್ಚಾಡತಕ್ಕದ್ದು ಸೂಕ್ತವಲ್ಲ. ಆದ್ದರಿಂದ ನಾವು ನ್ಯಾಯಾಲಯದ ಹೊರಗಡೆ ಇದರ ಬಗ್ಗೆ ತೀರ್ಮಾನ ಮಾಡಿಕೊಳ್ಳಬೇಕೆಂದು ಉತ್ಸಾಹದಿಂದ ನಿಮ್ಮಿಬ್ಬರನ್ನು ಕರೆದು ಮಾತುಕತೆ ಮಾಡಿ ಒಪ್ಪಂದಕ್ಕೆ ಬಂದು ನೀರನ್ನು ಬಿಡಿಸಿದ್ದರೆ ಆಗ ಕರ್ನಾಟಕ ರಾಜ್ಯಕ್ಕೆ ಕೀರ್ತಿ ಬರುತ್ತಿತ್ತು. ನಿಮ್ಮನ್ನೂ ಕೇಂದ್ರ ಸರ್ಕಾರ ಗುರುತಿಸಿದಂತಾಗುತ್ತಿತ್ತು. ಆದರೆ ಈಗ ನಿಮ್ಮನ್ನು ಯಾರಾದರೂ ಗುರುತಿಸಿದ್ದಾರೆಯೇ? ಮಾತು ಎತ್ತಿದರೆ ತೋಳನ್ನು ಎತ್ತಬೇಕಾಗುತ್ತದೆ, ದೊಣ್ಣೆ ತೆಗೆದುಕೊಳ್ಳಬೇಕಾಗುತ್ತದೆಂದು ಹೇಳುತ್ತೀರಿ. ಇಲ್ಲೇಕೆ ಆ ರೀತಿಯಾದ ಗಂಡಸುತನ ಹೋಗಿಬಿಟ್ಟಿತು.

ಕಾಡಿನಲ್ಲಿ ಹುಲಿ ಏನು ಮಾಡುತ್ತದೆಂದರೆ, ಮಂಗನನ್ನು ತಿನ್ನಬೇಕೆಂದು ಆಸೆ ಬರುತ್ತದೆ. ಮರದ ಮೇಲಿದ್ದ ಮಂಗಗಳು ಹುಲಿಯನ್ನು ಕಂಡು ಕೂಗುತ್ತವೆ, ಮತ್ತು ಕೆಳಕ್ಕೆ ಬರುವುದು ಮತ್ತೆ ಮೇಲಕ್ಕೆ ಹೋಗುವುದನ್ನು ಮಾಡುತ್ತಿರುತ್ತವೆ. ಕೊನೆಗೆ ಹುಲಿ ಒಂದು ಸಾರಿ ಘರ್ಜಿಸಿಬಿಡುತ್ತದೆ. ಆಗ ಮರದ ಮೇಲಿದ್ದ ಮಂಗ ಕೈಬಿಟ್ಟು ಕೆಳಕ್ಕೆ ಬಿದ್ದುಬಿಡುತ್ತದೆ, ಹುಲಿ ಅದನ್ನು ಹಿಡಿದುಬಿಡುತ್ತದೆ. ಹಾಗೆ ತಮಿಳುನಾಡಿನವರು ಅಲ್ಲಿ ಕುಳಿತುಕೊಂಡು ಘರ್ಜನೆ ಮಾಡಿದ ಕೂಡಲೆ ಕರ್ನಾಟಕ ಮಂಗ ಕೆಳಕ್ಕೆ ಬಿದ್ದು ಹುಲಿಯ ಬಾಯಿಗೆ ಸಿಕ್ಕಿದಂತಾಗಿದೆ.

**ಜೆ.ಹೆಚ್. ಪಟೇಲ್:** ಮಾನ್ಯ ಅಧ್ಯಕ್ಷರೆ, ಅವರು ಹುಲಿಯೂ ಅಲ್ಲ, ನಾವು ಮಂಗಗಳೂ ಅಲ್ಲ. ಮೊದಲು ತಮ್ಮ ಧಾಟಿ ಸರಿಯಾಗಿತ್ತು. ನೀವು ನೀವು ಒಟ್ಟಿಗೆ ಕೂಡಿ ಯಾವುದೇ ತೊಂದರೆಯಿಲ್ಲದೆ ಈ ಸಮಸ್ಯೆಯನ್ನು ಬಗೆಹರಿಸಲು ಪ್ರಧಾನಮಂತ್ರಿಗಳ ಸಹಾಯವನ್ನು ಪಡೆದು

ಬಗೆಹರಿಸಿಕೊಳ್ಳಲಿ ಎಂದಿರಿ ನೀವು. ಆ ಕಾರಣದಿಂದ ನಾವು ತೋಳನ್ನು ಮಡಿಸಬಾರದೆಂದು ಹೇಳಿದ್ದೆ. ಹುಲಿ ಘರ್ಜಿಸಿದರೆ ಏನು ಮಾಡಬೇಕೋ ನಮಗೆ ಗೊತ್ತಿದೆ. ಸರ್ಕಸ್‌ನಲ್ಲಿರುವ ಹುಲಿಗಳೂ ಇರುತ್ತವೆ. ಕಾಡಿನಲ್ಲಿರುವ ಹುಲಿಗಳೂ ಇರುತ್ತವೆ. ಸರ್ಕಸ್‌ನಲ್ಲಿ ಹುಲಿ, ಮಂಗ, ರಿಂಗ್‌ಮಾಸ್ಟರ್ ಎಲ್ಲರೂ ಇರುತ್ತಾರೆ.

ತಮಿಳುನಾಡಿಗೆ ನಿಮಗೆ ಒಂದು ಅಗ್ರಿಮೆಂಟ್ ಆದ ಹಾಗೆ ಕಾಣುತ್ತಿದೆ. ಅದೇನೆಂದರೆ ಬದುಕಿದರೆ ಒಟ್ಟಿಗೆ ಬದುಕೋಣ, ಸಾಯುವುದಾದರೆ ಒಟ್ಟಿಗೆ ಸಾಯೋಣ ಎನ್ನುವುದು.

ಸಿದ್ಧರಾಮಯ್ಯ: ತಮಿಳುನಾಡಿನವರು ನಮ್ಮ ದೇಶದವರು ಅಲ್ಲವೇ? ಆದರೆ ನಮ್ಮ ರೈತರೂ ಬದುಕಬೇಕು, ನಮಗೂ ನೀರಾವರಿಗೆ ನೀರು ಬೇಕು, ಜೊತೆಗೆ ಅವರಿಗೂ ನೀರು ಬೇಕು. ಈ ವ್ಯಾಜ್ಯ ನಿನ್ನೆ ಮೊನ್ನೆ ಬಂದಿರತಕ್ಕಂಥದ್ದಲ್ಲ. ಇದು ನೂರಾರು ವರ್ಷಗಳಿಂದ ಬಂದಿರತಕ್ಕಂಥ ವ್ಯಾಜ್ಯ. ಇದು ಬಹಳ ಸೂಕ್ಷ್ಮವಾದಂಥ ವಿಚಾರ, ರೈತರು ನಮ್ಮ ಬಗ್ಗೆ ತಪ್ಪು ತಿಳುವಳಿಕೆ ಮಾಡಿಕೊಳ್ಳಬಾರದು, ಏಕೆಂದರೆ ನಾವು ಆ ಭಾಗದಿಂದ ಬಂದಿದ್ದೇವೆ, ನಾವೂ ರೈತರೇ, ನಮ್ಮ ಜಮೀನುಗಳು ಕೂಡ ನೀರಾವರಿ ಆಗುತ್ತವೆ, ನಮ್ಮ ಜಮೀನು ನೀರಾವರಿ ಆಗುವುದನ್ನು ಬಿಟ್ಟು ಅವರ ಜಮೀನು ನೀರಾವರಿ ಆಗುವುದಕ್ಕೆ ನಾವು ಇಚ್ಛೆಪಡುವುದಿಲ್ಲ. ನಮ್ಮದೂ ಆಗಬೇಕು, ಜೊತೆಗೆ ನ್ಯಾಯಯುತವಾಗಿ ಇತ್ಯರ್ಥ ಆಗಬೇಕು. ಒಂದು ವೇಳೆ ಅನ್ಯಾಯವಾದಾಗ ಎಂಥದೇ ಹೋರಾಟಕ್ಕೆ ಯಾವುದೇ ತ್ಯಾಗಕ್ಕೆ ನಾವು ಕೂಡ ಸಿದ್ಧರಾಗಿದ್ದೇವೆ.

ಬಿ.ಬಿ. ಶಿವಪ್ಪ: ತಮ್ಮ ಮಾತನ್ನು ಕೇಳಿ ತುಂಬಾ ಸಂತೋಷವಾಯಿತು. ಅದೇನೆಂದರೆ ತಮಿಳುನಾಡಿನವರು ಬೇರೆ ದೇಶದವರು ಬೇರೆ ಅಲ್ಲ ಎಂದು ಹೇಳಿದ್ದೀರಿ. ಅದು ಒಪ್ಪತಕ್ಕಂಥ ಮಾತು. ಅದೇ ನಾವು ಕೂಡ ಹೇಳುತ್ತಾ ಇರತಕ್ಕಂಥದ್ದು. ಇಡೀ ಭಾರತ ದೇಶದವರು ಒಂದೇ ಎನ್ನುವ ಮನೋಭಾವವನ್ನು ತಾಳಿ ಎನ್ನತಕ್ಕಂಥ ಮಾತನ್ನೇ ನಾವೂ ಹೇಳುತ್ತಿದ್ದೇವೆ. ಇವೊತ್ತು ನಿಮಗೆ ಇದ್ದಕ್ಕಿದ್ದ ಹಾಗೆ ತಮಿಳುನಾಡಿನ ಮೇಲೆ ಭಾರಿ ವಿಶ್ವಾಸ, ಪ್ರೇಮ, ಪ್ರೀತಿ ಉಕ್ಕಿ ಹರಿಯಲು ಶುರುವಾಯಿತಲ್ಲ!

ಕಾಗೋಡು ತಿಮ್ಮಪ್ಪ: ಇಲ್ಲೇ ನಮಗೆ ಆತಂಕ ಬರುತ್ತಾ ಇರತಕ್ಕಂಥದ್ದು.

ಡಿ.ಆರ್. ಪಾಟೀಲ್: ಸನ್ಮಾನ್ಯ ಅಧ್ಯಕ್ಷರೇ ತಮಿಳುನಾಡಿನ ಜಲಾಶಯಗಳಾದ ಮೆಟ್ಟೂರು, ಭವಾನಿ ಏನು ಇವೆ ಅಲ್ಲಿಯ ನೀರು ಅವರಿಗೆ ಎಲ್ಲಿಯವರೆಗೆ ಸಾಲುತ್ತದೆ?

ಎಚ್.ಎನ್. ನಂಜೇಗೌಡ: ಗೊತ್ತಾಗಬೇಕಲ್ಲ, ನಮ್ಮದು ಹೇಗೆ ನೀವು ಲೆಕ್ಕ ಹಾಕುತ್ತೀರಿ ಅವರದೂ ನೀವು ಲೆಕ್ಕ ಹಾಕಬೇಕಲ್ಲ. ಈಗ ನಮಗೆ ಜುಲೈ 31 ರೊಳಗೆ ನೀರು ಸಾಕಾಗುತ್ತದೆಂದು ಹೇಳಿದ್ದೀರಿ. ಅವರಿಗೂ ಅದು 31 ಜುಲೈವರೆಗೆ ಸಾಕಾಗುತ್ತದೆ ಅಥವಾ ಐದು ಟಿ.ಎಂ.ಸಿ. ನೀರು ಏನು ನೀವು ಬಿಟ್ಟಿದ್ದೀರಿ ಅದನ್ನು ಅವರು ಆಗಸ್ಟ್ ಸೆಪ್ಟೆಂಬರ್‌ವರೆಗೆ ಬಳಸುವ ಕಾಳಜಿ ತೆಗೆದುಕೊಂಡಿದ್ದಾರೋ ಹೇಗೆ ಎಂಬುದು ಈ ಸದನಕ್ಕೆ ಗೊತ್ತಾಗಬೇಕಲ್ಲ.

ಕೆ.ಎಸ್. ನಾಗೇಗೌಡ: ಮಾನ್ಯ ಅಧ್ಯಕ್ಷರೇ, ಮಾನ್ಯ ನಂಜೇಗೌಡರು, ಮಾನ್ಯ ದೇವೇಗೌಡರು ಎಲ್ಲಾ ಈ ವಿಚಾರದಲ್ಲಿ ನೀವು ಎಷ್ಟು ಅಚ್ಚುಕಟ್ಟು ಮಾಡುತ್ತಿದ್ದೀರಿ, ಎಷ್ಟು ಎಕರೆ ನಿಮಗೆ ನೀರು ಬೇಕು, ಯಾವಾಗ ಬೇಕು ಎಂದು ಬಹಳ ವರ್ಷದಿಂದ ಕೇಳಿಕೊಂಡು ಬಂದಿದ್ದಾರೆ. ಇವೊತ್ತಿನವರೆಗೆ ಅವರು ಕೊಟ್ಟಿಲ್ಲ. ಅವರು ಏನು ಹೇಳುತ್ತಾರೆಂದರೆ ನಮ್ಮ ಟ್ರಿಬ್ಯೂನಲ್ ಏನು ಆರ್ಡರ್ ಮಾಡಿದ್ದಾರೆ, ಆ ಆರ್ಡರ್ ಪ್ರಕಾರ ನಾವು ಡೌನ್ ಸ್ಟ್ರೀಮ್‌ನಲ್ಲಿ ಇದ್ದೇವೆ; ನೀವು ಅಪ್ ಸ್ಟ್ರೀಮ್‌ನವರು. ನಮಗೆ ಏನು ನೀರು ಬರಬೇಕೋ ಅದು ಕೊಡಿ, ನಮ್ಮ ಭಾಗದ ವಿಚಾರ ಬಿಡಿ ಎಂದುಕೊಂಡೇ ಬಂದಿದ್ದಾರೆ. ಅದು ಇತ್ಯರ್ಥ ಆಗಬೇಕಾದರೆ ಈಗ ಕಾಲ ಪರಿಪಕ್ವವಾಗಿದೆ ಎಂದು ನಮ್ಮ ಉಪಮುಖ್ಯಮಂತ್ರಿಗಳು ಹೇಳಿದರು.

ಹಿಂದೆ ಸಾಕಷ್ಟು ಚಳುವಳಿಗಳು ನಡೆದು ಎಷ್ಟು ಜನ ಸತ್ತರು. ಏನೆಲ್ಲಾ ಅನಾಹುತವಾಯಿತು ಎನ್ನುವುದನ್ನು ನಾವು ಕಂಡಿದ್ದೇವೆ. ಇದಕ್ಕೆ ಬದಲಾದ ಒಂದು ಹೊಸ ವಾತಾವರಣ ತಮ್ಮ ನಾಯಕತ್ವದಲ್ಲಿ ಆಗುವುದಾದರೆ ಖಂಡಿತವಾಗಿಯೂ ನಾವು ಅದಕ್ಕೆ ಸ್ವಾಗತವನ್ನು ಮಾಡುತ್ತೇವೆ. ಆದರೆ ಆ ರೀತಿ ಮಾಡತಕ್ಕಂಥ ಕೆಲಸ ಏನು ಪ್ರಾರಂಭ ಮಾಡಿದ್ದೀರಿ ಎನ್ನುವುದು ಬಹಳ ಮುಖ್ಯವಾದ ವಿಚಾರ. ಕೇವಲ ನಾವು ಉದಾರಿಗಳಾದರೆ ಮಾತ್ರ ಸಾಕಾಗುವುದಿಲ್ಲ, ಬೇರೆಯವರೂ ಕೂಡ ಆಗಬೇಕಾಗುತ್ತದೆ. ಆದರೆ ತಮಿಳುನಾಡಿನ ಜನರಿಂದ ಈ ಒಂದು ಸ್ನೇಹ ಸಂಬಂಧ ಬಂದಿದ್ದು ನನಗಂತೂ ಕಾಣಲಿಲ್ಲ. ಏಕೆಂದರೆ ಮೊನ್ನೆ ಕರುಣಾನಿಧಿಯವರು...

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿಗಳು): ಎರಡನ್ನೂ ನೀವೇ ಹೇಳುತ್ತಿರಲ್ಲ, ನಿಮ್ಮ ಸರ್ಕಾರ ಒಳ್ಳೆಯ ಸಂಬಂಧವನ್ನೂ ಅದರೊಂದಿಗೆ ಬೆಳೆಸಿಕೊಳ್ಳಿ, ಇದಕ್ಕೆ ಒಂದು ಶಾಶ್ವತ ಪರಿಹಾರವನ್ನು ಕಂಡುಹಿಡಿಯಿರಿ ತನ್ಮೂಲಕ ಇತಿಹಾಸದಲ್ಲಿ ನಿಮ್ಮ ಹೆಸರನ್ನು ಉಳಿಸಿಕೊಳ್ಳಿ ಎಂದು ಒಳ್ಳೆಯ ಮಾತನ್ನೂ ನೀವು ಹೇಳುತ್ತೀರಿ. ಆದರೂ ಕೂಡ ಅನುಮಾನದಿಂದಲೇ ನೀವು ಅವರನ್ನು ನೋಡಬೇಕು, ಅವರನ್ನು ನಂಬಬಾರದು, ಅವರನ್ನು ಹತ್ತಿರ ಬಿಟ್ಟುಕೊಳ್ಳಬಾರದು ಎಂದೂ ಹೇಳುತ್ತೀರಿ, ಇದು ಹೇಗೆ? ನಂಜೇಗೌಡರು ಈ ವಿಚಾರದಲ್ಲಿ ಸ್ಪಷ್ಟವಾಗಿದ್ದಾರೆ, ಅವರ ಮನಸ್ಸಿನಲ್ಲಿ ದ್ವಂದ್ವ ಇಲ್ಲ

(ನಗು)

ಕಾಗೋಡು ತಿಮ್ಮಪ್ಪ: ಹಾಗಾದರೆ ಅವರನ್ನು ಇಟ್ಟುಕೊಳ್ಳಿ. ಈಗ ಅವರನ್ನು ಮಂತ್ರಿ ಮಾಡುತ್ತೀರೋ ಅಥವಾ ಹಾಗೇ ಇಟ್ಟುಕೊಳ್ಳುತ್ತೀರೋ ನೋಡಿಕೊಳ್ಳಿ. ನೀವು ಅವರು ಸೇರಿ ತೀರ್ಮಾನ ಮಾಡಿಕೊಂಡಿದ್ದರೆ ಈ ಸಮಸ್ಯೆಯ ವ್ಯವಹಾರವೇ ಬೇಡ.

ಎಂ.ಸಿ. ನಾಣಯ್ಯ: ರಾಜ್ಯದ ಹಿತದೃಷ್ಟಿಯಿಂದ ಅವರು ಬೇಕಾಗುತ್ತಾರೆ, ಕಾವೇರಿ ಇಶ್ಯೂ ಬಂದಾಗ. ಏಕೆಂದರೆ, ಅವರು ಆ ಕಡೆಯವರಿಂದ ಬಂದಿರುವುದರಿಂದ ಬೇಕಾಗುತ್ತಾರೆ. ನೀವೂ ಬೇಕಾಗಿರತಕ್ಕಂಥ ಸಂದರ್ಭದಲ್ಲಿ ನಿಮ್ಮನ್ನೂ ಪರಿಗಣನೆಗೆ ತೆಗೆದುಕೊಳ್ಳುತ್ತೇವೆ.

ಅಧ್ಯಕ್ಷರು: ಈಗ ಸಭೆಯು ಮುಕ್ತಾಯವಾಗಿ ನಾಳೆ ಬೆಳಿಗ್ಗೆ 9.30ಕ್ಕೆ ಸೇರುವುದು.

(ವಿಧಾನಸಭೆ ಕಲಾಪ ಜುಲೈ 11, 1996)

## ವಿಧಾನ ಪರಿಷತ್ತಿನಲ್ಲಿ

ವಿಷಯ: ರಾಜ್ಯದ ಜಲಾಶಯಗಳಲ್ಲಿ ಸಾಕಷ್ಟು ನೀರಿದೆಯೆಂದು ಭಾರಿ ನೀರಾವರಿ ಸಚಿವರು ಹೇಳಿಕೆ ನೀಡಿರುವ ಬಗ್ಗೆ.

**ಹೆಚ್.ಕೆ. ಪಾಟೀಲ್ (ವಿರೋಧ ಪಕ್ಷದ ನಾಯಕರು):** ಮಾನ್ಯ ಸಭಾಪತಿಯವರೇ, ಗಮನ ಸೆಳೆಯುವ ಸೂಚನೆಯನ್ನು ತೆಗೆದುಕೊಳ್ಳುವುದಕ್ಕಿಂತ ಮೊದಲು ಸದನದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಹಾಗೂ ನೀರಾವರಿ ಸಚಿವರು, ಇಬ್ಬರೂ ಸಹ ಉಪಸ್ಥಿತರಿದ್ದಾರೆ. ತಾವು ನಿನ್ನೆ ನಮಗೆ ಆದೇಶ ನೀಡಿದ್ದೀರಿ. ಏನೆಂದರೆ, ಪ್ರಶ್ನೋತ್ತರ ಮುಗಿದ ತಕ್ಷಣ ನಮ್ಮ ರಾಜ್ಯ ಸರ್ಕಾರದವರು ಯಾವ ಕಾರಣಕ್ಕಾಗಿ ಸಂಕಟ ಪರಿಸ್ಥಿತಿಯಲ್ಲಿ ನಾವಿದ್ದೇವೆಂದು, ದೆಹಲಿಯಲ್ಲಿ ಕಾವೇರಿ ನ್ಯಾಯ ಮಂಡಳಿ ಮುಂದೆ ಈಗಾಗಲೇ ಅರ್ಜಿ ಹಾಕಿದ್ದೇವೆಂದು ಮತ್ತು ನಮ್ಮ ರಾಜ್ಯದ ಜಲಾಶಯಗಳಲ್ಲಿ ಸಾಕಷ್ಟು ನೀರಿದೆ, ಬೇಕಾದರೆ ನಾನು ಹಿರಿಯ ಶಾಸಕರನ್ನು ಕರೆದುಕೊಂಡು ಹೋಗಿ ತೋರಿಸುತ್ತೇನೆಂದು ಸನ್ಮಾನ್ಯ ಭಾರಿ ನೀರಾವರಿ ಸಚಿವರು ಪ್ರಸ್ತಾಪಿಸಿದರು. ಅದರ ಬಗ್ಗೆಯೂ ಸ್ವಲ್ಪ ಚರ್ಚೆಯಾಗಬೇಕು ಮತ್ತು ಅದಕ್ಕೆ ಸಂಬಂಧಿಸಿದಂತೆ ಕೆಲವು ವಿವರಣೆಗಳನ್ನೂ ನೀಡಬೇಕು.

**ಎಂ.ಸಿ. ನಾಣಯ್ಯ:** ಇದರ ಬಗ್ಗೆ ವ್ಯಾಪಕವಾಗಿ ಚರ್ಚೆಯಾಗಿದೆ. ಚರ್ಚೆಯಾದ ನಂತರ ಕೆಲವು ವಿಚಾರಗಳ ಬಗ್ಗೆ ಸರ್ಕಾರದಿಂದ ಸ್ಪಷ್ಟೀಕರಣ ಬೇಕಾಗಿದೆ. ಅದರಲ್ಲೂ 'ಸಂಕಟ ಸೂತ್ರ' (ಡಿಸ್ಟ್ರೆಸ್ ಫಾರ್ಮುಲಾ) ಎನ್ನುವುದು ಯಾವುದಿದೆ, ಅದಕ್ಕೆ ಸಂಬಂಧಿಸಿದಂತೆ ಕಾವೇರಿ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಲ್ಲಿಸಿರುವ ವಿಚಾರದಲ್ಲಿ ಸರ್ಕಾರ ತೆಗೆದುಕೊಂಡಿರತಕ್ಕ ಕ್ರಮವೇನೆಂದು ಮಾನ್ಯ ವಿರೋಧ ಪಕ್ಷದ ನಾಯಕರನ್ನೊಳಗೊಂಡಂತೆ ಇತರ ಸದಸ್ಯ ಮಿತ್ರರು ಕೇಳಿದರು. ಹೀಗಾಗಿ ಎರಡು-ಮೂರು ವಿಚಾರಗಳ ಬಗ್ಗೆ ಉತ್ತರವಾಗಿ ನಾವು ಹೇಳುತ್ತೇವೆ.

**ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):** ಕೆಳಮನೆಯಲ್ಲೂ ಇದೇ ವಿಷಯವಾಗಿ ಚರ್ಚೆ ನಡೆಯುತ್ತಿದ್ದು, ಅಲ್ಲಿಯೂ ಕಾವೇರಿದೆ.

**ಟಿ.ಎನ್. ನರಸಿಂಹಮೂರ್ತಿ:** ಮಾನ್ಯ ಸಭಾಪತಿಯವರೇ, ನಿಮಗೆ ಈ ರಾಜ್ಯದ ಮೇಲೆ ಆಸಕ್ತಿ ಇಲ್ಲ ಅಥವಾ ನಮ್ಮ ರಾಜ್ಯದ ಹಿತವನ್ನು ಬಲಿಗೊಡತಕ್ಕಂಥ ಉದ್ದೇಶ ಮಾನ್ಯ ಜೆ.ಹೆಚ್. ಪಟೇಲ್‌ರವರಿಗೆ ಇದೆಯೆಂದು ಅವರ ಮೇಲೆ ನಾನು ಆರೋಪ ಮಾಡುವುದಕ್ಕೆ ಹೋಗುವುದಿಲ್ಲ. ಯಾವ ಸನ್ನಿವೇಶದಲ್ಲಿ ಕಾವೇರಿ ನೀರನ್ನು ಬಿಡಲಾಯಿತೋ, ಈಗಾಗಲೇ ಕಾವೇರಿ ನದಿ ಹರಿಯುತ್ತಿದ್ದು, ನಾಳೆ ಹರಿಯುವುದು ಮುಗಿದು ಹೋಗುತ್ತದೆಂದು ಕಾಣುತ್ತದೆ. ಅಲ್ಲದೆ, ತಮಿಳುನಾಡಿನ ಮುಖ್ಯ ಮಂತ್ರಿಗಳಾದ ಕರುಣಾನಿಧಿಯವರು ಮಾತನಾಡುತ್ತಾ 'ನಮಗೆ ಈಗ ಒಟ್ಟು 15 ಟಿ.ಎಂ.ಸಿ. ಯಷ್ಟು ನೀರಿನ ಅಗತ್ಯವಿದ್ದು, ಈಗ 5 ಟಿ.ಎಂ.ಸಿ. ಯಷ್ಟು ನೀರು ಬಿಟ್ಟಿರುವುದರಿಂದ ಉಳಿದದ್ದನ್ನು ತದನಂತರ 5.5 ಟಿ.ಎಂ.ಸಿ ಯಂತೆ ಬಿಡಿಸಿಕೊಳ್ಳುತ್ತೇವೆ' ಎಂದು ಈಗಾಗಲೇ ಹೇಳಿದ್ದಾರೆ. ಅದಕ್ಕೆ ಮತ್ತು ನೀವು ಒಂದು ಹನಿ ನೀರನ್ನೂ ಬಿಡುವುದಿಲ್ಲವೆಂದು

ಹೇಳಿದ್ದೀರಿ. ದಯವಿಟ್ಟು ಹಾಗೆ ಹೇಳಬೇಡಿ. ನೀರು ಬಿಡುವುದಿಲ್ಲವೆಂದು ನೀವು ಹೇಳಿ ನೀರು ಬಿಡುವುದಾದರೆ ಅದು ಸರಿಯಾದುದ್ದಲ್ಲ. ಮಾನ್ಯ ಪಟೇಲ್‌ರವರೇ, ನಾನು ನಿಮ್ಮನ್ನು ಸಮಾಜವಾದಿ ಪಕ್ಷದಿಂದ ನೋಡಿಕೊಂಡು ಬಂದಿದ್ದೇನೆ. You are a good socialist. ಈ ಪದ ಹೇಳುವುದನ್ನು ಬಿಟ್ಟುಬಿಟ್ಟಿರಿ.

ಜೆ.ಹೆಚ್. ಪಟೇಲ್: ಮಾನ್ಯ ಸಭಾಪತಿಯವರೇ, ನನ್ನ ಸ್ಥಿತಿ ನೋಡಿ ಅವರಿಗೆ ಕಣ್ಣೀರು ಬಂತು. ನೀರು ಎಲ್ಲಿದೆಯೆಂದರೆ ಅವರ ಕಣ್ಣಲ್ಲೇ ನೀರಿರುವಂತೆ ಕಾಣುತ್ತದೆ. ಈಗ ಏಕೆ ಹೀಗಾಯಿತೆಂದು ಹೇಳುತ್ತೇನೆ. ಸದನದಲ್ಲಿ ಈ ಕುರಿತು ಮುಚ್ಚಿಡುವಂತಾದ್ದೇನೂ ಇಲ್ಲ. ನಾನು ಕೆಲವು ವಿಷಯಗಳನ್ನು ಹೇಳಿದೆ. ಏನೆಂದರೆ ರಾಜ್ಯದ ಹಿತಕ್ಕೆ ಧಕ್ಕೆಯಾಗುವಂತಾದ್ದು ಇದ್ದರೆ ಅದನ್ನು ಸದನದಲ್ಲಿ ಹೇಳುವುದಕ್ಕಾಗುವುದಿಲ್ಲವೆಂದು ಹೇಳಿದೆ. ತಮಿಳುನಾಡಿನವರು ಸುಪ್ರೀಮ್ ಕೋರ್ಟ್‌ಗೆ ಅರ್ಜಿಯನ್ನು ಹಾಕಲು ತೀರ್ಮಾನ ಮಾಡಿದರು. ಸುಪ್ರೀಮ್ ಕೋರ್ಟ್‌ಗೆ ಅವರು ಅರ್ಜಿಯನ್ನು ಹಾಕಿದಂಥ ಸಂದರ್ಭದಲ್ಲಿ ಸುಪ್ರೀಮ್ ಕೋರ್ಟ್‌ನವರು ಹಿಂದೆ ಆಗಿರುವಂಥ ತೀರ್ಮಾನದಂತೆ ನಡೆದುಕೊಳ್ಳಿ ಎಂದು ನಿರ್ದೇಶನವನ್ನೇನಾದರೂ ಕೊಡುತ್ತದೋ ಹಿಂದೆ ಆಗಿರುವುದನ್ನು ಜಾರಿಗೆ ಕೊಡಿಯೆಂದು ಹೇಳುತ್ತದೋ ಮುಂತಾಗಿ ಯಾವುದೇ ರೀತಿಯಾದ ಸೂಚನೆ ಇಲ್ಲದಿರತಕ್ಕ ಪರಿಸ್ಥಿತಿ ಇದರಿಂದ ನಮ್ಮಲ್ಲಿ ನೀರಿಲ್ಲವೆಂದು ಹೇಳಿದ್ದೆ. ಆದರೆ ಬಿಡಬೇಕಾಗಿರುವ 48 ಟಿ.ಎಂ.ಸಿ. ನೀರು ನಮ್ಮಲ್ಲಿ ಇಲ್ಲ. ನಾವು ವಿರೋಧ ಪಕ್ಷದವರ ಸಭೆ ಕರೆದಾಗ ತಮಿಳುನಾಡಿನವರು ಸುಪ್ರೀಮ್ ಕೋರ್ಟ್‌ಗೆ ಅರ್ಜಿಯನ್ನು ಹಾಕುವ ತೀರ್ಮಾನ ಮಾಡಿರಲಿಲ್ಲ. ನಾನು ಎಂಟನೆ ತಾರೀಖು ಸಭೆಯನ್ನು ಕರೆದಿದ್ದೆ.

ಹೆಚ್.ಕೆ. ಪಾಟೀಲ್: ತಾವು ಕರೆದಂಥ ಸಭೆಯಲ್ಲಿ ನಾವೇನು ಬಂದಿದ್ದೆವೋ ಆ ದಿನದ ಪತ್ರಿಕೆಯಲ್ಲಿ ನಾವು ಸುಪ್ರೀಮ್ ಕೋರ್ಟ್‌ಗೆ ಹೋಗುತ್ತೇವೆ ಎನ್ನತಕ್ಕ ವಿಚಾರ ಬಂದಿತ್ತು. ನಾವು ಅಂದು ಒಂಭತ್ತು ಗಂಟೆಗೆ ಸಭೆ ಸೇರಿದ್ದಾಗ ಅಂದಿನ ಪತ್ರಿಕೆಗಳಲ್ಲಿ ತಮಿಳುನಾಡಿನವರು ಸುಪ್ರೀಮ್ ಕೋರ್ಟ್‌ಗೆ ಹೋಗುತ್ತಾರೆ ಎನ್ನತಕ್ಕ ಮಾತನ್ನು ಹೇಳಿದ್ದರು.

ಜೆ.ಹೆಚ್. ಪಟೇಲ್: ನಾನು ಆ ಸಭೆಯಲ್ಲಿಯೇ ಇವರು ಸುಪ್ರೀಮ್ ಕೋರ್ಟ್‌ಗೆ ಹೋಗುತ್ತಾರೆಂದು ಹೇಳಿದೆ. ಆ ಮಧ್ಯೆ ನಮ್ಮ ಪ್ರಯತ್ನಗಳು ನಡೆದವು. ತಮಿಳುನಾಡಿನವರು ಸುಪ್ರೀಮ್ ಕೋರ್ಟ್‌ಗೆ ಹೋಗುತ್ತಾರೆ ಎಂಬುದು ನಮಗೂ ಗೊತ್ತಿತ್ತು, ಪತ್ರಿಕೆಯವರಿಗೂ ಗೊತ್ತಿತ್ತು, ದೆಹಲಿಯ ನಮ್ಮ ವಕೀಲರೂ ತಿಳಿಸಿದ್ದರು. ಆ ವಿಚಾರ ಗೊತ್ತಿರಲಿಲ್ಲವೆಂದಲ್ಲ. ಅವರು ಸುಪ್ರೀಂ ಕೋರ್ಟ್‌ಗೆ ಹೋಗುತ್ತಾರೆಂದು ಗೊತ್ತಿದ್ದೂ ನಮ್ಮಲ್ಲಿ ನೀರಿದೆಯೆಂದು ನಾವು ಹೇಳಬಾರದು. ನೀರನ್ನು ನಾವು ಮುಚ್ಚಿಟ್ಟುಕೊಳ್ಳಲು ಆಗುವುದಿಲ್ಲ. ಸಿ.ಡಬ್ಲ್ಯೂಸಿನವರು ನೋಡುತ್ತಾರೆ, ನಾವೂ ನೋಡುತ್ತೇವೆ. ವಾಸ್ತವಿಕವಾಗಿ ಅವರು ಕೇಳಿದಷ್ಟು ನೀರನ್ನು ಕೊಡಲು ಸಾಧ್ಯವಿಲ್ಲವೆಂದು ಹೇಳಿದ್ದು ಸತ್ಯ. ಈಗಲೂ ಹೇಳುತ್ತೇನೆ ತಮಿಳುನಾಡಿನವರು ಕೇಳಿದಷ್ಟು ನೀರನ್ನು ಕೊಡಲು ನಮ್ಮಲ್ಲಿ ನೀರಿಲ್ಲ. ನಮ್ಮ ರೈತರ ಫಸಲನ್ನು ಒಣಗಿಸಿ ಅವರಿಗೆ ನೀರನ್ನು

ಕೊಡಲು ಆಗುವುದಿಲ್ಲ. ಆದರೆ ಅವರಿಗೇನಾದರೂ ಸಹಾಯ ಮಾಡುವುದಿದ್ದರೆ ನಾವು 5 ಟಿ.ಎಂ.ಸಿ. ನೀರನ್ನು ಬಿಡಬಹುದು. ಆದರೆ ಅಂದು ನಿಮ್ಮನ್ನು ಸಭೆಗೆ ಕರೆದಾಗ ಈ ತೀರ್ಮಾನವಾಗಿರಲಿಲ್ಲ. ನಾನು ತೀರ್ಮಾನ ಮಾಡಿ ನಿಮಗೆ ಹೇಳಲಿಲ್ಲವೆಂದಲ್ಲ.

ಕೆ. ಮಲ್ಲಣ್ಣ: ಮಾನ್ಯ ಸಭಾಪತಿಯವರೇ, ಈ ವಿಚಾರದ ಬಗ್ಗೆ ಆದಷ್ಟು ಚರ್ಚೆ ಮಾಡದಿದ್ದರೆ ಒಳ್ಳೆಯದು. We have to restrain ourselves because may disclose many things which may favour Tamil Nadu. So, we have to restrain ourselves. That is my opinion.

ಹೆಚ್.ಕೆ. ಪಾಟೀಲ್: ನಾನು ಮಲ್ಲಣ್ಣನವರ ಮಾತನ್ನು ಒಪ್ಪುತ್ತೇನೆ. I agree with the Hon'ble Member Sri K. Mallanna that there are certain things which we should not reveal. But the Government has started revealing which were not to be revealed and which are to be revealed, they are hiding. ತಮಗೆ ಆಶ್ಚರ್ಯವಾಗಬಹುದು, ಮೊನ್ನೆ ಇಲ್ಲಿ ಇದರ ಬಗ್ಗೆ ಅನಂತರ ಚರ್ಚೆ ಮಾಡೋಣ. ಸುಪ್ರೀಮ್ ಕೋರ್ಟ್‌ಗೆ ತಮಿಳುನಾಡಿನವರು ಹೋಗುತ್ತಾರೆ ಎನ್ನತಕ್ಕ ಒಂದೇ ಒಂದು ಕಾರಣಕ್ಕೆ, ಹಂಚಿಕೆಗೆ ತಾವು ನೀರನ್ನು ಬಿಟ್ಟಿರಿ ಎನ್ನತಕ್ಕ ನಿಲುವು ಭಾವನೆ ನಮಗೆ ಬರುತ್ತದೆ. ಅವರು ಸುಪ್ರೀಮ್ ಕೋರ್ಟ್‌ಗೆ ಹೋಗುತ್ತಾರೆ. ತಾವು ನಮಗೆ ಲೀಗಲ್ ಆಗಿ ಏನು ಹೋರಾಟ ಮಾಡಬೇಕೋ ಅದನ್ನು ಮಾಡುತ್ತೇನೆಂದು ಹೇಳಿದ್ದಿರಿ. ಇದನ್ನು ಪತ್ರಿಕಾ ಸಂದರ್ಶನದಲ್ಲೂ ಹೇಳಿದ್ದಿರಿ. ಆದರೆ ತಾವು 5 ಟಿ.ಎಂ.ಸಿ. ನೀರನ್ನು ಬಿಟ್ಟಿಲ್ಲ, ಅನಂತರ ಟ್ರಿಬ್ಯೂನಲ್ ಸಂಕಷ್ಟ ಪರಿಹಾರ ಸೂತ್ರದ ಅನ್ವಯ ನಮ್ಮಲ್ಲಿ ನೀರಿಲ್ಲವೆಂದು ಹೇಳಿದ್ದೀರಿ. ತಮ್ಮ ಅರ್ಜಿಯಲ್ಲಿಯೇ, You have said like this.

> "The applicant stated that in the month of June and upto first week of July the reservoirs in Karnataka have not received sufficient inflows. The inflows received were far less than the average of last years".

ಎಂದು ತಾವು ಕೋರ್ಟ್‌ಗೆ ಹೇಳಿರತಕ್ಕ ಮಾತು. ನಮ್ಮ ಪರಿಸ್ಥಿತಿ ಈ ರೀತಿಯಾಗಿದ್ದಾಗ ಆಜ್ಞೆ ನಮಗೆ ಟ್ರಿಬ್ಯೂನಲ್‌ನ ಕ್ಲಾರಿಫಿಕೇಟರಿ ಆರ್ಡ್‌ರನ ಪ್ರಕಾರ ಯಾವಾಗ ನಮಗೆ ಸಂಕಷ್ಟವಿರುತ್ತದೆ ಆಗ ನೀರನ್ನು ಬಿಡುವುದಿಲ್ಲ ಎಂಬ ಬಗ್ಗೆ ಅರ್ಜಿಯನ್ನು ಸಲ್ಲಿಸಬಹುದಾದ ಪ್ರಾವಿಷನ್ ಕೆಳಗೆ ತಾವು ಅರ್ಜಿಯನ್ನು ಸಲ್ಲಿಸಿದ್ದಿರಿ. ತಾವು ಒಂದು ಕಡೆ ಅರ್ಜಿಯನ್ನು ಸಲ್ಲಿಸಿದ್ದೀರಿ, ಮತ್ತೊಂದು ಕಡೆ ನೀರನ್ನು ಬಿಟ್ಟಿರಿ. ಒಂದು ಕಡೆ ನಮ್ಮ ಜಲಾಶಯಗಳಲ್ಲಿ ನೀರಿದೆಯೆಂದು ಹೇಳಿದಿರಿ, ಆದರೆ ಇಲ್ಲಿ ಹತ್ತು ವರ್ಷಗಳಲ್ಲಿ ಕಳೆದ ಆರು ವರ್ಷಗಳಲ್ಲಿ ನಮಗೆ ಏನು ನೀರು ಬಂದಿತ್ತು ಅದಕ್ಕಿಂತ ಕಡಿಮೆ ಪ್ರಮಾಣದಲ್ಲಿ ನಮಗೆ ನೀರು

ಬಂದಿದೆ, ನಮ್ಮಲ್ಲಿ ನೀರಿಲ್ಲವೆಂದು ಅರ್ಜಿಯಲ್ಲಿ ಹೇಳಿದ್ದೀರಿ. ಅನಂತರ ಮುಂದೆ ಹೋಗಿ ಜುಲೈ ಮೊದಲ ವಾರದಲ್ಲಿ ನಮಗೆ ಇನ್‌ಫ್ಲೋನೇ ಇಲ್ಲವೆಂದು ಹೇಳಿದಿರಿ. ಸನ್ಮಾನ್ಯ ನೀರಾವರಿ ಸಚಿವರಾದ ನಾಗೇಗೌಡರು ಇನ್‌ಫ್ಲೋ ಇಲ್ಲವೆಂದು ಬರುತ್ತೀರಿ ಎಂದು ಹೇಳಿದರು. ನಾವು ನೀರನ್ನು ಬಿಡುವುದರಿಂದ ಏನೂ ತೊಂದರೆ ಇಲ್ಲವೆಂದು ಹೇಳಿದ್ದಾರೆ.

ಜೆ.ಹೆಚ್. ಪಟೇಲ್: ಅದಕ್ಕೇ ನಾನು ಹೇಳಿದ್ದು ಈ ರೀತಿಯಾಗಿ ಮಾತನಾಡಿ, ಮಾತನಾಡಿ, ನೀವೇನೋ ಹೇಳಿದ್ದಕ್ಕೆ ನಾನು ಉತ್ತರವನ್ನು ಕೊಡಬೇಕೆಂದು ಉತ್ತರವನ್ನು ಕೊಡುವುದು, ನಾನು ಹೇಳಿದೆಯೆಂದು ತಾವು ಮತ್ತೊಂದು ಕೇಳುವುದು. ಇದರಿಂದ ಎಲ್ಲಾ ಮಾಹಿತಿ ಪ್ರಕಟವಾಗಿಬಿಡುತ್ತದೆ.

**H.K. Patil:** This has what has gone into the record; I am not telling anything new. ನನ್ನ ಬಾಯಿಂದ ನಾನು ಹೇಳಿಲ್ಲ, ಸರ್ಕಾರದ ತಮ್ಮ ಹೇಳಿಕೆಯೇನಿದೆ ಅದನ್ನು ಪುನಃ ಪ್ರಸ್ತಾಪ ಮಾಡುತ್ತಿದ್ದೇನಷ್ಟೆ.

**K.N. Nage Gowda:** This is the application we have filed on the 9th of this month. For working out distress formula we have been asking since 1993 and 1995 ಮತ್ತು 1995 ರಲ್ಲಿ ಕೇಳಿಕೊಂಡು ಬಂದಿದ್ದೇವೆ. ಅವರು ಹೇಳಿದ್ದಕ್ಕೆ ನಾವು ಹಾಗೂ ನಾವು ಹೇಳಿದ್ದಕ್ಕೆ ಅವರು ಒಪ್ಪಿಕೊಳ್ಳುತ್ತಿಲ್ಲ. ಇಲ್ಲಿಯವರೆಗೆ ಆ ಫಾರ್ಮುಲವನ್ನು ಇನ್ವಾಲ್ವ್ ಮಾಡಲಿಲ್ಲ. ಅಲ್ಲಿ ಏನು ಮೆನ್‌ಷನ್ ಮಾಡಿದ್ದಾರೆಂದರೆ ಹತ್ತು ವರ್ಷದಲ್ಲಿ ಆರು ವರ್ಷಗಳ ಕಾಲ ಜುಲೈನಲ್ಲಿ ಮೊದಲ ಎರಡು ವಾರಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕೆಂದು. ನಾವು ಈಗ first two weeks of last month was bad. The two weeks of last month, is more than expected what we have. Therefore, average of last month is more than expected. I do not want to disclose the member, even though I will tell the cuses. ಆದರೂ ತಮಗೆ ಎಷ್ಟು ಕ್ಯೂಸೆಕ್ಸ್ ಎಂಬ ಬಗ್ಗೆ ಮಾಹಿತಿಯನ್ನು ಕಳುಹಿಸಿಕೊಡುತ್ತೇನೆ. ನಾವು ಇನ್ನೂ ಡಿಸ್ಟ್ರೆಸ್ ಫಾರ್ಮುಲನೇ ಮಾಡಿಲ್ಲ. The Hon'ble Law Minister is here who is dealing with this for the last 2-3 years; even now we have not made the distress formula. 9ನೇ ತಾರೀಖು ಡಿಸ್ಟ್ರಸ್ ಫಾರ್ಮುಲ ಮಾಡುವುದಕ್ಕೆ ರಿಜಿಸ್ಟಾರ್ ಮುಂದೆ ಹೋಗಕೂಡದು ಟ್ರಿಬ್ಯುನಲ್ ಮುಂದೆ ಹೋಗಬೇಕೆಂದು ಬಂತು, ಟ್ರಿಬ್ಯೂನಲ್ ಮುಂದೆ ಅರ್ಜಿ ಕೊಟ್ಟಿದ್ದೇವೆ, ಟ್ರಿಬ್ಯೂನಲ್‌ನ ಅಧ್ಯಕ್ಷರು ಇಲ್ಲ, ಅಧ್ಯಕ್ಷರ ಹುದ್ದೆ ಖಾಲಿ ಇದೆ, ಆದ್ದರಿಂದ ಅದರ ಬಗ್ಗೆ ಹಿಯರಿಂಗ್‌ಗೆ ತೆಗೆದುಕೊಂಡಿಲ್ಲ. ಆದ್ದರಿಂದ ನಾವು ಇಲ್ಲಿಯವರೆಗೆ ಡಿಸ್ಟ್ರೆಸ್ ಫಾರ್ಮುಲ ಮಾಡಿಲ್ಲ. ಫಾರ್ಮುಲ ಮಾಡುವುದಕ್ಕೆ ನಾವು ಈಗ

ತಾನೇ ಪ್ರಾರಂಭ ಮಾಡುತ್ತಿದ್ದೇವೆ. ಆದರೆ ಹೋದ ತಿಂಗಳು ಮೊದಲ ಎರಡು ವಾರ ನೀರಿನ ಇನ್‌ಫ್ಲೋ ಕೆಟ್ಟದ್ದಾಗಿತ್ತು, ಆದರೆ ಕಡೆಯ ಎರಡು ವಾರ ಚೆನ್ನಾಗಿತ್ತು. ಅವೆರಡನ್ನೂ ಕಂಪೇರ್ ಮಾಡಿಕೊಂಡು ನಾವು ತೆಗೆದುಕೊಂಡಿದ್ದೇವೆ. ಹಾಗೆಂದು ನಮ್ಮಲ್ಲಿ ಸಾಕಷ್ಟು ನೀರಿದೆಯೆಂದಲ್ಲ. ನಮ್ಮ ಬೆಳೆಯನ್ನು ಉಳಿಸಿಕೊಳ್ಳಲು ನಮಗೆ ತೊಂದರೆಯಿಲ್ಲ. ಆದರೆ ನಮ್ಮಲ್ಲಿ ಸರ್ಪ್ಲಸ್ ಇಲ್ಲ. ಅವರು 15 ಟಿಎಂಸಿ ನೀರು ಕೇಳಿದರೆ ಅದನ್ನು ಕೊಡಲು ಆಗುವುದಿಲ್ಲವೆಂದು ನಮ್ಮ ಮುಖ್ಯ ಮಂತ್ರಿಯವರು 5 ಟಿಎಂಸಿ ನೀರನ್ನು ರಿಲೀಸ್ ಮಾಡಬಹುದಾಗಿದೆ. ಆದರಿಂದ ನಮ್ಮ ರಾಜ್ಯದ ಹಿತಕ್ಕೆ ಧಕ್ಕೆಯಾಗುವುದಿಲ್ಲವೆಂದು ನಾನು ಕ್ಲಿಯರ್ ಆಗಿ ಹೇಳಿದ್ದೇನೆ. ಆದ್ದರಿಂದ that does not mean that we have got excess water. Sri H.K. Patil is an intellingent man and he will understand the implications. Still if he wants any paper or any Distress Formula. I will go to his chambers and try to convince him.

ಡಿ.ಎಂ. ಸಾಲಿ: ಮಾನ್ಯ ಸಭಾಪತಿಯವರೇ, ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಕಾವೇರಿ ವಿಚಾರವಾಗಿ ಯಾವುದೇ ತೀರ್ಮಾನ ಮಾಡಬೇಕಾಗಿ ಬಂದಾಗ ಪಕ್ಷಾತೀತವಾಗಿ ತೀರ್ಮಾನ ಮಾಡತಕ್ಕ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದ್ದೆವು. ಆದರೆ ಈ ಸಲ ಆಡಳಿತ ಪಕ್ಷದವರು ಏಕಾಏಕಿ ನಿರ್ಣಯವನ್ನು ತೆಗೆದುಕೊಂಡಿದ್ದಾರೆ. ವಿರೋಧ ಪಕ್ಷದವರನ್ನು ಜನರನ್ನು ದೂರವಿಟ್ಟು ತೀರ್ಮಾನ ತೆಗೆದುಕೊಂಡಿರುವ ಪ್ರಸಂಗವೇನಿದೆ ಆದರ ಬಗ್ಗೆ ಇಂದು ಚರ್ಚೆ ಮಾಡಬೇಕಾಗಿದೆ.

ಜೆ.ಹೆಚ್. ಪಟೇಲ್: ನಾನು ಮೊದಲು ಮಾತನಾಡುತ್ತೇನೆ, ಅನಂತರ ತಾವು ಇನ್ನೂ ಏನಾದರೂ ಹೇಳುವುದಿದ್ದರೆ ಹೇಳಿ.

ಡಿ.ಎಂ. ಸಾಲಿ: ಮಾನ್ಯ ಮುಖ್ಯಮಂತ್ರಿಯವರು ತಮಿಳುನಾಡು ಪಾಕಿಸ್ತಾನದಲ್ಲೇನಿಲ್ಲವೆಂದು ಹೇಳಿಬಿಟ್ಟರು. ಪತ್ರಿಕೆಗಳಲ್ಲಿ ಓದಿದೆವು. ಈ ರೀತಿ ವ್ಯತಿರಿಕ್ತವಾದ ಹೇಳಿಕೆಗಳನ್ನು ಕೊಟ್ಟರೆ ಹೇಗೆ?

ಜೆ.ಹೆಚ್. ಪಟೇಲ್: ಮಾನ್ಯ ಸಭಾಪತಿಯವರೇ, ವಿರೋಧ ಪಕ್ಷದವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ ಏಕಾಏಕಿ ನೀರನ್ನು ಬಿಟ್ಟೆವು ಎನ್ನತಕ್ಕದ್ದು ಒಂದು. ಅನಂತರ ಈ ಹಿಂದೆ ನಾವು ಯಾವುದೇ ತೀರ್ಮಾನ ತೆಗೆದುಕೊಳ್ಳಬೇಕಾದರೆ ನಮ್ಮ ರಾಜ್ಯದ ಹಿತದೃಷ್ಟಿಯೆಂದು ತೀರ್ಮಾನ ತೆಗೆದುಕೊಳ್ಳುತ್ತಿದ್ದೆವು ಯಾವುದೇ ಪಕ್ಷದ ಒತ್ತಾಸೆಯಿಂದ ತೆಗೆದುಕೊಳ್ಳುತ್ತಿರಲಿಲ್ಲ ಎನ್ನತಕ್ಕದ್ದು ಎರಡು; ಈಗಲೂ ಆ ಪದ್ಧತಿ ಜಾರಿಯಲ್ಲಿದೆ. ರಾಜ್ಯದ ಹಿತಾಸಕ್ತಿ ಬಂದಾಗ ನಾವುಗಳು ಯಾವಾಗಲೂ ಪಕ್ಷವನ್ನು ನೋಡುವುದಿಲ್ಲ. ಆದ್ದರಿಂದ ಎಂಟನೆಯ ತಾರೀಖು ತಮ್ಮಗಳ ಸಭೆಯನ್ನು ಕರೆದು ಅಂದು ಸಂಜೆ ನನಗೆ ಬಂದ ಮಾಹಿತಿಯನ್ನು ನಾನು ಯಾರಿಗೆ ತಲುಪಿಸಬೇಕೋ ಅವರಿಗೆ ತಲುಪಿಸಿದ್ದೇನೆ.

ಏಕೆ ಈ ಸದನದಲ್ಲಿ ಕೆಲವನ್ನು ಹೇಳುವುದಕ್ಕಾಗುವುದಿಲ್ಲ ಎಂದರೆ ಅದು ಯಾರಿಗೂ ಗೊತ್ತಾಗುತ್ತದೆ ಎಂದು ಅಲ್ಲ. ಅದು ಆ ವಿಷಯದ ಗಾಂಭೀರ್ಯತೆಯನ್ನು ಕಡಿಮೆ ಮಾಡುತ್ತದೆ. ನಾನು ತಮಿಳುನಾಡು ಬಗ್ಗೆ ಪಾಕಿಸ್ತಾನ ಅಲ್ಲ ಎಂದು ಹೇಳಿದ್ದು ನಿಜ. ನಾವು ನೆರೆಹೊರೆಯವರು ಯಾವಾಗಲೂ ತಮಿಳುನಾಡು ಅಂದ ಕೂಡಲೇ ಅವನು ಮಹಾ ರಾಕ್ಷಸ ಎನ್ನುವ ಹಾಗೆ, ಕರ್ನಾಟಕ ಅಂದ ಕೂಡಲೇ ನೀರಿನ ವಿಷಯ ಬಂದಾಗ ಕರ್ನಾಟಕದ ಮೇಲೆ ನಾವು ಡಿಪೆಂಡ್ ಆಗಬಾರದು ಎಂದು ಅಲ್ಲಿ ಕರುಣಾನಿಧಿಯವರ ವಿರೋಧಿಗಳು ಕರುಣಾನಿಧಿಯವರಿಗೆ ಹೇಳಿದರು. ಅವರು ಕರುಣಾನಿಧಿಯವರು ಏನು ಹೇಳಿದರು ಮಾತುಕತೆ ಆಡುವುದರಲ್ಲಿ ಏನೂ ತಪ್ಪು ಇಲ್ಲ ಎಂದು. ಹಾಗೆ ಅಂತ ಮಾತುಕತೆ ಆಡುತ್ತೇವೆಂದು ಅಂಥದ್ದೇ ಟ್ರಿಬ್ಯುನಲ್ ಚೌಕಟ್ಟಿನಲ್ಲಿ ಕೆಲಸ ಮಾಡಬೇಕೇ ಹೊರತು, ಇಲ್ಲದೆ ಇದ್ದರೆ ಚಳುವಳಿ ಮಾಡುತ್ತೇವೆಂದು ಆ ರಾಜ್ಯದ ಅವರ ವಿರೋಧಿಗಳು ಹೇಳಲು ಪ್ರಾರಂಭ ಮಾಡಿದರು.

ನಾನು ಇವೊತ್ತು ಬದಲಾದ ಪರಿಸ್ಥಿತಿಯಲ್ಲಿ ನಮ್ಮವರೇ ಪ್ರಧಾನ ಮಂತ್ರಿ ಇರುವುದರಿಂದ ನಮ್ಮ ಪ್ರಧಾನ ಮಂತ್ರಿಗಳ ಹಿಂದೆ ಈ ಮೂರು-ನಾಲ್ಕು ರಾಜ್ಯಗಳಿರುವುದರಿಂದ ಬಹುಶಃ ರಾಜಕೀಯವಾಗಿ ಇಂತಹ ಒಳ್ಳೆಯ ವಾತಾವರಣ ಇರಲಿಲ್ಲ, ಮುಂದೆ ಬರಲಾರದು ಎನ್ನುವ ಒಂದು ಕಾರಣದಿಂದ ಮಾತುಕತೆಗಳಿಂದ ಬಗೆಹರಿಸಬಹುದು.

ಇದು ಸುಪ್ರೀಂಕೋರ್ಟ್ ಹೇಳಿದ್ದು ಏನು? ಇಂತಹ ವಿಷಯಗಳಿಗೆ ಕೋರ್ಟ್ ಅಥವಾ ಟ್ರಿಬ್ಯುನಲ್ ಗೆರೆ ಕೊರೆದು ಹೇಳುವುದು ಕಷ್ಟವಾಗುತ್ತದೆ. ಇಂತಹವು ಮಾತುಕತೆಯಿಂದಲೇ ಬಗೆಹರಿಸಬೇಕೆಂದು ಹೇಳಿದ್ದರಿಂದ ಹಿಂದಿನ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ನಾನು ಎಷ್ಟು ಹೇಳಬೇಕೋ ಅಷ್ಟು ಹೇಳಿದ್ದೇನೆ. ಇದನ್ನು ನಾವು ನಮ್ಮ ರಾಜ್ಯದ ಹಿತ ರಕ್ಷಣೆ ಮಾಡಬೇಕೆಂದು ಇದ್ದೆವು. ಇದರಿಂದ ಪರ್ಮನೆಂಟ್ ಪರಿಹಾರ ಏನಾದರೂ ಸಿಗುತ್ತದೆ ಎಂದು ಕಂಡರೆ ನಾವು ಈಗ ಅನಾವಶ್ಯಕವಾಗಿ ಅವರನ್ನು ರೇಗಿಸುವ ಮಾತು ಆಡುವುದಕ್ಕೆ ಹೋಗಬಾರದು. ಕೊನೆಗೆ ಹಿತರಕ್ಷಣೆ ಬಂದಾಗ ಕರ್ನಾಟಕದ ಹಿತ ಹೇಗೆ ರಕ್ಷಣೆ ಮಾಡಬೇಕೆಂಬುದು ಗೊತ್ತಿದೆ. ಅವರಷ್ಟು ಉದ್ವೇಗದಿಂದ ಮಾತನಾಡದೆ ಇದ್ದರೂ ರಕ್ಷಣೆ ಮಾಡಿಕೊಳ್ಳುವ ಪರಿಸ್ಥಿತಿ ಬಂದಾಗ ಎಂತಹ ಸ್ಥಿತಿಗಾದರೂ ಹೋಗಬಲ್ಲೆವು ಎಂಬುದು ಗೊತ್ತಿದೆ. ಮಲ್ಲಣ್ಣನವರು ಹೇಳಿದ್ದು ಸರಿ ಇದೆ.

**ಹೆಚ್.ಕೆ. ಪಾಟೀಲ್:** ಆ ಸ್ಥಿತಿಗೆ ಹೋಗಬೇಕಾಗುತ್ತದೆ, ನಾವು ನೀವು ಎಲ್ಲರೂ ಕೂಡಿ ಹೋಗೋಣ. ಆದರೆ ನಿಮ್ಮ ಕ್ರಮಗಳು ಏನು ಇವೆ, ನಿಮ್ಮ ಹೆಜ್ಜೆಗಳು ಏನಿವೆ ತಾವು ಹೇಳಿದರೆ ಕರ್ನಾಟಕದ ಹಿತ ರಕ್ಷಣೆ ಮಾಡುವುದಕ್ಕೆ ನಾವೆಲ್ಲರೂ ಕೂಡಿ ಹೋಗಬೇಕು. ತಮಗೆ ಗೊತ್ತಿದೆ, ನಾವು ಶಾಸಕಾಂಗ ಸಭೆಯಲ್ಲಿ ಏನು ನಿರ್ಣಯ ತೆಗೆದುಕೊಂಡಿದ್ದೆವು, ಶಾಸಕಾಂಗದಲ್ಲಿ ಏನು ನಿರ್ಣಯ ತೆಗೆದುಕೊಂಡಿದ್ದೆವು ಮತ್ತು ಸರ್ವಪಕ್ಷಗಳ ಸಭೆಯಲ್ಲಿ ಏನು ನಿರ್ಣಯ ತೆಗೆದುಕೊಂಡಿದ್ದೆವು ಎಂದು. ನಾವು ಏನು ಹೇಳಿದೆವು; ನೀವು ಟ್ರಿಬ್ಯುನಲ್ ಎದುರಿಗೆ

ಹೋಗಬೇಡಿ, ಟ್ರಿಬ್ಯುನಲ್‌ನಲ್ಲಿ ಭಾಗವಹಿಸಬೇಡಿ ಎಂದು. ನೀವು ಏನು ಮಾಡಿದಿರಿ; ಆ ಟ್ರಿಬ್ಯುನಲ್‌ನಲ್ಲಿ ಮೈನ್ ಆರ್ಡರ್ 1991 ರ ಇಂಟರೀಮ್ ಆರ್ಡರ್ ಏನಿತ್ತು, ಅದನ್ನು ಮಾಢಿಫೈ ಮಾಡಿದಿರಿ. ಯಾವುದನ್ನು ಈ ಶಾಸಕಾಂಗ ತಿರಸ್ಕಾರ ಮಾಡಿತ್ತು, ಅದನ್ನು ಮಾರ್ಪಾಡು ಮಾಡಿ ಎಂದು ತಾವು ಮುಖ್ಯಮಂತ್ರಿಗಳು ಆದ ಮೇಲೆ ಅರ್ಜಿ ಸಲ್ಲಿಸಿದಿರಿ. ಆದಾದ ಮೇಲೆ ನಾವು ನಿಮಗೆ ಸಾಕಷ್ಟು ಟೀಕೆ ಮಾಡಿದೆವು; ಸರ್ವ ಪಕ್ಷಗಳ ಸಭೆಯಲ್ಲಿ ನಾವು ಹೇಳಿದೆವು, ಸನ್ಮಾನ್ಯ ವೀರಪ್ಪ ಮೊಯಿಲಿಯವರು ಒಂದು ಕ್ಯಾಲುಕ್ಲೇಷನ್ ಕೊಟ್ಟಿದ್ದಾರೆಂದು ಹೇಳಿ, ಈ ಸದನದಲ್ಲಿ ಮತ್ತು ಕೆಳಗಿನ ಮನೆಯಲ್ಲಿ ನೀವು ಇದ್ದಾಗ ಈ ಕ್ಯಾಲುಕ್ಲೇಷನ್ ಕೊಟ್ಟಿದ್ದೀರೆಂದು ನಿಮ್ಮ ಬೇಡಿಕೆಯನ್ನು..

**M.C. Nanaiah (Law Minister):** We should set the records right. ನಾನೇ ಇದನ್ನು ಹೇಳಿದ್ದೇನೆ. 1993ನೇ ಇಸವಿಯಲ್ಲಿ ಡಿಸ್ಟ್ರೆಸ್ ಫಾರ್ಮುಲಾಗೆ ಸಂಬಂಧಪಟ್ಟ ಹಾಗೆ ವೀರಪ್ಪ ಮೊಯಿಲಿಯವರು ಮುಖ್ಯಮಂತ್ರಿಗಳಾಗಿದ್ದಾಗ ಯಾವ ರೀತಿ ನೀರು ಕಡಿಮೆ ಆದಂತಹ ಸಂದರ್ಭದಲ್ಲಿ ನಮ್ಮ ರಾಜ್ಯ ಕಾರ್ಯಕ್ರಮ ತೆಗೆದುಕೊಳ್ಳಬೇಕೆಂದು ಹೇಳುವುದನ್ನು ನೀವು ನಿಮ್ಮ ಕ್ಯಾಬಿನೆಟ್ ಸಬ್ ಕಮಿಟಿಯಲ್ಲಿ ಒಪ್ಪಿಗೆ ಕೊಟ್ಟು ನಾವು ಅದನ್ನು ಟ್ರಿಬ್ಯುನಲ್‌ನಲ್ಲಿ ಫೈಲ್ ಮಾಡಿದ್ದೇವೆ. ಇದು ತಪ್ಪಲ್ಲ ಎಂದು ನಾನೇ ಹೇಳಿದ್ದೇನೆ. It was not wrong. ನೀವು ಅದನ್ನು ಮಾಡಲೇಬೇಕಾಗುತ್ತದೆ. ಅದಾದ ಮೇಲೆ ಕ್ಲ್ಯಾರಿಫಿಕೇಟರಿ ಆರ್ಡರ್‌ನ್ನು ಟ್ರಿಬ್ಯುನಲ್‌ನಲ್ಲಿ ಕೊಟ್ಟಾಗ ಎಲ್ಲಾದರೂ ಎರಡು ರಾಜ್ಯಗಳಿಗೆ ಸಂಬಂಧಪಟ್ಟ ಹಾಗೆ ಡಿಸ್ಟ್ರೆಸ್ ಬಂದು ಡಿಮಿನಿಷನ್ ಆಫ್ ವಾಟರ್ ಇದ್ದಾಗ, ಮಳೆ ಬಾರದೇ ಇದ್ದ ಸಂದರ್ಭದಲ್ಲಿ ಪ್ರೋರೋಟಾ ಶೇರಿಂಗ್ ಆಫ್ ಡಿಸ್ಟ್ರೆಸ್, ಪ್ರೊರೋಟಾ ಶೇರಿಂಗ್ ಆಫ್ ವಾಟರ್‌ಗೆ ಅವಕಾಶ ಇದೆ. Come before the Tribunal ಎಂದು ಹೇಳತಕ್ಕದ್ದೂ ಟ್ರಿಬ್ಯುನಲ್‌ನವರೇ. Therefore, let me tell you, we never criticised. We said, it was a welcome move.

**ಹೆಚ್.ಕೆ. ಪಾಟೀಲ್:** ತಾವು ಟೀಕೆ ಮಾಡಿದಿರಿ ಎಂದು ಹೇಳಿದಿರಿ. ಅದಕ್ಕೆ ಕಾಗದಗಳು ನನಗೆ ಸಿಕ್ಕಾಗ ನಾನು ನಿಮಗೆ ಕೊಡುತ್ತೇನೆ. ಸನ್ಮಾನ್ಯ ಸಭಾಪತಿಯವರೇ, ನಾವೆಲ್ಲರೂ ಇಲ್ಲಿ ಏನು ನಿರ್ಣಯ ಮಾಡಿದ್ದೆವು, ಕರ್ನಾಟಕದ ಜನ ಏನು ನಿರ್ಣಯ ಮಾಡಿದ್ದರು, ಟ್ರಿಬ್ಯುನಲ್ ಎದುರಿಗೆ ನೀವು ಹೋಗಬೇಡಿ, ಭಾಗವಹಿಸಬೇಡಿ ಎಂದು. ಆದರೆ ನೀವು ಅದರಂತೆ ಮಾಡಲಿಲ್ಲ. ನೀವು ಏಕೆ ಆ ನಿರ್ಣಯಕ್ಕೆ ವ್ಯತಿರಿಕ್ತವಾಗಿ ನಡೆದುಕೊಂಡಿರಿ ಅನ್ನುವುದನ್ನು ಈ ಸದನಕ್ಕೆ ನೀವು ಹೇಳಬೇಕಾಗುತ್ತದೆ. ಸನ್ಮಾನ್ಯ ಭಾರಿ ನೀರಾವರಿ ಸಚಿವರು ನಾವು ಡಿಸ್ಟ್ರೆಸ್ ಷೇರಿಂಗ್‌ನ್ನು ಇನ್ನೂ ಡಿಸೈಡ್ ಮಾಡಿಲ್ಲ ಎಂದು ಹೇಳಿದರು.

**K.N. Nage Gowda:** We have filed the application still the Tribunal has not given the award. We have filed the application on the 9th and today is 11th. Only two days back we filed the application.

ವಿ.ಆರ್. ಸುದರ್ಶನ್: ಮಾನ್ಯ ಸಭಾಪತಿಯವರೆ, ಇದು ಸೂಕ್ಷ್ಮವಾದ ವಿಚಾರ ಎನ್ನುವಂತಹ ವಿಚಾರವನ್ನು ನಾವು ಒಪ್ಪಿದ್ದೇವೆ. ಮತ್ತು ಸರ್ಕಾರ ಕೇವಲ ಸುಪ್ರೀಂ ಕೋರ್ಟಿನ ಆದೇಶದ ಮೇಲೆ ಇಂತಹ ಸೂಕ್ಷ್ಮ ಸಮಸ್ಯೆಗಳು ಬಗೆಹರಿಸುವುದಿಲ್ಲ ಎಂದು ನಾವು ಒಪ್ಪುತ್ತೇವೆ. ಹಾಗಿದ್ದರೆ, ತಮಿಳುನಾಡಿನ ಜೊತೆ ಚರ್ಚೆಯನ್ನು ಯಾವಾಗ ಪ್ರಾರಂಭ ಮಾಡುತ್ತೀರಿ, ಪ್ರಾರಂಭ ಮಾಡತಕ್ಕಂಥ ಪ್ರಯತ್ನಗಳು ರಾಜ್ಯ ಸರ್ಕಾರದ ಕಡೆಯಿಂದ ಅಥವಾ ಕೇಂದ್ರ ಸರ್ಕಾರದ ಕಡೆಯಿಂದ ಏನಾದರೂ ಪ್ರಯತ್ನಗಳು ನಡೆದಿವೆಯೇ ಎಂಬುದನ್ನು ತಾವು ತಿಳಿಸಬೇಕು. ಒಂದು ಮಾತನ್ನು ಮಾನ್ಯ ಪಾಟೀಲರು ಸ್ಪಷ್ಟವಾಗಿ ಹೇಳಿದ್ದಾರೆ. ನಾವು ಪ್ರತಿ ಸಾರಿ ಕೂಡ ಡಿಸ್ಟ್ರೆಸ್‌ನಲ್ಲಿದ್ದೇವೆ, ನಮಗೆ ನೀರು ಸಾಕಾಗುತ್ತಿಲ್ಲ ಎನ್ನತಕ್ಕಂಥದ್ದು, ಮತ್ತೆ ನಾವು ನೀರನ್ನು ಬಿಡತಕ್ಕಂಥ ಪ್ರಯತ್ನವನ್ನು ಮಾಡುತ್ತಿದ್ದೇವೆ. ಇದರಿಂದ ಏನಾಗುತ್ತದೆ ಎಂದರೆ ಬರೀ ನಮ್ಮ ರಾಜ್ಯದ ಜನರಷ್ಟೇ ಅಲ್ಲ, ಬೇರೆ ಬೇರೆ ಭಾಗದಲ್ಲೂ ಕೂಡ ಕರ್ನಾಟಕ ಸರ್ಕಾರದ ಬಗ್ಗೆ ಮತ್ತು ಕರ್ನಾಟಕದ ವಿಚಾರದಲ್ಲಿ ವಿಶ್ವಾಸ ಹೋಗುತ್ತಿದೆ. ಏನಪ್ಪಾ ಇವರು ನೀರನ್ನು ಇಟ್ಟುಕೊಂಡು ಆಟವನ್ನು ಆಡತಕ್ಕಂಥ ಪ್ರಯತ್ನವನ್ನು ಮಾಡುತ್ತಿದ್ದಾರೆ ಎಂದು ಒಂದು ರೀತಿಯಾದ ಅಪಹಾಸ್ಯಕ್ಕೆ ಕೂಡ ಈಡಾಗುವಂಥ ಸಾಧ್ಯತೆ ಇದೆ. ಆದ್ದರಿಂದ ಅದಕ್ಕೆ ಕೇವಲ ತಾತ್ಕಾಲಿಕ ಕಾರ್ಯಕ್ರಮಗಳು ಅಥವಾ ತಾತ್ಕಾಲಿಕ ಯೋಚನೆ ಮಾಡುವುದು ಸಾಕಾಗುವುದಿಲ್ಲ. ಅದಕ್ಕೇನಾದರೂ ಪರ್ಮನೆಂಟಾಗಿ ಸಾಲ್ವ್ ಮಾಡಲಿಕ್ಕೆ ಸರ್ಕಾರ ಯಾವ ರೀತಿಯಾದಂಥ ಕಾರ್ಯಕ್ರಮಗಳನ್ನು ತೆಗೆದುಕೊಂಡಿದೆ ಎನ್ನತಕ್ಕಂಥದ್ದನ್ನೂ ಕೂಡ ತಿಳಿಸಬೇಕು.

ಸಭಾಪತಿಗಳು: ಮಾನ್ಯ ತಂಗಾರವರೇ, ತಾವೇನಾದರೂ ಕೇಳುತ್ತೀರಾ?

**Dr. M.R. Tanga:** Sir, taking into consideration the various important matters raised and seriousness of the issue, I request you to give sufficient time to discuss this matter.

ಜೆ.ಹೆಚ್. ಪಟೇಲ್: ಒಂದು ದಿನ ನೀರು ಇಲ್ಲ ಎಂದು ಹೇಳಿದಿರಿ, ಆ ಮೇಲೆ ನೀರು ಬಿಟ್ಟಿರಿ, ಏಕೆ ಬಿಟ್ಟಿರಿ, ಅಂದರೆ ಅದಕ್ಕೂ ಉತ್ತರ ಇಲ್ಲಿ ಕೊಡುವುದಕ್ಕಾಗುವುದಿಲ್ಲ. ಅವರನ್ನು ಕರೆದು ಮಾತನಾಡುತ್ತೇನೆ. ಇನ್ನೊಂದು ಹೇಳಿದರು ನೀವು ಟ್ರಿಬ್ಯೂನಲ್ ಮುಂದೆ ಹೋಗುವುದಿಲ್ಲ ಎಂದು ಹೇಳಿದ್ದೀರಿ, ಹೋಗುವುದಕ್ಕೆ ಆಗುತ್ತದೆ ಎಂದು ಏತಕ್ಕೆ ಹೇಳಿದ್ದೀರಿ. ಅದಕ್ಕೂ ಇಲ್ಲಿ ಉತ್ತರ ಕೊಡುವುದಕ್ಕಾಗುವುದಿಲ್ಲ. However, I am confident of convincing them.

(ವಿಧಾನಪರಿಷತ್ತಿನ ಕಲಾಪ, ಜುಲೈ 1996)

ವಿಧಾನಸಭಾಧ್ಯಕ್ಷನಾಗಿ ನನ್ನ ಅನುಭವವೆಂದರೆ ಸನ್ಮಾನ್ಯ ದೇವೇಗೌಡರ ಹತ್ತಿರ ಮಾತನಾಡುವುದು ಕಷ್ಟವಾಗುತ್ತಿತ್ತು. ಅವರು ಸ್ವಲ್ಪ ಗಂಭೀರ ಸ್ವಭಾವದವರು. ಆದರೆ ಮಾನ್ಯ ಜೆ.ಹೆಚ್. ಪಟೇಲರ ಹತ್ತಿರ ನನಗೆ ಹೆಚ್ಚು ಸಲುಗೆ, ಆತ್ಮೀಯತೆ. ಅವರಿಗೆ ಯಾವ ಸಂಗತಿಯನ್ನು ಹೇಗೆ ಬೇಕಾದರೂ ಮುಟ್ಟಿಸಬಹುದು. ಅತ್ಯಂತ ಸರಳ, ನೇರ ಮತ್ತು ಸ್ಪಟಿಕ ಮನಸ್ಸಿನ ವ್ಯಕ್ತಿ ಪಟೇಲರು.

(ರಮೇಶ್‌ಕುಮಾರ್, ಮಾನ್ಯ ಸಭಾಧ್ಯಕ್ಷರು, ವಿಧಾನಸಭೆ, ಜುಲೈ 12, 1999)

# 17

## "ಹುಚ್ಚುರಾಯಸ್ವಾಮಿ ರಥೋತ್ಸವ"

## ಜನಸೇವೆ ಮತ್ತು ಸರ್ಕಾರಿ ಯಂತ್ರದ ಗಾಲಿಗಳು

"ಈಗ ಆಡಳಿತದಲ್ಲಿರುವ ಸರ್ಕಾರ ಹುಚ್ಚುರಾಯಸ್ವಾಮಿ ರಥ ಇದ್ದಂತೆ". ವಿಧಾನಸಭೆಯಲ್ಲಿ ಪ್ರತಿಪಕ್ಷದ ಶಾಸಕರೊಬ್ಬರು ಹೇಳಿದ ಮಾತಿದು. (ಫೆಬ್ರವರಿ 6, 1986) ಸರ್ಕಾರಿ ಯಂತ್ರದ ಚಾಲನೆ ಮತ್ತು ಅದರ ಗಾಲಿಗಳು ಉರುಳುವ ರೀತಿಯನ್ನು ಕುರಿತು ಆಡಿದ ಉಪಮಾನದಮಾತುಗಳಿವು. ಮಾತಿನ ಅರ್ಥ ತಿಳಿಯುವ ಮುನ್ನ ಹುಚ್ಚುರಾಯುಸ್ವಾಮಿಯುನ್ನು ಪರಿಚಯಿಸಿಕೊಳ್ಳೋಣ.

ಶಿವಮೊಗ್ಗ ಜಿಲ್ಲೆ, ಶಿಕಾರಿಪುರದ ಆರಾಧ್ಯದೈವ ಶ್ರೀ ಹುಚ್ಚುರಾಯ ಸ್ವಾಮಿ. ಮಲೆನಾಡಿನ ಜನ ಆಂಜನೇಯನಿಗೆ ಇಟ್ಟ ಹೆಸರು ಹುಚ್ಚುರಾಯ. ನಮ್ಮ - ನಿಮ್ಮ ಊರುಗಳಲ್ಲಿ ನಡೆಯುವಂತೆಯೇ, ವರ್ಷಕ್ಕೊಮ್ಮೆ ಹುಚ್ಚುರಾಯಸ್ವಾಮಿಗೂ ರಥೋತ್ಸವ ನಡೆಯುತ್ತದೆ. ಭವ್ಯವಾಗಿ ಅಲಂಕರಿಸಿದ ರಥವನ್ನು ಭಕ್ತಜನ ಶ್ರದ್ಧೆ-ಭಕ್ತಿಯಿಂದ ಎಳೆಯುತ್ತಾರೆ.

ರಥವನ್ನೆಳೆಯುವ ವಿಧಾನದಲ್ಲಿದೆ ಈ ಮಾತಿನ ಒಳ ಅರ್ಥ. ಸರ್ಕಾರದ ರಥವೂ ಹೀಗೆಯೇ. ಹಾಕಿಕೊಂಡ ಪಥವನ್ನನುಸರಿಸಿ ಭಕ್ತರೆಲ್ಲಾ ಒಟ್ಟಿಗೇ ರಥ ಎಳೆದರೆ ಅದು ನಿರೀಕ್ಷಿಸಿದ ರೀತಿಯಲ್ಲಿ ಚಲಿಸಬಲ್ಲದು. ಇಲ್ಲದಿದ್ದರೆ ಎಲ್ಲವೂ ಅಸ್ತವ್ಯಸ್ತ. ದಿಕ್ಕಾಪಾಲು. ಕೂಡು ಜವಾಬ್ದಾರಿಯ (collective responsibility) ಹೊಣೆ ಹೊತ್ತ ಮಂತ್ರಿಮಂಡಲ ಒಂದೇ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸಿದರೆ ಮಾತ್ರ ಪ್ರಜಾತಂತ್ರದಲ್ಲಿ ಸರ್ಕಾರಿ ಯಂತ್ರ ನಿರ್ಣಾಯಕವಾಗಿ ಚಲಿಸಿ ಜನಸೇವೆಯಲ್ಲಿ ತೊಡಗಬಹುದು ಎಂಬುದು ಈ ಟೀಕೆಯ ಅರ್ಥ.

ಇದೇ ಮಾತನ್ನು ವಿಧಾನಸೌಧದ ರೂವಾರಿ, ಕರ್ನಾಟಕದ ಮಾಜಿ ಮುಖ್ಯಮಂತ್ರಿ, ಮತ್ಸದ್ದಿ, ಶ್ರೇಷ್ಠ ಆಡಳಿತಗಾರ ದಿವಂಗತ ಕೆಂಗಲ್ ಹನುಮಂತಯ್ಯನವರು ಮತ್ತೊಂದು ರೀತಿಯಲ್ಲಿ ಹೇಳಿರುವುದನ್ನು ಈ ಸಂದರ್ಭದಲ್ಲಿ ಉಲ್ಲೇಖಿಸುವುದು ಪ್ರಸ್ತುತ.

"ಸರ್ಕಾರದ ಕೆಲಸ ದೇವರ ಕೆಲಸ" - (Government work is God's work) ಹೀಗೆಂದು ಕರ್ನಾಟಕ ವಿಧಾನಮಂಡಲಗಳನ್ನು ಒಡಲಿಲ್ಲ ಹೊತ್ತಿರುವ ವಿಧಾನಸೌಧದ ಮೇಲೆ ಬರೆಸಿದವರು ಕೆಂಗಲ್ಲರು. ಇಡೀ ಏಷಿಯಾಖಂಡದಲ್ಲಿಯೇ ಶಿಲ್ಪಕಲಾ ಕುಶಲತೆ, ವಿನ್ಯಾಸ ಮತ್ತು ಸೌಂದರ್ಯದ ಅಪೂರ್ವ ಪರಿಕಲ್ಪನೆ ಈ ಕಟ್ಟಡ.

ಪೂರ್ವ ಮಹಾದ್ವಾರದ ತಲೆಗಲ್ಲಿನ ಮೇಲಿದೆ ಈ ಬರಹ. ಅರಿವು ಮತ್ತು ಬೌದ್ಧಿಕ ತಿಳುವಳಿಕೆಗೆ ಈ ಮಾತು ಇಂದಿಗೂ ಒಂದು ಸವಾಲು. ವಿಧಾನಸೌಧವನ್ನು ನೋಡಬರುವ ತಲೆತಲೆಮಾರಿನ ಜನರಿಗೆ ಸರ್ಕಾರದ ಬಗೆಗೆ ಮತ್ತು ಶಾಸಕಾಂಗವನ್ನು ಕುರಿತಂತೆ, ಪರಿಶುದ್ಧ ಭಾವನೆ ಮೂಡಲಿ ಎಂದು ಕೆಂಗಲ್ಲರು ಯೋಚಿಸಿರಬೇಕು. ಕೆಂಗಲ್ಲರಂತೆಯೇ ಪಟೇಲರಿಗೂ ಇಲ್ಲಿ ಕೆಲಸ ಮಾಡುವ ಸರ್ಕಾರಿ ನೌಕರರಲ್ಲಿ ಸರ್ಕಾರದ ಕೆಲಸದ ಬಗೆಗೆ ಕರ್ತವ್ಯ ಪ್ರಜ್ಞೆ, ಶ್ರದ್ಧೆ, ಭಯ-ಭಕ್ತಿ ಸದಾ ಜಾಗ್ರತವಾಗಿರಲಿ ಎಂಬ ಹಿರಿಯಾಸೆ ಇತ್ತು.

ಪಟೇಲರು ಮಂತ್ರಿಯಾಗಿ, ನಂತರ ಉಪಮುಖ್ಯಮಂತ್ರಿಯಾಗಿ, ಕೊನೆಗೆ ಮುಖ್ಯಮಂತ್ರಿಯಾಗಿ ಕಾರ್ಯನಿರ್ವಹಿಸಿದ ವಿವಿಧ ಹಂತಗಳಲ್ಲಿನ ಸರ್ಕಾರಿ ಇಲಾಖೆಗಳ ಕಾರ್ಯಪ್ರಗತಿ, ಸಮನ್ವಯತೆ, ಲೋಪ-ದೋಷ, ಭ್ರಷ್ಟಾಚಾರ, ವೈಫಲ್ಯ, ಸಾಫಲ್ಯ, ಸಾಧನೆ, ಯೋಜನೆಗಳ ತ್ವರಿತಗತಿ, ಕೈಗಾರಿಕಾ ಘಟಕಗಳ ಕಾರ್ಯ ವೈಖರಿ, ದಿಲ್ಲಿಯ ಕರ್ನಾಟಕ ಭವನ, ಬತ್ತುತ್ತಿರುವ ಅಂತರ್ಜಲ, ಜಾತೀಯತೆ, ಐಎಎಸ್ ಅಧಿಕಾರಿ ವರ್ಗ, ಗಗನಕ್ಕೇರಿದ ಬೆಲೆಗಳು - ಹೀಗೆ ವಿವಿಧ ಸೇವಾ ವಿವಿಧ ಕ್ಷೇತ್ರಗಳನ್ನು ಕುರಿತು ಪ್ರಶ್ನೆ - ಉತ್ತರ ಇಲ್ಲಿ ಪ್ರಸ್ತಾಪಿತವಾಗಿವೆ.

ಕಾಲನ ಪಥದಲ್ಲಿ ಹುಚ್ಚುರಾಯಸ್ವಾಮಿ ರಥ ಚಲಿಸುತ್ತಲೇ ಇದೆ.

## ವರ್ಗಾವರ್ಗಿ : ಅಸಹಾಯಕ ಪರಿಸ್ಥಿತಿ

ಜೆ.ಹೆಚ್. ಪಟೇಲ್ (ಉಪ ಮುಖ್ಯ ಮಂತ್ರಿ): ನಾನು ಇಂದು ಉಪಮುಖ್ಯ ಮಂತ್ರಿ ಆಗಿರಬಹುದು.. ಆದರೂ ಆಡಳಿತ ವ್ಯವಸ್ಥೆಯಲ್ಲಿನ ಇತಿ ಮಿತಿ ಮತ್ತು ಶಾಸಕರ ಸಹಕಾರ ಇವುಗಳ ನಡುವೆ ಸಾಮರಸ್ಯ ಇದ್ದಾಗ ಮಾತ್ರ ನಾವು ರಾಜ್ಯದಲ್ಲಿ ಏನಾದರೊಂದು ಸಾಧನೆ ಮಾಡಿ ತೋರಿಸಲು ಸಾಧ್ಯ ಎನ್ನುವುದಕ್ಕೆ ಒಂದು ಮಾತು ಹೇಳಬಯಸುತ್ತೇನೆ.

ಮಾನ್ಯ ದೇವರಾಜ ಅರಸುರವರ ಕಾಲದಲ್ಲಿ ನಾನು ವಿರೋಧ ಪಕ್ಷದಲ್ಲಿದ್ದೆ. ನಾವು (ಪ್ರತಿಪಕ್ಷದವರು) ಎಂದೆಂದೂ ಇಂತಹ ತಹಶೀಲ್ದಾರ್ ಅಥವಾ ಇಂಜಿನಿಯರ್ ಹಾಕಿ ಎಂದು ಕೇಳುತ್ತಿರಲಿಲ್ಲ.

ಈಗಿನ ಪರಿಸ್ಥಿತಿ ಮುಂಚಿನಂತಿಲ್ಲ. ನಾನು ಯಾವುದೇ ಒಬ್ಬ ಶಾಸಕರನ್ನು ಕುರಿತು ಈ ಮಾತು ಹೇಳುತ್ತಿಲ್ಲ.. ಇಡೀ ಸದನದ ಸದಸ್ಯರು ಈ ಬಗೆಗೆ ಚಿಂತಿಸುವ ಕಾಲ ಬಂದಿದೆ.

ಬಿ.ಬಿ. ಶಿವಪ್ಪ: ಮಾನ್ಯ ಉಪಮುಖ್ಯಮಂತ್ರಿಗಳೇ, ನಮ್ಮ ಕಡೆಯಿಂದ (ಶಾಸಕರ ಪತಿಯಿಂದ) ಒಂದು ನಿದರ್ಶನ ಹೇಳಬಯಸುತ್ತೇನೆ. ಈ ರಾಜ್ಯದ ಮುಖ್ಯಮಂತ್ರಿಗಳು ಒಬ್ಬ ಸಾಮಾನ್ಯ ಟ್ರೆಜರಿ ಆಫೀಸರ್ ವರ್ಗಕ್ಕಾಗಿ ಪತ್ರ ಕೊಡುತ್ತಾರೆ. ಆ ಪತ್ರದ ಆಧಾರದ ಮೇಲೆ ಆತ ಚಿಕ್ಕಮಗಳೂರಿನಿಂದ ಸಕಲೇಶಪುರಕ್ಕೆ ವರ್ಗವಾಗಿ ಬಂದು, ಚಾರ್ಜ್ ತೆಗೆದುಕೊಂಡು ಒಂದು ತಿಂಗಳು ಕೆಲಸ ಮಾಡುತ್ತಿರುತ್ತಾನೆ. ಅಷ್ಟರಲ್ಲಿ ಮತ್ತೊಂದು ಆದೇಶ ಬರುತ್ತದೆ. ನೀವು ಮೊದಲು ಎಲ್ಲಿದ್ದರೋ ಅಲ್ಲಿಗೆ ಹೋಗಿ ಎನ್ನುತ್ತದೆ ಈ ಆದೇಶ. ಹೇಳಿ ಸ್ವಾಮಿ, ಇದಕ್ಕೆ ಏನಾದರೂ ನೀತಿನಿಯಮ ಇದೆಯೇ? ಮಾನ್ಯ ಮುಖ್ಯಮಂತ್ರಿಗಳ ಪತ್ರಕ್ಕೂ ಮಾನ್ಯತೆ ಬೇಡವೇ?

ಜೆ.ಹೆಚ್. ಪಟೇಲ್: ಮಂತ್ರಿಮಂಡಲದ ಅಭಿಪ್ರಾಯ, ನನ್ನ ಮನವಿ ಮತ್ತು ಉಳಿದ ಮಂತ್ರಿಗಳ ಇಚ್ಛೆಯೂ ಇದೇ ಆಗಿದೆ.

ಏನಾದರೊಂದು ನೀತಿ ಸಂಹಿತೆ ಅಗತ್ಯ. ಇಲ್ಲದಿದ್ದರೆ ಬಲು ಕಷ್ಟ. ಈ ಅಧಿಕಾರಿಗಳು ಸಾಮಾನ್ಯರಲ್ಲ. ಒತ್ತಡವನ್ನು ತರುತ್ತಾರೆ. ಶಾಸಕರಿಗೂ ಪ್ರಾಣ ಹಿಂಸೆ. ಇದಕ್ಕೊಂದು ಉದಾಹರಣೆ ಹೇಳುತ್ತೇನೆ. ಬೆಳಗಾವಿ ಜಿಲ್ಲೆಯ ಶಾಸಕರೊಬ್ಬರು ಇತ್ತೀಚೆಗೆ ನನ್ನ ಮನೆಗೆ ಬಂದರು. ಇಂತಹ ಅಧಿಕಾರಿಯೊಬ್ಬನನ್ನು ವರ್ಗ ಮಾಡದಿದ್ದರೆ ನಾನು ರೂಮಿಗೆ (ಶಾಸಕರ ಭವನಕ್ಕೆ) ಹೋಗುವ ಹಾಗೆಯೇ ಇಲ್ಲ. ನನ್ನ ಕ್ಷೇತ್ರದ ಜನ ಅಲ್ಲಿ ಧರಣಿಕೂತಿದ್ದಾರೆ-ಎಂದು ಪ್ರಾಮಾಣಿಕವಾಗಿ ತಮ್ಮ ಅಳಲನ್ನು ತೋಡಿಕೊಂಡರು. ಇದು ಎಲ್ಲರಿಗೂ ಸಾಮಾನ್ಯವಾಗಿ ಎದುರಾಗುತ್ತಿರುವ ಸ್ಥಿತಿ.

**ಚಂದ್ರಕಾಂತ ಜಿ. ಬೆಲ್ಲದ್** : ಹಿಂದೆ ಇದ್ದ ವರ್ಗಾವಣೆ ನೀತಿಯಲ್ಲಿ ವಿಭಾಗ ಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಇರುತ್ತಿದ್ದ ವ್ಯವಸ್ಥೆ ಸರಿ ಇತ್ತು. ಈಗಿನ ಪದ್ಧತಿ ಶಾಸಕರಿಗೆ ಉಸಿರುಕಟ್ಟಿಸುತ್ತದೆ.

**ಅಧ್ಯಕ್ಷರು (ರಮೇಶ್ ಕುಮಾರ್)**: ನಿಜ ಹೇಳಬೇಕೆಂದರೆ ಚುನಾವಣೆ ಕಾಲದಲ್ಲಿ ಸಹಿತ ನಮಗೆ ಇಷ್ಟೊಂದು ರಕ್ತದ ಒತ್ತಡ ತರುವುದಿಲ್ಲ; ವರ್ಗಾವಣೆ ಕಾಲ ಬಂತೆಂದರೆ ನಮ್ಮ ಸ್ಥಿತಿ ಶೋಚನೀಯ. ಇದರಂತಹ ಹೊಲಸು ಮತ್ತೊಂದಿಲ್ಲ.

**ಮಂಜುನಾಥ ಕುನ್ನೂರ: ಉಪಮುಖ್ಯಮಂತ್ರಿ ಜೆ.ಹೆಚ್. ಪಟೇಲ್ ಕಳೆದ 4-5** ವರ್ಷಗಳಿಂದ ಈ ವರ್ಗಾವರ್ಗಿ ಕಾಟ ಹೆಚ್ಚಾಗಿ ಕಂಡು ಬಂದಿದೆ ಎಂದರು. ಇದು 1983ರಿಂದಲೂ ಇದೆ.

**ಹೆಚ್.ಎನ್. ನಂಜೇಗೌಡ** : ಈ ವರ್ಗಾವಣೆ ಎನ್ನುವುದು ಅಂದಿನ ಸರ್ಕಾರದ ಆಡಳಿತದ ದಕ್ಷತೆಯ ಕನ್ನಡಿ. ಉದಾಹರಣೆಗೆ ಮಾನ್ಯ ಗುಂಡೂರಾಯರ ಆಡಳಿತ ಗುಣಕ್ಕೆ ಮತ್ಸರ ಇರಬಾರದು ಎನ್ನಲು ಹೇಳುತ್ತೇನೆ. ಆತನ ಕಾಲದಲ್ಲಿ ಅತಿ ಹೆಚ್ಚು ಗೋಲೀಬಾರ್ ಆದದ್ದೂ ನಿಜ. ಅಂತೆಯೇ ಅವರ ಕಾಲದಲ್ಲಿ ವರ್ಗಾವಣೆ ವಿಷಯದಲ್ಲಿ ಬಿಗಿ ಇದ್ದದ್ದೂ ನಿಜ.

ಅಧ್ಯಕ್ಷರು : ಮಾನ್ಯ ನಂಜೇಗೌಡರೇ.. ಮಾನ್ಯ ಗುಂಡೂರಾಯರ ಆಡಳಿತಕ್ಕೆ ಶ್ರೀರಕ್ಷೆ ಇತ್ತು. ಶ್ರೀಮತಿ ಇಂದಿರಾಗಾಂಧಿಯವರು ಇದ್ದರು. ಹೆಚ್ಚು ಕಮ್ಮಿ ನಡೆದುಕೊಂಡರೆ ಸದಸ್ಯತ್ವ ಹೋಗುತ್ತದೆ ಎಂದು ಶಾಸಕರು ಹೆದರುತ್ತಿದ್ದರು. ಹೀಗಾಗಿ ಎಲ್ಲವೂ ನಡೆದುಕೊಂಡು ಹೋಗುತ್ತಿತ್ತು.

ಜೆ.ಹೆಚ್. ಪಟೇಲ್: ಈ ವಿಷಯದ ಬಗೆಗೆ ಕ್ಯಾಬಿನೆಟ್‌ನಲ್ಲೂ ಸಾಕಷ್ಟು ಚರ್ಚಿಸಿದ್ದೇವೆ.. ನೀತಿ ಸಂಹಿತೆ ಅತ್ಯಗತ್ಯ ಎಂಬುದು ಎಲ್ಲರ ಅಭಿಪ್ರಾಯ. ಇದೇ ಸರ್ಕಾರದ ಅಭಿಪ್ರಾಯ ಸಹಿತ.

(ವಿಧಾನಸಭೆ ಕಲಾಪ , ಆಗಸ್ಟ್ 9,1995)

## "ಎಮ್ಮೇ ನಿನಗೆ ಸಾಟಿಯಿಲ್ಲ...."

ಮಲ್ಲಿಕಾರ್ಜುನ ಖರ್ಗೆ: ಎಮ್ಮೆ ಸರ್ಕಾರ ಎಂದು ತಾವು ಹೇಳಿದಿರಿ, ಎಮ್ಮೆ ಸರ್ಕಾರ ಎಂದಾದ ಮೇಲೆ ಸರ್ಕಾರ ನಡೆಸುವವರು ಎಮ್ಮೆ ಆಗಿರಬೇಕು ಅಥವಾ ಕೋಣ ಆಗಿರಬೇಕು ಅಲ್ಲವೆ? ಯಾವುದನ್ನಾದರೂ ಒಂದು ಹೇಳಲೇಬೇಕು. ಏನಂತೀರಿ?

ಎಂ.ಪಿ. ಪ್ರಕಾಶ್: ಮಾನ್ಯ ಸದಸ್ಯರು ಹೇಳಿದ್ದು ಎಮ್ಮೆಯ ಸರ್ಕಾರ ಅಂತ ಅಲ್ಲ; ಅವರು ಹೇಳಿದ್ದು "ಹೆಮ್ಮೆಯ ಸರ್ಕಾರ". ಏಕೆಂದರೆ, ಮಾನ್ಯ ಸದಸ್ಯರು ಯಾವಾಗಲೂ ಅಲ್ಪಪ್ರಾಣ ಮಾತನಾಡುವುದಿಲ್ಲ.

ವಾಟಾಳ್ ನಾಗರಾಜ್: ಮಾನ್ಯ ಪ್ರಕಾಶ್‌ರವರೇ, ಪಟೇಲರ ಸ್ಥಿತಿ ಕೋಣನ ರೀತಿಯಾಗಿದೆ ಇದೊಂದು ರೀತಿ ಬುದ್ಧಿವಂತಿಕೆ. ಅಂದರೆ, ಎಮ್ಮೆಯಷ್ಟು ಶಕ್ತಿ; ನರಿಯಷ್ಟು ಬುದ್ಧಿ, ಎರಡೂ ಇವರಿಗೆ ಇದೆ. ಈ ಜಗತ್ತಿನಲ್ಲಿ ತಲೆಕೆಡಿಸಿಕೊಳ್ಳದ ಮುಖ್ಯಮಂತ್ರಿ ಯಾರಾದರೂ ಇದ್ದರೆ, ಅವರು ಮಾನ್ಯ ಪಟೇಲರು ಒಬ್ಬರೇ. ಮಳೆ ಬೀಳಲಿ, ಆಕಾಶ ಬಿದ್ದು ಹೋಗಲಿ, ಯಾವುದಕ್ಕೂ ತಲೆಕೆಡಿಸಿಕೊಳ್ಳುವುದಿಲ್ಲ.

ಹೆಚ್.ಎನ್. ನಂಜೇಗೌಡ: ಇದು ಕೋಣನ ಸರ್ಕಾರವೋ ಅಥವಾ ಎಮ್ಮೆ ಸರ್ಕಾರವೋ.

ಸಿದ್ದರಾಮಯ್ಯ (ಉಪಮುಖ್ಯಮಂತ್ರಿ): ಅವರು ನೋಡುವ ದೃಷ್ಟಿಕೋನದಂತೆ, ಹೇಗೆ ನೋಡುತ್ತಾರೆ ಹಾಗೆ ಕಾಣುತ್ತದೆ. ಕೋಣಗಳು ಕಾಣಿಸುತ್ತವೆ, ಎಮ್ಮೆಗಳು ಕಾಣಿಸುತ್ತವೆ, ಕತ್ತೆಗಳು ಕಾಣಿಸುತ್ತವೆ. ಮನುಷ್ಯರನ್ನು ನೋಡಬೇಕು ಎನ್ನುವ ದೃಷ್ಟಿಯಿಂದ ನೋಡಿದರೆ ಯಾವಾಗಲೂ ಮನುಷ್ಯರೇ ಕಾಣಿಸುತ್ತಾರೆ. ಎಮ್ಮೆಯೂ ಕೂಡ ಅದು ಒಂದು ಪ್ರಾಣಿ. ಅದರ ಜೀವಿತ ಕಾಲದಲ್ಲಿ ಬಹಳ ಉಪಕಾರ ಮಾಡಿ ಹೋಗುತ್ತದೆ. ಫಿಲಿಫೈನ್ ದೇಶದಲ್ಲಿ ಅದು ಒಂದು ರಾಷ್ಟ್ರೀಯ ಪ್ರಾಣಿ. ಎಮ್ಮೆ ಎಂದು ಅಷ್ಟು ಕಳಪೆ ದೃಷ್ಟಿಯಲ್ಲಿ ನೋಡುವುದು ಸರಿಯಲ್ಲ.

ಅರಗ ಜ್ಞಾನೇಂದ್ರ: ಎಮ್ಮೆ ಯಮನ ವಾಹನ.

ಸಿದ್ದರಾಮಯ್ಯ: ಅದು ಯಾರಿಗೆ ಗೊತ್ತು. ಯಮನ ವಾಹನವನ್ನು ನೀವು ನೋಡಿದ್ದೀರಾ? ಯಮನೂ ಇಲ್ಲ, ದೆವ್ವಗಳೂ ಇಲ್ಲ. ಕೋಣ ಮತ್ತು ಎಮ್ಮೆಯನ್ನು ನಾವು ದಿನನಿತ್ಯ

ನೋಡುತ್ತಿದ್ದೇವೆ. ಎಮ್ಮೆಯ ಹಾಲಿನಲ್ಲಿ ಜಿಡ್ಡಿನ ಪರ್ಸೆಂಟೇಜ್ ಎಷ್ಟಿದೆ ಗೊತ್ತಾ ನಿಮಗೆ? 8 ಪರ್ಸೆಂಟ್, 9 ಪರ್ಸೆಂಟ್.

(ವಿಧಾನ ಸಭೆ ಕಲಾಪ, ಮಾರ್ಚಿ 30, 1999)

## ಅಹಂಕಾರ : ಭ್ರಷ್ಟಾಚಾರದ ತಂದೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 344 (905)

ಡಾ: ಸಿದ್ದಲಿಂಗಯ್ಯ (ನಾಮನಿರ್ದೇಶನ ಹೊಂದಿದವರು): ಮಾನ್ಯ ಮುಖ್ಯಮಂತ್ರಿಗಳು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಸಾರ್ವಜನಿಕರು ಸರ್ಕಾರಿ ಕಛೇರಿಗಳಿಗೆ ಹೋದಾಗ ಸಿಬ್ಬಂದಿ ಮತ್ತು ಅಧಿಕಾರಿಗಳು ಸಾರ್ವಜನಿಕರನ್ನು ಅಗೌರವದಿಂದ ನಡೆಸಿಕೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ) ಹಾಗಿದ್ದಲ್ಲಿ ಇದನ್ನು ತಪ್ಪಿಸಲು ಸರ್ಕಾರ ಯಾವ ಕ್ರಮಕೈಗೊಂಡಿದೆ?

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):

ಅ) ಇಲ್ಲ

ಆ) ಸಾರ್ವಜನಿಕರೊಡನೆ ಸೌಜನ್ಯಯುತ ವರ್ತನೆ ಇರಬೇಕು ಎಂದು ಸರ್ಕಾರಿ ಸಿಬ್ಬಂದಿಗೆ ತಿಳಿಸಿ ಹೇಳುವ ಸೂಚನೆಗಳನ್ನು ಹೊರಡಿಸಲಾಗಿದೆ.

ಡಾ: ಸಿದ್ದಲಿಂಗಯ್ಯ: ಸರ್ಕಾರಿ ಕಚೇರಿಗಳಿಗೆ ಕಷ್ಟ ಹೇಳಿಕೊಳ್ಳಲು, ಸಂಕಟ ತೋಡಿಕೊಳ್ಳಲು, ಹಳ್ಳಿಗಾಡಿನಿಂದ ಜನರು ಬರುತ್ತಾರೆ. ಅವಿದ್ಯಾವಂತರು ಬರುತ್ತಾರೆ. ಬಡವರು ಬರುತ್ತಾರೆ. ಅವರನ್ನು ಸಿಬ್ಬಂದಿ ಮತ್ತು ಸರ್ಕಾರಿ ಅಧಿಕಾರಿಗಳು ಗೋಳು ಹೊಯ್ದುಕೊಳ್ಳುತ್ತಿದ್ದಾರೆ. ಇವರಿಗೆ ಸರಿಯಾಗಿ ಮರ್ಯಾದೆಯನ್ನು ಕೊಡಬೇಕು ಮತ್ತು ಬಂದವರನ್ನು ಕೂರಿಸಿ ಮಾತನಾಡಬೇಕು ಎನ್ನುವ ಚಿಂತೆಯೇ ಇಲ್ಲ.

ಬಸವಣ್ಣನವರು ಹನ್ನೆರಡನೇ ಶತಮಾನದಲ್ಲಿ ಹೇಳಿದ್ದನ್ನು ಇವತ್ತು ನಮ್ಮ ಸರ್ಕಾರಿ ನೌಕರರಿಗೆ ಹೇಳಬಹುದು.

"ಎನು ಬಂದಿರಿ ಹದುಳಿದ್ದರೆ ಎಂದರೆ
ನಿಮ್ಮ ಮೈಸಿರಿ ಹಾರಿಹೊವುದೇ,
ಕುಳ್ಳಿರೆಂದರೆ ನೆಲೆ ಕುಳಿಹೋವುದೇ,
ಒಡನೆ ನುಡಿದರೆ ಶಿರಹೊಟ್ಟೆ ಒಡೆಯುವುದೇ
ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದರೆ
ಕೆಡಹಿ ಮೂಗಕೊಯ್ಯದೆ ಮಾಬನೆ ಕೂಡಲಸಂಗಯ್ಯ"

ಮಾನ್ಯ ಸಭಾಪತಿಗಳೇ ಬಸವಣ್ಣನವರ ಪ್ರಕಾರ ಈ ರೀತಿ ಸಾರ್ವಜನಿಕರಿಗೆ ಅಗೌರವ ತೋರಿಸುವ ಸಿಬ್ಬಂದಿ ಮತ್ತು ಅಧಿಕಾರಿಗಳಿಗೆ ಕೂಡಲಸಂಗಮದೇವ ಕೆಡುಹಿ ಮೂಗನ್ನು ಕುಯ್ಯುತ್ತಾನೆಂದು ಬಸವಣ್ಣನವರು ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ಸರ್ಕಾರವು ಕೂಡ ಇದೇ ರೀತಿಯ ಎಚ್ಚರಿಕೆಯನ್ನು ಸರ್ಕಾರಿ ನೌಕರರು ಮತ್ತು ಅಧಿಕಾರಿಗಳಿಗೆ ಕೊಡಬೇಕು, ಸರ್ಕಾರಿ ನೌಕರರು ಪ್ರಜಾಸತ್ತಾತ್ಮಕವಾದ ವರ್ತನೆಯನ್ನು ರೂಡಿಸಿಕೊಳ್ಳಬೇಕು. ಇಲ್ಲದಿದ್ದರೆ ಆಡಳಿತಕ್ಕೆ ಬೆಲೆ ಬರುವುದಿಲ್ಲ.

ಡಾ: ಎಂ.ಸಿ. ಮೋದಿ: ಮಾನ್ಯ ಸಭಾಪತಿಗಳೇ ಇದನ್ನು ಯಾರಿಗೂ ಸರಿ ಮಾಡಲು ಆಗುವುದಿಲ್ಲ. ಭಾರತ ದೇಶದ ಸಂಸ್ಕೃತಿ ಏನಿದೆ, ಅದು ರಕ್ತದಲ್ಲಿ ಬರಬೇಕು. ಬರೀ ಮಾತನಾಡಿದರೆ ಏನೂ ಆಗುವುದಿಲ್ಲ. ಈಗಿರುವ ಮಕ್ಕಳಿಗೆ ಸರಿಯಾಗಿ ಶಿಕ್ಷಣವನ್ನು ಕೊಡಿ. ಆಗ ಅವರು ಒಳ್ಳೆಯವರು ಆಗುತ್ತಾರೆ. ಅದು ವಿನಃ ಮತ್ತೇನೂ ಮಾಡುವುದಕ್ಕೆ ಆಗುವುದಿಲ್ಲ.

ಡಾ: ವಿ.ಎಸ್. ಆಚಾರ್ಯ: ಅವರು ಉತ್ತರಿಸುವ ಮುಂಚೆ ಒಂದೇ ಒಂದು ಪ್ರಶ್ನೆ. ಸಾಮಾನ್ಯ ಜನರಿಗೆ ಗೌರವ ತೋರಿಸುವುದು ಇರಲಿ, ಶಾಸಕರಿಗೇ ಇಲ್ಲ. ಶಾಸಕರು ಹೋದರೆ ಅವರಿಗೂ ಲಂಚ ಕೇಳಿದ ಮೇಲೆ ಇನ್ನು ಸಾಮಾನ್ಯ ಜನ ಹೋದರೆ ಕೇಳದೆ ಇರುತ್ತಾರೆಯೇ? ಶಾಸಕರನ್ನೇ ಡೈರೆಕ್ಟಾಗಿ ಕೇಳುತ್ತಿದ್ದಾರೆ.

ಜೆ.ಹೆಚ್. ಪಟೇಲ್: ಕಳೆದ 50 ವರ್ಷಗಳಿಂದ ಕಲಿಸಿದ್ದೇವೆ ಇದನ್ನು. We have done enough to spoil the entire system. ಅದಕ್ಕೆ ಮಾನ್ಯ ಡಾ: ಸಿದ್ದಲಿಂಗಯ್ಯನವರಿಗೆ ತಮ್ಮ ಮೂಲಕ ಹೇಳುತ್ತೇನೆ, ಇದು ತಕ್ಷಣ ಸರಿಪಡಿಸಲು ಆಗುವಂಥ ರೋಗ ಅಲ್ಲ. It is very deep-rooted. ಇದರಿಂದಲೇ ಭ್ರಷ್ಟಾಚಾರ ಹೆಚ್ಚಿರುವುದು. ಇದರಿಂದಲೇ ಜಾತೀಯತೆ ಆಗುತ್ತಿರುವುದು; ಕ್ರಿಮಿನಲ್‌ಗಳನ್ನು ಸೇವ್ ಮಾಡುತ್ತಿರುವುದು. ಅವರಿಗೆ ರಕ್ಷಣೆ ಕೆಲವರಿಂದ ಆಗುತ್ತಿದೆ.

ಬೆಂಗಳೂರಿನಂಥ ಕಡೆ ರೈತನೊಬ್ಬ ಹಳ್ಳಿಯಿಂದ ಶುಕ್ರವಾರದಂದು ಬಂದರೆ, ಶುಕ್ರವಾರ ಆ ಅಧಿಕಾರಿ ಆಗಲೇ ಹೋಗಿಬಿಟ್ಟಿರುತ್ತಾನೆ. ಈ ಅಧಿಕಾರಿ ಶನಿವಾರ, ಭಾನುವಾರ ತನ್ನ ಊರಿನಲ್ಲಿ ಇರುತ್ತಾನೆ. ಇದನ್ನು ಅಂದಾಜು ಮಾಡಿ. ಸೋಮವಾರ ಮತ್ತೆ ಹೋಗಬೇಕು. ಸೋಮವಾರ ಅವನು ಬಂದರೆ ಸರಿ; ಇಲ್ಲದಿದ್ದರೆ ಮತ್ತೆ ಮಂಗಳವಾರವೇ. ಇದನ್ನು ಸರಿಪಡಿಸಿಕೊಳ್ಳುವ ಪ್ರಜ್ಞೆ ನಮ್ಮ ಅಧಿಕಾರಿಗಳಿಗೆ ಯಾವತ್ತು ಬರುತ್ತೋ ತಿಳಿಯದು.

(ವಿಧಾನ ಪರಿಷತ್ ಕಲಾಪ ಆಗಸ್ಟ್ 8, 1996)

## ಭ್ರಷ್ಟಾಚಾರದ ದೂರು; ಈಚಲ ಮರದ ಕೆಳಗೆ ಮಜ್ಜಿಗೆ ಕುಡಿದಂತೆ

ವಿ.ಎಸ್. ಉಗ್ರಪ್ಪ: ಸಮಾಜವಾದದ ಹಿನ್ನೆಲೆಯಿಂದ ಬಂದಿರತಕ್ಕಂಥ ಹೆಮ್ಮೆಯ ಮುಖ್ಯಮಂತ್ರಿ ಜೆ.ಹೆಚ್. ಪಟೇಲರಲ್ಲಿ ನಾನು ವಿನಂತಿ ಮಾಡಿಕೊಳ್ಳುತ್ತೇನೆ ಕಳೆದ 1947

ರಿಂದ ಅಥವಾ 1950 ರಿಂದ 1997 ರವರೆಗೆ ರಾಜ್ಯದಲ್ಲಿ ಯಾರ್‍ಯಾರು ಎಂಎಲ್‌ಎಗಳು, ಎಂಎಲ್‌ಸಿ, ಎಂಪಿ, ಮಂತ್ರಿ, ಮುಖ್ಯಮಂತ್ರಿ ರಾಜಕಾರಣದಲ್ಲಿದ್ದು ಅಧಿಕಾರವನ್ನು ಅನುಭವಿಸಿದ್ದಾರೆ, ಅವರ ಮತ್ತು ನೆಂಟರಿಷ್ಟರ ಆಸ್ತಿಯನ್ನು ತನಿಖೆ ಮಾಡಬೇಕು. ರಾಜ್ಯದಲ್ಲಿ ಒಂದು ಲೋಕಾಯುಕ್ತ ವ್ಯವಸ್ಥೆಯನ್ನು ಜಾರಿಗೆ ತರತಕ್ಕಂಥದ್ದಕ್ಕೆ ಕರ್ನಾಟಕದವರು ಹೇಗೆ ಮೊದಲಿಗರಾದರೋ, ಅದೇ ರೀತಿ, ಈ ರೀತಿ ಆಸ್ತಿಯನ್ನು ತನಿಖೆ ಮಾಡುವುದಕ್ಕೆ ಒಂದು ಆಯೋಗ ರಚಿಸುವಲ್ಲಿಯೂ ಮುಂದಾಗಬೇಕು. 1997ರ ನಂತರ ಕೂಡ ಯಾರು ರಾಜಕಾರಣದಲ್ಲಿ ಬರುತ್ತಾರೆ ಆ ಎಲ್ಲಾ ರಾಜಕಾರಣಿಗಳ ಆಸ್ತಿಯನ್ನು ಐದು ವರ್ಷಕ್ಕೆ ಒಂದು ಸಾರಿ ಆಯೋಗದಿಂದ ತನಿಖೆ ಮಾಡಿಸತಕ್ಕಂಥ ವ್ಯವಸ್ಥೆಯನ್ನು ಜಾರಿಗೆ ತರುವುದಕ್ಕೆ ಸರ್ಕಾರ ಮುಂದಾಗಬೇಕು.

ಶ್ರೀಮತಿ ಪ್ರಫುಲ್ಲ ಮಧುಕರ್: ಮಾನ್ಯ ಸಭಾಪತಿಗಳೇ, ಭ್ರಷ್ಟ ರಾಜಕಾರಣಿಗಳಿಂದ ಎಷ್ಟು ಅವಮಾನ ಆಗುತ್ತಿದೆ ಎಂದರೆ ನಾವು ಬಸ್ಸಿನಲ್ಲಿ, ಟ್ರೇನ್‌ನಲ್ಲಿ ಪ್ರವಾಸ ಮಾಡಬೇಕಾದರೆ ನಾವು ರಾಜಕಾರಣಿಗಳು ಎಂದು ಹೇಳಿಕೊಳ್ಳುವುದಕ್ಕೇ ಸಂಕೋಚ ಆಗುತ್ತದೆ. ಇವೊತ್ತು ಆ ಪರಿಸ್ಥಿತಿ ಇದೆ. ಮಾನ್ಯ ಉಗ್ರಪ್ಪನವರು, ಮಾನ್ಯ ಹೆಚ್.ಕೆ. ಪಾಟೀಲರು ಏನು ಹೇಳಿದ್ದಾರೆ, ಅದಕ್ಕೆ ಇದು ಸಕಾಲ. ಇದು ಪ್ರಾರಂಭ ಆಗಬೇಕು.

ಟಿ.ಎನ್. ನರಸಿಂಹಮೂರ್ತಿ: ತಾವು ಎಲ್ಲೋ ಒಂದು ಕಡೆ ಮಾತನಾಡುವಾಗ ನನ್ನ ಮಂತ್ರಿಮಂಡಲದಲ್ಲಿ ಕೂಡ ಕೆಲವರು ಭ್ರಷ್ಟರು ಇದ್ದಾರೆ ಎಂದು ಒಂದು ಮಾತನ್ನು ಹೇಳಿದ್ದೀರಿ. ಈ ಮಾತು ನಿಜವಾಗಿ ಇದ್ದರೆ ಅಂತಹ ಮಂತ್ರಿಗಳ ಮೇಲೆ ತಾವು ಏನು ಕ್ರಮ ಕೈಗೊಳ್ಳುತ್ತೀರಿ?

ಹೆಚ್.ಕೆ. ಪಾಟೀಲ್: ಮಾನ್ಯ ಸಭಾಪತಿಗಳೇ, ಸನ್ಮಾನ್ಯ ನರಸಿಂಹಮೂರ್ತಿಯವರು ಹೇಳಿದ ಹಾಗೆ ನಿಮ್ಮ ಮಂತ್ರಿ ಮಂಡಲದಲ್ಲಿ ಎಷ್ಟು ಜನ ಮಂತ್ರಿಗಳು ಭ್ರಷ್ಟರಿದ್ದಾರೆ ಎಂಬುದು ನಿಮಗೆ ಗೊತ್ತಿರಬೇಕು.

ಜೆ.ಹೆಚ್. ಪಟೇಲ್: ನಾನು ಹೆಸರು ಹೇಳುವುದಕ್ಕೆ ತಯಾರಿದ್ದೆ. ಆದರೆ ಅವರು ಭ್ರಷ್ಟರಲ್ಲ ಎಂದು ಖಚಿತ ಆದ ಮೇಲೆ ಹೆಸರು ಹೇಳಬಾರದು ಎಂದು ನನಗೆ ಗೊತ್ತಾಯಿತು. ನರಸಿಂಹಮೂರ್ತಿ ಅವರೇ, ಸಾಮಾನ್ಯವಾಗಿ ನೀವು ಈಚಲಮರದ ಕೆಳಗಡೆ ಕುಳಿತು ಮಜ್ಜಿಗೆಯನ್ನೇ ಕುಡಿದರೂ ಜನ ಇವರು ಹೆಂಡ ಕುಡಿದರು ಎನ್ನುತ್ತಾರೆ. ಆದುದರಿಂದ ಮಜ್ಜಿಗೆಯನ್ನು ಈಚಲ ಮರದ ಕೆಳಗೆ ಕುಡಿಯಬಾರದು.

ಇದೇ ರೀತಿ ವರದಿಗಳು ನನಗೆ ಕೂಡ ಕೆಲವು ಸಂದರ್ಭದಲ್ಲಿ ಬರುತ್ತವೆ. ನಾನು ಇಲ್ಲ ಎಂದು ಹೇಳುವುದಿಲ್ಲ. ಆ ರೀತಿಯ ರಿಪೋರ್ಟ್‌ಗಳು ಬಂದಾಗ, ನನಗೆ ಗೊತ್ತಿರುವಂತೆ ಅರಸುರವರ ಕಾಲದಲ್ಲಿ he used to get private report about everybody and keep it with him. ಆದರೆ ನಾನು ಹಾಗೆಲ್ಲಾ ಮಾಡುವುದಕ್ಕೆ ಹೋಗುವುದಿಲ್ಲ.

ನಮ್ಮ ಮಂತ್ರಿಮಂಡಲಕ್ಕೆ ಯಾರ ಮೇಲಾಗಲಿ, ದೂರು ಬರಬಹುದು, ಆದರೆ ಈ ಬಗೆಗೆ ರಿಪೋರ್ಟ್ ಬಂದಾದ ಮೇಲೆ ಅದನ್ನು ವೆರಿಫೈ ಮಾಡಿಯಾದ ಮೇಲೆ ಇಂಥ ಕಡೆ ಹೀಗೇ ಆಗಿದೆ ಎಂದು ದೃಢವಾದಾಗ ಅಂಥವರ ಮೇಲೆ ಕ್ರಮ ತೆಗೆದುಕೊಳ್ಳಲೇಬೇಕಾಗುತ್ತದೆ.

(ವಿಧಾನ ಪರಿಷತ್ ಕಲಾಪ, ಮಾರ್ಚ್ 27, 1997)

## ತಂದೆಯ ಮಂತ್ರಿಗಿರಿ; ಮಗನ ಬಂಡವಾಳ ಆಗದಿರಲಿ

**ಜೆ.ಹೆಚ್. ಪಟೇಲ್ (ಕೈಗಾರಿಕಾ ಸಚಿವರು)** : ಸದನದಲ್ಲಿ ಆರೋಪ, ಮಿಥ್ಯಾರೋಪ ಇವು ಸರ್ವೇ ಸಾಮಾನ್ಯ. ಆದರೂ ಲೋಕಾಭಿರಾಮವಾಗಿ ಪ್ರಸ್ತಾಪಿತವಾದ ಮತ್ತು ನನ್ನನ್ನು ಕುರಿತ ಕೆಲವು ಆರೋಪಗಳನ್ನು ಪ್ರಸ್ತಾಪಿಸುತ್ತೇನೆ.

ಕೆಲವು ಮಂತ್ರಿಗಳ ಹತ್ತಿರ ಇರುವವರು ಹಾಗೂ ಅವರ ಸಂಬಂಧಿಕರು ಸುಲಭವಾಗಿ ಲೈಸೆನ್ಸ್ ಪಡೆದಿರುವುದಾಗಿ ಟೀಕೆ ಬಂದಿದೆ.

ನನ್ನ ಮಗ 1983ನೇ ಇಸವಿಯಲ್ಲಿ ಚಾರ್ಟರ್ಡ್ ಅಕೌಂಟೆಂಟ್ ಟ್ರೈನಿಂಗ್ ಆದವನು. 1983ರಲ್ಲಿ ಈತ ಹೋಲ್‌ಸೇಲ್ ಏಜೆನ್ಸಿ ಮತ್ತಿತರ ವ್ಯವಹಾರ ಆರಂಭಿಸಿದ. ಅವನ ಬಳಿ ಅವರ ಅಜ್ಜನ ಹಣವಿತ್ತು. ನಿಮ್ಮ ಸರ್ಕಾರಿ ನೌಕರಿ ಬೇಡ ಎಂದು ಸಿಮೆಂಟು, ಕಬ್ಬಿಣ, ಪೈಪು, ಪೈಂಟಿಂಗ್ - ಇತ್ಯಾದಿ ಮಾರಾಟ ನಡೆಸಿದ್ದಾನೆ. ಈ ಪೈಂಟಿಂಗ್ ವಸ್ತುಗಳಲ್ಲಿ ಕಚ್ಚಾ ರೆಕ್ಟಿಫೈಡ್ ಸ್ಪಿರಿಟ್ ಸೇರಿಸುವ ಕಾರಣ, ಅಪವ್ಯಯ ಆದೀತೇನೋ ಎಂದು ನಾನು ಆಗಾಗ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿರುತ್ತೇನೆ.

ಮಾನ್ಯ ಶ್ರೀನಿವಾಸರವರು ಮಂತ್ರಿಗಳು ತಮ್ಮ ಮಕ್ಕಳಿಗೆ ಮತ್ತು ಸಂಬಂಧಿಕರಿಗೆ ಲೈಸೆನ್ಸ್ ಕೊಡಿಸುವುದು ಮಹಾತ್ಮಾ ಗಾಂಧಿಯವರ ಮಟ್ಟದ ಮೌಲ್ಯಾಧಾರಿತ ರಾಜಕಾರಣಕ್ಕೆ ಸರಿಹೊಂದುತ್ತದೆಯೇ ಎಂದು ಕೇಳಿದ್ದಾರೆ.

ಹಿಂದಿನ ಪ್ರಧಾನಮಂತ್ರಿಯಾದವರು ತಮ್ಮ ಮಗಳನ್ನು, ನಂತರ ಅವರು ತಮ್ಮ ಮಗನನ್ನು ಪ್ರಧಾನಿಯಾಗಿ- ಅದು ಮಾರುತಿ ಕಾರು ಇರಬಹುದು ಅಥವಾ ಮತ್ತೊಂದು ಇರಬಹುದು- ಮಾಡಿಕೊಂಡು ಬಂದ ಹಿನ್ನೆಲೆಯಲ್ಲಿ ಶ್ರೀನಿವಾಸ್ ಮಗನಿಗೆ ಅಥವಾ ಪಟೇಲ್ ಮಗನಿಗೆ ಇದು ಬಹಳ ಕಷ್ಟವಾಗುತ್ತದೆ, ನಾನು ಮಂತ್ರಿಯಾದುದರಿಂದ ನೀನು ಉದ್ಯೋಗ ಮಾಡಬೇಡ ಎಂದು ಹೇಳಲು ಕಷ್ಟವೆ ಅಲ್ಲವೇ?

**ಕೆ.ಹೆಚ್. ಶ್ರೀನಿವಾಸ್** : ಮಾನ್ಯ ಅಧ್ಯಕ್ಷರೇ, ಮಂತ್ರಿ ಮಗ ಕೈಗಾರಿಕೆ ಮಾಡಿದರೆ ತಪ್ಪಿಲ್ಲ; ಆದರೆ ಅಪ್ಪನಾದ ಮಂತ್ರಿ ತನ್ನ ಮಂತ್ರಿ ಪದವಿಯನ್ನೇ ಒಂದು ಕೈಗಾರಿಕೆಯಾಗಿ ಮಾಡಿಕೊಂಡರೆ ಅದು ತಪ್ಪು ಎಂದು ನಾನು ನಿನ್ನೆ ಹೇಳಿದ್ದೆ.

ಜೆ.ಹೆಚ್. ಪಟೇಲ್: ಯಾವ ಮಕ್ಕಳಿಗೆ ಮಾಡಲು ಕೆಲಸವಿರುವುದಿಲ್ಲವೋ, ಆಗ ಅವರಿಗೆ ಅಪ್ಪನ ಮಂತ್ರಿ ಪದವಿಯೇ ಒಂದು ಬಂಡವಾಳವಾಗುತ್ತೆ, ದಂಧೆ ಆಗುತ್ತೆ. ಹೀಗೆ ಆಗಬಾರದು ಎಂದೇ ನಾನು ಮಗನಿಗೆ ಕೈಗಾರಿಕೆ ಹಾಕಿಸಿಕೊಟ್ಟೆ.

(ವಿಧಾನಸಭೆ ಕಲಾಪ : ಮಾರ್ಚ್ 7,1986)

## ಸ್ವಾತಂತ್ರ್ಯಯೋಧರಿಗೆ ಪಿಂಚಣಿ

ವಿಷಯ: ಸ್ವಾತಂತ್ರ್ಯಹೋರಾಟಗಾರರಿಗೆ ವಿಶ್ರಾಂತಿ ವೇತನ ನೀಡುವಲ್ಲಿ ವಿಳಂಬ.

80(298) ಎಸ್.ಎಸ್. ಪೂಜಾರಿ (ಶಿಕ್ಷಕರ ಕ್ಷೇತ್ರ): ಮಾನ್ಯ ಮುಖ್ಯ ಮಂತ್ರಿಗಳು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಎ) ರಾಜ್ಯದಲ್ಲಿ ಸ್ವಾತಂತ್ರ್ಯ ಯೋಧರ ಪಿಂಚಣಿಗಾಗಿ ಬಾಕಿಯಿರುವ ಪ್ರಕರಣಗಳ ಸಂಖ್ಯೆ ಎಷ್ಟು? (ಜಿಲ್ಲಾವಾರು ಮಾಹಿತಿ ನೀಡುವುದು)

ಬಿ) ರಾಜ್ಯ ಸರ್ಕಾರದಿಂದ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಬೇಕಾಗಿರುವ ಬಾಕಿ ಪ್ರಕರಣಗಳ ಸಂಖ್ಯೆ (ಜಿಲ್ಲಾವಾರು ಮಾಹಿತಿ ನೀಡುವುದು)

ಸಿ) ಈ ಪ್ರಕರಣಗಳನ್ನು ವಿಲೇವಾರಿ ಮಾಡಲು ಸರ್ಕಾರಕ್ಕೆ ಎಷ್ಟು ಕಾಲಾವಕಾಶ ಬೇಕಾಗುತ್ತದೆ.

ಡಿ) ಇಂತಹ ಪ್ರಕರಣಗಳನ್ನು ವಿಲೇವಾರಿ ಮಾಡಲು ಸರ್ಕಾರದ ಮಟ್ಟದಲ್ಲಿ ವಿಪರೀತ ವಿಳಂಬವಾಗುವುದು ನಿಜವೇ?

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):

ಎ) ಸದ್ಯದಲ್ಲಿ 1035 ಪ್ರಕರಣಗಳು ರಾಜ್ಯದಲ್ಲಿ ಬಾಕಿ ಇರುತ್ತವೆ. ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

ಬಿ) ಸದ್ಯದಲ್ಲಿ 215 ಪ್ರಕರಣಗಳು ರಾಜ್ಯದಲ್ಲಿ ಬಾಕಿಯಿರುತ್ತದೆ. ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

ಸಿ) ನಿಯಮಾವಳಿಗಳ ರೀತ್ಯಾ ಅಗತ್ಯ ಮಾಹಿತಿಯನ್ನು ಮತ್ತು ನಿಖರವಾದ ದಾಖಲೆಗಳನ್ನು ಹಾಗೂ ಸಂಬಂಧಿಸಿದ ಜಿಲ್ಲಾಧಿಕಾರಿಗಳಿಂದ ಸ್ಪಷ್ಟ ಶಿಫಾರಸ್ಸು ಹೊಂದಿದ ಅರ್ಜಿಗಳನ್ನು ಶೀಘ್ರವಾಗಿ ಇತ್ಯರ್ಥಪಡಿಸಲು ಸರ್ಕಾರದ ಮಟ್ಟದಲ್ಲಿ ಕ್ರಮ ತೆಗೆದುಕೊಳ್ಳಲಾಗುತ್ತಿದೆ.

ಡಿ) ಅವಶ್ಯಕವಾದ ದಾಖಲೆ ಮತ್ತು ಮಾಹಿತಿಯನ್ನು ಅರ್ಜಿದಾರರು ಒದಗಿಸಿದ ಪ್ರಕರಣಗಳಲ್ಲಿ ಮತ್ತು ಜಿಲ್ಲಾಧಿಕಾರಿಯವರು ಸ್ಪಷ್ಟವಾದ ಶಿಫಾರಸ್ಸನ್ನು ಮಾಡದೇ ಇರುವ

ಪ್ರಕರಣಗಳಲ್ಲಿ ಸಂಬಂಧಪಟ್ಟ ಅರ್ಜಿದಾರರಿಗೆ ಹಾಗೂ ಜಿಲ್ಲಾಧಿಕಾರಿಯವರಿಗೆ ಮಾಹಿತಿ ಕೋರಿ ಹಿಂದಕ್ಕೆ ಕಳುಹಿಸಬೇಕಾಗುವುದರಿಂದ, ಅಂತಹ ಪ್ರಕರಣಗಳಲ್ಲಿ ವಿಳಂಬವಾಗುತ್ತದೆ.

**ಎಸ್.ಎಸ್. ಪೂಜಾರಿ:** ಸನ್ಮಾನ್ಯ ಸಭಾಪತಿಗಳೇ, ಇದು ಸರಿಯಾದುದಲ್ಲ. ನಿಜವಾದಂಥ ಸ್ವಾತಂತ್ರ್ಯ ಯೋಧರಿಗೆ ಕೂಡಲೇ ಸೆಟಲ್ ಮಾಡಿಕೊಡಬೇಕು ಮತ್ತು ಒಂದೇ ಸಾರಿಗೆ ಈ ಸ್ವಾತಂತ್ರ್ಯಯೋಧರ ಪಿಂಚಣಿ ಎನ್ನುವುದನ್ನು ಸಲ್ಲಿಸಬೇಕು. ಅಂದರೆ ಸೆಟಲ್ ಮಾಡಬೇಕು.

**ಭೀಮಣ್ಣ ಖಂಡ್ರೆ:** ಮಾನ್ಯ ಸಭಾಪತಿಗಳೇ (ಸಭಾಪತಿಗಳು ಮಾನ್ಯ ಡಿ.ಬಿ. ಕಲ್ಮಣಕರ್) ತಾವು ಸಹ ಸ್ವಾತಂತ್ರ್ಯ ಯೋಧರು, ನಾನೂ ಕೂಡ ಸ್ವಾತಂತ್ರ್ಯಯೋಧ. ಸ್ವಾತಂತ್ರ್ಯ ದೊರೆತು ಐವತ್ತು ವರ್ಷಗಳಾದರೂ ಎಷ್ಟೋ ಕೇಸುಗಳು ಪೆಂಡಿಂಗ್‌ನಲ್ಲಿವೆ. ನಿಜವಾದಂಥ ಸ್ವಾತಂತ್ರ್ಯ ಯೋಧರಿಗೆ ಇದುವರೆಗೂ ಏನೂ ದೊರೆತಿಲ್ಲ. ನಾನು ಮೆಂಬರ್ ಇದ್ದಾಗ ಬೀದರ್ ಮತ್ತು ಗುಲ್ಬರ್ಗಾ ಜಿಲ್ಲೆಯಲ್ಲಿ 35 ಮಂದಿ...

**ಹೆಚ್.ಕೆ. ಪಾಟೀಲ್:** ನಾವು ನಮ್ಮ 50ನೇ ವರ್ಷದ ಸ್ವಾತಂತ್ರ್ಯದ ಮಹೋತ್ಸವವನ್ನು ಹೇಗೆ ಆಚರಣೆ ಮಾಡಬೇಕೆಂಬ ಹಿನ್ನೆಲೆಯೊಳಗೆ ಮತ್ತು ಒಂದು ಸಾವಿರ ಪೆಂಡಿಂಗ್ ಕೇಸಸ್ ಏನು ಇವೆ. ಇವುಗಳನ್ನು ಕನಿಷ್ಟಪಕ್ಷ 15 ದಿವಸ ಅಥವಾ ಒಂದು ತಿಂಗಳಿನಲ್ಲಿ ಫೈನಲೈಸ್ ಮಾಡುತ್ತೇವೆ ಎಂಬ ಭರವಸೆಯನ್ನು ಈ ಸರ್ಕಾರ ಕೊಡಬೇಕೆಂದು ನಾನು ಒತ್ತಾಯ ಮಾಡುತ್ತೇನೆ.

**ಜೆ.ಹೆಚ್. ಪಟೇಲ್:** ಮಾನ್ಯ ಸಭಾಪತಿಯವರೇ, ತಮಗೆಲ್ಲರಿಗೂ ಒಂದು ಘಟನೆಯನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಘಟನೆ ಏನಾಯಿತು ಎಂದರೆ, ಶಿವಮೊಗ್ಗ ಜಿಲ್ಲೆಯಲ್ಲಿ ಸ್ವಯಂ ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಜೈಲಿನಲ್ಲಿದ್ದವರು ಸರ್ಟಿಫೈ ಮಾಡಿದರೆ ಅದು ನಿರ್ಣಾಯಕ ದಾಖಲೆಯಾಗುತ್ತದೆ. ಆದರೆ ಶಿವಮೊಗ್ಗ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಜೈಲಿಗೆ ಹೋಗಿದ್ದವರ ಪೈಕಿ ಶಾಸಕರಾದವರು ಹೆಚ್.ಎಸ್. ರುದ್ರಪ್ಪನವರು, ಬದರಿ ನಾರಾಯಣ್‌ರವರು ಮತ್ತು ನಾನು ಇಷ್ಟೆ ಜನ. ಇನ್ನು ಯಾರಿಗೂ ಸರ್ಟಿಫೈ ಮಾಡುವ ಅಧಿಕಾರ ಇರಲಿಲ್ಲ.

ನಾನು ಯಾವುದೋ ಒಂದು ಕ್ಯಾಂಪೇನ್‌ಗೆ ಎಂದು ಹೋಗಿದ್ದೆ. 8-10 ಜನ ಬಂದರು. ಬಂದವರೇ ನಾವು ಸ್ವಾತಂತ್ರ್ಯ ಹೋರಾಟಗಾರರು, ಬಹಳ ಬಡವರು ಎಂದು ಹೇಳಿದರು. ಬಹಳ ಜನ ಚೆನ್ನಾಗಿ ಇರುವವರು ಅರ್ಜಿಯನ್ನೇ ಹಾಕಿಲ್ಲ, ಕೇಳುವುದೂ ಇಲ್ಲ. ನಾನು ಆಗಲೀ, ಎಂದು ರುಜು ಮಾಡಿಕೊಟ್ಟುಬಿಟ್ಟೆ. ಪೊಲೀಸ್ ಎನ್‌ಕ್ವೈರಿ ಬಂತು. ಇದು ನಿಮ್ಮ ಸಿಗ್ನೇಚರ್ರೆ? ಎಂದರು. ಹೌದು ಎಂದೆ. ಯಾವ ವ್ಯಕ್ತಿ ಇವೊತ್ತು ಪಿಂಚಣಿ ಕೇಳುತ್ತಾನೆ ಆತ 1947ನೇ ಇಸವಿಯಲ್ಲಿ ಐದು ವರ್ಷದ ಮಗು, ಜೈಲಿಗೆ ಎಲ್ಲಿ ಹೋಗಿದ್ದ? ಏನು ಉತ್ತರ ಹೇಳಲಿ; ಹೀಗೂ ನಡೆಯುತ್ತೆ, ಕಲಿಗಾಲದಲ್ಲಿ.

(ವಿಧಾನ ಪರಿಷತ್ ಕಲಾಪ ನವೆಂಬರ್ 5, 1998)

## ದೇವನಹಳ್ಳಿ ವಿಮಾನ ನಿಲ್ದಾಣ

ವಿ.ಎಸ್. ಉಗ್ರಪ್ಪ: ಮಾನ್ಯ ಉಪಸಭಾಪತಿಗಳೇ, ಬೆಂಗಳೂರು ಸಮೀಪ ದೇವನಹಳ್ಳಿಯಲ್ಲಿ ಅಂತರರಾಷ್ಟ್ರೀಯ ವಿಮಾನನಿಲ್ದಾಣವನ್ನು ಮಾಡಲು ಕೇಂದ್ರ ಅನುಮತಿ ದೊರಕಿದೆಯೇ? ದೊರಕದೇ ಇದ್ದರೆ ಯಾವ ಕಾರಣಗಳಿಗಾಗಿ ದೊರಕಿಲ್ಲ ತಿಳಿಸಿ ಎಂದಿದ್ದೆ. ಅದಕ್ಕೆ ಕಾರಣವನ್ನು ನೀಡಿಲ್ಲ. ನಮ್ಮ ಪಕ್ಕದ ರಾಜ್ಯವಾದ ಕೇರಳದವರು ನಮಗಿಂತ ಹಿಂದೆ ಕಳುಹಿಸಿರತಕ್ಕಂತಹ ಪ್ರಪೋಜಲ್‌ಗೆ ಕೇಂದ್ರ ಅನುಮತಿಯನ್ನು ಕೊಟ್ಟಿದೆ. ಆದರೆ ನಮ್ಮ ರಾಜ್ಯದವರೇ ರಾಷ್ಟ್ರದ ಪ್ರಧಾನ ಮಂತ್ರಿಗಳಾಗಿದ್ದರೂ, ಮತ್ತು ವಿಮಾನಯಾನ ಮಂತ್ರಿಗಳಾಗಿದ್ದರೂ ಸಹ ಇನ್ನೂ ಆಗಿಲ್ಲ. ಆ ಜಾಗದಲ್ಲಿಯೇ ವಿಮಾನ ನಿಲ್ದಾಣವಾಗುತ್ತದೋ ಅಥವಾ ಬೇರೆ ಕಡೆಗೆ ಬದಲಾವಣೆಯಾಗುತ್ತದೆಯೇ?

ಜೆ.ಹೆಚ್. ಪಟೇಲ್: ಮಾನ್ಯ ಉಪಸಭಾಪತಿಗಳೇ ಊಹಾಪೋಹಗಳನ್ನು ಇಟ್ಟುಕೊಂಡು ಇದು ಏಕೆ ಹೀಗಾಯಿತು? ಅದು ಹಾಗೆ ಆಯಿತು ಎಂದು ಕೇಳುವುದು ಸರಿಯಲ್ಲ. ನಾನು ಈಗ ಖಚಿತವಾಗಿ ಉತ್ತರವನ್ನು ಕೊಡುವುದಾದರೆ ಅಂತರರಾಷ್ಟ್ರೀಯ ವಿಮಾನನಿಲ್ದಾಣ ದೇವನಹಳ್ಳಿಯಲ್ಲಿಯೇ ಆಗುತ್ತದೆ. ಇಷ್ಟೊಂದು ಜಮೀನನ್ನು ಅಕ್ವೈರ್ ಮಾಡುವಂತಹ ಅವಶ್ಯಕತೆಯು ಈಗ ಇಲ್ಲ. ಅದನ್ನು ಡೆವಲಪ್ ಮಾಡಬೇಕು. ಅಲ್ಲಿಯ ಏರಿಯಾ ಮತ್ತು ಬೆಂಗಳೂರು ಸಿಟಿಗೂ ಅಂತರರಾಷ್ಟ್ರೀಯ ವಿಮಾನನಿಲ್ದಾಣಕ್ಕೂ ಇರುವಂತಹ ಕನೆಕ್ಷನ್ ಅದು ಒಂದು. ಇನ್ನು ನಮ್ಮ ರಾಜ್ಯದವರೇ ಪ್ರಧಾನ ಮಂತ್ರಿಗಳಾಗಿದ್ದಾಗ, ವಿಮಾನ ಸಚಿವರು ನಮ್ಮವರೇ ಆಗಿದ್ದರಿಂದಲೇ ಈ ಹಂತಕ್ಕೆ ಬಂದಿದ್ದು. ಇಲ್ಲ ಎಂದರೆ ಇನ್ನೂ 15 ವರ್ಷಗಳು ಕಾಯಬೇಕಾಗಿತ್ತು.

ಹೆಚ್.ಕೆ. ಪಾಟೀಲ್: ಅವರು ಅಲ್ಲಿ ಇದ್ದುದ್ದರಿಂದಲೇ ಇಲ್ಲಿಯವರೆಗೆ ಪರ್ಮಿಷನ್ ಬಂದಿಲ್ಲವೆಂದು ಅರ್ಥವೇ?

ವಿ.ಎಸ್. ಉಗ್ರಪ್ಪ: ಕೇರಳ ರಾಜ್ಯದಲ್ಲಿ ಆಯಿತು. ನಮ್ಮ ರಾಜ್ಯದ್ದು ಏಕೆ ಆಗಲಿಲ್ಲ?

ಜೆ.ಹೆಚ್. ಪಟೇಲ್: ಮಾನ್ಯ ಉಪಸಭಾಪತಿಗಳೇ, ಮಾನ್ಯ ಸದಸ್ಯರ ಕಳಕಳಿ ನಮಗೆ ಅರ್ಥವಾಗಿದೆ. ಕೇರಳದಲ್ಲಿ ಇಲ್ಲಿಗಿಂತಲೂ ಹೆಚ್ಚು ಅವಶ್ಯಕತೆ ಇಲ್ಲದಿದ್ದರೂ ಬೇಗ ಆಯಿತು ಎಂದರೆ, ಕೇಂದ್ರದಲ್ಲಿ ನಮ್ಮ ಸರ್ಕಾರ ಅಧಿಕಾರದಲ್ಲಿ ಇರುವುದಕ್ಕಿಂತಲೂ ಮುಂಚೆ ಅವರು ಇದ್ದರು. ಅವರು ಎಲ್ಲವನ್ನೂ ಮಾಡಿಕೊಂಡರು.

(ವಿಧಾನ ಪರಿಷತ್ ಕಲಾಪ, ಮಾರ್ಚಿ 12, 1998)

ಜೆ.ಹೆಚ್. ಪಟೇಲ್: ಡಾ: ತಂಗಾರವರೇ, ನಮ್ಮಲ್ಲಿ ದುಡ್ಡು ಹೊಡೆಯುವುದೇ ಆದ ಒಂದು ಸಮಾಜ ಇದೆ. ಅದೇ ಬಹಳ ಮೆಜಾರಿಟಿ ಇರುವುದು. It is not restricted to any particular community. Corruption is so rampant.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನ ಪರಿಷತ್, ಆಗಸ್ಟ್ 8, 1996)

ಭೀಮಣ್ಣ ಖಂಡ್ರೆ: ಮಾನ್ಯ ಸಭಾಪತಿಗಳೆ, ಕರ್ನಾಟಕ ರಾಜ್ಯದಲ್ಲಿ ಪಬ್ಲಿಕ್ ಸೆಕ್ಟಾರ್ ಕಂಪನಿಗಳು ಒಟ್ಟು 76 ಇದೆ. ಇದರಲ್ಲಿ 35 ಕಂಪನಿಗಳಲ್ಲಿ ಕಳೆದ ವರ್ಷ ನಷ್ಟ ಆಗಿದೆ. What is the total amount invested by the Government in that? Since how many years they are in loss and what action the Government has taken to avoid the losses?

ಜೆ.ಹೆಚ್. ಪಟೇಲ್: ಮಾನ್ಯ ಸಭಾಪತಿಗಳೆ, ನಾವೇನು ಪಬ್ಲಿಕ್ ಅಂಡರ್ ಟೇಕ್ಸಿಂಗ್ಸ್ ಎಂದು ಪ್ರಾರಂಭ ಮಾಡಿ ಒಟ್ಟು 8,300 ಕೋಟಿ ರೂಪಾಯಿಗಳನ್ನು ಇದರಲ್ಲಿ ತೊಡಗಿಸಿದ್ದೇವೆ, ಅದರಲ್ಲಿ 1997-97 ರವರೆಗೆ ಅಕ್ಯೂಮ್ಯುಲೇಟೆಡ್ ಲಾಸ್ 1,140 ಕೋಟಿ ರೂಪಾಯಿಗಳು. ಈಗ ಒಟ್ಟು 75 ಉದ್ದಿಮೆಗಳು ನಮ್ಮ ರಾಜ್ಯದಲ್ಲಿದ್ದರೂ ಹೆಚ್ಚು ಲಾಭವನ್ನು ಗಳಿಸುತ್ತಿರುವಂಥದ್ದು ಕರ್ನಾಟಕ ಪವರ್ ಕಾರ್ಪೊರೇಷನ್ ಲಿಮಿಟೆಡ್, ಕರ್ನಾಟಕ ಎಲೆಕ್ಟ್ರಿಸಿಟಿ ಬೋರ್ಡ್, ಕರ್ನಾಟಕ ಸೋಪ್ಸ್ ಅಂಡ್ ಡಿಟರ್ಜೆಂಟ್ಸ್, ಕರ್ನಾಟಕ ಸಿಲ್ಕ್ ಇಂಡಸ್ಟ್ರೀಸ್ ಕಾರ್ಪೊರೇಷನ್, ಮತ್ತು ಮೈಸೂರ್ ಸೇಲ್ಸ್ ಇಂಟರ್ ನ್ಯಾಷನಲ್ ಲಿಮಿಟೆಡ್. ಈಗಲೂ ಬಾಕಿ ಇರತಕ್ಕಂತಹ ನೆಟ್ ಲಾಸ್ ಸುಮಾರು 200 ಕೋಟಿ ರೂಪಾಯಿಗಳು.

ಸಾಧ್ಯವಿದ್ದಲ್ಲಿ ರಿವೈವ್ ಮಾಡುವುದಕ್ಕೆ ಪ್ರಯತ್ನ ಮಾಡಿದ್ದೇವೆ. ರಿವೈವ್ ಮಾಡಿದರೂ ಪ್ರಯೋಜನವಿಲ್ಲವೆಂದು ಗೊತ್ತಾದ ಇಂಡಸ್ಟ್ರಿಗಳನ್ನು ಹರಾಜು ಹಾಕಿದ್ದೇವೆ. ಕೆಲವು ಇಂಡಸ್ಟ್ರಿಗಳನ್ನು ಹರಾಜು ಹಾಕಿದರೂ, ಯಾರೂ ಕೊಂಡುಕೊಳ್ಳಲು ಮುಂದೆ ಬರಲಿಲ್ಲ. ಹೀಗೆ ಒಂದೊಂದು ಇಂಡಸ್ಟ್ರಿಗೂ ಒಂದೊಂದು ಕತೆ ಇದೆ.

ಡಾ: ವಿ.ಎಸ್. ಆಚಾರ್ಯ: ಮಾನ್ಯ ಸಭಾಪತಿಯವರೆ, ಕೆಎಸ್ಎಫ್‌ಸಿ ಯು ಸರ್ಕಾರಿ ಸ್ವಾಮ್ಯದ ಒಂದು ಹಣಕಾಸಿನ ಸಂಸ್ಥೆ. ಅನೇಕ ವರ್ಷಗಳಿಂದ ಈ ಸಂಸ್ಥೆ ಲಾಭವನ್ನು ಗಳಿಸಿಕೊಂಡು ಬರುತ್ತಿತ್ತು. ಈಗ ಕೊಟ್ಟಿರುವ ವರದಿ ಪ್ರಕಾರ ಈ ಸಂಸ್ಥೆಯಲ್ಲಿ 35 ಕೋಟಿ ರೂಪಾಯಿಗಳು ನಷ್ಟವಾಗಿದೆಯೆಂದು ಹೇಳಲಾಗಿದೆ. ಇದೊಂದು ಆರ್ಥಿಕ ಚಟುವಟಿಕೆ ನಡೆಸುವಂತಹ ಸಂಸ್ಥೆಯಾಗಿದೆ. ಇದೇನು ಸಮಾಚಾರ? ಏಕೆ ಹೀಗಾಯಿತು?

ಜೆ.ಹೆಚ್. ಪಟೇಲ್: ಸರ್ಕಾರಿ ಸ್ವಾಮ್ಯದ ಸಂಸ್ಥೆಗಳೆಂದಮೇಲೆ, ಫೈನಾನ್ಸ್ ಇನ್ಸ್ಟಿಟ್ಯೂಷನ್ ಇರಬಹುದು, ಸ್ಮಾಲ್ ಸ್ಕೇಲ್ ಇಂಡಸ್ಟ್ರೀ ಇರಬಹುದು.

ಡಾ: ವಿ.ಎಸ್. ಆಚಾರ್ಯ: ಬಂದದ್ದು ಮತ್ತು ಸಂದದ್ದು ಎಂದು ಬರೆಯುವಂತಹ ಸಂಸ್ಥೆ ಏಕೆ ನಷ್ಟಕ್ಕೆ ಬಂತು? ನಷ್ಟ ಆಗಬಾರದಲ್ಲಾ?

ಜೆ.ಹೆಚ್. ಪಟೇಲ್: ಏಕೆ ನಷ್ಟವಾಯಿತೆಂದರೆ? ತಂದದ್ದು ಜಾಸ್ತಿ ಆಯಿತು. ಬಂದದ್ದು ಕಡಿಮೆ ಆಯಿತು.

(ವಿಧಾನ ಪರಿಷತ್ ಕಲಾಪ, ಮಾರ್ಚ್ 11, 1999)

## ಇಡ್ಲಿ, ದೋಸೆ ಬೆಲೆ ಕಡಿಮೆಯಾಗಲಿ

ವಿ.ಎಸ್. ಉಗ್ರಪ್ಪ: ಮಾನ್ಯ ಸಭಾಪತಿವರೇ ಹಿಂದೆ 1975 ರಲ್ಲಿ ಶ್ರೀರಾಮುಲುರವರು ರಾಜ್ಯದ ಕಾರ್ಮಿಕ ಸಚಿವರಾಗಿದ್ದಾಗ ಏನು ತುರ್ತು ಪರಿಸ್ಥಿತಿ ಇತ್ತು, ಆ ಸಂದರ್ಭದಲ್ಲಿ ಎಲ್ಲಾ ಹೋಟೆಲ್‌ಗಳ ಬೆಲೆಗಳನ್ನು ನಿಯಂತ್ರಿಸತಕ್ಕಂಥ ಒಂದು ಉದಾಹರಣೆ ನಮ್ಮ ಮುಂದಿದೆ. ನಾವು ಅವರಿಗೆ ಸಬ್ಸಿಡೈಸ್ಡ್ ರೇಟ್‌ನಲ್ಲಿ ಫುಡ್‌ಗ್ರೈನ್ಸ್‌ನ್ನು ಕೊಡುವುದಿಲ್ಲವೆಂದು ಹೇಳಿ, ಅವರ ಸ್ವೇಚ್ಛೆಗೆ ಅನುಸಾರವಾಗಿ ಅವರನ್ನು ಬಿಟ್ಟರೆ, ಜನಸಾಮಾನ್ಯರಿಗೆ ಆಗುವ ತೊಂದರೆಯನ್ನು ನಿವಾರಿಸುವದು ಯಾರು? ಅದು ಸರಕಾರದ ಜವಾಬ್ದಾರಿ ಅಲ್ಲವೇ?

ಟಿ.ಎಸ್. ನರಸಿಂಹಮೂರ್ತಿ: ಸಭಾಪತಿಯುವರೇ, I expect a reply from the Hon'ble Chief Minister? ನಾಳೆ ಅವರು ಕ್ಯಾಬಿನೆಟ್‌ನಲ್ಲಿ ಈ ವಿಷಯ ತಂದು ನಿಯಂತ್ರಣ ಮಾಡಲು ಅವಕಾಶ ಇದೆ. Kindly look into this demand and see that some sort of control is brought over the Hotel industry.

ಜಿ. ಬಸವಣ್ಣಪ್ಪ (ಆಹಾರ ಮತ್ತು ನಾಗರೀಕ ಪೂರೈಕೆ ಖಾತೆ ಮಂತ್ರಿ): ತಾವು ಹೇಳತಕ್ಕಂಥಾದ್ದು, ತುರ್ತು ಪರಿಸ್ಥಿತಿಯಲ್ಲಿ ನಾವು ಅಗತ್ಯ ವಸ್ತುಗಳನ್ನು ಕೊಡುತ್ತೇವೆ ಎಂದು ಹೇಳಿ ಸ್ವಲ್ಪ ದಿವಸ ಕೊಟ್ಟ ಹಾಗೆ ಮಾಡಿದರು. ಅಗತ್ಯ ವಸ್ತುಗಳನ್ನು ಸುಲಭ ದರದಲ್ಲಿ ಕೊಟ್ಟು they imposed certain restrictions. ಮುಂದೆ ಅದು ಅಲ್ಲಿಗೇ ನಿಂತು ಹೋಯಿತು.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಸಭಾಪತಿಯವರೇ ತಮಗೂ ಗೊತ್ತಿರುವ ಹಾಗೆ ಪ್ರಪಂಚದ ಯಾವುದೇ ದೇಶದಲ್ಲಿ ಕೆಲವು ನಿರ್ದಿಷ್ಟ ಸಂದರ್ಭಗಳಲ್ಲಿ ಹೋಟೆಲ್‌ಗಳು ಆರೋಗ್ಯಕ್ಕೆ ಹಾನಿಕರ ಎಂದು ಕಂಡು ಬಂದರೆ ಮಾತ್ರ ಅವರ ಮೇಲೆ ಸರ್ಕಾರ ಆಕ್ಷನ್ ತೆಗೆದುಕೊಳ್ಳಬಹುದು. ಅಂಥ ಹೋಟೆಲ್‌ಗಳನ್ನು ಮುಚ್ಚಿಸಬಹುದು.

ಅವರು ಒಂದು ದೋಸೆಗೆ 100 ರೂ ಮಾಡಿದರು ಎಂದು ಭಾವಿಸಿ, ನಿಮಗೆ ಇದು ದುಬಾರಿ ಎನ್ನಿಸಬಹುದು; ಆದರೆ ಅದನ್ನು ತಿನ್ನುವವರಿದ್ದರೆ ಅವನ ಹೋಟೆಲ್ ನಡೆಯುತ್ತದೆ. ಆದ್ದರಿಂದ ಹೋಟೆಲ್ ಇಂಡಸ್ಟ್ರೀ ಏನಿದೆ ಅದನ್ನು ನಾವು ಆರೋಗ್ಯದ ದೃಷ್ಟಿಯಿಂದ ಮಾತ್ರ ನೋಡುತ್ತೇವೆಯೇ ವಿನಃ ಅವರ ಪ್ರೈಸ್‌ನ್ನು ಕಂಟ್ರೋಲ್ ಮಾಡಲು ಬರುವುದಿಲ್ಲ.

ಎಲ್ಲಿಯವರೆಗೆ ಕಾನೂನನ್ನು ನಾವು ಎನ್‌ಫೋರ್ಸ್ ಮಾಡುವುದಕ್ಕೆ ಆಗುವುದಿಲ್ಲ, ಅಂಥ ಕಾನೂನು ಮಾಡಬಾರದು. ಯಾರಿಗಾದರೂ ಎರಡು ರೂ.ಗಳಿಗೆ ಒಂದು ಇಡ್ಲಿ ಕೊಡಿ ಎಂದು ಗವರ್ನರ್ಮೆಂಟ್ ಆರ್ಡರ್ ಇಷ್ಯೂ ಮಾಡಿದೆವು ಎಂದು ಇಟ್ಟುಕೊಳ್ಳಿ. ಆಗ ಹೋಟೆಲ್‌ನವರು ಗವರ್ನರ್ಮೆಂಟ್ ಸಪ್ಲೈ ಎಲ್ಲಿ ಇದೆ ಅಲ್ಲಿ ತೆಗೆದುಕೊಳ್ಳಿ. ನಮ್ಮ ಹೋಟೆಲ್‌ನಲ್ಲಿ ಇಲ್ಲ ಎಂದು ಹೇಳಿದರೆ ನೀವೇನು ಮಾಡುತ್ತೀರಿ? ಇದು ಫ್ರೀಮಾರ್ಕೆಟ್ ಎಕಾನಮಿ. I can understand in a country where everything is controlled by the State. ಇಲ್ಲಿ ಕಾಂಪಿಟೇಷನ್ ಇದೆ. ಮಾರ್ಕೆಟ್ ಎಕಾನಮಿ ಇರುವಾಗ.

(ವಿಧಾನಸಭೆ ಕಲಾಪ, ಮಾರ್ಚ್ 27, 1997)

## ಬೆಳಗಾವಿ ಜಿಲ್ಲೆಯನ್ನು ಒಡೆಯುವುದಿಲ್ಲ

**ಅಧ್ಯಕ್ಷರು (ರಮೇಶ್‌ಕುಮಾರ್):** ಉಪಾಧ್ಯಕ್ಷರು ಏನೋ ಹೇಳುವವರು ಇದ್ದಾರೆ, ಆವಾಗಲೇ ಅವರು ಅನುಮತಿಯನ್ನು ಕೇಳಿದ್ದರು. ಬೆಳಗಾಂ ವಿಚಾರವಾಗಿ ಅವರು ಅದೇ ಊರಿನವರು. ಏನು ಹೇಳುತ್ತಾರೆ ಹೇಳಲಿ, ಮಾನ್ಯ ಉಪಾಧ್ಯಕ್ಷರು.

ಉಪಾಧ್ಯಕ್ಷರು (ಚಂದ್ರಶೇಖರ ಮಾಮನಿ (ಸವದತ್ತಿ ಕ್ಷೇತ್ರ)): ಮಾನ್ಯ ಅಧ್ಯಕ್ಷರೇ ಬೆಳಗಾವಿ ವಿಭಜನೆಯ ಬಗ್ಗೆ ಸರ್ಕಾರ ಒಂದು ನಿರ್ಧಾರವನ್ನು ಹೇಳಬೇಕಾಗುತ್ತದೆ. ಮೊನ್ನೆ ದಿವಸ ನಾನು ಮಾನ್ಯ ಮುಖ್ಯಮಂತ್ರಿಗಳ ಕೂಡ ಸಂಪರ್ಕ ಮಾಡಿ ಏನು ನಿರಶನ ಮಾಡುತ್ತಿದ್ದಾರೆ; ಬೈಲಹೊಂಗಲ, ರಾಮದುರ್ಗ ಮತ್ತು ಸವದತ್ತಿ ತಾಲ್ಲೂಕಿನಲ್ಲಿ ಅವರಿಗೆ ಇದನ್ನು ಹಿಂತೆಗೆದುಕೊಳ್ಳಲು ಹೇಳಿ. ಜನರಿಗೆ ಬಂದಿರುವ ಸಂಶಯ ನಿವಾರಣೆ ಮಾಡಿ ಎಂದೆ.

ಇವತ್ತು ಪುನಃ ರಾಮದುರ್ಗ ಮತ್ತು ಬೈಲಹೊಂಗಲ, ಸವದತ್ತಿಯಲ್ಲಿ ನಿರಶನ ನಡೆಯುತ್ತಿದೆ. ಜಿಲ್ಲೆಯನ್ನು ಎರಡು ಮಾಡುವುದನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದೇವೆಂದು ಸ್ಪಷ್ಟವಾಗಿ ನಾವು ಮುಖ್ಯಮಂತ್ರಿಗಳ ಕಡೆಯಿಂದ ಹೇಳಿಸಬೇಕು, ನಾವು ಅಲ್ಲಿಯವರೆಗೆ ನಿರಶನವನ್ನು ಮುಂದುವರೆಸುತ್ತೇವೆ ಎನ್ನುವ ಮಾತನ್ನು ಹೇಳಿದ್ದಾರೆ. ಸವದತ್ತಿ, ರಾಮದುರ್ಗ, ಬೈಲಹೊಂಗಲದಲ್ಲಿ ಸಂಪೂರ್ಣ ಬಂದ್ ಆಗಿದೆ. ನಾನು ದೂರವಾಣಿ ಮಾಡಿ ಕೇಳಿ ತಿಳಿದುಕೊಂಡೆ. ಬೈಲಹೊಂಗಲದಲ್ಲಿ ಒಂದು ಜೀಪ್‌ನ್ನು ಸುಟ್ಟಿದ್ದಾರೆ. ಸೌದತ್ತಿಯಲ್ಲಿ ಸಾರ್ವಜನಿಕರ ಎರಡು ಸ್ಕೂಟರ್‌ಗಳನ್ನು ಸುಟ್ಟಿದ್ದಾರೆ. ರಾಮದುರ್ಗದಲ್ಲಿ ಕೂಡ ಅಲ್ಲಲ್ಲಿ ಗಲಾಟೆ ಕೂಡ ಆಗುತ್ತಿದೆ.

ಆ ದೃಷ್ಟಿಯಿಂದ ಮುಖ್ಯಮಂತ್ರಿಗಳು ದಯಮಾಡಿ ಏನು ಒಂದು ಬೆಳಗಾಂ ಇತ್ತು, ಕನ್ನಡಿಗರ ಏನು ಒಂದು ಕೂಗು ಇದೆ, ಒಗ್ಗಟ್ಟಾಗಿ ಇರಲಿ ಎನ್ನುವುದನ್ನು ನಾವು ಅದನ್ನು ಉಳಿಸಿಕೊಂಡು ಹೋಗುತ್ತೇವೆನ್ನುವ ಭರವಸೆ ಅದರ ಬಗ್ಗೆ ತಿಳಿಸಿ.

ಜೆ.ಹೆಚ್. ಪಟೇಲ್: ಮಾನ್ಯ ಅಧ್ಯಕ್ಷರೇ, ಒಳ್ಳೆಯ ಅಡ್ಮಿನಿಸ್ಟ್ರೇಷನ್ ಕೊಡಬೇಕೆನ್ನುವ ಉದ್ದೇಶದಿಂದ ಮಾತ್ರ ಜಿಲ್ಲೆಗಳನ್ನು ಪುನರ್ ವಿಂಗಡಣೆ ಮಾಡಲಾಗಿದೆ. ಸಣ್ಣ ಸಣ್ಣ ಜಿಲ್ಲೆಗಳನ್ನು ಮಾಡಬೇಕೆಂದು ಅನೇಕ ಮಾನ್ಯ ಸದಸ್ಯರುಗಳೂ ಹೇಳಿದ್ದಾರೆ. ದೊಡ್ಡ ಜಿಲ್ಲೆಗಳನ್ನು, ಆಡಳಿತ ದೃಷ್ಟಿಯಿಂದ ಮರು ವಿಂಗಡಣೆ ಮಾಡುವುದು ಅವಶ್ಯಕತೆ ಇದೆಯೆಂದು, ದೊಡ್ಡ ಜಿಲ್ಲೆಯಾದ ಬೆಳಗಾವಿಯನ್ನು ಪುನರ್ ವಿಂಗಡಣೆ ಮಾಡುವುದಕ್ಕೆ ಸಂಬಂಧಪಟ್ಟಂತೆ ಆ ಜಿಲ್ಲೆಯ ಎಲ್ಲಾ ಶಾಸಕರುಗಳೊಡನೆ ಚರ್ಚೆ ಮಾಡಿದಂಥ ಸಂದರ್ಭದಲ್ಲಿ, ನಾವುಗಳೆಲ್ಲಾ ಒಮ್ಮತದಿಂದ ತೀರ್ಮಾನ ಮಾಡಿದ್ದೇವೆಂದು ಹೇಳಿ ಒಂದು ಲಿಸ್ಟನ್ನು ಕೊಟ್ಟರು.

ಅದರಲ್ಲಿ ಯಾವುದನ್ನು ಜಿಲ್ಲಾ ಕೇಂದ್ರವನ್ನಾಗಿ ಮಾಡಬಹುದು ಹಾಗೂ ಆ ಜಿಲ್ಲೆಗಳಿಗೆ ಯಾವ ಯಾವ ತಾಲ್ಲೂಕುಗಳನ್ನು ಸೇರಿಸಬಹುದೆಂದು ಇತ್ತು. ಆನಂತರ ಕನ್ನಡ ಪರ ಚಳುವಳಿ ಮಾಡತಕ್ಕಂಥವರಾದ ಮಾನ್ಯ ವಾಟಾಳ್ ನಾಗರಾಜ್‌ರವರು, ಚಿದಾನಂದ ಮೂರ್ತಿಯವರು, ಸಾಶಿ ಮರುಳಯ್ಯನವರೆಲ್ಲಾ ಬಂದು ಬೆಳಗಾವಿ ಜಿಲ್ಲೆಯನ್ನು ವಿಂಗಡಣೆ ಮಾಡುವ ಬಗ್ಗೆ ಅವಸರದ ಕ್ರಮವನ್ನು ತೆಗೆದುಕೊಳ್ಳಬೇಡಿ, ಮಹಾಜನ್ ವರದಿ ಯಾವ ರೂಪಕ್ಕೆ ಬರುತ್ತದೆಂದು ನೋಡಿಯಾದ ಮೇಲೆಯೇ ಅದರ ಬಗ್ಗೆ ತೀರ್ಮಾನ ತೆಗೆದುಕೊಳ್ಳುವುದು ಒಳ್ಳೆಯದೆಂದು ಹೇಳಿದರು. ಆಗ, ಅವರು ಹೇಳಿರುವ ವಿಷಯ ಸರಿಯೆಂದು ನನಗನಿಸಿತು.

ಆದುದರಿಂದ, ಈ ಬೆಳಗಾವಿ ಜಿಲ್ಲಾ ವಿಂಗಡಣಾ ವಿಷಯವನ್ನು ಮಹಾಜನ್ ವರದಿ ಬಗ್ಗೆ ತೀರ್ಮಾನವಾಗುವವರೆಗೂ ಸುದ್ದಿ ಎತ್ತುವುದಿಲ್ಲ ಮತ್ತು ಇದರ ಬಗ್ಗೆ ಮಾತನಾಡಲು ಯಾರು ಕರೆದರೂ ನಾನು ಮಾತನಾಡುವುದಕ್ಕೆ ಹೋಗುವುದಿಲ್ಲ. ಆಗಬಹುದಾ? ಬೆಳಗಾವಿ ಜಿಲ್ಲೆ ವಿಭಜನೆ ಬಗ್ಗೆ ಪ್ರಸ್ತಾಪವೇ ಇಲ್ಲ.

(ವಿಧಾನಸಭೆ ಕಲಾಪ ಸೆಪ್ಟೆಂಬರ್ 8, 1997)

## ಗ್ರಂಥಾಲಯ ಅಧಿಕಾರಿಯ ಪಾಕಿಸ್ಥಾನೀ ಪ್ರೇಮ

### ಗ್ರಂಥಾಲಯಕ್ಕೆ ಕನ್ನಡ ಪುಸ್ತಕಗಳನ್ನು ಖರೀದಿಸುವಲ್ಲಿ ತಾರತಮ್ಯ

ಬಿ.ಎಸ್. ಯಡಿಯೂರಪ್ಪ: ಮಾನ್ಯ ಅಧ್ಯಕ್ಷರೇ, ಮಾನ್ಯ ಮುಖ್ಯಮಂತ್ರಿಗಳು ಲೋಕಸಭೆಯಲ್ಲಿ ಕನ್ನಡದಲ್ಲಿ ಮಾತನಾಡಿ ಒಂದು ದಾಖಲೆಯನ್ನು ನಿರ್ಮಿಸಿ ನಮ್ಮ ಕನ್ನಡ ನಾಡಿನ ಜನರ ಅಭಿಮಾನಕ್ಕೆ ಪಾತ್ರರಾದವರು. ಆದರೆ ದುರಾದೃಷ್ಟ ಮುಖ್ಯಮಂತ್ರಿಗಳಾಗಿರುವಂತಹ ಕಾಲದಲ್ಲಿ ಅವರ ಅಧೀನದಲ್ಲಿರುವ ಸಾರ್ವಜನಿಕ ಗ್ರಂಥಾಲಯಗಳಲ್ಲಿ ಕನ್ನಡಕ್ಕೆ ಅನ್ಯಾಯವಾಗಿದೆ.

ಹಿಂದಿನ ಆಜ್ಞೆ ಪ್ರಕಾರ ಕನ್ನಡ ಪುಸ್ತಕಗಳನ್ನು ಖರೀದಿ ಮಾಡುವುದಕ್ಕೆ ಶೇಕಡ 80 ಪರ್ಸೆಂಟ್ ಹಣ ಖರ್ಚು ಮಾಡುವ ಒಂದು ನಿಯಮ ಇತ್ತು. ಪ್ರತಿಶತ 10 ರಷ್ಟು ಹಣದಲ್ಲಿ

ಆಂಗ್ಲ ಭಾಷಾ ಪುಸ್ತಕಗಳನ್ನು ಖರೀದಿ ಮಾಡಬೇಕು. ಮತ್ತು ಪ್ರತಿಶತ 10 ರಷ್ಟು ಹಣದಲ್ಲಿ ಇತರೇ ಭಾರತೀಯ ಭಾಷಾ ಪುಸ್ತಕಗಳನ್ನು ಖರೀದಿ ಮಾಡಬೇಕೆಂದು ಸುತ್ತೋಲೆ ಇದೆ.

ಆದರೆ ಈಗ ಆ ಸುತ್ತೋಲೆಯನ್ನು ವಾಪಸ್ಸು ತೆಗೆದುಕೊಂಡಿದ್ದಾರೆ. ಇದರ ಪರಿಣಾಮ ಏನಾಗಿದೆ ಎಂದರೆ, ಕನ್ನಡ ಪುಸ್ತಕ ಬೇಕಾದರೆ ಖರೀದಿ ಮಾಡಬಹುದು ಬೇಡವಾದರೆ ಬಿಡಬಹುದು. ಯಾವುದೋ ಬೇಡವಾದ ಪರಭಾಷಾ ಪುಸ್ತಕಗಳನ್ನು ಕಸದ ಬುಟ್ಟಿಗೆ ಹಾಕುವಂತಹ ಪುಸ್ತಕಗಳನ್ನು ಕಮೀಷನ್ ಆಸೆಗೆ ಖರೀದಿ ಮಾಡುವ ಒಂದು ಹೊಸ ಕುತಂತ್ರ, ತಾವು ಮುಖ್ಯಮಂತ್ರಿಗಳಾಗಿರುವಂತಹ ಕಾಲದಲ್ಲಿ, ಗ್ರಂಥಾಲಯ ನಿರ್ದೇಶಕರು ಆಜ್ಞೆಯೊಂದನ್ನು ಹೊರಡಿಸಿದ್ದಾರೆ. ಇದು ತಮ್ಮ ಗಮನಕ್ಕೆ ಬಂದಿದೆಯೇ? ಎರಡನೆಯದು, ಆಶ್ಚರ್ಯ ಅಂದರೆ ಮಾನ್ಯ ಅಧ್ಯಕ್ಷರೇ, ಈಗ ಕ್ಷಾಮ 50 ವರ್ಷದ ಸ್ವರ್ಣ ಜಯಂತಿಯನ್ನು ಆಚರಣೆ ಮಾಡುತ್ತಿದ್ದೇವೆ. ಈ ಕಾಲದಲ್ಲಿ ಗ್ರಂಥಾಲಯ ನಿರ್ದೇಶಕರು, ಪಾಕಿಸ್ತಾನ್ 50 ಇಯರ್ಸ್ ಆಫ್ ಇಂಡಿಪೆಂಡೆನ್ಸ್ ಎನ್ನುವಂತಹ ಒಂದು ಪುಸ್ತಕವನ್ನು ಕೊಂಡುಕೊಂಡಿದ್ದಾರೆ. ಒಂದು ಪುಸ್ತಕಕ್ಕೆ 6 ಸಾವಿರ ರೂಪಾಯಿಗಳು, 10 ಲಕ್ಷ ರೂಪಾಯಿಗಳಷ್ಟು ಪುಸ್ತಕಗಳನ್ನು ಖರೀದಿ ಮಾಡಿಬಿಟ್ಟಿದ್ದಾರೆ. ನನಗೆ ಅರ್ಥವಾಗುತ್ತಿಲ್ಲ.

ನಮ್ಮ ದೇಶವನ್ನು ಭೌತಿಕವಾಗಿ, ಆರ್ಥಿಕವಾಗಿ, ಮಾರಾಟ ಮಾಡುವಂತಹ ಪ್ರಯತ್ನ ಏನಾದರೂ ನಡೆದಿದೆಯೇ. ನಮ್ಮ ದೇಶದ ಸ್ವರ್ಣ ಜಯಂತಿ ಆಚರಿಸುವಂತಹ ಸಂದರ್ಭದಲ್ಲಿ ನಮ್ಮ ಪುಸ್ತಕವನ್ನು ಯಾರಾದರೂ ಖರೀದಿ ಮಾಡಿದ್ದಾರಾ? ಇದರ ಅಗತ್ಯ ಇತ್ತೇ? ಏನು ಮಾಡುವುದಕ್ಕೆ ಹೊರಟಿದ್ದೀರಿ? ಇದು ಸತ್ಯವೇ ಆಗಿದ್ದಲ್ಲಿ ತಾವು ಕ್ಷಮಾಪಣೆಯನ್ನು ಕೇಳಬೇಕು.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಅಧ್ಯಕ್ಷರೇ, ನಿಜವಾಗಿಯೂ ಆತ ಈ ಕೆಲಸ ಮಾಡಿದ್ದರೆ ಅವನಿಗೆ ಎಂತಹ ಶಿಕ್ಷೆ ಕೊಡಬೇಕು ಎಂದು ನಾನು ಆಮೇಲೆ ಹೇಳುತ್ತೇನೆ.

ಪಾಕಿಸ್ತಾನಕ್ಕೆ ಸ್ವಾತಂತ್ರ್ಯ ಬಂದು 50 ವರ್ಷಗಳಾಯಿತು ಎನ್ನುವ ಪುಸ್ತಕವನ್ನು ಇಷ್ಟು ದುಡ್ಡು ಕೊಟ್ಟು ಕೊಂಡುಕೊಳ್ಳಲು ಅವನಿಗೆ ಯಾರು ಹೇಳಿದರು? ಯಾರ ಪರ್ಮಿಷನ್ ತೆಗೆದುಕೊಂಡಿದ್ದ? ಯಾರಿಂದ ಅವನಿಗೆ ಅನುಮತಿ ಸಿಕ್ಕಿತು? ದುಡ್ಡು ಹೇಗೆ ಖರ್ಚು ಮಾಡಿದ? ಪ್ರತಿಯೊಂದು ವಿವರವನ್ನು ಕೇಳಿ ಅವನು ಏನಾದರೂ ಈ ತರಹ ಮಾಡಿದ್ದರೆ ಅವನಿಗೆ ಎಂತಹ ಶಿಕ್ಷೆ ಕೊಡುತ್ತೇನೆ ಎನ್ನುವುದನ್ನು ತಾವೇ ನೋಡಿ.

ಬಿ.ಎಸ್. ಯಡಿಯೂರಪ್ಪ: ಮಾನ್ಯ ಅಧ್ಯಕ್ಷರೇ,

ಜೆ.ಹೆಚ್. ಪಟೇಲ್: ನಾನು ಆಗಲೇ ಹೇಳಿದೆ. ಅವನ ವಿವರಣೆಯನ್ನು ಕೇಳದೆ ಶಿಕ್ಷೆ ಕೊಡಬಾರದು ಎನ್ನುವ ಕಾರಣಕ್ಕೆ ಸುಮ್ಮನೆ ಇದ್ದೇನೆ. ಇಲ್ಲದಿದ್ದರೆ ಎಷ್ಟು ಸಿಟ್ಟು ಬಂದಿತ್ತು ಅಂದರೆ ಈಗಲೇ ಹೇಳಿಬಿಡೋಣ ಎಂದು ಅನ್ನಿಸಿತ್ತು. ಆದರೆ ಹೇಳದೆ, ಕೇಳದೆ ಶಿಕ್ಷೆ ಕೊಡಬಾರದು ಎನ್ನುವ ಕಾರಣಕ್ಕೆ ಸುಮ್ಮನೆ ಇದ್ದೇನೆ.

ಹೆಚ್.ಎನ್. ನಂಜೇಗೌಡ: ಹಳೆಯ ಸುತ್ತೋಲೆಯನ್ನು ರೆಸ್ಟೋರ್ ಮಾಡಿ. ಪುಸ್ತಕ ಕೊಂಡಿದ್ದರೆ ಶಿಕ್ಷೆ ಕೊಡುವುದರ ಜೊತೆಗೆ ಸರ್‌ಚಾರ್ಜ್ ಎಂದು ಹೇಳಿ ಅವನ ಹತ್ತಿರ ವಸೂಲಿ ಮಾಡಿ.

ಅರಗ ಜ್ಞಾನೇಂದ್ರ: 80 ಪರ್ಸೆಂಟ್ ಕನ್ನಡ ಪುಸ್ತಕಗಳನ್ನು ಕೊಳ್ಳುವಂತಹ ಸುತ್ತೋಲೆಯನ್ನು ಮತ್ತೆ ಮುಂದುವರಿಸಬೇಕು.

ಬಿ.ಎಸ್. ಯಡಿಯೂರಪ್ಪ: ಕರ್ನಾಟಕ ಪ್ರಕಾಶಕರ ಸಂಘವೇ ಈ ಆರೋಪ ಮಾಡಿದೆ. ಈಗಾಗಲೇ 10 ಲಕ್ಷ ರೂಪಾಯಿ ಪುಸ್ತಕಗಳನ್ನು ಖರೀದಿ ಮಾಡಿರುವುದು ನಿಜ. ಒಂದು ಪುಸ್ತಕದ ಬೆಲೆ 6 ಸಾವಿರ ರೂಪಾಯಿ.

ಜೆ.ಹೆಚ್. ಪಟೇಲ್: ವಿಚಾರ ಮಾಡುತ್ತೇನೆ.

ಬಿ.ಎಸ್. ಯಡಿಯೂರಪ್ಪ: ಇವತ್ತೇ ಮಾಹಿತಿ ತರಿಸಿ. ಉತ್ತರ ಹೇಳಿ.

**Mr. Speaker:** CM is hurt, after hearing this incident. ಅವರು ಏನು ಹೇಳಿದ್ದಾರೆ ಅಂದರೆ ನಾನು ಈಗಾಗಲೇ ಕ್ರಮ ತೆಗೆದುಕೊಳ್ಳುವವನಿದ್ದೆ, ಆದರೆ ನ್ಯಾಚುರಲ್ ಜಸ್ಟೀಸ್ ಎನ್ನುವುದು ಒಂದು ಡಿಮ್ಯಾಂಡ್ ಮಾಡುತ್ತದೆ. ಅವನನ್ನು ಒಂದು ವಿವರಣೆ ಕೇಳಬೇಕಾಗುತ್ತದೆ.

(ವಿಧಾನ ಸಭೆ ಕಲಾಪ ಸೆಪ್ಟೆಂಬರ್ 9, 1997)

## ಕ್ರೀಡಾಪಟು ಪುಷ್ಪಳಿಗೆ ಸಹಾಯ

ಕೆ.ಎಸ್. ಈಶ್ವರಪ್ಪ: ಮಾನ್ಯ ಅಧ್ಯಕ್ಷರೇ, ಇಡೀ ಪ್ರಪಂಚದಲ್ಲಿ ತುಂಬಾ ಸಂತೋಷ ಪಡುವಂತಹ ಭಾರತದ ಒಬ್ಬರು ಕ್ರೀಡಾಪಟು ಎಸ್.ಎನ್. ಪುಷ್ಪ. ಅವರು ಕಿಕ್‌ಬಾಕ್ಸ್ ಸ್ಪರ್ಧೆಯಲ್ಲಿ ಭಾರತವನ್ನು ಪ್ರತಿನಿಧಿಸಿದಂತಹ ಏಕೈಕ ಮಹಿಳೆ. ಕರ್ನಾಟಕ ರಾಜ್ಯದಿಂದ ಒಬ್ಬಳೇ ಹೋದಳು. ಭಾರತ ದೇಶವನ್ನು ರೆಪ್ರಸೆಂಟ್ ಮಾಡಿ ಪ್ರಪಂಚದ ಒಂದು ಕ್ರೀಡಾಕೂಟದ ಸ್ಪರ್ಧೆಯಲ್ಲಿ ಬಾಂಕಾಕ್‌ನಲ್ಲಿ ನಡೆದಂತಹ ಒಂದು ಸ್ಪರ್ಧೆಯಲ್ಲಿ ಕಿಕ್‌ಬಾಕ್ಸ್‌ನ ಸ್ಪರ್ಧೆಯಲ್ಲಿ ಸೆಕೆಂಡ್ ಪ್ರೈಸ್ ಬಂದಿದೆ. ಸಿಲ್ವರ್ ಮೆಡಲ್ ಬಂದಿದೆ.

ಆಕೆ ಇಲ್ಲಿಂದ ಅಲ್ಲಿಗೆ ಹೋಗಲಿಕ್ಕೆ 60 ಸಾವಿರ ರೂಪಾಯಿ ಖರ್ಚಾಗಿರುವಂತಹ ಸಂದರ್ಭದಲ್ಲಿ ಕರ್ನಾಟಕದಿಂದ 30 ಸಾವಿರ ರೂಪಾಯಿ ಸಂಗ್ರಹವಾಯಿತು. ವಾಪಸ್ಸು ಬಂದಳು, 30 ಸಾವಿರ ಸಾಲ ತೆಗೆದುಕೊಂಡು ಹೋಗಿದ್ದಳು. ವಾಪಸ್ಸು ಬಂದ ನಂತರ ಆವೊಂದು ಬೆಳ್ಳಿ ಪದಕ ಅಡವಿಟ್ಟಿರುವುದು ತಿಳಿದು ಬಂದಿದೆ. ಅದು ಆಕೆಯ ಕೈಗೆ ಸಿಕ್ಕಿಲ್ಲ.

ನ್ಯಾಯವಾಗಿ ಕರ್ನಾಟಕ ರಾಜ್ಯವೇ ಪೂರ್ಣ ಹಣವನ್ನು ಈ ವಿದ್ಯಾರ್ಥಿನಿಗೆ ಕೊಡಬೇಕಾಗಿತ್ತು. ಹೋಗುವುದಕ್ಕೆ ಬರುವುದಕ್ಕೆ ಎಲ್ಲ. ಯಾವ ರೀತಿ ನಮ್ಮ ಮುಖ್ಯಮಂತ್ರಿಗಳು

ಅನಿಲ್‌ಕುಂಬ್ಳೆಯವರಿಗೆ ಒಂದು ಲಕ್ಷ ರೂಪಾಯಿ ಕೊಟ್ಟು ಅಭಿನಂದನೆಯನ್ನು ಸಲ್ಲಿಸಿ ಕರ್ನಾಟಕ ರಾಜ್ಯದ ಕೀರ್ತಿ ಪತಾಕೆಯನ್ನು ವಿಶ್ವದಲ್ಲಿ ಎತ್ತುವುದಕ್ಕೆ ಅವಕಾಶ ಮಾಡಿಕೊಟ್ಟರೋ, ಅವರಿಗೆ ಬೆನ್ನುಚಪ್ಪರಿಸಿದರೋ, ಅದೇ ರೀತಿ ವಿದ್ಯಾರ್ಥಿನಿ ಪುಷ್ಪಳಿಗೂ ಕೂಡ ಒಂದು ಲಕ್ಷ ರೂಪಾಯಿ ಹಣವನ್ನು ಕೊಟ್ಟು, ಅವಳಿಗೆ ಕರ್ನಾಟಕ ರಾಜ್ಯದ ಅಭಿನಂದನೆಯನ್ನು ಸಲ್ಲಿಸಿ, ಮುಂದೆ ಇಡೀ ವಿಶ್ವದಲ್ಲಿ ಪ್ರಥಮ ಸ್ಥಾನ ಪಡೆಯುವುದಕ್ಕೆ ಬೆಂಬಲ ಕೊಡಬೇಕೆಂದು ತಮ್ಮ ಮುಖಾಂತರ ಸರ್ಕಾರದಲ್ಲಿ ನಾನು ಪ್ರಾರ್ಥನೆ ಮಾಡುತ್ತೇನೆ.

ಶ್ರೀಮತಿ ಪ್ರಮೀಳ ನೇಸರ್ಗಿ: ಒಬ್ಬ ವಿದ್ಯಾರ್ಥಿನಿ ತನ್ನ ಸ್ವಂತ ಖರ್ಚಿನಲ್ಲಿ ಬಾಂಕಾಕ್‌ಗೆ ಹೋಗಿ 60 ಸಾವಿರ ರೂಪಾಯಿ ಖರ್ಚು ಮಾಡಬೇಕಾದರೆ ಅಲ್ಲಿ ಇಲ್ಲಿ ಸಾಲ ತೆಗೆದುಕೊಂಡು ಹೋಗಿರುತ್ತಾರೆ. ಸರ್ಕಾರ ಇದರ ಬಗ್ಗೆ ಆಸಕ್ತಿ ವಹಿಸಿ ಹಣವನ್ನು ಪೂರ್ತಿ ಕೊಡಬೇಕಾಗಿತ್ತು. ಹೋಗಲಿ ಈಗಲಾದರೂ ಇಷ್ಟು ಕೀರ್ತಿ ತಂದಿರತಕ್ಕ ಈ ವಿದ್ಯಾರ್ಥಿನಿಗೆ ಒಂದು ಲಕ್ಷ ರೂಪಾಯಿ ಅನುದಾನ ಕೊಡಬೇಕು.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಅಧ್ಯಕ್ಷರೇ, ಕ್ರೀಡಾಪಟುಗಳಿಗೆ ನಾವು ಉತ್ತೇಜನ ಕೊಡಬೇಕೆನ್ನುವುದರಲ್ಲಿ ಏನು ಅನುಮಾನವೇ ಇಲ್ಲ. ಆದರೆ ಅವರ ಈ ದುಸ್ಥಿತಿ ನಮಗೆ ಯಾರಿಗೂ ಗೊತ್ತಿರಲಿಲ್ಲ. ಆರ್ಥಿಕವಾಗಿ ಏನು ಸಹಾಯ ಮಾಡಬೇಕೋ ಮಾಡೋಣ. ಒಂದು ಲಕ್ಷ ರೂಪಾಯಿ ಎಂದು ನಾನು ಈಗ ಹೇಳುವುದಿಲ್ಲ. 50 ಸಾವಿರದವರೆಗೆ ಆ ಡಿಪಾರ್ಟ್‌ಮೆಂಟ್ ಮುಖಾಂತರ ನೆರವು ಕೊಡಿಸುವುದಕ್ಕೆ ವ್ಯವಸ್ಥೆ ಮಾಡುತ್ತೇನೆ.

ಅಧ್ಯಕ್ಷರು: 50 ಸಾವಿರ ರೂಪಾಯಿ ತಾವು ಕೊಡುತ್ತೀರಿ. ಆಕೆ ಈಗ ಏನು ಮೆಡಲ್ ಅಡವಿಟ್ಟಿದ್ದಾಳೆ ಅದನ್ನು ಬಿಡಿಸಿಕೊಡತಕ್ಕ ವ್ಯವಸ್ಥೆಯಾಗಬೇಕು.

ಸಿ. ಬೈರೇಗೌಡ: ಕಿಕ್‌ಬ್ಯಾಕ್ ಈ ಆಟದ ಬಗ್ಗೆ ನಾನು ಇದುವರೆಗೂ ಕೇಳಿಲ್ಲ, ಏನಿದು?

ಕೆ.ಎಸ್. ಈಶ್ವರಪ್ಪ: ಮಹಿಳೆಯರ ಕರಾಟೆ ಅದು.

(ವಿಧಾನ ಸಭೆ ಕಲಾಪ, ಏಪ್ರಿಲ್ 3, 1999)

## ಐಎಎಸ್: ಮೆಚ್ಚುಗೆ ಮಾತು

ಜೆ.ಹೆಚ್.ಪಟೇಲ್ (ಕೈಗಾರಿಕಾ ಖಾತೆ ಮಂತ್ರಿ) : .. ಐಎಎಸ್ ಅಧಿಕಾರಿಗಳನ್ನು ಅಧ್ಯಕ್ಷರು ಮತ್ತು ನಿರ್ದೇಶಕರನ್ನಾಗಿ ಹಾಕುವುದರಿಂದ ಸರ್ಕಾರಿ ಉದ್ದಿಮೆಗಳಲ್ಲಿ ನಷ್ಟ ಉಂಟಾಗುತ್ತಿದೆ ಎನ್ನುವುದನ್ನು ನಾವು ಒಪ್ಪುವುದಿಲ್ಲ.. ಕೆಲವೊಮ್ಮೆ ತಂತ್ರಜ್ಞರೇ ಮುಖ್ಯಸ್ಥರಾಗಿದ್ದರೂ ಲುಕ್ಸಾನು ಆಗಬಹುದು.

ಶ್ರೀಮತಿ ಕೆ.ಎಸ್. ನಾಗರತ್ನಮ್ಮ : ಬೋಲ್ಟ್‌ನೆಟ್ ಗೊತ್ತಿಲ್ಲದ ಟೆಕ್ನೊಕಾರ್ಟ್ಸ್ ಇರುವ ಕಡೆ ನೀವೇನಾದರೂ ಮಾಡಿ... ಆದರೆ ಉತ್ತಮ ರೀತಿಯ ಟೆಕ್ನೋಕಾರ್ಟ್ಸ್‌ಗಳಿರುವ ಕಡೆ ಆಡಳಿತದಲ್ಲಿ ಅವರಿಗೂ ಅವಕಾಶ ಕೊಡಿ.

ಜೆ.ಹೆಚ್. ಪಟೇಲ್ : ಒಂದು ಉದಾಹರಣೆ ಕೊಡುತ್ತೇನೆ. ಭದ್ರಾವತಿಯ ವಿಐಎಸ್‌ಎಲ್‌ನ ಮೆನೇಜಿಂಗ್ ಡೈರೆಕ್ಟರ್‌ರವರು ಒಬ್ಬ ಟೆಕ್ನೋಕ್ರಾಟ್. ಅಲ್ಲಿರುವ ಛೇರ್ಮನ್ ಒಬ್ಬ ಐಎಎಸ್ ಅಧಿಕಾರಿ. ಸಾಮಾನ್ಯವಾಗಿ ಸೋಪು, ಕಾಗದ ಇವೇ ಮೊದಲಾದ ಕಾರ್ಖಾನೆಗಳಲ್ಲಿ ಎಂಡಿ ಛೇರ್ಮನ್ ಆಗಿರುತ್ತಾರೆ.

ಕೆ.ಹೆಚ್. ಪಾಟೀಲ್ : ಐಎಎಸ್ ಅಧಿಕಾರಿಗಳನ್ನು ನೇಮಿಸಿದ್ದೀರಿ, ಅವರು ಸೂಪರ್ ಹ್ಯೂಮನ್ ಬೀಯಿಂಗ್. ಅವರನ್ನು ನೇಮಿಸಿದ ಮೇಲೆ ಯಾವ್ಯಾವುದು ಸಂಸ್ಥೆ ಲುಕ್ಸಾನು ಆಗಿದೆ, ಅದೆಲ್ಲಾ ಫಾಯಿದೆ ಆಗಿದೆ. ಐಎಎಸ್ ಅಧಿಕಾರಿಗಳನ್ನು ಹಾಕುವುದರಿಂದ ಎಲ್ಲ ಕಡೆ ಲಾಭ ಆಗುವುದಾದರೆ ಹಾಕಿ. ಇಲ್ಲದಿದ್ದರೆ ಇದನ್ನು ಬಿಟ್ಟು ಬೇರೆ ಮಾರ್ಗ ಹುಡುಕಲು ಏಕೆ ಪ್ರಯತ್ನಿಸಲಿಲ್ಲ.

ಜೆ.ಹೆಚ್. ಪಟೇಲ್ : ನಾವು ಪ್ರಯತ್ನ ಮಾಡುತ್ತಾ ಇದ್ದೇವೆ. ಈಗ ವಿಕ್ರಾಂತ್ ಟೈರ್ಸ್ ಲುಕ್ಸಾನು ಆಗಿತ್ತು. ಅಲ್ಲಿ ಮಾನ್ಯ ಪ್ರಭು ಎಂಬ ಐಎಎಸ್ ಅಧಿಕಾರಿಯನ್ನು ಹಾಕಿದೆವು. ಕಳೆದ ಮೂರು ವರ್ಷದಿಂದ ಅಲ್ಲಿನ ವ್ಯವಸ್ಥೆ ಚೆನ್ನಾಗಿದೆ. ಈ ವರ್ಷ ಲಾಭ ಸಹಿತ ಮಾಡಿದ್ದಾಗಿದೆ. ಹಾಗೆಯೇ ಮೈಸೂರು ಎಲೆಕ್ಟ್ರಿಕಲ್ ಕಾರ್ಖಾನೆ ಇದೆ. ಅಲ್ಲಿ ಅತ್ಯಂತ ದಕ್ಷ ಅಧಿಕಾರಿ ಎಂದು ನಿರ್ಧರಿಸಲಾಗಿದ್ದ ಮಾನ್ಯ ರಾಜಕುಮಾರ್ ಎಂಬ ಐಎಎಸ್ ಅಧಿಕಾರಿಯನ್ನು ಹಾಕಿದೆವು. ಅಲ್ಲೂ ಲಾಭ ಬಂದಿದೆ. ಅದೇ ರೀತಿ ಮೈಸೂರು ಲ್ಯಾಂಪ್ಸ್‌ನಲ್ಲಿ ಮಾನ್ಯ ಕೆ.ಸಿ.ಎನ್ ಮೂರ್ತಿ ಎಂಬ ಐಎಎಸ್ ಅಧಿಕಾರಿ ಛೇರ್ಮನ್ ಇದ್ದಾರೆ. ಅಲ್ಲೂ ಸಹ ಲಾಭ ಮಾಡಿದ್ದೇವೆ. ಮಂಗಳೂರು ಕೆಮಿಕಲ್ಸ್ ಮತ್ತು ಫರ್ಟಿಲೈಸರ್ ಲುಕ್ಸಾನಿನಲ್ಲಿತ್ತು. ಮಾನ್ಯ ದಾತಾರ್ ಐಎಎಸ್ ಅಧಿಕಾರಿ ಅಲ್ಲಿಗೆ ಹೋದ ಮೇಲೆ ಲಾಭ ದೊರೆತಿದೆ. ಹೀಗೆ ಲಾಭ ಮಾಡಿರುವ ಹಲವಾರು ಸಂಸ್ಥೆಗಳಿವೆ.

ಎಂ.ಎಸ್. ಕೃಷ್ಣಪ್ಪ : ಈ ಐಎಎಸ್ ಅಧಿಕಾರಿಗಳು ಬೇಗ ಬೇಗ ಟ್ರಾನ್ಸ್‌ಫರ್ ಆಗುತ್ತಾರೆ. ಹೀಗೆ ಮಾಡಬೇಡಿ.

ಜೆ.ಹೆಚ್. ಪಟೇಲ್ : ಮಾನ್ಯ ಸದಸ್ಯರ ಸಲಹೆಯನ್ನು ಗಮನದಲ್ಲಿಟ್ಟುಕೊಂಡು ಈ ದಿಸೆಯಲ್ಲಿ ಆಗುವ ದೋಷವನ್ನು ಸರಿಪಡಿಸಿಕೊಳ್ಳುತ್ತೇವೆ.

(ವಿಧಾನಸಭೆ ಕಲಾಪ: ಸೆಪ್ಟೆಂಬರ್ 3, 1987)

## ಖಾಯಂ ತನಿಖಾ ಐಎಎಸ್ ಅಧಿಕಾರಿ

ಹೆಚ್.ಕೆ. ಪಾಟೀಲ್: ತಪ್ಪಿತಸ್ಥರಾದ ಕೆಲವು ಐಎಎಸ್ ಅಧಿಕಾರಿಗಳ ವಿಚಾರಣೆ ವಿವಿಧ ಕಾರಣಗಳಿಂದಾಗಿ ತಡವಾಗುತ್ತಿದೆ. ಹೆಚ್ಚು ಕಾಲ ಇಂತಹ ಅಧಿಕಾರಿಗಳನ್ನು ಅಮಾನತ್ತಿನಲ್ಲಿಡಲೂ ಸಾಧ್ಯವಿಲ್ಲ. ಈ ಘಟನೆ ಮರುಕಳಿಸದಂತೆ ಏನು ಕ್ರಮ ಕೈಗೊಳ್ಳುತ್ತೀರಿ?

ವಿ.ಆರ್. ಸುದರ್ಶನ್: ದೂರು ಬಂದ ಐಎಎಸ್ ಅಧಿಕಾರಿಗಳ ತನಿಖೆ ತಡವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ ಎಂದು ನಾನು ಭಾವಿಸುತ್ತೇನೆ. ನಾವು ದೂರು ಬಂದ ಒಬ್ಬ ಐಎಎಸ್ ಅಧಿಕಾರಿಯ ತನಿಖೆಯ ಜವಾಬ್ದಾರಿಯನ್ನು ಮತ್ತೊಬ್ಬ ಐಎಎಸ್ ಅಧಿಕಾರಿಗೆ ವಹಿಸಿರುತ್ತೇವೆ ಎಂದು ಇಟ್ಟುಕೊಳ್ಳಿ. ಅವನೂ ವರ್ಗಾವಣೆ ಆಗುತ್ತಾನೆ. ಹೀಗೆ ಐದಾರು ವರ್ಗಾವಣೆಗಳಾದ ಪ್ರಕರಣಗಳು ಇವೆ. ಈ ವರ್ಗಾವರ್ಗಿಯಿಂದ ತನಿಖೆ ನೆನೆಗುದಿಗೆ ಬೀಳುತ್ತಿದೆ.

ಮರಿಲಿಂಗೇಗೌಡ: ಮಾನ್ಯ ಸುದರ್ಶನರ ಮಾತು ನಿಜ. ಶ್ರೀನೇಗಿ ಎನ್ನುವ ಅಧಿಕಾರಿಯ ತನಿಖೆ ಮೂರು ಬಾರಿ ತನಿಖಾಧಿಕಾರಿಗಳ ವರ್ಗಾವಣೆಯಿಂದ ವಿಳಂಬವಾಗಿದೆ. ಸನ್ಮಾನ್ಯ ಸಭಾಪತಿಗಳೇ, ಅವರೂ ಐಎಎಸ್ ಅಧಿಕಾರಿ; ಇವರೂ ಐಎಎಸ್ ಅಧಿಕಾರಿ. ನಮಗ್ಯಾಕೆ ಬೇಕು ನಾಳೆ ದಿವಸ ಇವರು ಮೇಲಧಿಕಾರಿಯಾಗಿ ಬರುತ್ತಾರೆ ಎನ್ನುವ ಅಳುಕು ಇರುತ್ತದೆ. ಸುದರ್ಶನರವರು ಹೇಳಿದಂತೆ ಲೋಕಾಯುಕ್ತ ಕಾಯಿದೆಗೆ ತಿದ್ದುಪಡಿ ತನ್ನಿ. ಅಧಿಕಾರಿಗಳೇ ನಿಜವಾಗಿ ದೇಶ ಮತ್ತು ರಾಜ್ಯ ಆಳುವವರು. ನಾವು ರಾಜಕಾರಣಿಗಳು ಹೆಸರಿಗೆ ಮಾತ್ರ. ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲಾ ಎನ್ನುವ ಗಾದೆ ನಿಜವಾಗುತ್ತದೆ. ಈ ಐಎಎಸ್ ಅಧಿಕಾರಿಗಳ ತನಿಖೆ ಬಗ್ಗೆ ಕ್ರಮ ಕೈಗೊಳ್ಳದಿದ್ದರೆ ಕೆಎಎಸ್‌ನವರೂ ಶುರು ಹಚ್ಚಿಕೊಳ್ಳುತ್ತಾರೆ.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಸಭಾಪತಿಗಳೇ ಸದಸ್ಯರ ಮನಸ್ಸಿನ ಸಂದೇಹ ನಿವಾರಿಸಲು ನನ್ನದೊಂದು ಆಲೋಚನೆ ಇದೆ. ನಮ್ಮ ಹಿರಿಯ ಅಧಿಕಾರಿಗಳು ಅದನ್ನೇ ಸಲಹೆ ಮಾಡಿದ್ದಾರೆ. ಅದೇನೆಂದರೆ, ವಿಚಾರಣೆ ಮಾಡುವುದಕ್ಕೋಸ್ಕರವೇ ಒಬ್ಬ ಐಎಎಸ್ ಅಧಿಕಾರಿಯನ್ನು ನೇಮಕ ಮಾಡಬೇಕೆಂದಿದ್ದೇವೆ. ಈ ವ್ಯವಸ್ಥೆ ಮಹಾರಾಷ್ಟ್ರ ರಾಜ್ಯದಲ್ಲಿ ಇದೆಯೆಂತೆ. ಏಕೆಂದರೆ ಇಲ್ಲಿ ಅಧಿಕಾರಿಗಳ ವರ್ಗಾವಣೆಯಾಗುತ್ತಿದ್ದರೆ ವಿಚಾರಣೆ ಸರಿಯಾಗಿ ಆಗುವುದಿಲ್ಲ. ಆದ್ದರಿಂದ ಇದಕ್ಕೆ ಒಬ್ಬ ಹಿರಿಯ ಅಧಿಕಾರಿ, ಸ್ವಲ್ಪ ಜುಡೀಷಿಯಲ್ ವಿಚಾರ ಗೊತ್ತಿರುವವರನ್ನು ನೇಮಕ ಮಾಡಬೇಕೆಂದು ವಿಚಾರ ಮಾಡುತ್ತಿದ್ದೇನೆ. ಈ ರೀತಿ ಮಾಡಿದರೆ ತಡವಾಗುವುದಿಲ್ಲ.

(ವಿಧಾನ ಪರಿಷತ್ ಕಲಾಪ, ಫೆಬ್ರವರಿ 27, 1997)

## ಪ್ರೊ: ಬಿಕೆಸಿ ಸಲಹೆ

ಜೆ.ಹೆಚ್. ಪಟೇಲ್ (ಕೈಗಾರಿಕಾ ಖಾತೆ ಸಚಿವರು): ಸನ್ಮಾನ್ಯ ಸಭಾಪತಿಗಳೇ.. ಸನ್ಮಾನ್ಯ ಪ್ರೊಫೆಸರ್ ಬಿ.ಕೆ. ಚಂದ್ರಶೇಖರ್‌ರವರು ನಮ್ಮ ಕೈಗಾರಿಕಾ ಘಟಕಗಳಲ್ಲಿನ ಕಾರ್ಯ ನಿರ್ವಹಣೆಯ ಮೌಲ್ಯಾಂಕನ ನಡೆಸುವಂತೆ ಉತ್ತಮ ಸಲಹೆ ನೀಡಿದ್ದಾರೆ. ನಿಜ. ಅವರ ಮಾತಿನಲ್ಲಿ ಅರ್ಥವಿದೆ. ಐಎಎಸ್ ಅಧಿಕಾರಿಗಳನ್ನು ನಾವು ಪ್ರಾರಂಭದಿಂದಲೂ ಸಂಶಯದ ದೃಷ್ಟಿಯಿಂದಲೇ ನೋಡುತ್ತಾ ಬಂದಿದ್ದೇವೆ... ಈಗಂತೂ ಬಹುತೇಕ ಸಂಸ್ಥೆಗಳಿಗೆ ಐಎಎಸ್

ಅಧಿಕಾರಿಗಳನ್ನೇ ಹಾಕುತ್ತಿದ್ದೇವೆ. ಕೆಲವೊಮ್ಮೆ ತಜ್ಞರು ಮಾಡಿದ್ದ ತಪ್ಪುಗಳನ್ನು ಐಎಎಸ್ ಅಧಿಕಾರಿಗಳು ಸರಿಪಡಿಸಿದ ಸಂದರ್ಭವೂ ಉಂಟು.

**ಕೆ.ಎನ್. ನಾಗೇಗೌಡ :** ಸುಮ್ಮನೆ ಬಾಯಿ ಚಪಲದಿಂದ ಹಾಗೆ ಹೇಳಬೇಡಿ, ಅಂಥ ಯಾವುದಾದರೊಂದು ನಿದರ್ಶನ ಹೇಳಿ.

**ಜೆ.ಹೆಚ್. ಪಟೇಲ್ :** ವಿಕ್ರಾಂತ್ ಟೈರ್ಸ್.

**ಕೆ.ಎನ್. ನಾಗೇಗೌಡ :** ಐಎಎಸ್ ಅಧಿಕಾರಿಗಳು ಕೆಡಿಸಿದುದನ್ನು ಟೆಕ್ನೊಕ್ರಾಟ್ಸ್ ಸರಿಪಡಿಸಿರುವ ನಿದರ್ಶನಗಳೂ ಸಾಕಷ್ಟು ಇವೆ.

**ಜೆ.ಹೆಚ್. ಪಟೇಲ್ :** ನಿಜ ಎರಡೂ ಕಡೆಯಿಂದಲೂ ಇವೆ.. ಐಎಎಸ್ ಅಧಿಕಾರಿಗಳೇ ಬೇಡ, ಎಲ್ಲರೂ ಟೆಕ್ನೋಕ್ರಾಟ್ಸ್ ಇರಲಿ ಎಂದರೆ ನಾನು ಎಲ್ಲಿಂದ ತರಲಿ... ಹೋಲ್‌ಸೇಲ್ ಆಗಿ ಇವರ ಬಗೆಗೆ ಸರಿ, ತಪ್ಪು ನಿರ್ಣಯ ತೆಗೆದುಕೊಳ್ಳುವುದೂ ಬೇಡ.

**ಪ್ರೊ|| ಬಿ.ಕೆ. ಚಂದ್ರಶೇಖರ್ :** ಮಾನ್ಯ ಸಭಾಪತಿಯವರೇ, ನಾನು ಇಲ್ಲಿ ಒಂದು ಅಂಶ ಕ್ಲಾರಿಫೈ ಮಾಡುತ್ತೇನೆ.. ಯಾವುದಾದರೊಂದು ಉದ್ದಿಮೆಯಲ್ಲಿ ಒಬ್ಬರಿಂದ ತಪ್ಪಾಗಿದ್ದರೆ ಸರಿಪಡಿಸಬಹುದು ಆದರೆ System ನಲ್ಲಿಯೇ procedural mistakes ಇದ್ದರೆ ಸರಿಪಡಿಸುವುದು ಕಷ್ಟ. ಕೇಂದ್ರ ಸರ್ಕಾರ ಈ ದಿಸೆಯಲ್ಲಿ ಕೆಲವೊಂದು ಪ್ರಯತ್ನ ನಡೆಸಿದೆ. ಇಂಡಸ್ಟ್ರಿಯಲ್ ಕೋಡರ್‌ಗಾಗಿ ಕೇಂದ್ರ ಸರ್ಕಾರದ ಪ್ರಯತ್ನವೂ ಯಶಸ್ವಿಯಾಗಿಲ್ಲ.. ನಷ್ಟದಲ್ಲಿರುವ ಕಾರ್ಖಾನೆಗಳಲ್ಲಿ ಕೇಂದ್ರದ ಕೆಲವೊಂದು ಪ್ರಯತ್ನಗಳು ಸರಿಹೋದವು.. ನಮ್ಮಲ್ಲಿರುವ ಸೀಮಿತ ವ್ಯವಸ್ಥೆಗಳಲ್ಲಿ ಇದು ಸಾಧ್ಯವೇ ಅಲ್ಲವೇ ಪ್ರಯತ್ನಿಸಿ ನೋಡಬೇಕು.

(ವಿಧಾನಪರಿಷತ್ತು ಕಲಾಪ : ಏಪ್ರಿಲ್ 3,1987)

## ಶಾಸಕರಿಗಾಗಿ ಸ್ಪಂದಿಸಿದ ಪಟೇಲ್

**ವಾಟಾಳ್ ನಾಗಾರಾಜ್:** ಶಾಸಕನ ಇಂದಿನ ಸ್ಥಿತಿ ತೀರಾ ಶೋಚನೀಯವಾಗಿದೆ ಅಧ್ಯಕ್ಷರೇ, ಶಾಸಕನಿಗೆ ಯಾವ ಅಧಿಕಾರ ಮತ್ತು ಸಹಾಯ - ಸವಲತ್ತು ಒದಗಿಸದೆ ರಸ್ತೆ, ಭಾವಿ, ಮನೆ, ಅಭಿವೃದ್ಧಿ ಕಾರ್ಯ ಆಗಬೇಕು ಎಂದು ನಿರೀಕ್ಷಿಸುವುದು ಸರಿಯೇ? ಇವುಗಳೆಲ್ಲಿದೆ? ಕ್ಷೇತ್ರದಲ್ಲಿ ಇವನ ಮಾತು ಯಾರು ಕೇಳ್ತಾರೆ ಸ್ವಾಮಿ.

ಶಾಸಕನೇನು ಪುರಂದರದಾಸ ಅನ್ಕೊಂಡೀದೀರಾ? ಸಿಪ್ಪೇದಾಳ-ತಂಬೂರಿ ಬಾರಿಸಿಕೊಂಡು, ತಮಟೆ ಹೊಡೆದುಕೊಂಡು ಹೋಗೋದಕ್ಕೆ ಅವನೇನು ಕನಕದಾಸನೇ? ಏನು ತಿಳ್ಕೊಂಡೀದೀರೀ ಶಾಸಕನನ್ನು ನೀವು? ನಿಮ್ಮ ಹಿಂದೆ 12 ಕಾರು, ನಿಮ್ಮ ಮಂತ್ರಿಗಳಿಗೆ, ಉಪಮಂತ್ರಿಗಳಿಗೆ..

ಅಧ್ಯಕ್ಷರು: ವಾಟಾಳ್‌ರವರೇ, ಶಾಸಕರು ಕನಕದಾಸರೂ ಅಲ್ಲ, ಕಾಳಿದಾಸರೂ ಅಲ್ಲ. ಈಗ ರಾಮದಾಸರು.

ಸಿದ್ಧರಾಮಯ್ಯ (ಉಪಮುಖ್ಯಮಂತ್ರಿ): ವಿಕೇಂದ್ರೀಕರಣದ ಬಗ್ಗೆ ನಂಬಿಕೆ ಇದೆಯೋ ಇಲ್ಲವೋ?

ವಾಟಾಳ್ ನಾಗರಾಜ್: ವಿಕೇಂದ್ರೀಕರಣ ಮಾಡುವುದಕ್ಕೆ ಹೋಗಿ ಶಾಸಕರ ಕತ್ತು ತೆಗೀತಿದೀರಿ ನೀವು. ನಿಮಗೇ ಇದರಲ್ಲಿ ನಂಬಿಕೆ ಇಲ್ಲ. ಮುಖ್ಯಮಂತ್ರಿಯವರು ಶಾಸಕರ ಕಷ್ಟವನ್ನು ಪ್ರಾಮಾಣಿಕವಾಗಿ ಅರ್ಥ ಮಾಡಿಕೊಳ್ಳಬೇಕು.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮೊದಲನೆಯದಾಗಿ ಎಂಎಲ್‌ಎಗಳಿಗೆ ಅವರ ಕ್ಷೇತ್ರದಲ್ಲಿ ಕೆಲಸ ಮಾಡುವುದಕ್ಕೆ ಸೆಕ್ರೆಟೇರಿಯಲ್ ಅಸಿಸ್ಟೆಂಟ್ ಅವಶ್ಯಕತೆ ಇದೆ. ಆತ ಟೈಪಿಸ್ಟ್, ಕ್ಲರ್ಕ್ ಯಾರೇ ಆಗಬಹುದು. ಇಂತಹವರ ಸೇವೆ ದೊರಕಿಸಿಕೊಡಲು ಸರ್ಕಾರದ ಆಜ್ಞೆಯನ್ನು ಕೂಡಲೇ ಹೊರಡಿಸುತ್ತೇನೆ. ಅದೇ ರೀತಿ ಎಂಎಲ್‌ಎಗೆ ಒಂದು ಕಛೇರಿಗೆ ಜಾಗ ಸಿಗಲೇಬೇಕು. ಇದಕ್ಕಾಗಿ ಸಹಿತ ಆಜ್ಞೆ ಹೊರಡಿಸಿದ್ದೇವೆ.

ನಾವು ಎಂಎಲ್‌ಎಗಳಾಗಿದ್ದಾಗ ಮನೆಯೂ ಇಲ್ಲ. ಗುಡಿಸಲೂ ಇಲ್ಲ. ನಮಗೆ ಸಂಬಳವೂ ಸಹಿತ ಕಡಿಮೆ ಇತ್ತು. ಇಂದು ಕಾಲ ಬದಲಾಗಿದೆ. ಶಾಸಕರ ಜವಾಬ್ದಾರಿ ನಿರ್ವಹಿಸಲು ಕೆಲವು ಸವಲತ್ತುಗಳು ಅತ್ಯಗತ್ಯ ಎಂಬುದು ನನಗೆ ಗೊತ್ತಿದೆ.

(ವಿಧಾನ ಸಭೆ ಕಲಾಪ, ಆಗಸ್ಟ್ 7, 1996)

## ಶಾಸಕರ ಅನುಕೂಲ-ಪಟೇಲ್ ಸ್ಪಷ್ಟನೆ

ವಿಷಯ: ವಿಧಾನಸಭಾ ಸದಸ್ಯರುಗಳಿಗೆ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಕೆಲಸ ಮಾಡಲು ಇರುವ ಅನುಕೂಲಗಳನ್ನು ವಿಧಾನಪರಿಷತ್ತಿನ ಸದಸ್ಯರಿಗೂ ವಿಸ್ತರಿಸುವುದು

ಡಾ: ಎಂ.ಆರ್. ತಂಗಾ: ಮಾನ್ಯ ಸಭಾಪತಿಗಳೇ, ವಿಧಾನ ಪರಿಷತ್ತಿನ ಎಲ್ಲಾ ಪಕ್ಷಗಳಿಗೆ ಸಂಬಂಧಪಟ್ಟಂತಹ ವಿಷಯ ಇದು. ಸನ್ಮಾನ್ಯ ಮುಖ್ಯಮಂತ್ರಿಗಳು ಹೋದ ತಿಂಗಳು ಒಂದು ಭರವಸೆಯನ್ನು ಕೊಟ್ಟಿದ್ದರು regarding Parity to be maintained between Assembly and Council. ತಾವು ಸಮಿತಿ ಮಾಡಿ ಏನು ನಿರ್ಣಯ ಮಾಡುತ್ತೀರಿ, ಅದನ್ನು ನಾನು ಒಪ್ಪುತ್ತೇನೆ ಎಂದು ಹೇಳಿದರು. ಇದುವರೆಗೆ ಅದರ ಬಗ್ಗೆ ಆರ್ಡರ್ ಬಂದಿಲ್ಲ. ಕಾರ್ಯದರ್ಶಿ ಬಗ್ಗೆ ಆರ್ಡರ್ ಆಗಿದೆ. ನಮ್ಮ ಕ್ಷೇತ್ರಕ್ಕೆ ಆಫೀಸ್ ಕೊಡಬೇಕು ಎನ್ನುವುದರ ಬಗ್ಗೆ ಆರ್ಡರ್ ಆಗಬೇಕು. ವಿಧಾನಸಭೆ ಸದಸ್ಯರು ಇಂತಿಷ್ಟು ಕೆಲಸ ಮಾಡಬೇಕು ಎಂದು ಏನು ಪ್ರಾವಿಜನ್ ಇದೆ, ಆ ಪ್ರಾವಿಜನ್‌ನನ್ನು ನಮ್ಮ ವಿಧಾನಪರಿಷತ್ತಿನ ಸದಸ್ಯರಿಗೂ ಕೊಡಬೇಕು ಎನ್ನುವುದರ ಬಗ್ಗೆ ಮುಖ್ಯಮಂತ್ರಿಗಳ ಕಛೇರಿಯಲ್ಲಿ ಮೀಟಿಂಗ್ ಆಗಿತ್ತು, ಅಧ್ಯಕ್ಷರು ತಾವು

ಮತ್ತು ನಾಣಯ್ಯನವರು ಕೂಡಿ ತೀರ್ಮಾನ ತೆಗೆದುಕೊಂಡು ಒಪ್ಪುತ್ತೇವೆ ಎಂದು ಹೇಳಿದ್ದರು. ಅದನ್ನು ಅಂಗೀಕೃತ ಮಾಡಬೇಕೆಂದು ತಮ್ಮಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಚೇರ್ಮನ್‌ರು ಹೇಳಿದ ಮೇಲೆ ನಾನು ಬೇರೆ ಹೇಳುತ್ತೇನಾ?

ಡಾ: ಎಂ.ಆರ್. ತಂಗಾ: ಚೇರ್ಮನ್‌ರು ತಮಗೆ ಲೆಟರ್ ಬರೆದಿದ್ದಾರೆ.

**Mr. Chairman:** However, they wanted to know from your mouth.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಸಭಾಪತಿಯವರೇ, It is not Parity. Parity is not a proper word. The facilities provided to Legislators ಅದರೊಳಗೆ ತಾರತಮ್ಯ ಎಂದೂ ಆಗಬಾರದು. ಎಂಎಲ್‌ಎ ಅವರ ವರ್ಕಿಂಗ್‌ಗೋಸ್ಕರ ಅವರ ಕಾನ್ಸಿಟಿಟ್ಯೂಯೆನ್ಸಿಯಲ್ಲಿ ಒಂದು ಪಿಎ ಮತ್ತು ಸ್ಥಳ ಹಾಗೆಯೇ ಎಂ.ಎಲ್.ಸಿ. ಅವರು ಎಲ್ಲಿ ಆಪರೇಟ್ ಮಾಡಬೇಕು ಎನ್ನುತ್ತಾರೋ ಅಲ್ಲಿ ಒಂದು ಪಿಎ ಹಾಗೂ ಆಫೀಸ್‌ಗೆ ಸ್ಥಳ ಒದಗಿಸಬೇಕೆಂಬುದನ್ನು ಒಪ್ಪಿಕೊಂಡಿದ್ದೇವೆ.

ಡಾ: ಎಂ.ಆರ್. ತಂಗಾ: ಅದರ ಜೊತೆಯಲ್ಲಿ ನಮ್ಮ ವಿವೇಚನೆಯಂತೆ ಕೆಲಸ ಮಾಡುವುದಕ್ಕೋಸ್ಕರ ಫಂಡ್ಸ್ ಕೊಡಬೇಕು ಎನ್ನುವ ಪ್ರಶ್ನೆ. ನಾವು ಕೂಡ ಒಂದು ಕಾನ್ಸಿಟಿಟ್ಯೂಯನ್ಸಿಯಲ್ಲಿ ಗೆದ್ದಿದ್ದೇವೆ. ಅವರಿಗೆ ಎಷ್ಟು ಕೊಡುತ್ತೀರಿ ಅಷ್ಟು ನಮಗೂ ಕೊಟ್ಟರೆ ನಾವು ಕೂಡ ಅದೇ ಕಾನ್ಸಿಟಿಟ್ಯೂಯನ್ಸಿಯಲ್ಲಿ ಖರ್ಚು ಮಾಡುತ್ತೇವೆ. ಕಾನ್ಸಿಟಿಟ್ಯೂಯನ್ಸಿ ಬಿಟ್ಟು ಹೊರಗಡೆ ಖರ್ಚು ಮಾಡುವುದಿಲ್ಲ. ಈ ಸೌಕರ್ಯ ರಾಜ್ಯಸಭೆಯಲ್ಲಿದೆ.

ಜೆ.ಹೆಚ್. ಪಟೇಲ್: ಅದು ಕಷ್ಟ ಆಗುತ್ತದೆ. ಅದರ ಬಗ್ಗೆ ನಾನು ತಮ್ಮೊಡನೆ ಚರ್ಚೆ ಮಾಡುತ್ತೇನೆ.

**Mr. Chairman:** Both of us will discuss and then take a decision. As far as room and other things are concerned, I think, there is no problem. It will be decided immediately.

(ವಿಧಾನ ಪರಿಷತ್ ಕಲಾಪ ಮೇ 16, 1998)

## ಸಾಲ ಕೊಡಿಸಿ ಕರ್ಮ ಉಂಡವರು

ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ): ನಮ್ಮ ಹಳ್ಳಿಗಳ ಕಡೆ ಎಷ್ಟೋ ಸಂದರ್ಭಗಳಲ್ಲಿ ಕಷ್ಟಪಟ್ಟು ದುಡಿಯಬೇಕು; ಉದ್ದಿಮೆ ನಡೆಸಿ ಲಾಭ ಸಂಪಾದಿಸಿಕೊಳ್ಳಬೇಕು ಎಂಬ ಉತ್ಸಾಹ - ಆಸಕ್ತಿ ಇಲ್ಲದಿರುವುದನ್ನು ಕಂಡು ನನಗೆ ನೋವಾಗಿದೆ.

ಹೋದ ಸಲ ಚುನಾವಣೆಯಲ್ಲಿ ನಾನು ಒಂದು ಲಂಬಾಣಿ ತಾಂಡಾಗೆ ಹೋಗಿದ್ದೆ. ವಯಸ್ಸಾದ ತಾಯಿಯೊಬ್ಬಳು ತನ್ನ ಮಗನಿಗೆ ಏನಾದರೊಂದು ಕೆಲಸ ಕೊಡಿಸಿ ಎಂದು ಅಂಗಲಾಚಿದಳು. ಸ್ವಂತ ಉದ್ದಿಮೆ ಮಾಡಲಿ ಎಂದು ಆತನಿಗೆ ಸೆಲ್ಫ್ ಎಂಪ್ಲಾಯ್‌ಮೆಂಟ್ ಸ್ಕೀಮಿನಲ್ಲಿ 20 ಸಾವಿರ ರೂಪಾಯಿ ಸಾಲ ಕೊಡಿಸಿದೆ.

**ಹೆಚ್.ಕೆ. ಪಾಟೀಲ್ (ಪ್ರತಿಪಕ್ಷದ ನಾಯಕರು):** ಬಹುಷಃ ಅವನ ಮನೆ, ಹೊಲ ಬರೆಸಿ ಸಾಲ ಕೊಟ್ಟಿರಬೇಕು.

**ಜೆ.ಹೆಚ್. ಪಟೇಲ್:** ಅಲ್ಲೇ ನಾವು ತಪ್ಪಿದ್ದು. ಸೆಲ್ಫ್ ಎಂಪ್ಲಾಯ್‌ಮೆಂಟ್ ಸ್ಕೀಮಿನಲ್ಲಿ ಇದಾವುದೂ ಇಲ್ಲದೆ ಸಾಲ ಸಿಗುತ್ತದೆ. ಆಮೇಲೆ ಆರೇಳು ತಿಂಗಳು ಬಿಟ್ಟು ಆ ಹಳ್ಳಿಗೆ ಮತ್ತೊಮ್ಮೆ ಹೋಗಬೇಕಾಗಿ ಬಂತು. ಪುನಃ ಲಂಬಾಣಿ ತಾಯಿ ನನ್ನ ಬಳಿ ಬಂದಳು. ಈ ಬಾರಿ ನನ್ನ ಹುಡುಗನ್ನ ಹುಡ್ಕೊಡ್ರೀ ಎಂದು ಗೋಳಾಡಿದಳು. ನೀವು 20 ಸಾವಿರ ಸಾಲ ಕೊಡ್ಸೀದ್ರಲ್ಲಾ ಅದನ್ನು ತಗೊಂಡು ಮಗ ದೇಶಾಂತರ ಹೋಗಿಬಿಟ್ಟಿದ್ದಾನೆ ಎಂದು ಅತ್ತಳು.

ಇದು ನಮ್ಮ ದೇಶದ ಸ್ಥಿತಿ. ಇವರಿಗೆ ಸಾಲ ಕೊಡಿಸುವುದಲ್ಲದೆ, ಸಾಲ ತಿಂದು ಓಡಿದವರನ್ನು ಹಿಡಿದು ಸಹಿತ ಕೊಡಬೇಕು. ಯಾವ ಕರ್ಮ ಇದು.

(ವಿಧಾನ ಪರಿಷತ್ ಕಲಾಪ ಏಪ್ರಿಲ್ 3, 1987)

## ಜಾತಿಯೇ ಪ್ರಧಾನವಾದರೆ, ಉಳಿದವರ ಸ್ಥಿತಿ?

**ಡಾ: ಎಂ.ಆರ್. ತಂಗಾ:** ಸನ್ಮಾನ್ಯ ಸಭಾಪತಿಗಳೇ, ಮಾನ್ಯ ಮುಖ್ಯಮಂತ್ರಿ ಜೆ.ಹೆಚ್. ಪಟೇಲರು ಅನುಭವಿಗಳು. ಹಲವು ದಶಕಗಳ ಸಂಸದೀಯ ಪರಿಶ್ರಮ ಅವರಿಗಿದೆ. ಪ್ರತಿಪಕ್ಷ ಮತ್ತು ಆಡಳಿತಪಕ್ಷ ಎರಡರಲ್ಲೂ ಪಳಗಿದವರು. ಇಷ್ಟೆಲ್ಲ ಇದ್ದರೂ ಆಡಳಿತ ವ್ಯವಸ್ಥೆಯಲ್ಲಿ ಪ್ರಮಾದವಾಗುವುದನ್ನು ಹೇಗೆ ತಪ್ಪಿಸಲು ಅಶಕ್ತರಾದರು ಎಂಬುದು ನನ್ನ ಚಿಂತೆ.

ಆಡಳಿತ ವ್ಯವಸ್ಥೆ ಮತ್ತು ರಾಜಕೀಯ ಇಚ್ಛಾಶಕ್ತಿ ಕುರಿತಂತೆ ಅವರು ಇವತ್ತು ಚೆನ್ನಾಗಿರುವ ಮಾತೊಂದನ್ನು ಹೇಳಿದರು.

ಇಂದಿನ ವ್ಯವಸ್ಥೆಯ ಅಧೋಗತಿಗೆ ರಾಜಕೀಯ ವ್ಯಕ್ತಿಗಳು ಮತ್ತು ಸರ್ಕಾರಿ ಅಧಿಕಾರಿಗಳು ಇಬ್ಬರೂ ಕಾರಣೀಭೂತರು ಎಂದು ಹೇಳಿದ್ದಾರೆ.

ಇವರದೆ ಆಡಳಿತದ ಒಂದು ಉದಾಹರಣೆ ಹೇಳ್ತೀನಿ: ಇದು ಕೇವಲ ಒಂದು ಕಡೆಗೆ ಮಾತ್ರ ಮೀಸಲು ಎನ್ನುವಂತಿಲ್ಲ. ಆದ ಕಾರಣ ಈ ತಾಲ್ಲೂಕಿನ ಹೆಸರು ಹೇಳುವುದಲ್ಲ. ಸಚಿವ ರೋಷನ್‌ಬೇಗ್‌ರವರಿಗೆ ಇಂದು ಬೆಳಿಗ್ಗೆ ಇದನ್ನು ತಿಳಿಸಿದೆ.

ಒಂದು ಕಡೆ ನಮ್ಮ ಜಿಲ್ಲೆಯಲ್ಲಿ ಸಬ್ ಇನ್ಸ್‌ಪೆಕ್ಟರ್, ಸರ್ಕಲ್ ಇನ್ಸ್‌ಪೆಕ್ಟರ್, ಡಿವೈಎಸ್‌ಪಿ, ತಹಶೀಲ್ದಾರ್ ಮತ್ತು ಶಾಸಕರು ಎಲ್ಲರೂ ಒಂದೇ ಸಮಾಜದವರು. ಆ ಕ್ಷೇತ್ರದಲ್ಲಿ ಬೇರೆ

ಸಮಾಜದವರಿಗೆ ಬದುಕಲು ಅವಕಾಶವಿಲ್ಲ. ರೆವಿನ್ಯೂ ಎಂದರೆ ತಹಶಿಲ್ದಾರ್ ತೊಂದರೆ ಮಾಡುತ್ತಾನೆ, ಕ್ರಿಮಿನಲ್ ಎಂದರೆ ಪೊಲೀಸಿನವರು ತೊಂದರೆ ಮಾಡುತ್ತಾರೆ. ಅವರ ಸಮಾಜದವರು ಏನು ಹೇಳುತ್ತಾರೆ ಅದನ್ನು ಕೇಳಬೇಕು ಅಥವಾ ಆ ಸಮಾಜದ ಶಾಸಕರು ಹೇಳಿದ ಹಾಗೇ ಪಡೆದುಕೊಳ್ಳಬೇಕು.

ಇದನ್ನು ನಾನು ಏಕೆ ಹೇಳುತ್ತಿದ್ದೇನೆ ಎಂದರೆ, ಇದು ಎಲ್ಲರಿಂದಲೂ ಪ್ರಾರಂಭವಾಗಿದೆ. ನಾವೆಲ್ಲರೂ ಇದಕ್ಕೆ ಕಾರಣರು. ಇದು ತಮ್ಮ ಸರ್ಕಾರದ ನೀತಿಯೋ ಅಥವಾ ಹಿಂದಿನ ಸರ್ಕಾರದ ನೀತಿಯೋ ಗೊತ್ತಿಲ್ಲ. ಸ್ಥಳೀಯ ಅಧಿಕಾರಿಗಳನ್ನು ಹಾಕುವಾಗ ಅಲ್ಲಿಯ ಶಾಸಕರುಗಳನ್ನು ಕೇಳಿ ಹಾಕಬೇಕು ಎಂದು ಒಂದು ಪದ್ಧತಿ ಇತ್ತು. ಅದನ್ನು ತೆಗೆದುಹಾಕಿಬಿಡಿ. ಅದು ಹಿಂದೆ ಸರಿಯಾಗುತ್ತಿತ್ತು. ಈಗ ಅಷ್ಟಾಗಿ ಸರಿಯಾಗುವುದಿಲ್ಲ.

ಎಲ್ಲಾ ಸಂಬಂಧಪಟ್ಟ ಅಧಿಕಾರಿಗಳು ಒಂದೇ ಸಮಾಜದವರು ಬಂದರೆ, ಆ ಕ್ಷೇತ್ರದಲ್ಲಿ ಬೇರೆ ಸಮಾಜದವರು ಬದುಕಬೇಕೇ, ಬದುಕಬಾರದೇ ಎಂದು ನಿರ್ಣಯ ಮಾಡಬೇಕಾಗುತ್ತದೆ.

(ವಿಧಾನ ಪರಿಷತ್ತಿನ ಕಲಾಪ ಆಗಸ್ಟ್ 8, 1996)

## ಚನ್ನಗಿರಿಗಿಂತ ಸಕಲೇಶಪುರ ವಾಸಿ

**ಸಿದ್ಧರಾಮಯ್ಯ:** ಮಾನ್ಯ ಕಾಗೋಡು ತಿಮ್ಮಪ್ಪನವರೇ, ನಬಾರ್ಡ್ ನೆರವಿನಿಂದ ನಿಮ್ಮಲ್ಲಿ ಎಷ್ಟು ಕೆಲಸವಾಗಿದೆ ಎಂಬುದನ್ನು ಹೇಳಿ ನೋಡೋಣ? ಏನೂ ಕೆಲಸವೇ ಆಗಿಲ್ಲವೇ?

**ಕಾಗೋಡು ತಿಮ್ಮಪ್ಪ:** ನಬಾರ್ಡ್ ನೆರವಿನಿಂದಾದ ಕೆಲಸವನ್ನು ಹೊರತುಪಡಿಸಿ ಉಳಿದವನ್ನು ಹೇಳಿ.

**ಸಿದ್ಧರಾಮಯ್ಯ:** ನಬಾರ್ಡ್ ನೆರವಿನಿಂದಾಗಿ ಕೆಲಸಗಳನ್ನು ಏಕೆ ಬಿಟ್ಟು ಹೇಳಬೇಕು? ನಬಾರ್ಡ್ ನೆರವಿನಿಂದ ಅಭಿವೃದ್ಧಿಗೊಂಡವು ಲೋಕೋಪಯೋಗಿ ಇಲಾಖೆಯ ರಸ್ತೆಗಳೇ ಅಲ್ಲವೇ?

**ಬಿ.ಬಿ. ಶಿವಪ್ಪ:** ನಬಾರ್ಡ್‌ನಿಂದ ಆದ ಕೆಲಸದ ಬಗ್ಗೆ ನಾನು ನಿಮಗೊಂದು ಉದಾಹರಣೆಯನ್ನು ಕೊಡಬಯಸುತ್ತೇನೆ. ನನ್ನ ಕ್ಷೇತ್ರದ ರಸ್ತೆಯ ಅಭಿವೃದ್ಧಿಗೆಂದು ಮಲೆನಾಡು ಅಭಿವೃದ್ಧಿ ಮಂಡಳಿಯ ಮೂಲಕ 40 ಲಕ್ಷ ರೂಪಾಯಿಗಳಿಗೆ ಒಂದು ಅಂದಾಜು ಪಟ್ಟಿ ತಯಾರಾಯಿತು. 10 ಕಿ.ಮೀ. ಉದ್ದದ ಈ ರಸ್ತೆ ಕೆಲಸವನ್ನು ನಬಾರ್ಡ್‌ನಿಂದ ನೆರವಿನಿಂದ ಮಾಡಲು ಯೋಜನೆ ಮಾಡಲಾಗಿತ್ತು. ಆದರೆ ಅಲ್ಲಿ ಕೇವಲ 18 ಲಕ್ಷ ರೂಪಾಯಿಗಳ ಕೆಲಸ ಮಾತ್ರ ಆಗಿದೆ. ಬೇರೆ ವಿಧದಲ್ಲಿ ಉಳಿದ ದುಡ್ಡು ಆದರೂ ನನ್ನ ಕ್ಷೇತ್ರದ ಇತರೆ ಕಾರ್ಯಗಳಿಗೆ ವಿನಿಯೋಗವಾಗಬೇಕಾಗಿತ್ತು. ಅಲ್ಲಿ ಕೇವಲ 18 ಲಕ್ಷ ರೂಪಾಯಿಗಳು ಮಾತ್ರ ಖರ್ಚಾಗಲು ಕಾರಣವೇನೆಂದರೆ ಅವರು ಒಂದು ರೀತಿ-ನೀತಿ ಇಟ್ಟುಕೊಂಡಿರುತ್ತಾರೆ. ಅಲ್ಲಿ ಹಿಂದೆ

ಯಾವುದಾದರೂ ಸಂದರ್ಭದಲ್ಲಿ, ಯಾವುದೇ ವರ್ಷ ಅಂದರೆ 10-20 ವರ್ಷದ ಹಿಂದೆಯಾಗಲೀ, ಅಲ್ಲಿ ಟಾರ್ ರಸ್ತೆ ಮಾಡಿದ್ದರೆ, ಮತ್ತೆ ಅಲ್ಲಿ ರಸ್ತೆ ಮಾಡುವುದಿಲ್ಲ ಎಂಬ ಕಾರಣ ನೀಡಿ ಎಲ್ಲಿಂದ ಟಾರ್ ರಸ್ತೆ ಮಾಡಿದ್ದರೋ ಅಲ್ಲಿಯವರೆಗೆ ಕೆಲಸವನ್ನು ನಿಲ್ಲಿಸಿ ಬಿಟ್ಟಿದ್ದಾರೆ. ರಸ್ತೆಯ ಉಳಿದ ಭಾಗ ಏನಿದೆ ಅದು ಬಹಳ ಹಾಳಾಗಿ ಹೋಗಿದೆ. ಹಿಂದೆ ಅಲ್ಲಿ ಟಾರ್ ರೋಡ್ ಮಾಡಿದ ಮೇಲೆ ಯಾರೂ ಅದನ್ನು ಮೆಂಟೇನ್ ಮಾಡಲಿಕ್ಕೆ ಹೋಗಲಿಲ್ಲ. ರಸ್ತೆ ಅಲ್ಲಿ ವಿಪರೀತವಾಗಿ ಹಾಳಾಗಿ ಹೋಗಿದ್ದು, ಅಲ್ಲಿ ತಿರುಗಾಡಲು ಆಗುವುದಿಲ್ಲ. ಅರ್ಧ ಭಾಗ ರಸ್ತೆ ಮಾಡಿ, ಇನ್ನರ್ಧ ಭಾಗವನ್ನು ಹಾಗೆಯೇ ಬಿಡಲಾಗಿದೆ. ಈ ರಸ್ತೆ ಉಪಯೋಗ ಆಗಬೇಕಾದರೆ ಪೂರ್ತಿ 10 ಕಿಲೋಮೀಟರ್ ರಸ್ತೆಯೂ ಆಗಬೇಕಲ್ಲವೇ?

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ನೀವೆ ವಾಸಿ. ನಿಮ್ಮ ಕ್ಷೇತ್ರದಲ್ಲಿ 18 ಲಕ್ಷ ರೂಪಾಯಿಗಳ ಕೆಲಸವಾಗಿದೆ ಎಂದು ಹೇಳುತ್ತಿದ್ದೀರಿ. ಆದರೆ ನನ್ನ ಕ್ಷೇತ್ರದಲ್ಲಿ ಆ ಕೆಲಸವೂ ಕೂಡ ಆಗಿಲ್ಲವಲ್ಲಾ?

(ವಿಧಾನಸಭೆ ಕಲಾಪ, ಮಾರ್ಚ 30, 1999)

## ದಿಲ್ಲಿ ಕರ್ನಾಟಕ ಭವನ : ಕನ್ನಡ ಬಾರದವರ ಪುನರ್ವಸತಿ ಶಿಬಿರ

ಶಶಿಲ್ ಜಿ. ನಮೋಶಿ: ಮಾನ್ಯ ಸಭಾಪತಿಯವರೇ, ದೆಹಲಿಯಲ್ಲಿರುವ ನಮ್ಮ ಸರ್ಕಾರದ ಕರ್ನಾಟಕದ ಭವನದಲ್ಲಿ ಕೆಲಸ ಮಾಡುತ್ತಿರುವ ಒಟ್ಟು 139 ಜನ ನೌಕರರಲ್ಲಿ 75 ಜನರು ಕನ್ನಡೇತರರಾಗಿದ್ದಾರೆ. ಅಲ್ಲಿ ಕೆಲಸ ಮಾಡುತ್ತಿರುವ ಮ್ಯಾನೇಜರುಗಳು, ಸ್ಟೋರ್ ಕೀಪರ್‌ಗಳು, ಟ್ರಾನ್ಸ್‌ಪೋರ್ಟ್ ಮ್ಯಾನೇಜರ್ ಇವರೆಲ್ಲರೂ ಕನ್ನಡೇತರರೇ ಆಗಿದ್ದಾರೆ. ನಾವು ಅಲ್ಲಿಗೆ ಹೋಗಿದ್ದಾಗ, ನಾವೇನು ಕರ್ನಾಟಕ ಭವನದಲ್ಲಿ ಇದ್ದೇವೆಯೋ ಅಥವಾ ಉತ್ತರ ಪ್ರದೇಶದ ಭವನದಲ್ಲಿ ಇದ್ದೇವೆಯೋ ಎನ್ನುವ ಭಾವನೆ ಬರುತ್ತದೆ. The IAS officers come from different States. But, that is a different matter. ಆಮೇಲೆ ಕೇಟರಿಂಗ್ ಸರ್ವೀಸಸ್ ಬಗ್ಗೆಯೇ ಹೇಳಬೇಕೆಂದರೆ, ಏನಪ್ಪಾ ನಮ್ಮಲ್ಲಿ ಊಟದ ವ್ಯವಸ್ಥೆ ಸರಿಯಾಗಿಲ್ಲವೆಂದು ಅಲ್ಲಿರುವಂಥ ಪಾರ್ಲಿಮೆಂಟ್ ಸದಸ್ಯರುಗಳೇ ಅನೇಕ ಸಂದರ್ಭಗಳಲ್ಲಿ ಹೇಳುತ್ತಿದ್ದರು. ಹೊಸದಾಗಿ ಕಟ್ಟಲಾಗಿರುವ 'ಭೀಮಾ ಭವನ' ದಲ್ಲಿ ನಮ್ಮ ಕನ್ನಡಿಗರಿಗೆ ಕೇಟರಿಂಗ್ ಸರ್ವೀಸ್ ಕೊಡುವ ಬದಲು ನಾರ್ಥ್ ಇಂಡಿಯನ್ ಕಡೆಯ 'ರೈಟ್ ಟೈಮ್' ಎನ್ನುವ ಹೋಟೆಲ್‌ನವರಿಗೆ ಕೇಟರಿಂಗ್ ಸರ್ವೀಸ್ ಕಾಂಟ್ರಾಕ್ಟ್ ಕೊಟ್ಟಿದ್ದಾರೆ. ಅಲ್ಲಿರುವಂಥ ಎರಡು ಎಸ್‌ಟಿಡಿ ಬೂತುಗಳನ್ನು ಕನ್ನಡೇತರರಿಗೆ ವಹಿಸಿಕೊಡಲಾಗಿದೆ. ಇರುವ ಒಟ್ಟು 16 ಡ್ರೈವರುಗಳಲ್ಲಿ 12 ಜನರು ಕನ್ನಡೇತರರಿದ್ದಾರೆ. ಆಮೇಲೆ, ನಮ್ಮ ಸಮಿತಿಯು ದೆಹಲಿಗೆ ತಲುಪಿದಂಥ ಸಂದರ್ಭದಲ್ಲಿ ನಮ್ಮನ್ನು ಕರೆದುಕೊಂಡು ಹೋಗಲು ಅಫಿಷಿಯಲ್ ಕಾರು ಬರದೆ ಯಾವುದೋ ರೆಂಟೆಡ್ ಕಾರುಗಳನ್ನು ತೆಗೆದುಕೊಂಡು ಬಂದಿದ್ದರು. ಇದರ ಬಗ್ಗೆ ಪಬ್ಲಿಕ್ ಅಕೌಂಟ್ಸ್ ಕಮಿಟಿಯ ವರದಿ ಕೊಟ್ಟಿದೆ. But, till now, the recommendation of PAC has not been

implemented ಎಂದು ಹೇಳಲಿಕ್ಕೆ ಬಹಳ ದುಃಖವಾಗುತ್ತದೆ. ಆಮೇಲೆ ಇನ್ನೊಂದು ಕೊನೆಯ ವಿಷಯವೆಂದರೆ, the IAS Officer who was there was of the rank of the Principal Secretary and he is there at Delhi working as a liason officer to look after the problems of our State. ಆದರೆ ಆ ರೀತಿಯ ಯಾವ ಕೆಲಸವನ್ನೂ ಅವರು ಮಾಡುತ್ತಿಲ್ಲವೆಂದು ನಮಗೆ ಕಂಡು ಬಂದಿದೆ. ನಮ್ಮ ಮಾನ್ಯ ಮುಖ್ಯ ಮಂತ್ರಿಗಳು ಪಾರ್ಲಿಮೆಂಟ್ ಸದಸ್ಯರಾಗಿ ಹೋಗಿದ್ದಂಥ ಕಾಲದಲ್ಲಿ ಮೊಟ್ಟ ಮೊದಲ ಬಾರಿಗೆ ಕನ್ನಡದಲ್ಲಿ ಪಾರ್ಲಿಮೆಂಟ್ ಅಧಿವೇಶನದಲ್ಲಿ ಮಾತನಾಡಿದರೆಂಬ ವಿಷಯ ಎಲ್ಲರಿಗೂ ಗೊತ್ತಿದೆ. ಅಂಥವರೇ ಇವತ್ತು ನಮ್ಮ ರಾಜ್ಯಕ್ಕೆ ಮುಖ್ಯ ಮಂತ್ರಿಗಳಾಗಿರತಕ್ಕಂಥ ಸಂದರ್ಭದಲ್ಲಿ, ನಾವುಗಳು ದೆಹಲಿಯಲ್ಲಿರುವ ಕರ್ನಾಟಕ ಭವನಕ್ಕೆ ಹೋದರೆ, ನಾವು ಎಲ್ಲೋ ಬೇರೆ ರಾಜ್ಯದ ಭವನದಲ್ಲಿ ಇದ್ದೇವೇನೋ ಎನ್ನುವ ವ್ಯವಸ್ಥೆ ಕಂಡು ಬರುತ್ತಿದೆ. ಇದರ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳು ಗಮನಹರಿಸಿ ಅದನ್ನು ಸರಿಪಡಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಜೆ.ಹೆಚ್. ಪಟೇಲ್: ಮಾನ್ಯ ಸಭಾಪತಿಯವರೇ, ದೆಹಲಿಯಲ್ಲಿ ಮೂರು ಕರ್ನಾಟಕ ಭವನಗಳಿವೆ. ಕೇಂದ್ರ ಮಟ್ಟದಲ್ಲಿ ಕೆಲಸ ಇರತಕ್ಕಂಥ ಶಾಸಕರುಗಳು ಹಾಗೂ ಅಲ್ಲಿಗೆ ಹೋಗತಕ್ಕಂಥ ಸಮಿತಿಯ ಸದಸ್ಯರುಗಳು ಈ ಭವನಗಳಲ್ಲಿ ಉಳಿದುಕೊಳ್ಳುವುದಕ್ಕೆ ವ್ಯವಸ್ಥೆ ಮಾಡಲಾಗುತ್ತದೆ. ಇನ್ನು ಮುಂದಕ್ಕೆ, ಕರ್ನಾಟಕ ಭವನದಲ್ಲಿ ಅಪಾಯಿಂಟ್ ಮಾಡಿಕೊಳ್ಳಬೇಕಾದರೆ ಕನ್ನಡದವರಿಗೆ ಹಾಗೂ ಕನ್ನಡ ಬಲ್ಲವರಿಗೆ ಮಾತ್ರ ಮಾಡಿಕೊಳ್ಳಬೇಕೆಂದು 3 ತಿಂಗಳ ಹಿಂದೆ ಸ್ಟ್ರಿಕ್ಟ್ ಆಗಿ ಆದೇಶವನ್ನು ನಾವು ಕೊಟ್ಟಿದ್ದೇವೆ. ಮೊದಲಿನಿಂದ ಅಡಿಗೆ ಮಾಡಿಕೊಂಡಿದ್ದ ಒಬ್ಬ ಕನ್ನಡಿಗನೂ ಕೆಲವು ದಿವಸಗಳ ಹಿಂದೆ ಬಿಟ್ಟು ಹೋಗಿಬಿಟ್ಟಿದ್ದಾನೆ. ಕರ್ನಾಟಕ ಭವನದ ಅಕಾಮಡೇಷನ್ ಬಗ್ಗೆ, ಆಹಾರದ ಬಗ್ಗೆ, ಮ್ಯಾನೇಜ್‌ಮೆಂಟ್ ಬಗ್ಗೆ, ಕಾರ್ ಡ್ರೈವರ್‌ಗಳ ಬಿಹೇವಿಯರ್ಸ್ ಬಗ್ಗೆ ನನಗೆ ಸಾಕಷ್ಟು ಮಾಹಿತಿ ಇದೆ. ಇದನ್ನು ಕ್ರಮೇಣವಾಗಿ ಸರಿಮಾಡಬೇಕಾಗುತ್ತದೆ. ಕನ್ನಡಿಗರಿಗೆ ಪ್ರಾಧಾನ್ಯತೆ ಕೊಡುವುದು ಸರ್ಕಾರದ ಉದ್ದೇಶ, ಆ ಉದ್ದೇಶದಂತೆ ಸರ್ಕಾರ ಕೆಲಸ ಮಾಡುತ್ತದೆ. ಆದರೆ, ದೆಹಲಿಯಲ್ಲಿರುವ ಕರ್ನಾಟಕ ಭವನದಲ್ಲಿ ಕೆಲಸ ಮಾಡಲು ಇಲ್ಲಿಂದ ಯಾರೂ ಹೋಗುವುದಿಲ್ಲ. ಇಲ್ಲಿಂದ ದೆಹಲಿಗೆ ಹೋಗಿ ಸೆಟಲ್ ಆಗಿರುವ ಕನ್ನಡದವರು ಕೆಲಸ ಮಾಡಲು ತಯಾರಿದ್ದರೆ ಅವರನ್ನಾದರೂ ನೇಮಕ ಮಾಡಿಕೊಳ್ಳಬೇಕೆಂದು ತಿಳಿಸಲಾಗಿದೆ.

ಹೆಚ್.ಕೆ. ಪಾಟೀಲ್: ಇಲ್ಲಿರತಕ್ಕಂಥ ಕನ್ನಡಿಗರು ದೆಹಲಿಯಲ್ಲಿ ಕೆಲಸ ಮಾಡಹೋಗುವುದಿಲ್ಲ ಎನ್ನುವ ಪರಿಸ್ಥಿತಿ 10 ವರ್ಷಗಳ ಹಿಂದೆ ಇತ್ತು ಆದರೆ, ಈಗ ಬಹಳಷ್ಟು ಜನ ಕನ್ನಡ ಬಲ್ಲ ನಿರುದ್ಯೋಗಿಗಳು ಇರುವುದರಿಂದ ದೆಹಲಿಯಲ್ಲಿ ಕೆಲಸ ಮಾಡಲು ಅವರು ತಯಾರಿದ್ದಾರೆ. ದುರ್ದೈವದ ಸಂಗತಿ ಎಂದರೆ, ಕಳೆದ ಎರಡು ಮೂರು ವರ್ಷಗಳಲ್ಲಿ ಹಾಗೂ ಹೋದ ವರ್ಷದಲ್ಲಿ ದೆಹಲಿ ಕರ್ನಾಟಕ ಭವನದಲ್ಲಿ ಕೆಲಸ ಮಾಡಲು ನೇಮಕ ಮಾಡಿಕೊಂಡಂಥ ಸಂದರ್ಭದಲ್ಲಿ ಕನ್ನಡಿಗರನ್ನು ತಿರಸ್ಕರಿಸಿ ಬೇರೆ ರಾಜ್ಯದವರನ್ನು ನೇಮಕ ಮಾಡಿಕೊಳ್ಳಲಾಗಿದೆ.

ಆಮೇಲೆ, ಕರ್ನಾಟಕ ಭವನದಲ್ಲಿ ಮಾನ್ಯ ಮುಖ್ಯ ಮಂತ್ರಿಯವರಿಗೆ ಈ ಹಿಂದೆ ಏನು ಅನುಭವ ಆಗಿತ್ತೋ ಅದೇ ಅನುಭವ ನಮಗೂ ಆಗುತ್ತಿದೆ. ಇನ್ನೊಂದು ವಿಷಯವೆಂದರೆ, ದೆಹಲಿಯಲ್ಲಿರುವ ಕರ್ನಾಟಕ ಭವನಗಳ ವ್ಯವಸ್ಥೆಯನ್ನು ನೋಡಿಕೊಳ್ಳುವುದಕ್ಕಾಗಿ ಕಮಿಷನ್‌ರವರನ್ನು ನೇಮಿಸುವ ಬದಲಾಗಿ, ಆ ಐ.ಎ.ಎಸ್. ಅಧಿಕಾರಿಯವರು ದೆಹಲಿಯಲ್ಲಿ ಇರುವುದಕ್ಕಾಗಿಯೇ ನೇಮಿಸಲಾಗುತ್ತಿದೆಯೇನೋ ಎನಿಸುತ್ತದೆ. ಎರಡು ತಿಂಗಳಿಗೆ, 4 ತಿಂಗಳಿಗೆ ಒಬ್ಬೊಬ್ಬರನ್ನು ಅಲ್ಲಿಗೆ ನೇಮಿಸಲಾಗುತ್ತಿದೆ. ಅವರುಗಳನ್ನು ದೆಹಲಿಯಲ್ಲಿ ಪೋಸ್ಟಿಂಗ್ಸ್ ಕೊಡುವುದಕ್ಕಾಗಿಯೇ ಕಮಿಷನರ್‌ಗಳೆಂದು ಏಕೆ ನೇಮಕ ಮಾಡಲಾಗುತ್ತದೆ? ಬೇಕಾದರೆ ಇನ್ನೊಂದು ಯಾವುದಾದರು ಪೋಸ್ಟಿಂಗ್ ಕೊಟ್ಟು ಖಾಲಿ ಕೂರಿಸಿ. ಆದರೆ, ಅಲ್ಲಿ ಕಮಿಷನರ್ ಎಂದು ನೇಮಕ ಮಾಡುವವರನ್ನು ಸೂಪರ್ ಸ್ಕೇಲ್ ಹಿರಿಯ ಅಧಿಕಾರಿಗಳನ್ನು ನೇಮಕ ಮಾಡುವ ಬದಲಿಗೆ ಕೆ.ಎ.ಎಸ್. ಅಧಿಕಾರಿಗಳನ್ನು ನೇಮಕ ಮಾಡಿದರೆ, ಯಾವ ದೂರುಗಳೂ ಮುಖ್ಯ ಮಂತ್ರಿಗಳವರೆಗೆ ಬರುವುದಕ್ಕೆ ಸಾಧ್ಯವಿಲ್ಲದಂತಾಗುತ್ತದೆ.

ಶ್ರೀಮತಿ ರಾಣಿ ಸತೀಶ್: ದೆಹಲಿ ಕರ್ನಾಟಕ ಭವನಗಳನ್ನು ನೋಡಿಕೊಳ್ಳುವುದಕ್ಕಾಗಿ ನೇಮಿಸಲಾಗಿರುವ ರೆಸಿಡೆಂಟ್ ಕಮಿಷನರ್‌ರವರಿಗೇ ಕನ್ನಡ ಬರುವುದಿಲ್ಲ. ಕರ್ನಾಟಕ ಭವನದಲ್ಲಿ ಕನ್ನಡ ರಾಜ್ಯೋತ್ಸವ ನಡೆದ ಸಂದರ್ಭದಲ್ಲಿ ಅವರಿಗೆ ನಾಲ್ಕು ಕನ್ನಡ ಮಾತುಗಳನ್ನು ಆಡಲು ಬರುವುದಿಲ್ಲ. ಇದನ್ನು ತಾವು ಗಮನಿಸಬೇಕು.

ಶ್ರೀಮತಿ ನಫೀಸಾ ಫಸಲ್: ಮಾನ್ಯ ಸಭಾಪತಿಯವರೇ, ಕರ್ನಾಟಕ ರಾಜ್ಯದಿಂದ ಬಹಳಷ್ಟು ಜನ ಸಾರ್ವಜನಿಕರು ದೆಹಲಿಗೆ ಹೋಗುತ್ತಿರುತ್ತಾರೆ. ಅಲ್ಲಿಗೆ ಹೋಗತಕ್ಕಂಥ ನಮ್ಮ ಸಾರ್ವಜನಿಕರಿಗೆ ಇಂಗ್ಲೀಷ್ ಚೆನ್ನಾಗಿ ಗೊತ್ತಿರುವುದಿಲ್ಲ. ಆದಕ್ಕಾಗಿ, ಅವರುಗಳು ಕರ್ನಾಟಕ ಭವನದಲ್ಲಿ ಉಳಿದುಕೊಂಡಾಗ ಭಾಷೆ ವಿಷಯದಲ್ಲಿ ನೆರವಾಗಲು ವ್ಯವಸ್ಥೆ ಮಾಡಿಕೊಡಬೇಕೆಂದು ನಾನು ಮಾನ್ಯ ಮುಖ್ಯ ಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಜೆ.ಹೆಚ್. ಪಟೇಲ್: ಸನ್ಮಾನ್ಯ ಸಭಾಪತಿಯವರೇ, ದೆಹಲಿಯಲ್ಲಿ ಸಾರ್ವಜನಿಕರಿಗೆ ಸ್ಥಳಾವಕಾಶ ಮಾಡಿ ಕೊಡುವುದಕ್ಕೆ ಎಂದು ಕರ್ನಾಟಕ ಭವನ ಎಂದು ಸರ್ಕಾರದ ಕಾಂಟ್ರಿಬ್ಯೂಶನ್ ಇದೆ. ಅವರೂ ಸಹ ಎಷ್ಟು ಆಗುತ್ತದೋ ಅಷ್ಟನ್ನು ಕೊಡುತ್ತಿದ್ದಾರೆ. ಇದರಲ್ಲಿ ಶಾಸಕರು, ಸಂಸದರು ಅದರಲ್ಲಿಯೂ ಸರ್ಕಾರದ ನೌಕರಿಯಲ್ಲಿ ಇರತಕ್ಕಂತವರಿಗೆ ಕೊಡಬೇಕು ಎಂದು ಇದೆ. ಕೆಲವು ಸಲ ಏನಾಗುತ್ತದೆ ಎಂದರೆ, ಪಕ್ಕದಲ್ಲಿ ಬೇರೆ ರಾಜ್ಯದವರು ಅಂದರೆ, ಜಮ್ಮು ಕಾಶ್ಮೀರ ಭವನ ಇದೆ, ಮತ್ತೊಂದು ಕಡೆ ಗುಜರಾತ್ ಭವನ ಇದೆ. ಅವರು ಅಕಾಮಡೇಶನ್ ಇದ್ದರೆ ಆ ಸರ್ಕಾರಿ ಅಧಿಕಾರಿಗಳು ಬಂದರೆ ಕೊಡುತ್ತಾರೆ. ಇಲ್ಲಾ ಎಂದರೆ ಬೇರೆ ಯಾರಿಗೂ ಕೊಡುವುದಿಲ್ಲ. ಸಾಮಾನ್ಯ ಜನರು ದೆಹಲಿಗೆ ಹೋದಾಗ ಕರ್ನಾಟಕ ಭವನಕ್ಕೆ ಏತಕ್ಕೆ ಹೋಗುವುದಿಲ್ಲ ಎಂದರೆ, ಬೇರೆಯವರಿಗೆ ಒಂದು ದಿವಸದ ಬಾಡಿಗೆ 350 ರೂಪಾಯಿಗಳು. ಆದಕಾರಣ ಅವರಿಗೆ ಅಷ್ಟೊಂದು ಬಾಡಿಗೆ ಕೊಡುವುದಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಅವರಿಗೆ ಎಲ್ಲಿ ಅನುಕೂಲ ಇರುತ್ತದೆಯೋ ಅಲ್ಲಿಗೆ ಹೋಗುತ್ತಾರೆ. ಮತ್ತೊಂದು

ವಿಷಯವೇನೆಂದರೆ, ಅಲ್ಲಿರುವ ರೆಸಿಡೆಂಟ್ ಕಮೀಷನರ್‌ರವರಿಗೆ ಕನ್ನಡ ಬರುವುದಿಲ್ಲವೆಂದು ಹೇಳುತ್ತಿದ್ದಾರೆ. ಆದರೆ ಅವರಿಗೆ ಕನ್ನಡ ಬರುತ್ತದೆ. ಹೇಗೆಂದರೆ, ಅವರು ಇಲ್ಲಿ, ನಮ್ಮ ಸರ್ಕಾರದಲ್ಲಿ ಸಾಕಷ್ಟು ವರ್ಷ, ಸಾಕಷ್ಟು ಇಲಾಖೆಗಳಲ್ಲಿ ಕೆಲಸ ಮಾಡಿದ್ದಾರೆ. ಆದುದರಿಂದ ಅವರಿಗೆ ಕನ್ನಡ ಬರುತ್ತದೆ. ಆದರೆ ಮಾನ್ಯ ಸದಸ್ಯೆಯವರಿಗೆ ಇರುವಷ್ಟು ಕನ್ನಡದ ಜ್ಞಾನ ಅವರಿಗೆ ಇಲ್ಲ. ಹಾಗೂ ಅಲ್ಲಿ ಸೀನಿಯರ್ ಲೆವೆಲ್ ಆಫೀಸರ್ಸ್ ಇದ್ದಾರೆ. ಅಡ್‌ಮಿನಿಸ್ಟ್ರೇಟಿವ್ ಲ್ಯಾಪ್‌ಸಸ್ ಕಂಡು ಹಿಡಿಯದೆ, ನಮ್ಮ ಸಂಸತ್ ಸದಸ್ಯರು ಕರ್ನಾಟಕ ಭವನದಲ್ಲಿ ಸರಿಯಾದಂತಹ ವ್ಯವಸ್ಥೆ ಇಲ್ಲ ಎಂದು ನನ್ನ ಗಮನಕ್ಕೆ ತಂದರು. ಆದ ಕಾರಣ ಕಳೆದ ಸಾರಿ ಸಂಸತ್ ಸದಸ್ಯರನ್ನು ಕರೆದು, ಇದು ಈ ರೀತಿ ಇದೆ, ಇದಕ್ಕೆ ತಕ್ಕಂತೆ ಮ್ಯಾನೇಜ್ ಮಾಡುವುದಕ್ಕೆ ಐಎಎಸ್ ಅಧಿಕಾರಿಗಳಾಗಬಹುದು, ಅಥವಾ ಕೆಎಎಸ್ ಅಧಿಕಾರಿಗಳನ್ನು ನೇಮಕ ಮಾಡುವುದಕ್ಕೆ ಸಿದ್ಧತೆ ನಡೆದಿದೆ.

ಮುಖ್ಯಮಂತ್ರಿ ಚಂದ್ರು: ಸನ್ಮಾನ್ಯ ಸಭಾಪತಿಯವರೆ, ಹೋಟೆಲ್‌ನಲ್ಲಿ ಕೆಲಸ ಮಾಡುವುದಕ್ಕೆ ಕನ್ನಡ ಮಾತನಾಡುವಂತಹವರು ಯಾರು ಸಿಗುವುದಿಲ್ಲವೆಂದು ಮುಖ್ಯ ಮಂತ್ರಿಗಳು ಹೇಳಿದರು. ಆದರೆ ನಾವು ಹೋದಾಗ ನಡೆದ ಒಂದು ಪ್ರಸಂಗವನ್ನು ತಮಗೆ ವಿವರಿಸುತ್ತೇನೆ. ಕರ್ನಾಟಕ ಭವನದಿಂದ ಒಂದು ಕಿ.ಮೀ. ದೂರದಲ್ಲಿರುವ ಒಂದು ಕಾಮತ್ ಹೋಟೆಲ್‌ಗೆ ನಾವುಗಳು ಹೋಗಿದ್ದೆವು. ಆ ಹೋಟೆಲ್‌ನಲ್ಲಿ ಇರುವವರೆಲ್ಲರೂ ನಮ್ಮನ್ನು ಕನ್ನಡದಲ್ಲಿ ಸ್ವಾಗತಿಸಿ ನಮಗೆ ಊಟ ಹಾಕಿದಾಗ, ನಾವು ಕರ್ನಾಟಕ ಭವನದಲ್ಲಿಯೇ ಇದ್ದೇವೆ ಎಂಬ ಭಾವನೆ ನಮಗೆ ಮೂಡಿತು. ನಮ್ಮ ಮೂಲ ಉದ್ದೇಶವೆಂದರೆ, ಕರ್ನಾಟಕ ಭವನದ ಪಕ್ಕದಲ್ಲಿ ಆಂಧ್ರ ಭವನವಿದೆ, ತಮಿಳುನಾಡು ಭವನ ಇದೆ. ಅದರ ಒಳಗಡೆ ಹೋದರೆ ಅವರವರ ಭಾಷೆ ಮಾತನಾಡುತ್ತಾರೆಯೇ ಹೊರತು ಬೇರೆ ಭಾಷೆ ಯಾರೂ ಮಾತನಾಡುವುದಿಲ್ಲ. ಎಲ್ಲೋ ಒಂದು ಕಡೆ ನಮ್ಮ ಕನ್ನಡಕ್ಕೆ ವಿಪರೀತವಾಗಿ ತೊಂದರೆ ಆಗಿದ್ದಂತಹ ಸಂದರ್ಭದಲ್ಲಿ ಪಾರ್ಲಿಮೆಂಟ್‌ನಲ್ಲಿ ಚೊಚ್ಚಲ ಭಾಷಣವನ್ನು ಕನ್ನಡದಲ್ಲಿ ಮಾಡಿರುವಂತಹ ನೀವು, ಈಗ ನೋಡಿದರೆ ಪರಿಶೀಲಿಸಿ, ಸಮಯ ಸಿಕ್ಕಾಗ ಮಾಡುತ್ತೇನೆ ಎನ್ನುವುದು ಸರಿ ಅಲ್ಲ. ಕನ್ನಡವನ್ನು ಕಡ್ಡಾಯವಾಗಿ ಮಾಡುತ್ತೇವೆ ಎಂಬ ಮಾತನ್ನು ಹೇಳಬೇಕು. ದೆಹಲಿಯಲ್ಲಿ ಕರ್ನಾಟಕದ ಭವನ ಇರುವುದು ನಮ್ಮ ಅನುಕೂಲಕ್ಕೋಸ್ಕರ. ಆದರೆ ಒಮ್ಮೆ ನಾನು ಕರ್ನಾಟಕ ಭವನಕ್ಕೆ ಹೋದಾಗ ಒಂದು ಪ್ಲೇಟ್ ರೈಸ್ ಕೊಡಿ ಎಂದು ಕೇಳಿದಾಗ, ಒಂದು ತಟ್ಟೆಯಲ್ಲಿ ಅರ್ಧ ಪಾವು ಅಕ್ಕಿಯನ್ನು ತಂದುಕೊಟ್ಟ. ಅದನ್ನು ನಾನು ಹೇಗೆ ತಿನ್ನಲಿ? ಅಲ್ಲದೆ ನನಗೆ ಇಂಗ್ಲೀಷ್ ಬೇರೆ ಬರುವುದಿಲ್ಲ. ನಾವು ಸಾವಿರಾರು ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ ಕರ್ನಾಟಕ ಭವನವನ್ನು ಕಟ್ಟಿಸಿದರೂ ಸಹ ನಮಗೆ ಅದರಿಂದ ಉಪಯೋಗವಿಲ್ಲದಂತೆ ಆಗಿದೆ. ಕರ್ನಾಟಕ ಭವನಕ್ಕೆ ಕನ್ನಡದವರನ್ನು ಕಡ್ಡಾಯವಾಗಿ ತೆಗೆದುಕೊಳ್ಳಬೇಕು ಎಂಬ ಕಾನೂನು ಸಹ ಇದೆ. ಅದು ತಮಗೂ ಸಹ ತಿಳಿದಿದೆ. ಆದರೆ ಕಾನೂನಿಗೆ ವಿರುದ್ಧವಾಗಿ ಕೆಲವರನ್ನು ತೆಗೆದುಕೊಂಡಿದ್ದಾರೆ. ಅಂತವರ ಮೇಲೆ ಕ್ರಮ ತೆಗೆದುಕೊಳ್ಳಿ ಎಂದು ನಾವು ತಿಳಿಸಿದ್ದರೂ ಸಹ ಇದುವರೆವಿಗೆ ಯಾವುದೇ

ರೀತಿಯಾದಂತಹ ಕ್ರಮವನ್ನು ತೆಗೆದುಕೊಂಡಿಲ್ಲ. ಇದರಿಂದ ಕನ್ನಡಕ್ಕೆ ಬಹಳ ಅವಮಾನವಾಗಿದೆ. ಇದಕ್ಕೆ ಸರಿಯಾದಂತಹ ಉತ್ತರವನ್ನು ತಾವು ಕೊಡಬೇಕು ಎಂದು ತಮ್ಮನ್ನು ಕೇಳಿಕೊಳ್ಳುತ್ತಿದ್ದೇನೆ.

ಜೆ.ಹೆಚ್. ಪಟೇಲ್: ಕನ್ನಡವನ್ನು ಕಡ್ಡಾಯ ಮಾಡಿರುವುದು, ಕನ್ನಡ ಬಂದವರನ್ನೇ ತೆಗೆದುಕೊಳ್ಳಬೇಕು, ಬೇರೆಯವರಿಗೆ ಅವಕಾಶ ಕೊಡಬಾರದು ಎಂದು ಆಜ್ಞೆ ಹೊರಡಿಸಿರುವುದು ಕೇವಲ ಆರು ತಿಂಗಳ ಹಿಂದೆ.

(ವಿಧಾನ ಪರಿಷತ್ ಕಲಾಪ, ನವೆಂಬರ್ 5, 1998)

## ಐಎಎಸ್ ಅಧಿಕಾರಿ - ಜೋಕರ್ ಇದ್ದಂತೆ

ಮಾನ್ಯ ಸಭಾಪತಿಗಳೇ, ಒಮ್ಮೊಮ್ಮೆ ಹೇಳುತ್ತಿರುವ ಮಾತನ್ನು ಮತ್ತೊಮ್ಮೆ ಹೇಳಬಯಸುತ್ತೇನೆ... ಇದು ಕೇವಲ ಪರಿಸ್ಥಿತಿಯ ವಿಶ್ಲೇಷಣೆಯ ಮಾತಷ್ಟೆ.

ಈ IAS ಅಧಿಕಾರಿಗಳು ಇಸ್ಪೀಟ್ ಆಟದಲ್ಲಿ ಜೋಕರ್ ಇದ್ದ ಹಾಗೆ, ಈ ಜೋಕರ್-ರಾಣಿಗೂ ಅಡ್ಜೆಸ್ಟ್ ಆಗ್ತಾನೆ ; ರಾಜನಿಗೂ ಅಡ್ಜಸ್ಟ್ ಆಗುತ್ತಾನೆ; ಗುಲಾಮನೊಂದಿಗೂ ಹೊಂದಿಕೊಳ್ಳುತ್ತಾನೆ. ಹೀಗಂದರೆ ಅವನು ಯಾವಾಗ, ಯಾರ ಜೊತೆ ಇದ್ದ ಎಂಬುದು ಮುಖ್ಯ.

(ಜೆ.ಹೆಚ್. ಪಟೇಲ್- ಕೈಗಾರಿಕಾ ಮಂತ್ರಿ, ವಿಧಾನಪರಿಷತ್ತು : ಏಪ್ರಿಲ್ 3, 1987)

## ಕಲ್ಲು ಬಂಡೆ ಮೇಲೆ ಮನೆ ಉತ್ತರ ದುರ್ಗದ ಕಥೆ

ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ) : ನನ್ನದೇ ಕ್ಷೇತ್ರದಲ್ಲಿ ಉತ್ತರ ದುರ್ಗ ಎಂಬ ಹೆಸರಿನ ಒಂದು ಹಳ್ಳಿ ಇದೆ. ಇಡೀ ಹಳ್ಳಿ ಬಂಡೆಗಳ ಮೇಲೆ ಕಟ್ಟಿದ ಮನೆಗಳಲ್ಲಿ ವಾಸ ಮಾಡುತ್ತಾರೆ. ಬಂಡೆಯ ಮೇಲೆ ಕಟ್ಟಿದ್ದಾರೆ ಇಲ್ಲಿ ಮನೆಗಳನ್ನು. ಒಂದು ಸಾರಿ ಅಲ್ಲಿಗೆ ಹೋದಾಗ ವಯಸ್ಸಾದ ಅಜ್ಜನನ್ನು ಕೇಳಿದೆ. ಏನಜ್ಜಾ ಪಕ್ಕದಾಗೆ ಮೈದಾನ ಅದೆ. ಅಲ್ಲಿ ಮನೆ ಕಟ್ಟದೆ ಇದ್ಯಾಕೆ ಹೀಗೇ ಕಲ್ಲು ಬಂಡೆಗಳ ಮೇಲೆ ಕಟ್ಟಿದ್ದೀರಲ್ಲಾ ಅಂದೆ.

ಅಧ್ಯಕ್ಷರೇ, ಆ ಅಜ್ಜ ಕೊಟ್ಟ ಉತ್ತರ ಕೇಳಿ ಒಂದು ನಿಮಿಷ ತಬ್ಬಿಬ್ಬಾದೆ. ನಮ್ಮ ಸ್ಥಿತಿ ನೆನೆದು ನನಗೇ ನಾಚಿಕೆಯಾಯ್ತು.

ತಮ್ಮಾ ನೋಡು.. ಇದಕ್ಕೊಂದು ಕಾರಣ ಇದೆ. ನಾವು ಚಿಕ್ಕವರಿದ್ದಾಗಿನ ವಿಷಯ ಇದು. ಮೈದಾನದಾಗೆ ಶೀತ ವಿಪರೀತ ಇರ್ತಿತ್ತು. ಮನೆಗೋಡೆ ನಿಲ್ತಿದ್ದಿಲ್ಲ. ಕುಸಿದು ಬೀಳ್ತಿದ್ದವು. ಗಟ್ಟಿ ಮನೆ ಬೇಕೂಂತ ಹೇಳಿ ಎತ್ತರದ ಜಾಗದಾಗೆ ಕಲ್ಲು ಬಂಡೆ ಮೇಲೆ ಕಟ್ಟಿದ್ವಿ ಎಂದ ಆತ.

ಅವತ್ತು ಭೂಮಿಯಲ್ಲಿ ತೇವಾಂಶ ಮೇಲಟ್ಟದಲ್ಲಿತ್ತು. 60 ವರ್ಷಗಳ ಹಿಂದೆ ನಮ್ಮ ಹಳ್ಳಿಗಳಲ್ಲಿ ಶೀತ ಇರ್ತಿದ್ದನ್ನು, ಹಚ್ಚ ಹಸಿರು ಇರ್ತಿದ್ದಿದ್ದನ್ನು, ಈಗಲೂ ನಾನು ನೆನಪು ಮಾಡಿಕೊಳ್ಳುತ್ತೇನೆ.

ಇವತ್ತು ಏನಾಗಿದೆ ಅಂದರೆ ಇನ್ನೂರು- ಮುನ್ನೂರು ಅಡಿ ಕೊರೆದರೂ ನೀರೇ ಬೀಳುತ್ತಿಲ್ಲ. ಹೀಗೇ ಮುಂದುವರೆದರೆ ಮುಂದಿನವರ ಸ್ಥಿತಿ ಏನಾಗುತ್ತೋ ಎಂಬ ಚಿಂತೆ ನನ್ನನ್ನು ಕಾಡಿಸುತ್ತಿದೆ. ಈ ವಿಷಯವನ್ನು ನಾವೆಲ್ಲಾ ಗಂಭೀರವಾಗಿ ಚಿಂತಿಸಬೇಕಾಗಿದೆ.

ನೀರೇ ಕಾಣಲಾಗದಂತಹ ಪರಿಸರವನ್ನು ಸೃಷ್ಟಿಸುವ ಪಾಪದ ಜನಾಂಗ ನಾವು ಆಗುತ್ತೀವೇನೋ ಎಂಬ ಪಾಪ ಭೀತಿ ನನ್ನನ್ನು ಕಾಡುತ್ತಿದೆ.

ಕಾಡನ್ನು ಬೆಳೆಸುವುದೇ ನಮಗಿರುವ ಏಕೈಕ ಮಾರ್ಗ. ನೀರಿನ ಸಲೆ ಭೂಮಿತಾಯಿಯ ಒಳಗೆ ಬತ್ತದಂತೆ ಮಾಡಲು ಸಾಮಾಜಿಕ ಅರಣ್ಯ ಬೆಳೆಸುವುದು ಅತಿ ಮುಖ್ಯ.

ಅತ್ತಕಡೆ (ವಿರೋಧ ಪಕ್ಷದಲ್ಲಿ) ಕುಳಿತವರ್‍ಯಾರೋ ಹೇಳಿದರು. ಮಂತ್ರ ಹೇಳಿದರೆ ಮಳೆ ಬರೋದಿಲ್ಲ ಅಂತ. ಸರಿಯಾದ ಮಾತು. ಅರಣ್ಯ ಬೆಳೆಸದೆ ಪೂಜೆ, ತಪಸ್ಸು ಮಾಡೇ ಮಾಡಿದರೂ ಒಂದು ಹನಿ ನೀರು ಸಿಗೋಲ್ಲ.. ಪೂಜೆ ಅಂತ ಹೇಳಿ ತಲೆ ಒಡೆದುಕೊಂಡರೆ ರಕ್ತ ಬರುತ್ತೆ ಧಾರಾಳವಾಗಿ ...

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ : ಫೆಬ್ರವರಿ 6, 1987)

## ಅಂತರ್ಜಲ ಬತ್ತದಂತೆ ಜಾಗ್ರತೆ ವಹಿಸೋಣ

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಸಭಾಪತಿಗಳೇ, ಇದು ಬರೀ ನಮ್ಮ ನಾಡಿನಲ್ಲಿ ಅಲ್ಲ, ನಮ್ಮ ದೇಶದಲ್ಲಿ ಅಲ್ಲ, ಇದು ಪ್ರಪಂಚದಲ್ಲೇ ಒಂದು ಸಮಸ್ಯೆಯಾಗಿದೆ. ಭೂ ಅಂತರ್ಜಲ ಇವತ್ತು ತಾನಾಗಿ ಕಡಿಮೆಯಾಗುತ್ತಾ ಹೋಗುತ್ತಿದೆ, ಅದಕ್ಕೋಸ್ಕರ ಹಲವಾರು ಪರಿಸರದ ಬದಲಾವಣೆಗಳನ್ನು ಕಾಣುತ್ತಿದ್ದೇವೆ. ಈಗ ಅಂತರ್ಜಲವನ್ನು ಸರಿಯಾಗಿ ಅಳೆಯುವುದು ಯಾರು ಅಂದರೆ, ಅದು ಸ್ಯಾಟಲೈಟ್‌ಗಳಿಂದ ಮಾತ್ರ ಸಾಧ್ಯವಾಗಿದೆ. ನಾವು ಹಿಂದೆ ಅನುಸರಿಸುತ್ತಿದ್ದಂತಹ ಎಲ್ಲಾ ವೈಜ್ಞಾನಿಕ ವಿಧಾನಗಳಿಗಿಂತ ಭಿನ್ನವಾದ ಒಂದು ಹೊಸ ವಿಧಾನ ಇದು. ಕರ್ನಾಟಕದಲ್ಲಿ ವಿಶೇಷವಾಗಿ ಕೆಲವು ಕಡೆ ಅಂತರ್ಜಲದ ಡಿಫಾಸಿಟ್ ಇದೆ. ನಾವು ಅಂತರ್ಜಲವನ್ನು, ಅದರ ಪ್ರಮಾಣವನ್ನು ಹೆಚ್ಚಿಸಿಕೊಳ್ಳಬೇಕೆಂದರೆ ಸರ್‌ಫೇಸ್ ವಾಟರ್ ಏನಿದೆ, ಮಳೆ ಮೂಲಕ ಬಂದಿದ್ದು, ಅದನ್ನು ಸರಿಯಾಗಿ ಸ್ಟೋರ್ ಮಾಡಬೇಕು. ಅಣ್ಣಾಹಜಾರೆ ಮಾಡಿದುದು ಅದನ್ನೇ.

ಇಲ್ಲಿ ನಾವು ಹಿಂದೆ ಡ್ರೈಲ್ಯಾಂಡ್ ಡೆವಲಪ್‌ಮೆಂಟ್ ಎಂದು ಮಾಡಿ, ಬಂಡಿಂಗ್ ಇತ್ಯಾದಿ ಎಲ್ಲಾ ಮಾಡಿದೆವು. ಈಗ ಕೋಲಾರದಂತಹ ಕಡೆ ಅನೇಕ ಕೆರೆಗಳಿವೆ, ಆ ಕೆರೆಗಳಲ್ಲಿ ನೀರು ಸ್ಟೋರ್ ಆದರೆ ಸಾಕು ಎಷ್ಟೇ ಕಡಿಮೆ ಮಳೆ ಬಂದರೂ ಸಹಿತ ಕೆರೆಗಳಲ್ಲಿ ಮಳೆ ನೀರು ಸ್ಟೋರ್ ಆದರೆ ಅಂತರ್ಜಲ ತಾನಾಗಿ ಹೆಚ್ಚುತ್ತದೆ. ಹೊಳೆ ಅಥವಾ ಬೇರೆ ನೀರಾವರಿ ಪ್ರದೇಶಗಳಲ್ಲಿರತಕ್ಕ ಪ್ರದೇಶ ಬಿಡಿ, ಎಲ್ಲಿ ಬಹಳ ನೀರಾವರಿ ಪ್ರದೇಶ ಅಥವಾ ಆ ಸವಲತ್ತು ಇಲ್ಲದೇ ಇರುವ ಕಡೆ ಈ ಪ್ರಶ್ನೆ ಬರುತ್ತದೆ. ಅದಕ್ಕೇ ನಾನು ಇಷ್ಟೇ ಹೇಳುತ್ತೇನೆ, ಮಾನ್ಯ

ತಿಪ್ಪೇಸ್ವಾಮಿಯವರು ಹೋಗಿ ನಬಾರ್ಡ್‌ನವರೊಡನೆ ಕುಳಿತು ಚರ್ಚಿಸುತ್ತಾ ಕೆರೆಗಳ ಹೂಳನ್ನು ಎತ್ತಿ ಹೆಚ್ಚು ನೀರನ್ನು ನಾವು ಸಂಗ್ರಹಿಸುತ್ತೇವೆ ಎಂದಾಗ ಅದಕ್ಕೆ ನಬಾರ್ಡ್‌ನವರು ಒಪ್ಪಬೇಕಾದರೆ ನೀವು 200 ಕೋಟಿ ರೂ.ಗಳ ವರೆಗೆ ಖರ್ಚು ಮಾಡಿದರೂ ಅದನ್ನು ನಾವು ಭರಿಸುತ್ತೇವೆ ಎಂದರು. ನಬಾರ್ಡ್‌ನ ಛೇರ್ಮನ್‌ರವರೇ ಬಂದಿದ್ದರು, ಅವರಿಗೂ ಹೇಳಿದರು, ನನಗೂ ಹೇಳಿದರು. ಈಗಿರತಕ್ಕ ಕೆರೆಗಳ ಹೂಳನ್ನು ಎತ್ತುವುದಕ್ಕೆ ನಾವು ಮ್ಯಾನುಯಲ್ ಪವರ್ ತೆಗೆದುಕೊಂಡು ಜನರನ್ನು ಹಚ್ಚಿ ಹೂಳನ್ನು ತೆಗೆಯುವುದಕ್ಕೆ ಹೋದರೆ ಅದು ಆಗುವುದಿಲ್ಲ. ನಬಾರ್ಡ್‌ನವರ ರೂಲ್ಸ್ ಪ್ರಕಾರ ನಾವು ಮೆಷಿನ್ ಉಪಯೋಗಿಸಿ ಹೂಳು ತೆಗೆದರೆ ಅವರು ದುಡ್ಡು ಕೊಡುವುದಿಲ್ಲ.

ಅವರು ಏಕೆ ಹಾಗೆ ಹೇಳುತ್ತಾರೆ ಎಂದರೆ, ಮ್ಯಾನ್‌ಪವರ್ ಯುಟಿಲೈಸೇಷನ್ ಆದರೆ ಮಾತ್ರ ನಾವು ನೆರವು ನೀಡುತ್ತೇವೆ, ನೀವು ಹೂಳು ಎತ್ತಿಸುವುದಕ್ಕೆ ಮೆಷಿನ್‌ಗಳನ್ನು ಬಳಸಿದರೆ ನಾವು ದುಡ್ಡು ಕೊಡುವುದಿಲ್ಲ, ನೀವೇ ಮಾಡಿ ಎನ್ನುತ್ತಾರೆ. ಆದ್ದರಿಂದ ಇದು ಒಂದು ನಿಜವಾದ ಕಗ್ಗಂಟಾಗಿದೆ.

ವಿ.ಆರ್. ಸುದರ್ಶನ್: ರಾಷ್ಟ್ರೀಯ ಜಲ ನೀತಿಯನ್ನು ಜಾರಿಗೆ ತರುವುದಕ್ಕೆ ನೀವು ಕೇಂದ್ರ ಸರ್ಕಾರಕ್ಕೆ ಏನಾದರೂ ಒತ್ತಾಯ ಮಾಡುತ್ತೀರೋ?

ಜೆ.ಹೆಚ್. ಪಟೇಲ್: ನಾವು ಹಾಲಿ ಮಾಡುತ್ತಿದ್ದೇವೆ, ಆದರೆ ಅದಕ್ಕಿಂತ ಹೆಚ್ಚಾಗಿ ಎಲ್ಲಿ ಹೆಚ್ಚು ಒಣ ಭೂಮಿ ಇದೆ, ಕೆರೆಗಳಿವೆ, ಅಲ್ಲಿ ನಾವೂ ಸಹ ಅದನ್ನು ಮಿಸ್‌ಯೂಸ್ ಮಾಡುತ್ತಿದ್ದೇವೆ. ಮಾನ್ಯ ಸಭಾಪತಿಗಳೇ, ತಾವೂ ನೋಡಿರಬಹುದು, ಯಾವುದಾದರೂ ಒಂದು ಕೆರೆ ಸ್ವಲ್ಪ ಒಣಗಿದರೆ ಅಲ್ಲಿ ಬಗರ್ ಹುಕುಂ ಸಾಗುವಳಿ ಆಗಿಯೇ ಹೋಗುತ್ತದೆ. ಅಲ್ಲಿ ಕೆರೆಯ ಸುಳಿವೇ ಇಲ್ಲದಂತಾಗುತ್ತದೆ. ಕೆರೆ ಬರೀ ಲೆಕ್ಕದಲ್ಲಷ್ಟೇ ಇರುತ್ತದೆ. ಇದನ್ನು ಕೂಡ ನಾವು ಹತೋಟಿಗೆ ತರಬೇಕಾಗಿದೆ. ಆದ್ದರಿಂದ ಮಾನ್ಯ ಮಂತ್ರಿಗಳು ಅದರ ಕಡೆಗೆ ಹೆಚ್ಚು ಗಮನ ಕೊಟ್ಟಿದ್ದಾರೆ. ಏಕೆಂದರೆ ಆ ಕಡೆ ಗಮನ ಕೊಡದಿದ್ದರೆ ಕೆಲವು ಪ್ರದೇಶಗಳಲ್ಲಿ ಭಯಂಕರವಾದಂತಹ ಬರಪರಿಸ್ಥಿತಿ ಉದ್ಭವವಾಗುತ್ತದೆ. ಆದ್ದರಿಂದ ಆದಷ್ಟೂ ಅದರ ಕಡೆಗೆ ಹೆಚ್ಚು ಗಮನ ಕೊಡುತ್ತೇವೆ.

(ವಿಧಾನ ಪರಿಷತ್ ಮಾರ್ಚಿ 27, 1997)

## ಚೀನಾದಲ್ಲಿ ಕಾಂಪೋಸ್ಟ್

ಮಾನ್ಯ ಅಧ್ಯಕ್ಷರೇ, ಈಗ ವ್ಯವಸಾಯ ಸಾವಯವ ಪದ್ಧತಿ ಅಥವಾ ನಾವು ಹಿಂದೆ ಯಾವ ರೀತಿ ಮನೆ ಗೊಬ್ಬರ ಹಾಕಿ ಬೆಳೆಯುತ್ತಿದ್ದ ಬೆಳೆ ಗುಣಮಟ್ಟದಲ್ಲಿ ಉತ್ತಮವಾದರೂ ಬಾಹುಳ್ಯದಲ್ಲಿ ಬಹಳ ಕಡಿಮೆ ಇತ್ತು. ನಾವು ಹುಡುಗರಾಗಿದ್ದಾಗ ಹೊಲಕ್ಕೆ ಹೋಗಿ ಬಿತ್ತುವಾಗ ಅಥವಾ ಎಡೆಕುಂಟೆ ಹೊಡೆಯುವಾಗ ಕಳೆ ತೆಗೆಯುವಾಗ ಸ್ವತಃ ನಮ್ಮ ಮನೆಯ ಹೆಣ್ಣುಮಕ್ಕಳು ಕೆಲಸಕ್ಕೆ ಹೋಗುತ್ತಿದ್ದರು. ನಮ್ಮ ತಾಯಿ ಸ್ವತಃ ಕೆಲಸಕ್ಕೆ ಹೋಗುತ್ತಿದ್ದರು. ನಾವು ವರ್ಷಕ್ಕೆ

500-600 ಪಲ್ಲ ಜೋಳವನ್ನು ಬೆಳೆಯುತ್ತಿದ್ದೆವು. ಈಗ ಮಾನ್ಯ ಅಧ್ಯಕ್ಷರೇ, ಎಲ್ಲಾ ಕಡೆ ಕಾಂಟ್ರಾಕ್ಟ್ ಲೇಬಲ್ ಇದೆ, ಅಂದರೆ 1 ಎಕರೆ ನಾಟಿ ಮಾಡುವುದಕ್ಕೆ ಇಷ್ಟು, ಗೊಬ್ಬರ ಹಾಕುವುದಕ್ಕೆ ಇಷ್ಟು, ಅದನ್ನು ಕೊಯ್ಯುವುದಕ್ಕೆ ಇಷ್ಟು, ಕೊನೆಗೆ ಭತ್ತಮಾಡಿಕೊಡುವುದಕ್ಕೆ ಇಷ್ಟು ಮತ್ತು ಅದನ್ನು ಮಾರುಕಟ್ಟೆಗೆ ತೆಗೆದುಕೊಂಡು ಹೋಗಿ ಮಾರುವುದಕ್ಕೆ ಇಷ್ಟು, ಈ ರೀತಿಯ ವ್ಯವಸಾಯ ಇರುವುದು ಮಾನ್ಯ ಬಿ.ಆರ್. ಪಾಟೀಲ್‌ರವರಿಗೆ ಗೊತ್ತಿದೆ.

ಸ್ವತಃ ಇವತ್ತು ನಾವು ಶಿಕ್ಷಣ ಕೊಡಬೇಕೆಂದರೆ ಯಾರಿಗೆ ಶಿಕ್ಷಣ ಕೊಡಬೇಕು? ಈಗ 2 ಇಂಚು ನಾಟಿ ಮಾಡುವುದು ಹೇಳುತ್ತೀರಿ. ಆದರೆ ನಮ್ಮ ಕಡೆ ನೀರಾವರಿ ಬಂದಮೇಲೆ ನಾಟಿ ಮಾಡುವುದರಲ್ಲಿ ಕೆಲವರು ಪರಿಣಿತರಾಗಿದ್ದಾರೆ, ಗುತ್ತಿಗೆ ತೆಗೆದುಕೊಳ್ಳುತ್ತಾರೆ, ದಿನಗೂಲಿ ರೀತಿಯಲ್ಲಿ ಯಾರೂ ಬರುವುದಿಲ್ಲ, ಒಂದು ಎಕರೆಗೆ ಇಷ್ಟು ಎಂದು ಎಂದು ನಾವು ಅವರಿಗೆ ಗುತ್ತಿಗೆ ಕೊಟ್ಟಾಗ, ಅವರು ಒಂದು ಎಕರೆಯನ್ನು 2 ಗಂಟೆಯಲ್ಲಿ ಅಥವಾ 3 ಗಂಟೆಯೊಳಗೆ ಮುಗಿಸಿಕೊಂಡು ಬರಬಹುದು.

ಮೊದಲನೆಯದಾಗಿ, ಈಗಿರತಕ್ಕಂಥ ಪ್ರಜಾಸಂಖ್ಯೆಗೆ ನಾವು ಹಳೆಯ ಪದ್ಧತಿಯಲ್ಲಿ ಬೆಳೆದು ಹೊಟ್ಟೆ ತುಂಬಿಸುವುದಕ್ಕೆ ಸಾಧ್ಯವೆ ಅಥವಾ ಇಲ್ಲವೆ? ನಾವು ಇವತ್ತು ಗೊಬ್ಬರ ಉಪಯೋಗಿಸುವುದು ಬೇಡವೆಂದು ತೀರ್ಮಾನ ಮಾಡೋಣ, ಗೊಬ್ಬರ ಉಪಯೋಗಿಸುವುದರಿಂದ ಎಲ್ಲಾ ರೀತಿಯಿಂದ ವಿಷವನ್ನು ಹರಡುತ್ತಿದ್ದೇವೆ ಎನ್ನುವುದು ಸತ್ಯಾಂಶ.

ಚೈನ ದೇಶದಲ್ಲಿ ಇರತಕ್ಕಂಥ ಪದ್ಧತಿಯನ್ನು ತಾವು ಯಾರಾದರೂ ನೋಡಿದರೆ, ಅಲ್ಲಿ ಕೆಮಿಕಲ್ ಫರ್ಟಿಲೈಸರ್ ಒನ್ ಥರ್ಡ್ ಮತ್ತು ಟೂ-ಥರ್ಡ್ ಕನ್‌ವೆನ್‌ಷನಲ್ ಫರ್ಟಿಲೈಸರ್ ಕಾಂಪೋಸ್ಟ್.

ಅಲ್ಲಿ ಕಾಂಪೋಸ್ಟ್ ಹೇಗೆ ಮಾಡುತ್ತಾರೆ ಎನ್ನುವುದನ್ನು ಹೇಳುತ್ತೇನೆ. ಒಂದು ಹಳ್ಳಿಗೆ ಹೋಗಿದ್ದೆ. ಮಾನ್ಯ ಅಧ್ಯಕ್ಷರೇ, ಆ ಹಳ್ಳಿಯಲ್ಲಿ ಪ್ರತಿಯೊಬ್ಬರ ಮಲಮೂತ್ರ ವಿಸರ್ಜನೆಗೆ ನಿಗದಿತ ಸ್ಥಳಕ್ಕೆ ಹೋಗಬೇಕು, ಆ ಗ್ರಾಮದಲ್ಲಿ 18 ಜನರ ಒಂದು ವರ್ಕ್ ಬ್ಯಾಚ್ ಇದೆ. ಈ 18 ಜನರಲ್ಲಿ 18 ವರ್ಷದಿಂದ ಹಿಡಿದು 45 ವರ್ಷದವರೆಗೆ ಮಾತ್ರ ಇದ್ದಾರೆ. ವಿದ್ಯಾರ್ಥಿಗಳು ಕಾಲೇಜು ಸಮಯ ಬಿಟ್ಟರೆ ಬೇರೆ ರೊಟೀನ್ ವರ್ಕ್ ರೀತಿಯಲ್ಲಿ ಒಂದು ಟೀಮ್ ಒಂದು ದಿವಸ ಕಸ ಗುಡಿಸಿದರೆ, ಇನ್ನೊಂದು ದಿವಸ ಲೈಟ್‌ಗಳನ್ನು ಸರಿಮಾಡುವುದು, ಮತ್ತೊಂದು ದಿವಸ ಆಸ್ಪತ್ರೆ ಕೆಲಸ ಮಾಡುತ್ತಾರೆ ಮತ್ತು ವಾರದಲ್ಲಿ ಒಂದು ದಿನ ಆ ಮಲಮೂತ್ರವನ್ನು ಎತ್ತಿ ತೆಗೆದುಕೊಂಡು ಹೋಗಿ ಹೊಲಕ್ಕೆ ಕಂಪಲ್‌ಸರಿ ಹಾಕಲೇಬೇಕು. ಆ ಮಲಮೂತ್ರವನ್ನು ಹೊಲಕ್ಕೆ ಸಾಗಿಸತಕ್ಕಂಥ ಮೆಕಾನಿಸಂ ಏನಿದೆ ಅದನ್ನು ನೋಡಿ ನಾವು ಕಲಿತುಕೊಳ್ಳಬೇಕು. ಅಂದರೆ ಪ್ರತಿಯೊಬ್ಬರಿಗೂ ಹ್ಯಾಂಡ್ ಗ್ಲೋಸ್, ಮೂಗಿಗೆ ಬಟ್ಟೆ ಕಟ್ಟಿಕೊಂಡಿರುತ್ತಾರೆ. ಆಟೋಮೆಟಿಕ್ ಟ್ರ್ಯಾಲಿ ತೆಗೆದುಕೊಂಡು ಹೋಗಿ ಅದೇ ತುಂಬಿಕೊಂಡು ಮುಚ್ಚಳವನ್ನು ಕ್ಲೋಸ್ ಮಾಡಿಕೊಳ್ಳುತ್ತದೆ, ಅನಂತರ ಅದನ್ನು ತೆಗೆದುಕೊಂಡು ಹೋಗಿ ಊರ ಮುಂದೆ

ಗುಂಡಿಗೆ ಹಾಕುತ್ತಾರೆ. ಆ ರೀತಿ ಕಂಪಲ್‌ಸರಿ ಪ್ರತಿಯೊಬ್ಬರು ಮಲಮೂತ್ರವನ್ನು ಎತ್ತತಕ್ಕಂಥ ಕಾನೂನು ಇದೆ.

ಮಾನ್ಯ ಜ್ಞಾನೇಂದ್ರರವರೇ, ಇಲ್ಲಿ ಯಾವುದಕ್ಕೂ ನಿಯಮ ಇಟ್ಟುಕೊಳ್ಳದೆ ನಾವು ಹಳೇ ರೀತಿಯ ಗೊಬ್ಬರ ಹಾಕಿದರೆ 3 ತಿಂಗಳಿಗೆ ಅದು ಸಾಕಾಗುವುದಿಲ್ಲ. ಅದಕ್ಕಾಗಿ ಜಪಾನ್ ಮಾದರಿ ವ್ಯವಸಾಯ ಮಾಡಿ ಎಂದರು. ಅಂದರೆ ಜಪಾನ್‌ನಲ್ಲಿ ಸಮುದ್ರದ ದಡಗಳಿಗೆ ಮಣ್ಣನ್ನು ತುಂಬಿ ಅದರ ಮೇಲೆ ಬೆಳೆಯನ್ನು ಬೆಳೆಯುತ್ತಾರೆ. ಜಪಾನ್ ದೇಶ ಚಿಕ್ಕದು, ಜನಸಂಖ್ಯೆ ಕಡಿಮೆ, ಅವರಿಗೆ ಉಳಿಮೆಗೆ ಅಂದರೆ ವ್ಯವಸಾಯಕ್ಕೆ ಇರತಕ್ಕಂಥ ಭೂಮಿಯೇ ಕಡಿಮೆ ಇದೆ. ಈಗ ಅಲ್ಲಿ ಸಂಶೋಧನೆ ಮಾಡಿರುವುದನ್ನು ಪ್ರಪಂಚದ ಎಲ್ಲಾ ಕಡೆ ಹೇಳಿಕೊಡಲಾಗುತ್ತಿದೆ.

Hybridization is a boon as well as a curse. Without hybridization, ತಾವು ಈಗ ಏನಾದರೂ ಡೆಮಾನ್‌ಸ್ಟ್ರೇಶನ್ ಮಾಡಿದರೆ, ಅಂದರೆ ನೀವು ಈಗ ತೀರ್ಥಹಳ್ಳಿಯಲ್ಲಿ 150 ಕುಟುಂಬಗಳು ಮಾಡುತ್ತಿವೆ ಎಂದು ಹೇಳಿದ್ದೀರಿ. ಅವರು ಬೆಳೆ ಒಂದು ಎಕರೆಗೆ ಇಳುವರಿ ಏನು? ಅದು ಅವರ ಮನೆಯ ಸಂಸಾರಕ್ಕೆ ಆಗಬಹುದು ಅಥವಾ ಈಗಲೂ ಸರ್ಕಾರಿ ಗೊಬ್ಬರವನ್ನು, ಸರ್ಕಾರಿ ಗೊಬ್ಬರ ಅಂದರೆ ಕೆಮಿಕಲ್ ಫರ್ಟಿಲೈಸರ್ಸ್, ಹಾಕದೆ ಇದ್ದು ಏನಾದರೂ ಭತ್ತ ಬೆಳೆದರೆ ಆ ಅಕ್ಕಿಯನ್ನು ಕೊಂಡುಕೊಳ್ಳುತ್ತಾರೆ ಏಕೆಂದರೆ ತಮ್ಮ ಸ್ವಂತ ಉಪಯೋಗಕ್ಕೆ. ಆ ರೀತಿಯಲ್ಲಿ ನಾವು ಡೆಮಾನ್‌ಸ್ಟ್ರೇಟಿವ್ ಪ್ಲಾಟ್ ಮಾಡಬಹುದೇ ಹೊರತು you please show us a way. We will certainly follow. We will lose nothing if we can produce.

ನಮ್ಮ ಜನರಿಗೆ ಆಗುವಷ್ಟು, ಮಾನ್ಯ ಬಿ.ಆರ್. ಪಾಟೀಲ್ ಮತ್ತು ತಾವು ಹೇಳಿದ ಹಾಗೆ ಹೆಚ್ಚು ಬೆಳೆ ಬೆಳೆದು ಅವರ ಹೊಟ್ಟೆ ತುಂಬಿಸುವುದಕ್ಕೆ ಸಾಧ್ಯವಿದ್ದರೆ ಬೇರೆ ಯೋಚನೆ ಮಾಡುವುದೇ ಬೇಡ. ಸೀಡ್ಸ್ ಕಂಪನಿಗಳು ಮತ್ತು ಫರ್ಟಿಲೈಸರ್ಸ್ ಕಂಪನಿಗಳು ಇವತ್ತು ಹಳ್ಳಿಗಳಲ್ಲಿ ಅವರ ಜಾಹೀರಾತುಗಳನ್ನು ಕೊಡುತ್ತಿದ್ದಾರೆ ಮತ್ತು ರೇಡಿಯೋ ಟಿ.ವಿ.ಗಳಲ್ಲಿ ಕೊಡುತ್ತಾರೆ. ರೇಡಿಯೋದಲ್ಲಿ ಪ್ರತಿ ದಿನ ರೈತರಿಗೆ ನಾವು ಉಪದೇಶ ಮಾಡುತ್ತೇವೆ.

ಇಡೀ ಭರತಖಂಡದ ಬೇರೆ ಬೇರೆ ರಾಜ್ಯಗಳಲ್ಲಿ ನೋಡಿದರೆ ಅಂದರೆ ಪಂಜಾಬ್‌ನಲ್ಲಿ ಗೋಧಿಯನ್ನು ಚೆನ್ನಾಗಿ ಬೆಳೆಯುತ್ತಾರೆ. ನಾವು ಇವತ್ತು ದಕ್ಷಿಣದ ಆಂಧ್ರ, ಕರ್ನಾಟಕ, ತಮಿಳುನಾಡು ಪ್ರದೇಶದಲ್ಲಿ ಭತ್ತವನ್ನು ಎಲ್ಲರಿಗಿಂತ ಚೆನ್ನಾಗಿ ಬೆಳೆಯುತ್ತಿದ್ದೇವೆ. ಈ ದೇಶಗಳಲ್ಲಿ ಅಥವಾ ಈ ರಾಜ್ಯಗಳಲ್ಲಿ ಈ ರೀತಿಯ ಮಾರ್ಗವನ್ನು ಅನುಸರಿಸಿದ್ದೇವೆ. ನಾವು ಜನರ ಆರೋಗ್ಯವನ್ನು ಕಾಪಾಡಬಹುದು, ಜನರ ಹಸಿವನ್ನೂ ತೀರಿಸಬಹುದು.

ನಾನು ಕೃಷಿಯಲ್ಲಿ ಹುಟ್ಟಿ ಬೆಳೆದವನು. ಹೊಸ ಮಾರ್ಗದಿಂದ, ಅಥವಾ ಸಂಪ್ರದಾಯದ ಮಾರ್ಗದಿಂದ ಮತ್ತೆ ನಾವು ರೀಸೈಕಲ್ ಮಾಡಿ ಈ ಆಹಾರದ ಸಮಸ್ಯೆಯನ್ನು ಬಗೆಹರಿಸಲು ಪ್ರಯತ್ನಿಸಬೇಕು. ನಾವು 18-19 ಕೋಟಿ ಟನ್ ಆಹಾರ ಬೆಳೆಯುತ್ತೇವೆ ಭಾರತದಲ್ಲಿ 33

ಕೋಟಿ ಜನರು ಇದ್ದಾಗ 5 ಕೋಟಿ ಟನ್ ಆಹಾರವನ್ನು ಬೆಳೆಯುತ್ತಿದ್ದೆವು, ಇವತ್ತು ನೂರು ಕೋಟಿ ಜನರು ಇದ್ದೇವೆ. ನೂರು ಕೋಟಿ ಜನರಿಗೆ ಆಹಾರವನ್ನು ಒದಗಿಸುವುದಕ್ಕೆ ತಾವೇನಾದರೂ ಒಂದು ಮಾರ್ಗವನ್ನು ತೋರಿಸಿದರೆ ಈ ಸರ್ಕಾರ ಒಪ್ಪಿಕೊಳ್ಳುತ್ತದೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ಸೆಪ್ಟೆಂಬರ್ 2, 1997)

## ಹೈಬ್ರಿಡ್ ಬೇಕು; ಜನಸಂಖ್ಯೆ ನಿಯಂತ್ರಣ ಬೇಕು

ಸಿ. ಬೈರೇಗೌಡ (ಕೃಷಿ ಸಚಿವರು): ಹೈಬ್ರಿಡ್ ಬೇರೆ ಬೇರೆ ಬೆಳೆಗಳಲ್ಲಿ ಬಂದಿದೆ. ಈ ಹೈಬ್ರಿಡೈಸೇಷನ್ ಮುಸುಕಿನ ಜೋಳದಲ್ಲಿ, ಜೋಳದಲ್ಲಿ ಮತ್ತು ಅನೇಕ ತರಕಾರಿಗಳಲ್ಲಿ ಬಂದಿದೆ. ಬಹಳ ಮುಖ್ಯವಾದ ಬೆಳೆಯಾದ ಭತ್ತದಲ್ಲಿ ಹೈಬ್ರಿಡೈಸೇಷನ್ ಬಂದಿರಲಿಲ್ಲ. ಅದನ್ನೂ ಸಹ ನಾವು ಪ್ರಾರಂಭ ಮಾಡಿದ್ದೇವೆ. ನಮ್ಮ ಕೃಷಿ ವಿಶ್ವವಿದ್ಯಾನಿಲಯದಿಂದ ಎರಡು ತಳಿಗಳನ್ನು ಮತ್ತು ಎರಡು ಹೈಬ್ರಿಡ್‌ಗಳನ್ನು ಬಿಡುಗಡೆ ಮಾಡಿದ್ದೇವೆ.

ಡಿ.ಹೆಚ್. ಶಂಕರಮೂರ್ತಿ: ಈ ವಿಷಯದ ಬಗ್ಗೆ ತಾವು ಉಲ್ಲೇಖ ಮಾಡಿದರೆ, ಇಡೀ ರಾಜ್ಯದ ರೈತರಿಗೆ ಒಂದು ಸಂದೇಶ ಹೋಗುತ್ತದೆ. ಈ ಹೈಬ್ರಿಡ್ ಭತ್ತ ನಾವು ಬೆಳೆದಿದ್ದೇವೆ. ಅದರಿಂದ ಇಷ್ಟು ಉತ್ಪತ್ತಿ ಜಾಸ್ತಿ ಆಗಿದೆ. ಬಂದು ನೋಡಿ ಎಂದು ತಾವೊಂದು ಪ್ರಚಾರವನ್ನು ಮಾಡಿದರೆ, ಇಡೀ ರಾಜ್ಯದ ಜನತೆಗೆ ಉಲ್ಲೇಖ ಮಾಡಿದರೆ ಅವರಿಗೆ ಸಂದೇಶ ಹೋಗುತ್ತದೆ.

ಸಿ. ಬೈರೇಗೌಡ: ಕರ್ನಾಟಕದಲ್ಲಿ ಹೈಬ್ರಿಡ್ ಒಂದು ಹಾಗೂ ಎರಡು ಎಂಬ ಎರಡು ತಳಿಗಳನ್ನು ನಾವು ಬಿಟ್ಟಿದ್ದೇವೆ. ಅದರಲ್ಲಿ ಸ್ವಲ್ಪ ಅಡೆತಡೆಗಳು ಇವೆ. ಆದುದರಿಂದ ಅದನ್ನು ವ್ಯಾಪಕವಾದ ರೀತಿಯಲ್ಲಿ ಹೆಚ್ಚು ವಿಸ್ತೀರ್ಣದಲ್ಲಿ ಪ್ರಚಾರಕ್ಕೆ ಬಿಟ್ಟಿಲ್ಲ. ಅದನ್ನು ಸರಿಪಡಿಸತಕ್ಕ ಪ್ರಯತ್ನದಲ್ಲಿ ನಮ್ಮ ವಿಜ್ಞಾನಿಗಳು ತೊಡಗಿದ್ದಾರೆ ಎನ್ನುವುದನ್ನು ಬಹಳ ಹೆಮ್ಮೆಯಿಂದ ಹೇಳಲಿಕ್ಕೆ ಇಷ್ಟಪಡುತ್ತೇನೆ. ಈ ಸಂಕರ ಜಾತಿಯ ಭತ್ತವನ್ನು ಬೆಳೆಯುವುದರಲ್ಲಿ ನಾವು ಮುಂಚೂಣಿಯಲ್ಲಿದ್ದೇವೆ.

ಹೆಚ್.ಕೆ. ಪಾಟೀಲ್ (ಪ್ರತಿಪಕ್ಷದ ನಾಯಕರು): ಈ ಹೈಬ್ರಿಡ್‌ನಲ್ಲಿ ಮಿಶ್ರವಾಗುವುದಿಲ್ಲ ಎನ್ನುವ ಮಾತನ್ನು ಹೇಳಿದ್ದೀರಿ. ಅದರಲ್ಲೂ ಇವತ್ತು ಆಗುತ್ತದೆ. ಜವಹಾರ್ ಬೀಜ ಇರುತ್ತದಲ್ಲಾ, ಅದರಲ್ಲಿ ಮಿಶ್ರವಾಗುವುದಿಲ್ಲ. ಈ ಹೈಬ್ರಿಡ್ ಬೀಜದಲ್ಲೇ ಮಿಶ್ರ ಆಗುವುದು. ನಮ್ಮ ಹತ್ತಿ ಬೀಜವನ್ನು ತೆಗೆದುಕೊಳ್ಳಿ. ಇವತ್ತು ಟಿ.ಸಿ.ಹೆಚ್. ಹತ್ತಿ ಎಂದು ಹೇಳಿ ಅದರಲ್ಲಿ ಜೈಧರ ಸೇರಿಸುವುದು, ಲಕ್ಷ್ಮಿಯನ್ನು ಸೇರಿಸುವುದು ಹೆಚ್-4 ಸೇರಿಸುವುದು, ಸಿಓ-2 ಸೇರಿಸುವುದು, ಈ ಮಿಶ್ರ ಇದೆಯಲ್ಲಾ, ಇದು ವಾಣಿಜ್ಯ ಬೆಳೆಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಆಗುತ್ತಿದೆ. ವಾಣಿಜ್ಯ ಬೆಳೆಗಳ ಹೈಬ್ರಿಡ್ ವೆರೈಟಿಗಳಲ್ಲೇ ಮಿಶ್ರಣ ಜಾಸ್ತಿಯಾಗಿರುವುದು. ಆ ಕಾರಣದಿಂದ ರೈತ ಇವತ್ತು ಬಹಳಷ್ಟು ತೊಂದರೆ ಪಡುತ್ತಿದ್ದಾನೆ.

ಡಾ: ಎಂ.ಪಿ. ನಾಡಗೌಡ: ಆದರೆ ಜನ, ಜವಾರ್ ಜೋಳ ಬೇಕು. ಹೈಬ್ರಿಡ್ ಬೇಡ ಎಂದು ಹೇಳುವುದು ಇದೆ. ನಾಟಿ ಕೋಳಿ ಬೇಕು, ನಾಟಿ ತತ್ತಿ ಬೇಕು ಎನ್ನುತ್ತಾರೆ. ಅದಕ್ಕೆ ಏನು ಹೇಳುತ್ತೀರಿ ನೀವು?

ಸಿ. ಬೈರೇಗೌಡ: ನಾಟಿ ಎನ್ನುವುದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತೇನೆ. 1997-98ನೇ ಸಾಲಿನಲ್ಲಿ ಸಂಕರ ಜಾತಿಯ 80 ಕ್ವಿಂಟಾಲ್ ಭತ್ತವನ್ನು ನಾವು ಉತ್ಪಾದನೆ ಮಾಡಿದ್ದೇವೆ. ಅದನ್ನೇ ಹೇಳಿದ್ದು, ನಾವು ಇನ್ನೂ ಪ್ರಥಮ ಹಂತದಲ್ಲಿ ಇದ್ದೇವೆಂದು.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ನಾಟಿ ವಸ್ತುಗಳು ಇನ್ನೂ ಶುದ್ಧತೆಯನ್ನು ಕಾಪಾಡಿಕೊಂಡಿವೆ ಎನ್ನುವ ಭಾವನೆ ಇದೆ. ಹೆಚ್ಚು ರಸಗೊಬ್ಬರಗಳನ್ನು ಹಾಕಿ ಬೆಳೆಯತಕ್ಕ ಫಸಲಿನಲ್ಲಿ ಅದರ ಗುಣಮಟ್ಟ ಕಡಿಮೆ ಆಗುತ್ತದೆ ಎನ್ನುವ ಸಾಮಾನ್ಯ ಒಂದು ಅಭಿಪ್ರಾಯ ಇದೆ. ನಾಟಿ ಬೆಳೆಯನ್ನು ನಾವು ಊಟಕ್ಕೆ ಇಟ್ಟುಕೊಳ್ಳುತ್ತೇವೆ. ಜನ ಸಂಖ್ಯೆಯನ್ನು ನಿಯಂತ್ರಣ ಮಾಡದ ಹೊರತು ಹೈಬ್ರಿಡೈನೇಷನ್ ಅನ್ನು ನಾವು ತ್ಯಜಿಸುವುದಕ್ಕೆ ಆಗುವುದಿಲ್ಲ. ಅದು ಅನಿವಾರ್ಯ ನಮಗೆ. We have to hybridise. Population control must also be cmmensurate with that. ಚೈನಾದಲ್ಲಿ ಒಂದು ಮಗುವಿಗಿಂತ ಹೆಚ್ಚಿಗೆ ಮಕ್ಕಳು ಆಗುವ ಹಾಗೆ ಇಲ್ಲ.

(ವಿಧಾನ ಪರಿಷತ್ ಕಲಾಪ ಆಗಸ್ಟ್ 21, 1997)

## ಸಿಆರ್ಇ - ಈ ವಿಭಾಗವನ್ನು ಮತ್ತಷ್ಟು ಬಲಪಡಿಸೋಣ

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಸಭಾಪತಿಯವರೇ, ರಾಜ್ಯದಲ್ಲಿ ಅಪರಾಧಗಳ ಸಂಖ್ಯೆ ಜಾಸ್ತಿಯಾಗುತ್ತಿದೆ. There is general increase in crimes ಇದಕ್ಕೆ ಎರಡು ಕಾರಣಗಳು ಇವೆ. ಪಕ್ಕದ ರಾಜ್ಯಗಳಲ್ಲಿರತಕ್ಕ ಪೀಪಲ್ಸ್ ವಾರ್ ಗ್ರೂಪ್, ಎಲ್‌ಟಿಟಿಇ ಇರಬಹುದು. ಅವರು ಏನು ಮಾಡುತ್ತಾರೆಂದರೆ ನಮ್ಮಲ್ಲಿಗೆ ಸುಲಭವಾಗಿ ನುಸುಳಿಕೊಳ್ಳುತ್ತಾರೆ. ಗಡಿ ಪ್ರದೇಶಗಳಲ್ಲಿ ಕಂಡು ಬರುವ ಈ ಸಮಸ್ಯೆ ಎದುರಿಸಲು ಒಂದು ಸಮೀಕ್ಷೆ ಮಾಡುವುದಕ್ಕೋಸ್ಕರ ಒಂದು ಉನ್ನತ ಮಟ್ಟದ ಅಧಿಕಾರಿಗಳ ಸಮಿತಿ ಮಾಡಿದ್ದೇವೆ. ಸಮೀಕ್ಷೆ ಸಮಿತಿ ಪ್ರಕಾರ ಈ ರಾಜ್ಯಗಳಲ್ಲಿ ಕೆಲವು ಸಾಮಾಜಿಕ ಸುಧಾರಣೆಗಳನ್ನು ಮಾಡದೆ ಇದ್ದರೆ ಈಗ ಪೊಲೀಸ್ ಸ್ಟೇಷನ್, ಹಾಸ್ಪಿಟೆಲ್ಸ್, ಸ್ಕೂಲ್ ರೋಡ್ಸ್, ಇವುಗಳನ್ನು ಇಂಪ್ರೂವ್ ಮಾಡಿದರೆ ಬೇರೆಯವರ ಹಾವಳಿ ಹೆಚ್ಚುತ್ತದೆ. ಇದನ್ನು ಸರ್ಕಾರ ಗಮನದಲ್ಲಿಟ್ಟುಕೊಂಡಿದೆ. ಇದನ್ನು ಪಕ್ಕದಲ್ಲಿರುವ ರಾಜ್ಯಗಳಿಗೂ ಕೂಡ ನಾವು ತಿಳಿಸಿದ್ದೇವೆ.

Most of the dacoits are from other States. ದಾಂದಲೆ ಮಾಡಿ ಹೋಗಿ ಬಿಡುತ್ತಾರೆ, ಇದಕ್ಕೆ ಹದ್ದು ಬಸ್ತು ಬೇಕು, border safeguard, ಮಾಡಬೇಕು.

ಮತ್ತೊಂದು ಒಳಗಡೆ ಇರತಕ್ಕ ದಲಿತರ ಮೇಲಾಗಲಿ ಅಥವಾ ಇತರರ ಮೇಲಾಗಲಿ ಅಂದರೆ ದಲಿತ ಮಹಿಳೆಯ ಮೇಲೆ ನಡೆದರೆ ಮಾತ್ರ ಅದು ಅತ್ಯಾಚಾರ ಎಂದಲ್ಲ, ಯಾವ ಮಹಿಳೆಯ ಮೇಲೆ ಅತ್ಯಾಚಾರ ನಡೆದರೂ ಅದು ಅತ್ಯಾಚಾರವೇ. ಇದರಲ್ಲಿ ದುರ್ಬಲ ವರ್ಗದವರು ಇರಬಹುದು, ಕೆಲವೊಂದು ಸಾರಿ ಉದಾಹರಣೆಗೆ ಶಹಾಪುರದಲ್ಲಿ ಘಟನೆ ನಡೆಯಿತು, ಅಲ್ಲಿ ಒಬ್ಬ ದಲಿತ ಮೇಲ್ಜಾತಿಯ ಹುಡುಗಿಯನ್ನು ಚುಡಾಯಿಸಿದನೆಂದು ಈ ಘಟನೆ ನಡೆಯಿತು, ಇದಕ್ಕೆ ನಾವು ಅವರು ಕಾರಣರು ಇವರು ಕಾರಣರು ಎಂದು ಹೇಳದೆ. ಮಾನ್ಯ, ನರಸಿಂಹಮೂರ್ತಿಯವರು ಹೇಳಿದ ಹಾಗೆ, ಸಿಆರ್‌ಇ ಗೆ ನಾವು ಹೆಚ್ಚಿನ ಅಧಿಕಾರ ಕೊಡಬೇಕು, ಆದರೆ, ಈಗ ಇರುವ ಪವರ್‌ನಲ್ಲೇ ಸಾಕಷ್ಟು ಅಪರೇಟ್ ಮಾಡಬಹುದು.

ಟಿ.ಎನ್. ನರಸಿಂಹಮೂರ್ತಿ: ಈಗ ಅದು ವಿಷ ಇಲ್ಲದಂತಹ ಹಾವಾಗಿದೆ. ನೀವು ಬೇಕಾದರೆ ನೋಡಿ.

ಜೆ.ಹೆಚ್. ಪಟೇಲ್: ಆಯಿತು; ಈಗ ಒಂದು ಮಾಡಿ. Civil Rights Enforcement Directorate ಏನು ಇದೆ, ಅದಕ್ಕೆ ಈ ಅಪರಾಧಗಳನ್ನು ತಡೆಗಟ್ಟುವುದಕ್ಕೆ ಬೇಕಾದ ಎಲ್ಲಾ ಅಧಿಕಾರ ಕೊಡುತ್ತೇವೆ.

ಹೆಚ್.ಕೆ. ಪಾಟೀಲ್: ಮಾನ್ಯ ಸಭಾಪತಿಯವರೆ, ತಾವು ಒಪ್ಪುವುದಾದರೆ ಹೊಸದಾಗಿ ನೀವು ಅಧಿಕಾರ ಕೊಡುವುದಲ್ಲ, ಈಗಾಗಲೇ ಸರ್ಕಾರ ದಿನಾಂಕ: 28.6.95 ರಂದು ನೋಟಿಫಿಕೇಷನ್ ಇಶೂ ಮಾಡಿ For prevention of and for coping with any offence under the said Act, for all cases under the said Act, ಅವರು ಏನೇನು ಪ್ರಾಸಿಕ್ಯೂಷನ್ ಮಾಡಬಹುದು, ಎಲ್ಲಾ ವಿವರಗಳನ್ನು ಕೊಟ್ಟು ಗೃಹ ಇಲಾಖೆಯವರು ಒಂದು ನೋಟಿಫಿಕೇಷನ್ ಈಗಾಗಲೇ ಹೊರಡಿಸಿದ್ದಾರೆ. ಈ ಹೊರಡಿಸಿದಂತಹ ನೋಟಿಫಿಕೇಷನ್ ಇನ್ನೂ ಅನುಷ್ಠಾನಕ್ಕೆ ಬಂದಿಲ್ಲ; This is in paper. ಆದುದರಿಂದ ಇದಕ್ಕೆ ನೀವು ಅನುಷ್ಠಾನ ಮಾಡಿ ಇದರ ಉಪಯೋಗ ಮಾಡಿಕೊಂಡು ಚುರುಕಾಗಿ ಸಿಆರ್‌ಇ ಕೆಲಸ ಮಾಡಬೇಕು ಎಂದು ಹೇಳಿ ಇದನ್ನು ತಾತ್ವಿಕವಾಗಿ ಒಪ್ಪಿ ಸರ್ಕಾರ ಆಜ್ಞೆ ಹೊರಡಿಸಿರುವುದರಿಂದ, ಇದು ಅನುಷ್ಠಾನಕ್ಕೆ ಬರುವುದಕ್ಕೆ ತಮ್ಮಿಂದ ಒಂದು ನಿರ್ದೇಶನ ಹೋಗಬೇಕು.

ಜೆ.ಹೆಚ್. ಪಟೇಲ್: ಮಾನ್ಯ ಸಭಾಪತಿಯವರೆ, ಇದಕ್ಕೆ ನಮ್ಮ ಅಭ್ಯಂತರ ಇಲ್ಲ, ಕೆಲವು ಸಾರಿ ಇದು ಬಹಳ ದುರುಪಯೋಗವಾಗಿರತಕ್ಕಂಥಾದ್ದು ವಿರೋಧಪಕ್ಷದ ನಾಯಕರ ಗಮನಕ್ಕೆ ಬಂದಿರಬಹುದು. I am one with you. We should prevent. We should protect these people.

ನಾನು ಹೇಳುವುದೇನೆಂದರೆ, ದಲಿತರಿಗೆ ಬೇರೆ ಇವರಿಗೆ ಬೇರೆ ಎಂದು ಮಾಡುವುದಕ್ಕೆ ಹೋಗಬಾರದು, ದಲಿತರಿಗೆ ಈಗ ಏನು ಸಿಆರ್‌ಇ ಡೈರೆಕ್ಟರೇಟ್‌ಗೆ ಹೆಚ್ಚಿನ ಅಧಿಕಾರ ಕೊಡಬೇಕು ಅದರ ಬಗ್ಗೆ ನೋಟಿಫಿಕೇಷನ್ ಆಗಿದೆ, ಅದನ್ನು ಸರ್ಕಾರಿ ನೋಟಿಫಿಕೇಷನ್ ಪ್ರಕಾರ ನಾವು

ಕೊಡುತ್ತೇವೆ. But general conditions, we have to see. ನಾನು ಹೇಳುವುದೇನೆಂದರೆ ರಾಜ್ಯದಲ್ಲಿರತಕ್ಕ ಪ್ರಸ್ತುತ ಪರಿಸ್ಥಿತಿಯಲ್ಲಿ ಬಾರ್ಡರ್ ಇದರೊಳಗೆ ಬೆಂಗಳೂರಿನ ಸುತ್ತಮುತ್ತ ಗಡಿಜಿಲ್ಲೆಗಳಲ್ಲಿ ಆಗತಕ್ಕಂಥದ್ದಕ್ಕೆ ಈ ಸರ್ಕಾರ ಏನೇನು ಮೆಷರ್ಸ್ ತೆಗೆದುಕೊಳ್ಳಬೇಕೆಂದು ಮಾಡಿದ್ದೇವೆ, ಅದನ್ನು ಇನ್ನೂ ಬಿಗಿಗೊಳಿಸುತ್ತೇವೆ.

(ವಿಧಾನ ಪರಿಷತ್ ಕಲಾಪ)

## "ಕುಟ್ಟಿ ಕುಂದಾಪುರಕ್ಕೆ ಹೋದಂತೆ" ಧರಣಿ - ಸಭಾತ್ಯಾಗ

**ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):** ನಾನು ಚರ್ಚೆಯನ್ನು ಕೇಳಿದೆ, ಈಗ ಮುಖ್ಯವಾಗಿ ಇರತಕ್ಕಂಥ ಗೊಂದಲವೇನು? ಅದನ್ನು ನೀವು ರಾಜಕೀಯವಾಗಿಯಾದರೂ ಹೇಳಿ ಅಥವಾ ಸಾಂಸ್ಕೃತಿಕವಾಗಿಯಾದರೂ ಹೇಳಿ. ಅದಕ್ಕೆಲ್ಲಾ ನಾನು ತಲೆಕೆಡಿಸಿಕೊಳ್ಳುವುದಿಲ್ಲ. ಮಾನ್ಯ ಉಪಾಧ್ಯಕ್ಷರೇ, ಆ ಕಾನೂನಿನಲ್ಲಿ ಅಂದರೆ ಪಂಚಾಯತ್ ರಾಜ್ ಕಾಯ್ದೆಯಲ್ಲಿ ಕೆಲವು ತಿದ್ದುಪಡಿಗಳನ್ನು ತರುವುದು ಅವಶ್ಯಕವೆಂದು ನಾವು ಮನಗಂಡಿದ್ದೇವೆ. ಅದನ್ನು ನೀವು ಮೊದಲೇ ಏಕೆ ತರಲಿಲ್ಲ ಎಂದು ಕೇಳುತ್ತಿದ್ದೀರಿ. ಅದನ್ನು ನಾವು ಮೊದಲೇ ಏಕೆ ತರಲಿಲ್ಲ ಎಂದರೆ, ಗ್ರಾಮ ಪಂಚಾಯಿತಿಗಳ ಅವಧಿ ಅಥವಾ ಟೆನ್ಯೂರ್ ಮುಗಿಯುವುದಕ್ಕಿಂತ ಮುಂಚಿತವಾಗಿ ತರುವುದಕ್ಕಿಂತ ಟೆನ್ಯೂರ್ ಮುಗಿಯುವ ಹೊತ್ತಿಗೆ ತಂದು ನಂತರ ಚುನಾವಣೆ ಮಾಡಿದರೆ ಸರಿಯಾಗುತ್ತದೆ, ಒಂದು ವೇಳೆ ಹಳೆಯ ಕಾನೂನಿನ ಪ್ರಕಾರವೇ ಚುನಾವಣೆ ನಡೆದರೆ ಮತ್ತೆ ಐದು ವರ್ಷಗಳ ಕಾಲ ಏನೂ ಮಾಡುವುದಕ್ಕಾಗುವುದಿಲ್ಲ ಎನ್ನುವ ಕಾನೂನಿನ ಒಂದು ಸಂದಿಗ್ಧತೆಯ ಕಾರಣದಿಂದಲೇ ಸುಗ್ರೀವಾಜ್ಞೆ ಮೂಲಕ ನಾವು ಈ ತಿದ್ದುಪಡಿಯನ್ನು ತಂದೆವು.

ಈಗ ಇರತಕ್ಕ ಪಂಚಾಯತ್ ರಾಜ್ ವ್ಯವಸ್ಥೆ ಸರಿ ಇಲ್ಲವೆಂದು ಸರ್ಕಾರದ ನಿಲುವಾಗಿತ್ತು. ಅದಕ್ಕಾಗಿಯೇ ಈ ಸುಗ್ರಿವಾಜ್ಞೆ ಹೊರಡಿಸಬೇಕಾಯಿತು. ಚುನಾವಣೆ ನಡೆಸಬೇಕೆಂಬ ದೊಡ್ಡ ಜಿಜ್ಞಾಸೆ ಈಗ ಇದೆ. ಆದರೆ ನೀವು ನಾವು ಚುನಾವಣೆಗೆ ಹೆದರಿಕೊಂಡಿದ್ದೇವೆ ಎಂದು ಹೇಳುತ್ತಿದ್ದೀರಿ. ನಮ್ಮ ಪಕ್ಷ ಚುನಾವಣೆಗೆ ಹೆದರುವಂತಹ ಪಕ್ಷವೂ ಅಲ್ಲ. ನಾವು ಚುನಾವಣೆಗೆ ಹೆದರುವವರೂ ಅಲ್ಲ. ಈಗ ಚುನಾವಣೆ ನಡೆಸಲು ನಿಮಗ್ಯಾಕೆ ಅಷ್ಟು ಅವಸರ? ಆಕಸ್ಮಾತ್ ಈಗಲೇ ಉಚ್ಚ ನ್ಯಾಯಾಲಯದವರು ಹೊಸ ಕಾನೂನಿನ ಅಡಿಯಲ್ಲಿ ಚುನಾವಣೆ ನಡೆಸಿ ಎಂದು ನಿರ್ದೇಶನ ನೀಡಿದ್ದರೆ ನಾವು ಚುನಾವಣೆಗಳನ್ನು ನಡೆಸಲು ತಯಾರಿದ್ದೆವು. ಚುನಾವಣೆ ಮಾಡುವುದಕ್ಕೆ ನಾವು ತಯಾರಿದ್ದೇವೆ. ಸುಪ್ರೀಂ ಕೋರ್ಟ್‌ನವರು ಏನಾದರೂ ಹೊಸ ಕಾನೂನಿನಡಿಯಲ್ಲಿ ಚುನಾವಣೆ ಮಾಡಬೇಕು ಎಂದು ಹೇಳಿದರೆ ನಾವು ಚುನಾವಣೆ ಮಾಡುತ್ತೇವೆ. ಯಾವಾಗಲಾದರೂ ಸುಪ್ರೀಂ ಕೋರ್ಟ್ ಹೇಳಿದರೂ ಕೂಡ ಚುನಾವಣೆ ಮಾಡುತ್ತೇವೆ. ಸಂವಿಧಾನಾತ್ಮಕ ಕಟ್ಟಾಜ್ಞೆಯನ್ನು ಪಾಲಿಸಬೇಕು ಎಂದು ನ್ಯಾಯಾಲಯವು ಹೇಳಿದೆ. A statute accepted by a legislature cannot overtake constitutional provisions amendment of certain sections of the Act, not constitution.

ಸಂವಿಧಾನವನ್ನು ತಿದ್ದುಪಡಿ ಮಾಡಲು ಈ ಸದನಕ್ಕೆ ಅಧಿಕಾರ ಇಲ್ಲ. ಸಂವಿಧಾನಕ್ಕೆ ತಿದ್ದುಪಡಿ ಮಾಡಲು ಲೋಕಸಭೆಗೆ ಅಧಿಕಾರ ಇದೆ. ಅದು ಯಾರಿಗೆ ಗೊತ್ತಿಲ್ಲ? ಅದನ್ನೇ ಪುನಃ ಪುನಃ ಏಕೆ ಹೇಳಬೇಕು? ಚುನಾವಣಾ ಆಯೋಗದವರು ಚುನಾವಣಾ ವೇಳಾ ಪಟ್ಟಿಯನ್ನು ಪ್ರಕಟಿಸಿರುವುದು 'ಕುಟ್ಟಿ ಕುಂದಾಪುರಕ್ಕೆ ಹೋದ' ಎಂಬಂತೆ ಆಗಿದೆ.

ಮಲ್ಲಿಕಾರ್ಜುನ ಖರ್ಗೆ: ಕುಟ್ಟಿ ಕುಂದಾಪುರಕ್ಕೆ ಹೋದ ಎಂದು ಏಕೆ ಹೇಳಿದಿರಿ?

ಜೆ.ಹೆಚ್. ಪಟೇಲ್: ಕುಟ್ಟಿ ಕುಂದಾಪುರಕ್ಕೆ ಏಕೆ ಹೋದ ಎಂಬುದನ್ನು ಹೇಳುತ್ತೇನೆ. ಮನೆಯ ಯಜಮಾನ ತನ್ನ ಹೆಂಡತಿಯ ಜೊತೆ ಬೆಳಿಗ್ಗೆ ಕುಟ್ಟಿಯನ್ನು ಕುಂದಾಪುರಕ್ಕೆ ಕಳುಹಿಸಬೇಕು ಕಣೆ ಎಂದು ಹೇಳಿದನಂತೆ. ಆದರೆ ಕುಟ್ಟಿ ಇದನ್ನು ಕೇಳಿಸಿಕೊಂಡು ಬೆಳಿಗ್ಗೆ ಏಕೆ ಹೋಗಬೇಕು ರಾತ್ರಿಯೇ ಹೋಗಿ ಬಂದುಬಿಡೋಣ ಎಂದು ರಾತ್ರಿಯೇ ಕುಂದಾಪುರಕ್ಕೆ ಹೋಗಿಬಂದುಬಿಟ್ಟನಂತೆ. ಆಗ ಯಜಮಾನ ಕುಟ್ಟಿಗೆ ಬೈಯ್ದು ಇಲ್ಲಿಯವರೆಗೆ ಎಲ್ಲಿಗೆ ಹೋಗಿದ್ದಿಯೋ ಎಂದಾಗ ನೀವು ನನ್ನನ್ನು ಬೆಳಿಗ್ಗೆ ಕುಂದಾಪುರಕ್ಕೆ ಕಳುಹಿಸಬೇಕು ಎಂದು ಮಾತನಾಡಿಕೊಳ್ಳುತ್ತಿದ್ದಿರಲ್ಲಾ, ಅದಕ್ಕೆ ನಾನು ರಾತ್ರಿಯೇ ಹೋಗಿಬಂದುಬಿಟ್ಟೆ ಎಂದನಂತೆ. ಆ ರೀತಿಯಲ್ಲಿ ಹೈಕೋರ್ಟ್ ಇನ್ನು 6 ವಾರಗಳಲ್ಲಿ ಚುನಾವಣೆ ಮಾಡಬೇಕು ಎಂದು ಹೇಳಿಬಿಟ್ಟಿತು. ಚುನಾವಣಾ ಕಮಿಷನ್ ಅದಕ್ಕೆ ತಕ್ಕಂತೆ ಇವೊತ್ತೇ ನೋಟಿಫಿಕೇಷನ್ ಮಾಡಿದೆ, 1ನೇ ತಾರೀಖು ನೋಟಿಫಿಕೇಷನ್ ಇಶ್ಯೂ ಮಾಡುವುದನ್ನು ಪತ್ರಿಕೆಗೆ ಇವೊತ್ತು ಕೊಡುತ್ತಾರೆ.

ಮಾನ್ಯ ಉಪಾಧ್ಯಕ್ಷರೇ ಇವೆಲ್ಲಾ ಸಂಸ್ಥೆಗಳಿಗೂ ಒಂದು ಸ್ಯಾಂಕ್ಟಿಟಿ ಬೇಕು, ಒಂದು ಜವಾಬ್ದಾರಿ ಬೇಕು. ನಾವು ಸುಪ್ರೀಂ ಕೋರ್ಟ್‌ನವರನ್ನು ಇದರ ಬಗ್ಗೆ ಕೇಳಿ ಇದು ಕಾನೂನಿನ ಪ್ರಕಾರ ಸರಿ ಇದೆಯೇ ಎಂದು ಕೇಳುತ್ತೇವೆ. ಸುಪ್ರೀಂ ಕೋರ್ಟ್‌ನವರು ನಮಗೆ ಏನಾದರೂ ಹೈಕೋರ್ಟ್‌ನವರು ಹೇಳಿದ್ದೇ ಸರಿ ಇದೆಯೆಂದು ಹೇಳಿದರೆ ನಾವು ಚುನಾವಣೆ ಮಾಡುತ್ತೇವೆ. ಚುನಾವಣೆಯನ್ನು ಒಂದು ವಾರ ಬಿಟ್ಟೋ, ಪಂಚಾಯಿತಿಗಳು ಚೆನ್ನಾಗಿ ಕೆಲಸ ಮಾಡಬೇಕು ಎನ್ನುವ ಇಚ್ಛೆ ನಮಗೆ ಇಲ್ಲವೆ? ಇದನ್ನು ತಂದವರು ಮತ್ತು ಅನುಷ್ಠಾನಕ್ಕೆ ತಂದವರೇ ನಾವು. ಇದನ್ನು ಉಳಿಸಿಕೊಳ್ಳಬೇಕು ಎನ್ನುವ ಇಚ್ಛೆಯೂ ನಮಗಿದೆ. ನೀವು ಅವುಗಳನ್ನು ಏನೇನು ಮಾಡಿ ತಿದ್ದಬೇಕೋ ಅದನ್ನೆಲ್ಲಾ ಮಾಡಿ ಅವುಗಳ ಮೂಗನ್ನು ಒಂದು ಕಡೆ ತಿರುಗಿಸಿ, ಕಿವಿ ಒಂದು ಕಡೆ ತಿರುಗಿಸಿದಿರಿ.

ನಾನು ಒಂದು ಮಾತನ್ನು ಹೇಳಲಪೇಕ್ಷಿಸುತ್ತೇನೆ. ಇದನ್ನು ತಮಾಷೆ ಎಂದು ತಿಳಿದುಕೊಳ್ಳಬೇಡಿ.

ನಂಜೇಗೌಡರೇ, 18 ವರ್ಷದ ಒಂದು ಹುಡುಗನ ಜೊತೆ ಒಂದು ಹುಡುಗಿ ಮದುವೆ ಮಾಡಿದರೆ ಸಂಸಾರವಾಗುತ್ತದೆ. ಅದನ್ನು ಬಿಟ್ಟು 9 ವರ್ಷದ ಇಬ್ಬರು ಹುಡುಗಿಯರಿಗೆ 12 ವರ್ಷದ ಇಬ್ಬರು ಹುಡುಗರೊಂದಿಗೆ ಮದುವೆ ಮಾಡಿದರೆ ಸಂಸಾರವಾಗುತ್ತದೆಯೇ? ಆ ರೀತಿಯಲ್ಲಿ ಇದನ್ನು ಮಾಡಬಾರದು. ಏಕೆಂದರೆ ಕಾನೂನು ಎಂಬುದು ಅಪ್ಲಿಕಬಲ್ ಆಗಿರಬೇಕು.

ರಾಜ್ಯದ ಜನರಿಗೆ ಅದರಿಂದ ಅನುಕೂಲವಾಗಬೇಕು ಎಂದು ನಾವು ಹೇಳಿದರೆ ಇಲ್ಲ, 9 ಮತ್ತು 9 ವರ್ಷದ ಹುಡುಗಿಯರು ಇದ್ದಾರೆ, ಅವರಿಗೆ 12 ಮತ್ತು 12 ವರ್ಷದ ಹುಡುಗರು ಇರುವುದರಿಂದ ಅವರಿಗೆ ಮದುವೆ ಮಾಡೋಣವೆಂದರೆ ಹೇಗೆ?

ಮಾನ್ಯ ಅಧ್ಯಕ್ಷರೇ, ಇನ್ನು ಇದರ ಮೇಲೆ ಚರ್ಚೆ ಬೇಡ. ಕಾಂಗ್ರೆಸ್‌ನವರು ಧರಣಿ ಕುಳಿತಿದ್ದರು. ಧರಣಿ ಮಂಡಲ ಮಧ್ಯದೊಳಗೆ ಎನ್ನುವ ಹಾಗೆ ಅವರು ಧರಣಿ ಕುಳಿತಿದ್ದರು. ವಿಷಯವೇನೇ ಇರಲಿ ಅವರು ಧರಣಿ ಕುಳಿತುಕೊಳ್ಳುತ್ತಾರೆ. ಧರಣಿ ಕೂರುವುದು ಎಂದರೆ ನೆಲ ಹಿಡಿದು ಕೂಡುವುದು ಎಂದು ಅರ್ಥ. ಧರಣಿ ಸಂಸ್ಕೃತ ಶಬ್ದ. ಏನಾದರೂ ಹೇಳಿದರೆ ಸಾಕು ಅವರು ನೆಲ ಹಿಡಿದು ಬಿಡುತ್ತಾರೆ. ನಾವೇನು ಮಾಡುವುದು.

ಮಲ್ಲಿಕಾರ್ಜುನ ಖರ್ಗೆ: ನೀವೇನು ಮಾಡುತ್ತೀರಿ, ನೀವು ಯಾವಾಗಲೂ ಮೇಲೇ ಇರುತ್ತೀರಿ.

ಜೆ.ಹೆಚ್. ಪಟೇಲ್: ಈ ವಿಷಯವನ್ನೇ ತೀರ ಅತಿರೇಕಕ್ಕೆ ಒಯ್ಯುವುದು ಬೇಡವೆಂದು ನಾನು ಹೇಳುತ್ತೇನೆ.

ಮಲ್ಲಿಕಾರ್ಜುನ ಖರ್ಗೆ: ಮಾನ್ಯ ಅಧ್ಯಕ್ಷರೇ, ಮುಖ್ಯಮಂತ್ರಿಗಳು ಯಥಾಪ್ರಕಾರ ಕೆಲವು ಕಥೆಗಳನ್ನು ಹೇಳುವ ಮುಖಾಂತರ ಇದನ್ನು ಮರೆಮಾಚಬೇಕು ಎನ್ನುವ ಹಾಗೆ ಹೇಳುತ್ತಾರೆ. ಆದರೆ ಜಡ್ಜ್‌ಮೆಂಟ್ ನೀವು ಹೇಳುತ್ತಿಲ್ಲ. ಇವತ್ತು ನೀವು ಮಾತನಾಡಿದ ಧಾಟಿ ನೋಡಿದರೆ ಎಲೆಕ್ಷನ್ ಕಮಿಷನ್ ಮೇಲೆ ಕೂಡ ಕೆಂಡ ಕಾರುತ್ತಿದ್ದೀರಿ. ಯಾರು ಇವರು, ಯಾರಿಗೆ ಹೇಳುತ್ತಾರೆ ಈ ರೀತಿ ಇದೆ. ನೀವು ಹೇಳಿದ ಉದಾಹರಣೆ ನೀವು ತೋರಿದ ಹಾವಭಾವ ನೋಡಿದರೆ ಎಷ್ಟೊಂದು ಸಿಟ್ಟು ಈ ಒಂದು ಎಲೆಕ್ಷನ್ ಕಮಿಷನ್ ಮೇಲೆ ಇದೆ ಎನ್ನುವುದನ್ನು ತಾವು ತೋರಿಸಿಕೊಟ್ಟಿರಿ. ಅವರ ಇಂಡಿಪೆಂಡೆನ್ಸ್‌ಗೂ ನೀವು ಚಾಲೆಂಜ್ ಮಾಡುವ ರೀತಿಯಲ್ಲಿ ಮಾತನಾಡಿದಿರಿ.

ಜೆ.ಹೆಚ್. ಪಟೇಲ್: ನಾನು ಎಲೆಕ್ಷನ್ ಕಮಿಷನ್ ಬಗ್ಗೆ ಯಾವುದೇ ರೀತಿಯಾದ ಲೇವಡಿ ಮಾಡಲಿಲ್ಲ. ಹಗುರವಾಗಿ ಹೇಳಲಿಲ್ಲ. ಹೈಕೋರ್ಟ್ ಹೇಳಿದ್ದನ್ನು ಹೇಗೆ ಮಾಡಿದರು ಎನ್ನುವುದಕ್ಕೆ ದಕ್ಷಿಣ ಕನ್ನಡದ ಒಂದು ಉದಾಹರಣೆಯನ್ನು ಕೊಟ್ಟೆ. ಮನೆ ಯಜಮಾನ, ಕುಟ್ಟಿ ಎಂದರೆ ಮನೆಯಲ್ಲಿ ಕೆಲಸ ಮಾಡುವವನು, ಅವನನ್ನು ಕುಂದಾಪುರಕ್ಕೆ ಕಳುಹಿಸಬೇಕೆಂದು ಶಿವಮೊಗ್ಗೆಯಲ್ಲಿ ಮಾತನಾಡಿದ. ಏಕೆ ಕಳುಹಿಸಬೇಕೆಂದು ಅವರಿಗೆ ಗೊತ್ತಿಲ್ಲ. ರಾತ್ರೋರಾತ್ರಿ ಹೋದ. ಹಾಗೇ ವಾಪಸ್ ಬಂದ. ಯಜಮಾನ ಎಲ್ಲಿ ಹೋಗಿದ್ದೆ ಎಂದರೆ ನೀವು ಹೇಳಿದಿರಲ್ಲಾ ಕುಂದಾಪುರಕ್ಕೆ ಹೋಗಬೇಕೆಂದು ಅದಕ್ಕೆ ಹೋಗಿದ್ದೆ ಎಂದ. ಆದುದರಿಂದ ಎಲೆಕ್ಷನ್ ಕಮಿಷನ್‌ರವರು ಬಹಳ ಒಬೇಡಿಯಂಟ್ ಆಗಿ ಕುಟ್ಟಿ ಅವರ ಯಜಮಾನ ಹೇಳಿದ ಹಾಗೆ ಕೇಳಿದ್ದಾರೆ ಎಂದು ಹೇಳಿದೆ. ಅದು ಲೇವಡಿ ಮಾಡಿದ ಹಾಗೆ ಆಯಿತೇ?

ಮಲ್ಲಿಕಾರ್ಜುನ ಖರ್ಗೆ: ಎಂದರೆ ಆ ನೌಕರನಿಗೆ ಬುದ್ಧಿ ಇರಲಿಲ್ಲ, ಹೀಗೆ ಮಾಡಿದ ಇವರೂ ಈ ರೀತಿ ಮಾಡಿದ್ದಾರೆ ಎಂದು ಅರ್ಥ ಬರುವ ರೀತಿಯಲ್ಲಿ ಮಾತನಾಡಿದ್ದಾರೆ. ನೀವು ಹಿಂದಕ್ಕೆ ಹೋಗುತ್ತಿದ್ದೀರಿ? ಒಳಜಗಳಗಳಿಂದ ಕಚ್ಚಾಟದಿಂದ, ಇವತ್ತು ಎಲೆಕ್ಷನ್ ಫೇಸ್ ಮಾಡತಕ್ಕಂಥ ಧೈರ್ಯ ನಿಮಗೆ ಇಲ್ಲ. ಹೀಗಾಗಿ ಚುನಾವಣೆಯನ್ನು ಮುಂದಕ್ಕೆ ಹಾಕಬೇಕೆನ್ನುವ ಕುತಂತ್ರ ನಡೆದಿದೆ. ಕುತಂತ್ರ ಮಾಡತಕ್ಕಂಥ ಇವರ ಧೋರಣೆ ವಿರುದ್ಧ, ಪ್ರತಿಭಟನೆ ಮಾಡಿ ನಾವು ಹೊರಗೆ ಹೋಗುತ್ತಿದ್ದೇವೆ.

(ಈ ಹಂತದಲ್ಲಿ ವಿರೋಧ ಪಕ್ಷದ ನಾಯಕರಾದ ಶ್ರೀ ಮಲ್ಲಿಕಾರ್ಜುನ ಖರ್ಗೆಯವರು ಹಾಗೂ ಇತರ ಕಾಂಗ್ರೆಸ್ ಸದಸ್ಯರು ಸಭಾತ್ಯಾಗ ಮಾಡಿದರು)

(ವಿಧಾನ ಸಭೆ ಕಲಾಪ ಮಾರ್ಚಿ 22, 1999)

## ಹುಚ್ಚೂರಾಯಸ್ವಾಮಿ ರಥೋತ್ಸವವಾಗಿದೆ ಜನತಾ ಸರ್ಕಾರ

ಕೆ.ಹೆಚ್. ಶ್ರೀನಿವಾಸ: ಮಾನ್ಯ ಜೆ.ಹೆಚ್. ಪಟೇಲರ ಮಾತುಗಳು ಅರ್ಥಪೂರ್ಣವಾಗಿಯೂ ಇವೆ. ಚಂದವಾಗಿಯೂ ಇವೆ. ಅದೇನೋ ಸರಿ. ಆದರೆ ಅವರ ಚಿಂತನೆಗಳಿಗೆ ಖಚಿತವಾದ ಆಡಳಿತಾತ್ಮಕ ಸ್ವರೂಪವಿಲ್ಲ. ಬಡವರು ಅಂತಾರೆ, ಕೈಗಾರಿಕೆ ಅಂತಾರೆ, ಭ್ರಷ್ಟಾಚಾರ ನಿರ್ಮೂಲನ ಅಂತೀರಿ. ಸದಾಚಾರ ಅಂತೀರಿ. ನೀವು ಕಾಂಗ್ರೆಸ್ಸಿನವರ ತದ್ವಿರುದ್ಧ. ಕಾಂಗ್ರೆಸ್ಸಿನವರು 20ನೇ ಶತಮಾನ ಅಂದರೆ ನೀವು 19ನೇ ಶತಮಾನ ಅಂತೀರಿ. ಅವರು ಎಲೆಕ್ಟ್ರಾನಿಕ್ಸ್ ಎಂದರೆ ನೀವು ಎತ್ತಿನಗಾಡಿ ಅಂತೀರಿ. ಪವರ್‌ಲೂಮ್ಸ್ ಎಂದರೆ ಹ್ಯಾಂಡ್ ಲೂಂ ಅಂತೀರಿ. ಇಷ್ಟನ್ನು ಕಲಿತ ಹಾಗೆ ಕಾಣುತ್ತೇ ಹೊರತು ಇನ್ನೇನೂ ಕಲಿತಂತಿಲ್ಲ. ಮಾನ್ಯ ಜೆ.ಹೆಚ್. ಪಟೇಲರು ನೀವು ಲೋಹಿಯಾ ಬಗ್ಗೆ ಭಾಷಣ ಚೆನ್ನಾಗಿ ಮಾಡ್ತೀರಿ. ಇದರಲ್ಲಿ ನೀವೇ ಎತ್ತಿದಕ್ಕೆ. ನೀವು ಮಾಡಿದ್ದನ್ನು ನಾವು ಮಾಡುವುದಕ್ಕಾಗುವುದಿಲ್ಲ.

ಜೆ.ಹೆಚ್. ಪಟೇಲ್ (ಬೃಹತ್ ಕೈಗಾರಿಕೆ ಮಂತ್ರಿ): ಎಲ್ಲಾ ಮಾಡಿ ಬಿಟ್ಟ ಮೇಲೆ ಏನು ಹೇಳಿ ಏನು ತಾನೇ ಪ್ರಯೋಜನ?

ಕೆ.ಹೆಚ್. ಶ್ರೀನಿವಾಸ: ಮಾನ್ಯ ಜೆ.ಹೆಚ್. ಪಟೇಲರಿಗೆ ಕಥೆ ಎಂದರೆ ತುಂಬಾ ಇಷ್ಟ. ಆದುದರಿಂದ ಅವರಿಗೆ ಹಿಡಿಸುವಂತೆಯೇ ಅವರ ಆಡಳಿತ ಕುರಿತು ಒಂದು ಮಾತು ಹೇಳುತ್ತೇನೆ.

ಈ ಸರ್ಕಾರ ಹುಚ್ಚೂರಾಯನ ತೇರಾಗಿದೆ. ಇದು ಷಿಕಾರಿಪುರದ್ದು. ಮಾನ್ಯ ಯಡಿಯೂರಪ್ಪನವರಿಗೆ ಚೆನ್ನಾಗಿ ಗೊತ್ತಿದೆ. ಷಿಕಾರಿಪುರದಲ್ಲಿ ಹುಚ್ಚೂರಾಯನ ಜಾತ್ರೆ ನಡೆಯುತ್ತೆ. ಅಲ್ಲಿನ ರಥೋತ್ಸವದ ವೈಶಿಷ್ಟ್ಯ ಏನೆಂದರೆ, ರಥೋತ್ಸವ ಪ್ರಾರಂಭವಾಗಬೇಕಾದರೆ, ಇಂತಿಷ್ಟು ಊರಿನವರು ಬಂದು ಎಳೆಯುವುದಕ್ಕೆ ಅದಿಕಾರವಿದೆ. ಅಷ್ಟು ಜನ ಒಂದೇ ದಿವಸ ಬಂದು ಎಳೆಯುವುದಿಲ್ಲ. ಅವರವರಿಗೆ ಪುರುಸೊತ್ತು ಆದಾಗ ಬಂದು ರಥ ಎಳೀತಾರೆ. ಒಟ್ಟು

ಬಂದು ಒಂದು ಮಾರು ಎಳೆದು ಹೋಗುತ್ತಾನೆ. ಇನ್ನೊಬ್ಬ ಇನ್ನೊಂದಿಷ್ಟು ದೂರ ಎಳೆಯುತ್ತಾನೆ. ಮತ್ತೊಬ್ಬ ಮರುದಿನ ಬಂದು ಅದನ್ನು ತಿರುಗಿಸಿ ಅಡ್ಡ ದಾರಿಗೆ ಎಳೆಯುತ್ತಾನೆ.

ಬಿ.ಎಸ್. ಯಡಿಯೂರಪ್ಪ: ಈಗ ಈ ವ್ಯವಸ್ಥೆ ಸ್ವಲ್ಪ ಬದಲಾಗಿದೆ.

ಜೆ.ಹೆಚ್. ಪಟೇಲ್: ನ್ಯಾಯವಾಗಿ ಆ ತೇರು ಅವರಲ್ಲಿ - ಕಾಂಗ್ರೆಸ್ಸಿನವರಲ್ಲಿ ಇರಬೇಕಾಗಿತ್ತು.

ಕೆ.ಹೆಚ್. ಶ್ರೀನಿವಾಸ: ಅದು ನಿಮ್ಮ ಹತ್ತಿರವೇ ಬಂದು ಬಿಟ್ಟಿತು. ಇಂದು ನಿಮ್ಮ ನೀತಿ ಯಾರಿಗೂ ಗೊತ್ತಾಗುವುದಿಲ್ಲ. ಒಂದೇ ದಿನ ಅಷ್ಟು ಮಂತ್ರಿಗಳು ಬಂದು ಎಳೆದಿದ್ದರೆ ಚೆನ್ನಾಗಿರುತ್ತಿತ್ತು. 15 ದಿವಸ ಒಟ್ಟಿಗೇ ಎಳೆದಿದ್ದರೂ ಸಾಕಿತ್ತು. ಈ ರೀತಿಯಾಗಿದೆ ನಿಮ್ಮ ಸರ್ಕಾರ. ನೀವು ಒಂದು ಕಡೆ ಎಳಿತೀರಿ. ಮಾನ್ಯ ರಘುಪತಿಯವರು ಇನ್ನೊಂದು ಕಡೆ ಎಳೀತಾರೆ. ಇತರರು ತಮ್ಮದೇ ಆದ ರೀತಿ ಎಳೀತಿದಾರೆ. ವಸ್ತ್ರ ಒಬ್ಬರು, ಟೆಕ್ಸ್‌ಬುಕ್ ಒಬ್ಬರು. ಕಾರ್ಯಕ್ರಮದಲ್ಲಿ ಸಾಂಗತ್ಯವಿಲ್ಲ, ನೆಲೆ ಇಲ್ಲ, ನೀತಿಯಿಲ್ಲ, ದೃಢವಾದ ಮುನ್ನೋಟವಿಲ್ಲ. ಭಾಷಣ ಚೆನ್ನಾಗಿ ಮಾಡೋದನ್ನ ಕಲಿತೀದೀರಿ. ಪ್ರಣಾಳಿಕೆ ಇದ್ದರೂ ಹುಚ್ಚೂರಾಯನ ತೇರಿನ ತರಹ ಆಗಿದೆ ನಿಮ್ಮ ಸರ್ಕಾರ. ಎಲ್ಲಿಗೆ ಹೋಗುತ್ತೋ ಎಲ್ಲಿಗೆ ಮುಟ್ಟತ್ತೋ ನನಗಂತೂ ಅನುಮಾನ.

(ವಿಧಾನ ಸಭೆ ಕಲಾಪ: ಫೆಬ್ರವರಿ 6, 1986)

**ಹೆಮ್ಮೆಯ ನುಡಿ**

ಮುಖ್ಯಮಂತ್ರಿಗಳಾದ ಜೆ.ಹೆಚ್. ಪಟೇಲರು ನನಗೆ ಒಂದು ರೀತಿಯಲ್ಲಿ ಬಿಡಿಸಲಾಗದ ಒಗಟಿನಂತಿರುವ ನಿಗೂಢ ವ್ಯಕ್ತಿ (Enigma). ಈತ ಮೇಧಾವಿ. ಎಂತಹ ಬೃಹದಾಕಾರದ ಗಂಭೀರತೆಯನ್ನು ಸಹಿತ ಕರಗಿಸಬಲ್ಲ ಹಾಸ್ಯ ಪ್ರಜ್ಞೆ ಇವರಿಗಿದೆ. ಜೊತೆಗೆ ಹೃದಯವಂತಿಕೆ. ಇವರ ಬಗೆಗೆ ನನಗೆ ಭಯಮಿಶ್ರಿತ ಗೌರವ. ಪ್ರಾಯಶಃ ನಾವು ಕೂಡ ಬಹಳ ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಇಂತಹವರೊಬ್ಬರು ರಾಜ್ಯದ ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ನಾವು ಈ ಸದನದಲ್ಲಿದ್ದೆವು ಎಂದು.

ನಾನು ಎನಿಗ್ಮ ಎಂದು ಏಕೆ ಹೇಳಿದೆ ಎಂದರೆ ಜೆ.ಹೆಚ್. ಪಟೇಲ್‌ರವರ ಮಂತ್ರಿಮಂಡಲ ಮತ್ತು ಇಂಡಿಯನ್ ಕ್ರಿಕೆಟ್ ತಂಡ ಎರಡರಲ್ಲೂ ಸಮಾನ ಗುಣದೋಷಗಳಿವೆ ಎಂದು ನನಗನಿಸುತ್ತದೆ. ಪಟೇಲರ ಟೀಮಿನಲ್ಲಿ ಬಹಳ ಒಳ್ಳೊಳ್ಳೆಯ ಪ್ಲೇಯರ್ಸ್ ಇದ್ದಾರೆ. ಎಂ.ಪಿ. ಪ್ರಕಾಶ್, ಬೈರೇಗೌಡ, ಗೋವಿಂದೇಗೌಡ, ನಾಗೇಗೌಡ, ಬಚ್ಚೇಗೌಡ, ಸೋಮಶೇಖರ್ ಹೀಗೆ ಹೆಸರು ಹೇಳುತ್ತಾ ಹೋಗಬಹುದು. Individually very good performers ಆದರೆ ಏಕೋ ವರ್ಲ್ಡ್‌ಕಪ್ ಮ್ಯಾಚ್‌ಗೆ ಹೋದಾಗ, ಸೆಮಿಫೈನಲ್ಸ್‌ಗೆ ಹೋಗಲಿಕ್ಕಾಗಲಿಲ್ಲ. As a team they are pitiabaly weak. They could have done better.

(ಸುರೇಶ್‌ಕುಮಾರ್ (ರಾಜಾಜಿನಗರ), ವಿಧಾನಸಭೆ, ಜುಲೈ 12, 1999)

# 18

# 'ಷಾಕ್' ತಟ್ಟದ ವಿದ್ಯುತ್ ಮಂತ್ರಿ

ಅಧಿಕಾರ ನಡೆಸುವ ಅವಕಾಶ ಸಿಕ್ಕಾಗಲೆಲ್ಲಾ ಜೆ.ಹೆಚ್. ಪಟೇಲರು ವಿದ್ಯುತ್ ಖಾತೆಯನ್ನು ಅತಿ ಜುಲುಮೆಯಿಂದ ಆಯ್ಕೆ ಮಾಡಿಕೊಳ್ಳುತ್ತಿದ್ದುದು ಗಮನಿಸಬೇಕಾದ ಅಂಶ. ಕೈಗಾರಿಕೆ, ಅಬಕಾರಿ ಮತ್ತು ಕಂದಾಯ ಇಲಾಖೆಗಳನ್ನು ಇವರು ನಿರ್ವಹಿಸಿದರಾದರೂ, ಪಟೇಲರಿಗೆ ಸಮಾಧಾನ ಮತ್ತು ಯಶಸ್ಸು ತಂದ ಕೆಲಸ ವಿದ್ಯುತ್ ಉತ್ಪಾದನೆ, ಪೂರೈಕೆ ಮತ್ತು ವಿತರಣೆ. ಉಪಮುಖ್ಯಮಂತ್ರಿ ಮತ್ತು ಮುಖ್ಯಮಂತ್ರಿಯಾದಾಗಲೂ ಇವರು ವಿದ್ಯುತ್ ಖಾತೆಯೊಂದನ್ನೇ ಆರಿಸಿಕೊಂಡದ್ದು ಇದಕ್ಕೆ ಸಾಕ್ಷಿ.

ವಿದ್ಯುತ್ ಉತ್ಪಾದನೆಯನ್ನು ಹೆಚ್ಚಿಸುವುದು ರಾಜ್ಯದ ಭವಿಷ್ಯದ ಸಲುವಾಗಿ ಅತ್ಯಗತ್ಯವೆಂದು ಸದನದಲ್ಲಿ ಬಾರಿ ಬಾರಿಗೂ ಪ್ರತಿಪಾದಿಸಿದ ಪಟೇಲರು ರಾಯಚೂರು ಥರ್ಮಲ್ ವಿದ್ಯುದಾಗಾರದ ಉತ್ಪಾದನಾ ಸಾಮರ್ಥ್ಯವನ್ನು ದ್ವಿಗುಣಗೊಳಿಸಲು ಪಣತೊಟ್ಟದ್ದು ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಉಪಮುಖ್ಯಮಂತ್ರಿಯಾಗಿ ರಾಯಚೂರಿನ ಐದು ಮತ್ತು ಆರನೆಯ ಘಟಕಗಳ ನಿರ್ಮಾಣ ಕಾರ್ಯವನ್ನು ಆರಂಭಿಸಿದ ಇವರು ಮುಖ್ಯಮಂತ್ರಿಯಾದಾಗ, ನಿರೀಕ್ಷಿತ ಸಮಯಾವಧಿಗೂ ಮುಂಚಿತವಾಗಿ ಈ ಕಾರ್ಯವನ್ನು ಸಾಧಿಸಿ ಹೆಮ್ಮೆಪಟ್ಟದುದುಂಟು. ಸಾಮಾನ್ಯ ಸಂದರ್ಭದಲ್ಲಿ ನಾಲ್ಕು ವರ್ಷ ಹಿಡಿಸುವ ಯೋಜನೆಯ ಸಮಯವನ್ನು ಎರಡು-ಎರಡೂವರೆ ವರುಷಗಳಲ್ಲಿ ಮಾಡಿ ಮುಗಿಸಿ ಇಡೀ ದೇಶದಲ್ಲಿ ಹೆಸರು ಗಳಿಸಿದ ಕರ್ತವ್ಯನಿಷ್ಠೆ ಪಟೇಲರದು.

ಷಾಕ್ ಹೊಡೆಯುವ ಈ ಇಲಾಖೆಯುನ್ನು ಗಂಟುಹಾಕಿಕೊಂಡರೂ ಪಟೇಲರ ಹಾಸ್ಯ ಪ್ರಜ್ಞೆಗೆ ಕೊರತೆ ಏನೂ ಇರಲಿಲ್ಲ. "ನಮ್ಮ ಸಮಾಜದಲ್ಲಿ ಚೀಲಗಳಲ್ಲಿ ಯಾರಿಗೂ ಕಾಣದಂತೆ ವಿದ್ಯುತ್ ಸಾಗಿಸಲು ಸಾಧ್ಯವಾಗುವಂತಿದ್ದರೆ, ಕಳ್ಳಭಟ್ಟಿ ಬಿಟ್ಟರೆ ವಿದ್ಯುತ್ ಕಲಬೆರಕೆ ದೇಶದ

ಬೃಹತ್ ಸಮಸ್ಯೆಯಾಗುತ್ತಿತ್ತು" ಎಂದು ಹಾಸ್ಯ ಚಟಾಕಿ ಹಾರಿಸಿದ್ದರು ಪಟೇಲರು.

ಪ್ರಥಮ ಬಾರಿಗೆ (1983 ಫೆಬ್ರವರಿ) ವಿದ್ಯುತ್ ಮತ್ತು ಅಬಕಾರಿ ಖಾತೆಗಳೆರಡನ್ನು ವಹಿಸಿಕೊಂಡ ಪಟೇಲರು ಸದನದಲ್ಲಿ ಮಾಡಿದ ಮತ್ತೊಂದು ಜೋಕ್ ಹೀಗಿತ್ತು. "ಮೊದಲನೆಯದು ಷಾಕ್ ಕೊಟ್ಟರೆ, ಎರಡನೆಯದು ಕಿಕ್ ಕೊಡುತ್ತದೆ".

## ರೈತರಿಗೆ ವಿದ್ಯುತ್ ಪೂರೈಕೆ

ಕಾಗೋಡು ತಿಮ್ಮಪ್ಪ: ನೋಡಿ ಇಷ್ಟೆಲ್ಲಾ ಹೇಳಿದರೂ ಅವರು ಎದ್ದು ಕರೆಂಟ್ ಕೊಡುತ್ತೇವೆ, ವೈರ್ ಕೊಡುತ್ತೇವೆ ಎಂದು ಒಂದು ಮಾತನ್ನು ಹೇಳುವುದಿಲ್ಲ.

ಜೆ.ಹೆಚ್. ಪಟೇಲರು: ಮಾನ್ಯ ಸಭಾಧ್ಯಕ್ಷರೆ, ಶ್ರೀ ಕಾಗೋಡು ತಿಮ್ಮಪ್ಪ ಅವರು ಹೇಳಿದಂತೆ ಮಲೆನಾಡಿನ ಆ ಪ್ರದೇಶದಲ್ಲಿ ಪಂಪ್‌ಸೆಟ್‌ಗಳ ಅವಶ್ಯಕತೆ ಇರಲಿಲ್ಲ. ಮೊದಲೆಲ್ಲಾ ಮಳೆ ಚೆನ್ನಾಗಿ ಬೀಳುತ್ತಿದ್ದುದರಿಂದ ಅವರ ತೋಟಗಳು ಅಲ್ಲಿನ ಪ್ರಕೃತಿಯಿಂದಲೇ ನೀರಾವರಿ ಆಗುತ್ತಿತ್ತು. ಇತ್ತೀಚೆಗೆ ಎಕೊಲಾಜಿಕಲ್ ಇಂಬ್ಯಾಲೆನ್ಸ್‌ನಿಂದ ಈ ರೀತಿ ಆಗಿದೆ.

ಸರ್ಕಾರ ಆದೇಶ ಕೊಟ್ಟು ಮಳೆ ತರಿಸುವಂತಿದ್ದರೆ ಇಷ್ಟು ಹೊತ್ತಿಗೆ ತರಿಸಿಬಿಡುತ್ತಿದ್ದೆ. ಆದರೆ ಈ ವಿದ್ಯುಚ್ಛಕ್ತಿ ಇಲಾಖೆಯವರು ಏನಾದರೂ ಆ ರೀತಿ ಒಂದು ಬಲ್ಬ್ ಹಾಕಿಕೊಳ್ಳುವಲ್ಲಿ ಎರಡು ಬಲ್ಬ್ ಹಾಕಿದ್ದಕ್ಕೆ ಸಂಪರ್ಕ ಕಡಿದು ಹಾಕಿದರು ಅಥವಾ ನೇರವಾಗಿ ಹುಕ್ ಹಾಕಿದ್ದಕ್ಕೆ ಹಾಕಿದವರನ್ನು ಕೈಬಿಟ್ಟರು ಎಂದು ಹೇಳಿದ್ದಾರೆ. ಇಲ್ಲ, ಎರಡು ಬಲ್ಬ್ ಹಾಕಿಕೊಂಡಿರುವಂಥದ್ದನ್ನು ತೆಗೆದುಹಾಕಿಲ್ಲ. ಆದರೆ ಏನು ಮಾಡುತ್ತಾರೆ ಎಂದರೆ ಒಂದು ಮನೆಗೆ ಕನೆಕ್ಷನ್ ತೆಗೆದುಕೊಂಡು ಅದರ ಮೂಲಕ ಅನ್‌ಆಥರೈಸ್ ಆಗಿ ಬೇರೆ ಸಂಪರ್ಕ ತೆಗೆದುಕೊಂಡಿರುತ್ತಾರೆ.

ಕಾಗೋಡು ತಿಮ್ಮಪ್ಪನವರೇ, ತಮ್ಮ ಭಾಗದ ಜನರು ಬಹಳ ಸಂಪನ್ನರು. ಕಾನೂನು ಪರಿಪಾಲನೆ ಮಾಡುವಲ್ಲಿ ಮೊದಲನೆಯವರು. ನಿಮಗೇ ಗೊತ್ತಿದೆ. ತೀರ್ಥಹಳ್ಳಿಯಲ್ಲಿಯೇ ನಮ್ಮ ಪಾಲಿಟಿಕ್ಸ್ ಬೆಳೆದಿದ್ದು. ಆದುದರಿಂದ ಅಲ್ಲಿ ಯಾರಾದರೂ ಅಕಸ್ಮಾತ್ ತಪ್ಪು ಮಾಡಿದ್ದರೆ ಅವರಿಗೆ ಶಿಕ್ಷೆಯಾಗುತ್ತದೆ. ಕೆಇಬಿಯವರು ತಪ್ಪು ಮಾಡಿದ್ದರೆ ಅವರಿಗೆ ಶಿಕ್ಷೆ ಕೊಡುತ್ತಾರೆ ಅಥವಾ ಈ ಜನರು ಯಾರು ಹುಕ್ ಹಾಕಿಕೊಂಡಿದ್ದಾರೆ ಅವರನ್ನೂ ಸಹ ನಾವು ಶಿಕ್ಷೆಗೆ ಒಳಪಡಿಸಬೇಕಾಗುತ್ತದೆ.

ಈಗ ವೈರ್ ಬೇಕು. ಕಂಬ ಬೇಕು. ವೈರ್‌ದು ಏನಾಯಿತು ಎಂದರೆ ಇಂಟರ್‌ನ್ಯಾಷನಲ್ ಮಾರ್ಕೆಟಿನಲ್ಲಿ ಅಲ್ಯೂಮಿನಿಯಂನ ರೇಟ್ ಜಾಸ್ತಿಯಾದದ್ದರಿಂದ, ಯಾರು ನಮ್ಮ ಕೆಇಬಿ ಗೆ ಕೊಡುತ್ತೇವೆ ಎಂದು ಕಾಂಟ್ರಾಕ್ಟ್ ಮಾಡಿಕೊಂಡಿದ್ದರು, ಅವರು ಕೊಡಲಿಲ್ಲ. ಹಾಗಾಗಿ ಸ್ವಲ್ಪ ಸಪ್ಲೈ ಕಡಿಮೆಯಾಯಿತು. ಎಲ್ಲೆಲ್ಲಿ ಹೆಚ್ಚು ಅವಶ್ಯಕತೆ ಇದೆಯೋ ಅಲ್ಲಿಗೆ ಮೊದಲು ಆದ್ಯತೆಯ ಮೇಲೆ ಕೊಡುತ್ತೇವೆ. ಮೊದಲು ಕೆ.ಇ.ಬಿ. ಯವರಿಗೆ ಹೇಳುತ್ತೇನೆ, 1992 ರಿಂದ ಪಂಪು

ಹಾಕಿಕೊಂಡು ಕುಳಿತಿದ್ದಾರೆ, ಏಕೆ ಕನೆಕ್ಷನ್ ಕೊಟ್ಟಿಲ್ಲ ಎಂದು. 1992 ರಲ್ಲಿ ಅವರು ನೋ ಅಬ್ಜಕ್ಷನ್ ಸರ್ಟಿಫಿಕೇಟ್ ತೆಗೆದುಕೊಂಡಿದ್ದರೇ? ಬ್ಯಾಂಕಿನಿಂದ ಸಾಲ ತೆಗೆದುಕೊಳ್ಳಬೇಕಾದರೆ ನಾವು ಕರೆಂಟ್ ಕೊಡುತ್ತೇವೆ. ಕೆಲವು ಕಡೆ ಲ್ಯಾಪ್ಸಸ್ ಇದೆ. ಅವನ್ನು ನಾನು ಒಪ್ಪಿಕೊಳ್ಳುತ್ತೇನೆ.

ಇದೆಲ್ಲವೂ ಬರೀ ಕೆ.ಇ.ಬಿ. ಯಿಂದ ಆಗುತ್ತದೆ ಎಂದು, ಅಲ್ಲ. ಕೆಲವು ಕಡೆ ಜನರೂ ಸಹ, ಹೇಗಾದರೂ ಕನೆಕ್ಷನ್ ತೆಗೆದುಕೊಳ್ಳಬಹುದು ಎಂದು ಪರವಾನಗಿ ಇಲ್ಲದೇ ಎಷ್ಟೋ ಜನ ಪಂಪು ಹಾಕಿಕೊಂಡಿರುವುದೂ ಉಂಟು. ಅದರಲ್ಲೂ ಅದನ್ನು ಸಾಲ ತೆಗೆದುಕೊಂಡು. ಆ ಕಡೆ ಅದಕ್ಕೆ ಬಡ್ಡಿ ಕಟ್ಟುತ್ತಾರೆ, ಈ ಕಡೆ ಕರೆಂಟೂ ಇಲ್ಲ. ಇಂಥವು ಇರುವುದು ನಮ್ಮ ಗಮನಕ್ಕೆ ಬಂದಿದೆ. ಅದಕ್ಕಾಗಿ ಹೇಳುತ್ತಿದ್ದೇನೆ.

ಕಾಗೋಡು ತಿಮ್ಮಪ್ಪ: ಈ ರೀತಿಯದೆಲ್ಲಾ ಆಗಿರುವುದು ಕೋಲಾರ, ತುಮಕೂರು ಇಲ್ಲಿ. ನಮ್ಮಲ್ಲಂತೂ ಒಂದೂ ಇಲ್ಲ.

ಜೆ.ಹೆಚ್. ಪಟೇಲ್: ಯಾರು ತಪ್ಪು ಮಾಡಿದರೂ ಅದು ತಪ್ಪೇ. ಆದರೆ ಒಂದು ಮಾತ್ರ ಹೇಳುತ್ತೇನೆ.

ಜಿ.ವಿ. ಶ್ರೀರಾಮರೆಡ್ಡಿ: ತಿಮ್ಮಪ್ಪನವರಿಗೆ ಏಕೆ ನಮ್ಮ ಮೇಲೆ ಇಷ್ಟೊಂದು ಕಣ್ಣು. ನಮ್ಮ ಕಡೆ ಸರಿಯಾಗಿ ನೀರಿಲ್ಲ, ಒಂದು ಬಾವಿ ಇಲ್ಲ, ಕೆರೆ ಇಲ್ಲ.

ಕಾಡೋಡು ತಿಮ್ಮಪ್ಪ: ಅವೆಲ್ಲವನ್ನೂ ಅನ್‌ಆಥರೈಸ್ಡ್ ಆಗಿ ತೆಗೆದುಕೊಂಡು 2-3 ವರ್ಷವಾಗಿದೆ.

ಜೆ.ಹೆಚ್. ಪಟೇಲ್: ಈಗ ಹೊಸದಾಗಿ ಅನ್‌ಆಥರೈಸ್ಡ್ ಇರುವುದನ್ನು ರೆಗ್ಯುಲರೈಸೇಷನ್ ಮಾಡಬೇಕೆಂದಿದ್ದೇವೆ. ಯಾರ್‍ಯಾರು ಅನ್‌ಆಥರೈಸ್ಡ್ ಆಗಿ ಮಾಡಿಕೊಂಡಿದ್ದಾರೆ, ಅವರು ಕರೆಂಟೂ ಉಪಯೋಗಿಸಿಕೊಳ್ಳುವುದು, ಬಿಲ್ಲೂ ಕೊಡುವ ಹಾಗಿಲ್ಲ, ಹೀಗೆ ಆಗುತ್ತದೆ ಎಂದು ಇತ್ತೀಚಿಗೆ ನಾವು ಏನು ಮಾಡಿದ್ದೇವೆ ಎಂದರೆ ಇಷ್ಟು ದುಡ್ಡು ಎಂದು ಕಟ್ಟಿಸಿಕೊಂಡು ರೆಗ್ಯುಲರೈಸ್ ಮಾಡಿ ಎಂದು ಹೇಳಿದ್ದೇವೆ. ಆ ಪ್ರಕಾರ ನಿಮ್ಮ ಕಡೆ ಹೆಚ್ಚು ಗಮನ ಕೊಡಲು ಹೇಳುತ್ತೇನೆ.

ಬಿ. ಶಿವರಾಮು: ಮಾನ್ಯ ಅಧ್ಯಕ್ಷರೇ, ಈಗ ಅನ್‌ಆಥರೈಸ್ಡ್ ಇರುವುದನ್ನು ಇಷ್ಟು ಹಣ ಕಟ್ಟಿಸಿಕೊಂಡು ಆಥರೈಸ್ಡ್ ಮಾಡುತ್ತೇವೆ ಎಂದು ಹೇಳಿದಿರಿ. ತಾವು ಸದನದಲ್ಲಿ ಒಂದು ಆಶ್ವಾಸನೆಯನ್ನೂ ಕೊಟ್ಟಿದ್ದೀರಿ. ಈಗ ತಾವು ಅದಕ್ಕೆ ಎಷ್ಟು ದಂಡ ಹಾಕಬಹುದು? ಒಂದು ಪ್ರಮಾಣ, ಇತಿಮಿತಿ ಬೇಕಲ್ಲವೇ? ಇವರಲ್ಲಿ ಎಷ್ಟು ಜನ ಸಾಲ ತೆಗೆದುಕೊಂಡಿರಬಹುದು? ಅಥವಾ ಸ್ವಂತ ಹಣ ಹಾಕಿರಬಹುದು? ಇಷ್ಟು ದಿವಸದಿಂದ ಕಾಯುತ್ತಿದ್ದಾರೆ, ಕೆಇಬಿ ನವರು ಮೆಟೀರಿಯಲ್ ಸಪ್ಲೈ ಮಾಡದೇ ಹೋದರೆ ಅವರು ಏನು ಮಾಡುತ್ತಾರೆ? ಅನ್‌ಆಥರೈಸ್ಡ್ ಕನೆಕ್ಷನ್ ತೆಗೆದುಕೊಳ್ಳುತ್ತಾರೆ.

ಜೆ.ಹೆಚ್. ಪಟೇಲ್: ಅನ್‌ಆಥರೈಸ್ಡ್ ಅಂದರೆ ಏನು ಎನ್ನುವುದನ್ನು ಹೇಳುತ್ತೇನೆ ಕೇಳಿ. ನನ್ನಷ್ಟಕ್ಕೆ ನಾನೇ ಬಾವಿ ತೆಗೆಸಿಕೊಂಡು, ಪಂಪು ಕೂಡಿಸಿಕೊಂಡು ಇರುವಂಥಾದ್ದಲ್ಲ. ಮೊದಲು ರಿಜಿಸ್ಟರ್ ಆಗಿರಬೇಕು. ಪಾರ್ಷಿಯಲ್ ಕೆಲಸ ಆಗಿರಬೇಕು. ಕೆಲಸ ಮಾಡಿಕೊಡುತ್ತೇವೆ ಎಂದು ಕೆ.ಇ.ಬಿ. ಯವರು ಒಪ್ಪಿಕೊಂಡಿರಬೇಕು. ಆ ರೀತಿಯಾಗಿ ತಡವಾದ ಕಡೆ ಇವತ್ತು ಕೆ.ಇ.ಬಿ. ಯವರು ಆದ್ಯತೆ ಕೊಟ್ಟು ರೆಗ್ಯುಲರೈಸ್ ಮಾಡುತ್ತಾರೆ.

ಬಿ. ಶಿವರಾಮು: ನೀವೇ ಕೊಟ್ಟಿರುವ ಅಂಕಿ ಅಂಶಗಳಂತೆ ಹಾಸನ ಜಿಲ್ಲೆ ಅರಸೀಕರೆ ತಾಲ್ಲೂಕಿನಲ್ಲಿ ಫೆಬ್ರವರಿ 1997 ರ ಅಂತ್ಯದವರೆಗೆ ರಿಜಿಸ್ಟರ್ ಆಗಿ, ವಿದ್ಯುದ್ದೀಕರಣವಾಗದೇ ಉಳಿದಿರತಕ್ಕಂಥ ಬಾವಿಗಳ ಸಂಖ್ಯೆ 4,386. ಇದು 1993-94 ರಿಂದ. ಅಂದರೆ ರಿಜಿಸ್ಟರ್ ಆಗಿ ಅವನು ಬಾವಿ ಹಾಕಿಕೊಂಡು ಎಷ್ಟು ವರ್ಷ ಕಾಯಬಹುದು? ಆ ಸಂದರ್ಭದಲ್ಲಿ ಏನಾಗುತ್ತದೆ ಎಂದರೆ, ಕೆ.ಇ.ಬಿ. ಯಿಂದ ಇದು ಬಗೆಹರಿಯುವುದಿಲ್ಲ ಎನ್ನುವ ತೀರ್ಮಾನಕ್ಕೆ ಆತ ಬಂದ, ಅವನೇ ಕಂಬಗಳನ್ನು, ವೈರುಗಳನ್ನು ಹಾಕಿಕೊಂಡ. ಕೆ.ಇ.ಬಿ. ಯವರಿಗೆ ಆ ಕಂಬ ಮತ್ತು ವೈರುಗಳ ಖರ್ಚು ಆಗುತ್ತಿರಲಿಲ್ಲವೇ? ಅದರ ಬದಲು ರೈತನೇ ಹಾಕಿಕೊಂಡಿದ್ದಾನೆ. ಒಂದು ಕಂಬಕ್ಕೆ 10,000 ಸಾವಿರ ರೂಪಾಯಿ, ಎರಡು ಕಂಬಕ್ಕೆ 20,000 ರೂಪಾಯಿಗಳು ತಗುಲಿರಬಹುದು. ಈ ವ್ಯವಸ್ಥೆಯನ್ನು ಅವನೇ ಮಾಡಿಕೊಂಡ ಎಂಬ ಮೇಲೆ ತಾವು ಅದಕ್ಕೆ ದಂಡವನ್ನು ಎಷ್ಟರಮಟ್ಟಿಗೆ ಹಾಕಬಹುದು?

ಜೆ.ಹೆಚ್. ಪಟೇಲ್: ಕಂಬಗಳನ್ನು ಎಲ್ಲಿಂದ ತಂದಿದ್ದಾರೆ ರೈತರು? ಕಂಬಗಳನ್ನು ವೈರುಗಳನ್ನು ಅವರು ಮಾಡಲು ಆಗುವುದಿಲ್ಲ. ಅವರು ಏನು ಮಾಡಿರುತ್ತಾರೆ ಎಂದರೆ, ಕೆ.ಇ.ಬಿ. ಯಲ್ಲಿರತಕ್ಕಂಥ ಕೆಳಮಟ್ಟದ ಅಧಿಕಾರಿಗಳು.

**B. Shivaramu:** It is a wrong notion from the officials.

ಜೆ.ಹೆಚ್. ಪಟೇಲ್: ಸ್ವಲ್ಪ ಕೇಳಿ. ಅವರು ಏನು ಮಾಡುತ್ತಾರೆ ಎಂದರೆ ಕೆಳಮಟ್ಟದ ಅಧಿಕಾರಿಗಳು ಯಾರಿರುತ್ತಾರೆ, ಅಸಿಸ್ಟೆಂಟ್ ಇಂಜಿನಿಯರೋ ಯಾರೋ ಒಬ್ಬನಿಗೆ ಹೇಳಿಬಿಟ್ಟು ದುಡ್ಡು ಕೊಟ್ಟು ಯಾವುದೋ ಬೇರೆ ಕಡೆ ಕನೆಕ್ಷನ್ ಕೊಡುವಂಥ ಕಂಬವನ್ನು ಇವರು ಕೊಂಡುಕೊಳ್ಳುತ್ತಾರೆ, ಇವನೂ ಭ್ರಷ್ಟ, ಅವನೂ ಭ್ರಷ್ಟ. ಇದರಲ್ಲಿ ನಾವು ಮಾಡಿದ್ದೆಲ್ಲಾ ಸರಿ ಎಂದು ನಾನು ಹೇಳುವುದಿಲ್ಲ. ಅದಕ್ಕೋಸ್ಕರ ಈಗ ಕೆ.ಇ.ಬಿ. ಯವರು ಕರಾರುವಕ್ಕಾಗಿ ಮಾಡುತ್ತಿದ್ದಾರೆ. ಟ್ರಾನ್ಸ್‌ಫಾರ್ಮರ್‌ಗಳು, ಕಂಬ, ವೈರು ಇವುಗಳು ಕೆ.ಇ.ಬಿ. ಯಿಂದ ಸಪ್ಲೈ ಆಗದೇ ಮತ್ತೆ ಎಲ್ಲಿಂದ ತರುತ್ತಾರೆ? ಅದನ್ನು ಯಾರಾದರೂ ಪ್ರೈವೇಟ್‌ನವರು ಪ್ರೊಡಕ್ಷನ್ ಮಾಡುತ್ತಿದ್ದಾರೆಯೇ ಹೀಗಾಗಿ ಕೆ.ಇ.ಬಿಯ ಮೆಟೀರಿಯಲ್‌ಗಳೇ ಮಿಸ್‌ಗೈಡ್ ಆಗಿ ಅಥವಾ ಮಿಸ್‌ಲೀಡ್ ಆಗಿ ಅಥವಾ ಏನೋ ಕಾರಣದಿಂದ ಅಪವ್ಯಯ ಆಗುತ್ತಿದೆ.

ಬಿ. ಶಿವರಾಮು: ಹಾಗಾದರೆ, ತಮ್ಮ ಇಲಾಖೆಯ ವತಿಯಿಂದ ತಾವು ಒಪ್ಪಿಕೊಳ್ಳುತ್ತೀರಿ, ಇಷ್ಟು ಪ್ರಮಾಣದಲ್ಲಿ ಅನಧಿಕೃತವಾಗಿರುವ ಆಗಿರುವ ರೈತನ ಬಾವಿಯ ಎಲ್ಲಾ ಕಂಬ ಮತ್ತು

ವೈರು ತಮ್ಮ ಇಲಾಖೆಯದು ಎಂದು. ಹಾಗಾದರೆ, ನಿಮ್ಮ ಇಲಾಖೆಯ ಅಧಿಕಾರಿಗಳು ಈವರೆಗೆ ಏನು ಮಾಡುತ್ತಿದ್ದರು? ಎಷ್ಟು ಜನರ ಮೇಲೆ ಕ್ರಮ ತೆಗೆದುಕೊಂಡಿದ್ದೀರಿ?

ಇದು ಬಹಳ ಮುಖ್ಯವಾದುದು. ಮುಖ್ಯಮಂತ್ರಿಗಳ ಹತ್ತಿರ ಇದನ್ನು ಪ್ರಸ್ತಾಪ ಮಾಡಬೇಕು ಎಂದು ಹೊರಗಡೆಯಿಂದ ಓಡಿ ಬಂದಿದ್ದೇನೆ. ಒಂದು ತಾಲ್ಲೂಕಿನಲ್ಲೇ ಈ ಪ್ರಮಾಣದಲ್ಲಿದೆ ಎಂದರೆ ಇಡೀ ರಾಜ್ಯದಲ್ಲಿ ಎಷ್ಟು ಇದೆ ಎನ್ನುವಂಥಾದ್ದು ರೈತರಿಗೆ ಸಂಬಂಧಪಟ್ಟಿದೆ. ಕಂಬಗಳು ಮತ್ತು ವೈರು ಇಲಾಖೆಯಿಂದ ಬಂದಿದೆ ಎನ್ನುವ ಶಂಕೆಯನ್ನು ತಾವು ಏನು ವ್ಯಕ್ತ ಮಾಡಿದ್ದೀರಿ, ಅದು ಖಾಸಗಿಯಾಗಿ ಸಿಗುತ್ತಿದೆ.

ತಮ್ಮ ಇಲಾಖೆಯಲ್ಲಿ ಒಂದು ಕಂಬಕ್ಕೆ 800 ರೂಪಾಯಿಗಳ ದರವನ್ನು ಫಿಕ್ಸ್ ಮಾಡಿದ್ದೀರಿ. ಅದನ್ನು 1,000-1,200 ರೂಪಾಯಿಗಳಿಗೆ ಅದರ ತಯಾರಕನೇ ಸಾರಾಸಗಟಾಗಿ ಕೊಡುತ್ತಿದ್ದಾನೆ. ವೈರಿನ ರೇಟನ್ನು ತಮ್ಮ ಇಲಾಖೆಯಲ್ಲಿ 42 ರೂಪಾಯಿ ಎಂದು ಏನು ಫಿಕ್ಸ್ ಮಾಡಿದ್ದೀರಿ, ಅದನ್ನು 60-70 ರೂಪಾಯಿಗೆ ಕಂಪನಿಯವನೇ ಕೊಡುತ್ತಿದ್ದಾನೆ. ಏಕೆಂದರೆ ಕೆ.ಇ.ಬಿ. ಯವರು ಅವರ ಬಿಲ್ಸ್ ಸೆಟಲ್ ಮಾಡಿಲ್ಲ. ಬೇಕಾದಷ್ಟು ಬಿಲ್ ಪೆಂಡಿಂಗ್ ಇದೆ. ಇವುಗಳನ್ನು ಕಂಪನಿಯ ತಯಾರಕರೇ ಕೊಡುತ್ತಿರತಕ್ಕಂಥಾದ್ದೇ ಹೊರತು, ಅದು ನಿಮ್ಮ ಇಲಾಖೆಯದಲ್ಲ. ರೈತ ಒಂದಕ್ಕೆ ಎರಡರಷ್ಟು ದುಡ್ಡು ಕೊಟ್ಟು ಅವುಗಳನ್ನು ಕೊಂಡುಕೊಂಡಿದ್ದಾನೆ.

ಇವತ್ತು ಬೇಕಾದರೂ ನೀವು ಅರಸೀಕೆರೆ ತಾಲ್ಲೂಕಿನ ಗಂಡಸಿಗೆ ಬನ್ನಿ. ನಿಮಗೆ ಎಷ್ಟು ಕಂಬಗಳು ಬೇಕು? ಓಪನ್ ಮಾರ್ಕೆಟ್‌ನಲ್ಲಿಟ್ಟು ಮಾರುತ್ತಿದ್ದಾನೆ. ವೈರುಗಳನ್ನು ಟನ್ನುಗಟ್ಟಲೆ ತಂದು ಮಾರಾಟ ಮಾಡುತ್ತಿದ್ದಾರೆ. ರೈತ ಒಂದಕ್ಕೆ ಎರಡರಷ್ಟು ದುಡ್ಡು ಕೊಟ್ಟು ತಂದು ಹಾಕಿಕೊಂಡು, ಸರ್ವೀಸ್‌ಗಾಗಿ ಇಷ್ಟು ವರ್ಷ ಕಾದಿದ್ದೇ ಅಲ್ಲದೆ, ರೆಗ್ಯುಲರೈಸ್ ಮಾಡಿದರೆ 10,000 ರೂಪಾಯಿ ದಂಡ ಹಾಕಿ, 6 ತಿಂಗಳು ಉಪಯೋಗಿಸಿದರೆ ಇನ್ನೂ 10,000 ದಂಡ ಎನ್ನುವುದಾದರೆ ರೈತನ ಪರಿಸ್ಥಿತಿ ಸುಧಾರಣೆಯಾಗುತ್ತದೆಯೇ? ಏಕೆಂದರೆ ಕೆಇಬಿ ಯಲ್ಲಿ ಹಿರಿಯ ಅಧಿಕಾರಿಗಳು ಇದನ್ನೇ ಹೇಳುವುದು, ನಿಮಗೆ ಕಂಬ, ವೈರು ಎಲ್ಲಿಂದ ಬಂತು? ಎಲ್ಲಾ ನಮ್ಮ ಇಲಾಖೆಯಿಂದ ಕದ್ದಿರುವುದು ಅದಕ್ಕೆ ನಾವು ದಂಡ ಹಾಕುತ್ತಿದ್ದೇವೆ ಎಂದು ಹೇಳುತ್ತಿದ್ದಾರೆ. ನಿಮಗೆ ಎಷ್ಟು ಕಂಬ, ವೈರು ಬೇಕು, ಅದನ್ನು ಕೊಡಿಸುತ್ತೇವೆ.

ಛೇರ್ಮನ್: ತಾವು ಈಗಾಗಲೇ ತಮ್ಮ ಪಾಯಿಂಟ್‌ಗಳನ್ನು ಕ್ಲಿಯರ್ ಮಾಡಿದ್ದೀರಿ. ಅದಕ್ಕೆ ಸೂಕ್ತವಾಗಿರತಕ್ಕಂಥ ಕ್ರಮ ಕೈಗೊಳ್ಳುತ್ತೇವೆ ಎಂದು ಮುಖ್ಯಮಂತ್ರಿಗಳು ಹೇಳಿದ್ದಾರೆ.

ಜೆ.ಹೆಚ್. ಪಟೇಲ್: ಕ್ರಮ ಕೈಗೊಳ್ಳುತ್ತೇವೆ. ಆಮೇಲೆ, ಗಂಡಸಿಯಲ್ಲಿ ಏನೇನು ನಡೆಯುತ್ತಿದೆ ಎಂದು ನನಗೆ ಈಗ ಗೊತ್ತಾಯಿತು. ಅಲ್ಲಿಗೆ ಒಬ್ಬ ಅಧಿಕಾರಿಯನ್ನು ಕಳುಹಿಸುತ್ತೇವೆ. ಯಾವನು ಕಂಬ ಮಾರುತ್ತಾನೆ, ಯಾವನು ವೈರ್ ಮಾರುತ್ತಾನೆ, ಏಕೆ ಮಾರುತ್ತಾನೆ, ಎಲ್ಲಿಂದ ತಂದಿದ್ದಾನೆ ಇದೆಲ್ಲವನ್ನೂ ವಿಚಾರಣೆ ಮಾಡಿಸುತ್ತೇನೆ.

ಬಿ. ಶಿವರಾಮು: ತಾವು ಸದನದಲ್ಲಿ ಒಂದು ಆಶ್ವಾಸನೆ ಕೊಡಿ. ರೈತರು ಈಗ ಏನು ಮೆಟೀರಿಯಲ್ಸ್ ಹಾಕಿದ್ದಾರೆ, ಅದಕ್ಕೆ ಕಡಿಮೆ ದಂಡ ಹಾಕುವಂಥ ವ್ಯವಸ್ಥೆಯನ್ನು ಮಾಡಿ. ಅದರಲ್ಲೂ ವಿಶೇಷವಾಗಿ ಕೆಲವರು ಕಟ್ಟಿದ್ದಾರೆ, ಕೆಲವರು ಕಟ್ಟಿಲ್ಲ. ಯಾರು ಕಟ್ಟಿಲ್ಲ ಎಂದರೆ ಆರ್ಥಿಕವಾಗಿ ದುರ್ಬಲವಾಗಿರತಕ್ಕಂಥವರು ಕಟ್ಟಿಲ್ಲ, ಪರಿಶಿಷ್ಟ ಜಾತಿ ಮತ್ತು ವರ್ಗದವರು ಕಟ್ಟಿಲ್ಲ. ಆದ್ದರಿಂದ ಅದನ್ನು ಕಡಿಮೆ ಮಾಡತಕ್ಕಂಥಾದ್ದನ್ನು ಮಾಡಬೇಕು.

ಸಣ್ಣ ಸಣ್ಣ ಜಲ ವಿದ್ಯುತ್ ಕೇಂದ್ರಗಳನ್ನು ಮಾಡುವುದಕ್ಕೆ ಪ್ರಪಂಚದ ಯಾವುದೇ ರಾಷ್ಟ್ರ ನಮಗೆ ಸಹಾಯ ಮಾಡುವುದಾದರೆ ನಾನು ಅದನ್ನು ಸ್ವಾಗತಿಸುತ್ತೇನೆ. ಸ್ವತಃ ವಿದ್ಯುತ್ ಉತ್ಪಾದನೆ ಮಾಡುವ ಉದ್ದಿಮೆಗಳಿಗೆ ನಾವು ಯಾವ ನಿರ್ಬಂಧವನ್ನು ಹಾಕಿಲ್ಲ.

## 'ಕಗ್ಗತ್ತಲು ಅತ್ತ; ಮಣಿದೀಪ ಇತ್ತ'
## ಕುವೆಂಪು ಕವನ

ವಿಷಯ: ಮದುವೆ ಮುಂತಾದ ಸಮಾರಂಭಗಳಲ್ಲಿ ವಿದ್ಯುಚ್ಛಕ್ತಿ ಪೋಲು.

ಡಾ: ಸಿದ್ದಲಿಂಗಯ್ಯ: ಮಾನ್ಯ ಇಂಧನ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ವಿದ್ಯುತ್ ಅಭಾವ ಇದ್ದರೂ ಮದುವೆ, ಉತ್ಸವ ಇತರ ಸಮಾರಂಭಗಳಲ್ಲಿ ದೀಪಾಲಂಕಾರ ಮಾಡಿ ವಿದ್ಯುತ್ತನ್ನು ಪೋಲು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ) ಬಂದಿದ್ದರೆ ಇದನ್ನು ತಡೆಗಟ್ಟಲು ಯಾವ ಕ್ರಮ ಕೈಗೊಳ್ಳಲಾಗುವುದು?

ಶರಣಬಸಪ್ಪ ದರ್ಶನಾಪುರ್ (ಇಂಧನ ರಾಜ್ಯ ಸಚಿವರು): ಬಹುಪಾಲು ಕಲ್ಯಾಣ ಮಂಟಪಗಳು ಜನರೇಟರ್‌ಗಳನ್ನು ಹೊಂದಿದ್ದು ಅಲಂಕಾರಕ ದೀಪಗಳಿಗೆ ಜನರೇಟರ್‌ಗಳನ್ನು ಬಳಸಲಾಗುತ್ತದೆ. ಸಾಮಾನ್ಯವಾಗಿ ಮದುವೆ ಸಮಾರಂಭಗಳಲ್ಲಿ, ವಿದ್ಯುತ್ ಬೇಡಿಕೆಯು 10 ಕಿ.ವ್ಯಾ.ಗಿಂತ ಕಡಿಮೆ ಇದ್ದಲ್ಲಿ ಮಂಡಳಿಯಿಂದ ತಾತ್ಕಾಲಿಕ ವಿದ್ಯುತ್ ಸರಬರಾಜನ್ನು ಪಡೆಯಲಾಗುತ್ತದೆ.

ರಾಷ್ಟ್ರೀಯ ಹಬ್ಬಗಳಾದ ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯೋತ್ಸವ, ಧಾರ್ಮಿಕ ಉತ್ಸವಗಳಾದ ಗಣೇಶೋತ್ಸವ, ರಂಜಾನ್, ಕ್ರಿಸ್‌ಮಸ್ ಇತ್ಯಾದಿ ಹಾಗೂ ಕನ್ನಡ ರಾಜ್ಯೋತ್ಸವ ಸಮಾರಂಭಗಳಲ್ಲಿ ತಾತ್ಕಾಲಿಕ ವಿದ್ಯುತ್ ಸರಬರಾಜನ್ನು ವ್ಯವಸ್ಥೆ ಮಾಡಬೇಕಾಗುತ್ತದೆ.

ಡಾ: ಸಿದ್ದಲಿಂಗಯ್ಯ: ಸರ್ಕಾರದ ಉತ್ತರ ಅಸಮರ್ಪಕವಾಗಿದೆ. ಸಮಸ್ಯೆಯನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿಲ್ಲ ಎನ್ನುವುದಕ್ಕೆ ಇವರು ಕೊಟ್ಟ ಈ ಉತ್ತರವೇ ಸಾಕ್ಷಿ. ಕೆಲವು ಜನರು ಜನರೇಟರ್‌ಗಳನ್ನು ಬಳಸುತ್ತಿದ್ದಾರೆ. ತಾವು ವಿದ್ಯುತ್‌ಗೆ ದುಬಾರಿ ವೆಚ್ಚ ಹಾಕಿದ್ದೀರಿ. ಜನರಿಗೆ ಕಡಿಮೆ ವಿದ್ಯುತ್ತನ್ನು ಬಳಸಲು ವಿನಂತಿ ಮಾಡುತ್ತಿದ್ದೀರಿ. ಸಮರ್ಪಕವಾಗಿ ಬಳಸಬೇಕೆಂದು ಹೇಳಿದ್ದೀರಿ. ಆದರೆ ಯಾವುದರಿಂದಲೂ ವಿದ್ಯುತ್ ಪೋಲಾಗುವುದನ್ನು ತಪ್ಪಿಸುವುದಕ್ಕೆ ಆಗುತ್ತಾ ಇಲ್ಲ.

ನಮ್ಮ ಸಾಮಾಜಿಕ ಜೀವನದಲ್ಲಿ ಒಂದು ಕಡೆ ಬೆಳಕು ಇದ್ದರೆ ಮತ್ತೊಂದು ಕಡೆ ಕತ್ತಲೆ ಇರುವುದು. ರಾಷ್ಟ್ರಕವಿ ಕುವೆಂಪುರವರ ಕಲ್ಕಿ ಪದ್ಯದ ಒಂದು ಸಾಲನ್ನು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಚ್ಛೆಪಡುತ್ತೇನೆ.

"ಬಡವರ ಗುಡಿಸಲು ಒಂದೆಡೆ ನಿಂತಿವೆ;
ಧನಿಕರ ಮನೆಗಳು ಒಂದೆಡೆ ನಿಂತಿವೆ;
ಕತ್ತಲು ಕಗ್ಗತ್ತಲು ಅತ್ತ;
ಜ್ಯೋತಿಯ ಮಣಿದೀಪಗಳು ಇತ್ತ"

ಈ ಸಾಲನ್ನು ಸರ್ಕಾರ ಅರ್ಥ ಮಾಡಿಕೊಳ್ಳಲಿ, ಅರ್ಥ ಮಾಡಿಕೊಂಡು ಮದುವೆಗೆ, ನಾಮಕರಣಕ್ಕೆ, ಗಣೇಶ, ಅಯ್ಯಪ್ಪ, ಅಣ್ಣಮ್ಮ ಉತ್ಸವಗಳಿಗೆ ಯಥೇಚ್ಛವಾಗಿ ವಿದ್ಯುತ್ ಅನ್ನು ಪೋಲು ಮಾಡಿ ಸಾಮಾಜಿಕ ಅಪರಾಧ ಮಾಡುತ್ತಿರುವ ಜನರಿಗೆ ಶಿಕ್ಷೆ ವಿಧಿಸುವ ಒಂದು ಕಾನೂನನ್ನು ಸರ್ಕಾರ ತರುತ್ತದೆಯೇ ಎಂದು ನಾನು ಕೇಳುತ್ತೇನೆ.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಉಪಸಭಾಪತಿಯವರೇ, ಸನ್ಮಾನ್ಯ ಸದಸ್ಯರು ಕೆ.ವಿ. ಪುಟ್ಟಪ್ಪನವರ ಕವನವನ್ನು ಓದಿದರು. ಆ ಕವನಕ್ಕೆ ಪ್ರೇರಣೆ ಹೇಗೆ ಬಂತು, ಅವರು ಯಾರನ್ನು ನೋಡಿ ಆ ಕವನವನ್ನು ಬರೆದರು, ಯಾರಿಂದ ಈ ಪರಿಸ್ಥಿತಿ ಉದ್ಭವವಾಯಿತು ಎನ್ನುವುದು ಅವರಿಗೂ ಗೊತ್ತಿದೆ ನನಗೂ ಗೊತ್ತಿದೆ. ಅದೇ ರೀತಿ ನಾನು ಕವನ ಓದಿದರೆ ವಿದ್ಯುತ್ ಉತ್ಪಾದನೆಯಾಗುವುದಾದರೆ ನಾನು ಬೇಕಾದರೆ ತಿಂಗಳುಗಟ್ಟಲೆ ಕವನಗಳನ್ನು ಓದಬಲ್ಲೆ. ಆದರಿಂದ ವಿದ್ಯುತ್ ಉತ್ಪಾದನೆಯಾಗುವುದಿಲ್ಲ. ಬೇರೆ ರೀತಿ ಪರಿಜ್ಞಾನ ಉತ್ಪಾದನೆಯಾಗಬೇಕು.

## ಕೈಗಾ – ಕರ್ನಾಟಕಕ್ಕೆ ಅನಿವಾರ್ಯ

ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ) : ಕೈಗಾ ಅಣು ಸ್ಥಾವರ ಕೇಂದ್ರ ಸರ್ಕಾರದ ಬೃಹತ್ ಯೋಜನೆ. ಇದಕ್ಕಾಗಿ ಕರ್ನಾಟಕ ಒತ್ತಾಯ ಮುಂದುವರೆಸಿದೆ. ಯಾವ ಘಳಿಗೆಯಲ್ಲಿ ಒಪ್ಪಿಗೆ ಸಿಕ್ಕರೂ ನಾವು ಸ್ವಾಗತಿಸುತ್ತೇವೆ. ನಮ್ಮ ಸರ್ಕಾರ ಕೈಗಾ ಸ್ಥಾಪನೆಗಾಗಿ ಏನು ಮಾಡಬಹುದೋ ಎಲ್ಲವನ್ನೂ ಮಾಡುತ್ತಿದ್ದೇವೆ. ವಿರೋಧ ಪಕ್ಷದ ನಾಯಕರು (ಮಾನ್ಯ ಟಿ.ಎನ್. ನರಸಿಂಹಮೂರ್ತಿ) ಪ್ರಧಾನ ಮಂತ್ರಿಗಳಿಗೆ ಆತ್ಮೀಯರು. ಹೀಗಾಗಿ ಕೈಗಾವನ್ನು ಆದಷ್ಟು ಜಾಗ್ರತೆ ಪಡೆಯಲು ಒತ್ತಾಯ ತರುವಂತೆ ಕೇಳಿಕೊಳ್ಳುತ್ತೇನೆ.

.. ನಿಜ ಕೈಗಾ ಬಗೆಗೆ ವಿವಾದಾತ್ಮಕ ಪ್ರತಿಭಟನೆ ಇದೆ. ಆದರೆ ನಾವು ಕೈಗಾ ಅಣು ಸ್ಥಾವರವನ್ನು ಯಾವುದೇ ಕಾರಣಕ್ಕೂ ಕೈ ಬಿಡುವ ಪ್ರಶ್ನೆಯೇ ಇಲ್ಲ.

.. ಕೈಗಾ ಬೇಡವೆನ್ನುವ ವಿಚಾರವಾದಿಗಳು ನಮ್ಮಲ್ಲಿದ್ದಾರೆ. ಅಮೇರಿಕಾ - ರಷ್ಯಗಳಲ್ಲಿ ಆದ ದುರ್ಘಟನೆ ಹಿನ್ನೆಲೆಯಲ್ಲಿ ಪರಿಸರ ಮತ್ತು ಮಾನವ ಜನಾಂಗಕ್ಕೆ ಈ ಅಣು ಸ್ಥಾವರಗಳು ಮಾರಕ ಎನ್ನುವ ವಿಚಾರವೂ ಇದೆ.

ಮಾನ್ಯ ಶಿವರಾಮ ಕಾರಂತರು ಈ ಅಣು ಸ್ಥಾವರವನ್ನು ಮಾಡಬೇಡಿ ಎಂದು ಎಚ್ಚರಿಸುತ್ತಿದ್ದಾರೆ. ಇಂತಹ ವಿಚಾರ ವಿಶ್ವದ ಇನ್ನಿತರ ಕಡೆಗಳಲ್ಲಿಯೂ ಕೇಳಿಬರುತ್ತಿದೆ.

ಆದರೆ ಭಾರತ ದೇಶದ, ವಿಶೇಷವಾಗಿ ಕರ್ನಾಟಕ ಇಂಧನದ ಸ್ಥಿತಿ ಶೋಚನೀಯವಾಗಿದೆ. ನಮ್ಮಲ್ಲಿ ಕಲ್ಲಿದ್ದಲು ಇಲ್ಲ; ಎಣ್ಣೆ ಇಲ್ಲ; ಗ್ಯಾಸ್ ಇಲ್ಲ; ರಾಯಚೂರಿನಲ್ಲಷ್ಟೇ ಶಾಖೋತ್ಪನ್ನ ಘಟಕವಿದೆ. ಈ ಹಿನ್ನೆಲೆಯಲ್ಲಿ ಬಹು ಕಷ್ಟಪಟ್ಟು ಕೇಂದ್ರದ ಮನ ಒಲಿಸಿ ಕೈಗಾವನ್ನು ತೆಗೆದುಕೊಂಡಿದ್ದೇವೆ.

(ವಿಧಾನಪರಿಷತ್ : ಮಾರ್ಚ್ 13, 1987)

## ಪವರ್ ಕಟ್, ಅನಿವಾರ್ಯ

ಜೆ.ಹೆಚ್. ಪಟೇಲ್ (ವಿದ್ಯುಚ್ಛಕ್ತಿ ಸಚಿವರು): ವಿದ್ಯುತ್ ಕಡಿತ ವಿಧಿಸಿರುವುದಕ್ಕೆ ಕಾರಣವಿದೆ. ನಮ್ಮ ಜನರೇಷನ್ ಸಾಮರ್ಥ್ಯ 7,600 ದಶಲಕ್ಷ ಯೂನಿಟ್ಟು. ಆದರೆ ಬೇಡಿಕೆ ಇರುವುದು 10,200 ದಶಲಕ್ಷ ಯೂನಿಟ್ಟು. ಹೀಗಾಗಿ ದೊಡ್ಡ ಉದ್ದಿಮೆಗಳ ಮೇಲೆ 65 ಪರ್‌ಸೆಂಟ್ ಕಟ್; ಆದರೆ ಹಳ್ಳಿಗಳಲ್ಲಿ ಆರು ಗಂಟೆ ಇದ್ದ ಲೋಡ್ ಷಡ್ಡಿಂಗ್ ಮೂರು ಗಂಟೆಗೆ ಇಳಿದಿದೆ.

ರಾಮಕೃಷ್ಣ ಹೆಗಡೆ (ಮುಖ್ಯಮಂತ್ರಿ): 1981 ರಲ್ಲಿ ಇದ್ದಕ್ಕಿದ್ದಂತೆ ಶೇ. 100 ರಷ್ಟು ವಿದ್ಯುತ್ ಕಡಿತ ಮಾಡಿದ್ದು ಮಾನ್ಯ ಮೊಯ್ಲಿಯವರಿಗೆ ನೆನಪಿರಬೇಕು?

ಎಂ. ವೀರಪ್ಪ ಮೊಯಿಲಿ (ವಿರೋಧಪಕ್ಷದ ನಾಯಕರು): ಚೆನ್ನಾಗಿ ನೆನಪಿದೆ. ಆದರೆ ಅದಕ್ಕೆ ಕಾರಣ ಅಧಿಕಾರಿಗಳು ಕೊಟ್ಟ ತಪ್ಪು ಸಲಹೆ. ಕೂಡಲೇ ಒಂದೇ ದಿನದಲ್ಲಿ ನಾವು ತಪ್ಪನ್ನು ಸರಿಮಾಡಿಕೊಂಡೆವು. ಆದರೆ ನಿಮ್ಮ ವಿದ್ಯುತ್ ಉತ್ಪಾದನೆ ಬಳಕೆ ಯೋಜನೆಯೇ ಸರಿ ಇಲ್ಲವಲ್ಲ.

ಜೆ.ಹೆಚ್. ಪಟೇಲ್: ಮಾನ್ಯ ಸಭಾಧ್ಯಕ್ಷರೇ, ವಾಸ್ತವಿಕ ಅಂಶಗಳನ್ನು ನಾವಾಗಲೀ, ನೀವಾಗಲೀ ತಿಳಿದುಕೊಳ್ಳಲೇ ಬೇಕು. ಈಗಿರುವ ಸ್ಥಿತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಈ ಪವರ್ ಕೊರತೆ ಇನ್ನೂ ನಾಲ್ಕೆಂಟು ವರ್ಷ ಮುಂದುವರಿದೇವರಿಯತ್ತದೆ. ಇದನ್ನು ನಾವು ಸಾಮಾನ್ಯವಾಗಿ ಜನರಿಗೆ ಮನಮುಟ್ಟುವಂತೆ ಹೇಳಲೇಬೇಕು.

(ವಿಧಾನಸಭೆ ಕಲಾಪ : ಜನವರಿ 20, 1984)

## ಟ್ರಾನ್ಸ್‌ಮಿಷನ್ ಲಾಸ್

ವಿದ್ಯುಚ್ಛಕ್ತಿ ಉತ್ಪಾದನೆ ಜಾಗದಿಂದ ಅಂತಿಮವಾಗಿ ಬಳಕೆದಾರ ಉಪಯೋಗಿಸುವವರೆಗಿನ ವಿದ್ಯುತ್ ರವಾನೆಯಲ್ಲಿ ನಷ್ಟ ಆಗುವುದೇ ಟ್ರಾನ್ಸ್‌ಮಿಷನ್ ಲಾಸ್- ಇದೊಂದು ಸರ್ವಸಾಮಾನ್ಯ ನಷ್ಟ. ಅಂತರರಾಷ್ಟ್ರೀಯ ಮಟ್ಟದಲ್ಲೂ ಇದು ವರದಿಯಾಗುತ್ತಿರುತ್ತದೆ. ಜಪಾನ್ ಮುಂತಾದ ಮುಂದುವರೆದ ರಾಷ್ಟ್ರಗಳಲ್ಲಿ ಶೇಕಡಾ 6ಕ್ಕಿಂತ ಕಡಿಮೆ ನಷ್ಟವಿದೆ.

ನಮ್ಮ ದೇಶದ ಟ್ರಾನ್ಸ್‌ಮಿಷನ್ ಲಾಸ್ ಸರಾಸರಿ 21 ಪರ್ಸೆಂಟು. ಬಿಹಾರದಲ್ಲಿ 30ಕ್ಕೂ ಹೆಚ್ಚು; ಹಿಮಾಚಲದಲ್ಲಿ 15; ನಮ್ಮ ರಾಜ್ಯದಲ್ಲಿ 22 ಪರ್ಸೆಂಟು. ಪ್ರತಿ ವರ್ಷ ಒಂದು ಪರ್ಸೆಂಟಿನಂತೆ ನಷ್ಟವನ್ನು ಕಡಿಮೆ ಮಾಡಿಕೊಂಡು ಬರುವ ಗುರಿ ನಮ್ಮದು.

ನಮ್ಮ ವಿದ್ಯುದಾಗಾರಗಳು ಪಶ್ಚಿಮ ಘಟ್ಟಗಳಲ್ಲಿವೆ. ಸಿಸ್ಟಮ್ ಇಂಪ್ರೂಮೆಂಟಿನಿಂದ ಇದನ್ನು ಕಡಿಮೆ ಮಾಡುವ ಪ್ರಯತ್ನದಲ್ಲಿದ್ದೇವೆ.

ವಿದ್ಯುತ್ ಮಂಡಲಿ ನೌಕರರಿಗೆ ಉಚಿತವಾಗಿ ವಿದ್ಯುಚ್ಛಕ್ತಿ ಏಕೆ ಪೂರೈಸುತ್ತಿದ್ದೀರಿ ಎಂದು ಕೆಲವರು ಪ್ರಶ್ನಿಸಿದ್ದೀರಿ.. 20 ವರ್ಷಗಳ ಕೆಳಗೆ ಕೆಇಬಿ ನೌಕರರೊಂದಿಗೆ ಮಾಡಿಕೊಂಡಿದ್ದ ಒಪ್ಪಂದವಿದು.. ಕೂಡಲೇ ಇದನ್ನು ರದ್ದು ಪಡಿಸುವ ಬದಲು ಕೊರತೆ ಕಾರಣ ಕೆಇಬಿ ನೌಕರರಿಗೂ 200 ಯೂನಿಟ್ಟುಗಳನ್ನು ನಿರ್ದಿಷ್ಟಗೊಳಿಸಿದ್ದೇವೆ.

(ಜೆ.ಹೆಚ್. ಪಟೇಲ್ (ವಿದ್ಯುತ್ ಖಾತೆ ಮಂತ್ರಿ) ವಿಧಾನಸಭೆ: ಸೆಪ್ಟೆಂಬರ್ 3, 1987)

## ಮೆಗಾವ್ಯಾಟ್ : 1994-95ರ ಸ್ಥಿತಿ

ಮಾನ್ಯ ಅಧ್ಯಕ್ಷರೇ, ಎಲ್ಲಿಂದ ಪ್ರಾರಂಭ ಮಾಡಿ ಎಲ್ಲಿಗೆ ನಿಲ್ಲಿಸಬೇಕೆಂಬುದು ಅರ್ಥವಾಗುತ್ತಿಲ್ಲ. ವರ್ಷ 3 ಲಕ್ಷ ಕನೆಕ್ಷನ್ಸ್ ಜಾಸ್ತಿಯಾಗುತ್ತಿದೆ. ಈಗ 66 ಲಕ್ಷ ಕನೆಕ್ಷನ್ಸ್ ರಾಜ್ಯದಲ್ಲಿ ಇವೆ. ಈ 66 ಲಕ್ಷ ಜನರು ಒಂದು ಸಾರಿ ಸ್ವಿಚ್ ಆನ್ ಮಾಡಿದರೆ 10200 ಮೆಗಾವ್ಯಾಟ್ ವಿದ್ಯುಚ್ಛಕ್ತಿ ಬೇಕು. ಆದರೆ ನಮ್ಮಲ್ಲಿ ಇವತ್ತು ಒಟ್ಟು ಉತ್ಪಾದನೆ ಮಾಡುವ ಶಕ್ತಿ ಇರುವುದು 3300 ಮೆಗಾವ್ಯಾಟ್. ವಾಸ್ತವವಾಗಿ ಉತ್ಪಾದನೆಯಾಗುತ್ತಿರುವುದು 2400 ಮೆಗಾವ್ಯಾಟ್. ಬೇರೆ ಬೇರೆ ಕೇಂದ್ರದ ವಿದ್ಯುತ್ ಅಂದರೆ ನೈವೇಲಿ, (ತಮಿಳುನಾಡು) ಕಲ್ಪಾಕಂ ಮತ್ತು ರಾಮಗುಂಡುವಿನಿಂದ ಬರುತ್ತದೆ. ಈ 3 ಕೇಂದ್ರಗಳಿಂದ ಬರತಕ್ಕ ವಿದ್ಯುತ್ ಒಟ್ಟು 600 ಮೆಗಾವ್ಯಾಟ್. 2400 ಮೆಗಾವ್ಯಾಟ್ ನಾವು ಜನರೇಟ್ ಮಾಡುವುದು. ಹೊರಗಡೆಯಿಂದ ಬರತಕ್ಕದ್ದು 600 ಮೆಗಾವ್ಯಾಟ್. ಹೀಗೆ ಒಟ್ಟು 3000 ಮೆಗಾವ್ಯಾಟ್ ನಮ್ಮಲ್ಲಿ ಇರತಕ್ಕ ವಿದ್ಯುಚ್ಛಕ್ತಿ. ಆದರೆ ಇದನ್ನು ಹೇಗೆ ನಾವು ಮ್ಯಾನೇಜ್ ಮಾಡಬೇಕು.

ವಿದ್ಯುತ್ ಪರಿಸ್ಥಿತಿ ಬಗೆಗೆ ಫೆಬ್ರುವರಿ 1996ರ ಸ್ಥಿತಿ ವಿವರಿಸುತ್ತಿದ್ದೇವೆ. ಮುಂದಿನ ವರ್ಷದೊಳಗಾಗಿ ವೇಗರಿಸುವ ವೋಲ್ಟೇಜ್ ಸಿಸ್ಟಂ ಅಥವಾ ಅನಾವಶ್ಯಕ ಪವರ್ ಕಟ್ ನಿಲ್ಲಿಸುವ ಭರವಸೆ ಕೊಡುತ್ತೇನೆ.

ಇನ್ನು ಮೂರೂವರೆ ನಾಲ್ಕು ವರ್ಷಗಳಲ್ಲಿ ಆರು ಸಾವಿರ ಮೆಗಾವ್ಯಾಟ್ ವಿದ್ಯುತ್ ಉತ್ಪಾದನೆ ಆಗುವ ಯೋಜನೆಗಳು ನಡೆದಿವೆ.

ಜೊತೆ ಜೊತೆಗೆ ವಿದ್ಯುತ್ ಕಳುವಿನ ಪ್ರಸಂಗಗಳ ಬಗೆಗೆ ಎಚ್ಚರ ವಹಿಸಿದ್ದೇವೆ. The vigilance wing of KEB was dead; Now we have revived it.

ಶಾಸಕರಾದ ಮಾನ್ಯ ಜ್ಞಾನೇಂದ್ರ ಒಳ್ಳೆಯ ಕಾವ್ಯದ ಮಾತಿನಲ್ಲಿ ಹೇಳಿರುವಂತೆ ಕತ್ತಲಿನಿಂದ ಬೆಳಕಿನೆಡೆಗೆ ಸಾಗಿದ್ದೇವೆ. ಕತ್ತಲು ಆಗದಂತೆ ನೋಡಿಕೊಳ್ಳುತ್ತೇವೆ.

(ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ) ವಿಧಾನಸಭೆ ಫೆಬ್ರವರಿ 27, 1986)

## ಕೆಇಬಿ ಖಾಸಗೀಕರಣವಾಗುವುದಿಲ್ಲ

ಕೆಇಬಿ ಯನ್ನು ಖಾಸಗೀಕರಣ ಮಾಡುವುದಕ್ಕೆ ಅವಕಾಶ ಇದೆ. Totally we need about Rs. 405 crores in another two to three years. ನಾವು ಎಲೆಕ್ಟ್ರಿಸಿಟಿ ಜನರೇಟ್ ಮಾಡಿ ಅದನ್ನು ಸರಿಯಾಗಿ ಟ್ರಾನ್ಸ್‌ಮಿಟ್ ಮಾಡದೇ ಇದ್ದರೆ distribution, power theft, break-down, voltage drop. ಇವೆಲ್ಲಾ ಸಮಸ್ಯೆಗಳು ಈಗಲೂ ಇವೆ. ಖಾಸಗೀಕರಣ ಮಾಡಬೇಕೆಂದಿದ್ದರೆ ನಾವು ಈಗಲೂ ಮಾಡಬಹುದು. ವೆಸ್ಟ್‌ಬೆಂಗಾಲ್‌ನಲ್ಲಿ ವಿದ್ಯುಚ್ಛಕ್ತಿ ಮಂಡಳಿಯನ್ನು ಖಾಸಗೀಕರಣಗೊಳಿಸಿದ್ದಾರೆ. Goenka has taken over for distribution in Calcutta city. ಅವರು ಇಲ್ಲಿಗೆ ಬಂದಿದ್ದರು. ಆದರೆ ನಾವು ಆ ಖಾಸಗೀಕರಣ ಮಾಡುವುದಕ್ಕೆ ಒಪ್ಪಿಲ್ಲ.

(ಜೆ.ಹೆಚ್. ಪಟೇಲ್ ವಿಧಾನಸಭೆ ಜುಲೈ 12, 1999)

## ವಿದ್ಯುತ್ ಉತ್ಪಾದನೆಯಲ್ಲಿ ಪಟೇಲರ ಸಾಧನೆ

ನಮ್ಮ ವಿದ್ಯುತ್ ಉತ್ಪಾದನೆ ಮತ್ತು ವಿತರಣೆ ಬಗೆಗೆ ಮುಖ್ಯ ಮಂತ್ರಿಯಾಗಿ ವಿವರಗಳನ್ನು ಹೇಳಬಯಸುತ್ತೇನೆ. We have already added 510 mwtts. of power. We are going to add another 600 mwtts. ಪ್ರೈವೇಟ್ ಸೆಕ್ಟಾರ್‌ದು 300 ಆಗುತ್ತದೆ. ನಮ್ಮ ಥರ್ಮಲ್ ಜನರೇಷನ್ 5528 ಮಿಲಿಯನ್ ಯೂನಿಟ್ will be added at Raichur Thermal Station ಯಾರಾದರೂ ಹೋಗಿ ರಾಯಚೂರು ಥರ್ಮಲ್ ಸ್ಟೇಷನನ್ನು ನೋಡಿದ್ದೀರಾ? ಏನು ಕೆಲಸ ನಡೆದಿದೆ? ಎಷ್ಟು ವೇಗವಾಗಿ, ತ್ವರಿತವಾಗಿ, ಈಗಾಗಲೇ 5 ಮತ್ತು 6 ಆಯಿತು. 7ನ್ನೂ ಈಗಾಗಲೇ ಪ್ರಾರಂಭ ಮಾಡುತ್ತಿದ್ದೇವೆ. And for the first time 33% generation has been added in one year. No State has done this much. ಇದು ಏಕೆ ಕಾಣುವುದಿಲ್ಲ? ಹಳ್ಳಿಗಾಡಿನಲ್ಲಿ ತೊಂದರೆ ಇದೆ. ಲೋಡ್ ಷೆಡ್ಡಿಂಗ್‌ನ ತೊಂದರೆ ಇದೆ. ಪವರ್ ಕಟ್ ಇದೆ ಒಪ್ಪಿಕೊಳ್ಳುತ್ತೇವೆ. ಅದನ್ನು ಹೇಗೆ ಮ್ಯಾನೇಜ್ ಮಾಡಬೇಕು ಎಂಬ ಬಗೆಗೆ ಪರಿಶೀಲನೆ ನಡೆಸಿದ್ದೇವೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ನವೆಂಬರ್ 10, 1998)

# 19

# "ಬ್ರಹ್ಮ ನಿಂಗೆ ಜೋಡಿಸ್ತೀನಿ............" (I)

## ಪಾನ ನಿಷೇಧ : ಶಾಸಕಾಂಗ ಬಿಡಿಸಲಾಗದ "ರಸಪ್ರಶ್ನೆ"

ಸಾಹಿತಿ ಜಿ.ಪಿ. ರಾಜರತ್ನಂ ಸೃಷ್ಟಿಸಿದ ಒಂದು ವ್ಯಕ್ತಿ ಚಿತ್ರ 'ಹೆಂಡ್ಕುಡಕ ರತ್ನ'. ಕನ್ನಡ ಓದುಗರ ಮೃದುಮನವನ್ನು ಖುಷಿ – ಕನಿಕರಗಳ ಭಾವ ಮಿಶ್ರಣದೊಂದಿಗೆ ಕಲುಕಿದ ಹೃದಯಂಗಮ ವ್ಯಕ್ತಿ ಚಿತ್ರವಿದು. ಇಂದಿಗೂ ಗ್ರಾಮ–ನಗರಗಳೆನ್ನದೆ ಬಹುತೇಕ ಸಂಜೆ ವೇಳೆ ಕಾಣಬರುವ ಸುಖ ವ್ಯಸನಿ ಈತ. ಇಡೀ ದಿನದ ಆಯಾಸವನ್ನು ಕ್ಷಣಕಾಲ ಮರೆಯುವುದಷ್ಟೇ ಈತನ ಧ್ಯಾನ. ಇದೇ ಗುಂಗಿನಲ್ಲಿ ಸೂರ್ಯ ಮರೆಯಾದ ಕೂಡಲೇ ಈಚಲ ಮರದವ್ವನಿಗೋ, ಸೇಂದಿ – ಸಾರಾಯಿಗೋ, ಚುನಾವಣೆ ಕಾಲದಲ್ಲಿ ಚಲಾವಣೆಗೆ ಬಂದ ಸ್ಯಾಚೆಟ್ಟಿಗೋ, ಕೊನೆಗೆ ಯಾವುದೂ ಸಿಗದಿದ್ದಲ್ಲಿ ಕಾಯಂ ಸಿಗುವ ಕಳ್ಳಭಟ್ಟಿಗೋ ಮೊರೆಹೋಗುವ ಅಮಾಯಕ. ಕ್ಷಣಿಕ ಸುಖಿ.

ಶ್ರಮಕ್ಕೆ ದಕ್ಕದ ಸುಖವನ್ನು ನಿಶೆಯಲ್ಲಿ ಹುಡುಕುವ ಈ ನಿಕೃಷ್ಟ ಜೀವಿಯನ್ನು, ಉಳಿದವರಂತೆ ಅವಗಣಿಸದೆ, ಕೈಹಿಡಿದೆತ್ತಿದ ರಾಜರತ್ನಂ ವಿಚಾರಧಾರೆಯ ಬಗೆಗೆ ಪಟೇಲರಿಗೆ ತುಂಬು ಗೌರವ. ವಿಶೇಷ ಅಭಿಮಾನ. ಹೆಮ್ಮೆ. ಕನ್ನಡದ ಕಂದಮ್ಮಗಳಿಗೆ ಮುಗಿಲೆತ್ತರದ ಜೀವನಧರ್ಮ-ಮರ್ಮಗಳನ್ನು ಬಾಲಭಾಷೆಯಲ್ಲಿ ಸಿಹಿ ತುತ್ತಾಗಿ ಉಣಿಸಿದ ಈ ಕವಿ – ವಿಚಾರವಾದಿಯನ್ನು "ನಮ್ಮ ರಾಜರತ್ನಂ" ಎಂದೇ ಕರೆಯುತ್ತಿದ್ದರು ಇವರು.

ರಾಜರತ್ನಂಗೂ, ಪಟೇಲರಿಗೂ ಒಂದು ರೀತಿಯ ಚಿಂತನ ಸಮಾನತೆ ಇತ್ತು. ಹೆಂಡ್ಕುಡಕ ರತ್ನನಿಗೂ ಸಮಾಜದಲ್ಲಿ ಮಾನವ ಸಹಜ

ಮರ್ಯಾದೆಬೇಕೆಂದು ಹಂಬಲಿಸಿದವರು ರಾಜರತ್ನಂ. ಇದೇ ಧಾಟಿಯಲ್ಲಿ ನಿಜಜೀವನವನ್ನು ಜನಾಭಿಪ್ರಾಯ ಮುಖಂಡರಾಗಿ ಅರ್ಥಮಾಡಿಕೊಂಡಿದ್ದ ಪಟೇಲರಿಗೆ 'ಹೆಂಡ್ಕುಡ ರತ್ನ' ಸಮಾಜವನ್ನು ಶೋಷಿಸುವ ಕೆಲವು ಶ್ರೀಮಂತರಿಗಿಂತ ಸಾವಿರಪಾಲು ಮೇಲಾಗಿ ಕಂಡಿದ್ದ.

. ಶೋಷಿತನಾಗಿಯೇ ಮುಂದುವರೆದಿರುವ ಈ ರತ್ನನಿಗೆ ಶಾಸಕಾಂಗದಲ್ಲಿ ಅನುಕಂಪ, ಸಹಾನುಭೂತಿ ತೋರಿದವರು ಪಟೇಲರು. ಕನಿಷ್ಠ ಕಲಬೆರಕೆ ಇಲ್ಲದ ಪಾನೀಯವಾದರೂ ಈತನಿಗೆ ಸಿಗಲಿ ಎಂದು ಸಂಸದೀಯ ವೇದಿಕೆಯಲ್ಲಿ ದನಿ ಎತ್ತಿದವರು. ಸ್ವಲ್ಪ ಮಟ್ಟಿಗೆ ಯಶಸ್ವಿಯೂ ಆದವರು. ಆದರೆ ಇವರು ಎಡವಿದ್ದು ಲೈಸೆನ್ಸ್ ಉದಾರತೆಯಲ್ಲಿ. ಮದ್ಯದ ಅಂಗಡಿಗಳ ಪರವಾನಗಿ ಇವರ ಕಾಲದಲ್ಲಿ ದುಪ್ಪಟ್ಟು ಹೆಚ್ಚಿದ್ದು ದುರದೃಷ್ಟಕರ. ಹೆಜ್ಜೆ ಹೆಜ್ಜೆಗೂ ಮದ್ಯದಂಗಡಿಗಳು ಹುಟ್ಟಿಕೊಳ್ಳುವಂತಾಯಿತು ನಮ್ಮ ರಾಜ್ಯದ ಸ್ಥಿತಿ.

ಪಟೇಲರನ್ನು ಕುರಿತ ಸಮೀಕ್ಷೆ ನಡೆಸುವಾಗ ಅವರ ಸ್ವಚ್ಛಂದದ, ಜೀವಂತಿಕೆಯ ಹಾಗೂ ಕಪಟರಹಿತ ವಿಚಾರದರ್ಶನಕ್ಕೆ ಮದ್ಯಪಾನಕ್ಕಿಂತ ಮಿಗಿಲಾದ ಸೂಕ್ಷ್ಮ ಮತ್ತು ಸಂಕೀರಣದ ವಿಷಯ ಮತ್ತೊಂದು ಇರಲಾರದು. ಸದನದ ಹೊರಗೆ ಹಾಗೂ ಒಳಗೆ ಇರುವ ಕುಡಿತದ ಬಗೆಗಿನ ಸಮಾಜದ ದ್ವಂದ್ವ ದೃಷ್ಟಿಕೋನವನ್ನು ಬಿಚ್ಚುಮನಸ್ಸಿನಿಂದ ವಿಶ್ಲೇಷಿಸಿದವರು ಇವರು. ಮಡಿವಂತರಿಗೆ, ನಿಷ್ಠುರವಾದಿಯಾದ ಪಟೇಲರು, ವಿಲಕ್ಷಣ ವ್ಯಕ್ತಿಯಂತೇ ಕಂಡರು. ಮುಸುಕಿನಲ್ಲಿ ಮದ್ಯ ಸೇವಿಸುವ ಇಲ್ಲವೇ ಚುನಾವಣೆ ಕಾಲದಲ್ಲಿ ಅಬಕಾರಿ ವಲಯದ ಮರ್ಜಿಗೊಳಗಾಗುವ ವರ್ಗಕ್ಕೆ ಮಾತ್ರ ಪಟೇಲರ ಮಾತುಗಳು ಎದೆ ಮುಟ್ಟಿಕೊಳ್ಳುವಂತೆ ಮಾಡಿದ್ದು ಸತ್ಯ.

ಪ್ರಪಂಚ ಪುಟ್ಟದಿದ್ದಾಗ ದೇವತೆಗಳಿಗೆ ಮತ್ತು ದಣಿಗೆ ಮಾತ್ರ ಮೀಸಲು ಇದ್ದಿರಬಹುದಾದ ಮಾದಕವಸ್ತುಗಳಿಗೆ ಸೂಕ್ಷ್ಮಾತಿಸೂಕ್ಷ್ಮ ಸಂವೇದನೆಯ ವಿನ್ಯಾಸವಾದ ಮನುಷ್ಯ ಆಕರ್ಷಿತನಾದದ್ದು ನಾಗರೀಕತೆಯ ನಿತ್ಯಸತ್ಯ. ಮುಂದೆ ಪಾನೀಯವೇ 'ಪರಮಾತ್ಮ'ನಾಯಿತು.

ಪ್ರಪಂಚದ ಯಾವುದೇ ಸಮಾಜದಲ್ಲಿಯೂ ಸಂಪೂರ್ಣ ಪಾನನಿಷೇಧ ಸಾಧ್ಯವಾಗಿಲ್ಲ ಎನ್ನುವುದಕ್ಕೆ ಪಟೇಲರು ಹಲವಾರು ನಿದರ್ಶನ ಕೊಡುತ್ತಿದ್ದರು. ವಿಶ್ವಾದ್ಯಂತ ಸಾಮಾಜಿಕ ದುರ್ಬಲತೆಯನ್ನು ಸ್ವಾರ್ಥಕ್ಕಾಗಿ ಬಳಸಿಕೊಂಡು ಬೆಳೆದ ವಿಸ್ಮಯಕಾರಿ ವಲಯ ಅಬಕಾರಿವರ್ಗ ಎಂದು ಪಟೇಲರು ಹೇಳುತ್ತಿದ್ದುದುಂಟು.

ನೆರೆಹೊರೆ ರಾಜ್ಯಗಳಲ್ಲಿ ಮದ್ಯಪಾನಕ್ಕೆ ಮುಕ್ತ ಅವಕಾಶ ಇರುವಾಗ ಕರ್ನಾಟಕದಲ್ಲಿ ಮಾತ್ರ ಪಾನನಿಷೇಧ ಸಾಧ್ಯವೇ?

ಈ ಪ್ರಶ್ನೆ ವಿಧಾನಮಂಡಲದ ಉಭಯ ಸದನಗಳಲ್ಲಿ ನೂರೆಂಟು ರೂಪದಲ್ಲಿ ಚರ್ಚೆಗೆ ಬಂದಿದೆ. ಹಲವಾರು ಶಾಸಕರು ಹಾಗೂ ರಾಜಕೀಯ

ಪಕ್ಷಗಳು ಪ್ರತಿಪಕ್ಷದಲ್ಲಿದ್ದಾಗ ಕೇಳಿದ ಈ ಪ್ರಶ್ನೆಗೆ ತಾವೇ ಅಧಿಕಾರಕ್ಕೆ ಬಂದಾಗ ಉತ್ತರಿಸಲು ಹೆಣಗಾಡಿ ವಿಫಲರಾದ ನಿದರ್ಶನಗಳು ನಮ್ಮಲ್ಲಿವೆ. ಸಮಾಜ ಮದ್ಯವಸ್ತುಗಳ ಸೇವನೆಗೆ ಬಲಿಯಾಗಿರುವವರೆಗೆ ಸಂಸದೀಯ ವೇದಿಕೆಯಿಂದ ಪಾನನಿಷೇಧ ಸಾಧ್ಯವಿಲ್ಲವೆಂಬ ಅರಿವು ಶಾಸಕಾಂಗಕ್ಕಿದೆ. ಇದೊಂದು ಸಂಸದೀಯ ಅಸಹಾಯಕತೆಯ ನಿದರ್ಶನ.

ಕರ್ನಾಟಕದಲ್ಲಿ ಪಾನನಿಷೇಧವನ್ನು ತರದಿರುವ ಬಗೆಗೆ ತಾವೇ ಮಂತ್ರಿಯಾಗಿ ಆಡಳಿತದಲ್ಲಿದ್ದ ಸರ್ಕಾರದ ವಿರುದ್ಧ ರಾಜೀನಾಮೆ ನೀಡುವ ಸ್ಥೈರ್ಯ ತೋರಿದವರು ಸ್ವಾತಂತ್ರ್ಯ ಯೋಧೆ ಶ್ರೀಮತಿ ಯಶೋಧರಾದಾಸಪ್ಪ

ಪಟೇಲರು ಅಬಕಾರಿ ಮಂತ್ರಿಯಾಗಿ ಸೇವೆ ಸಲ್ಲಿಸಿದುದು ಕೇವಲ 18 ತಿಂಗಳು ಮಾತ್ರ. (1983 ರ ಫೆಬ್ರವರಿಯಿಂದ 1984ರ ಆಗಸ್ಟ್‌ವರೆಗೆ) 1983 ರಿಂದ 1989 ಮತ್ತು 1994 ರಿಂದ 1999ರ ಅವಧಿಯಲ್ಲಿ ಅಬಕಾರಿ ಖಾತೆಯನ್ನು ನಿರ್ವಹಿಸಿದವರುಗಳ ಹೆಸರು ಹೀಗಿದೆ: ಸರ್ವಶ್ರೀ ರಮೇಶ ಸಿ. ಜಿಗಜಿಣಗಿ (1984-86); ಎಚ್.ಟಿ. ಕೃಷ್ಣಪ್ಪ (1986-87); ಡಿ.ಬಿ. ಇನಾಂದಾರ್ (1987-88); ಎಸ್.ಆರ್. ಬೊಮ್ಮಾಯಿ (ಮುಖ್ಯಮಂತ್ರಿಯಾಗಿ 1988-89); ತಿಪ್ಪೇಸ್ವಾಮಿ (1994-96); ಕೆ.ಬಿ. ಶಾಣಪ್ಪ (1996-98) ಮತ್ತು ಪಿ.ಎಸ್. ಜೈವಂತ್ (1998-99)

ಕರ್ನಾಟಕದಲ್ಲಿ ಮದ್ಯಪಾನನಿಷೇಧ ಖಂಡಿತಾ ಸಾಧ್ಯವಿಲ್ಲ ಎಂದು ಸರ್ಕಾರದ ನೀತಿಯನ್ನು ಸ್ಪಷ್ಟಪಡಿಸಿದ ಜೆ.ಹೆಚ್. ಪಟೇಲರು ಸದನದಲ್ಲಿ ಹೇಳಿದ ಕೆಲವು ಮಾತುಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಸಂದರ್ಭ: ಪಾನನಿಷೇಧಕ್ಕಾಗಿ ಉನ್ನತಾಧಿಕಾರ ಸಮಿತಿ ರಚಿಸುವಂತೆ ಸರ್ಕಾರವನ್ನು ಒತ್ತಾಯಿಸುವ ಖಾಸಗಿ ಸದಸ್ಯರ ನಿರ್ಣಯವೊಂದು 1986ರ ಫೆಬ್ರವರಿ 7 ರಂದು ಮಂಡಿತವಾಯಿತು. ಈ ಚರ್ಚೆಯ ಬಗೆಗೆ ಸದನದ ನಿರ್ಧಾರ ಹೊರಬಂದದ್ದು 1988ರ ಜನವರಿ 22 ರಂದು. ಕರ್ನಾಟಕ ವಿಧಾನಸಭೆ ಕಂಡ ಅತಿ ದೀರ್ಘಾವಧಿಯ ಖಾಸಗಿ ಶಾಸಕರ ನಿರ್ಣಯದ ಮೇಲಿನ ಚರ್ಚೆ ಇದು.

## ಮದ್ಯಪಾನ ನೀತಿ ಸುಧಾರಣೆ ಮಾಡಲು ಉನ್ನತಾಧಿಕಾರ ಸಮಿತಿ ನೇಮಕ ಮಾಡುವ ಬಗ್ಗೆ

ಕೆ.ಎಚ್. ಶ್ರೀನಿವಾಸ್: ಸನ್ಮಾನ್ಯ ಅಧ್ಯಕ್ಷರೇ, ಈ ಕೆಳಗಿನ ನಿರ್ಣಯವನ್ನು ಸಭೆಯ ಮುಂದೆ ಮಂಡಿಸುವುದಕ್ಕೆ ತಮ್ಮ ಅಪ್ಪಣೆ ಬೇಡುತ್ತೇನೆ.

"ಮದ್ಯಪಾನಕ್ಕೆ ಸಂಬಂಧಿಸಿದಂತೆ ರಾಜ್ಯದಲ್ಲಿ ಪ್ರಸ್ತುತ ನೀತಿ ಹಾಗೂ ವ್ಯವಸ್ಥೆ ಶ್ರೀ ಸಾಮಾನ್ಯನ ಹಾಗೂ ಬಡಜನರ ಹಿತಕ್ಕೆ ಮಾರಕವಾಗಿ ಪರಿಣಮಿಸಿರುವುದರಿಂದ ಈಗಾಗಲೇ ನಡೆದಿರುವ ದುರಂತಗಳು, ಅವುಗಳ ಬಗ್ಗೆ ನೇಮಿಸಲ್ಪಟ್ಟ ವಿಚಾರಣಾ ಆಯೋಗಗಳ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ

> ಬೇರೆ ಬೇರೆ ರಾಜ್ಯಗಳಲ್ಲಿ ಇರುವ ನೀತಿ ಹಾಗೂ ವ್ಯವಸ್ಥೆಯನ್ನು ಅಧ್ಯಯನ ಮಾಡಿ ಪಾನನಿರೋಧವೂ ಸೇರಿದಂತೆ ಬದಲಿ ನೀತಿ ಹಾಗೂ ವ್ಯವಸ್ಥೆಯ ಸಾಧ್ಯಸಾಧ್ಯತೆಯನ್ನು ಪರಿಶೀಲಿಸಿ ಸೂಕ್ತ ಶಿಫಾರಸ್ಸು ಮಾಡಲು ವಿಧಾನಮಂಡಲದ ಪ್ರತಿನಿಧಿಗಳನ್ನು ಒಳಗೊಂಡ ಒಂದು ಉನ್ನತಾಧಿಕಾರ ಸಮಿತಿಯನ್ನು ನೇಮಿಸಬೇಕೆಂದು ಈ ಸಭೆಯು ನಿರ್ಣಯಿಸುತ್ತದೆ.

ಸನ್ಮಾನ್ಯ ಅಧ್ಯಕ್ಷರೇ, ನಾನು ಹಲವಾರು ದಿವಸಗಳಿಂದ ಇಂಥ ಒಂದು ಗಂಭೀರ ವಿಷಯವನ್ನು ಈ ಸದನದ ಮುಂದೆ ತಂದು ಪಕ್ಷ ಪಂಗಡಗಳ ಭಿನ್ನ ಭೇದವಿಲ್ಲದೆ ಹಾಗೂ ಯಾವುದೇ ಆಯಾಮಗಳನ್ನು ತರದೆ ಚಿಂತನೆ ಮಾಡಬೇಕೆಂದು ಆಸೆಪಟ್ಟಿದ್ದೆ. ನಿಜ, ಇವತ್ತಿನ ಸಂದರ್ಭ ಅದಕ್ಕೆ ಅಷ್ಟು ಸರಿಯಾಗಿಲ್ಲ. ಏಕೆಂದರೆ ನಾವೇನಾದರೂ ಕೆಲವು ಮಾತುಗಳನ್ನು ಆಡಿದರೆ ಅದು ಇತ್ತೀಚಿನ ಕೆಲವು ಘಟನೆಗಳು ನಿರ್ಮಾಣ ಮಾಡಿದ ವಾತಾವರಣದಿಂದ ಅದಕ್ಕೆ ಜೋಡಣೆಯಾಗಿ ಬಂತು ಎಂಬ ವಿಕೃತಕ್ಕೆ ಒಳಗಾಗುವ ಅಪಾಯ ಇದೆ. ನಾನು ಬಹಳ ಕಳಕಳಿಯಿಂದ ಎಲ್ಲಾ ಮಾನ್ಯ ಸದಸ್ಯರನ್ನು ಕೇಳಿಕೊಳ್ಳುತ್ತೇನೆ. ಇತ್ತೀಚಿಗೆ ನಡೆದಿರುವ ಘಟನೆಗೂ ಈ ನಿರ್ಣಯಕ್ಕೂ ಏನೂ ಸಂಬಂಧ ಇಲ್ಲದೇ ಇರುವುದರಿಂದ ಅದರ ಛಾಯೆಯ ಅಡಿಯಲ್ಲಿ ಈ ನಿರ್ಣಯವನ್ನು ನೋಡಬಾರದು. ನಾನೂ ಕೂಡ ಆ ಯಾವ ಆಯಾಮಗಳೂ ಬರದೇ ಇರುವಂತೆ ನೋಡಿಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೇನೆ. ಉದ್ದೇಶ ಶುದ್ಧಿಯಿಂದ ಇದನ್ನು ನೋಡುವುದಕ್ಕೆ ಪ್ರಯತ್ನ ಮಾಡಬೇಕು.

ಒಂದು ವಿಚಾರ ಒಪ್ಪುತ್ತೇನೆ. ಮದ್ಯಪಾನ ವ್ಯವಸ್ಥೆ ಏನಿದೆ ಯಾರೇ ಹೇಳಲಿ ಒಂದು ರಾಜ್ಯ ಸರ್ಕಾರ ತನಿಗಿಷ್ಟ ಬಂದಂತೆ ಮಾಡಿ ಯಶಸ್ವಿಯಾಗುವ ವ್ಯವಸ್ಥೆ ಅಲ್ಲ. ಇದನ್ನು ಜೆ.ಹೆಚ್. ಪಟೇಲರು ಬೆಳಗ್ಗೆ ಹೇಳುತ್ತಿದ್ದರು. ಕೇವಲ ಕರ್ನಾಟಕ ಸರ್ಕಾರ ಮಾತ್ರ ಒಂದು ವ್ಯವಸ್ಥೆ ಬದಲಾಯಿಸಿದರೆ ಪರಿಣಾಮಕಾರಿಯಾಗುವುದಿಲ್ಲ. ಅದೇನೇ ಇರಬಹುದು. ಈಗಿರತಕ್ಕ ವ್ಯವಸ್ಥೆಗೆ ಪರ್ಯಾಯವಾಗಿ ಮುಖ್ಯವಾಗಿ ಜೆ.ಹೆಚ್. ಪಟೇಲರು ಗಮನ ಕೊಡಬೇಕಾಗಿದೆ.

ಇವತ್ತು ಮದ್ಯಪಾನದ ವ್ಯವಸ್ಥೆ ಅಥವಾ ನೀತಿಯನ್ನು ಒಂದು ರಾಜ್ಯಕ್ಕೆ ಸೀಮಿತವಾಗಿ ಬೇಲಿ ಕಟ್ಟಿಕೊಂಡು ಮಾಡುವುದಕ್ಕೆ ಬರುವುದಿಲ್ಲ. ಅದನ್ನು ಪ್ರಪ್ರಥಮವಾಗಿ ಒಪ್ಪಿಕೊಳ್ಳುವುದಕ್ಕೆ ಬಯಸುತ್ತೇನೆ. ಈ ನಿರ್ಣಯ ತಂದಂಥ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಒಂದೇ ಬೇರೆ ಮಾಡಬೇಕು ಎಂಬ ಸಲಹೆಯನ್ನು ನಾನು ಕೊಡುವುದಕ್ಕೆ ತಯಾರಿಲ್ಲ. ನಿಜವಾಗಿಯೂ ಕೂಡ ಇಡೀ ಭಾರತ, ಇಡೀ ರಾಷ್ಟ್ರ ಮದ್ಯಪಾನದ ಬಗ್ಗೆ ಒಂದು ನೀತಿಯನ್ನು, ವ್ಯವಸ್ಥೆಯನ್ನು, ಹೊಸದಾಗಿ ಕಂಡುಕೊಳ್ಳಬೇಕಾದ ಅಗತ್ಯ ಬಹಳ ಇದೆ ಎಂದು ನನ್ನ ಭಾವನೆ. ಒಂದು ಸಂದರ್ಭದಲ್ಲಿ ಕರ್ನಾಟಕ ರಾಜ್ಯದವರೇ ಇಡೀ ರಾಷ್ಟ್ರಕ್ಕೆ ಮಾದರಿಯಾಗುವುದಕ್ಕೆ ಮಾಡಲು ಸಾಧ್ಯವಿದ್ದರೆ ಬಹಳ ಸಂತೋಷ. ಅದು ಸಾಧ್ಯಾಸಾಧ್ಯತೆಯನ್ನು ಅವಲಂಬಿಸಿದೆ. ಈಗಲೇ ಸಾಧ್ಯ ಎಂದು ಒಂದು ಪಂಥವನ್ನು ಕಟ್ಟುವುದಕ್ಕೆ ನಾನು ತಯಾರಿಲ್ಲ. ಮದ್ಯಪಾನ ಬಹಳ ಪುರಾತನವಾದುದು. ನಾಗರೀಕತೆಯ ಯಾವ ಮಜಲಿನಲ್ಲಿ ಇದು ಹುಟ್ಟಿತೋ ಗೊತ್ತಿಲ್ಲ.

ಎಂ.ಪಿ. ಪ್ರಕಾಶ್: ಅಜಮಿಳನ ಕಾಲದಲ್ಲಿ.

**ಕೆ.ಎಚ್.** ಶ್ರೀನಿವಾಸ್: ಬಹಳ ಹಿಂದೆ ವೇದ ಕಾಲದಲ್ಲಿ ಯಜ್ಞಯಾಗಾದಿಗಳನ್ನು ಮಾಡಿದರೆ ಅದರ ತುದಿಯಲ್ಲಿ ಸೋಮರಸವನ್ನು ಸೃಷ್ಟಿ ಮಾಡಿ ಪಾನ ಮಾಡುತ್ತಿದ್ದರು ಎಂದು ಕೇಳಿದ್ದೇವೆ. ದೇವತೆಗಳಿಗಂತೂ ಸ್ಪೆಷಲ್ ಪಾನ ಇತ್ತು. ದೇವತೆಗಳ ರಾಯಲ್ ಸೆಲ್ಯೂಟ್ ಅದು. ಆದರೆ ಮನುಷ್ಯರೂ ಕೂಡ ಸೋಮಪಾನ ಮಾಡುತ್ತಿದ್ದರು. ಯಜ್ಞಯಾಗಾದಿಗಳ ಸಾರ್ಥಕತೆಯ ಅಂಶಗಳಲ್ಲಿ ಸೋಮರಸವನ್ನು ಕುಡಿಯತಕ್ಕದ್ದೂ ಇತ್ತು ಎಂದು ಹೇಳುವುದನ್ನು ನಾವು ಕೇಳಿದ್ದೇವೆ. ಇದರ ನಿಜವಾದ ಅರ್ಥಗಳೇನು, ಸೂತ್ರಗಳೇನು ಎಂಬ ಬಗ್ಗೆ ವಿಶೇಷವಾದ ಪಾಂಡಿತ್ಯ ನಾನು ಪಡೆದಿಲ್ಲ. ಒಂದಂತೂ ನಿಜ. ನಮ್ಮ ನಾಗರೀಕತೆ ಹುಟ್ಟಿದ ಸಂದರ್ಭದಿಂದಲೇ ಬಹುಶಃ ಆದರೆ ತಾರುಣಾವಸ್ಥೆಯಲ್ಲೇ ಈ ಮದ್ಯಪಾನವನ್ನು ಮನುಷ್ಯ ಕಂಡುಹಿಡಿದುಕೊಂಡಿದ್ದಾನೆ.

ಮದ್ಯಪಾನದಿಂದ ಬರತಕ್ಕ ಆದಾಯ ವಿಷದ ರೂಪದಲ್ಲಿ ಯಾವ ರೀತಿ ಏರುತ್ತಿದೆ ಎಂದರೆ, ಈ ಪ್ರಮಾಣದಲ್ಲಿ ಬೇರೆ ಯಾವ ಆದಾಯವೂ ಏರುತ್ತಿಲ್ಲ. ಇದು ಹೇಗೆ ಏರುತ್ತಿದೆ ಎನ್ನುವ ಬಗ್ಗೆ ಯಾರೂ ಚಿಂತನೆ ಮಾಡುವುದಕ್ಕೆ ಹೋಗಿಲ್ಲ. ಇದು ಎಲ್ಲಿಂದ ಬರುತ್ತಿದೆ? ಇದಕ್ಕೆ ಹಣ ಎಲ್ಲಿಂದ ಬರುತ್ತಿದೆ?

ಕರ್ನಾಟಕ ರಾಜ್ಯದಲ್ಲಿ ಪಾನನಿರೋಧ ಕಾನೂನು ಜಾರಿಯಲ್ಲಿದೆ. ಇದು ದೊಡ್ಡ ವೈಪರೀತ್ಯ. ಇದು ಒಂದು ರೀತಿಯ ನಮ್ಮನ್ನು ನಾವೇ ಕಾನೂನು ಪ್ರಕಾರ ವಂಚಿಸಿಕೊಳ್ಳುತ್ತೇವೆನ್ನುವುದಕ್ಕೆ ಮಾದರೀ ಉದಾಹರಣೆ. ಹಿಂದೆ ನಮ್ಮ ಜತ್ತಿಯವರ ಕ್ಷೇತ್ರದಲ್ಲಿ ಇದನ್ನು ಮಾದರಿಯಾಗಿ ಇಟ್ಟುಕೊಂಡಿದ್ದರು. ಚಾಮರಾಜನಗರದಲ್ಲಿ Subjected to Correction 56 ತಾಲ್ಲೂಕುಗಳಲ್ಲಿ ಇತ್ತು. ಈಗ ಅದೂ ಕೂಡಾ ಹೋಯಿತು. ಶ್ರೀಮತಿ ಯಶೋಧರಮ್ಮ ದಾಸಪ್ಪನವರು ತಮ್ಮ ಆತ್ಮಸಾಕ್ಷಿಗೆ ವಿರುದ್ಧ ಕಾನೂನು ಮಾಡಿದ್ದರ ಬಗ್ಗೆ ಪ್ರತಿಭಟಿಸಿದರು. ಇವತ್ತು ನಮ್ಮ ರಾಜ್ಯದಲ್ಲಿ ಏನು ಮದ್ಯಪಾನದ ವ್ಯವಸ್ಥೆ ಇದೆಯೋ ಅದು ಶ್ರೀಮಾನ್ ರಾಮಕೃಷ್ಣ ಹೆಗಡೆಯವರ ಆ ಕಾಲದಲ್ಲೇ ಪರಿಣಿತಿಗೆ ಬಂದಿತು. ಅವರು ಹಿಂದೆ ಅರ್ಥ ಸಚಿವರಾಗಿ ಹಾಗೂ ಅಬಕಾರಿ ಸಚಿವರಾಗಿದ್ದಾಗ ಆ ಒಂದು ನಿರ್ಧಾರವನ್ನು ತೆಗೆದುಕೊಂಡಿದ್ದಾರೆ. ಅಲ್ಲಿಂದ ಇಲ್ಲಿಯವರೆಗೆ ಬೇರೆ ಬೇರೆ ಸರ್ಕಾರಗಳು ಬಂದರೂ ಕೂಡಾ ಅವರು ಹಾಕಿದ ಭದ್ರ ವ್ಯವಸ್ಥೆ ದಷ್ಟಪುಷ್ಟವಾಗಿ ಬೆಳೆದು ನಿಂತು ಎಲ್ಲಾ ಕಡೆಯಲ್ಲೂ ವ್ಯಾಪಕವಾಗಿ ಹರಡಿದೆ. ಇದು ಇವತ್ತು ಅವರನ್ನೇ ಹೆದರಿಸುವುದಕ್ಕೆ ಹೊರಟಿದೆ.

(ವಿಧಾನ ಸಭೆ, ಫೆಬ್ರವರಿ 7, 1986)

## ಪಾನನಿರೋಧದ ಬಗ್ಗೆ ಶಿಫಾರಸ್ಸು ಮಾಡಲು ಒಂದು ಉಚ್ಚ ಸಮಿತಿಯ ನೇಮಕ

ವೇದಾಂತ ಹೆಮ್ಮಿಗೆ: ಮಾನ್ಯ ಅಧ್ಯಕ್ಷರೇ, ಇವತ್ತು ಅನುಭವಿ ಸದಸ್ಯ ಮಾನ್ಯ ಶ್ರೀನಿವಾಸ್‌ರವರು ಮದ್ಯಪಾನದ ಬಗ್ಗೆ ಏನೊಂದು ನಿರ್ಣಯವನ್ನು ತಂದಿದ್ದಾರೆ, ಇದು ಬಹಳ

ಅರ್ಥಪೂರ್ಣವಾಗಿದೆ. ಈ ಸಭೆ ಮತ್ತು ಆಡಳಿತದಲ್ಲಿರುವ ಸರ್ಕಾರ ಚಿಂತನೆ ಮಾಡತಕ್ಕ ವಿಷಯವಾಗಿದೆ. ಮದ್ಯಪಾನವನ್ನು ನಿಲ್ಲಿಸಬೇಕೆಂಬ ಮಾತನ್ನು ನಾನು ಒಪ್ಪುವನಲ್ಲ. ಈ ದೇಶದಲ್ಲಿಯೇ ಏಕೆ ಜಗತ್ತಿನಲ್ಲಿಯೇ ಸಾಧ್ಯವಾಗಿಲ್ಲ. ನಮ್ಮ ದೇಶದಲ್ಲಿ ಪ್ರಯತ್ನ ಮಾಡಿರುವ ಅದು ಸಾಧ್ಯವಾಗಲಿಲ್ಲ. ಮದ್ಯಪಾನ ಇವತ್ತು ಸಮಾಜದ ಒಂದು ಅಂಗವಾಗಿದೆ. 2000 ವರ್ಷಗಳ ಹಿಂದೆ ಕೂಡ ಮದ್ಯಪಾನ ಇತ್ತು. ಇವತ್ತು ಸಮಾಜದ ವ್ಯವಸ್ಥೆ ಬಗ್ಗೆ ಚಿಂತನೆ ಮಾಡಿದಾಗ, ಕುಡಿಯದವನು ಹೋಗುತ್ತಾನೆ ಎಂದು ಹೇಳುತ್ತಾರೆ. ಈ ಸಂದರ್ಭದಲ್ಲಿ ಒಂದು ಪದವನ್ನು ಹೇಳಬೇಕಾಗಿದೆ. ಅದೇನೆಂದರೆ,

ಕುಡುಕರೆಮ್ಮುವರು ಎಮ್ಮ ಕುಡಿವವರು ಯಾರಿಲ್ಲ
ಕುಡಿದ ದೇವರ ಎಲ್ಲಾ ಪೂಜಿಪರು,
ಎಲ್ಲಾ ಮಾರಿ ಮಸಣಿಯ ಮುಂದೆ ಹೆಂಡವನ್ನು ಇಡುವರು,
ನಾವಿದನು ಕುಡಿದರೆ ಕುಡುಕರು ಎನ್ನುವರು
ದೇವ ದೇವತೆಗಳ ಕುಡಿದರೆ ಮಧುಪಾನ ಎನ್ನುವರು
ನಾವದನ್ನು ಕುಡಿದರೆ ಸುರಪಾನ ಎನ್ನುವರು

ಸಮಾಜದ ವ್ಯವಸ್ಥೆಯಲ್ಲಿ ಇವತ್ತು ಮದ್ಯಪಾನ ಹಾಸುಹೊಕ್ಕಾಗಿದೆ. ಸುಮಾರು 2000 ವರ್ಷಗಳ ಹಿಂದೆ ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿ ಮದ್ಯಪಾನ ಯಾವ ವ್ಯವಸ್ಥೆಯಲ್ಲಿತ್ತು ಎಂಬುದನ್ನು ಬರೆದಿದ್ದಾನೆ.

ಇಲ್ಲಿರತಕ್ಕ ಮೂರುನಾಲ್ಕು ವಿಷಯಗಳನ್ನು ಮಾತ್ರ ಸಭೆಯ ಗಮನಕ್ಕೆ ತರುವುದಕ್ಕೆ ಇಚ್ಛಿಪಡುತ್ತೇನೆ. ಮದ್ಯವನ್ನು ಮಿಶ್ರ ಮಾಡಿ ಮಾರುವವರಿಗೆ ಅಂದು ಸಹಿತ ದಂಡವಿಧಿಸುತ್ತಿದ್ದರು ಎಂಬುದಕ್ಕೆ ದಾಖಲೆಗಳಿವೆ.

'A fine of 600 panas shall be imposed on all offenders other than those who are manufacturers, purchasers or sellers in liquor traffic'.

ಯಾರು ಪರವಾನಿಗೆ ಇಲ್ಲದೆ ಮದ್ಯವನ್ನು ತಯಾರು ಮಾಡುತ್ತಿದ್ದರೋ ಅಂಥವರಿಗೆ ಹಿಂದೆ 600 ಪನಾಸ್ ದಂಡ ಹಾಕುತ್ತಿದ್ದರು.

'Liquor shall not be taken out of villages, nor shall Liquor shops be close to each other'.

ಇವತ್ತು ಅಂಗಡಿ ಪಕ್ಕದಲ್ಲಿ ಅಂಗಡಿ ಕೊಡುತ್ತಿದ್ದಾರೆ. ಸರ್ಕಾರದ ಯಾವ ಕಾನೂನನ್ನು ಪರಿಪಾಲನೆ ಮಾಡುತ್ತಿಲ್ಲ. 2000 ವರ್ಷದ ಹಿಂದೆಯೇ ಕೌಟಿಲ್ಯ ಇದನ್ನು ಬರೆದಿದ್ದಾನೆ.

(ವಿಧಾನಸಭೆ, ಜನವರಿ 30, 1987)

ಆರ್. ವೆಂಕಟರಾಮಯ್ಯ: ಮಾನ್ಯ ವೇದಾಂತ ಹೆಮ್ಮಿಗ್ರೆಯವರು ಕುಡಿಯುತ್ತಾರೋ ಇಲ್ಲವೋ ಗೊತ್ತಾಗಲಿಲ್ಲ.

ವೇದಾಂತ ಹೆಮ್ಮಿಗ್ರೆ: ಯಾವತ್ತಾದರೂ ಒಂದು ದಿವಸ ನನ್ನ ಜೊತೆಗೆ ಸೇರಿಕೊಂಡರೇ ತಮಗೆ ಗೊತ್ತಾಗುತ್ತದೆ.

ಇನ್ನು ಮುಂದೆ ಇದರಲ್ಲಿ ಏನು ಹೇಳಿದ್ದಾರೆ ಅಂದರೆ. 'stationed in the shops shall ascertain whether expenditure incurred by customers in the shop is ordinary or extraordinary if are any strangers they shall also ascertain the value of the dress, ornaments, and gold of the customers lying there under intoxication, when customers under intoxication lose any of their things, the mearchants of the shop shall be only make good the loss, but also pay an equilent fine'. ಯಾವನು ಈ ಮದ್ಯಪಾನ ಮಾರಾಟ ಮಾಡುತ್ತಾನೆ, ಅಲ್ಲಿ ಯಾವುದೇ ಒಬ್ಬ ಮನುಷ್ಯ ಕುಡಿದು ಯಾವುದೇ ಪದಾರ್ಥ ಕಳೆದುಕೊಂಡರೆ, ಆ ಒಂದು ಪದಾರ್ಥದ ಬೆಲೆ ಏನು ಆಗುತ್ತದೆ, ಅದು ಆತ ಯಾವ ಅಂಗಡಿಗೆ ಹೋಗಿದ್ದ, ಆ ಅಂಗಡಿಯವನು ಕಟ್ಟಿಕೊಡಬೇಕು. ಅದರ ಜೊತೆಗೆ ಜುಲ್ಮಾನೆ ಕೂಡ ಕೊಡಬೇಕೆಂದು ಇದೆ. ಈ ರೀತಿ ಇಲ್ಲಿ ಯಾವ ಬಾರ್‌ನಲ್ಲಿ ಇದೆ, ಇವತ್ತು ಸ್ಕಾಚ್ ರಾಯಲ್ ಸಲ್ಯೂಟ್, ಪೀಟರ್ ಸ್ಕಾಚ್ ಎಂದು ಹೇಳಬಹುದು. ಎರಡು ಸಾವಿರ ವರ್ಷ ಹಿಂದೆಯೇ Of various kinds of liquor, such as medaka, prasanna sava, arista, malrcya and madhu, ಇಷ್ಟು ಲಿಕ್ಕರ್ಸ್ ಎರಡು ಸಾವಿರ ವರ್ಷ ಹಿಂದೆಯೇ ಇತ್ತು. ಈಗ ನಾವು ಇಲ್ಲಿ ಬೇರೆ ಬೇರೆ ಹೆಸರನ್ನು ಇಟ್ಟುಕೊಂಡಿದ್ದೇವೆ. ನಮಗೆ ಬೇಕಾದಂಥ ಹೆಸರುಗಳನ್ನು ಇಟ್ಟುಕೊಂಡಿದ್ದೇವೆ.

ಈ ದೃಷ್ಟಿಯಲ್ಲಿ ಮಾನ್ಯ ಶ್ರೀನಿವಾಸ್‌ರವರು ಒಳ್ಳೆಯ ನಿರ್ಣಯವನ್ನು ತಂದಿದ್ದಾರೆ ಆದ್ದರಿಂದ ನಾನು ಇದನ್ನು ಸ್ವಾಗತಿಸಿ ಈ ಮಾತನ್ನು ಹೇಳುತ್ತಿದ್ದೇನೆ. ಯಾರಾದರೂ ಕುಡಿಯಲಿ ಅಥವಾ ಬಿಡಲಿ ಆ ಪ್ರಶ್ನೆ ಮುಖ್ಯವಲ್ಲ. ಆದರೆ ಕುಡಿಯುವವರು ಒಳ್ಳೆಯದನ್ನು ಕುಡಿಯಲೆಂದು ಹೇಳಬಯಸುತ್ತೇನೆ.

ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್: ಮಾನ್ಯ ಅಧ್ಯಕ್ಷರೇ, ನಿರ್ಣಯದ ಬಗ್ಗೆ ಸದನದಲ್ಲಿ ನಗುವುದು ಸರಿಯಲ್ಲ. ಸರ್ಕಾರದ ಬೊಕ್ಕಸಕ್ಕೆ ಕೋಟ್ಯಾಂತರ ರೂಪಾಯಿ ಹಣ ಒಂದು ಕಡೆಯಲ್ಲಿ ಬರಬಹುದು ಆದರೆ ಅದೇ ಸಂದರ್ಭದಲ್ಲಿ ಕೋಟ್ಯಾಂತರ ಸಂಸಾರಗಳು ಹಾಳಾಗುತ್ತಿರುವುದನ್ನು ತಡೆಗಟ್ಟುವುದು ಹೇಗೆ ಎಂಬುದನ್ನು ನಾವು ಯೋಚನೆ ಮಾಡಬೇಕಾಗುತ್ತದೆ. ಮಾನ್ಯ ಸದಸ್ಯರಾದ ಹೆಮ್ಮಿಗ್ರೆಯವರು ಮಾತನಾಡುವಾಗ ಬಹಳ ಅರ್ಥಪೂರ್ಣವಾಗಿ ಮಾತನಾಡಿದ್ದಾರೆ. ಇವತ್ತು ಮದ್ಯಪಾನವನ್ನು ವ್ಯವಸ್ಥಿತವಾಗಿ ಯಾರು, ಯಾವ ರೀತಿ ಮಾಡಬೇಕೆಂಬ ಬಗ್ಗೆ ಮಹಿಳೆಯಾಗಿ ನಾನು ಮಾತನಾಡುವುದಾದರೆ ಇವತ್ತು ಕೋಟ್ಯಾಂತರ

ಸಂಸಾರಗಳು ಹಾಳಾಗಿ ಮನೆಯಲ್ಲಿರತಕ್ಕ ಹೆಣ್ಣು ಮಕ್ಕಳು, ಗಂಡುಮಕ್ಕಳು ಅಥವಾ ಹಿರಿಯರು ದುರಭ್ಯಾಸಕ್ಕೆ ಸಿಕ್ಕಿ ಅವರು ತಮ್ಮ ಆರ್ಥಿಕ ಮಟ್ಟದಿಂದ ಮೇಲೆ ಬರುವುದಕ್ಕೆ ತೊಂದರೆಯಾಗಿದೆಯೆಂದು ಹೇಳಬಯಸುತ್ತೇನೆ. ಇದರಲ್ಲಿ ನಾವು ಯಾರೂ ಕೂಡ ರಾಜಕೀಯ ಬಣ್ಣವನ್ನು ಬಳಿಯುವುದು ಬೇಡ. ವಿದೇಶೀ ಮದ್ಯವನ್ನು ಕುಡಿಯುವವರಿಗೆ ಸಾಕಷ್ಟು ಹಣ ಇರುತ್ತದೆ, ಅವರಿಗೆ ಶಕ್ತಿ ಇರುತ್ತದೆ. ಆದರೆ ಹಳ್ಳಿಯಲ್ಲಿ ಇರತಕ್ಕ ಮುಗ್ಧ ಜನರು ಈ ಕುಡಿತದ ಚಟಕ್ಕೆ ಸಿಕ್ಕಿ ತಮ್ಮ ಸಂಸಾರಗಳನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ. ಹಿಂದುಳಿದ ವರ್ಗದ ಅನೇಕ ಸಂಸಾರಗಳಲ್ಲಿರುವ ಹೆಣ್ಣುಮಕ್ಕಳು ಈ ಚಟಕ್ಕೆ ಬಲಿಯಾಗುತ್ತಿದ್ದಾರೆ.

ಎಸ್. ಬಂಗಾರಪ್ಪ: ಕೇವಲ ಹಿಂದುಳಿದ ಜನಾಂಗದ ಮಹಿಳೆಯರು ಮಾತ್ರ ಕುಡಿಯುತ್ತಿಲ್ಲ.

ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್: ದೊಡ್ಡವರು ಶ್ರೀಮಂತರು ಕುಡಿದರೆ ಅದರಿಂದ ನಮಗೇನೂ ಬಾಧಕವಿಲ್ಲ. ಆದರೆ ಹಿಂದುಳಿದ ವರ್ಗದ ಜನರೂ ಕುಡಿಯುತ್ತಿದ್ದಾರೆ.

ಆರ್.ಎ. ನಾಯಕ್: ಹಳ್ಳಿಯಲ್ಲಿ ಹೆಂಗಸರು ಕುಡಿಯುತ್ತಾರೆಂದು ನಿಮಗೆ ಗೊತ್ತೆ?

ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್: ಇದು ನಗುವಂಥ ವಿಷಯವಲ್ಲ. ಬಡವರನ್ನು ಆರ್ಥಿಕ ಮಟ್ಟದಿಂದ ಮೇಲಕ್ಕೆ ಎತ್ತಬೇಕಾದರೆ ಕುಡಿತವನ್ನು ಕಡಿಮೆ ಮಾಡಬೇಕು. ಕುಟುಂಬದಲ್ಲಿ ಮಿತವ್ಯಯ ಆಗಬೇಕು ಎನ್ನುವುದರ ಬಗ್ಗೆ ಸಮಗ್ರವಾದ ಚಿಂತನೆಯಾಗಬೇಕು. ಕುಡಿತದ ಚಟಕ್ಕೆ ಒಳಗಾದವರು ಯಾವುದೇ ಕ್ಷೇತ್ರದಲ್ಲಿ ದುಡಿಯುತ್ತಿರಲಿ, ದುಡಿದು ಸಂಪಾದನೆ ಮಾಡಿದ ಹಣವನ್ನು ಮನೆಗೆ ನೇರವಾಗಿ ತೆಗೆದುಕೊಂಡು ಹೋಗುವುದಿಲ್ಲ. ಇವೆಲ್ಲ ಕಾರಣಗಳಿಂದಾಗಿ ಬಡವರಿಗೆ ಯಾವ ರೀತಿ ಆದಾಯವನ್ನು ಕೊಡಲಿಕ್ಕೆ ಸಾಧ್ಯ ಎನ್ನುವ ಬಗ್ಗೆ ಒಂದು ಉನ್ನತ ಸಮಿತಿಯನ್ನು ಮಾಡಬೇಕೆಂದು ಮಾನ್ಯ ಶ್ರೀನಿವಾಸ್‌ರವರು ಏನು ಹೇಳಿದ್ದಾರೆ ಅದರ ಬಗ್ಗೆ ಬಹಳವಾಗಿ ಆಲೋಚನೆ ಮಾಡಬೇಕು. ಆದಾಯ ಬರತಕ್ಕಂಥ ವಿಷಯ ಒಂದು ಭಾಗವಾದರೆ, ಬಡತನದ ರೇಖೆಯಿಂದ ಅವರನ್ನು ಮೇಲಕ್ಕೆ ಎತ್ತಬೇಕು ಎನ್ನುವ ವಿಷಯವನ್ನು ಲಘುವಾಗಿ ತೆಗೆದುಕೊಳ್ಳತಕ್ಕಂಥದ್ದಲ್ಲ.

(ವಿಧಾನಸಭೆ, ಜನವರಿ 30, 1987)

## ಖಾಸಗೀ ಸದಸ್ಯರ ನಿರ್ಣಯ

## ಪಾನ ನಿರೋಧಕ್ಕೆ ಬದಲಿ ನೀತಿ ಹಾಗೂ ವ್ಯವಸ್ಥೆಯ ಬಗ್ಗೆ ಉನ್ನತ ಮಟ್ಟದ ಸಮಿತಿಯನ್ನು ನೇಮಿಸುವುದು

ಅಧ್ಯಕ್ಷರು: ಈಗ ಖಾಸಗೀ ಕಾರ್ಯಕಲಾಪಗಳು. 1986ನೇ ಫೆಬ್ರವರಿ 7 ರಂದು ಮಾನ್ಯ ಸದಸ್ಯರಾದ ಕೆ.ಎಚ್. ಶ್ರೀನಿವಾಸ್ ಅವರು ಮಂಡಿಸಿರುವ ನಿರ್ಣಯದ ಮೇಲೆ ಚರ್ಚೆ ಮುಂದುವರೆಸುವುದು.

ಇದರ ಬಗ್ಗೆ ಯಾರಾದರೂ ಮಾತನಾಡಿ. ಮಾನ್ಯ ಪ್ರಕಾಶ್ ಅವರೇ ಮಾತನಾಡಿ. ಮಾನ್ಯ ತುಂಗಳ್ ಅವರೆ, ನೀವು ಮಾತನಾಡುತ್ತೀರಾ? ಮಾನ್ಯ ಶಾಣಪ್ಪನವರೆ, ನೀವು ಮಾತನಾಡುತ್ತೀರಾ?

ಎಂ.ಪಿ. ಪ್ರಕಾಶ್: ಸನ್ಮಾನ್ಯ ಸಭಾಧ್ಯಕ್ಷರೇ, ಹಿರಿಯ ಸದಸ್ಯರಾದ ಕೆ.ಎಚ್. ಶ್ರೀನಿವಾಸ್ ಅವರು ಇಲ್ಲಿ ಮದ್ಯಪಾನ ನಿಷೇಧ ಕುರಿತಾದ ಅಂದರೆ:

> "As the existing policy and set up in the State has resulted in jeopardy to the interest of the common man, and vulnerable section of the people, this House resolved to constitute a High Power Committee inclusive of the representatives of the Legislature to study, in the light of the liquor tragedies and the recommendations of the Commissions of enquiry appointed in respect of them and the policy and set up existing in other States, and to recommend the feasibility of an alternative policy and set up including prohibition".

ಎನ್ನುವಂತಹ ಅತ್ಯಂತ ಮಹತ್ವವಾದ ಒಂದು ಖಾಸಗಿ ಮಸೂದೆಯನ್ನು ಈ ಸದನದ ಅವಗಾಹನೆಗಾಗಿ ಮತ್ತು ಚರ್ಚೆಗಾಗಿ ತೆಗೆದುಕೊಂಡು ಬಂದಿದ್ದಾರೆ.

ಅಂತಹ ಈ ಪಾನ ನಿಷೇಧದ ಬಗ್ಗೆ ನಮ್ಮ ಒಂದು ಪರಿಕಲ್ಪನೆಯನ್ನು ಯೋಚನೆ ಮಾಡುವುದಾದರೆ ಪ್ರಾಯಶಃ ಮನುಷ್ಯ ಬೇಸಾಯ ಸಂಸ್ಕೃತಿಗೆ ಒಳಪಟ್ಟು ತನ್ನ ನಾಗರೀಕವಾದ ನೆಲೆಗಳನ್ನು ನಿರ್ಮಾಣ ಮಾಡುವಂತಹ ಎಲ್ಲಾ ಸಂದರ್ಭಗಳಲ್ಲಿ, ಬದುಕಿನ ನೀರವತೆಯನ್ನು ತಂದುಕೊಂಡಾಗ, ಬದುಕು ಬಹಳ ಮಟ್ಟಿಗೆ ಮನುಷ್ಯನು ಮುಖ್ಯವಾಗಿ ದೈಹಿಕವಾಗಿ ಶ್ರಮಕ್ಕೆ ಒಳಪಡುವಂತಹ ಸಂದರ್ಭದಲ್ಲಿ ಬದುಕು ಒಂದು ಸವಾಲಾಗುವ ಪರಿಸ್ಥಿತಿ ಬಂದಿರತಕ್ಕ ಸಂದರ್ಭಗಳಲ್ಲಿ ಅವುಗಳನ್ನು ಪ್ರಶ್ನೆ ಮಾಡತಕ್ಕ ಮತ್ತು ಅವುಗಳಿಂದ ಪಲಾಯನಗೊಳ್ಳುವಂತಹ, ತಾತ್ಕಾಲಿಕವಾದ ಉಪಶಮನಗಳಿಗೆ ಒಳಗಾಗುವ ರೀತಿಯಲ್ಲಿ ಚಿಂತೆ ಮಾಡುವಂತಹ ಸಂದರ್ಭದಲ್ಲಿ, ಆ ನಾಗರೀಕವಾದ ಮನುಷ್ಯ ಇಂತಹ ಸವಾಲುಗಳಿಂದ ತಪ್ಪಿಸಿಕೊಳ್ಳುವಂತಹ ಕಾರಣಗಳಿಗಾಗಿ ಬೇರೆ ಬೇರೆ ಮನೋಧರ್ಮ ಕಾರ್ಯಕ್ರಮಗಳನ್ನು ಅವರು ಸೃಷ್ಟಿ ಮಾಡಿಕೊಂಡಿರತಕ್ಕಂಥದ್ದು ಇದೆ. ಆ ದೃಷ್ಟಿ ಕೋನದಿಂದಲೇ ಮದ್ಯಪಾನ ಕೂಡ ಅತ್ಯಂತ ಮುಖ್ಯವಾದ ಒಂದು ವಿಷಯ.

ಮದ್ಯವನ್ನು ಕುಡಿಯುವುದರ ಮೂಲಕ ಎಲ್ಲಾ ಸಮಸ್ಯೆಗಳನ್ನು ಮರೆತು, ಕನಿಷ್ಟ ಒಂದು 3-4 ತಾಸುಗಳ ಕಾಲ ಈ ಜಂಜಾಟದಿಂದ ಮತ್ತು ಸಮಸ್ಯೆಗಳಿಂದ ತಾತ್ಕಾಲಿಕವಾದ ಬಿಡುಗಡೆಯನ್ನು ಪಡೆಯುತ್ತಾನೆ ಎನ್ನುವಂತಹ ಒಂದು ವಿವೇಕಕ್ಕೆ ಮನುಷ್ಯ ಒಳಗಾಗುತ್ತಾನೆ.

ಈ ಕಾರಣಕ್ಕಾಗಿ ನಾಗರೀಕ ಸಮಾಜದಲ್ಲಿ ಮದ್ಯಪಾನ ಎಷ್ಟು ಪ್ರಮಾಣದಲ್ಲಿ ತೆಗೆದುಕೊಳ್ಳಬೇಕೆಂಬುದು ಗೊತ್ತಿರುವುದಿಲ್ಲ.

ಶಿವನಿಗೆ ಗಾಂಜಾ ಸೇವನೆಯನ್ನು ಮಾಡಿಸುವುದರ ಮೂಲಕವಾಗಿ ಸಮತೋಲನ ತಪ್ಪಿಸುತ್ತೇವೆ ಎನ್ನುವ ಒಂದು ಪುರಾಣದ ಕಲ್ಪನೆ ಕೂಡ ಬರುತ್ತದೆ.

ಈ ಮದ್ಯಪಾನ ಕುರಿತಾಗಿ ಕೌಟಿಲ್ಯ ತನ್ನ ಅರ್ಥ ಶಾಸ್ತ್ರದಲ್ಲೂ ಈ ಮದ್ಯಪಾನವನ್ನು ಮಾಡುವಂತಹ ಸಂದರ್ಭದಲ್ಲಿ ಅದಕ್ಕೆ ತೆರಿಗೆಯನ್ನು ಹಾಕಬೇಕು ಎನ್ನುವಂಥದ್ದನ್ನು ಹೇಳಿ ನಿಯಮಾವಳಿಗಳಲ್ಲೂ ಕೂಡ ಅದನ್ನು ಸ್ಪಷ್ಟಿ ಮಾಡುತ್ತಾನೆ.

(ವಿಧಾನಸಭೆ, ಮಾರ್ಚ್ 4, 1987)

ಎಂ.ಪಿ. ಪ್ರಕಾಶ್: ತಮಿಳುನಾಡಿನಲ್ಲಿ ಮದ್ಯಪಾನ ನಿಷೇಧ ಮಾಡಿದ ಸಂದರ್ಭದಲ್ಲಿ ಸಿನಿಮಾಗಳಿಗೆ ಹೋಗತಕ್ಕ ಪ್ರೇಕ್ಷಕರ ಸಂಖ್ಯೆ ಹೆಚ್ಚಾಯಿತು ಎನ್ನುವ ವಾದ ಬರುತ್ತದೆ. ಮೂರು ತಾಸುಗಳ ಆ ಚಿತ್ರದಲ್ಲಿಯ ಲೋಕಕ್ಕೆ ಯಾರನ್ನು ನಾಯಕನನ್ನಾಗಿ ಮಾಡಿಕೊಳ್ಳಬೇಕು. ಯಾವ ರೀತಿಯಾಗಿ ತನ್ನ ಜಂಜಾಟಗಳಿಗೆ ಬಲಿಯಾಗಿದ್ದರೂ ಒಂದು ರೀತಿಯಾಗಿ ಅಲ್ಲೊಬ್ಬ ಪ್ರೇಕ್ಷಕನಾಗಿ ಯೋಚನೆ ಮಾಡುತ್ತಾನೆ. ಈ ರೀತಿಯಾಗಿರತಕ್ಕ ಕಥಾನಾಯಕನನ್ನು ಕುಣಿಯುವುದರ ಮೂಲಕವಾಗಿ ಇವತ್ತು ಬೆಳ್ಳಿಯ ತೆರೆಯ ಮೇಲೆ ಅದ್ಭುತವಾಗಿರತಕ್ಕ ಅನೇಕ ಸಿನಿಮಾ ಮಣಿಗಳು, ನಿಜ ಜೀವನದಲ್ಲಿ ಆ ತರಹ ಬದುಕುವುದಕ್ಕೆ ಆಗುವುದಿಲ್ಲ. ರಾಜಕೀಯ ಮುಖಂಡರಾಗಿ ಪರಿವರ್ತನೆಯಾಗಿರತಕ್ಕದ್ದು ತಮಗೆಲ್ಲಾ ಗೊತ್ತಿದೆ.

1966ರ ನಂತರ ತೆಗೆದುಕೊಂಡಿರತಕ್ಕ ನಿರ್ಣಯಗಳ ಮೂಲಕ ಮದ್ಯಪಾನ ನಿಷೇಧ ಗುಜರಾತ್ ರಾಜ್ಯ ಒಂದನ್ನು ಬಿಟ್ಟರೆ ತಮಿಳುನಾಡು ಮತ್ತೆ ತೆರಿಗೆ ತರಬೇಕೆಂದು ಯೋಚನೆ ಮಾಡುತ್ತಿದೆ. ತಮಿಳುನಾಡಿನಲ್ಲಿಯೂ ಸಹ ಮದ್ಯಪಾನ ನಿಷೇಧ ಮಾಡಿದ್ದಾರೆ. ಡಿನೇಚರ್ಡ್ ಸ್ಪಿರಿಟ್ ಕಳ್ಳಭಟ್ಟಿ ಸಾರಾಯಿ ಕುಡಿಯುವುದರ ಮೂಲಕ ಸಾವಿರಾರು ಜನಗಳು ದುರಂತಕ್ಕೆ ಈಡಾಗಿ ಸಾವನ್ನು ಅಪ್ಪಿದ್ದಾರೆ. ಇಂತಹ ಸಾವುಗಳನ್ನು ನೋಡಿದಾಗ ಅಷ್ಟು ಮಟ್ಟಿಗೆ ಅಪೇಕ್ಷಣೀಯವಾಗಿರತಕ್ಕದ್ದು ಅಲ್ಲ. ಆ ಕಾರಣಕ್ಕೆ ಶ್ರೀನಿವಾಸ್‌ರವರು ಹೇಳಿದಂತೆ ಅಪೇಕ್ಷಣೀಯ ಅಲ್ಲವೆಂದು ಹೇಳಿದ ತಕ್ಷಣವೇ ಗಲ್ಲಿ ಗಲ್ಲಿಗಳಲ್ಲಿ ಮನೆ ಮನೆಗೆ ಒಂದೊಂದು ಅಂಗಡಿ ಕೊಡತಕ್ಕದ್ದು, ಬಾರ್‌ಗಳನ್ನು ನಡೆಸತಕ್ಕದ್ದು ಸರಿಯಲ್ಲ. ನಮ್ಮ ಕಣ್ಣೆದುರಿಗೆ ನಮ್ಮ ಮಕ್ಕಳು ಮದ್ಯಪಾನದ ಚಟಕ್ಕೆ ದಾಸರಾಗಿರತಕ್ಕದ್ದು ಸಲ್ಲದು. ಆದ್ದರಿಂದ ಮುಂದಿನ ಜನಾಂಗದವರು ಎಚ್ಚರವಾಗಿರುವುದು ಅನಿವಾರ್ಯವಾಗಿದೆ.

ಸನ್ಮಾನ್ಯ ಅಧ್ಯಕ್ಷರೇ, ಪಾನ ನಿಷೇಧದ ಬಗೆಗೆ ಸದನದ ಎಲ್ಲ ಶಾಸಕರ ಅಭಿಪ್ರಾಯಗಳನ್ನು ತಿಳಿಯಲು ಸ್ವಾಗತ ಮಾಡುತ್ತೇನೆ.

**ಪಟಮಕ್ಕಿ ರತ್ನಾಕರ್:** ಮಾನ್ಯ ಅಧ್ಯಕ್ಷರೇ, ಈ ಖಾಸಗಿ ನಿರ್ಣಯವನ್ನು ಸದನದಲ್ಲಿ ಮಂಡಿಸಿದ ಕೆ.ಎಚ್. ಶ್ರೀನಿವಾಸ ಅವರಿಗೆ ಅಭಿನಂದನೆಗಳು.

ಈ ನಿರ್ಣಯ, ಈ ಸದನದ ಪ್ರತಿಯೊಬ್ಬ ಸದಸ್ಯರೂ ಕೂಡ ಚಿಂತನೆ ಮಾಡತಕ್ಕಂಥ ಹಲವು ಸುಧಾರಿತ ಅಂಶಗಳನ್ನು ಒಳಗೊಂಡಿದೆ. ಇಲ್ಲಿ ಎರಡು ಪ್ರಶ್ನೆಗಳನ್ನು ತುಲನಾತ್ಮಕವಾಗಿ ನಾವು ಚಿಂತನೆ ಮಾಡಬೇಕು. ಒಂದನೆಯದು, ಬಡ ವರ್ಗದ ಮೇಲೆ ಮದ್ಯಪಾನ ಮಾಡತಕ್ಕಂಥ ದುಷ್ಪರಿಣಾಮ. ಎರಡನೆಯದು ಒಟ್ಟು ಸಾಮೂಹಿಕ ಸಮಾಜದ ಮೇಲೆ ಮದ್ಯಪಾನ ಬೀರತಕ್ಕಂಥ ತೀವ್ರ ಕಳವಳಕಾರಿ ಪರಿಣಾಮಗಳು.

ಅಧ್ಯಕ್ಷರೇ, ಇನ್ನು ಒಂದು ಕಥೆ ನನಗೆ ನೆನಪಾಗುತ್ತದೆ. ಒಂದು ಸಲ "ವಿಧಿ" ಮನೆಯ ಯಜಮಾನನಿಗೆ ಹೇಳಿತಂತೆ. ನೀನು ನಿನ್ನ ಸೇವಕನನ್ನು ಕೊಲೆ ಮಾಡು, ಇಲ್ಲವೇ ನಿನ್ನ ಹೆಂಡತಿಯನ್ನು ಹೊಡಿ, ಅದೂ ಇಲ್ಲದೇ ಹೋದರೆ ಮದ್ಯವನ್ನು ಕುಡಿ. ಈ ಪೈಕಿ ಕೆಲಸ ಬೇಕಾದರೂ ಮಾಡು ಎಂದು ಹೇಳಿತಂತೆ. ಮನೆಯ ಯಜಮಾನ ಯೋಚನೆ ಮಾಡಿದ. ಸೇವಕ ತನ್ನ ಚಿಕ್ಕಂದಿನಿಂದಲೂ ಕೂಡಾ ನನ್ನ ಪಾಲನೆ ಪೋಷಣೆ ಮಾಡಿಕೊಂಡು ಬಂದಿದ್ದಾನೆ. ಅವನನ್ನು ಕೊಲ್ಲಲು ಸಾಧ್ಯವಿಲ್ಲ. ಇನ್ನು ಹೆಂಡತಿ, ನನ್ನ ಅರ್ಧಾಂಗಿ, ಅವಳನ್ನು ಹೊಡೆಯುವುದು ಹೇಗೆ. ಹೀಗಾಗಿ ಈ ಎರಡೂ ಬೇಡ. ಮದ್ಯವನ್ನು ಕುಡಿಯುತ್ತೇನೆ ಎಂದು ಹೇಳಿ ಕುಡಿಯುತ್ತಾನೆ. ಮದ್ಯ ಕುಡಿದ ತಕ್ಷಣ ಮನೆಯಲ್ಲಿ ಜಗಳ ಶುರುವಾಗುತ್ತದೆ. ಜಗಳ ಶುರುವಾದ ತಕ್ಷಣ ಅವನು ತನ್ನ ಹೆಂಡತಿಯನ್ನು ಹೊಡೆಯುವುದಕ್ಕೆ ಹೋಗುತ್ತಾನೆ, ಆಗ ಸೇವಕ ಅದನ್ನು ತಡೆಯುವುದಕ್ಕೆ ಹೋಗುತ್ತಾನೆ, ಸೇವಕನಿಗೆ ಹೊಡೆತ ಬಿದ್ದು, ಅವನು ಸತ್ತು ಹೋಗುತ್ತಾನೆ. ಮದ್ಯ ಕುಡಿದುದರಿಂದ ಮನೆಯ ಯಜಮಾನ ಮೂರೂ ತಪ್ಪು ಕೆಲಸಗಳನ್ನು ಮಾಡುತ್ತಾನೆ. ಮೂರು ತಪ್ಪು ಕೆಲಸಗಳನ್ನೂ ವಿಧಿ ಅವನ ಕೈಲಿ ಮಾಡಿಸುತ್ತದೆ.

**ಕೆ.ಹೆಚ್. ಶ್ರೀನಿವಾಸ್:** ಮಾನ್ಯ ಸಭಾಧ್ಯಕ್ಷಿಣಿಯವರೇ ಮಾನ್ಯ ಸದಸ್ಯರು ಅನೇಕರು ತಿಳಿದುಕೊಂಡಿರುವಂತೆ ನಾನು ನನ್ನ ಖಾಸಗಿ ನಿರ್ಣಯದಲ್ಲಿ ಸದನದ ಸಮಿತಿ ಮಾಡಿ ಎಂದು ಕೇಳಿಲ್ಲ. ನಾನೇನು ಪ್ರಸ್ತಾಪ ಮಾಡಿದ್ದೇನೆಂದರೆ ಉನ್ನತ ಅಧಿಕಾರವಿರತಕ್ಕಂಥ ಒಂದು ಸರ್ಕಾರಿ ಸಮಿತಿ ಮಾಡಿ. ಅದರಲ್ಲಿ ಎಕ್ಸ್‌ಪರ್ಟ್ಸ್ ಕೂಡ ಹಾಕಿ ಎಂದು ಹೇಳಿದ್ದೇನೆ. ಸುಮ್ಮನೆ ಇವತ್ತು ಚುನಾಯಿತ ಪ್ರತಿನಿಧಿಗಳೊಬ್ಬರೆ ಇದ್ದರೆ ಸಾಲದು. ಎಲ್ಲಾ ವಿಧದಲ್ಲಿ ತಿಳಿದುಕೊಂಡಿರತಕ್ಕಂಥ ಎಕ್ಸ್‌ಪರ್ಟ್ಸ್ ಕೂಡ ಇರಬೇಕಾಗುತ್ತದೆ. ಇವತ್ತು ತಮಗೆಲ್ಲಾ ತಿಳಿದಿರುವಂತೆ ಮದ್ಯವನ್ನು ಸರ್ಕಾರದವರು ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಜನರಿಗೆ ಸಪ್ಲೈ ಮಾಡುತ್ತಿದ್ದಾರೆ. ಸರ್ಕಾರದ ದೃಷ್ಟಿಯಲ್ಲಿ ಅವರು ಒಳ್ಳೆಯ ಮದ್ಯವನ್ನು ಸರಬರಾಜು ಮಾಡುತ್ತಿರಬಹುದು. ಸರ್ಕಾರ ಇದರ ಜವಾಬ್ದಾರಿಯನ್ನು ಹೊರಬೇಕು. ಜನಗಳ ರಕ್ಷಣೆಯನ್ನು ಮಾಡುವುದು ಸಹ ಸರ್ಕಾರದ ಕರ್ತವ್ಯ.

ಈ ದೇಶದಲ್ಲಿ ಇರುವುದು ಕಳ್ಳಬಟ್ಟಿ ಇಲ್ಲವೆ ಸರ್ಕಾರಿ ಮದ್ಯ ಎರಡು ಮಾತ್ರ. ಸರ್ಕಾರಿ ಮದ್ಯದಲ್ಲಿ ಕ್ವಾಲಿಟಿ ಇರುವುದಿಲ್ಲ, ಕ್ವಾಂಟಿಟಿ ಸಹ ಇರುವುದಿಲ್ಲ. ಮದ್ಯ ತಯಾರು ಮಾಡುವುದಕ್ಕೆ ಸರ್ಕಾರ ಯಾರಿಗೆ ಅನುಮತಿ ಕೊಟ್ಟಿರುತ್ತಾರೋ ಅದು ಸರ್ಕಾರಿ ಮದ್ಯವಾಗುತ್ತದೆ. ಯಾರು ಅನುಮತಿ ಪಡೆಯದೆ ಮದ್ಯ ತಯಾರು ಮಾಡುತ್ತಾರೋ ಅದು ಕಳ್ಳಬಟ್ಟಿಯಾಗಿರುತ್ತದೆ. ಈಗ ಮನೆಯಲ್ಲಿಯೇ ಒಳ್ಳೆಯ ವೈನ್ ತಯಾರು ಮಾಡಿದರೂ ಸಹ ಅದು ಕಳ್ಳಬಟ್ಟಿಯಾಗುತ್ತದೆ. ಆದ್ದರಿಂದ ಸಮಗ್ರವಾಗಿ ತಿಳಿದುಕೊಂಡಿರತಕ್ಕಂಥ ಎಕ್ಸ್‌ಪರ್ಟ್ಸ್ ಈ ಕಮಿಟಿಯಲ್ಲಿರಬೇಕಾಗುತ್ತದೆ.

ಬಿ.ಎಸ್. ಯಡಿಯೂರಪ್ಪ (ಶಿಕಾರಿಪುರ): ಸನ್ಮಾನ್ಯ ಅಧ್ಯಕ್ಷರೇ, ಹಿರಿಯ ಸದಸ್ಯರಾದಂಥ ಮಾನ್ಯ ಶ್ರೀನಿವಾಸ್ ನಿರ್ಣಯ ನಿಜಕ್ಕೂ ಚಿಂತನೆ ಮಾಡಬೇಕಾದ ವಿಷಯ. ರಾಜ್ಯದಲ್ಲಿ, ಈ ದೇಶದಲ್ಲಿ ಕಡು ಬಡವರೂ ಸಹ ಮದ್ಯಪಾನದ ದುಶ್ಚಟಕ್ಕೆ ಬಲಿಯಾಗಿದ್ದಾರೆ. ಈ ದುಶ್ಚಟವನ್ನು ಜನರಿಂದ ಬಿಡಿಸುವುದಕ್ಕೆ ಮತ್ತು ಅದರಿಂದ ಉದ್ಭವಿಸುವ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ನಾವು ಯೋಚನೆ ಮಾಡಬೇಕು.

ಬಡವರು ಬಹಳ ಜನ ಇದ್ದಾರೆ. ಇವರುಗಳಿಗೆ ಕೊಡುವ ಕೂಲಿಯಿಂದ ಅವರ ಹೊಟ್ಟೆ ತುಂಬುವುದಿಲ್ಲ. ಕೂಲಿಯನ್ನು ಪಡೆದ ಜನ ಹೊಟ್ಟೆ ತುಂಬಿಸಿಕೊಳ್ಳುವುದಕ್ಕಾಗಿ ಮದ್ಯಪಾನ ಮಾಡುತ್ತಾರೆ. ಇದು ನಿಜವಾಗಿಯೂ ಕರುಣಾಜನಕವಾದ ಪರಿಸ್ಥಿತಿ. ಇದರ ಬಗ್ಗೆ ಸರ್ಕಾರ ಪ್ರಾಮಾಣಿಕವಾಗಿ ಚಿಂತನೆ ಮಾಡಬೇಕು. ಆದರೆ ಜನತಾ ಸರ್ಕಾರ ಬಂದ ಮೇಲೆ ಇದರ ಬಗ್ಗೆ ಚಿಂತನೆ ಮಾಡುವುದನ್ನು ಬಿಟ್ಟು, ಊರು ಊರುಗಳಲ್ಲಿ, ಕೇರಿ ಕೇರಿಗಳಲ್ಲಿ, ದೇವಸ್ಥಾನ ಎಲ್ಲಿ ಇದೆ, ಶಾಲೆಗಳು ಎಲ್ಲಿ ಇದೆ, ಆಸ್ಪತ್ರೆಗಳು ಎಲ್ಲಿ ಇದೆ ಎಂಬುದನ್ನು ನೋಡದೇ ಎಲ್ಲಾ ಕಡೆಗಳಲ್ಲೂ ಕಳೆದ ಮೂರ್‍ನಾಲ್ಕು ವರ್ಷಗಳಲ್ಲಿ ಹೆಂಡ ಸಾರಾಯಿ ಅಂಗಡಿಗಳಿಗೆ ಪರ್ಮಿಷನ್ ಕೊಟ್ಟಿದ್ದೀರಿ.

ಗೌರವಸ್ಥರು ಸಾಯಂಕಾಲದ ಮೇಲೆ ಏನೇ ಕೆಲಸ ಇದ್ದರೂ ಸಹ ಓಡಾಡುವುದಕ್ಕೆ ಆಗದೇ ಇದ್ದಂಥ ಪರಿಸ್ಥಿತಿ ಬಂದಿದೆ. ಚುನಾವಣೆ ಸಂದರ್ಭದಲ್ಲಿ ರಾಜಕಾರಣಿಗಳಾದ ನಾವು ಹೆಂಡ ಸಾರಾಯಿ ಮುಂತಾದ್ದನ್ನು ಮತದಾರನ ಸಾಮರ್ಥ್ಯಕ್ಕೆ ಮಿತಿ ಮೀರಿ ಕುಡಿಸಿ ಅವನು ಪಾನಮತ್ತನಾದ ಮೇಲೆ ಅವನ ಓಟನ್ನು ಕೊಂಡುಕೊಳ್ಳತಕ್ಕ ಪ್ರವೃತ್ತಿಯನ್ನು ಸ್ವಾತಂತ್ರ್ಯ ಬಂದ 40 ವರ್ಷಗಳಿಂದಲೂ ಬೆಳೆಸಿಕೊಂಡು ಬಂದಿದ್ದೇವೆ. ಇದರ ಪರಿಣಾಮದಿಂದಾಗಿ ಗ್ರಾಮಾಂತರ ಪ್ರದೇಶದಲ್ಲಿರತಕ್ಕ ಕಡುಬಡವರು ಅತ್ಯಂತ ಘೋರ ಕಷ್ಟವನ್ನು ಅನುಭವಿಸಬೇಕಾಗಿ ಬಂದಿದೆ. ಇದರ ಬಗ್ಗೆ ನಾವು ತುಂಬಾ ಚಿಂತನೆಯನ್ನು ಮಾಡಬೇಕಾಗಿದೆ.

ಮಾನ್ಯ ಅಧ್ಯಕ್ಷರೇ, ನಮಗೆ ಸ್ವಾತಂತ್ರ್ಯ ಬಂದ 40 ವರ್ಷಗಳ ನಂತರವಾದರೂ ಇಂಥ ಮಹತ್ವದ ಅಮೂಲ್ಯವಾದ ನಿರ್ಣಯ ಸದನದ ಮುಂದೆ ಬಂದಿದೆ. ಹೆಂಡ ಸಾರಾಯಿ ದುಷ್ಪರಿಣಾಮ ಶ್ರೀಸಾಮಾನ್ಯನ ಕುಟುಂಬದ ಅವನತಿಗೆ ಕಾರಣವಾಗಿದೆ. ಅದನ್ನು ದೂರಮಾಡಿ ಅವನು ಮತ್ತು ಅವನ ಕುಟುಂಬ ನಮ್ಮಂತೆಯೇ ಸಮಾಜದಲ್ಲಿ ಶಾಂತಿ ನೆಮ್ಮದಿ ಹಾಗೂ

ಗೌರವದಿಂದ ಜೀವನ ನಡೆಸುವಂತಾಗಲು ನಾವು ಪ್ರಾಮಾಣಿಕ ಪ್ರಯತ್ನವನ್ನು ಮಾಡಬೇಕಾಗಿದೆಯೆಂದು ಹೇಳಿ ಸದನದ ಮುಂದೆ ಮಂಡಿಸಿರತಕ್ಕ ಈ ಖಾಸಗೀ ನಿರ್ಣಯಕ್ಕೆ ಸಂಪೂರ್ಣ ಬೆಂಬಲವನ್ನು ಕೊಡುತ್ತೇನೆ.

ಪಂಪಾಪತಿ: ಮಾನ್ಯ ಅಧ್ಯಕ್ಷರೇ, ಮದ್ಯಪಾನ ಹೆಚ್ಚು ಜನ ಉಪಯೋಗಿಸತಕ್ಕ ವಸ್ತು. ಇತ್ತೀಚಿನ ದಿನಗಳಲ್ಲಿ ಚಿಕ್ಕವರು ದೊಡ್ಡವರು, ಹೆಂಗಸರು ಗಂಡಸರು ವ್ಯತ್ಯಾಸ ಇಲ್ಲದೆ ಇದನ್ನು ಉಪಯೋಗಿಸುತ್ತಾರೆ.

ಹಿಂದೆ ಹೆಂಡ ಇರುತ್ತಿತ್ತು. ಈಚಲು ಮರದಿಂದ ತೆಗೆದಂಥ ಒಂದು ಹಾಲು ಹೆಂಡವಾಗಿ ಮಾರ್ಪಾಟಾಗುತ್ತಿತ್ತು. ಆದರೆ ಈಗ ಆ ರೀತಿ ಇಲ್ಲ. ಹೆಂಡ ಅಂದರೆ ನೀರಿನಲ್ಲಿ ಕ್ಲೋರಲ್ ಹೈಡ್ರೇಟ್ ಎನ್ನುವ ಪುಡಿಯನ್ನು ಬೆರೆಸಿ ಬಾಟಲಿನಲ್ಲಿ ತುಂಬಿ ಕೊಡುತ್ತಿದ್ದಾರೆ. ಆ ಹೆಂಡಕ್ಕೂ ಈ ಹೆಂಡಕ್ಕೂ ವ್ಯತ್ಯಾಸ ಇದೆ. ಆ ಹೆಂಡ ಕುಡಿದರೆ ಮತ್ತು ಬಂದು ಆರೋಗ್ಯ ಇರುತ್ತಿತ್ತು. ಈಗ ಸಿಗುತ್ತಿರುವುದನ್ನು ಹೆಂಡ ಎಂದು ಹೇಳಿ ಕುಡಿದರೆ ಆಗುವುದೆಲ್ಲವೂ ಅನರ್ಥವೇ.

ಇವತ್ತು ಮದ್ಯಪಾನಕ್ಕೆ ಸರಿಯಾದ ವ್ಯವಸ್ಥೆ ಇಲ್ಲ. ಹಿಂದೆ ದೊಡ್ಡವರೆಲ್ಲೂ ಅಂದರೆ ರಾಜ ಮಹಾರಾಜರೆಲ್ಲರೂ ಕುಡಿಯುತ್ತಿದ್ದರು. ಆ ಮಟ್ಟಕ್ಕೆ ಇತ್ತು. ಇಂದು ಎಲ್ಲವೂ ಗಲೀಜು. ಅದನ್ನು ಕುಡಿದು ಕರುಳುಬೇನೆ ಮುಂತಾದ ರೋಗಗಳಿಗೆ ತುತ್ತಾಗಿ ಆರೋಗ್ಯವನ್ನು ಕೆಡಿಸಿಕೊಂಡು ತೊಂದರೆಗೆ ಒಳಗಾಗತಕ್ಕಂತಹ ಜನರನ್ನು ನಾವು ಕಾಣುತ್ತಿದ್ದೇವೆ. ಇಂತಹ ಒಂದು ಪರಿಸ್ಥಿತಿಯನ್ನು ತಡೆಗಟ್ಟುವುದು ಸರಕಾರದ ಆದ್ಯ ಕರ್ತವ್ಯ ಮತ್ತು ತಿಳಿದಂತಹ ನಮ್ಮೆಲ್ಲರ ಜವಾಬ್ದಾರಿ.

ನಾವು ಮದ್ಯಪಾನವನ್ನು ನಿಲ್ಲಿಸಿದರೆ ಕುಡಿತದ ಚಟ ಇರುವವರು ಭಟ್ಟಿ ಸಾರಾಯಿ ಕುಡಿಯುವುದಂತೂ ನಿಜ. ಈಗಲೂ ಕೂಡ ಕೆಲವು ಮನೆಗಳಲ್ಲಿ ವ್ಯವಸ್ಥಿತವಾದ ಭಟ್ಟಿ ಸಾರಾಯಿ ಮಾಡುವುದನ್ನು ಕಾಣಬಹುದು. ಆದರೆ ಭಟ್ಟಿ ಸಾರಾಯಿಗೆ ಆರೋಗ್ಯಕ್ಕೆ ಧಕ್ಕೆ ತರತಕ್ಕಂತಹ ವಸ್ತುಗಳೇ ಬೇಕು. ಹೀಗಾಗಿ ಅದನ್ನು ಕುಡಿದರೆ ಇನ್ನೂ ಹೆಚ್ಚು ತೊಂದರೆಯಾಗುತ್ತದೆ. ನಾವು ಈ ಎರಡನ್ನೂ ಯೋಚನೆ ಮಾಡಬೇಕಾಗುತ್ತದೆ. ಈ ಬಗ್ಗೆ ಸರ್ಕಾರ ಎಷ್ಟು ಎಚ್ಚರಿಕೆ ವಹಿಸಿದರೂ ಕಡಿಮೆಯೇ.

(ವಿಧಾನಸಭೆ ಕಲಾಪ, ಏಪ್ರಿಲ್ 3, 1987)

## ಖಾಸಗೀ ಕಾರ್ಯಕಲಾಪಗಳು

**ಮದ್ಯಪಾನಕ್ಕೆ ಸಂಬಂಧಿಸಿದಂತೆ ಅದರ ನಿಷೇಧಕ್ಕೆ ಒಂದು ಸಮಿತಿಯ ನೇಮಕ ಕುರಿತು 1986ನೇ ಫೆಬ್ರವರಿ 7 ರಂದು ಕೆ.ಹೆಚ್. ಶ್ರೀನಿವಾಸ್‌ರವರಿಂದ ಮಂಡಿಸಲಾದ ನಿರ್ಣಯದ ಮೇಲೆ ಚರ್ಚೆ ಮುಂದುವರಿಸುವುದು.**

**ಅಧ್ಯಕ್ಷರು:** ಈ ಖಾಸಗೀ ನಿರ್ಣಯದ ಬಗ್ಗೆ ಇದುವರೆವಿಗೂ ಕೇವಲ 13 ಜನ ಸದಸ್ಯರುಗಳು ಮಾತನಾಡಿದ್ದಾರೆ. ಈಗ ಯಾರಾದರೂ ಮಾತನಾಡುವವರಿದ್ದರೆ ಮಾತನಾಡಬಹುದು.

**ಬಿ. ಬಸವಲಿಂಗಪ್ಪ:** ಮಾನ್ಯ ಅಧ್ಯಕ್ಷರೇ ಮಾನ್ಯ ಸದಸ್ಯರಾದ ಕೆ.ಹೆಚ್. ಶ್ರೀನಿವಾಸ್‌ರವರಿಗೆ ವಂದನೆಗಳನ್ನು ಅರ್ಪಿಸಬೇಕು. ಕಾರಣ ಅವರು ಸಕಾಲಿಕವಾದ ಖಾಸಗೀ ನಿರ್ಣಯವನ್ನು ತಂದಿದ್ದಾರೆ. ಇದರ ಬಗ್ಗೆ ಸಾಕಷ್ಟು ಚರ್ಚೆಯಾಗಿದೆ. ಸದನದಲ್ಲಿ ಬಹು ಹಿಂದಿನ ಕಾಲದಿಂದಲೂ ಈ ರೀತಿಯ ಚರ್ಚೆ ನಡೆಯುತ್ತಿದೆ. ಈ ನಿರ್ಣಯದ ಮೇಲೆ ಚರ್ಚೆ ನಡೆದಿದ್ದರೂ ಏನೇನು ಕೆಲಸ ಮಾಡಿದ್ದೇವೆನ್ನುವುದು ನಮ್ಮ ಕಣ್ಣು ಮುಂದೆ ಇದೆ.

ಶ್ರೀಮಾನ್ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದಂಥ ಕಾಲದಲ್ಲಿ ಪಾನನಿರೋಧ ಜಾರಿಗೆ ತರಬೇಕೆ? ಬೇಡವೇ ಎನ್ನುವ ಬಗ್ಗೆ ಚರ್ಚೆ ನಡೆಯಿತು. ಆಗ ಆ ಸರ್ಕಾರ ಒಂದು ನಿಲುವು ತೆಗೆದುಕೊಂಡಿತು. ಏನೆಂದರೆ ಪಾನನಿರೋಧ ಜಾರಿಗೆ ತರುವುದು ಬೇಡವೆಂದು. ಆಗ ಮಾನ್ಯ ರಾಚಯ್ಯನವರು ಮಂತ್ರಿಗಳಾಗಿದ್ದರು. ಅವರು ತಮ್ಮ ತಾಲ್ಲೂಕಿನ ಚಾಮರಾಜನಗರ ಮತ್ತು ಕೊಳ್ಳೇಗಾಲಗಳಿಗೆ ಸಂಬಂಧಪಟ್ಟ ಹಾಗೆ ಪಾನನಿರೋಧ ಜಾರಿಗೆ ತರಿಸಿಕೊಂಡರು. ಇನ್ನುಳಿದ ಕಡೆಗಳೆಲ್ಲೆಲ್ಲಾ ಬೇಡವೆಂದು ಮಾಡಿದರು.

**ಬಿ. ರಾಚಯ್ಯ:** ಆ ಆರೋಪಣೆ ನನಗೆ ಸಲ್ಲತಕ್ಕಂಥಾದ್ದು ಅಲ್ಲ. ಇಡೀ ರಾಜ್ಯದಲ್ಲಿ ತರುವುದಕ್ಕೆ ಸಾಧ್ಯವಿತ್ತು. ಆದರೆ ತಮ್ಮ ಮನಸ್ಸು ನೋಯಿಸತಕ್ಕಂಥಾದ್ದು ಸರಿಯಲ್ಲವೆಂದು ಜಾರಿಗೆ ತರಲಿಲ್ಲ.

ಬಿ. ಬಸವಲಿಂಗಪ್ಪ: ಅವರು ಹೇಳಿದ್ದುದು ಸರಿ. ಆಗ ನಮ್ಮ ಮಾತು ಯಾರೂ ಕೇಳುತ್ತಿರಲಿಲ್ಲ. ಅದಕ್ಕೆ ಜಾರಿಗೆ ತಂದರು.

ಬಿ. ರಾಚಯ್ಯ: ತಾವು ಡೆಪ್ಯುಟಿ ಚೀಫ್ ಮಿನಿಸ್ಟರ್ ಆಗಿದ್ದವರು. ಆಗ ತಮ್ಮ ಮಾತು ಎಲ್ಲರೂ ಕೇಳುತ್ತಿದ್ದರು. ಈ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಮೆಜಾರಿಟಿ ಓಪಿನಿಯನ್ ಯಾವ ರೀತಿ ಬರುತ್ತದೆಯೋ ಆ ರೀತಿ ಮಾಡಬೇಕು.

ಬಿ. ಬಸವಲಿಂಗಪ್ಪ: ತಾವು ಏನು ವಿಷಯವನ್ನು ಸ್ಪಷ್ಟೀಕರಿಸುತ್ತಿದ್ದೀರೋ ಅದನ್ನೇ ನಾನು ಹೇಳುತ್ತಿದ್ದೇನೆ. ಬ್ರಾಂದಿ ಅಂಗಡಿಗಳಿಗೆ ಲೈಸೆನ್ಸ್‌ಗಳನ್ನು ಸರ್ಕಾರ ಕೊಡುತ್ತಿದೆ. ಸರ್ಕಾರಕ್ಕೆ ಹಣಬೇಕೆಂದು ಬ್ರಾಂದಿ ಅಂಗಡಿಗಳಿಗೆ ಲೈಸನ್ಸ್‌ಗಳನ್ನು ಕೊಡುವುದನ್ನು ಸರ್ಕಾರ ಜಾರಿಗೆ ತಂದಿದೆ. ಪಾನನಿರೋಧ ಬೇಕಾಗಿಲ್ಲ. ಮೊದಲು ಒಂದೆರಡು ತಾಲ್ಲೂಕಿನಲ್ಲಿ ಪಾನನಿರೋಧ ಜಾರಿಯಲ್ಲಿ ಇತ್ತು. ಈಗ ಆ ತಾಲ್ಲೂಕಿಗೂ ಲೈಸನ್ಸ್‌ಗಳನ್ನು ಕೊಡುವುದನ್ನು ವಿಸ್ತರಿಸಿದ್ದಾರೆ.

ಕೆ.ಹೆಚ್. ಶ್ರೀನಿವಾಸ್: ಈಗ ಜಮಖಂಡಿ ತಾಲ್ಲೂಕಿನಲ್ಲಿ ಪಾನನಿರೋಧ ಕಾನೂನನ್ನು ಇಟ್ಟಿದ್ದಾರೆ. ಆದರೆ ಈ ಕಾನೂನನ್ನು ರಿಲ್ಯಾಕ್ಸ್ ಸಡಿಲ ಮಾಡಿದ್ದಾರೆ. ತಾಂತ್ರಿಕವಾಗಿ ಅಲ್ಲಿ ಪಾನನಿರೋಧ ಕಾನೂನು ಇದೆ ಆದರೆ, ಅದರ ಅಡಿಯಲ್ಲಿ ಎಲ್ಲಾ ರಿಲ್ಯಾಕ್ಸ್ ಆಗಿದೆ.

ಬಿ. ಬಸವಲಿಂಗಪ್ಪ: ಹಿಂದೆ ಕಾಂಗ್ರೆಸ್ ಸರ್ಕಾರ ಇತ್ತು. ಇವೊತ್ತು ಜನತಾ ಸರ್ಕಾರ ಇದೆ ಎಂದು ನಾನು ಹೇಳುತ್ತಿಲ್ಲ. ಕಾಂಗ್ರೆಸ್ ಸರ್ಕಾರದವರು ಸ್ವಾತಂತ್ರ್ಯ ಹೋರಾಟ ಪೂರ್ವದಲ್ಲಿ ಪಾನನಿರೋಧವನ್ನು ಜಾರಿಗೆ ತರಬೇಕೆಂದು ಒತ್ತಾಯ ಮಾಡಿದ್ದರು. ಈ ವಿಷಯ ತಮಗೂ ಗೊತ್ತಿದೆ. ಕಾಂಗ್ರೆಸ್ ಸರ್ಕಾರವು ಪಾನ ನಿರೋಧವನ್ನು ರಾಷ್ಟ್ರದಲ್ಲಿ ಜಾರಿಗೆ ತರಬೇಕೆಂದು ಮಾಡಿತ್ತು, ಆದರೆ, ಪೂರ್ಣವಾಗಿ ಪಾನನಿರೋಧವನ್ನು ರಾಷ್ಟ್ರದಲ್ಲಿ ತರಲಿಕ್ಕೆ ಆಗಲಿಲ್ಲ. ಸರ್ಕಾರಕ್ಕೆ ಇರಬೇಕಾದ ಉದ್ದೇಶ ಬೇರೆ ಇದ್ದ ಕಾರಣ ಪಾನನಿರೋಧ ಜಾರಿಗೆ ತರುವುದಕ್ಕಾಗಲಿಲ್ಲ. ಕಾಂಗ್ರೆಸ್ ಸರ್ಕಾರ ಇದ್ದಾಗ ಎಷ್ಟು ಬ್ರಾಂದಿ ಶಾಪ್‌ಗಳನ್ನು ತೆರೆದರೋ ಅದಕ್ಕಿಂತ ಹೆಚ್ಚು ಬ್ರಾಂದಿ ಶಾಪ್‌ಗಳನ್ನು ಈಗ ತೆರೆಯಲಾಗಿದೆ ಎಂದು ಅಂಕಿ ಅಂಶಗಳನ್ನು ನೋಡಿದರೆ ಗೊತ್ತಾಗುತ್ತದೆ. ಕಾಂಗ್ರೆಸ್ ಸರ್ಕಾರ ಇಷ್ಟೊಂದು ಪ್ರಮಾಣದಲ್ಲಿ ಶಾಪ್‌ಗಳನ್ನು ಮಾಡುವುದಕ್ಕೆ ಹೋಗಲಿಲ್ಲ. ಕಾಂಗ್ರೆಸ್ ಸರ್ಕಾರ ಸಹಿತ ಎಷ್ಟು ಮಿತಿಯಲ್ಲಿ ಬ್ರಾಂದಿ ಶಾಪ್‌ಗಳನ್ನು ತೆರೆಯಬೇಕಾಗಿತ್ತೋ ಆ ಮಿತಿಯಲ್ಲಿ ಮಾತ್ರ ತೆರೆಯಿತು. ಆದಾಯದ ಮೇಲೆ ಕಣ್ಣಿಟ್ಟು ಕಾಂಗ್ರೆಸ್ ಸರ್ಕಾರದವರು ಕೆಲಸ ಮಾಡಲಿಲ್ಲ. ಜನತಾ ಆಡಳಿತಕ್ಕೆ ಬಂದ ಮೇಲೆ ಪ್ರತಿಯೊಂದು ಹಳ್ಳಿಗಳಲ್ಲೂ ಬ್ರಾಂದಿ ಶಾಪ್‌ಗಳು ಆಗಿವೆ.

ಬೆಂಗಳೂರು ನಗರ ಒಂದರಲ್ಲೇ 2 ಸಾವಿರ ಬ್ರಾಂದಿ ಅಂಗಡಿಗಳು ಇವೆ. ಈ ಅಂಗಡಿಗಳ ಜೊತೆಗೆ ಹೆಂಡದ ಅಂಗಡಿ ಮತ್ತು ಸಾರಾಯಿ ಅಂಗಡಿಗಳು ಬೇರೆ ಇವೆ. ಹಳ್ಳಿಗಳ ಮಟ್ಟದಲ್ಲೂ ಕೂಡ ಈ ಬ್ರಾಂದಿ ಅಂಗಡಿಗಳು ಇಲ್ಲದೆ ಇಲ್ಲ. ತಾಲ್ಲೂಕು ಮಟ್ಟದಲ್ಲಿ ಈ ಹಿಂದೆ 10 ಬ್ರಾಂದಿ ಅಂಗಡಿಗಳು ಇದ್ದರೆ, ಈಗ 100 ಅಂಗಡಿಗಳು ಇರುತ್ತವೆ. ಹೋಬಳಿ ಹೆಡ್ ಕ್ವಾರ್ಟರ್‌ನಲ್ಲಿ ಮೊದಲು ನಾಲ್ಕು ಅಥವಾ ಐದು ಬ್ರಾಂದಿ ಅಂಗಡಿಗಳು ಇದ್ದರೆ, ಈಗ ಹತ್ತು ಅಥವಾ ಹದಿನೈದು ಬ್ರಾಂದಿ ಅಂಗಡಿಗಳು ಇವೆ.

ಬಿ. ರಾಚಯ್ಯ: ನಾನು ಮಂತ್ರಿ ಆಗಿಲ್ಲದಿದ್ದಾಗ ಮಾನ್ಯ ಬಸವಲಿಂಗಪ್ಪನವರು ಮತ್ತು ಮಾನ್ಯ ಮಲ್ಲಿಕಾರ್ಜುನ ಖರ್ಗೆಯವರು ಗುಂಡೂರಾಯರ ಮಂತ್ರಿಮಂಡಲದಲ್ಲಿ ಸಚಿವರಾಗಿದ್ದರು. ಅವರೇ ಪಾನನಿರೋಧವನ್ನು ಜಾರಿಗೆ ತರಬಹುದಾಗಿತ್ತು. ಮಾನ್ಯ ಅರಸುರವರ ಕಾಲದಲ್ಲೂ ಸಹ ಪಾನನಿರೋಧದ ಕೆಲಸವನ್ನು ಮಾಡಲಿಲ್ಲ.

ಎಂ. ಮಲ್ಲಿಕಾರ್ಜುನ ಖರ್ಗೆ: ಅವರ ಕಾಲದಲ್ಲಿ ಮಾಡಿಲ್ಲ, ಇವರ ಕಾಲದಲ್ಲಿ ಮಾಡಿಲ್ಲವೆಂದು ಹೇಳುವುದು ಸರಿಯಲ್ಲ. ನಮ್ಮ ಕಾಲದಲ್ಲಿ ನಾವು ಏನು ಮಾಡಿದ್ದೆವು, ನಿಮ್ಮ ಕಾಲದಲ್ಲಿ ಏನು ಮಾಡಿದ್ದೀರಿ ಎನ್ನುವ ಬಗ್ಗೆ ಒಂದು ವೈಟ್ ಪೇಪರ್‌ವನ್ನು ಬೇಕಾದರೆ ತರೋಣ. ಸುಮ್ಮನೆ ಇಲ್ಲಿ ವಾದ ಮಾಡುವುದು ಬೇಡ.

ಬಿ. ರಾಚಯ್ಯ: ಕುಡಿಯಬೇಡಿರಿ ಎಂದು ಬಾಯ್-ಕಾಟ್ ಮಾಡಿದರೆ ನನ್ನದೇನು ಅಭ್ಯಂತರವಿಲ್ಲ. ಆದರೆ, ನೀವು ಇದ್ದಾಗ ಏನು ಮಾಡಿದಿರಿ ಎಂದು ಕೇಳಿದೆ ಅಷ್ಟೇ.

ಎಂ. ಮಲ್ಲಿಕಾರ್ಜುನ ಖರ್ಗೆ: ನಾವು ಆ ಕಡೆ ಕುಳಿತರೆ ಹಾಗೆ ಹೇಳುವುದಿಲ್ಲ.

ಬಿ. ಬಸವಲಿಂಗಪ್ಪ: ಮಾನ್ಯ ರಾಚಯ್ಯನವರೇ, ತಾವು ಕುಡಿಯುವುದಿಲ್ಲ. ನೀವು ಏಕೆ ಇದರ ಬಗ್ಗೆ ಮಾತನಾಡುತ್ತೀರಿ? ಕುಡಿಯುವ ಅಭ್ಯಾಸ ಇದ್ದವರು ಮಾತನಾಡಲಿ. ಇವತ್ತು ಏನಾಗಿದೆ ಎಂದರೆ, ಮಾನ್ಯ ಮಂತ್ರಿಗಳಾದ ಶ್ರೀಮಾನ್ ಜೆ.ಹೆಚ್. ಪಟೇಲರಿಗೆ ಇದರ ಮೇಲೆ ಮಾತನಾಡುವುದಕ್ಕೆ ಸರ್ವ ಅಧಿಕಾರ ಉಂಟು. ಅವರು ಮಾತನಾಡಲೇ ಬೇಕು. ಅದಕ್ಕೆ ಕಾರಣ ಬೇಡ.. (ಸದನದೊಳಕ್ಕೆ ಜೆ.ಹೆಚ್. ಪಟೇಲ್ ಪ್ರವೇಶ)

ಈಗ ಮಾನ್ಯ ಜೆ.ಹೆಚ್. ಪಟೇಲ್‌ರವರು ಬರುತ್ತಾ ಇದ್ದಾರೆ, ಮಾನ್ಯ ಮಂತ್ರಿಗಳವರಿಗೆ ಇದರ ಮೇಲೆ ಮಾತನಾಡಲಿಕ್ಕೆ ಸರ್ವ ಅಧಿಕಾರ ಉಂಟು. ಹಕ್ಕು ಉಂಟು, ಅವರು ಮಾತನಾಡಲೇ ಬೇಕು, ಮಾತನಾಡುತ್ತಾರೆ, ಆದರೆ ಅದು ಏಕೆ ಎಂದು ಕಾರಣ ಕೇಳಬೇಡಿ, ನಿಮಗೂ ಗೊತ್ತು, ಅವರಿಗೂ ಗೊತ್ತು.

ಬಿ. ರಾಚಯ್ಯ: ಹಾಗಾದರೆ ನಾನು ಹೋಗುತ್ತೇನೆ.

ಬಿ. ಬಸವಲಿಂಗಪ್ಪ: ಇಲ್ಲ ಸ್ವಾಮಿ, ತಾವು ಕುಳಿತುಕೊಳ್ಳಬೇಕು. ಬರೇ ಲಾಭಕ್ಕಾಗಿ ಆದಾಯಕ್ಕಾಗಿ ಈ ಅಬಕಾರಿ ಇಲಾಖೆ ಏನಿದೆ, ಅದಕ್ಕೆ ಇಲ್ಲದ ಕೆಲಸ ಜಾಸ್ತಿ ಕೊಟ್ಟಿದ್ದೀರಿ. ಅದಕ್ಕೆ ಕಾನೂನು ವಿಪರೀತ ಮಾಡಿದ್ದೀರಿ. ಮತ್ತೆ ಎರಡು ಮೂರು ವರ್ಷಗಳಿಂದ ಈ ಮಾತನ್ನು ಹೇಳುವಾಗ ಮಾನ್ಯ ಬಂಗಾರಪ್ಪನವರು ಇರಬೇಕಾಗಿತ್ತು. ಅವರು ಕುಡಿಯದೇ ಹೋದರೂ ಕೂಡ ಈ ವಿಷಯದಲ್ಲಿ ಅವರು ಪ್ರವೀಣರಿದ್ದಾರೆ. ಹಾಗೆಯೇ ಮಾನ್ಯ ಜಾಲಪ್ಪನವರೂ ಕೂಡ ಅಷ್ಟೇ ಪ್ರವೀಣರು.

ಆರ್.ಎಲ್. ಜಾಲಪ್ಪ: ಏನು ಸ್ವಾಮಿ? ನಾನು ಅದರಲ್ಲಿ ಪ್ರವೀಣ ಎಂದು ನಿಮಗೆ ಹೇಗೆ ಗೊತ್ತು?

ಬಿ. ಬಸವಲಿಂಗಪ್ಪ: ಇದನ್ನೆಲ್ಲಾ ಇಲ್ಲಿ ಹೇಳುವುದು ಬೇಡ.

ಕೆ.ಎಚ್. ಶ್ರೀನಿವಾಸ್: ಮಾನ್ಯ ಜಾಲಪ್ಪನವರು ಮಂತ್ರಿಪದವಿಗೆ ರಾಜೀನಾಮೆ ಕೊಟ್ಟು ವ್ಯಾಪಾರ ಮಾಡುತ್ತೇನೆ ಎಂದು ಹೇಳುತ್ತಾ ಇದ್ದರು.

ಬಿ. ಬಸವಲಿಂಗಪ್ಪ: ಆದಾಯಕ್ಕಾಗಿ, ಬ್ರಾಂದಿ, ಶೇಂದಿ, ಸಾರಾಯಿ, ಎಂದು ಸಾವಿರಾರು ಸಂಖ್ಯೆಯಲ್ಲಿ ಅಂಗಡಿಗಳಿಗೆ ಲೈಸನ್ಸ್‌ನ್ನು ಕೊಟ್ಟಿದ್ದೀರಿ. ಚುನಾವಣೆ ಬಂತೆಂದರೆ ಹಳ್ಳಿಗಳಲ್ಲಿ ಕುಡಿಯದೇ ಇರತಕ್ಕಂತ ರಾಜಕಾರಣಿಗಳೇ ಇಲ್ಲ. ಎಲ್ಲರೂ ಕುಡಿಯುತ್ತಾರೆ.

ಬಿ.ಜಿ. ಕೊಟ್ರಪ್ಪ: ಹಾಗೆ ಕುಡಿಯುವ ಚಟ ಇದ್ದವರಿಗೆ, ಕುಡಿಯಲು ದೂರ ಹೋಗುವುದು ಬೇಡ ಎಂದು ಅಲ್ಲಲ್ಲಿ ಹತ್ತಿರವೇ ಅಂಗಡಿಗಳು ಮಾಡಿದ್ದೇವೆ.

ಬಿ. ಬಸವಲಿಂಗಪ್ಪ: ಚುನಾವಣೆಯ ಸಂದರ್ಭಗಳಲ್ಲಿ, ಅದು ಸಣ್ಣ ಚುನಾವಣೆಯೇ ಆಗಲಿ, ದೊಡ್ಡ ಚುನಾವಣೆಯೇ ಆಗಲಿ, ಅಲ್ಲಿಯೂ ಇದೇ ಕೆಲಸ. ಲಾರಿಗಳಲ್ಲಿ ಬ್ರಾಂದಿಯನ್ನು, ಸಾರಾಯಿಯನ್ನು ತುಂಬಿಸಿಕೊಂಡು ಹೋಗಿ ಕೊಟ್ಟಿರುವುದನ್ನು ನಾನು ನೋಡಿದ್ದೇನೆ. ಚುನಾವಣೆ ಕಾಲದಲ್ಲಿ ನಾವುಗಳು ರಾಜಕೀಯ ಧ್ಯೇಯ ಧೋರಣೆಗಳ ಬಗ್ಗೆ ವಿಶ್ವಾಸ ಇಟ್ಟುಕೊಂಡಿದ್ದೇವೆ. ಹಾಗೆಯೇ ಅದನ್ನು ನಾವು ಸಾರ್ವಜನಿಕವಾಗಿ ವ್ಯಕ್ತಪಡಿಸುತ್ತಾ ಇದ್ದೇವೆ. ಆದರೆ ಯಾರೂ ಹಾಗೆ ನಡೆಸಿಕೊಳ್ಳುತ್ತಾ ಇಲ್ಲ. ಈವೊತ್ತಿನ ದಿವಸ ಕುಡಿಯದೇ ಇರತಕ್ಕಂಥವರನ್ನು ನಾವು ಹುಡುಕಿಕೊಂಡು ಹೋಗಬೇಕಾಗಿದೆ. ಎಲ್ಲವೂ ಸರಕಾರಿ ದುಡ್ಡಿನಲ್ಲಿಯೇ, ಹೊರತು ಅವರವರ ಸ್ವಂತ ದುಡ್ಡಿನಲ್ಲಿ ಕುಡಿಯುವುದಿಲ್ಲ.

ಇಂಥ ಸಂದರ್ಭದಲ್ಲಿ ನಮ್ಮ ರಾಜಕೀಯ ಜೀವನ ಶುದ್ಧವಾಗಿರಬೇಕು. ನಮ್ಮ ನಡೆನುಡಿಗಳು ಜನಗಳಿಗೆ ಮಾದರಿಯಾಗಿರುವಂತೆ ನಾವು ಜೀವನ ಮಾಡಬೇಕು. ಆದುದರಿಂದ ರಾಜಕಾರಣಿಗಳು, ಯಾವ ಪಕ್ಷ ಅಧಿಕಾರಕ್ಕೆ ಬರುತ್ತದೋ ಅಂತಹವರು ಒಳ್ಳೆಯ ಧ್ಯೇಯಧೋರಣೆಗಳನ್ನು ಅನುಷ್ಠಾನಕ್ಕೆ ತರಬೇಕು.

ಜನತಾ ಪಕ್ಷದವರು 1977ನೇ ಇಸವಿಯಲ್ಲಿ ಮಹಾತ್ಮಾಗಾಂಧೀಜಿಯವರ ಸಮಾಧಿಗೆ ಹೋಗಿ ಕಟ್ಟೆಯನ್ನು ಮುಟ್ಟಿ, ಬಡಿದು, " ನಾವು ಹೇಳುವುದನ್ನು ಜಾರಿಗೆ ಕೊಡುತ್ತೇವೆ" ಎಂದು ಶಪಥ ತೆಗೆದುಕೊಂಡರು. ಆದರೆ ಅವರು ಕೃತಿಯಲ್ಲಿ ಬೇರೆಯದನ್ನೇ ಮಾಡಿದರು. ನನಗನ್ನಿಸುತ್ತದೆ. ಎಲ್ಲಾ ರಾಜಕಾರಣಿಗಳು ಅಧಿಕಾರಕ್ಕೆ ಬರುವುದಕ್ಕೆ ಮುಂಚಿತವಾಗಿ, ಎಲ್ಲರೂ ಆಕಾಶದಿಂದ ತತ್ವಗಳನ್ನು ಹೇಳುತ್ತಾರೆ. ಹಾಗೆ ಮಾಡುತ್ತೇವೆ, ಹೀಗೆ ಮಾಡುತ್ತೇವೆ ಎಂದೆಲ್ಲಾ ಹೇಳುತ್ತಾರೆ. ಅಧಿಕಾರಕ್ಕೆ ಬಂದ ನಂತರ ಎಲ್ಲವನ್ನೂ ಮರೆತು ಬಿಡುತ್ತಾರೆ. ಹೀಗೆಯೇ ಜನತಾ ಪಕ್ಷದವರು ಮಾಡಿದರು. ಇವರೂ ಕೂಡ ಮಹಾತ್ಮಗಾಂಧೀಜಿಯವರು ಹೇಳಿದ್ದನ್ನು ಜಾರಿಗೆ ತರುತ್ತೇವೆ ಎಂದು ಒಂದು ನೀತಿಯನ್ನು ಇಟ್ಟುಕೊಂಡಿದ್ದೇವೆ ಎಂದು ಹೇಳಿದ್ದಾರೆ. ಹಾಗಾದರೆ ಮಹಾತ್ಮಾಜೀಯವರು ಬ್ರಾಂದಿ, ವಿಸ್ಕಿ, ಸಾರಾಯಿ, ಶಾಪ್‌ಗಳನ್ನು ಬೇಕಾದಷ್ಟು ಓಪನ್ ಮಾಡಿ ಎಂದು ಹೇಳಿದ್ದಾರೆಯೇ? ಎಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ನೀವು ಇಂದು ಶಾಪ್‌ಗಳನ್ನು ಪ್ರಾರಂಭ ಮಾಡುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದೀರಿ? ಎಲ್ಲಿ ನೋಡಿದರೂ ವೈನ್‌ಶಾಪ್‌ಗಳೇ ತುಂಬಿವೆ? ಇದು ಸರಕಾರದ ನೀತಿಯೇ?

ಕೊನೆಗೆ ಏನು ಮಾಡಬೇಕೆಂದಿದ್ದೀರಿ, ಇದನ್ನು ದ್ವಿಗುಣ ಮಾಡುತ್ತೀರಾ ಈಗ 2000 ಇದೆ ಸಿಟಿಯಲ್ಲಿ ಅದನ್ನು 4,000 ಕ್ಕೆ ಏರಿಸುತ್ತೀರಾ? ನಮ್ಮಲ್ಲಿ ಅನೇಕರು ಕೂಲಿಗಾರರಿದ್ದಾರೆ, ಬಡವರಿದ್ದಾರೆ ಅವರು ಕಷ್ಟಪಟ್ಟು ಬೆವರು ಸುರಿಸಿ ಜೀವನ ಮಾಡುತ್ತಿದ್ದಾರೆ. ಅಂತಹವರ ಹಣವನ್ನು ದೋಚಿಕೊಳ್ಳುವುದಕ್ಕೋಸ್ಕರ ಇನ್ನೂ ಎಷ್ಟು ಶಾಪ್‌ಗಳನ್ನು ಓಪನ್ ಮಾಡುತ್ತೀರಿ.

ಸಾಹುಕಾರರು ಕುಡಿದುಕೊಂಡು ಹೋಗಲಿ ಬೇಡವೆಂದು ಹೇಳುವುದಿಲ್ಲ. ಆದರೆ ಬಡವನು ಉದ್ದಿಮೆ ಮಾಡಿ, ಕೈ ಕಸುಬಿನಿಂದ ಶ್ರಮದಿಂದ ತರತಕ್ಕಂತಹ ಹಣವನ್ನು ಕಸಿದುಕೊಳ್ಳತಕ್ಕಂತಹ ಪ್ರವೃತ್ತಿ ಇವತ್ತಲ್ಲಾ ಸಾವಿರಾರು ವರ್ಷಗಳಿಂದ ಇದೆ. ಇವತ್ತು ಅದನ್ನು ಜಾಸ್ತಿ ಏಕೆ ಮಾಡಿದ್ದೀರಿ ಎಂದು ಕೇಳುತ್ತಿದ್ದೇನೆ. ಆಯಿತು. ಮತ್ತೆ ಜಾಸ್ತಿ ಮಾಡಿದ್ದೀರ. ಅದರಿಂದ ಆದಾಯ ಪಡೆದುಕೊಳ್ಳುತ್ತಿದ್ದೀರಿ. ಅದರ ಮೇಲೆಯೇ ಸರಕಾರವನ್ನು ನಡೆಸಿಕೊಳ್ಳಲಿ. ಅದು ಬೇರೆ ವಿಚಾರ. ಪಾನನಿರೋಧ ಅನ್ನತಕ್ಕಂತಹ ಕಾರ್ಯಕ್ರಮವನ್ನು ನಿಮ್ಮ ಸರಕಾರದಲ್ಲಿ ಏಕೆ ಇಟ್ಟುಕೊಂಡಿದ್ದೀರಿ? ಮಾನ್ಯ ಕೆ.ಹೆಚ್. ಶ್ರೀನಿವಾಸ್‌ರವರು ಇದರ ಬಗ್ಗೆ ಬಹಳ ಚೆನ್ನಾಗಿ ಭಾಷಣ ಮಾಡಿದರು. ಇವತ್ತಿನ ದಿವಸ ನಾನು ಮಾತನಾಡಬಾರದೆಂದು ಇದ್ದೆ. ತಮ್ಮ ಆದೇಶದ ಮೇಲೆ ಇವತ್ತು ನಾನು ಮಾತನಾಡುತ್ತಿದ್ದೇನೆ. ಅವರು ಏಕೆ ಮಾತನಾಡಿದರು. ನನಗೆ ಅರ್ಥವಾಗಲಿಲ್ಲ. ಅವರ ಉದ್ದೇಶ ಏನು ಎಂದು ನನಗೆ ಗೊತ್ತಿಲ್ಲ. ಹೈಪವರ್ ಕಮಿಟಿ ಮಾಡಿ ಜಾಸ್ತಿ ಶಾಪ್‌ಗಳನ್ನು ಓಪನ್ ಮಾಡಬೇಕೆಂಬ ಉದ್ದೇಶ ಇದೆಯೋ ಏನೋ ಗೊತ್ತಾಗಲಿಲ್ಲ.

**ಕೆ.ಹೆಚ್. ಶ್ರೀನಿವಾಸ್:** ಕಾಂಗ್ರೆಸ್, ಜನತಾ ಎಲ್ಲಾ ಒಂದೇ. ಮಹಾತ್ಮಾಗಾಂಧಿಯವರು ಪ್ರಾಹಿಬಿಷನ್ ಮಾಡಬೇಕೆಂದು ಹೇಳಿದರು. ಅದು ಕಾರ್ಯ ಸಾಧುವಲ್ಲವೆಂದು ಹೇಳಿ ನಾವು ಯಾವುದೋ ಒಂದು ದಾರಿಯಲ್ಲಿ ಹೋಗಿದ್ದೇವೆ. ಆ ದಾರಿಯಲ್ಲಿ ಹೋಗುವುದಕ್ಕೆ ಕಾರಣಗಳು ಯಾವುದಾದರೂ ಇರಬಹುದು. ಆ ದಾರಿಯಲ್ಲಿ ತುಂಬಾ ಮುಂದಕ್ಕೆ ಹೋಗಿದ್ದೇವೆ. ಪ್ರತಿಯೊಂದು ಸರಕಾರಕ್ಕೂ ಕೂಡ ಇದರಿಂದ Major source of income ಇವೆ. It has got a vested interest in the increased income from the Department of Excise. ನಾವು ಜನರಿಗೆ ಕುಡಿಸುತ್ತಿರುವವರು. ಡಬಲ್ ಡಿಸ್ಟಿಲ್ಡ್ ಆಲ್ಕೋಹಾಲ್ ಇದೆ. ಇನ್ನೊಂದು ಯಾವುದೋ ಮರದಿಂದ ಸ್ವಲ್ಪವನ್ನು ತೆಗೆದುಕೊಂಡು ಉಳಿದಿದ್ದಕ್ಕೆ ನೀರು ಕ್ಲೋರಲ್ ಹೈಡ್ರೇಟ್ ಹಾಕಿ ಅದನ್ನು ತುಂಬಿಸಿ, ಯಾರ ಮೂಲಕ ಆಪರೇಟ್ ಮಾಡುತ್ತಿದ್ದೇವೆಂದರೆ, ದೊಡ್ಡ ದೊಡ್ಡ ಕಂಟ್ರಾಕ್ಟರ್ಸ್ ಕೆಲಸ ಕೊಡಿಸುತ್ತಿದ್ದೇವೆ. ಅಂದರೆ ಅವರಿಗೆ ಕುಡಿಸುವ ಗುತ್ತಿಗೆಯನ್ನು ಕೊಡುತ್ತಿದ್ದೇವೆ. ಅದನ್ನು ಕುಡಿಸುವ ಮೂಲಕ ಆದಾಯ ಕೆಲಸವನ್ನು ಮಾಡುತ್ತಿದ್ದಾರೆ. ಜಾಸ್ತಿ ಜಾಸ್ತಿ ಕುಡಿಸಬೇಕು, ಜಾಸ್ತಿ ಅಡಲ್‌ಟ್ರೇಷನ್ ಮಾಡಬೇಕು ಅದರಿಂದ ನಮಗೆ ಆದಾಯ ಹೆಚ್ಚಾಗಬೇಕು. 13 ಕೋಟಿ ರೂಪಾಯಿ ಬರುವ ಇನ್‌ಕಂ 272 ಕೋಟಿ ರೂಪಾಯಿ ಬರುತ್ತದೆ. ಎಕ್ಸೈಸ್ ಕಂಟ್ರಾಕ್ಟರ್ಸ್‌ಗೆ 50-60 ಕೋಟಿ ರೂಪಾಯಿ. ಇನ್ನು ಉಳಿದದ್ದು ಸರಕಾರಕ್ಕೆ ಸೇರುತ್ತದೆ. ಬೇರೆ ಯಾವ ಇಲಾಖೆಯಲ್ಲೂ ಕೂಡ ಇಷ್ಟು ಪ್ರಾಫಿಟ್ ಇಲ್ಲ ಇದರಲ್ಲಿ ಮಾತ್ರ 400 ಪರ್ಸೆಂಟ್ ಪ್ರಾಫಿಟ್ ಇದೆ. ಇದು ಕೊನೆಗೆ ಎಲ್ಲಿಗೆ ಹೋಗಿ ಮುಟ್ಟುತ್ತದೆಂದರೆ ರಾಜಕಾರಣಿ ಮನೆಗೆ ಹೋಗಬೇಕಾಗುತ್ತದೆ. ನಮ್ಮ ಸಮಾಜವೂ ಹಾಳಾಗಿ ಹೋಗುತ್ತದೆ. ಸಮಾಜ ಕಲ್ಯಾಣ ಇಲಾಖೆ ಇನ್ನಿತರ ಇಲಾಖೆಗಳು ಕುಲಗೆಡುತ್ತವೆ.

ಉದಾಹರಣೆಗೆ 1986ನೇ ಇಸವಿಯಲ್ಲಿ ಆಯವ್ಯಯದ ಮೇಲೆ ಭಾಷಣ ಮಾಡುತ್ತಾ ಶ್ರೀಮಾನ್ ರಾಮಕೃಷ್ಣಹೆಗಡೆಯವರು ಒಂದು ವಾಕ್ಯವನ್ನು ಹೇಳಿದರು. ಅದನ್ನು ತಮ್ಮ ಗಮನಕ್ಕೆ

ತರುತ್ತೇನೆ. ಕೋ-ಆಪರೇಟಿವ್ ಸೊಸೈಟಿ ಏನು ಕರ್ನಾಟಕ ರಾಜ್ಯದಲ್ಲಿ ಇದ್ದಾವಲ್ಲಾ, ಅವರು ಈ ಹೆಂಡವನ್ನು, ಬ್ರಾಂದಿಯನ್ನು, ವಿಸ್ಕಿಗಳನ್ನು ಸರಾಯಿಯನ್ನು ಮಾರಬೇಕು ಎಂದು ಅವರು ಭಾಷಣದಲ್ಲಿ ಹೇಳಿದ್ದಾರೆ. ಕಾರಣ ಏನು ಎಂದು ಹೇಳಿದರೆ ನಿಯಮಿತವಾಗಿ ಕೆಲವೇ ಜನಗಳಿಗೆ ಸಿಗುತ್ತದೆ, ಅವರ ಮುಖಾಂತರ ಬೇರೆಯವರಿಗೆ ಸರಬರಾಜು ಆಗಬಹುದು ಎಂದು. ಅದನ್ನು ನಾವೆಲ್ಲಾ ವಿರೋಧ ಮಾಡಿದೆವು. ಅದನ್ನು ಜಾರಿಗೆ ಕೊಟ್ಟಿದ್ದಾರೆ. ಸಹಕಾರ ಇಲಾಖೆ ಏನು ಇತ್ತೋ, ಅವೆಲ್ಲವೂ ಹೆಂಡಕುಡುಕರಾಗುತ್ತಿವೆ.

ಆರ್.ಎಲ್. ಜಾಲಪ್ಪ: ಮಾನ್ಯ ಬಸವಲಿಂಗಪ್ಪನವರಿಗೆ ರಾಜಕೀಯ ಬಿಡಿ ಎಂದರೆ ಹೇಗೆ ಬಿಡುವುದಿಲ್ಲವೋ ಅಷ್ಟರ ಮಟ್ಟಿಗೆ ಕುಡಿಯುವವರು ಕೂಡಾ ಬಿಡುವುದಿಲ್ಲ. ನೀವು ಕೋ-ಆಪರೇಟಿವ್ ಸೊಸೈಟಿ ಒಳಗೆ ಮಾರ್‍ರಿ ಅಥವಾ ಬಟ್ಟಿ ಸಾರಾಯಿಯಾದರೂ ಮಾರ್‍ರಿ, ಕುಡಿಯುವುದಕ್ಕೆ ಶುರು ಮಾಡಿದ್ದರೆ ಹೇಗಾದರೂ ಮಾಡಿ ಕುಡಿದೇ ಕುಡಿಯುತ್ತಾರೆ. ಪ್ರೊಹಿಬಿಷನ್ ತಂದು ಸತ್ತ ಹಾವುಗಳನ್ನು ಹಾಕಿದೆವು, ನವಸಾಗರವನ್ನು ಹಾಕಿದೆವು, ಯೂರಿಯಾವನ್ನು ಹಾಕಿದೆವು, ಆದರೆ ಕುಡಿಯುವುದನ್ನು ಬಿಡಲೇ ಇಲ್ಲ. ಇದನ್ನು ಕುಡಿಯುವವರು ಸಾಯುವುದು ಬೇಡ ಎಂದು ರೀ-ಇಂಟ್ರಡ್ಯೂಸ್ ಮಾಡಿದೆವು.

ನಾನು ಕಂಟ್ರಾಕ್ಟರ್ ಆಗಿದ್ದೆ. ನಾನು ನೋಡಿದ್ದೇನೆ. ಏನು ಆಯಿತು ಆಗ? ಆಗ ಪುಡಾರಿಗಳಿಗೆ, ಪೋಲೀಸಿನವರಿಗೆ ಅನುಕೂಲವಾಯಿತು, ಪ್ರೊಹಿಬಿಷನ್ ತಂದಾಗ. ಪುಡಾರಿಗಳ ಪ್ರೊಟೆಕ್ಷನ್‌ನಲ್ಲಿ ಪೋಲೀಸಿನವರು ಮತ್ತು ಕೆಲವು ಬೂಟ್‌ಲೆಗ್ಗರ್‍ಸ್‌ಗೆ ಬಹಳ ಅನುಕೂಲವಾಗಿ ಸುಖವಾಗಿ ಆರಾಮವಾಗಿದ್ದರು. ಆದ್ದರಿಂದ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿ ಆಲ್ಕೊಹಾಲ್‌ನಿಂದ ಏನು ತೊಂದರೆಯಾಗುತ್ತದೆ ಎನ್ನುವುದನ್ನು ತಿಳಿಸಬೇಕು.

ರಿಸ್ಟ್ರಿಕ್ಷನ್ ಹಾಕಿದಷ್ಟೂ ಜಾಸ್ತಿಯಾಗುತ್ತದೆ. ಕ್ಲಬ್‌ಗಳನ್ನು ಎಂಟುಗಂಟೆಗೆ-ಒಂಭತ್ತು ಗಂಟೆಗೆಲ್ಲಾ ಮುಚ್ಚಬೇಕು ಎಂದು ಹೇಳಿದರೂ ಒಳಗಡೆ ಬಾಗಿಲು ಹಾಕಿಕೊಂಡು ಪೇಪರ್ ಮುಚ್ಚಿ ಬೋಲ್ಟ್ ಹಾಕಿಕೊಂಡು ಹಿಂದುಗಡೆ ಒಂದು ಬಾಗಿಲು ಹಾಕಿಕೊಂಡಿರುತ್ತಾರೆ. ನಾವು ಒಂದಲ್ಲ ಹತ್ತು ಸಾರಿ ಹಿಡಿಯುತ್ತೇವೆ. ಆದರೂ ಕೂಡಾ ಅದು ಬೆಳೆದುಕೊಂಡು ಬಂದಿದೆ.

ಆ ಕಾಲದಲ್ಲಿ ದೇವರೇ ಕುಡಿಯುತ್ತಿದ್ದರು ಎಂದು ಹೇಳುತ್ತಿದ್ದರು. ಅದೆಲ್ಲಾ ಆಗಿಲ್ಲವೇ? ಪೂರ್ಣವಾಗಿ ನೀವು ಕುಡಿಯಲೇಬೇಡಿ ಎಂದು ಹೇಳುವುದಕ್ಕಾಗುವುದಿಲ್ಲ. ಈ ಪ್ರಪಂಚದಲ್ಲಿ ಯಾವ ರಾಜ್ಯದಲ್ಲಿಯೂ ಇದು ಆಗಿಲ್ಲ. ಆದರೆ ತಾವು ಹೇಳುವುದನ್ನು ನಾನು ಒಪ್ಪಿಕೊಳ್ಳುತ್ತೇನೆ. ಯತ್ವಾತದ್ವಾ ಹೀಗೆ ಎಲ್ಲಾ ಓಪನ್ ಆಗಿ ಬಿಟ್ಟುಬಿಡಬೇಡಿ ಎಂದು ಹೇಳುವುದನ್ನು ಒಪ್ಪಿಕೊಳ್ಳುತ್ತೇವೆ. ಇದರ ಬಗ್ಗೆ ಏನಾದರೂ ಸಲಹೆಗಳು ಕೊಡಬಹುದೇ ವಿನಹಾ ಪೂರ್ಣವಾಗಿ ನಿಲ್ಲಿಸಬೇಕು ಎಂದು ಹೇಳುವುದು ನನಗಂತೂ ಗೊತ್ತಿದ್ದ ಹಾಗೆ ಇದು ಸಾಧ್ಯ ಇಲ್ಲ.

ಕೆ.ಹೆಚ್. ಶ್ರೀನಿವಾಸ್: ಉತ್ತಮವಾಗಿ ಎಷ್ಟೆಷ್ಟು ನನ್ನ ಜ್ಞಾನ ಸಮರ್ಥನೆಗೆ ತೆಗೆದುಕೊಳ್ಳಬೇಕೋ ಅವುಗಳನ್ನು ಮಾಡಿಕೊಂಡಿದ್ದೇನೆ.

ಸಿ.ಎಂ. ಉದಾಸಿ: ಮಾನ್ಯ ಅಧ್ಯಕ್ಷರೇ...

ಅಧ್ಯಕ್ಷರು: ತಡೆಯಿರಿ, ಮಾನ್ಯ ಉದಾಸಿಯವರು ಏನು ಹೇಳುತ್ತಾರೆ ಕೇಳೋಣ.

ಸಿ.ಎಂ. ಉದಾಸಿ: ಮಾನ್ಯ ಅಧ್ಯಕ್ಷರೇ, ಇಷ್ಟರವರೆಗೆ ಪಾನ ನಿರೋಧದ ಬಗ್ಗೆ ಎಲ್ಲಾ ರಾಜಕೀಯ ಪಕ್ಷಗಳವರು ಮಾತನಾಡಿದ್ದಾರೆ. ಎಲ್ಲರೂ ಚುನಾವಣೆಯಲ್ಲಿ ಗೆಲ್ಲಲಿಕ್ಕೆ ಎಂದು ಹೇಳಿದ್ದಾರೆ. ಮೂಲಭೂತವಾದ ತತ್ವ ಇದರಲ್ಲಿ ಏನಿರಬಹುದು. ಕುಡಿಯಬಾರದು ಎಂದು ಪ್ರತಿಭಟನೆ ಅಥವಾ ಘೋಷಣೆ ಇದ್ದರೆ ಮಾತ್ರ ಇದು ಏನಾದರೂ ಕಾರ್ಯರೂಪಕ್ಕೆ ಬರುತ್ತಿತ್ತೋ ಏನೋ. ಚುನಾವಣೆ ಕ್ಷೇತ್ರದಲ್ಲಿ ಕುಡಿಯದವರು, ಚುನಾವಣೆಗೆ ನಿಂತರೆ ಬಾಟ್ಲಿ ಗುರುತು ಇಟ್ಟುಕೊಂಡಿದ್ದರೆ ಕುಡಿಯುವವರೇ ಓಟು ಹಾಕುತ್ತಾರೋ ಏನೋ. ಕುಡಿಯುವವರು ಕುಡಿದವರಿಗೆ, ಕುಡಿಯುವವರು ಕುಡಿಯುವವರಿಗೆ. ಇದರ ಬಗ್ಗೆ ದೃಢ ನಿರ್ಧಾರ ಇದ್ದರೆ ಮಾತ್ರ ಒಂದು ತೀರ್ಮಾನಕ್ಕೆ ಬರಲಿಕ್ಕೆ ಸಾಧ್ಯ ಎನ್ನುವ ವಿಚಾರವನ್ನು ಹೇಳುತ್ತೇನೆ.

ಬಿ. ಬಸವಲಿಂಗಪ್ಪ: ಪಾನನಿರೋಧದ ಬಗ್ಗೆ ಇವರು ಮಾತನಾಡಿದ್ದನ್ನು ಕೇಳಿದರೆ ಬರಿ ಕುಡಿಯುವರ ಭಾಷಣ ಕೇಳಿದ ಹಾಗೆ ಇದೆ. ಕುಡಿಯುವವರಿಗೆ ಬೆಂಬಲ ಕೊಟ್ಟ ಹಾಗಿದೆ ಭಾಷಣ..

ಆರ್.ಎಲ್. ಜಾಲಪ್ಪ: ಅವರು ಕುಡಿಯುವುದಿಲ್ಲ.

ಅಧ್ಯಕ್ಷರು: ರಮೇಶ್ ಕುಮಾರ್ ಏನು ಹೇಳುತ್ತಾರೋ.

ರಮೇಶ್ ಕುಮಾರ್: ನಾನು ಶ್ರೀನಿವಾಸ್‌ರವರ ಭಾಷಣವನ್ನು ಪ್ರಾರಂಭದಿಂದ ಕೇಳಿದೆ. ಕುಡಿಯುವವರ ಬಗ್ಗೆ ಮಾತನಾಡಿದ್ದನ್ನೂ ಕೇಳಿದೆ. ಆದರೆ ನಮ್ಮ ದುರ್ಭಾಗ್ಯ ಯಾವ ರೀತಿ ಇದೆ ಅಂದರೆ, ವ್ಯಾಪಾರ ಮಾಡುವವನೂ, ಶ್ರೀಮಂತರೂ ಇದರಲ್ಲಿದ್ದಾರೆ. ಇಬ್ಬರಲ್ಲೂ ಈ ವೃತ್ತಿ ಇರುತ್ತದೆ. ಶ್ರೀಮಂತರಿಗೆ ಇನ್‌ಫ್ಲುಯೆನ್ಸ್ ಇದ್ದು ಇಡೀ ರಾಜ್ಯದ ಎರಡೂ ರಾಜಕೀಯ ಪಕ್ಷಗಳ ಮೇಲೆ ಎಷ್ಟು ಬಲವಾದ ಪರಿಣಾಮ ಬೀರುತ್ತಾರೆಂದರೆ ಎಲ್ಲ ಪಕ್ಷಗಳು ಅಂದರೆ ನಾವುಗಳು ಅವರುಗಳ ಬಂದಿ ಆಗಿದ್ದೇವೆ. ನಮ್ಮ ಭವಿಷ್ಯ ಅವರ ಕೈಯಲ್ಲಿದೆ. ಕೆಲವರು ರೋಗ ಬರುವುದಿಲ್ಲವೆಂದು ಕುಡಿಯುತ್ತಾರೆ, ಕೆಲವರು ರೋಗ ಬರದಿದ್ದವರೂ ಕುಡಿಯುವುದಿಲ್ಲ, ಆದರೆ ಪ್ರಶ್ನೆ ಇದಲ್ಲ, ಕೆಲವರು ಆರೋಗ್ಯಕ್ಕೆ ಕುಡಿಯಬಹುದು. ಇನ್ನೊಬ್ಬನು ಇನ್ನೊಂದಕ್ಕೆ ಕುಡಿಯಬಹುದು, ಎಲ್ಲರ ಹತೋಟಿ ಎಲ್ಲ ಅರ್ಥ ವ್ಯವಸ್ಥೆಯ ಹತೋಟಿ ಇವರ ಮೇಲೆ ಇರುತ್ತದೆ. ಯಾವ ರೀತಿ ಇರುತ್ತದೆ ಅಂದರೆ ಪಾರ್ಲಿಮೆಂಟಿನ ಪ್ರತಿನಿಧಿಗಳು, ರಾಜ್ಯಸಭೆಯ ಪ್ರತಿನಿಧಿಗಳು, ವಿಧಾನ ಸಭೆಯಲ್ಲಿ ಪ್ರತಿನಿಧಿಗಳು ಬರುತ್ತಾರೆ, ಮಂತ್ರಿಮಂಡಲದಲ್ಲೂ ಬರುತ್ತಾರೆ, ಎಲ್ಲ ಚರ್ಚೆಗಳೂ ತೀರ್ಮಾನಗಳು ಇವರಿಗೆ ಗೊತ್ತಾಗುತ್ತದೆ. ಸರ್ಕಾರವನ್ನು ನಡೆಸತಕ್ಕ ಒಂದು ಶಕ್ತಿ ಇವರಲ್ಲಿರುತ್ತದೆ. ನಮಗೆ ಮತ್ತು ನಿಮಗೆ ನೈತಿಕ ಬಲ ಇರುವುದಾದರೆ ಯಾವ ಜನರು ನಮ್ಮನ್ನು ಇಲ್ಲಿಗೆ ಆರಿಸಿ ಕಳುಹಿಸಿಕೊಟ್ಟಿದ್ದಾರೆ, ಅವರ ಋಣ ತೀರಿಸಲು ನಾವು ಈ ಬಗ್ಗೆ

ಒಂದು ನೈಜವಾದಂಥ ತೀರ್ಮಾನ ಕೈಕೊಳ್ಳಬೇಕು. ಮಾನ್ಯ ಶ್ರೀನಿವಾಸ್ ಅವರು ಏನೊಂದು ನಿರ್ಣಯ ತಂದಿದ್ದಾರೆ, ಅದು ಸ್ವಾಗತಾರ್ಹ. ಪಾನ ನಿರ್ಮೂಲನಾ ಮಂಡಲಿಯನ್ನು ಈ ಸರ್ಕಾರ ರಚಿಸಬೇಕು, ಇಲ್ಲಿಯವರೆವಿಗೂ ಕುಡಿಸತಕ್ಕ ನೀತಿಯನ್ನು ಇವರು ಇಟ್ಟುಕೊಂಡು ಬಂದಿದ್ದಾರೆ. ಅದನ್ನು ಇವತ್ತೇ ಕೊನೆಮಾಡಬೇಕು. ಪಾನನಿರೋಧ ಮಾಡುವುದಕ್ಕೆ ಸಂಬಂಧಪಟ್ಟಂತೆ ನಿರ್ಧಾರ ಏನಾದರೂ ಇದ್ದರೆ ಅದಕ್ಕೆ ಸಂಬಂಧಪಟ್ಟಂತೆ ಪಾನನಿರೋಧ ಸಮಿತಿಯನ್ನಾಗಲೀ, ಹೈಪವರ್ ಸಮಿತಿಯನ್ನಾಗಲೀ ನೇಮಕ ಮಾಡಿ, ಅವರು ಏನು ಶಿಫಾರಸ್ಸು ಮಾಡುತ್ತಾರೆ, ಆದರ ಮೇಲೆ ನಿರ್ಣಯ ತೆಗೆದುಕೊಳ್ಳಿ. ಮಾನ್ಯ ಶ್ರೀನಿವಾಸ್ ತಂದಿರುವ ನಿರ್ಣಯಕ್ಕೆ ಮಾನ್ಯ ಜೆ.ಹೆಚ್. ಪಟೇಲರು ಉತ್ತರ ಕೊಡುವುದು ಅನಿವಾರ್ಯ. ನಾನು ಕೊಟ್ಟಿರುವ ಎರಡು ಸಲಹೆಗಳನ್ನು ಒಪ್ಪಿಕೊಂಡು ಉತ್ತರಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

**ಕೆ.ಹೆಚ್. ಪಾಟೀಲ್:** ಸನ್ಮಾನ್ಯ ಅಧ್ಯಕ್ಷರೇ, ಈ ಮಹತ್ವವಾದ ವಿಷಯದ ಮೇಲೆ ನಾವು ತೀಕ್ಷ್ಣವಾದ ಚರ್ಚೆ ಮಾಡುವುದು ಅವಶ್ಯ. ಈ ಬಗ್ಗೆ ವಿನೋದದಿಂದ ಲಘರಿಯಿಂದ ಮಾತನಾಡಿದರೆ ನಿರ್ಣಯದ ಹಿಂದಿನ ಉದ್ದೇಶ ಹಾಗೂ ಅದರ ಮಹತ್ವ ಕಡಿಮೆಯಾಗಬಹುದು ಎಂದು ಮಾನ್ಯ ಸದಸ್ಯರನ್ನು ಎಚ್ಚರಿಸಬಯಸುತ್ತೇನೆ.

ಹಿಂದೆ ಕಾಂಗ್ರೆಸ್ ಸರ್ಕಾರ ಇದ್ದಾಗ ಕೂಡ ಕುಡಿಯುವ ಹವ್ಯಾಸದಲ್ಲಿ ಅನೇಕ ಜನರು ಇದ್ದರು. ಸರ್ಕಾರವೂ ಕೂಡ ಕಂಟ್ರಾಕ್ಟರುಗಳ ಕೈವಶದಲ್ಲಿದ್ದು, ಆ ಸರ್ಕಾರದವರು ಅನೇಕ ರೀತಿಯ ವ್ಯಾಮೋಹಕ್ಕೆ ಬಿದ್ದು, ಅವನು ಹೇಳಿದ ಹಾಗೆ ಕೇಳುವವರಾಗಿದ್ದರು. ಈ ರೀತಿಯಲ್ಲಿರುವಾಗ ಅವರು ಆರೋಗ್ಯಕರವಾದ ಮದ್ಯ ಕೊಡಲಿಕ್ಕೆ ಹೇಗೆ ಸಾಧ್ಯ? ಅವನಿಗೆ ಹಣ ಎಲ್ಲಿಂದ ಬರಬೇಕು? ಒಂದು ಬಿಲ್ಲೆ ಖರ್ಚುಮಾಡಿ ಸಾವಿರಾರು ರೂಪಾಯಿ ತೆಗೆದುಕೊಳ್ಳುತ್ತಿದ್ದ. ಅಮೋನಿಯಮ್ ಕ್ಲೋರೈಡ್ ಹಾಕಿ, ನೀರು ಸುರಿದು, ಇದನ್ನೇ ಕುಡಿಯಿರಿ ಎಂದು ಕೊಡುತ್ತಿದ್ದ. ಇದು ಜಗಜ್ಜನಿತವಾಗಿ ಗೊತ್ತಿದ್ದರೂ ಸಹ ಸರ್ಕಾರ ಸುಮ್ಮನೆ ಇದೆ ಎಂದರೆ ಹೇಗೆ?

ಅದು ಯಾವ ಸರ್ಕಾರವೇ ಆಗಿರಲಿ, ಹಿಂದಿನ ಸರ್ಕಾರ ಇರಲಿ, ಈಗಿನ ಸರ್ಕಾರ ಇರಲಿ. ಇಂತಹ ಸರ್ಕಾರವನ್ನು ಭ್ರಷ್ಟ ಸರ್ಕಾರ ಎಂದು ಕರೆದರೆ ಏನು ತಪ್ಪಾಗುತ್ತದೆ? ದೇಶದ್ರೋಹಿ ಸರ್ಕಾರ ಎಂದು ಕರೆದರೆ ಏನು ತಪ್ಪಾಗುತ್ತದೆ? ಇದರಲ್ಲಿ ಜಾತಿಬೇಡ, ಪಕ್ಷಬೇಡ, ಮತ ಬೇಧ ಬೇಡ. ಈ ದೇಶದ ಒಳಿತಿನ ದೃಷ್ಟಿಯಿಂದ ವಿಚಾರ ಮಾಡಿದರೆ ನಾವೆಲ್ಲರೂ ತಪ್ಪುಗಾರರಾಗಿದ್ದೇವೆಂದು ನನಗೆ ಕಂಡುಬರುತ್ತದೆ. ಇವೊತ್ತು ಸಿಗರೇಟ್ ಪೆಟ್ಟಿಗೆಗಳನ್ನು ನಾವು ನೋಡುತ್ತೇವೆ. ಅದರಲ್ಲಿ ಅಡ್ವರ್‌ಟೈಸ್‌ಮೆಂಟ್ ಏನು ಇರುತ್ತದೆ, smoking is injuries to Health. Still it is sold.

ನೀವು ಎರಡು ಮೂರು ವರ್ಷಗಳ ಹಿಂದೆ ಅಧಿಕಾರಕ್ಕೆ ಬಂದಿರಿ ಎಂದೇ ಇಟ್ಟುಕೊಳ್ಳೋಣ. ಆದರೆ ಇದು ಒಂದೆರಡು ವರ್ಷದಿಂದ ಕಂಡು ಬಂದ ದುಸ್ಥಿತಿಯಲ್ಲ.

ಇದಕ್ಕೆ ಮುಂಚಿತವಾಗಿ ಅನೇಕ ಜನರು ಕುಡಿದು ಸತ್ತರು. ಆದರೆ ಅವರು ಕುಡಿದು ಸಾಯಲಿ ಎಂದು ಯಾರೂ ಆ ಒಂದು ಅಕ್ಷಮ್ಯ ಅಪರಾಧವನ್ನು ಮಾಡಲಿಲ್ಲ. ಇದನ್ನು ಯಾರಾದರೂ ಮಾಡಿದರೆ? ಇದು ಹೇಗಾಯಿತು ಎಂದರೆ ದಿನಷೂ ಕುಡಿದಂಥ ಮದ್ಯದಲ್ಲಿ ಅಥವಾ ಸೇಂದಿಯಲ್ಲಿ ಇದ್ದಂಥ ವಿಷ ಅಮಲಿಗಿಂತಲೂ ಅತಿಯಾಗಿ ಅವರು ಮರಣಕ್ಕೆ ಈಡಾದರು.

ಕುಡಿಯುವವರು ಕುಡಿಯಲಿ. ಅದಕ್ಕೆ ನನ್ನ ತಕರಾರು ಇಲ್ಲ. ಅದಕ್ಕೂ ಒಂದು ಮಿತಿ ಇರಬೇಕು. ಆದರೆ ಮುಂದೆ ಕುಡಿಯಲಾರದಂಥ ಜನರ ಬಗ್ಗೆ ನೀವು ಒಂದು ವ್ಯವಸ್ಥೆ ಮಾಡಬೇಕು. ಅವರು ಕುಡಿಯದಂತೆ ಮಾಡದಿದ್ದರೆ ಈ ಸರ್ಕಾರ ಇದ್ದು ತಾನೆ ಏನು ಪ್ರಯೋಜನ? ಮುಂದಿನ ಪೀಳಿಗೆಯ ಜನರ ಮಕ್ಕಳು, ಮೊಮ್ಮಕ್ಕಳು ಈ ದೇಶದ ಸ್ವತ್ತಾಗಬೇಕಾದರೆ, ಸತ್ಪ್ರಜೆಗಳಾಗಬೇಕಾದರೆ ಈ ಕುಡಿತವನ್ನು ನೀವು ಯಾವ ರೀತಿ ಪ್ರತಿಬಂಧಕ ಮಾಡುತ್ತೀರಿ? ತಂದೆಯಾದವನು ಮಗನ ಕೈಯಲ್ಲಿ ಬೀಡಿ ತಾ ಎಂದು ಕಾಸು ಕೊಟ್ಟು ಕಳಿಸಿದರೆ ಅವನೂ ಒಂದಿಲ್ಲೊಂದು ದಿನ ಬೀಡಿ ಸೇದುವುದನ್ನು ಕಲಿತೇ ಕಲಿಯುತ್ತಾನೆ. ಒಳ್ಳೆಯ ಸಜ್ಜನರು ಅನೇಕರಿದ್ದಾರೆ, ಅವರಲ್ಲಿ ಅಪ್ರಮಾಣಿಕತೆ ಎಂಬುದು ಇಲ್ಲ, ಅವರಲ್ಲಿ ಕೆಟ್ಟ ಚಾಳಿ ಯಾವುದೂ ಇಲ್ಲ ಎಂದರೂ ಕೂಡ ಈ ಒಂದು ಕುಡಿತದ ಚಟಕ್ಕೆ ಮಾರುಹೋಗಿ ಅವರ ಮನೆಯಲ್ಲಿರುವ ಮಕ್ಕಳು, ಮೊಮ್ಮಕ್ಕಳು, ಹೆಂಡತಿ ಅಂದರೆ ಇಡೀ ಸಂಸಾರವೇ ಅನೇಕ ರೀತಿಯ ಕಷ್ಟನಷ್ಟಗಳನ್ನು ಅನುಭವಿಸುತ್ತಿರತಕ್ಕ ಪರಿಸ್ಥಿತಿಯನ್ನು ನಾವು ಕಣ್ಣಾರೆ ನೋಡುತ್ತಿದ್ದೇವೆ.

ತಜ್ಞರ ಸಮಿತಿಯನ್ನು ನೇಮಿಸಿ. ಇದರಿಂದ ನಿಜವಾಗಿಯೂ ಕುಡುಕತನ ಬಂದ್ ಮಾಡಲಿಕ್ಕೆ ಸಾಧ್ಯವೇ, ಸಾಧ್ಯವಿಲ್ಲದಿದ್ದರೆ ಯಾವ ರೀತಿ ಕುಡುಕುತನವನ್ನು ನಮ್ಮ ದೇಶದಲ್ಲಿ ಅಂಕುಶದಲ್ಲಿ ಇಡಬಹುದು ಮತ್ತು ಹಂತಹಂತವಾಗಿ ಯಾವ ರೀತಿ ಹಿಂದಕ್ಕೆ ತೆಗೆದುಕೊಳ್ಳಬಹುದು ಎನ್ನುವುದನ್ನು ಕಂಡುಕೊಳ್ಳಬಹುದು. ನಾವು ಅನೇಕ ಭಾರಿ ಮಹಾತ್ಮ ಗಾಂಧೀಜಿಯವರ ಹೆಸರನ್ನು ಹೇಳುತ್ತೇವೆ. ಗಾಂಧಿ ಟೋಪಿ ಹಾಕುತ್ತೇವೆ, ಆದರೆ ಕನಸಿನಲ್ಲೂ ಅವರ ತತ್ವವನ್ನು ನಾವು ಪಾಲಿಸುವುದಿಲ್ಲ. ಪ್ರತಿ ದಿನ ಕುಡಿಯುತ್ತೇವೆ. ದೇಶದ ನಾಯಕ, ರಾಷ್ಟ್ರಪಿತ ಎಂದು ಮಹಾತ್ಮಗಾಂಧಿಯ ಕೊಲೆಯನ್ನು ಪ್ರತಿ ದಿನ ಮಾಡುತ್ತಿದ್ದೇವೆಂಬುದನ್ನು ಮರೆಯಬಾರದೆಂದು ಹೇಳುತ್ತೇನೆ. ಇದರಲ್ಲಿ ನಿಮ್ಮದು ತಪ್ಪು, ನಮ್ಮದು ತಪ್ಪು ಎಂದು ಹೇಳುತ್ತಿಲ್ಲ. ನಿಮಗಿಂತ ಹೆಚ್ಚು ನಮ್ಮ ತಪ್ಪು ಇದೆ. ನೀವು 5 ವರ್ಷದಿಂದ ರಾಜ್ಯಭಾರ ನಡೆಸುತ್ತಿದ್ದೀರಿ. ನಾವು 35-40 ವರ್ಷಗಳಿಂದ ಇದ್ದೇವೆ.

ಎಂ. ಮಲ್ಲಿಕಾರ್ಜುನ ಖರ್ಗೆ: ತಾವು ಹೇಳಿದ 5 ವರ್ಷ ಅಲ್ಲ. ಇದನ್ನು ಇಂಟ್ರಡ್ಯೂಸ್ ಮಾಡಿದವರು ಮಾನ್ಯ ಮುಖ್ಯಮಂತ್ರಿಗಳು, ಅವರಿಗೆ 35 ವರ್ಷ ಆಗಿದೆಯಲ್ಲ!

**ಕೆ.ಹೆಚ್. ಪಾಟೀಲ್:** ಜನತಾ ಪಕ್ಷ ಬಂದು 5 ವರ್ಷವಾಯಿತು. ಕಾಂಗ್ರೆಸ್ ಪಕ್ಷ 40 ವರ್ಷಗಳಿಂದ ಇದೆ. ನಾವು ಮಾಡಿದ ಪಾಪಕ್ಕೆ ಇಲ್ಲಿ ಬಂದು ಕುಳಿತಿದ್ದೇವೆ. ನೀವೂ ನಮ್ಮ ಹಾಗೆ ಮಾಡಿ ಇಲ್ಲಿಗೆ ಬರಬೇಡಿ. ನೀವಾದರೂ ಗಾಂಧಿತತ್ವವನ್ನು ಅನುಸರಿಸಿ ಎಂದು ಹೇಳಿ, ಅಧ್ಯಕ್ಷರಿಗೆ ವಂದಿಸಿ ನನ್ನ ಮಾತು [illegible]

**ಜೆ.ಹೆಚ್. ಪಟೇಲ್ (ಕೈಗಾರಿಕೆ ಹಾಗೂ ವಿದ್ಯುತ್ ಸಚಿವರು):** ಮಾನ್ಯ ಅಧ್ಯಕ್ಷರೇ, ಈ ನಿರ್ಣಯವನ್ನು ನಾನು ಒಂದು ಸಾರಿ ಓದುತ್ತೇನೆ. ಓದಿ ಅದರಲ್ಲಿ ಒಂದು ಸಣ್ಣ ತಿದ್ದುಪಡಿಯನ್ನು ಸೇರಿಸುತ್ತೇನೆ. ತಿದ್ದುಪಡಿಯನ್ನು ಅಂಗೀಕಾರ ಮಾಡುವಾಗ ನಿಯಮಾವಳಿ ಪ್ರಕಾರ ಹೋಗೋಣ. ಮಾನ್ಯ ಶ್ರೀನಿವಾಸ್ ಅವರ ಖಾಸಗಿ ನಿರ್ಣಯ ಹೀಗಿದೆ.

"ಮದ್ಯಪಾನಕ್ಕೆ ಸಂಬಂಧಿಸಿದಂತೆ ರಾಜ್ಯದಲ್ಲಿನ ಪ್ರಸ್ತುತ ನೀತಿ ಹಾಗೂ ವ್ಯವಸ್ಥೆ ಶ್ರೀಸಾಮಾನ್ಯರ ಹಾಗೂ ಬಡ ಜನರ ಹಿತಕ್ಕೆ ಪೂರಕವಾಗಿ ಪರಿಣಮಿಸಿರುವುದರಿಂದ ಈಗಾಗಲೇ ನಡೆದಿರುವ ದುರಂತಗಳು, ಅವುಗಳ ಬಗ್ಗೆ ನೇಮಿಸಲ್ಪಟ್ಟ ವಿಚಾರಣಾ ಆಯೋಗಗಳ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ರಾಜ್ಯಗಳಲ್ಲಿ ಇರುವ ನೀತಿ ಹಾಗೂ ವ್ಯವಸ್ಥೆಯನ್ನು ಅಧ್ಯಯನ ಮಾಡಿ ಪಾನನಿರೋಧವೂ ಸೇರಿದಂತೆ, ಬದಲಿ ನೀತಿ ಹಾಗೂ ವ್ಯವಸ್ಥೆಯ ಸಾಧ್ಯಾಸಾಧ್ಯತೆಯನ್ನು ಪರಿಶೀಲಿಸಿ ಸೂಕ್ತ ಶಿಫಾರಸ್ಸು ಮಾಡಲು ವಿಧಾನ ಮಂಡಲದ ಪ್ರತಿನಿಧಿಗಳನ್ನು ಒಳಗೊಂಡ ಒಂದು ಉನ್ನತಾಧಿಕಾರಿ ಸಮಿತಿಯನ್ನು ನೇಮಿಸಬೇಕೆಂದು ಈ ಸಭೆಯು ನಿರ್ಣಯಿಸುತ್ತದೆ."

ಈ ನಿರ್ಣಯದ ಅರ್ಥ ಮತ್ತು ಶಬ್ದ ಜೋಡಣೆಗಳನ್ನು ಎಲ್ಲಾ ದೃಷ್ಟಿಯಿಂದ ಅನುಮೋದಿಸುತ್ತಾ ಸರ್ಕಾರದ ವತಿಯಿಂದ ಬೆಂಬಲ ಕೊಡುತ್ತಾ ಒಂದು ಶಬ್ದವನ್ನು ಸೇರಿಸುತ್ತೇನೆ. 'ಮದ್ಯಪಾನಕ್ಕೆ ಸಂಬಂಧಿಸಿದಂತೆ ರಾಜ್ಯದಲ್ಲಿನ ಪ್ರಸ್ತುತ ನೀತಿ ಮತ್ತು ವ್ಯವಸ್ಥೆ' ಎಂದು ಇದೆ. ಅದರಲ್ಲಿ 'ರಾಜ್ಯದಲ್ಲಿನ' ರಾಷ್ಟ್ರದಲ್ಲಿರುವ ಪ್ರಸ್ತುತ ನೀತಿ ಮತ್ತು ವ್ಯವಸ್ಥೆ' ಎಂದು ಸೇರಿಸಬೇಕು.

**ಅಧ್ಯಕ್ಷರು:** ರಾಜ್ಯದಲ್ಲಿ ಮತ್ತು ರಾಷ್ಟ್ರದಲ್ಲಿ-ಎರಡರಲ್ಲೂ ಇರಲಿ.

**ಕೆ.ಹೆಚ್. ಶ್ರೀನಿವಾಸ್:** ರಾಷ್ಟ್ರದಲ್ಲಿ ಒಂದೊಂದು ಕಡೆ ಒಂದೊಂದು ರೀತಿಯ ವ್ಯವಸ್ಥೆ ಇದೆ. ಎಲ್ಲೆಲ್ಲಿ ಏನೇನಿದೆ ಎಂಬ ಪರಿಪೂರ್ಣ ಮಾಹಿತಿ ನಮ್ಮಲ್ಲಿ ಇಲ್ಲ. ಆದರೆ ನಾವು ಮಾಡುವಂತಹ ಶಿಫಾರಸ್ಸು ಇಡೀ ರಾಷ್ಟ್ರಕ್ಕೆ ಮಾದರಿಯಾಗಿ ಇರುವಂತಿದೆ. ನಮ್ಮ ರಾಜ್ಯದಲ್ಲಿ ಮಾಡಿ ಎಂದು ಹೇಳಿದರೆ ಏನೂ ಕಷ್ಟವಾಗುವುದಿಲ್ಲವೆಂಬುದನ್ನು ಒಪ್ಪುತ್ತೇನೆ. ಆ ದೃಷ್ಟಿಯಿಂದ ಅವತ್ತು ಮಾತನಾಡಿದಾಗ ಒಂದೇ ರಾಜ್ಯಕ್ಕೆ ಸೀಮಿತವಾಗಿ ಹೇಳಿದೆ, ನೀವು ರಾಷ್ಟ್ರವನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳಿದರೆ ಒಳ್ಳೆಯದೆಂದು ಹೇಳಿದ್ದೀರಿ.

ಈ ನಿರ್ಣಯದ ಚೌಕಟ್ಟಿನೊಳಗೆ ನಮ್ಮ ದೃಷ್ಟಿಯಿಂದ ಉದ್ದೇಶ ಸೀಮಿತ ಪ್ರದೇಶಕ್ಕೆ ಅಲ್ಲ. ಇದು ಇಡೀ ರಾಷ್ಟ್ರದ ಜನರ ಹಿತದೃಷ್ಟಿಯಿಂದ ಒಳ್ಳೆಯದು. ಅಲ್ಲಲ್ಲಿ ಒಂದೊಂದು ವ್ಯವಸ್ಥೆ ಇರಬಹುದು.

**ಜೆ.ಹೆಚ್. ಪಟೇಲ್:** ಸರ್ಕಾರದ ವತಿಯಿಂದ ಈ ಅಭಿಪ್ರಾಯವನ್ನು ನಾನು ಸ್ಪಷ್ಟಪಡಿಸುತ್ತಿದ್ದೇನೆ. ಈ ನಿರ್ಣಯದ ಹಿನ್ನೆಲೆಯಲ್ಲಿ ಇರತಕ್ಕ ಉದ್ದೇಶ ಏನಿದೆ ಅದರ ಬಗ್ಗೆ ಸರ್ಕಾರಕ್ಕೆ ಯಾವುದೇ ಭಿನ್ನಾಭಿಪ್ರಾಯ ಇಲ್ಲ. ಇಲ್ಲಿ ಈ ನಿರ್ಣಯವನ್ನು ಇಡೀ ಸಭೆ

ಅವಿರೋಧವಾಗಿ ಕಳುಹಿಸಿಕೊಡಬೇಕಾಗಿದೆ. ಏಕೆಂದರೆ ಈ ವಿಚಾರದಲ್ಲಿ ಆಲೋಚನೆ ಮಾಡತಕ್ಕ ಪರಿಸ್ಥಿತಿ ಬಹಳ ತೀವ್ರವಾಗಿದೆ.

ನಮ್ಮ ರಾಜ್ಯ ಮತ್ತು ನಮ್ಮ ರಾಷ್ಟ್ರ ಮಾತ್ರವಲ್ಲ ಇವತ್ತು ಪ್ರಪಂಚದಲ್ಲಿರತಕ್ಕ ಎಲ್ಲಾ ಮಾನವಹಿತವಾದಿಗಳು, ಸರ್ಕಾರ ನಡೆಸತಕ್ಕ ಜವಾಬ್ದಾರಿ ಜನರಲ್ಲಿ ಈ ಮಾದಕವಸ್ತುಗಳ ಬಗ್ಗೆ ಇಡೀ ಜಗತ್ತಿನಲ್ಲಿ ಚರ್ಚೆ ನಡೆಯುತ್ತಿದೆ. ಕೆಲವೊಂದು ರಾಷ್ಟ್ರಗಳಲ್ಲಿ ಕೈಗೊಂಡಿರತಕ್ಕ ಕ್ರಮಗಳು ಏನು ಎಂಬುದನ್ನು ನೋಡಿದ್ದೇನೆ.

ನಾನು ಒಂದು ಸಾರಿ ಇಂಗ್ಲೆಂಡಿನ ಯಾವುದೋ ಬಾರಿಗೆ ಹೋದಾಗ 18 ವರ್ಷದೊಳಗೆ ಇರುವವರನ್ನು ಅಲೋ ಮಾಡುವುದಿಲ್ಲ; 9 ಗಂಟೆ ಮೇಲೆ ಆಲೋ ಮಾಡುವುದಿಲ್ಲ ಎಂದು ಹೇಳಿದರು. ಅಂದರೆ ಸಂಪೂರ್ಣವಾಗಿ ಪಾನನಿರೋಧವನ್ನು ಕಾನೂನಾಗಿ ಮಾಡಿರತಕ್ಕ ಸರ್ಕಾರವನ್ನಾಗಲೀ ವ್ಯವಸ್ಥೆಯಾಗಲೀ ನಾನೆಲ್ಲೂ ನೋಡಿಲ್ಲ. ಎಲ್ಲೂ ಇಲ್ಲವೂ ಇಲ್ಲ. ಇದಕ್ಕೆ ಕಾರಣ ಏನು? ಕಾರಣ ಏನೆಂದರೆ ಬಹುಶಃ ಮನುಷ್ಯನ ಗುಣದಲ್ಲಿ ಅದಮ್ಯವಾಗಿ ಬಂದಿರತಕ್ಕ ಗುಣ ಇದೆ. ಅದೇನು? ಮಾದಕವಸ್ತುಗಳ ಬಗ್ಗೆ ಅವನಿಗೆ ಬರತಕ್ಕ ಅಪೇಕ್ಷೆ.

ಬರ್ಟನ್ಡ್ ರಸೆಲ್ ಅವರು ಪ್ಲೆಷರ್ ಅಂಡ್ ವೈನ್ಸ್ ಎಂಬ ಅವರ ವಿಶ್ಲೇಷಣೆಯಲ್ಲಿ ಮನುಷ್ಯ ಖುಷಿಯನ್ನು ಹುಡುಕುತ್ತಾ ಹುಡುಕುತ್ತಾ ತಾನು ಮೊದಲು ಆಹಾರ ಹುಡುಕಿದ; ನುತ್ತೆ ಕೆಲವು ಗಿಡಮೂಲಿಕೆಗಳನ್ನು ಹುಡುಕಿದ, ಅದನ್ನು ಹುಡುಕುತ್ತಾ ತಿನ್ನುತ್ತಾ ಹೋದಾಗ ಎಲ್ಲೋ ಒಂದು ಕಡೆ ಮಾದಕವಸ್ತುವಿನಿಂದ ಸುಖವನ್ನು ಪಡೆಯುವ ಅನ್ವೇಷಣೆ ಏನಿದೆ ಆ urge for pleasure ಏನಿದೆ ಆ ಅರ್ಜ್‌ನಲ್ಲಿ ಲಿಕ್ಕರ್ ಕಂಡುಹಿಡಿದ ಎಂದು ಹೇಳಿದ್ದಾರೆ. ಅದರಲ್ಲಿ ನ್ಯಾಚುರಲ್ಲಾಗಿ ಬರತಕ್ಕ ಮಾದಕವಸ್ತುಗಳಿವೆ. ಉದಾಹರಣೆಗೆ ಹೆಂಡ. ಡಿಸ್ಟಿಲ್ ಮಾಡಿರತಕ್ಕ ಮಾದಕ ವಸ್ತುಗಳೂ ಇವೆ. ಇದು ಮ್ಯಾನ್ ಮೇಡ್. ಆದರೆ ಪ್ರಕೃತಿಯಲ್ಲಿ ಮಾದಕ ವಸ್ತುಗಳ ಅಂಶವನ್ನು ರುಚಿಸಿದ ಮನುಷ್ಯ. ಅದರ ಆಸ್ವಾದನೆ ಮಾಡುತ್ತಾ ಬಂದ.

ನಾನು ಇತಿಹಾಸಕ್ಕೆ ಹೋಗುವುದಿಲ್ಲ. ಆದರೆ ಬರ್ಟನ್ಡ್‌ರಸೆಲ್ ಮಾಡಿರುವ ವ್ಯಾಖ್ಯಾನದ ಸ್ವಲ್ಪ ಭಾಗವನ್ನು ಮಾತ್ರ ಹೇಳುತ್ತೇನೆ. ಮನುಷ್ಯ ಮೂಲತಃ ಪ್ರಾಣಿ. ಆ ಪ್ರಾಣಿ ಸಂಘಜೀವಿ ಆಗುವುದಕ್ಕಿಂತ ಮುಂಚೆ ಏಕಾಂಗಿಯಾಗಿರುತ್ತಿದ್ದ. ಗಿಡಗಳ ಮೇಲೆ ಪೊಟರೆಗಳ ಮೇಲೆ ಇರುತ್ತಿದ್ದ. ಹಾಗಿರುತ್ತಿದ್ದವನು ಸಂಘಜೀವಿ ಆದಮೇಲೆ ಮನುಷ್ಯನೇ ತನ್ನ ಸಂಘವನ್ನು ಎಷ್ಟು ಕಠೋರವಾಗಿ ಕಂಟ್ರೋಲ್ ಮಾಡುತ್ತಿದ್ದ ಅಂಡರ್ ಲಿಬರ್ಟಿ ಇರಲಿಲ್ಲ. ನಾವೆಲ್ಲಾ ಓದಿದಂತೆ ಮೈಟ್ ವಾಸ್ ರೈಟ್ ಎಂಬ ಕಾಲ ಇತ್ತು. ಆ ಕಾಲದಲ್ಲಿ ಲಿಬರಾಲಿಟಿ ಅಥವಾ ಲಿಬರಾಲಿಸಂ ಅಥವಾ ಕಾನ್‌ಸೆಪ್ ಆಫ್ ಲಿಬರ್ಟಿ ಇವು ಬರುವ ಹೊತ್ತಿಗೆ ಮನುಷ್ಯ ಸಾವಿರಾರು ವರ್ಷ ಬೆಳೆದ ಮೇಲೆ ಲಿಕ್ಕರ್ ಪ್ರಾರಂಭ ಆಗಿದ್ದಕ್ಕೂ ಕಾನ್‌ಸೆಪ್ಟ್ ಆಫ್ ಲಿಬರ್ಟಿ ಡೆವಲಪ್ ಆಗಿದ್ದಕ್ಕೂ ಒಂದು ಸ್ಟ್ರೇಂಜ್ ಕೋ-ಇನ್‌ಸಿಡೆನ್ಸ್ ಇದೆ ಎಂದು ಬರ್ಟನ್ಡ್ ರಸೆಲ್ ಅವರ ಅನಿಸಿಕೆ. ಅದನ್ನು ಇಲ್ಲಿ ಹೇಳುತ್ತಿದ್ದೇನೆ. The emergence of liquor and the concept of liberty revolving on human society is a very strange coincidence.

ಲಿಕ್ಕರ್ ದುಷ್ಪರಿಣಾಮದ ಬಗ್ಗೆ ಅತ್ಯಂತ ತೀವ್ರವಾಗಿ ಮಾನ್ಯ ಸದಸ್ಯರುಗಳು ಹೇಳಿದ್ದಾರೆ. ಅದೇ ರೀತಿ ಹಲವಾರು ಇತಿಹಾಸಕಾರರು, ಸಮಾಜ ಸುಧಾರಕರು ಅದನ್ನು ನೋಡುವಾಗ ಎರಡು ದೃಷ್ಟಿಯಿಂದ ನೋಡುತ್ತಾರೆ. ಅಮಲು ಏರತಕ್ಕ ಪೇಯಗಳನ್ನು ಮದ್ಯಪಾನವನ್ನು ನೋಡುವಾಗ ವೈಜ್ಞಾನಿಕವಾಗಿ ನೋಡುತ್ತಾರೆ, ಅದು ಇತಿಹಾಸದ ದೃಷ್ಟಿಯಿಂದ. ಧಾರ್ಮಿಕವಾಗಿ ನೋಡುತ್ತಾರೆ, ಕೆಲವು ಧರ್ಮಗಳ ಉಪದೇಶದ ದೃಷ್ಟಿಯಿಂದ. ಉಪದೇಶ ಮಾಡಿರತಕ್ಕ ಧರ್ಮಗಳು ಯಾವುವು? ಅದು ಹಿಂದೂಯಿಸಂ, ಕ್ರಿಶ್ಚಿಯಾನಿಸಂ, ಇಸ್ಲಾಂ, ಬುದ್ದಿಸಂ, ಯಾವುದೇ ಇರಲಿ ಅದಕ್ಕಿಂತ ಮುಂಚೆ ಇದ್ದಂಥ ಧರ್ಮಗಳು ಏನಿದ್ದವು ಆ ಧರ್ಮಗಳ ಬಗ್ಗೆ ವ್ಯಾಖ್ಯಾನ ಮಾಡುತ್ತಾ ಮಾರ್ಕಿಸ್ಟ್ ಒಬ್ಬರು ಏನು ಹೇಳುತ್ತಾರೆಂದರೆ ಧರ್ಮವೂ ಸಹ ಅದೇ ಒಂದು ತರಹ ಮದ್ಯವನ್ನು ಕೊಡತಕ್ಕ ವಿಚಾರ ಎಂದಿದ್ದಾರೆ. ಅದು ಒಂದು ಕಾನ್‌ಸೆಪ್ಟ್. ಮದ್ಯದಿಂದಲೂ ಮನುಷ್ಯ ಮತ್ತಾಗಬಲ್ಲ. ಮದ್ಯದಿಂದ ಮತ್ತಾಗಿ ಮಾಡಿರತಕ್ಕ ಕೊಲೆಗಳನ್ನು ಮಾರಕರಿಂದ ಮತ್ತಾಗಿ ಮನುಷ್ಯ ಮಾಡಿಲ್ಲ. Religions has become more intoxicised and more disasters. ಮಾವೊತ್ಸ್ ತುಂಗ್ ತನ್ನ ರಾಷ್ಟ್ರವನ್ನು ಕಟ್ಟಿದಾಗ ಎಷ್ಟೆಲ್ಲಾ ಚರ್ಚ್‌ಗಳನ್ನು ಬಂದ್ ಮಾಡಿಸಿದ. ಬುದ್ಧರ ದೇವಾಲಯಗಳನ್ನು ಬಂದ್ ಮಾಡಿಸಿದ. ಓಪಿಯಂ ಏತಕ್ಕೆ ಬಂದ್ ಮಾಡಿಸಲಿಲ್ಲ ಎಂದು ಕೇಳಿದರೆ?

ಮಾವೊತ್ಸ್ ತುಂಗ್ ಹೇಳುತ್ತಾರೆ, ಮನುಷ್ಯನಿಗೆ ಅದಮ್ಯವಾದ ಆಸೆಗಳು ಇರುತ್ತವೆ, ಆಕಾಂಕ್ಷೆಗಳು ಇರುತ್ತವೆ ಮತ್ತು ಅಪೇಕ್ಷೆಗಳು ಇರುತ್ತವೆ. ಅವನು ಧರ್ಮವನ್ನು ಒಂದು ಕಡೆ ಇಟ್ಟುಕೊಂಡಿದ್ದಾನೆ. ಓಪಿಯಂ ಅನ್ನು ಒಂದು ಕಡೆ ಇಟ್ಟುಕೊಂಡಿದ್ದಾನೆ. ಈಗ ಧರ್ಮವನ್ನು ತೆಗೆದಿದ್ದೇನೆ. ಅದರ ಜೊತೆಯಲ್ಲಿ ಓಪಿಯಂ ಅನ್ನೂ ಎಲ್ಲಿಯಾದರೂ ತೆಗೆದರೆ ಆಗ ಈ ಸಮಾಜವನ್ನು ಉಳಿಸುವುದಕ್ಕಾಗುವುದಿಲ್ಲ. ಎಲ್ಲಿಯವರೆಗೆ ಅವರು ಧರ್ಮವನ್ನು ಬಿಟ್ಟು ನಿರೀಶ್ವರವಾದವನ್ನು ಸ್ವಾಭಾವಿಕವಾಗಿ ಒಪ್ಪಿಕೊಳ್ಳುತ್ತಾರೋ ಅಲ್ಲಿಯವರೆಗೆ ಈ ಕನ್ಸೆಷನ್ ಅನ್ನು ಕೊಡಬೇಕಾಗುತ್ತದೆ. ಅದಕ್ಕಾಗಿಯೇ ಓಪಿಯಂ ಅನ್ನು ಇಟ್ಟಿರುತ್ತೇನೆಂದು ಹೇಳುತ್ತಾನೆ. ಇದು ಮಾವೊತ್ಸ್ ತುಂಗ್‌ನ ಅನುಭವ. I abolish religion and at the same time, I cannot abolish Opium but let it be a sustaining power for society. Otherwise the society will break.

ರಷ್ಯಾದಲ್ಲಿ ಲೆನಿನ್‌ನ ಸರ್ಕಾರ ಬಂದ ತಕ್ಷಣ ಮೊದಲು ಮಾಡಿದ್ದು ಏನೆಂದರೆ, ಮೂಲಭೂತವಾಗಿರತಕ್ಕ ಮಾದಕದ ಬಗ್ಗೆ ಮನುಷ್ಯನಿಗೆ ಇರುವ ಅಪೇಕ್ಷೆ ಏನು ಇದೆ, ಆ ಅಪೇಕ್ಷೆಗಳನ್ನು ಚಿವುಟಿ ಹಾಕುವುದಕ್ಕೆ ಸಾಧ್ಯವಿಲ್ಲ. ಆದರೆ ಅವನ ಅಪೇಕ್ಷೆ ಜೊತೆ ಜೊತೆಗೆ ಅವನ ಇತಿಮಿತಿಗೆ ಹಾಗೂ ಅವನ ಆರೋಗ್ಯದ ದೃಷ್ಟಿಯಿಂದ ಅಧಿಕ ಮಾದಕ ಅಂಶ ತೆಗಯುವುದಕ್ಕೆ ಪ್ರಯತ್ನ ಮಾಡುತ್ತಾರೆ. ಕಮ್ಯುನಿಸ್ಟ್ ಪಾರ್ಟಿ ಸರ್ಕಾರ ಬಂದ ಮೇಲೆ ಅವರು ಮೊದಲು ಮಾಡಿದ್ದು ಏನೆಂದರೆ, ಎಲ್ಲಾ ಡಿಸ್ಟಲರೀಸ್‌ಗಳನ್ನು ಎಲ್ಲಾ ಪೇಯಗಳನ್ನು ಸರ್ಕಾರವೇ ಇಟ್ಟುಕೊಂಡು ಬಹಳ ಕಡಿಮೆ ಆಲ್ಕೋಹಾಲ್ ಇರತಕ್ಕ ಡ್ರಿಂಕ್ಸ್‌ಗಳನ್ನು ಮೊದಲು ಜನರಿಗೆ ಸಪ್ಲೈ ಮಾಡುತ್ತಾರೆ. ಈ ರೀತಿ ಸಪ್ಲೈ ಮಾಡುತ್ತಾ ಮಾಡುತ್ತಾ It is an irony. ಲಿಬರಾಲಿಸಂ

ಅಲ್ಲೂ ಜಾಸ್ತಿಯಾಗುತ್ತಾ ಆಲ್ಕೋಹಾಲ್ ಕನ್‌ಸಂಪಷನ್ ಕೂಡ ಜಾಸ್ತಿಯಾಗುತ್ತದೆ. ಇದಕ್ಕೆ ಯಾರು ಕಾರಣರು ಎಂದು ನಾನು ಹೇಳುವುದಕ್ಕೆ ಹೋಗುವುದಿಲ್ಲ. ಹೇಳುವುದಕ್ಕೆ ಸಾಧ್ಯವೂ ಇಲ್ಲ, ಆದರೆ ಜನರನ್ನು ನಾನು ಹೀಗೇ ಹಿಡಿದಿಟ್ಟಿರುತ್ತೇನೆಂಬ ಧಾರ್ಮಿಕ ಗೊಡ್ಡುತನ ಏನು ಇರುತ್ತದೆ, ಅದು ಸರಿಯಲ್ಲ. ನಾನು ಹೀಗೆಯೇ ಮಾಡುತ್ತೇನೆಂದು ಹೇಳುವುದೂ ಸರಿಯಲ್ಲ.

ಮಾದಕ ವಸ್ತುಗಳನ್ನು ನೋಡಿದಾಗ ಈ ಎರಡನ್ನು ನೋಡಬೇಕಾಗುತ್ತದೆ. ವ್ಯಕ್ತಿ ಕುಟುಂಬ, ಅವನು ಇರುವ ಸಮಾಜ ಮತ್ತು ಅವನು ರಚಿಸಿಕೊಂಡಿರತಕ್ಕ ಸರ್ಕಾರ. ಎರಡನೆಯ ವಿಧಾನ ಸರ್ಕಾರದ ಬಿಗಿ ಹಿಡಿತ. ಸರ್ಕಾರದ ವತಿಯಿಂದ ಅವನನ್ನು ಸರಿಪಡಿಸುವುದಕ್ಕೆ ಪ್ರಯತ್ನವೂ ಉಂಟು. ಮಹಾತ್ಮಗಾಂಧೀಜಿಯವರು ಹೇಳಿದರು. ಈ ಮಾದಕ ವಸ್ತು ನಿಯಂತ್ರಣ ಸರ್ಕಾರದ ಕಡೆಯಿಂದ ಸಾಧ್ಯವಾಗುತ್ತದೆಂಬ ವಿಚಾರವನ್ನು ಹೇಳಿದರು. ಪ್ರೊಹಿಬಿಷನ್ ಬಗ್ಗೆ ಹೇಳಿದರು. ಬಹಳ ಕಂಠೋಕ್ತವಾಗಿ ಹೇಳಿದರು. ಅದನ್ನು ಯಾರು ಒಪ್ಪಿಕೊಂಡರೋ ಬಿಟ್ಟರೋ ಅದು ಪ್ರತ್ಯೇಕ ವಿಷಯ. ಗಾಧೀಜಿ ವೈಯಕ್ತಿಕವಾಗಿ ಅವರು ನಡೆಸಿಕೊಟ್ಟರು. ಆದರೆ ಕಾನೂನು ಸಫಲವಾಗಲಿಲ್ಲ.

ಪಂಡಿತ್ ಜವಾಹರ್‌ಲಾಲ್ ನೆಹರೂರವರು ಅದರ ಬಗ್ಗೆ ವಾದ ಮಾಡಿದರು. ಲಿಬರ್ಟಿ ಬಗ್ಗೆ ಮತ್ತು ಲಿಬ್ರಾಲಿಸಂ ಬಗ್ಗೆ, ಈಕ್ವಾಲಿಟಿ ಬಗ್ಗೆ ಹಾಗೂ ಮನುಷ್ಯನ ಆಸ್ಪಿರೇಷನ್ ಬಗ್ಗೆ ನೆಹರೂರವರು ಮತ್ತು ಗಾಂಧೀಜಿ ನಡುವೆ ವಾದ ನಡೆಯಿತು. Nehru was taking alcohol, may be in a mild form ಆದ್ದರಿಂದ ಇಲ್ಲಿ ನಾವು ಒಂದು ರಿಜಿಡ್ ಆರ್ಥೋಡಾಕ್ಸ್ ನಿಲುವನ್ನು ತೆಗೆದುಕೊಳ್ಳುವುದಾಗುವುದಿಲ್ಲ. ಇದರ ಬಗ್ಗೆ ಏನು ಮಾಡಬೇಕು ಎನ್ನುವುದು ಮುಖ್ಯ ಹಾಗೂ ಜನರನ್ನು ಹೇಗೆ ಇವತ್ತು ನಿಯಂತ್ರಣ ಮಾಡುವುದು? ಇದು ಮುಖ್ಯ. It is not prohibition that is a problem before us. It is the temperance. How do we make people temperate to sustain alcohol, that is important. You cannot prohibit. No Government has been successful in the world through prohibition.

ಆದ್ದರಿಂದ ಇವತ್ತು ಇದನ್ನು ವೈಜ್ಞಾನಿಕ ದೃಷ್ಟಿಯಿಂದ ನೋಡೋಣ, ಧಾರ್ಮಿಕ ದೃಷ್ಟಿ ಬಿಡೋಣ. ಕೆಲವು ಜಾತಿಗಳು, ಕುಡಿಯುವ ಜಾತಿಗಳು ಇನ್ನು ಕೆಲವು, ಕುಡಿಯದೇ ಇರುವ ಜಾತಿಗಳು. ಈ ರೀತಿ ಮಾಡಿಕೊಂಡು ಆದಿ ಕಾಲದಿಂದಲೂ ನಾವು ಬಂದಿದ್ದೇವೆ. ಬಹಳ ದೊಡ್ಡವರು ಕುಡಿಯುವಾಗ ಒಂದು ತರಹದ ಧರ್ಮ. ಬೇರೆಯವರು ಕುಡಿಯುವಾಗ ಇನ್ನೊಂದು ತರಹದ ಧರ್ಮ. ಈ ಧರ್ಮ ಮಾದಕ ವಸ್ತುಗಳಿಗೆ ಅಥವಾ ಮದ್ಯಪಾನಕ್ಕೆ ರಿಯಾಯತಿಕೊಟ್ಟಿವೆ. ಶ್ಲೋಕಗಳ ಮೂಲಕ ಸಂಸ್ಕೃತದ ಮೂಲಕ, ಬಹಳ ಚೆನ್ನಾಗಿ ಅಡ್ಜೆಸ್ಟ್ ಮಾಡಿಕೊಂಡು ಬಂದಿದ್ದೇವೆ. ಅದರ ಘನತೆ ಗಾಂಭೀರ್ಯವನ್ನು ಉಳಿಸಿಕೊಂಡು ಬಂದಿದ್ದೇವೆ. ಇದು ವಾಸ್ತವಿಕ ಸಮಾಜ. ಇಲ್ಲಿ ನಾವು ಅದನ್ನು ಹೇಳುವುದೇ ಒಂದು. ಇದನ್ನು ಗೊಡ್ಡು ದೃಷ್ಟಿಯಿಂದ ನೋಡುವುದು ಬೇಡ.

ಮಾನ್ಯ ಶ್ರೀ ಕೆ.ಎಚ್. ಶ್ರೀನಿವಾಸ್‌ರವರು ಈ ಒಂದು ನಿರ್ಣಯವನ್ನು ತಂದಾಗ ನಾನು ಇದನ್ನೇ ಹೇಳಿದ್ದೇನೆ, ಏಷ್ಯಾದಲ್ಲಿ ಓಡ್ಕಾ ಕಡಿಮೆ ಮಾಡಿದರೆ...

ಕೆ.ಎಚ್. ಪಾಟೀಲ್: ಮಾನ್ಯ ಅಧ್ಯಕ್ಷರೇ, ಈಗ ಆಡುತ್ತಿರುವ ಮಾತು ಶ್ರೀ ಜೆ.ಎಚ್. ಪಟೇಲ್‌ರವರ ಭಾಷಣವೋ ಅಥವಾ ಕರ್ನಾಟಕ ರಾಜ್ಯ ಸರ್ಕಾರದ ನೀತಿಯೋ?

ಜೆ.ಎಚ್. ಪಟೇಲ್: ಸರ್ಕಾರದ ಪರವಾಗಿ ಮಾತನಾಡುತ್ತಿದ್ದೇನೆ. ಈ ಸರ್ಕಾರ ಆ ನೀತಿಗೆ ವಿರುದ್ಧವಾಗಿ ಯಾವುದನ್ನೂ ಆಲೋಚನೆ ಮಾಡಿಲ್ಲ. ನಾನು ಈ ಎಲ್ಲ ವಿಷಯಗಳನ್ನು ಏಕೆ ತರುತ್ತಿದ್ದೇನೆಂದರೆ ರಷ್ಯಾದಲ್ಲಿ ಓಡ್ಕಾ ವೀಕ್ಲಿ ಕ್ವಾಂಟಿಟಿ ಏನು ಇದೆ ಅದನ್ನು ಕಂಟ್ರೋಲ್ ಮಾಡಿದ್ದಾರೆ. ಇದೇ ರೀತಿ ನಮ್ಮಲ್ಲಿಯೂ ಏಕೆ ಈ ಮಾದಕ ಅಂಶದ ಪ್ರಮಾಣ ಕಡಿಮೆ ಮಾಡಬಾರದು? ಈ ದೃಷ್ಟಿಯೂ ಮುಖ್ಯ. ಚೈನಾದಲ್ಲಿ most of the houses ಯಾವುದೇ ಮನೆಗೆ ನೀವು ಹೋಗಿ, ಕಾರ್ಮಿಕನ ಮನೆಗೆ ಹೋದರೂ ಆತನ ಮನೆಯಲ್ಲಿ ಹೆಚ್ಚು ಮತ್ತು ಏರದೆ ಇರತಕ್ಕಂತಹ ವೈನ್, ಬೀರ್ ಇಂತಹವುಗಳು ಇರುತ್ತವೆ. ಆದರೆ ಹೆಚ್ಚು ಮಾದಕವಾಗಿರತಕ್ಕ ಆರೋಗ್ಯ ಕೆಡತಕ್ಕ ಪಾನೀಯಗಳನ್ನು ಅಲ್ಲಿ ಏಕೆ ಮಾಡುವುದಿಲ್ಲ ಎಂದರೆ ಅಲ್ಲಿರತಕ್ಕ ಅವರ ಆರ್ಥಿಕ ವ್ಯವಸ್ಥೆ, ಅಲ್ಲಿರತಕ್ಕ ಜಾತೀಯ ವ್ಯವಸ್ಥೆ, ಅವರಲ್ಲಿರತಕ್ಕ ಸಾಮಾಜಿಕ ವ್ಯವಸ್ಥೆಯನ್ನು, ಅವರು ತಾವಾಗಿಯೇ ರಚಿಸಿ ಕೊಂಡಿದ್ದಾರೆ.

ಒಂದು ಉದಾಹರಣೆ ಕೊಡುತ್ತೇನೆ. ನಾವು ಇಲ್ಲಿ ಇವತ್ತು ಬಡವರು, ಬಡವರು, ಬಡವರು ಎಂದು ಮಾತನಾಡುತ್ತೇವೆ. ಈಗ ಬಡವರು ಮದ್ಯಪಾನ ನಿಲ್ಲಿಸಿದ ತಕ್ಷಣವೇ ಅವರ ಬಡತನ ಹೋಗುತ್ತದೆಂದು ಯಾರಿಗಾದರೂ ಭ್ರಮೆ ಇದ್ದರೆ ಅದು ತಪ್ಪು. ಕುಡಿತಕ್ಕೂ ಬಡತನಕ್ಕೂ ಆರ್ಥಿಕ ಸಂಬಂಧ ಇಲ್ಲ. ಆದರೆ ಒಂದು ಹೇಳುತ್ತೇನೆ. ಬಡವನ ದುಡಿಮೆಯ ಶಕ್ತಿಯನ್ನು ಮತ್ತು ಬಡ ಸಮಾಜಗಳ ಉತ್ಪಾದನಾ ಶಕ್ತಿಯನ್ನು ಧ್ವಂಸ ಮಾಡತಕ್ಕ ಶಕ್ತಿ ಇದಕ್ಕೆ ಇದೆ. ಈ ಶೋಷಣೆಯ ವ್ಯಕ್ತಿಯನ್ನು ನಿಯಂತ್ರಣದಲ್ಲಿಡೋಣ. ಈ ವಲಯವನ್ನು ಮೊದಲು ಸರಿಪಡಿಸೋಣ.

ಬಿ. ಬಸವಲಿಂಗಪ್ಪ: ನಿಮ್ಮ ಭಾಷಣಕ್ಕೆ ಸ್ಫೂರ್ತಿ ಕೊಡಲು ಒಂದು ವಿಷಯವನ್ನು ಹೇಳುತ್ತೇನೆ.

ಅಧ್ಯಕ್ಷರು: ತಾವು ಕುಳಿತುಕೊಳ್ಳಿ.

ರಾಮಕೃಷ್ಣ ಹೆಗಡೆ (ಮುಖ್ಯಮಂತ್ರಿ): ಮಾನ್ಯ ಪಟೇಲರು ಬಹಳ ಸ್ವಾರಸ್ಯಕವಾಗಿ ಮಾತನಾಡುತ್ತಿದ್ದಾರೆ. ಮಾನ್ಯ ಬಸವಲಿಂಗಪ್ಪನವರೇ ತಡಿಯಿರಿ. ಪಟೇಲರು ಏನು ಹೇಳುತ್ತೀರೋ ಪೂರ್ಣವಾಗಿ ಕೇಳೋಣ. ಮಧ್ಯೆ ಪ್ರವೇಶಿಸುವುದು ಬೇಡ.

ಜೆ.ಹೆಚ್. ಪಟೇಲ್: ಈ ಕುಡಿತದ ವಿಷಯಕ್ಕೆ ಬಂದಾಗ ಒಂದು ಕಡೆ ಅತ್ಯಂತ ಪ್ರಾಮಾಣಿಕರು ಇದ್ದಾರೆ. ಗಾಂಧೀಜಿಯಂತಹವರು. ನಾನು ಅವರನ್ನೇ ಉದಾಹರಿಸುವುದು.

ಏಕೆಂದರೆ ಆತ್ಮಶುದ್ಧಿ ವಿಷಯದಲ್ಲಿ ಮಾತನಾಡುವಾಗ ಪ್ರಾಮಾಣಿಕವಾಗಿ ತನ್ನ ವೈಯಕ್ತಿಕ ಉಳಿವಿಗಾಗಿ ಅಲ್ಲ, ತನ್ನ ಒಂದು ಕುಟುಂಬದ ಉಳಿವಿಗಾಗಿ ಅಲ್ಲ, ಇಡೀ ಸಮಾಜದ ರಾಷ್ಟದ ಉಳಿವಿಗಾಗಿ ಆಲೋಚನೆ ಮಾಡಿದವರು ಮಹಾತ್ಮ ಗಾಂಧೀಜಿಯವರು.

ಇವೊತ್ತು ಕುಡಿಯದೇ ಇರುವವರೆಲ್ಲಾ ಗಾಂಧಿಗಳೆಂದು ನಾನು ಭಾವಿಸುವುದಿಲ್ಲ. ಇಂತಹವರೆಲ್ಲಾ ಮಾನವತಾವಾದಿಗಳಲ್ಲ.

ಏಕೆ? ಇದೇ 20ನೇ ಶತಮಾನದಲ್ಲಿ ಮಾನವಕೋಟಿಯು ಮೇಲೆ ಅತ್ಯಂತ ಅಮಾನುಷವಾದ ಆಕ್ರಮಣ ನಡೆಸಿ ಲಕ್ಷಾಂತರ ಜನರನ್ನು ಗ್ಯಾಸ್ ಛೇಂಬರಿಗೆ ಕಳುಹಿಸಿದ ನರಭಕ್ಷಕ ಹಿಟ್ಲರ್ ಒಂದು ಹನಿ ಆಲ್ಕೋಹಾಲ್ ತೆಗೆದುಕೊಂಡಿರಲಿಲ್ಲ. ಒಂದು ಕಡೆ ಆಟಂಬಾಂಬ್‌ನಿಂದ ಮಾನವಕೋಟಿಯನ್ನು ರಕ್ಷಣೆ ಮಾಡತಕ್ಕ ಗಾಂಧೀಜಿ ಮದ್ಯಪಾನವನ್ನು ಅರಿತಿರಲಿಲ್ಲ. ಅನುಭವಿಸಿರಲಿಲ್ಲ. ಈ ರೀತಿ ದೇವ ಮಾನವ ಆತ. ಇದರ ಅರ್ಥ ಏನೆಂದರೆ, ಯಾರು ಕುಡಿಯುವುದಿಲ್ಲ ಅವರೆಲ್ಲಾ ಗಾಂಧಿಗಳು, ಯಾರು ಕುಡಿಯುವುದಿಲ್ಲ ಅವರೆಲ್ಲಾ ಸಂಪನ್ನರೇ?

ನಮ್ಮಲ್ಲಿ ನಾವು ಈ ಪ್ರಶ್ನೆ ಹಾಕಿಕೊಳ್ಳೋಣ. ಒಂದು ತಿಂಗಳಿಗೆ 30 ರೂಪಾಯಿಗಳಂತೆ ಬಡ್ಡಿ ತೆಗೆದುಕೊಂಡು ಬರೀ ಮಜ್ಜಿಗೆ ಕುಡಿಯುತ್ತಿರುವವನು ಒಬ್ಬ. ಅವನ ಸುತ್ತ ಇರತಕ್ಕ ಜನರೆಲ್ಲಾ ತಿಂಗಳು ತಿಂಗಳು, ವರ್ಷೇ ವರ್ಷೇ ದುಡಿದು ಬಳಲಿ ಹಣ್ಣಾಗುತ್ತಿದ್ದಾರೆ. ಇವರ ಮಕ್ಕಳು ಮಾಲ್‌ನ್ಯೂಟ್ರಿಷನ್‌ನಿಂದ ಹೆಣಗಳನ್ನು ಹೋಲುತ್ತಿರುತ್ತಾರೆ. ಮಜ್ಜಿಗೆ ಕುಡಿದು, 30 ರೂಪಾಯಿ ಬಡ್ಡಿ ಸಂಪಾದನೆ ಮಾಡುತ್ತಿರುವ ಈತನೇ ನಿಜವಾದ ಸಮಾಜದ ಶತ್ರು. ಇವನಂಥ ಕುಡುಕ ಇನ್ನೊಬ್ಬನಿಲ್ಲ.

ನಾನು ಒಂದು ಮಂದಿರ ಕಟ್ಟಿಸುತ್ತೇನೆ. ನನ್ನ ಮಂದಿರಕ್ಕೆ ಜನರು ಬರುತ್ತಾರೆ. ನಾನು ಮದ್ಯ ಕುಡಿಯುವುದಿಲ್ಲ. ಜನರನ್ನು ಇಂತಹ ಹಲವಾರು ವಿಧಾನಗಳಿಂದ ಹಿಂಸಿಸುವವರೂ ಇದ್ದಾರೆ. ಇಂತಹ ಅಸ್ತ್ರಗಳು ತನ್ನ ಪಾಡಿಗೆ ತಾನು ಕುಡಿಯುವ ಮದ್ಯವ್ಯಸನೀಯ ಮದ್ಯಪಾನದ ಚೌಕಟ್ಟಿನಲ್ಲಿ ಬರುವುದಿಲ್ಲ. ಈತ ನಿರುಪದ್ರವಿ.

ಇವತ್ತು ನಾವು ಶೋಷಣೆ ಬಗ್ಗೆ ಮಾತನಾಡುತ್ತೇವೆ, ಹಿಂದುಳಿದ ವರ್ಗಗಳ ಬಗ್ಗೆ ಮಾತನಾಡುತ್ತೇವೆ. ಸಮಾಜದ ಸ್ಥಿತಿಗತಿಗಳ ಬಗ್ಗೆ ಮಾತನಾಡುತ್ತೇವೆ. ಕೇವಲ ಮಜ್ಜಿಗೆ ಕುಡಿದು, ಹಾಲು ಸೇವಿಸಿ ಸಮಾಜಕ್ಕೆ ವಿಷ ಉಣಿಸುವ ಮಹಾನ್ ಬ್ಲಡ್ ಸಕ್ಕರ್ ಏನಿದ್ದಾನೆ ಅವನು ನಮ್ಮ ಕಣ್ಣಿಗೆ ಬೀಳುತ್ತಿಲ್ಲ. ಎಚ್ಚರವಿರಲಿ.

ನಮ್ಮ ರಾಜರತ್ನಂ ಬರೆದ ಹೆಂಡ್ಕುಡ್ಕ. ರತ್ನನ್ ಪದಗಳಲ್ಲಿ ಈ ಅಮಾಯಕನನ್ನು ಕಾಣುತ್ತೇವೆ. ಆತ ಹೆಂಡ್ಕುಡ್ಕ. ಆತ ಕುಡಿದರೇನು ನಿನಗೆ? ಆತ ಅವನ ಮಟ್ಟಿಗೆ ಅವನು ಕುಡೀತಾನೆ. ಈ ಕುಡಿತದಲ್ಲಿ ಮೂರು ಹಂತಗಳು ಇವೆ. ಒಬ್ಬ ಕುಡಿದು ತನ್ನನ್ನು ತಾನೇ

ಹಾಳುಮಾಡಿಕೊಳ್ಳುತ್ತಾನೆ. ಹೆಚ್ಚಾದರೆ ತನ್ನ ಕುಟುಂಬವನ್ನು ಹಾಳುಮಾಡಿಕೊಳ್ಳುತ್ತಾನೆ. ಆಮೇಲೆ ಸಮಾಜಕ್ಕೆ ಆತಂಕಕಾರಿ ಆಗುತ್ತಾನೆ. ಇಷ್ಟೇ ತಾನೆ? ಆದರೆ ಇಡೀ ಸಮಾಜಕ್ಕೆ, ಇಡೀ ರಾಷ್ಟ್ರಕ್ಕೆ ಆತಂಕಕಾರಿಯಾಗಿರತಕ್ಕ ನಮ್ಮ ಅರ್ಥ ವ್ಯವಸ್ಥೆಯ ಸೂತ್ರವನ್ನು ಹಿಡಿದಿರತಕ್ಕ ಬಹಳ ಜನ ಕುಡಿಯುವುದಿಲ್ಲ. ಅವರಿಗೆ ಕುಡಿಯತಕ್ಕ ಅವಶ್ಯಕತೆ ಇಲ್ಲ. ಅವರಲ್ಲಿರತಕ್ಕ ಅಮಲು ಇಳಿಯುವುದಕ್ಕೆ ಇನ್ನೂ ನೂರಾರು ವರ್ಷಗಳು ಬೇಕು. ಆ ಅಮಲನ್ನು ಇಳಿಸಬೇಕಾದರೂ ಒಂದು ದೃಷ್ಟಿ ಇರಬೇಕು. ಅಲ್ಲವೇ? ಯೋಚಿಸಿ.

ಈಗ ನಾವು ಮದ್ಯಪಾನದಿಂದ ಆಗತಕ್ಕ ದುರಂತಗಳನ್ನು ದಿನನಿತ್ಯ ನೋಡುತ್ತಿದ್ದೇವೆ. ಬೆಂಗಳೂರಿನ ಯಾವುದೇ ಸರ್ಕಲ್‌ನಲ್ಲಿ 15 ವರ್ಷಗಳ ಹಿಂದೆ ಹೇಗೆ ನಿರ್ಭಯವಾಗಿ ಓಡಾಡಬಹುದಾಗಿತ್ತೋ ಆ ಸ್ಥಿತಿ ಇವತ್ತು ಇಲ್ಲ. ಹಳ್ಳಿಗಾಡಿನಲ್ಲಿ ಸಾಯಂಕಾಲ ಬಸ್ ಸ್ಟ್ಯಾಂಡ್‌ಗಳಲ್ಲಿ ಆರು ಗಂಟೆಯಾದರೆ ಇವತ್ತು ಮರ್ಯಾದಸ್ಥರು ಓಡಾಡುವುದಕ್ಕೆ ಆಗುವುದಿಲ್ಲ. ಆ ಸ್ಥಿತಿ ಆಗಿದೆ. ನಮ್ಮ ಆರ್ಥಿಕ ವ್ಯವಸ್ಥೆಯ ಮೂಲಭೂತ ರೋಗದಿಂದ ಈ ಹುಣ್ಣು ಆಗಿದೆ. ಆ ಹುಣ್ಣನ್ನು ಇವತ್ತು ಎಗ್ರಾವೇಟ್ ಮಾಡತಕ್ಕ ಅದರ ಕ್ಯಾಟಲಿಟಿಕ್ ಏಜೆಂಟಾಗಿ ಆಲ್ಕೋಹಾಲ್ ಅಪಾರ ಹಾನಿ ಮಾಡುತ್ತಿದೆ. ನಿರುದ್ಯೋಗ ಬಡತನದ ಬಗ್ಗೆ ಬರೀ ನಮ್ಮ ಘೋಷಣೆ ಹೆಚ್ಚಾಗುತ್ತಾ ಹೋಗುತ್ತಿದೆಯೇ ವಿನಃ ಈ ಎಲ್ಲ ಕೃತ್ರಿಮ ನಮಗೆ ಕಾಣಿಸುತ್ತಿಲ್ಲ.

ಇವತ್ತು ನಾವು ತೀವ್ರವಾಗಿ ತಲೆಕೆಡಿಸಿಕೊಳ್ಳಬೇಕಾಗಿದೆ. ಅದು ಏನೋ ಆಗುತ್ತದೆ, ಹಾಲು ಉಕ್ಕುತ್ತದೆ ಎಂದು ಭಾವಿಸಿ ಎರಡು ಹನಿ ನೀರು ಹಾಕಿ ಉಕ್ಕುವುದನ್ನು ಸಮಾಧಾನ ಮಾಡಬಹುದು ಇದಲ್ಲ. ಬೇಕಾದದ್ದು ನಾವು ಇವತ್ತು ಸಮಾಜದ ಗರ್ಭದಲ್ಲಿರತಕ್ಕ ದುರಂತಗಳು ಏನಿವೆ, ದುರಂತಗಳಿಗೆ ಕಾರಣವಾಗಿರತಕ್ಕ ವಿಷಯಗಳು ಏನಿವೆ ವಿಚಾರಗಳು ಏನಿವೆ ಅವುಗಳ ಕಡೆಗೆ ಹೋಗುವುದಕ್ಕೆ ತಯಾರಾಗಿಲ್ಲ. ಯಾರೂ ಹೋಗುವುದಕ್ಕೆ ಇವತ್ತು ತಯಾರಾಗಿಲ್ಲ. ಅದನ್ನು ಮುಟ್ಟುವುದಕ್ಕೆ ಹೋದ ತಕ್ಷಣ ಅದರ ಬೀಜವನ್ನು ಮುಟ್ಟುವುದಕ್ಕೆ ಹೋದವರು ಮರವಾಗಿ ಉಳಿಯುವುದಿಲ್ಲ. ಆರ್ಥಿಕವಾಗಿ ಉಳಿಯುವುದಿಲ್ಲ, ಸಾಮಾಜಿಕವಾಗಿ ಇರುವುದಿಲ್ಲ. ಬೆಂಡಿಗೇರಿಯದು ಏನೋ ಹೇಳುತ್ತಾರೆ. ಆದರೆ ಇಡೀ ಭಾರತದ ಸಮಾಜದಲ್ಲಿರತಕ್ಕ ರೋಗದ ಗಡ್ಡೆಯನ್ನು ಮುಟ್ಟುವುದಕ್ಕೆ ಕೇವಲ ಒಬ್ಬ ಬಸವಲಿಂಗಪ್ಪನವರಿಂದ ಸಾಧ್ಯವಿಲ್ಲ. ಬಸವಣ್ಣನವರ ಕೈಯಲ್ಲಿ ಆಗಲಿಲ್ಲ, ಅಂಬೇಡ್ಕರವರಿಂದ ಆಗಲಿಲ್ಲ, ಇವರ ಕೈಯಲ್ಲಿ ಆಗುತ್ತದೆಯೇ?

ನೂರಾರು ವರ್ಷಗಳಿಂದ ಆಗದೇ ಇರತಕ್ಕದ್ದನ್ನು ಮಾತನಾಡುತ್ತೇವೆ. ನಮ್ಮ ಕೈ ಮೀರಿದ ಮಾತು ಇವು. ಇಮ್-ಪ್ರಾಕ್ಟಿಕಲ್ ಆಗಿ ಸುಮ್ಮನೆ ಮಾತನಾಡುತ್ತೇವೆ. ಮನಸ್ಸಿನಲ್ಲಿರತಕ್ಕ ದುಃಖವನ್ನು ತೋಡಿಕೊಳ್ಳುತ್ತೇವೆ. ಮಾನ್ಯ ಬಸವಲಿಂಗಪ್ಪನವರು ಹೇಳಿದ್ದಾರೆ ಬಂದೂಕು ತೆಗೆದುಕೊಳ್ಳುತ್ತೇವೆ, ದಲಿತರೆಲ್ಲ ಒಂದಾಗುತ್ತೇವೆ ಎಂದು ಹೇಳುತ್ತಾರೆ. ಏನು ಒಂದಾಗುತ್ತಾರೆ? ಇಡೀ ವ್ಯವಸ್ಥೆಯನ್ನು ತಮ್ಮ ಸ್ವಾರ್ಥಕ್ಕಾಗಿ ಕೇಂದ್ರೀಕೃತಗೊಳಿಸಿರುವಂತಹ ವ್ಯವಸ್ಥೆ ಆಗಿ ಹೋಗಿದೆ. ಯಾರೇ ಇರಲಿ, ಯಾವುದೇ ಪಾರ್ಟಿ ಇರಲಿ ಹಾವಿನ ಹೆಡೆಯ ಕೆಳಗೆ ಕಪ್ಪೆಯಂತೆ ಆಗಿದ್ದಾರೆ. ಇಂತಹ ಸ್ಥಿತಿಯಲ್ಲಿ ನಾನು ಸಮಾಜದಲ್ಲಿ ಬದುಕುತ್ತೇನೆಂದರೆ ಅದು ಆಗುವುದಿಲ್ಲ.

ಸ್ವಾಮಿ, ಕೈಮುಗಿದು ಹೇಳುತ್ತೇನೆ ಆಗುವುದಿಲ್ಲ, ಕಾಲಿಗೆ ಬಿದ್ದು ಹೇಳುತ್ತೇನೆ ಅದು ಆಗುವುದಿಲ್ಲ. ನೀವು ಹೇಳುವ ರೀತಿಯಿಂದ ಅದು ಆಗುವುದಿಲ್ಲ. ಆದ್ದರಿಂದ ಈ ವ್ಯವಸ್ಥೆಯಲ್ಲಿ ಹಲವಾರು ದುರಂತಗಳಿಗೆ, ರೋಗಕ್ಕೆ, ಅನ್ಯಾಯಕ್ಕೆ ಕಾರಣವಾಗಿರತಕ್ಕ ವಸ್ತು ಏನಿದೆ ಅದು ಲಿಕ್ಕರ್ ಎಂದರೆ ನಾನು ಒಪ್ಪುವುದಿಲ್ಲ. ಬೇರೆ ಕಾರಣ ಇದೆ. ಅದರಿಂದ ರೋಗ ಉಲ್ಬಣವಾಗಿದೆ. ಆದ್ದರಿಂದ it acts as a catalytic agent to the social system, economic system. ಎಕಾನಾಮಿಕ್ ಸಿಸ್ಟಮ್ ಗೋರ್ಬಚೆವ್‌ಗೆ ಗೊತ್ತು. ಏನು ಮಾಡಬೇಕೆಂದು ಗೊತ್ತು. ಅವನ ದೇಶದಲ್ಲಿರತಕ್ಕ ಮನುಷ್ಯನಿಗೆ ಎರಡು ಹೊತ್ತು ಅನ್ನ. ಎರಡು ಹೊತ್ತು ಅನ್ನ ಕೊಡುವುದರಿಂದ ದೇಹಕ್ಕೆ ಸಾಕಷ್ಟು ಶಕ್ತಿ ದೊರೆಯುತ್ತದೆ. ಹೀಗಾಗಿ ಆತ ಮಿತಿಮೀರಿ ವೋಡ್ಕ ಕುಡಿಯಬೇಡಿರಿ ಎಂದು ಹೇಳುತ್ತಾನೆ.

ನಾವು ಇವತ್ತು ಯಾವ ಸ್ಥಿತಿಯಲ್ಲಿ ಇಟ್ಟಿದ್ದೇವೆ? ಅದನ್ನು ಹೇಳಿದ್ದೇನೆ. ಒಂದು ಕಡೆ ಧರ್ಮ. ಇನ್ನೊಂದು ಕಡೆ ಮತ. Both are equally intoxicant. ಎರಡನ್ನೂ ಮುಟ್ಟುವುದಕ್ಕೆ ಆಗುವುದಿಲ್ಲ, ಧರ್ಮ ಮುಟ್ಟಿ ಬದುಕಿಕೊಳ್ಳಿ ನೋಡುತ್ತೇನೆ? ಅದೇ ರೀತಿ ಇವತ್ತು ಮತವನ್ನು ಮುಟ್ಟಿ ಬದುಕಿಕೊಳ್ಳುವುದೂ ಕಷ್ಟವಾಗಿದೆ. ಎಲ್ಲರೂ ಹೇಳುತ್ತಾರೆ ಅದನ್ನು ಮಾಡೋಣ ಇದನ್ನು ಮಾಡೋಣವೆಂದು. ನಾಲ್ಕು ತಿಂಗಳು ಎಕ್ಸ್‌ಪೆರಿಮೆಂಟ್ ಮಾಡಬಹುದು. ಸುತ್ತಾ ಪೊಲೀಸ್ ಕಾವಲು ಹಾಕಿ ಅಂಗಡಿಗಳನ್ನು ಕ್ಲೋಸ್ ಮಾಡಿ, ಆಗ ಆ ಗಡಾರದಲ್ಲಿರತಕ್ಕ ದುರ್ವಾಸನೆ ಮತ್ತೆ ಎಲ್ಲಿಯಾದರೂ ಹೊರ ಹೊಮ್ಮಿ ಹೊಮ್ಮುತ್ತದೆ. ದನಗಳನ್ನು ಸಣ್ಣ ಜಾಗದಲ್ಲಿ ಬೇಲಿ ಹಾಕಿ ಕೂಡಿಹಾಕಿದರೆ ಅವು ಇರುವುದಿಲ್ಲ. ಅವು ಎಲ್ಲಿಯಾದರೂ ನುಗ್ಗುತ್ತವೆ.

ಮೊದಲು ನಾವು ರೆಕಗ್ನೈಸ್ ಮಾಡಬೇಕಾಗಿರುವುದು ಎಂದರೆ ಇದೊಂದು ಮಾನವನ ಅದಮ್ಯ ಗುಣ. ಅದು ಹೇಗೆ ಬಂದಿದೆ? ಭಂಗಿಸೊಪ್ಪನ್ನು ಹಿಂದೆ ಸೇದುತ್ತಿದ್ದರು. ಆಗ ಇರಲಿಲ್ಲವೆ? ಹಿಂದೆ ಯೂರೋಪ್‌ನವರು ಯುದ್ಧದ ಬಗ್ಗೆ ಕಾಮೆಂಟ್ ಮಾಡುತ್ತಾ ಹೇಳುತ್ತಾರೆ Indians are fools, ಅವರು ಗಾಂಜ ಕುಡಿದು ನಿದ್ದೆ ಹೊಡೆದರು. ನಮ್ಮವರು ರಮ್ ಕುಡಿದು ಬಹಳ ವೇಗವಾಗಿ ಹೋದರು, ಅದರಿಂದ ಕೋಟೆಗಳನ್ನು ಗೆಲ್ಲುತ್ತಾ ಗೆಲ್ಲುತ್ತಾ ಹೋಗುವುದಕ್ಕೆ ಸಾಧ್ಯವಾಯಿತು ಎಂದು ಹೇಳುತ್ತಾರೆ. ನಾನು ರಮ್ ಎಕ್ಸ್‌ಪೋನೆಂಟ್ ಎಂದು ಹೇಳುವುದಿಲ್ಲ. ಅದರ ಅರ್ಥ ಅದಲ್ಲ. ಮದ್ಯಸೇವನೆ ಒಂದು ರೀತಿಯಲ್ಲಿ ಮಾನಸಿಕವಾಗಿ ಅಂಟಿಕೊಂಡಿರುವ ಜಾಡ್ಯ. ಮಾನವ ಕುಲಕ್ಕೆ ಅಂಟಿಕೊಂಡಿರುವ ಜಾಡ್ಯ ಇದು. ವೈಜ್ಞಾನಿಕವಾಗಿ ಚಿಂತಿಸುವುದಾದರೆ ಯಾವುದೇ ಸರ್ಕಾರದ ಕಾರ್ಯಕ್ರಮ ಇದನ್ನು ಇತಿಮಿತಿಯಲ್ಲಿಡಲು ಸಾಧ್ಯವಿಲ್ಲ.

ಆಕಾಶವನ್ನು ಕೆಳಗೆ ತರುತ್ತೇವೆಂದು ಹೇಳುವುದಕ್ಕಾಗುವುದಿಲ್ಲ. ನನ್ನ ನಿಮ್ಮ ಮಾತಲ್ಲ ಇದು. ಇದು ರಷ್ಯಾದ ಅನುಭವ. ಚೈನಾದ ಅನುಭವ. ಅಮೇರಿಕಾ ದೇಶದಲ್ಲಿ ಯಾರೋ ಒಬ್ಬರು ಪ್ರೆಸಿಡೆಂಟ್ ಎಲೆಕ್ಷನ್‌ಗೆ ನಿಂತು ನಾನು ಪಾನನಿರೋಧ ಜಾರಿಗೆ ತರುತ್ತೇನೆಂದು ಹೇಳಿ ಚುನಾವಣೆಯಲ್ಲಿ ಡಿಪಾಸಿಟ್ ಕಳೆದುಕೊಂಡರಂತೆ. ಇದು ವಸ್ತುಸ್ಥಿತಿ. ಈಗ ಇರತಕ್ಕ ದೋಷ ಏನಿದೆ ಅದರ ಕಡೆ ನಾವು ನೋಡಬೇಕು.

ಎಂ. ಮಲ್ಲಿಕಾರ್ಜುನ ಖರ್ಗೆ: ಈಗ ತಾವೇನು ಮಾಡುತ್ತೀರಿ ಅದನ್ನು ಹೇಳಿಬಿಡಿ?

ಜೆ.ಹೆಚ್. ಪಟೇಲ್: ಈ ನಿರ್ಣಯದಿಂದ ಮಹಾನ್ ದುಷ್ಟ ಶಕ್ತಿಗಳು ಏನಿವೆ, ರಾಷ್ಟ್ರದ ಸಮಾಜದ ಜೀವನದಲ್ಲಿ ಬೆಳೆಯುತ್ತಿರುವ ಈ ಶಕ್ತಿಯನ್ನು ಹತೋಟಿಯಲ್ಲಿಡುವುದಕ್ಕೆ ಮೊದಲನೆಯ ಹೆಜ್ಜೆಯಾಗಿ ಏನಾದರೂ ನಾವು ವಿಚಾರ ಮಾಡೋಣ.

ಇದನ್ನು ತೆಗೆದುಬಿಡಿ ಎನ್ನತಕ್ಕ ಅಪ್ರಕೃತ ಅಭಿಪ್ರಾಯಗಳನ್ನು ಹೇಳುವುದು ಬೇಡ. ಇದನ್ನು ಹೇಗೆ ನಿಯಂತ್ರಿಸಬೇಕು? ಅದನ್ನು ಹೇಳಿ.

ಅಂದು ನಿರ್ಣಯವನ್ನು ಮಂಡಿಸುತ್ತಾ ಮಾನ್ಯ ಶ್ರೀನಿವಾಸರು ಹೇಳಿದರು ಸರ್ಕಾರ ಒಂದು ಕಡೆ ಹಣಕಾಸಿನ ಆದಾಯಕ್ಕೋಸ್ಕರ ಅದನ್ನು ಹೆಚ್ಚು ಹೆಚ್ಚಾಗಿ ಕೊಡಿಸುತ್ತಾ, ಕುಡಿಸುತ್ತಾ ಹೋಗುತ್ತಿದೆ ಎಂದು. ಒಂದು ಕಡೆ ಜನರ ಆರೋಗ್ಯ ಕೆಡುತ್ತದೆ. ಹಣಕಾಸಿನ ದೃಷ್ಟಿಯಿಂದ ಇದನ್ನು ನೋಡಬಾರದು. ಸಮಾಜದ ಆರೋಗ್ಯದ ದೃಷ್ಟಿಯಿಂದ ಯಾರು ತೆರಿಗೆಯನ್ನು ಕೊಡುತ್ತಾರೆ, ಅವರ ಆರೋಗ್ಯದ ದೃಷ್ಟಿಯಿಂದ ನೋಡಬೇಕು. ಆ ದೃಷ್ಟಿಯಿಂದ ಇದನ್ನು ನಿಯಂತ್ರಿಸಬೇಕೆಂದು ಅವರು ಸಲಹೆಯನ್ನು ಕೊಟ್ಟರು. ಸರಿ. ಒಪ್ಪುತ್ತೇನೆ.

ಇನ್ನು ಕೆಲವರು ಹೇಳಿದರು ಹಳ್ಳಿಹಳ್ಳಿಗಳೆಲ್ಲಾ ಕುಡಿತದ ಅಂಗಡಿಗಳಾಗಿವೆ ಎಂದು. ಹಳ್ಳಿಹಳ್ಳಿಗಳಲ್ಲಿ ಕುಡಿತದ ಅಂಗಡಿಗಳು ಅಥವಾ ಒಂದೇ ಊರಲ್ಲಿ ಜಾಸ್ತಿ ಅಂಗಡಿಗಳು ಆಗಿದ್ದರೆ ಇದು ನಮ್ಮ ಒಂದು ರಾಜ್ಯದ ರೋಗ ಅಲ್ಲ ಮಾನ್ಯ ಅಧ್ಯಕ್ಷರೇ. ಈ ರೋಗ ಹಿಮಾಲಯ ಪರ್ವತದಿಂದ ಹಿಡಿದು ಎಲ್ಲಾ ಕಡೆಗೆ ಬೀಸುತ್ತಿದೆ. ಅದಕ್ಕೆ ಒಂದು ಕಾರಣ ಇದೆ. ಏನೂ ಕೆಲಸ ಇರುವುದಿಲ್ಲ, ದುಡಿಮೆ ಮಾಡುವುದಕ್ಕೆ ಆಗುವುದಿಲ್ಲ. ಸರಿ ಒಂದು ಅಂಗಡಿಯನ್ನು ಇಟ್ಟುಕೊಂಡ. ಹಿಂದೆ ಯಾವುದೋ ಕಾಲದಲ್ಲಿ ಬೆಳ್ಳಿಬಂಗಾರದ ಅಂಗಡಿಗಳನ್ನು ರಸ್ತೆಬದಿಗಳಲ್ಲಿ ಇಟ್ಟುಕೊಳ್ಳುತ್ತಿದ್ದರು. ಒಂದು ಕಾಲದಲ್ಲಿ ಹಳ್ಳಿಗಳಲ್ಲಿ ಮನೆಯಲ್ಲಿ ಅಕ್ಕಿ ಗೋಧಿ ಜಾಸ್ತಿ ಇಲ್ಲದಿದ್ದರೂ ತುಪ್ಪ ಇರುತ್ತಿತ್ತು. ದನಕರುಗಳು ಜಾಸ್ತಿ ಇರುತ್ತಿದ್ದವು. ಅವರು ಭಾರಿ ಶ್ರೀಮಂತರು ಅಲ್ಲದಿದ್ದರೂ ಕೂಡ ದೀಪಕ್ಕೆ ತುಪ್ಪ ಹಾಕುತ್ತಿದ್ದರು.

ಅಂತಹ ಕಾಲ ಈಗಿಲ್ಲ. ಈಗ ಔಷಧಿಗೂ ಅವೆಲ್ಲ ಸಿಗುವುದಿಲ್ಲ. ಇವತ್ತು ಏನಾಗಿದೆ ಎಂದರೆ ತಾನಾಗಿಯೇ ಒಬ್ಬ ಒಂದು ಸಿಎಲ್ 2 ಲೈಸೆನ್ಸ್ ಕೊಡಿ, ಏನೂ ಕೆಲಸ ಇಲ್ಲ, ಇದನ್ನಾದರೂ ಮಾಡಿಕೊಂಡಿರುತ್ತೇನೆ ಎಂದು ಹೇಳುತ್ತಾನೆ. ಹೀಗೆ ಬೇರೆ ಬೇರೆ ಆರ್ಥಿಕ ದಿಗ್ಬಂಧನಗಳ ಕಾರಣ ನಮ್ಮಲ್ಲಿರತಕ್ಕಂಥ ನಿರುದ್ಯೋಗಿ ಜನರ ಒತ್ತಡ ಮತ್ತು ಒತ್ತಾಸೆ ಇವುಗಳ ಕಾರಣದಿಂದ ಮಾದಕವಸ್ತುಗಳನ್ನು ಮಾರುವ ಅಂಗಡಿಗಳ ಸಂಖ್ಯೆ ಜಾಸ್ತಿ ಇದೆ. ಈ ಕಾರಣದಿಂದ ಒಂದು ಪರ್ಸೆಂಟ್ ಕುಡಿಯುವುದು ಜಾಸ್ತಿಯಾಗಿದೆ. ಕುಡಿಯುವುದು ಜಾಸ್ತಿಯಾಗಿದೆ ಎನ್ನುವ ಕಾರಣದಿಂದ ಈ ನೀತಿಯೇನಿದೆ ರಾಜ್ಯದಲ್ಲಿ ಮತ್ತು ರಾಷ್ಟ್ರದಲ್ಲಿ, ಇದರ ಬಗ್ಗೆ ಅವಾಸ್ತವಿಕವಾದಂಥ ತೀರ್ಮಾನಗಳನ್ನು ನಾವು ತೆಗೆದುಕೊಳ್ಳಬಾರದು ಎಂಬುದು ನನ್ನ ಮಾತಿನ ಸಾರಾಂಶ.

ವಾಸ್ತವಿಕವಾಗಿ ಟೆಂಪರೆನ್ಸ್ ಎಂದು ಏನಿದೆ Temperance is the ideal prescription. Prohibition is not the prescription. Prohibition is not practised anywhere in the world. ಮಾನವ ಪ್ರೇಮಿ ಬರ್ನಾರ್ಡ್‌ಶಾ ಅವರು ತಮ್ಮ ನಾಟಕಗಳಲ್ಲಿ ಮತ್ತು ಅವರ ಕಾದಂಬರಿಗಳಲ್ಲಿ ಅವುಗಳನ್ನು ಓದಿದವರು ಎಲ್ಲಿಯಾದರೂ ಒಂದು ಕಡೆ ಈ ಕುಡಿತದ ಬಗ್ಗೆ ಒಬ್ಬ ಮನುಷ್ಯ ತನಗೆ ತಾನಾಗಿಯೇ ಹೇಸಿಗೆ ಪಟ್ಟುಕೊಳ್ಳುವಂತೆ ಬರೆದಿದ್ದಾರೆಯೇ? ನಾವು ಇಲ್ಲಿ ನಮ್ಮ ಸಮಾಜದಲ್ಲಿ ಇದನ್ನು ಪಾಪ ಪುಣ್ಯ ಎಂದು ಮಾಡಿಕೊಂಡಿದ್ದೇವೆ. ಪಾಪ ಪುಣ್ಯ ಈ ಎರಡು ಶಬ್ದಗಳನ್ನು ಉಪಯೋಗ ಮಾಡಿ ಯಾವುದು ವಾಸ್ತವಿಕ, ಅವಾಸ್ತವಿಕ, ಯಾವುದು ವ್ಯವಹಾರಿಕ, ಅವ್ಯವಹಾರಿಕ, ಯಾವುದು ವೈಜ್ಞಾನಿಕ ಮತ್ತು ಯಾವುದು ಅವೈಜ್ಞಾನಿಕ ಇವುಗಳ ತೆರೆಗಳನ್ನು ಮುಚ್ಚಿಸಿಬಿಟ್ಟಿದ್ದೇವೆ.

ಕುಡಿಯುವುದು, ಮಾಂಸ ತಿನ್ನುವುದು ಮನುಷ್ಯ ತಾನು ಬದುಕುವುದಕ್ಕೆ. ಮನುಷ್ಯನ ತನ್ನ ಸಂತತಿಯನ್ನು ಉಳಿಸಿಕೊಳ್ಳಲಿಕ್ಕೆ ಮಾಡಬೇಕಾಗಿ ಬಂದ ನಿಸರ್ಗದತ್ತವಾದ ಒತ್ತಡಗಳು ಇವು. ಇವುಗಳನ್ನೆಲ್ಲಾ ಪಾಪ ಅಂತ ನಾವು ಹೇಳುತ್ತೇವೆ. ಇದರಲ್ಲಿ ಪಾಪವೆಲ್ಲಿದೆ? ಪುಣ್ಯ ಎಲ್ಲಿದೆ? ನಮ್ಮ ಜನರ ದೃಷ್ಟಿಯನ್ನು ಅವೈಜ್ಞಾನಿಕವಾಗಿ ಮಾಡಿದ್ದರಿಂದ ಈ ಒಂದು ಸಾಮಾಜಿಕ ಪಿಡುಗು ಉಂಟಾಗಿದೆ. ಇದು ಒಂದು ಸಾಮಾಜಿಕ ಕ್ಯಾನ್ಸರ್ ಆಗಿದೆ. ಇಡೀ ಭಾರತದ ಸಮಾಜಕ್ಕೆ, ಕರ್ನಾಟಕಕ್ಕೆ ಅಷ್ಟೇ ಅಲ್ಲ. ಈ ಕ್ಯಾನ್ಸರ್ ವಿರುದ್ಧವಾಗಿ ಸಶಕ್ತವಾಗಿರತಕ್ಕಂಥ ಚೈನಾ, ರಷ್ಯಾಗಳು ಇವತ್ತು ಹೋರಾಟ ಪ್ರಾರಂಭ ಮಾಡುತ್ತಿರುವಾಗ ನಾವು ಕೂಡ ಪ್ರಾಮಾಣಿಕವಾಗಿ ಪ್ರಯತ್ನ ಮಾಡಬೇಕು. ಇದರ ಬಗ್ಗೆ ಶಾಸ್ತ್ರ ಕುರಿತಂತಹ ಇಲ್ಲವೇ ಅವೈಜ್ಞಾನಿಕ ಮನೋಭಾವ ಬೇಡ.

ನಾನು ಒಮ್ಮೆ ಯಾರೋ ಒಬ್ಬ ಪ್ರೊಫೆಸರ್ ಹತ್ತಿರ ಹೋಗಿ ಇಂತಹವರು ನನಗೆ ಗೊತ್ತು. He is a very good man, he is an intellectual and rational man ಎಂದೆ. ಅದಕ್ಕೆ ಅವರು Does he drink? ಎಂದು ಕೇಳಿದರು. ನಾನು ಹೌದು ಎಂದು ಹೇಳಿದೆ. That is why he is rational ಎಂದು ಅವರು ಹೇಳಿದರು. ಇದೂ ಒಂದು ರೀತಿ ಅತಿರೇಕವೇ.

ಶ್ರೀ ಪಾಟೀಲರೇ, ಇವತ್ತು ಭಾರತದಲ್ಲಿ ಕೆಲವು ಸಮಾಜಗಳಲ್ಲಿ ನಾವು ಅಲ್ಲಿ ಹೋಗಿ ಕುಡಿಯದೇ ಇದ್ದರೆ ಇದು ಯಾವ ಪುರಾತನ ಪ್ರಾಣಿ ಇಲ್ಲಿಗೆ ಬಂದಿದೆ ಎಂದು ಹೇಳುವವರೂ ಇದ್ದಾರೆ.

ಇಂತಹ ಸಮಾಜಗಳೂ ಇವೆ. ಇವರು ಏನೋ ಒಂದು ತರಹ ಪ್ರಾಣಿಗಳಿದ್ದ ಹಾಗೆ. ಇವತ್ತು ಹಳ್ಳಿಗಾಡುಗಳಲ್ಲಿ ದಿನನಿತ್ಯ ಕೂಲಿ ಮಾಡಿಕೊಂಡು ತನಗೆ ಬಂದ ದುಡ್ಡನ್ನು ಹಾಳು ಮಾಡಿಕೊಂಡು ತನ್ನ ಹೆಂಡತಿ ಮಕ್ಕಳನ್ನು ದಿನನಿತ್ಯ ಜೀವನಕ್ಕೆ ದುರಂತ ಮಾಡತಕ್ಕಂಥ ಜನಗಳ ಬಗ್ಗೆ ನಮ್ಮ ಚಿಂತನೆ ಹೋಗಲಿ. ಅವರದೇ ಆದ ರೀತಿಯಲ್ಲಿ ಎಂಜಾಯ್ ಮಾಡತಕ್ಕಂಥ

ಸಣ್ಣ ಸಮಾಜ ಏನು ಇದೆ. ಆ ಬಗ್ಗೆ ನಾವು ತಲೆಕೆಡಿಸಿಕೊಳ್ಳುವುದು ಬೇಡ. ಈ ನೀತಿಯನ್ನು ಕರ್ಬ್ ಮಾಡಬಾರದು.

ಇವತ್ತು ಮದ್ಯಪಾನಕ್ಕೋಸ್ಕರ ಲಿಬರ್ಟಿಯನ್ನು ಕರ್ಬ್ ಮಾಡುತ್ತೀರಿ, ನಾಳೆ ರಿಲಿಜನ್‌ಗಾಗಿ ಕರ್ಬ್ ಮಾಡುತ್ತೀರಿ. ನಾಳೆ ನಿಮ್ಮ ಪಾರ್ಟಿಗೋಸ್ಕರ ಕರ್ಬ್ ಮಾಡುತ್ತೀರಿ. ಒಂದು ಸಾರಿ ಲಿಬರ್ಟಿಯನ್ನು ಜನತಂತ್ರವನ್ನು ಹಿಡಿದುಕೊಂಡು ಕೆಲಸ ಮಾಡಬೇಕೆಂದು ಬಂದರೆ, ಅದಕ್ಕಿಂತ ಬ್ಯುರೋಕ್ರಸಿ ಜಗತ್ತಿನಲ್ಲಿ ಮತ್ತೊಂದು ಇಲ್ಲ. ಅಂತಹ ಮದ ಬಂದಿದ್ದನ್ನು ನಮ್ಮ ಜೀವಿತ ಕಾಲದಲ್ಲಿ ನೋಡಿದ್ದೇವೆ.

ಯಾರೋ ಒಬ್ಬ ಕುಡಿದು, ಅವನ ಮನೆಯಲ್ಲಿ ಸತ್ತು ಹೋಗಹುದು. ಒಬ್ಬ ವ್ಯಾಪಾರಿ ಕುಡಿದರೆ ಆತನ ವ್ಯಾಪಾರ ಹಾಳಾಗಬಹುದು. ಆದರೆ ಇಡೀ ರಾಷ್ಟ್ರವನ್ನು ಕೈಯಲ್ಲಿ ಹಿಡಿದುಕೊಂಡವರು ಕುಡಿದು ಎಲ್ಲರನ್ನೂ ಕಂಟ್ರೋಲ್ ಮಾಡುತ್ತೇವೆಂದು ಹೇಳುತ್ತಾರೆ. ಇದು ಬಹಳ ಅಪಾಯ. ಈ ಅಪಾಯಗಳ ವಿರುದ್ಧ ಹೋರಾಟ ಮಾಡುವುದಕ್ಕೆ ಹೇಳಿದರು. ಒಂದು ಕಡೆ ಲಿಬರ್ಟಿಯನ್ನು ಉಳಿಸಿಕೊಳ್ಳಬೇಕಾದರೆ ಒಂದು ಸಣ್ಣ ವಿಸ್ಕಿಯನ್ನು ಕುಡಿಯಲೇಬೇಕಾಗುತ್ತದೆ.

ಮಾನ್ಯ ಅಧ್ಯಕ್ಷರೇ, ಸರ್ಕಾರದ ವತಿಯಿಂದ ಜನತಾ ಪಾರ್ಟಿಯ ವಿಚಾರ ಸೊಗಸಾಗಿದೆ. ಗಾಂಧೀಜಿಯವರ ಜೀವಿತ ಕಾಲದಲ್ಲಿ ಏನಿತ್ತು ಎಂಬುದು ಹಳೆಯ ಕಾಂಗ್ರೆಸ್ ಸ್ನೇಹಿತರಿಗೆ ಗೊತ್ತಿದೆ. ಆ ಮೇಲೆ ಕುಡಿಯದೇ ಇರತಕ್ಕಂಥ ಕೆಲವರು ಈ ಬಗ್ಗೆ ಟ್ಯಾಬೂಸ್. ಅಂದರೆ ಅವರಿಗೆ ಕುಡಿಯುವುದೇ ಗೊತ್ತಿರುವುದಿಲ್ಲ. ಅವನಿಗೆ ಕೇಳಿದರೆ ಸಾಕು ಹೇಳುತ್ತಾರೆ ಇವನು ಮಹಾ ಕುಡುಕ ಎಂದು. ಯಾರೋ ಒಬ್ಬರು ಚುನಾವಣೆಗೆ ನಿಲ್ಲುತ್ತಾರೆಂದು ಇಟ್ಟುಕೊಳ್ಳಿ. ಅವನು ಪ್ರಾಮಾಣಿಕ ಇರುತ್ತಾನೆ, ಚೆನ್ನಾಗಿ ಕೆಲಸ ಸಹಿತ ಮಾಡುತ್ತಾನೆ. ಮತ್ತೊಬ್ಬ ಇರುತ್ತಾನೆ. ಬಡ್ಡಿಗಿಡ್ಡಿ ಎಲ್ಲಾ ತೆಗೆದುಕೊಂಡು, ಹರಿಜನ ಗಿರಿಜನರ ಜಮೀನನ್ನು ಸಹ ನುಂಗಿ ಕುಳಿತಿರುತ್ತಾನೆ. ಅವನು ಇಡೀ ಸಮಾಜಕ್ಕೆ ಮಜ್ಜಿಗೆ ಕುಡಿಸಿರುತ್ತಾನೆ. ಮೇಲುನೋಟಕ್ಕೆ ಒಳ್ಳೆಯವನಾಗಿ ಮುಂದುವರೆಯುತ್ತಾನೆ. ಇದು ಇಂದು ನಡೆಯುತ್ತಿರುವ ವಿಷಯ.

**ರಾಮಕೃಷ್ಣ ಹೆಗಡೆ (ಮುಖ್ಯಮಂತ್ರಿ):** ಮಾನ್ಯ ಅಧ್ಯಕ್ಷರೇ...

**ಎಂ. ಮಲ್ಲಿಕಾರ್ಜುನ ಖರ್ಗೆ:** ಅವರಿಂದ ನಿಮಗೆ ಸ್ಫೂರ್ತಿ ಬಂತೇ?

**ರಾಮಕೃಷ್ಣ ಹೆಗಡೆ:** ಅಲ್ಲ, ಅವರು ಒಂದು ಉದಾಹರಣೆ ಕೊಟ್ಟರು. ಅದನ್ನು ಕೇಳಿದ ಮೇಲೆ ನನಗೆ ಒಂದು ಘಟನೆ ನೆನಪಾಯಿತು.

ಇದು 1960ನೇ ದಶಕದ ಕಾಲದಲ್ಲಿ ಆದ ಘಟನೆ. ಪಂಡಿತ್‌ಜೀ ಅವರು ಇದನ್ನು ಅರಿತಿದ್ದರು. ಕಾಂಗ್ರೆಸ್ ವರ್ಕಿಂಗ್ ಕಮಿಟಿ. ಪಾರ್ಲಿಮೆಂಟ್ ಬೋರ್ಡ್‌ನಲ್ಲಿ ಬೇರೆ ಬೇರೆ ರಾಜ್ಯಗಳಿಂದ ಕಾಂಗ್ರೆಸ್ ಕ್ಯಾಂಡಿಡೇಟ್‌ಗಳನ್ನು ಆರಿಸತಕ್ಕಂಥ ಸಂದರ್ಭ. ಪಾರ್ಲಿಮೆಂಟ್

ಬೋರ್ಡ್ ಮೀಟಿಂಗ್ ನಡೆಯುತ್ತಿತ್ತು. ಉತ್ತರ ಪ್ರದೇಶದ ಲಿಸ್ಟ್ ಬಂತು. ಯು.ಪಿ. ಲಿಸ್ಟ್ ಬಂದಾಗ, ಎಲ್ಲರೂ ಟಿಕ್ ಮಾಡಿಕೊಂಡು ಬಂದರು. ಅದರಲ್ಲಿ ಕೆಲವನ್ನು ಪೆಂಡಿಂಗ್ ಇಡಿ ಎಂದರು. ಅದರಲ್ಲಿ ಒಬ್ಬರ ಹೆಸರು ಬಂತು.

ಅವರ ಹೆಸರನ್ನು ನಾನು ಇಲ್ಲಿ ಹೇಳುವುದಿಲ್ಲ. ಅವರು ಪ್ರಸಿದ್ಧ ಕವಿ ಹಾಗೂ ಲೇಖಕ. ಅವರ ಹೆಸರು ಬಂದ ತಕ್ಷಣ ಮುರಾರ್ಜಿಯವರು, ನೋಡಿ ಅವರಿಗೆ ಟಿಕೆಟ್ ಕೊಡುವುದಕ್ಕಾಗುವುದಿಲ್ಲ. ಇವರು ಕುಡುಕರು. ಕುಡಿಯುತ್ತಾರೆ ಎಂದು ನನ್ನ ಹತ್ತಿರ ಕೆಲವರು ದೂರಿದ್ದಾರೆ ಎಂದರು. ಆದರೆ ಪಂಡಿತ್‌ಜೀ ಹಾಗಾದರೆ ಇದನ್ನು ಪೆಂಡಿಂಗ್ ಇಡಿ ಎಂದರು. ಇದಾದ ಮೇಲೆ ಮೂರು ದಿವಸದ ನಂತರ ಪೆಂಡಿಂಗ್ ಕೇಸಸ್‌ನ್ನು ತಂದರು. ಅಷ್ಟರೊಳಗೆ ಪಂಡಿತ್‌ಜೀ ಅವರು ಏನು ಮಾಡಿದರು ಅಂದರೆ ಆಗ ಗೋವಿಂದ ವಲ್ಲಭ ಪಂಡಿತ್ ಅವರು ಮುಖ್ಯಮಂತ್ರಿಯಾಗಿದ್ದರು. ಇವರ ಹತ್ತಿರ ವಿಚಾರ ಹೇಳಿದರು. ಅವರು ಸ್ವಲ್ಪ ವಿಚಾರಗಳನ್ನು ತಿಳಿದುಕೊಂಡಿದ್ದರು. ಈ ಪೆಂಡಿಂಗ್ ಕೇಸಸ್‌ನಲ್ಲಿ ಈ ಹೆಸರು ಬಂತು. ಆಗ ಪಂಡಿತ್‌ಜೀ ಅವರು ಗೋವಿಂದ ವಲ್ಲಭ ಪಂತ್ ಅವರೊಂದಿಗೆ ವಿಚಾರ ಮಾಡಿ, ಏನ್ರಿ, ಇದನ್ನು ಏನು ಮಾಡೋಣ ಎಂದರು. ಆಗ ಅವರು ತಮ್ಮದೇ ಆದ ಸ್ಟೈಲ್‌ನಲ್ಲಿ "ಸಾರ್ ಇವರು ಕುಡಿಯುತ್ತಾರೆ, ಆದರೆ ಹೊರಗಡೆ ತೋರಿಸಿಕೊಳ್ಳುವಷ್ಟು ಕುಡಿಯುವುದಿಲ್ಲ" ಎಂದು ಹೇಳಿದರು.

ಜೆ.ಹೆಚ್. ಪಟೇಲ್: ಮಾನ್ಯ ಅಧ್ಯಕ್ಷರೇ, ನಮ್ಮ ಸಮಾಜದಲ್ಲಿ ಕೆಲವು ಸೋಷಿಯಲ್ ಇಮೇಜಸ್ ಏನಿವೆ ಎಂದರೆ, ಇವನು ಸಮಾಜದಲ್ಲಿ ಕುಡಿಯುತ್ತಾನೆ, ಇವನು ಎಲ್ಲದಕ್ಕೂ ಅನ್‌ಫಿಟ್. ನಾನ್-ವೆಜಿಟೇರಿಯನ್ ತೆಗೆದುಕೊಳ್ಳುತ್ತಾನೆ ಎನ್ನತಕ್ಕಂಥ ಭಾವನೆಗಳು ಬೆಳೆದು ಬಂದಿದೆ. ಆದರೆ ಇನ್ನೊಬ್ಬ ವೆಜಿಟೇರಿಯನ್, ನಾನ್ ಆಲ್ಕೋಹಾಲಿಸ್ಟ್, ವಾಸ್ತವಿಕವಾಗಿ ಅವನು ಹಿಟ್ಲರ್ ಆದರೂ ಪರವಾಗಿಲ್ಲ, ಅವನು ಒಳ್ಳೆಯವನು.

ಈ ದೇಶದಲ್ಲಿ ಇಮೇಜ್ ಪ್ರೊಜೆಕ್ಷನ್ ಇದೆಯಲ್ಲ ಇದನ್ನು ಮಾಡತಕ್ಕಂಥ ಪತ್ರಕರ್ತರು ಏನಿದ್ದಾರೆ, ಅಯ್ಯೋ, ಅಯ್ಯೋ ಇವರನ್ನು ದೇವರೇ ಕಾಪಾಡಬೇಕು, ಇವರಷ್ಟು ಕುಡಿಯುವವರನ್ನು ಯಾರನ್ನೂ ನಾನು ನೋಡಿಯೇ ಇಲ್ಲ. ಸ್ವತಃ ಯಾರ ಬಗ್ಗೆಯಾದರೂ ಬರೆಯುವಾಗ, ಕುಡಿಯುವುದಿಲ್ಲ ಎಂದರೆ ಅವನು ದೊಡ್ಡ ಮನುಷ್ಯ ಎಂದು ಬರೆಯುತ್ತಾರೆ. ಇದು ಎಂತಹ ಜಾದು ಇರಬಹುದು, ಎಲ್ಲಿ ಅವನ ವೀಕ್‌ನೆಸ್ ಇಲ್ಲವೋ, ಆಗ ಅವನ ಮನಸ್ಸಿನಲ್ಲಿ ನಾನು ದೊಡ್ಡವನು ಎಂಬ ಭಾವನೆ ಇರುತ್ತದೆ. ಆದರೆ ಕುಡಿಯುತಕ್ಕಂಥವನ ಬಗ್ಗೆ ಸಣ್ಣ ಎಂಬ ಭಾವನೆ ಬೆಳೆದು ಬಂದಿದೆ. ಆದ್ದರಿಂದ ನಾವು ಬಹಳ ಕೆಟ್ಟು ಹೋಗಿದ್ದೇವೆ. ಯಾವುದೋ ಒಂದು ಮೌಲ್ಯವನ್ನು ಕಳೆದುಕೊಂಡಿದ್ದೇವೆ.

**ಕೆ.ಹೆಚ್.** ಶ್ರೀನಿವಾಸ್: ಇದು "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ದೊಡ್ಡವರು ಇಲ್ಲ" ಎಂದು ಅವರ ಧ್ಯೇಯ.

ಜೆ.ಹೆಚ್. ಪಟೇಲ್: ನೀವೂ ಸ್ವಲ್ಪ ಜರ್ನಲಿಸ್ಟೇ. ಆದುದರಿಂದ ನಾನು ಹೇಳುವುದು. ಇದನ್ನು ನಾವು ಸರಿಯಾದ ರೀತಿಯಲ್ಲಿ ಡಿಸ್ಕಸ್ ಮಾಡಿದ್ದೇವೆ. ಇದರ ಗಂಭೀರತೆ ಏನಿದೆ, ಇದರ ದುರಂತ ಏನಿದೆ, ಅದರ ಕರಾಳ ಚಿತ್ರ ಏನಿದೆ ಅದನ್ನು ನೋಡತಕ್ಕ ಕಾಲ ಈಗ ಬಂದಿದೆ. ಅದನ್ನು ನಾವು ನೋಡಬೇಕು. ಅದನ್ನು ನೋಡುವ ಕಾಲ ಬಂದಿರುವಾಗ, ಇದರಿಂದ ಬಿಡುಗಡೆ ಹೊಂದುವುದಕ್ಕೆ ನಾವು ಏನು ಮಾಡಬೇಕು ಈ ಕ್ಯಾನ್ಸರ್‌ನಿಂದ ಬಿಡುಗಡೆ ಪಡೆಯುವುದಕ್ಕೆ ಏನು ಮಾಡಬೇಕು? ಅದನ್ನೇ ವೈಜ್ಞಾನಿಕವಾದಂಥ, ಸಾಧುವಾದಂಥ, ಸಾಮಾಜಿಕ, ರಾಜಕೀಯ ಕ್ರಮಗಳನ್ನು ತೆಗೆದುಕೊಳ್ಳಬೇಕು.

ಮಾನ್ಯ ಬಸವಲಿಂಗಪ್ಪನವರು ಹೇಳಿದರು. ಪಾರ್ಟಿಗಳು ಎಂದು ಹೇಳಿದರು. ಆ ಪಾರ್ಟಿ, ಈ ಪಾರ್ಟಿ ಎಂದು ಅಲ್ಲ ನಾವು ಇವತ್ತು ಭ್ರಷ್ಟಾಚಾರದ ಬಗ್ಗೆ ಬಹಳ ನಿರ್ಗಳವಾಗಿ ವ್ಯಾಖ್ಯಾನ ಮಾಡಬಹುದು. ಈ ದೇಶದಲ್ಲಿ ಅದನ್ನು ಮಾಡುತ್ತಾರೆ. ಈಗಿನ ಚುನಾವಣಾ ವ್ಯವಸ್ಥೆಯಲ್ಲಿ ಯಾರದ್ದೇ ಒಂದು ಸದಸ್ಯತ್ವ, ಅವರು ಲೋಕಸಭಾ ಮೆಂಬರ್ ಆಗಿರಲಿ, ವಿಧಾನಸಭಾ ಮೆಂಬರ್ ಆಗಿರಲಿ. His membership itself is borne out of corrupt practices. There is no single human being ever found in this country who can claim that his membership is exempted from corruption.

ಸತ್ಯವನ್ನು ಯಾರೂ ಮಾತನಾಡುವುದಕ್ಕೆ ತಯಾರಾಗಿಲ್ಲ. ಅವರು ನೂರು ಕೋಟಿ ರೂಪಾಯಿಗಳು ಖರ್ಚು ಮಾಡುತ್ತಾರೆ ಎಂದು ನಾವು ಹತ್ತಾರು ಲಕ್ಷ ರೂಪಾಯಿಗಳನ್ನು ಖರ್ಚು ಮಾಡುತ್ತೇವೆ. ನಾವು ಹತ್ತಾರು ಲಕ್ಷ ರೂಪಾಯಿ ಖರ್ಚು ಮಾಡುತ್ತೇವೆ ಎಂದು ಇನ್ನೊಬ್ಬ ಐದಾರು ಸಾವಿರ ರೂಪಾಯಿ ಖರ್ಚು ಮಾಡುತ್ತಾನೆ. ಅವರ ನಾಮ, ನಮ್ಮ ನೀರು, ಎಂದು ತಿಕ್ಕಿದ್ದೇ ತಿಕ್ಕಿದ್ದು. ಎಲ್ಲಾ ಪಕ್ಷದವರೂ ದುಡ್ಡನ್ನು ಕಲೆಕ್ಟ್ ಮಾಡುತ್ತಾರೆ. ಮಾಡದೇ ಇರುವವರು ಯಾರು?

ನನ್ನ ಮಿತ್ರರೂ, ಮಾನ್ಯ ಸಭಾಧ್ಯಕ್ಷರೂ ಆದ ರಮೇಶ್‌ಕುಮಾರ್‌ರವರು ಹೇಳಿದರು, ಹೆಂಡದ ಲಾಬಿ ಎಲ್ಲಾ ಪಕ್ಷಗಳನ್ನೂ ಕಂಟ್ರೋಲ್‌ನಲ್ಲಿ ಇಟ್ಟುಕೊಂಡಿದೆ ಎಂದು. ಹೆಂಡದ ಲಾಬಿ ಇಟ್ಟುಕೊಳ್ಳದಿದ್ದರೆ, ಸಿಮೆಂಟ್ ಲಾಬಿ ಇಟ್ಟುಕೊಳ್ಳುತ್ತದೆ. ಸಿಮೆಂಟ್ ಲಾಬಿ ಇಲ್ಲದಿದ್ದರೆ ಗ್ರೌಂಡ್ ನಟ್ ಆಯಿಲ್ ಲಾಬಿ ಇಟ್ಟುಕೊಳ್ಳುತ್ತದೆ. ಲಾಬಿ ಕಂಟ್ರೋಲ್‌ನಲ್ಲಿ ಇಟ್ಟುಕೊಳ್ಳುತ್ತದೆ ಎಂದರೆ ಹಣದ ಬಲದಿಂದ ಕಂಟ್ರೋಲ್‌ನಲ್ಲಿ ಇಟ್ಟುಕೊಳ್ಳುತ್ತಾರೆ.

ಇವತ್ತು ಬಿರ್ಲಾ ಮತ್ತು ಟಾಟಾ ಅವರ ಸಂಬಂಧ ಇರುವ ವಿಧಾನಸಭಾ ಸದಸ್ಯರು, ಲೋಕಸಭಾ ಸದಸ್ಯರು ಎಷ್ಟು ಜನ ಇದ್ದಾರೆ, ಯಾರಿದ್ದಾರೆ ಅದು ನನಗೆ ಗೊತ್ತಿಲ್ಲ. ನಿಮಗೂ ಗೊತ್ತಿಲ್ಲ. ಟೋಟಲ್ ಸಿಸ್ಟಮ್ ಆ ರೀತಿ ಇದೆ. ತಮ್ಮನ್ನು ಮತ್ತು ಈ ಸಿಸ್ಟಮ್‌ನ್ನು ಸೇಫ್ ಗಾರ್ಡ್ ಮಾಡಿಕೊಳ್ಳತಕ್ಕಂಥವರು ಹೋಗಿ ಹೆಂಡವನ್ನು ಹಂಚುವುದಿಲ್ಲ. ಈ ಸಿಸ್ಟಮ್‌ನಲ್ಲಿ ಬದುಕತಕ್ಕಂಥ ಸಣ್ಣ ಹುಳುಗಳು ಹೆಂಡ ಹಂಚುತ್ತವೆ.

ದೇವಸ್ಥಾನ ಕಟ್ಟುವವರು, ಮಂದಿರ ಕಟ್ಟುವವರು, ಬಡ್ಡಿ ತೆಗೆದುಕೊಳ್ಳುವವರು ಹೆಂಡ ಹಂಚುವುದಿಲ್ಲ. ಇಡೀ ಸಮಾಜದಲ್ಲಿರತಕ್ಕಂಥ ಇಂಡಸ್ಟ್ರೀ ಕುಲ್ ಬೇಸ್ ಏನಿದೆ, ಹಳ್ಳಿಗಾಡಿನಲ್ಲಿರತಕ್ಕಂಥ ಬೇಸ್ ಏನಿದೆ ಅದನ್ನು ಡೆಸ್ಟ್ರಾಯ್ ಮಾಡುವವರು ಹೆಂಡ ಹಂಚುವುದಿಲ್ಲ. ಇವುಗಳನ್ನು ಈ ದೃಷ್ಟಿಯಿಂದ ನೋಡಬೇಕು.

ನೀವು ಏತಕ್ಕೆ ಪ್ರೊಹಿಬಿಷನ್ ಇಂಟ್ರಡ್ಯೂಸ್ ಮಾಡಬಾರದು ಎಂದು ಕೇಳಿದರೆ ಅದಕ್ಕೆ ಮತ್ತೆ ಎ.ಬಿ.ಸಿ.ಡಿ. ಯಿಂದ ಹೇಳಬೇಕಾಗುತ್ತದೆ. ನಮ್ಮ ರೆಸಲ್ಯೂಷನ್‌ನ್ನು ಇವತ್ತು ಕೇಂದ್ರ ಸರಕಾರದವರು ಒಪ್ಪಿಕೊಂಡು, ಅವರು ನಿಜವಾಗಿಯೂ ಇದರ ಬಗ್ಗೆ ಏನನ್ನಾದರೂ ಮಾಡಿದರೆ ಪರವಾಗಿಲ್ಲ. ಇವತ್ತು ನಾವು ಒಂದು ಸಮಿತಿ ಮಾಡುತ್ತೇವೆ. ವಿಧಾನಮಂಡಲದ ಸದಸ್ಯರು ಹಾಗೂ ಈ ಬಗ್ಗೆ ತಜ್ಞರು ಇವರುಗಳನ್ನು ಸೇರಿಸಿಕೊಂಡು ಮಾಡುತ್ತೇವೆ. ಮಾನ್ಯ ಕೆ.ಹೆಚ್. ಪಾಟೀಲರು ಹೇಳಿದಂತೆ, ಕುಡಿಯುವವರೂ ಇರಲಿ, ಕುಡಿಯದೇ ಇರುವವರೂ ಇರಲಿ.

ಶಂಕರಾಚಾರ್ಯರನ್ನು ಕೇಳಿದರಂತೆ, ನೀವು ಹೆಂಗಸಿನ ಬಗ್ಗೆ ಮಾತನಾಡುವುದು ಹೇಗೆ ಸಾಧ್ಯ? ನಿಮಗೆ ಏನೂ ಗೊತ್ತೇ ಇಲ್ಲ ಎಂದು. ಆಗ ಅವರು ಬೇರೆ ರೀತಿಯಿಂದ ಜ್ಞಾನ ಪಡೆದುಕೊಳ್ಳುತ್ತಾರೆ, ಬೇರೆ ರೀತಿಯಲ್ಲಿ ಜ್ಞಾನ ಪಡೆದುಕೊಳ್ಳುವುದಕ್ಕೆ ಬರುತ್ತದೆ. ಅವರು ಪರಕಾಯ ಪ್ರವೇಶ ಮಾಡಿದರು. ಜ್ಞಾನಾನುಭವ ಸ್ವತಃ ಮಾಡಿದರೇ ಬರಬೇಕೆಂದು ಏನೂ ಇಲ್ಲ, ಆದರೆ ಸ್ವತಃ ಮಾಡಿದರೆ ಒಳ್ಳೆಯದು. ಈಗಲೂ ಸಹ ಟೈಮ್ ಮೀರಿಲ್ಲ. ಫಾರ್ ಎಕ್ಸ್‌ಪರಿಮೆಂಟ್ ಯಾರಾದರೂ ಕುಡಿಯಬಹುದು ಪ್ಲೀಸ್ ಅಂಡರ್‌ಸ್ಟ್ಯಾಂಡ್‌ಮಿ. ಫಾರ್ ಎಕ್ಸ್‌ಪರಿಮೆಂಟ್ ಮಾಡಬಹುದು.

ಈಗ ಒಂದು "ಇಸಮ್" ಬಂದಿದೆ, There is one "ism" in this country, it is called as "experiencialism". ಈ ಎಗ್ಸಿಸ್ಟೆನ್ಸ್ ಪ್ರೊಪೋಜ್ ಮಾಡಿದಾಗ ಎಕ್ಸ್‌ಟೆನ್‌ಶಿಯಾಲಿಜಿಯಂ, ಸೋಶಿಯಾಲಜಿಯಂ ಮತ್ತು ಕ್ಯಾಪಿಟಾಲಿಜಿಯಂ ಅಂತಹ ಸೂಪರ್ ಥಿಯರಿಗಳು ಬಂದವು. ಎಕ್ಸ್‌ಪಿರಿಯನ್‌ಷಿಯಾಜಿಯಂ ಬಂದಿದೆ. ಆದ್ದರಿಂದ ನೀವು ಮತ್ತು ಬಸವಲಿಂಗಪ್ಪನವರು ಸೇರಿಕೊಂಡು ಗುಟ್ಟಾಗಿ ಏನಾದರೂ ಮಾಡಿದರೆ ಒಳ್ಳೆಯದು. ಜಸ್ಟ್ ಫಾರ್ ಎಕ್ಸ್‌ಪಿರಿಮೆಂಟ್!

ಅಧ್ಯಕ್ಷರೇ ನಾನು ಕನ್‌ಕ್ಲೂಡ್ ಮಾಡುತ್ತಾ ಈ ನಿರ್ಣಯದ ಅರ್ಥ ನಿಜವಾಗಿಯೂ ಸಾರ್ಥಕವಾಗಬೇಕಾದರೆ ಕೇಂದ್ರ ಸರ್ಕಾರ ನಮ್ಮ ವಿಚಾರವನ್ನು ಒಪ್ಪಿ ಇದರ ಮೇಲೆ ಬಲವಾದ ಅಧಿಕಾರವಿರತಕ್ಕಂಥ ಒಂದು ಕಮಿಟಿಯನ್ನು ಮಾಡಿದರೆ ಆಗ ಈ ರಾಷ್ಟ್ರದಲ್ಲಿ ಏನೊಂದು ಬೇಕಾಬಿಟ್ಟಿ ಮಾದಕ ವಸ್ತುಗಳು ಇವೆಯೋ ಅವು ಸ್ವಲ್ಪ ಮಟ್ಟಿಗೆ ನಿಯಂತ್ರಣಗೊಳ್ಳುತ್ತವೆ.

ಇಲ್ಲಿ ಏನಾಗಿದೆ ಎಂದರೆ ನಮ್ಮಲ್ಲಿ ಕೆಲವು ಶಾಲಾ ಕಾಲೇಜುಗಳಲ್ಲಿ ಡ್ರಗ್ ಸೇವನೆ ನಡೆಯುತ್ತಿದೆ. ಅದನ್ನು ನಾನೀಗ ಹೇಳುವುದಕ್ಕೆ ಹೋಗುವುದಿಲ್ಲ. ನಮ್ಮ ಮಾನವನಲ್ಲಿ ಅನೇಕ ದುರ್ಗುಣಗಳು ಇವೆ, ದೌರ್ಬಲ್ಯಗಳು ಇವೆ. ಈ ಗುಣಗಳು ಸಹಜವಾಗಿ

ಬಂದಿರತಕ್ಕಂಥಾವುಗಳು. ಆ ದುರ್ಬಲತೆಯನ್ನು ತೆಗೆಯುವುದಕ್ಕೆ ಸಾಮಾನ್ಯ ಮನುಷ್ಯನ ದೃಷ್ಟಿಯಿಂದ ಆಲೋಚನೆ ಮಾಡಬೇಕೇ ಹೊರತು ಗಾಂಧೀಜಿಯವರು ಹಾಗೆ ಮಾಡಿದ್ದಾರೆ. ನೀವು ಅದೇ ಮಾಡಿ. ಹೀಗೆಂದು ಹೇಳಿದರೆ ಬಗೆ ಹರಿಯುವುದಿಲ್ಲ.

ಸ್ವಾಮಿ ವಿವೇಕಾನಂದರು ಮದುವೆಯೇ ಆಗಲಿಲ್ಲ ನೀವೇತಕ್ಕೆ ಮದುವೆ ಆದಿರಿ? ಇವೆಲ್ಲಾ ಅವಾಸ್ತವಿಕ. ಅಂತಹವರು ಮಹಾನ್ ಪಂಡಿತರು, ಧೀಮಂತರು ಇರುತ್ತಾರೆ, ಅವರಂತೆ ನಾವು ಮಾಡುವುದಕ್ಕೆ ಆಗುವುದಿಲ್ಲ.

ಹೀಗಾಗಿ ಮಹಾತ್ಮಗಾಂಧೀಜಿಯವರು ಮಾಡಿದ್ದನ್ನು ಮತ್ತು ಬೇರೆಯವರು ಮಾಡಿದ್ದನ್ನು ಸ್ವಲ್ಪ ನಾವು ಮಾಡಬೇಕಾಗುತ್ತದೆ. ಆದರೆ ಪೂರಾ ಹಿಟ್ಲರ್ ಆಗುವುದು ಬೇಡ. ಅದಕ್ಕೂ ಒಂದು ಲಿಮಿಟ್ ಇಡಬೇಕು.

You may be a Vyabhichari. I admire you if you are a Sadachari. ಮನುಷ್ಯ ಸದಾಚಾರಿಯಾಗಿದ್ದರೆ ಒಳ್ಳೆಯದು ಆಯಿತು. ಅವನ ಪೂರ್ತಾ ಇತಿಹಾಸ ನೋಡಿ ಕೊಂಡು ಬಂದು ದೇವರುಗಳೆಂದು ಅನಿಸಿಕೊಂಡು ಬಂದು, ವ್ಯಭಿಚಾರಿಯಾದರೆ ಏನು ಲಾಭ ಆಯಿತು. ಆದರೆ ಮನುಷ್ಯ ಅತ್ಯಾಚಾರಿಯಾಗುವುದು ಬೇಡ.

ಕುಡಿತದಲ್ಲಿ All those who take drinks are not drunkards. You will have to surrender to the authority.

ಈ ಒಂದು ಸ್ಥಿತಿ ಬರುವುದಕ್ಕೆ ರಾಷ್ಟ್ರದಲ್ಲಿ ಒಂದು ಒಳ್ಳೆಯ ವಾತಾವರಣ ನಿರ್ಮಾಣ ಮಾಡುವುದಕ್ಕೆ ನನ್ನ ಒಂದು ಸಣ್ಣ ಅಮೆಂಡ್‌ಮೆಂಟ್‌ನೊಂದಿಗೆ ಈ ನಿರ್ಣಯವನ್ನು ಮಂಡಿಸುತ್ತಿದ್ದೇನೆ. "ಮದ್ಯಪಾನಕ್ಕೆ ಸಂಬಂಧಿಸಿದಂತೆ ರಾಜ್ಯದಲ್ಲಿನ ಪ್ರಸ್ತುತ ನೀತಿ ಹಾಗೂ ವ್ಯವಸ್ಥೆ ಶ್ರೀ ಸಾಮಾನ್ಯರ ಹಾಗೂ ಬಡ ಜನರ ಹಿತಕ್ಕೆ ಮಾರಕವಾಗಿ ಪರಿಣಮಿಸಿರುವುದರಿಂದ ಈಗಾಗಲೇ ನಡೆದಿರುವ ದುರಂತಗಳು ಅವುಗಳ ಬಗ್ಗೆ ನೇಮಿಸಲ್ಪಟ್ಟ ವಿಚಾರಣಾ ಆಯೋಗಗಳ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ರಾಜ್ಯಗಳಲ್ಲಿ ಇರುವ ನೀತಿ ಹಾಗೂ ವ್ಯವಸ್ಥೆಯನ್ನು ಅಧ್ಯಯನ ಮಾಡಿ ಪಾನನಿರೋಧವೂ ಸೇರಿದಂತೆ ಬದಲಿ ನೀತಿ ಹಾಗೂ ವ್ಯವಸ್ಥೆಯನ್ನು ಸಾಧ್ಯಸಾಧ್ಯಾತೆಯನ್ನು ಪರಿಶೀಲಿಸಿ ಸೂಕ್ತ ಶಿಫಾರಸ್ಸು ಮಾಡಲು ವಿಧಾನಮಂಡಲದ ಪ್ರತಿನಿಧಿಗಳನ್ನು ಒಳಗೊಂಡ ಒಂದು ಉನ್ನತಾಧಿಕಾರಿ ಸಮಿತಿಯನ್ನು ನೇಮಿಸಬೇಕೆಂದು ಈ ಸಭೆಯು ನಿರ್ಣಯಿಸುತ್ತದೆ.

**ಬಸವನಗೌಡ ಪಾಟೀಲ್:** ಮಾನ್ಯ ಪಟೇಲರೇ 'ಮಾದಕ ವಸ್ತುಗಳು' ಇದನ್ನು ಸಹ ಸೇರಿಸಿದರೆ ಒಳ್ಳೆಯದು.

**ಆರ್. ವೆಂಕಟರಾಮಯ್ಯ:** ಮಾನ್ಯ ಅಧ್ಯಕ್ಷರೇ, ಮಾನ್ಯ ಮಂತ್ರಿಗಳು ಡಿಬೇಟ್ ಪೂರ್ಣ ಫಾಲೋ ಮಾಡಿದಂತೆ ಕಾಣಲಿಲ್ಲ. ನಾವೆಲ್ಲ ಮಾತನಾಡುವಾಗ ಹೆಂಡದ ಬಗ್ಗೆ ನೀವು ವಿಷ

ಕೊಡುತ್ತಿದ್ದೀರಿ. ಅದು ಬೇಡ ಒಳ್ಳೆಯ ಹೆಂಡ ಕೊಡಿ ಎಂದು ಹೇಳಿದ್ದೆವು, ಆದರೆ ಅದಕ್ಕೆ ನೀವು ಉತ್ತರ ಕೊಡಲಿಲ್ಲ.

ಜೆ.ಹೆಚ್. ಪಟೇಲ್: ಡ್ರಗ್ ಅಡಿಕ್ಟ್ಸ್ ಬಗ್ಗೆ ಬೇಕಾದರೆ ಆಮೇಲೆ ಸೇರಿಸಬಹುದು. ಇದರಲ್ಲಿ ಬೇಡ. ಈ ನಿರ್ಣಯವನ್ನು ಸರ್ಕಾರದ ಪರಿಯಿಂದ ನಾವು ಬೆಂಬಲಿಸುತ್ತಿದ್ದೇವೆ.

ಕೆ.ಹೆಚ್. ಶ್ರೀನಿವಾಸ: ಸ್ಟೇಟ್ ಪಾಲಿಸಿಯನ್ನು ಇದರಲ್ಲಿ ಡಿಸ್‌ಕಷನ್ ಮಾಡುವುದಕ್ಕೆ ಆಗುವುದಿಲ್ಲ. ಮೊದಲು ಇದನ್ನು ಮಾಡೋಣ. ನಾನು ನಿಮಗೆ ಮೋರ್ ಕಾಂಪ್ಲಿಮೆಂಟ್ಸ್ ಕೊಡುತ್ತಿದ್ದೇನೆ.

ಬಿ. ಬಸವಲಿಂಗಪ್ಪ: ಮಾನ್ಯ ಅಧ್ಯಕ್ಷರೇ, ಮಾನ್ಯ ಮಂತ್ರಿಗಳು ಭಾಷಣ ಮಾಡಿದ ಮೇಲೆ ಇಂತಹ ಒಂದು ನಿರ್ಣಯದ ಅವಶ್ಯಕತೆ ಇರಲಿಲ್ಲ ಎನ್ನುವ ಪ್ರಶ್ನೆ ಬರುತ್ತದೆ. ಆದರೆ ಎಲ್ಲರೂ ಒಪ್ಪಿಕೊಂಡಿದ್ದೀರಿ ಮಾಡಿ. ಕಾರಣ ಕುಡಿಸಲೇಬೇಕೆಂದು ಹೊರಟಿದ್ದೀರಿ ಕುಡಿಯಲು ತೀರ್ಮಾನ ಮಾಡಿದ್ದೀರಿ, ಮಾಡಿ ಆದರೆ ಎಷ್ಟು ಕುಡಿಯಬೇಕು ಕಂಠ ಪೂರ್ತಿ ಕುಡಿಯಬೇಕೋ ಅರ್ಧ ಕಂಠ ಕುಡಿಯಬೇಕೋ ಎನ್ನುವುದು ಒಂದು ಅಳತೆ ಬೇಕು.

ನೀವು ಭಾಷಣ ಚೆನ್ನಾಗಿ ಮಾಡಿದ್ದೀರಿ, ಮಾಡಿ. ನೀವೆಲ್ಲ ಸೇರಿ ಒಂದು ಸಮಿತಿ ಮಾಡಬೇಕೆಂದು ಹೇಳಿದ್ದೀರಿ ಅದನ್ನು ಮಾಡಿ. ಅವರೇನು ಮಾಡುತ್ತಾರೋ ನೋಡಿಕೊಂಡು ಆಮೇಲೆ ನಾವೊಂದು ತೀರ್ಮಾನ ಮಾಡೋಣ ಎಂದು ಹೇಳಿದಂತಾಯಿತು.

ಒಂದು ವಿಚಾರವನ್ನು ನಾನು ಹೇಳುತ್ತೇನೆ. ಈ ಹೆಂಡದ ಅಂಗಡಿಗಳನ್ನು ತೆರೆಯುವುದಕ್ಕೆ ಆ ನಿರುದ್ಯೋಗಿಗಳಿಗೆ ಲೈಸನ್ಸ್ ಕೊಡುವುದರಿಂದ ಅನ್-ಎಂಪ್ಲಾಯ್‌ಮೆಂಟ್ ಪ್ರಾಬ್ಲಮ್ ಸಾಲ್ವ್ ಆಗುತ್ತದೆಂದು ಹೇಳುವುದು ಸರಿಯಲ್ಲ. ನಿರುದ್ಯೋಗ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ ಬೇರೆ ರೀತಿಯಲ್ಲಿ ತಾವು ಗಮನ ಕೊಡಿ. ಹೆಂಡದ ಅಂಗಡಿಗಳನ್ನು ತೆರೆಯುವುದಕ್ಕೆ ಇವರಿಗೆ ಲೈಸನ್ಸ್ ಕೊಡುವುದರ ಕಡೆ ತಮ್ಮ ಗಮನವನ್ನು ಕೊಡಬೇಡಿ ಎಂದು ಹೇಳುತ್ತೇನೆ.

ಜೆ.ಹೆಚ್. ಪಟೇಲ್: ಮದ್ಯ ಮಾರುವ ಅಂಗಡಿಗಳಲ್ಲಿ ರೀಟೇಲ್ ಆಗಿ ಮದ್ಯವನ್ನು ಮಾರಾಟ ಮಾಡಬಾರದೆಂದು ತಿಳಿಸಿದ್ದೇವೆ. ಆ ರೀತಿ ರೀಟೇಲ್ ಆಗಿ ಮದ್ಯ ಮಾರುವ ಅಂಗಡಿಗಳ ಲೈಸೆನ್ಸ್‌ಗಳನ್ನು ಕ್ಯಾನ್ಸಲ್ ಮಾಡುವುದಕ್ಕೆ ಕ್ರಮ ಕೈಗೊಂಡಿದ್ದೇವೆ. ಮತ್ತು ಯಾವ ಕಡೆ ನಿಯಮಾವಳಿಗಳನ್ನು ಮೀರಿ ಅಂಗಡಿಗಳನ್ನು ತೆರೆದಿದ್ದಾರೋ ಅವುಗಳನ್ನು ರದ್ದು ಮಾಡುತ್ತೇವೆ ಹಾಗೂ ಆತಂಕಕಾರಿಯಾಗುವಂಥ ಸ್ಥಳಗಳಲ್ಲಿ ಇರುವ ಮದ್ಯದ ಅಂಗಡಿಗಳನ್ನು ನಿಲ್ಲಿಸತಕ್ಕಂಥ ಕೆಲಸವನ್ನು ಮಾಡಿದ್ದೇವೆ.

(ಮತ್ತಷ್ಟು ಪ್ರಶ್ನೆಗಳ ಸಲುವಾಗಿ ಗೊಂದಲ)

**ಅಧ್ಯಕ್ಷರು:** ತಿದ್ದುಪಡಿಯಾದ ಈ ಖಾಸಗಿ ನಿರ್ಣಯವನ್ನು ಸಭೆಯ ಮತಕ್ಕೆ ಹಾಕುತ್ತೇನೆ.

"ಮದ್ಯಪಾನಕ್ಕೆ ಸಂಬಂಧಿಸಿದಂತೆ ರಾಜ್ಯದಲ್ಲಿನ ಮತ್ತು ರಾಷ್ಟ್ರೀಯ (ಮತ್ತು ರಾಷ್ಟ್ರೀಯ ಎಂಬ ಪದವನ್ನು ಹೆಚ್ಚಿಗೆ ಸೇರಿಸಲಾಗಿರುತ್ತದೆ) ಪ್ರಸ್ತುತ ನೀತಿ ಹಾಗೂ ವ್ಯವಸ್ಥೆ ಶ್ರೀಸಾಮಾನ್ಯರ ಹಾಗೂ ಬಡ ಜನರ ಹಿತಕ್ಕೆ ಮಾರಕವಾಗಿ ಪರಿಣಮಿಸಿರುವುದರಿಂದ, ಈಗಾಗಲೇ ನಡೆದಿರುವ ದುರಂತಗಳು, ಅವುಗಳ ಬಗ್ಗೆ ನೇಮಿಸಲ್ಪಟ್ಟ ವಿಚಾರಣಾ ಆಯೋಗಗಳ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ರಾಜ್ಯಗಳಲ್ಲಿ ಇರುವ ನೀತಿ ಹಾಗೂ ವ್ಯವಸ್ಥೆಯ ಸಾಧ್ಯಾಸಾಧ್ಯತೆಯನ್ನು ಪರಿಶೀಲಿಸಿ ಸೂಕ್ತ ಶಿಫಾರಸ್ಸು ಮಾಡಲು ವಿಧಾನಮಂಡಲದ ಪ್ರತಿನಿಧಿಗಳನ್ನು ಒಳಗೊಂಡ ಒಂದು ಉನ್ನತಾಧಿಕಾರಿ ಸಮಿತಿಯನ್ನು ನೇಮಿಸಬೇಕೆಂದು ಈ ಸಭೆಯು ನಿರ್ಣಯಿಸುತ್ತದೆ."

ಸಭೆಯು ಈ ಮೇಲ್ಕಂಡ ನಿರ್ಣಯವನ್ನು ಸರ್ವಾನುಮತದಿಂದ ಅಂಗೀಕರಿಸಿತು.

**ಅಧ್ಯಕ್ಷರು:** ಸಭೆಯು ಮುಕ್ತಾಯವಾಯಿತು.

(ವಿಧಾನಸಭೆ ಕಲಾಪ, ಜನವರಿ 22, 1988)

### ಪರಿಣಾಮಕಾರಿ ನಬಾರ್ಡ್ ಯೋಜನೆ

ನಮ್ಮ ನಾಯಕರಾದಂತಹ ಮಾನ್ಯ ಜೆ.ಹೆಚ್. ಪಟೇಲರು ತಮ್ಮ ಸಚಿವ ಸಂಪುಟದ ಮಂತ್ರಿಗಳಿಗೆ ಕೊಟ್ಟಷ್ಟು ಸ್ವಾತಂತ್ರ್ಯವನ್ನು ಬೇರೆ ಯಾವುದೇ ರಾಜ್ಯದ ಮುಖ್ಯಮಂತ್ರಿ ತಮ್ಮ ಮಂತ್ರಿಗಳಿಗೆ ಕೊಟ್ಟಿದ್ದರು ಎಂಬ ಮಾತನ್ನು ನಾನೂ ಎಲ್ಲೂ ಕೇಳಿಲ್ಲ . ಚರಿತ್ರೆಯಲ್ಲಿ ಕಂಡಿಲ್ಲ. ಅದನ್ನು ಉಳಿದ ಮಂತ್ರಿ ಸಹೋದ್ಯೋಗಿಗಳು ಸೂಕ್ತವಾಗಿ ಸದುಪಯೋಗ ಮಾಡಿಕೊಂಡಿದ್ದಿದ್ದರೆ ಈ ರಾಜ್ಯಕ್ಕೆ ತುಂಬಾ ಒಳ್ಳೆಯದಾಗುತ್ತಿತ್ತು. ಇಷ್ಟಿದ್ದರೂ ಸಾಕಷ್ಟು ಪ್ರಮಾಣದ ಕೆಲಸಗಳು ಪಟೇಲರ ಕಾಲದಲ್ಲಿ ಆಗಿವೆ. ಉದಾಹರಣೆಗೆ ರೈತರಿಗೆ ಸಾಲ ನೀಡುವ ನಬಾರ್ಡ್ ಯೋಜನೆ ಏನಾದರೂ ರಾಜ್ಯದಲ್ಲಿ ಭದ್ರವಾಗಿ ತಳವೂರಿದ್ದರೆ ಅದರ ಕೀರ್ತಿ ಪಟೇಲರಿಗೆ ಸಲ್ಲಬೇಕು.

(ಜೆ.ಸಿ. ಮಾಧುಸ್ವಾಮಿ (ಚಿಕ್ಕನಾಯಕನಹಳ್ಳಿ) ವಿಧಾನಸಭೆ, ಜುಲೈ 12, 1999)

### ಸತ್ಯಶೀಲ ರಾಜಕಾರಿಣಿ

ಮುಖ್ಯಮಂತ್ರಿಗಿಂತಲೂ ಮಿಗಿಲಾಗಿ ಪಟೇಲರು ಎಲ್ಲ ಪಕ್ಷಗಳ ಸಹಕಾರದಿಂದ ರಾಜ್ಯವನ್ನು ಅಭಿವೃದ್ಧಿಪಡಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸಿದ ಒಬ್ಬ ಸತ್ಯಶೀಲ ರಾಜಕಾರಣಿ. ಸುಧಾರಣೆಯೇ ಇವರ ಮೂಲ ಧ್ಯೇಯ. ಇವರು ಮುಖ್ಯ ಮಂತ್ರಿಯಾದದ್ದು ಹೋರಾಟದಿಂದ ಎಂದು ಹೇಳುವುದು ಎಷ್ಟು ಸತ್ಯವೋ, ನಾಡಿನ ಪುಣ್ಯ ವಿಶೇಷದಿಂದ ಮತ್ತು ಪೂರ್ವಜನ್ಮದ ಪುಣ್ಯಫಲದಿಂದ ಇವರು ದೇಶನಾಯಕರಾದರು ಎಂಬುದೂ ನಿಜ.

(ಬಿ.ಎಸ್. ಯಡಿಯೂರಪ್ಪ, ವಿಧಾನಸಭೆ, ಆಗಸ್ಟ್ 7, 1996)

20

# "ಬ್ರಹ್ಮ ನಿಂಗೆ ಜೋಡಿಸ್ತೀನಿ........." (II)

ಪಟೇಲರು ಸದನದ ಮನರಂಜನೆಗಾಗಿ ಅಥವಾ ಸಭಿಕರ ಚಪ್ಪಾಳೆ ಗಿಟ್ಟಿಸಲು ಮಾದಕ ವಸ್ತುಗಳ ಸೇವನೆಯ ವಿಷಯವನ್ನು ಪ್ರಸ್ತಾಪಿಸುತ್ತಿದ್ದರು ಎಂದು ಹೇಳಿದಲ್ಲಿ ಅದು ಅವರ ವ್ಯಕ್ತಿತ್ವಕ್ಕೆ ಎಸಗಬಹುದಾದ ಅಪಚಾರ. ಸಾಮಾಜಿಕ ಜೀವನದ ಹಲವು ದುರಂತಗಳಿಗೆ ಕಾರಣವಾದ ಮದ್ಯಸೇವನೆಯ ಬಗೆಗೆ ಕಠಿಣ ನಿಯಂತ್ರಣದ ಜೊತೆಗೆ ಸಾರ್ವಜನಿಕರಲ್ಲಿ ತಿಳುವಳಿಕೆ ಮತ್ತು ವೈಜ್ಞಾನಿಕ ಪ್ರಜ್ಞೆ ಮೂಡಿಸಲು ಅವರು ಬಹುವಾಗಿ ಶ್ರಮಿಸಿದರು.

ಚುನಾವಣೆಯ ಕಾಲದಲ್ಲಿ ಆಗುವ ಸಾರಾಯಿಯ ಉಚಿತ ಹಂಚಿಕೆಯ ಆಮಿಷವನ್ನು ಕುರಿತು ಶಾಸಕ ರಾಮಚಂದ್ರಗೌಡರು ನೀಡಿದ ಎಚ್ಚರಿಕೆಯನ್ನು ಪಟೇಲರು ಒಪ್ಪಿ, ಸದನದಲ್ಲಿ ಅವರ ಸಲಹೆಯನ್ನು ಮಾನ್ಯ ಮಾಡಿದ್ದನ್ನು ಇಲ್ಲಿ ಕಾಣಬಹುದು. ಕುಡಿತದಿಂದಾಗುವ ಸಾಮಾಜಿಕ ಹಾನಿಯ ಬಗೆಗೆ ಬಿಚ್ಚು ಮನಸ್ಸಿನ ಚರ್ಚೆ ನಡೆಯಬೇಕೆಂಬ ಧಾವಂತ ಪಟೇಲರಿಗಿತ್ತು. ಸುಧಾರಿತ ರೀತಿಯಲ್ಲಿ ಮದ್ಯಪಾನ ವ್ಯವಸ್ಥೆ ಇರಬೇಕಾದದ್ದು ಯುಗಧರ್ಮ ಎಂಬ ನಿರ್ಣಯಕ್ಕೆ ಬಂದಿದ್ದರು ಪಟೇಲರು. ಇಷ್ಟಿದ್ದರೂ ಪಟೇಲರ ಮಾತಿನ ತುಂಟಾಟಿಕೆ ಮತ್ತು ನಿರ್ಮಲ ಹಾಸ್ಯಪ್ರವೃತ್ತಿಗೆ ಕುಡಿತದ ಚಟ ಅತ್ಯುತ್ತಮ ಉದಾಹರಣೆಯಾಗುತ್ತಿತ್ತು. ಇಂತಹ ಒಂದು ಜೋಕ್ ಈ ಅಧ್ಯಾಯದ ಕೊನೆಯಲ್ಲಿದೆ..

ಪಟೇಲರ ಪ್ರಕಾರ ಕುಡಿಯುವವರೆಲ್ಲಾ ಕೆಟ್ಟವರಲ್ಲ; ಅಂತೆಯೇ ಕುಡಿಯದಿದ್ದವರೆಲ್ಲಾ ಸಾರಾಸಗಟಾಗಿ ಒಳ್ಳೆಯವರೂ ಅಲ್ಲ.

ಪಾನನಿಷೇಧವನ್ನು ತಮ್ಮ ಸಂದೇಶವೆಂದೇ ಜೀವಿಸವೆಸಿದ ಮಹಾತ್ಮಗಾಂಧೀಜಿಯವರ ಸಮಷ್ಟಿಯ ಹಿತಚಿಂತನೆ ಮತ್ತು ಪ್ರಾಮಾಣಿಕತೆಯನ್ನು ಉಗಹರಿಸುತ್ತಿದ್ದ ಪಟೇಲರು ಅದೇ ದನಿಯಲ್ಲಿ

ಲಕ್ಷಾಂತರ ಜೀವಗಳನ್ನು ವಿಷಾನಿಲ ಗುಹೆಗೆ ತಳ್ಳುತ್ತಿದ್ದ ಹಿಟ್ಲರ್ ಒಂದು ಹನಿ ಮಾದಕವಸ್ತುವನ್ನೂ ಮುಟ್ಟದಿದ್ದ ಉದಾಹರಣೆ ಕೊಡುತ್ತಿದ್ದರು.

ಕುಡಿತದ ವಿಷಯದಲ್ಲಿ ಮಡಿವಂತಿಕೆ ಸಲ್ಲ ಎಂಬುದಕ್ಕೆ ಭಾರತದ ಕಣ್ಮಣಿ ಜವಾಹರಲಾಲ ನೆಹರೂರವರು ಹಿತ-ಮಿತವಾಗಿ ಮಾದಕ ಪಾನೀಯ ಸೇವಿಸುತ್ತಿದ್ದುದನ್ನು ನೆನೆಪಿಸುತ್ತಿದ್ದರು. ನೆಹರೂರವರನ್ನು ಹಿಂಜರಿಯಬೇಕೆಂಬುದು ಪಟೇಲರ ಉದ್ದೇಶವಲ್ಲ. ಇದೊಂದು ಮಾನವ ಸಹಜಗುಣ ಎಂದು ಹೇಳುವುದಷ್ಟೇ ಅವರ ಗುರಿ.

ಕಾಳಸಂತೆ ನಡೆಸುವವರಲ್ಲಿ ಬಹುಮಂದಿ ಕುಡಿಯುವುದಿಲ್ಲ ಎಂದು ಕಂಡು ಹಿಡಿದ ಪಟೇಲರು, ಕಾಳಸಂತೆ ದಂಧೆ ನಡೆಸುವ ಮಂದಿಗೆ ಅವರ ಕಪ್ಪುಹಣದ ಅಮಲು ಇಳಿಯಲು ಇನ್ನೂ ನೂರಾರು ವರ್ಷ ಬೇಕು ಎಂದು ಹೇಳುತ್ತಿದ್ದರು.

## ಹೆಂಡ - ಸಾರಾಯಿ ಮತ್ತು ಸಮಾಜ ವಾದ

ಸಕಲೇಶಪುರದ ಶಾಸಕ ಜೆ.ಡಿ. ಸೋಮಪ್ಪನವರು ಹೆಂಡ-ಸಾರಾಯಿಯನ್ನು ಸಮಾಜವಾದದ ತತ್ವದ ಪ್ರಕಾರ ಎಲ್ಲ ಕಡೆಗೂ ಸಮಾನವಾಗಿ ಹಂಚಬೇಕು ಎಂದು ಹೇಳಿದ್ದಾರೆ. ಸಮಾಜವಾದವೆಂದರೆ ಎಲ್ಲರೂ ಸಮಾನವಾಗಿ ಕುಡಿಯಬೇಕೆಂದು ಅರ್ಥವಲ್ಲ.

(ಜೆ.ಹೆಚ್. ಪಟೇಲ್, ವಿಧಾನಸಭೆ ಸೆಪ್ಟೆಂಬರ್ 14, 1983)

## ಕೇಂದ್ರ ಕೈಹಾಕಲಿ

ಜೆ.ಹೆಚ್. ಪಟೇಲ್ (ಬೃಹತ್ ಕೈಗಾರಿಕೆ ಮಂತ್ರಿ): ನಾವು ಪಾನನಿರೋಧವನ್ನು ಜಾರಿಗೆ ತರಲು ಸಿದ್ಧರಿದ್ದೇವೆ. ಆದರೆ ಅದೇ ಕಾಲಕ್ಕೆ ನೆರೆ ರಾಜ್ಯಗಳು- ಉದಾಹರಣೆಗೆ ತಮಿಳುನಾಡು, ಆಂಧ್ರ, ಮಹಾರಾಷ್ಟ್ರ - ಇವುಗಳು ಪಾನ ನಿರೋಧ ತರದಿದ್ದರೆ ನಮ್ಮ ಸ್ಥಿತಿಯ ಗತಿ ಏನು? ನಮಗೆ ಬರುವ ಆದಾಯವೆಲ್ಲಾ ಆ ರಾಜ್ಯಗಳಿಗೆ ಹರಿದು ಹೋಗುತ್ತದೆ. ಇದರೊಂದಿಗೆ ಕಾನೂನು ಸ್ಥಿತಿ ಏನಾಗುತ್ತದೆ ಯೋಚಿಸಿ. ಆದುದರಿಂದ ಪಾನನಿರೋಧವನ್ನು ನಮ್ಮ ರಾಜ್ಯದಲ್ಲಾಗಲೀ, ಉಳಿದ ರಾಜ್ಯಗಳಲ್ಲಾಗಲೀ, ಇಡೀ ದೇಶದಲ್ಲಾಗಲೀ ತರುವುದಿದ್ದರೆ ಕೇಂದ್ರ ಸರ್ಕಾರವೇ ಇದಕ್ಕೆ ಕೈ ಹಾಕುವುದು ಸೂಕ್ತ.

(ಜೆ.ಹೆಚ್. ಪಟೇಲ್, ವಿಧಾನಸಭೆ ಫೆಬ್ರವರಿ 22, 1985)

ಸಂದರ್ಭ: ಸದನದಲ್ಲಿ ಹೆಂಡ, ಸಾರಾಯಿ ಮತ್ತಿತರ ಅಂಗಡಿಗಳು ಜನವಸತಿ ಪ್ರದೇಶಗಳಲ್ಲಿ ಹೆಚ್ಚುತ್ತಿರುವುದನ್ನು ವಿರೋಧಿಸಿ ಸದನದಲ್ಲಿ ಪಕ್ಷಾತೀತವಾಗಿ ಚರ್ಚೆ ನಡೆದಿತ್ತು. ಅಂದಿನ ಪೌರಾಡಳಿತ ಸಚಿವರನ್ನು ಮದ್ಯದಂಗಡಿಗಳು ಎಲ್ಲಿರಬೇಕು ಎಂಬುದನ್ನು ಖಚಿತವಾಗಿ, ಸ್ಪಷ್ಟಪಡಿಸಿ ಎಂದು ಸದಸ್ಯರುಗಳು ಒತ್ತಾಯಿಸಿದಾಗ ಪ್ರತಿ ಪಕ್ಷದ ಶಾಸಕ ಜೆ.ಹೆಚ್. ಪಟೇಲರು ಹೇಳಿದ್ದು ಹೀಗೆ:

ಇಲ್ಲಿ ಬೇಡ, ಅಲ್ಲಿ ಬೇಡ, ಬಜಾರ್‌ನಲ್ಲಿ ಬೇಡ, ಸಂಸಾರಮಂದಿರಗಳು ಇರುವ ಕಡೆ ಬೇಡ. ಇವೆಲ್ಲವೂ ಒಪ್ಪತಕ್ಕ ಅಂಶಗಳೇ. ಸ್ವಾಮಿ ಸಚಿವರೇ, ಅವು (ಮದ್ಯದಂಗಡಿಗಳು) ಎಲ್ಲಿರಬೇಕೆನ್ನುವುದು ತಮಗೆ ಚೆನ್ನಾಗಿ ಗೊತ್ತಿರುತ್ತದೆ. ಅವು ಎಲ್ಲೆಲ್ಲಿದ್ದರೆ ಮಾತ್ರ ಚೆನ್ನವೋ ಅಲ್ಲಿ ಮಾತ್ರ ಇರಲಿ ಬಿಡಿ.

(ಜೆ.ಹೆಚ್. ಪಟೇಲ್ (ವಿಧಾನ ಸಭೆ ಪ್ರತಿಪಕ್ಷದ ಶಾಸಕ) ಜುಲೈ 15, 1978)

## ಕುಡುಕರ ಖಾತೆ ಎಂದರೇನು

ಮಾನ್ಯ ಅಧ್ಯಕ್ಷರೇ... ವಿಧಾನ ಸಭೆ ಮತ್ತು ವಿಧಾನ ಪರಿಷತ್ತುಗಳೆರಡರಲ್ಲೂ ಅಬಕಾರಿ ಖಾತೆಯ ಪ್ರಸ್ತಾಪ ಬಂದಾಗಲೆಲ್ಲಾ ಕುಡುಕರ ಖಾತೆ ಎಂಬ ಮಾತು ಕೇಳಿಬರುತ್ತದೆ. ದೇಶದ ಯಾವುದೇ ಸರ್ಕಾರದಲ್ಲೂ ಹೀಗೇ ಕುಡುಕರ ಖಾತೆ ಎನ್ನುವ ಇಲಾಖೆ ಇಲ್ಲ. ಸಮಾಜದಲ್ಲಿನ ವಾಸ್ತವ ಸ್ಥಿತಿಯನ್ನು ದಯಮಾಡಿ ಗಣನೆಗೆ ತೆಗೆದುಕೊಂಡು ಪ್ರಾಮಾಣಿಕವಾಗಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸುವಂತೆ ಮಾನ್ಯ ಶಾಸಕರಲ್ಲಿ ನಾನು ಪ್ರಾರ್ಥಿಸಿಕೊಳ್ಳುತ್ತೇನೆ. ನಮ್ಮ ಸಮಾಜದಲ್ಲಿ ಕುಡಿಯುವುದನ್ನು ತಪ್ಪಿಸುವುದು ಬಹು ಕಷ್ಟ. ಮಹಾತ್ಮಾಗಾಂಧೀಜಿಯವರು ಈ ದುಶ್ಚಟವನ್ನು ಸಮಾಜದಿಂದ ತೆಗೆದು ಹಾಕಲು ಅಪಾರ ಪ್ರಯತ್ನ ನಡೆಸಿದರು. ಆದರೆ ಅದು ಸಾಧ್ಯವಾಗಲಿಲ್ಲ. ಸರ್ಕಾರ ಇಂದಿನ ಪರಿಸ್ಥಿತಿಯಲ್ಲಿ ಜನರ ಆರೋಗ್ಯದತ್ತ ಗಮನ ನೀಡಿ, ಒಳ್ಳೆಯ ಪಾನೀಯ ಸಿಗುವಂತೆ ಮಾಡಲು ಶಕ್ತವಾದಲ್ಲಿ ಅದೇ ದೊಡ್ಡ ಕೆಲಸ.

(ಜೆ.ಹೆಚ್. ಪಟೇಲ್, ವಿಧಾನಸಭೆ, ಫೆಬ್ರವರಿ 28, 1984)

## ಅಕ್ಕಪಕ್ಕದಲ್ಲಿ ಇಲ್ಲದ ಪಾನನಿರೋಧ ನೀತಿ

**ವೇದಾಂತ ಹೆಮ್ಮಿಗೆ :** ಮಾನ್ಯ ಮಂತ್ರಿಗಳಾದ ಪಟೇಲರು ದೇವಾಲಯಗಳ ಸಮೀಪ ಮದ್ಯ ಮಾರಾಟ ನಡೆಯದಂತೆ ನೋಡಿಕೊಳ್ಳುವ ಭರವಸೆ ಕೊಟ್ಟಿದ್ದೇನೋ ನಿಜ. ಆದರೆ ಹೆಂಡ-ಸಾರಾಯಿ ಬೇಕೂಂದರೆ ದೇವಸ್ಥಾನಗಳ ಹತ್ತಿರ ಸಮೃದ್ಧಿಯಾಗಿ ಸಿಗುತ್ತಲ್ಲಾ ಸ್ವಾಮಿ.. ಹೇಳಿ ಏನು ಮಾಡೋದು.

**ಜೆ.ಹೆಚ್. ಪಟೇಲರು (ಕೈಗಾರಿಕೆ ಸಚಿವರು) :** ... ದೇವರ ವಿಚಾರ ಎತ್ತಿದ್ದರಿಂದ ಹೇಳುತ್ತೇನೆ.. ನಮ್ಮಲ್ಲಿ ಕೆಲವು ಪಂಥಗಳಿವೆ. ಇವರು ದೇವರನ್ನು ಹೆಂಡ, ಮಾಂಸಗಳೊಂದಿಗೆ ಆರಾಧಿಸುತ್ತಾರೆ. ಅದು ಅವರ ನಂಬಿಕೆ. (ಇಂಗ್ಲೀಷಿನಲ್ಲಿ) ಒಂದು ಮಾತಿದೆ. ಜನಕ್ಕೆ ಯಾವ ರೀತಿ ತಮ್ಮದೇ ಆದ ನಂಬಿಕೆ, ನೆಚ್ಚಿಕೆ, ಶ್ರದ್ಧೆ ಹೇಗೆ ಮುಖ್ಯವೋ, ಅದೇ ರೀತಿ ಮೈಮರೆಸುವ, ಆನಂದ ಪರವಶತೆ ತರುವ ಇಲ್ಲವೇ ಅಮಲೇರಿಸುವ ಚೇತನವೂ ಮುಖ್ಯ. ಕ್ರಾಂತಿಯ ಸಮಾಜ ಚೈನಾದಲ್ಲಿ ಗುಡಿಗಳನ್ನು ಮುಚ್ಚಿದರೂ ಅಫೀಮು ಸೇವನೆ ಮಾತ್ರ ನಿಲ್ಲಿಸಲಿಲ್ಲ. ದೇವಾಲಯ, ಬೌದ್ಧ ದೇವಾಲಯ, ಮಸೀದಿ ಎಲ್ಲಾ ಮುಚ್ಚಿಸಿದಿರಿ, ಅಫೀಮು ಯಾಕೆ ಬಂದ್ ಮಾಡಲಿಲ್ಲ ಎಂದು ಕೇಳಿದ್ದಕ್ಕೆ ಅವರು ಹೇಳಿದ್ದು.. ಮನುಷ್ಯ ಬದುಕಲು ಯಾವುದಾದರೊಂದು ಅಮಲು ಬೇಕೇ ಬೇಕು..

ಕೆ.ಹೆಚ್ ಪಾಟೀಲ್: ಕೆಲವರಿಗೆ ಅಧಿಕಾರದ ಅಮಲು ಆಗಬಹುದು.

ಜೆ.ಹೆಚ್. ಪಟೇಲರು (ಕೈಗಾರಿಕೆ ಸಚಿವರು): ಒಬ್ಬೊಬ್ಬರಿಗೆ ಒಂದೊಂದು ವಸ್ತು ಪ್ರಿಯ. ಒಬ್ಬರಿಗೆ ಧರ್ಮವಾದರೆ, ಮತ್ತೊಬ್ಬರಿಗೆ ಸಾರಾಯಿ.. ಕೆಲವರಿಗೆ ಏಕಕಾಲಕ್ಕೆ ಎರಡು ಮೂರು ವಸ್ತುಗಳು.

ಕೆ.ಹೆಚ್ ಪಾಟೀಲ್ : ಇವೆಲ್ಲಾ ಫಜೀತಿ ವಿಷಯ. ಉದಾಹರಣೆಗೆ ಮಾನ್ಯ ಪಟೇಲರನ್ನು ಮೆಚ್ಚಿಸುವವರು ಅವರಿಗೆ ಯಾವುದು ಪ್ರಿಯ ಎನ್ನುವುದನ್ನು ಹುಡುಕುತ್ತಾರೆ. ಇದು ಬಿಡಿ. ಈ ಎಲ್ಲ ಸಮಸ್ಯೆಗಳನ್ನು ಪರಿಹರಿಸಲು ಕೇಂದ್ರ ಸರ್ಕಾರದ ಸಮಾಜ ಕಲ್ಯಾಣ ಖಾತೆ ಸಚಿವೆ ಶ್ರೀಮತಿ ಮರಗತಮ್ ಚಂದ್ರಶೇಖರ್‌ರವರು ಒಂದು ಘೋಷಣೆ ಮಾಡಿದ್ದಾರೆ. ಯಾವ ರಾಜ್ಯ ಪಾನನಿರೋಧ ಜಾರಿಗೆ ತರುತ್ತದೋ ಅಂತಹ ರಾಜ್ಯಗಳಿಗೆ ಪರಿಹಾರ ಕೊಡಲಿದ್ದಾರಂತೆ. ಜನತಾ ಪಕ್ಷ ಅಧಿಕಾರಕ್ಕೆ ಬರುವಾಗ ಮಹಾತ್ಮಾ ಗಾಂಧೀಜಿಯವರ ತತ್ವಗಳನ್ನು ಅನುಸರಿಸುವ ವಚನ ನೀಡಿತ್ತು. ಈ ತತ್ವವನ್ನು ಅನುಸರಿಸುವಿರಾ? ಕೇಂದ್ರ ನೀಡುವ ಪರಿಹಾರ ಪಡೆದು ಪಾನನಿರೋಧ ತರಬಲ್ಲಿರಾ?

ಜೆ.ಹೆಚ್. ಪಟೇಲ್ (ಕೈಗಾರಿಕೆ ಸಚಿವರು): ವಿಷಯ ಬಹು ಆಳವಾಗಿ ಚರ್ಚೆಯಾಗುತ್ತಿದೆ.. ಮಹಾತ್ಮಾ ಗಾಂಧೀಜಿಯವರ ಸಿದ್ಧಾಂತವನ್ನು ಒಪ್ಪಿಕೊಂಡು ನಾವು ಕೈಗಾರಿಕಾ ನೀತಿ, ಶಿಕ್ಷಣ ನೀತಿ ಮತ್ತಿತರ ನೀತಿಗಳನ್ನು ರೂಪಿಸುತ್ತಿದ್ದೇವೆ. ಈಗ ಮಹಾತ್ಮಾ ಗಾಂಧಿಯವರ ಫೋಟೋ ಪಕ್ಕದಲ್ಲಿ ನೆಹರೂರವರ ಫೋಟೋವನ್ನು ಇಟ್ಟುಕೊಂಡಿದ್ದೇವೆ. ನೆಹರೂರವರು ಮಾಡಿದ ಕೆಲಸಕ್ಕಿಂತ ನಾನು ಯಾವುದೇ ಕೆಟ್ಟ ಕೆಲಸ ಮಾಡಿಲ್ಲ...

ಬಿ.ಎಂ. ಇದಿನಬ್ಬ: ಸನ್ಮಾನ್ಯ ಸಭಾಧ್ಯಕ್ಷರೇ, ಮಾನ್ಯ ಅಬಕಾರಿ ಮಂತ್ರಿಗಳು ನಾನು ಕೆಲಸ ಮಾಡುವಾಗ ಯಾವುದೇ ಆಮಿಷಕ್ಕೆ ಒಳಗಾಗಿಲ್ಲ. ಜಾಗರೂಕತೆಯಿಂದ ಕೆಲಸ ಮಾಡಿದ್ದೇನೆ ಎಂದು ಹೇಳಿದ್ದಾರೆ. ಮಾನ್ಯ ಕೆ.ಹೆಚ್. ಪಾಟೀಲರು ಹೇಳುವ ಹಾಗೆ ಮಹಾತ್ಮಾ ಗಾಂಧೀಜಿಯವರ ತತ್ವಕ್ಕೆ ನೀವು ಬದ್ಧರಾಗಬೇಕು. ಅದಕ್ಕೆ ಬೇರೆ ಬೇರೆ ರೂಪು ಕೊಟ್ಟು ಸಿದ್ಧಾಂತವನ್ನು ಹೇಳತಕ್ಕದ್ದು ಸರಿಯಲ್ಲ. ನಮ್ಮ ನೆರೆರಾಜ್ಯಗಳಾದ ತಮಿಳು ನಾಡು, ಕೇರಳ ರಾಜ್ಯಗಳಲ್ಲಿ ಪಾನನಿರೋಧ ಹಂತ ಹಂತವಾಗಿ ಜಾರಿಗೆ ಬಂದಿದೆ. ಪರಿಶಿಷ್ಟರು ಮತ್ತು ಬಡಜನರು ಕುಡಿಯುವುದನ್ನು ತಪ್ಪಿಸಲು ಸೂಕ್ತ ಕ್ರಮ ಏನು ತೆಗೆದುಕೊಳ್ಳಬಲ್ಲಿರಿ ಹೇಳಿ.

ರಮೇಶ್ ಸಿ. ಜಿಗಜಿಣಗಿ (ಅಬಕಾರಿ ಸಚಿವರು) : ಕೇರಳ ಮತ್ತು ತಮಿಳು ನಾಡುಗಳಲ್ಲಿ ಪಾನನಿರೋಧವನ್ನು ಹಂತ ಹಂತವಾಗಿ ತರಲು ಹೆಂಡ ಮಾರಾಟವನ್ನು ಹಂತ ಹಂತವಾಗಿ ತೆಗೆಯುತ್ತಿದ್ದಾರೆ ಎಂಬ ವರದಿ ಸರಿ ಇಲ್ಲ. ಈ ರಾಜ್ಯಗಳು ಅಂತಹ ಕ್ರಮ ಕೈಗೊಂಡಿಲ್ಲ. ಆದುದರಿಂದ ಪಾನ ನಿರೋಧವನ್ನು ಕರ್ನಾಟಕದಲ್ಲಿ ಮಾತ್ರ ಜಾರಿಗೆ ತರಬೇಕೆಂದು ನಿರ್ಣಯ ತೆಗೆದುಕೊಂಡಿದ್ದೇ ಆದಲ್ಲಿ ಅದು ಕಾರ್ಯ ರೂಪಕ್ಕೆ ಬರಲು ಸಾಧ್ಯವಾಗಲಾರದು. ಅಕ್ಕಪಕ್ಕದ

ರಾಜ್ಯಗಳು ಇಂತಹ ನಿರ್ಣಯವನ್ನು ಏಕಕಾಲಕ್ಕೆ ತೆಗೆದುಕೊಂಡಲ್ಲಿ ಮಾತ್ರ ಪಾನನಿರೋಧ ನೀತಿ ಸಫಲವಾಗಬಲ್ಲದು... ಇಲ್ಲದಿದ್ದಲ್ಲಿ ನಷ್ಟ ಅನುಭವಿಸುವವರರು ನಾವಷ್ಟೆ.

(ವಿಧಾನಸಭೆ ಕಲಾಪ, ಆಗಸ್ಟ್ 22, 1985)

## ಚುನಾವಣೆಯಲ್ಲಿ ಹೆಂಡದ ಹೊಳೆ

**ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ):** ಮಾನ್ಯ ಸಭಾಪತಿಗಳೇ ಇಡೀ ಜಗತ್ತಿನಲ್ಲಿ ಇವತ್ತು ಯಾವ ದೇಶದವರಿಗೂ ಕೂಡ ಪಾನನಿಷೇಧ ಮಾಡಲಿಕ್ಕೆ ಸಾಧ್ಯವಾಗಿಲ್ಲ. ಮಿಡ್ಲ್ ಈಸ್ಟ್‌ನ ದೇಶವೊಂದನ್ನು ಬಿಟ್ಟು ಯಾವುದೇ ದೇಶದಲ್ಲೂ ಇಂದು ಪಾನನಿಷೇಧ ಇಲ್ಲ. ಅಲ್ಲಿಯವರು ಕೂಡ ಶ್ರೀಮಂತರು. ಅವರುಗಳು ತಮ್ಮ ದ್ವೀಪ ಬಿಟ್ಟು ವಿಮಾನದಲ್ಲಿ ಪಕ್ಕದ ದ್ವೀಪಕ್ಕೆ ಬಂದು ಕುಡಿದು ವಾಪಸ್ ಹೋಗುತ್ತಾರೆ. ಆದುದರಿಂದ ಸತ್ಯಾಂಶ ಏನೆಂದರೆ ಜಗತ್ತಿನಲ್ಲಿ ಯಾವುದೇ ದೇಶ ಪ್ರಾಹಿಬಿಷನ್ ಇಂಟ್ರಡ್ಯೂಸ್ ಮಾಡಿ ಸಕ್ಸಸ್ ಆಗಲಿಲ್ಲ. ಆ ಕಾರಣದಿಂದ ಸಂಪೂರ್ಣ ಪಾನನಿಷೇಧ ಸರ್ಕಾರದ ಕಾನೂನಿನಿಂದ ಆಗುವುದಿಲ್ಲವೆಂದು ಹೇಳುತ್ತೇನೆ.

ಇವತ್ತು ಹಳ್ಳಿಗಾಡಿನ ಸ್ಥಿತಿ ಏನಾಗಿದೆ ಎಂದರೆ ಅವರು ಸಾರಾಯಿ ಎಂಬ ವಿಷವನ್ನು ಕುಡಿಯುತ್ತಿದ್ದಾರೆ. ಇದರಿಂದಾಗಿ ಕೆಲವರು ದುರ್ಬಲತೆಗೆ ಬಲಿಯಾಗಿದ್ದಾರೆ. ಮತ್ತೆ ಕೆಲವರು ಸಂಜೆ ಮೇಲೆ ಕೈಗೇ ಸಿಗುವುದಿಲ್ಲ. ಹಳ್ಳಿಗಾಡಿನ ಜನರನ್ನು ಈ ರೋಗಗಳ ಕಪಿಮುಷ್ಟಿಯಿಂದ ಬಿಡಿಸಬೇಕೆಂಬುದು ನ್ಯಾಯಯುತವಾದ ಬೇಡಿಕೆ. ಇದು ಎಲ್ಲಾ ಸರ್ಕಾರಗಳ ಕರ್ತವ್ಯ ಆಗಬೇಕಾಗಿದೆ.

**ರಾಮಚಂದ್ರಗೌಡ:** ಪಾನನಿಷೇಧವನ್ನು ಕಾನೂನಿನಿಂದ ಮಾಡುವುದಕ್ಕಾಗುವುದಿಲ್ಲ ಎಂಬುದು ನಿಜ. ನಾವೆಲ್ಲರೂ ಚುನಾವಣಾ ಸಂದರ್ಭದಲ್ಲಿ ಎಲ್ಲಾ ಮಕ್ಕಳಿಗೂ ಕುಡಿಯುವುದಕ್ಕೆ ಟ್ರೇನಿಂಗ್ ಕೊಟ್ಟುಬಿಟ್ಟಿದ್ದೇವೆ. ಚುನಾವಣಾ ಸಂದರ್ಭದಲ್ಲಿ ಒಂದು ಊರಲ್ಲಿ ಹೈಸ್ಕೂಲು ಮಕ್ಕಳು ಕೈಯಲ್ಲಿ 4-5 ಸ್ಯಾಚೆಟ್ ಹಿಡಿದುಕೊಂಡು ಓಡಾಡುತ್ತಿದ್ದರು. ಶಾಸಕನಾಗಿ ನನಗೆ ಇದನ್ನು ಕಂಡು ಅವಮಾನ ಆಗುವಂತಾಯಿತು.

**ಜೆ.ಹೆಚ್. ಪಟೇಲ್:** ನನಗೆ ಅಂಥದ್ದು ಕಾಣಲಿಲ್ಲ.

**ರಾಮಚಂದ್ರಗೌಡ:** ತಾವು ಆತ್ಮಸಾಕ್ಷಿಯಾಗಿ ಮಾತನಾಡಬೇಕು. ಆತ್ಮಸಾಕ್ಷಿ ಬಿಟ್ಟು ಮಾತನಾಡಬಾರದು. ರಾಜಕಾರಣಿಗಳು ಮಕ್ಕಳನ್ನು ಕಳೆದ ಚುನಾವಣಾ ಸಂದರ್ಭದಲ್ಲಿ ಹಾಳು ಮಾಡಿದಷ್ಟು ಬಹುಶಃ ಬೇರೆ ಯಾವ ಸಂದರ್ಭದಲ್ಲೂ ಮಾಡಿಲ್ಲ.

**ಜೆ.ಹೆಚ್. ಪಟೇಲ್:** ಅದು ನಿಜ. ಶ್ರೀ ರಾಮಚಂದ್ರಗೌಡರು ಹೇಳಿದ್ದು ನಿಜ. ಎಲ್ಲಾ ಪಾರ್ಟಿಯವರು ಈ ತರಹ ಮಾಡಿದ್ದಾರೆ. ಆದೂ ಶೇಷನ್ ಭಯ ಇದ್ದುದರಿಂದ ಸ್ವಲ್ಪ ಮಾನ ಮರ್ಯಾದೆ ಉಳಿಯಿತು. ಶೇಷನ್ ಭಯ ಇಲ್ಲದಿದ್ದರೆ ಈ ನಾಡಿನ ಮರ್ಯಾದೆ

ದ್ರೌಪದಿ ವಸ್ತ್ರಾಪಹರಣಕ್ಕಿಂತ ಹೆಚ್ಚಾಗಿ ಆಗಿ ಹೋಗುತ್ತಿತ್ತು. ನಿಜ. ಎಲ್ಲಾ ಪಾರ್ಟಿಯವರೂ ತಪ್ಪು ಮಾಡಿದ್ದೇವೆ. ನಾವು ಇದನ್ನು ನಿಲ್ಲಿಸಬೇಕು. ಕೊನೇಪಕ್ಷ ಇನ್ನು ಮುಂಬಾದರೂ ಈ ಸಾರಾಯಿ ಹಂಚುವುದರ ಬಗ್ಗೆ, ದುಡ್ಡು ಕೊಡುವುದರ ಬಗ್ಗೆ, ಚುನಾವಣೆಯಲ್ಲಿ ಮಸಲ್ ಪವರ್, ಮನಿ ಪವರ್ ಮತ್ತು ಲಿಕ್ಕರ್ ಈ ಉಪಯೋಗವನ್ನು ನಿಲ್ಲಿಸಿದರೆ ರಾಜಕಾರಣ ಅರ್ಧ ಶುದ್ಧವಾಗುತ್ತದೆ.

ಭ್ರಷ್ಟಾಚಾರದ ಮೂಲ ಇರುವದೇ ಅಲ್ಲಿ. ಭ್ರಷ್ಟಾಚಾರ ಎಲ್ಲಿ ಹುಟ್ಟುತ್ತದೆ ಎಂದು ಹುಡುಕುವುದು ಬೇಕಾಗಿಲ್ಲ. ಚುನಾವಣೆಯಲ್ಲೇ ಅದು ಹುಟ್ಟುತ್ತದೆ. ಆದ್ದರಿಂದ ಮಾನ್ಯ ವಿರೋಧ ಪಕ್ಷದ ನಾಯಕರು ಮತ್ತು ಮಹಿಳಾ ಸದಸ್ಯರು ಹೇಳಿರುವುದನ್ನು ಸರ್ಕಾರ ತೀವ್ರವಾಗಿ ಗಮನಿಸುತ್ತದೆ. ನಮ್ಮ ಎಕ್ಸೈಜ್ ಪಾಲಿಸಿ ಅನ್ನು ಅನೌನ್ಸ್ ಮಾಡುವಾಗ ಈ ಹಳ್ಳಿಗಾಡಿನ ಜನರನ್ನು ಮನಸ್ಸಿನಲ್ಲಿಟ್ಟುಕೊಳ್ಳುತ್ತೇವೆ. ಅಶೋಕ ಹೋಟೆಲ್‌ನಲ್ಲಿ ಕುಡಿದು ಸಾಯುವವರ ಬಗ್ಗೆ ನಾವೇನೂ ವರಿ ಮಾಡಬೇಕಾಗಿಲ್ಲ. ಅವರು ಕುಡಿದುಕೊಳ್ಳಲಿ. ಬಡಜನರು ಏನು ನರಕಕ್ಕೆ ಬಿದ್ದು ಒದ್ದಾಡುತ್ತಿದ್ದಾರೆ ಅವರನ್ನು ಉಳಿಸುವ ಬಗ್ಗೆ ಇವತ್ತು ನಾವು ತೀವ್ರವಾಗಿ ಆಲೋಚನೆ ಮಾಡಿದ್ದೇವೆ. ಪಾನನಿಷೇಧದ ಕೆಲವಾದರೂ ಕ್ರಮಗಳನ್ನು ತರುತ್ತೇವೆ.

(ವಿಧಾನ ಪರಿಷತ್ ಕಲಾಪ, ಡಿಸೆಂಬರ್ 31, 1994)

## ಹಂತ ಹಂತವಾಗಿ ಪಾನನಿಷೇಧ

ಶ್ರೀಮತಿ ಪ್ರಮೀಳ ನೇಸರ್ಗಿ: ಹಪ್ಪಳ ಸಂಡಿಗೆ ಮಾಡುವುದಕ್ಕೆ ಬಹುರಾಷ್ಟ್ರೀಯ ಕಂಪನಿಗಳು ಬನ್ನಿ ಎಂದು ಯಾರೂ ಎಂದೂ ಕೂಡ ಹೇಳಿಲ್ಲ. ನಮ್ಮ ಸಣ್ಣ ಉದ್ದಿಮೆಗಳನ್ನು ನಮ್ಮ ದೇಶದವರೇ ಹೆಚ್ಚು ಜನ ನಡೆಸುತ್ತಿದ್ದಾರೆ. ಅವರು ಹಾಳಾಗುವುದಕ್ಕೆ ನಮ್ಮ ಪಕ್ಷ ಎಂದಿಗೂ ಬಿಡುವುದಿಲ್ಲ.

ಅಧ್ಯಕ್ಷರು: ತಿರುಪತಿಯಲ್ಲಿ ಚೌರ ಮಾಡಿಸಬೇಕೆಂದರೆ ಅವನು ಹಿಂದಿನಿಂದ ಮಾಡುತ್ತಾನೋ ಮುಂದಿನಿಂದ ಮಾಡುತ್ತಾನೋ, ಇರುವ ಕೂದಲೆಲ್ಲಾ ತೆಗೆಯುತ್ತಾನೆ, ಅಗ್ರಿಮೆಂಟ್ ಮಾಡಿ ಅವನನ್ನು ಈ ದೇಶಕ್ಕೆ ಕರೆದ ಮೇಲೆ ಹಪ್ಪಳಕ್ಕೆ ಬರುತ್ತಾನೋ, ಚಿಪ್ಸ್‌ಗೇ ಬರುತ್ತಾನೋ ಅವನು ಬಂದಾಯಿತು, ನಮ್ಮ ಕತೆ ಮುಗಿಯಿತು, ಹೋಗಿ ಮುಂದಕ್ಕೆ.

ಎಲ್.ಆರ್. ಶಿವರಾಮೇಗೌಡ: ಸಹೋದರಿ ಪ್ರಮೀಳಾ ನನಗೆ ಲಾಯರ್ ಆದ ಕಾರಣ ಅವರ ಕಾನೂನು ರೀತಿಯ ವಾದಕ್ಕೆ ನಾನು ಗೌರವ ಕೊಡುತ್ತೇನೆ. ನಾನು ಏನು ಹೇಳಿದೆ ಎಂದರೆ ಒಂದು ಕಡೆ ಬಹುರಾಷ್ಟ್ರೀಯ ಕಂಪನಿಗಳಿಗೆ ಸಪೋರ್ಟ್ ಕೊಡುವುದು, ಇನ್ನೊಂದು ಕಡೆ ಅವು ಬೇಡ ಎಂದು ಹೇಳುವುದು ಸರಿಯಲ್ಲ ಎಂದು ಹೇಳಿದೆ ಅಷ್ಟೆ. ಇವತ್ತು ಪಾನನಿಷೇಧವನ್ನು ಹಂತಹಂತವಾಗಿ ತರುತ್ತೇವೆನ್ನುತ್ತೀರಿ. ಜೆ.ಹೆಚ್. ಪಟೇಲರು ಇದಕ್ಕೆಲ್ಲಾ ನಮಗೆ ಸಪೋರ್ಟ್ ಕೊಡುತ್ತಾರೆಂದು ನಾವು ಅಂದುಕೊಂಡಿದ್ದೇವೆ. ಮೊದಲಿಗೆ ಶರಾಬು, ಆಮೇಲೆ ಐಎಂಎಫ್ ನಿಷೇಧಿಸಬೇಕೆಂದು ಇಟ್ಟುಕೊಂಡಿದ್ದೀರಿ.

ಜೆ.ಹೆಚ್. ಪಟೇಲ್: ನಮಗಷ್ಟೆ ಆದಾಯದ ಕೊರತೆಯಾಗುತ್ತದೆ ಪಾನನಿಷೇಧ ತರುವುದರಿಂದ ಮತ್ತು ಪಾನ ನಿಷೇಧ ತರದೇ ಇದ್ದರೆ ಸಮಾಜದಲ್ಲಿ ಯಾವ ರೀತಿಯಿಂದ ಹಳ್ಳಿಗಾಡಿನಲ್ಲಿರುವ ಬಡವರ ಆರೋಗ್ಯ ಕೆಡುತ್ತದೆ ಇದನ್ನೆಲ್ಲಾ ಲೆಕ್ಕಹಾಕಿ, ಹಂತಹಂತವಾಗಿ ತರುತ್ತೇವೆಂದು ಹೇಳಿದ್ದೇವೆ. ಸಾರಾಯಿಯನ್ನು ನಿಷೇಧಿಸುವುದರಿಂದ ಹಳ್ಳಿಗಾಡಿನಲ್ಲಿ ಬಹಳ ಮಟ್ಟಿಗೆ ಜನರ ಆರೋಗ್ಯ ಸುಧಾರಿಸುತ್ತದೆ. ಹಾಲಿ ಈಗ ಈ ಬಾಬ್ತುಗಳಿಂದ ಎಷ್ಟು ಕೋಟಿ ಬರುತ್ತದೆಯೋ ಅಷ್ಟು ಕೋಟಿಯನ್ನು ಆರೋಗ್ಯ ಸುಧಾರಣೆಗಾಗಿ ಖರ್ಚು ಮಾಡಬೇಕಾಗುತ್ತದೆ. ಇವತ್ತಿಗೂ 6 ಗಂಟೆ ಆದಮೇಲೆ ಹಳ್ಳಿಗಳಿಗೆ ಹೋಗುವುದೇ ಕಷ್ಟವಾಗಿದೆ.

ನನ್ನ ಅನುಭವದ ಮೇಲೆ ಹೇಳುತ್ತಿದ್ದೇನೆ. ಹಂತ ಹಂತವಾಗಿ ನಿಷೇಧವನ್ನು ತರುವುದರಿಂದ ಆರೋಗ್ಯ ಸುಧಾರಣೆಯಾಗುತ್ತದೆ. ಆದರೆ ಬೇರೆ ವಲಯದಿಂದ ಆ ಆದಾಯವನ್ನು ಹೇಗೆ ಭರಿಸಬೇಕೆಂಬುದನ್ನು ಸರಕಾರ ಯೋಚನೆ ಮಾಡುತ್ತಿದೆ.

ಕೆ.ಎನ್. ನಾಗೇಗೌಡ: ಬಹಳ ಪ್ರಾಮುಖ್ಯವಾದ ವಿಚಾರವನ್ನು ಇಲ್ಲಿ ಹೇಳುತ್ತೇನೆ. ಇವತ್ತಿನ ಡೆಕ್ಕನ್ ಹೆರಾಲ್ಡ್ ಮತ್ತು ಪ್ರಜಾವಾಣಿಯ ಎಡಿಟೋರಿಯಲ್‌ನಲ್ಲಿ ನೋಡಿ. ನಮ್ಮ ಮುಖ್ಯಮಂತ್ರಿಗಳು ಜೂನ್ 1 ರಿಂದ ಪಾನನಿಷೇಧವನ್ನು ತರುತ್ತೇವೆಂಬ ಹೇಳಿಕೆ ಮೇಲೆ ಒಂದು ಎಡಿಟೋರಿಯಲ್ ಬರೆದಿದ್ದಾರೆ. ಸರಕಾರ ಬಹಳ ಎಚ್ಚರಿಕೆಯಿಂದ ಲೆಕ್ಕಹಾಕಿ ಹೆಜ್ಜೆ ಇಡಬೇಕೆಂದು ತಿಳಿಸಿದ್ದಾರೆ. ಇದನ್ನು ಯೋಚನೆ ಮಾಡಬೇಕು. ಬಹಳ ಕಾಷಸ್ ಆಗಿ ಡೀಲ್ ಮಾಡಬೇಕು. ಫೈನಾನ್‌ಷಿಯಲ್ ಆಸ್ಪೆಕ್ಟ್ಸ್ ಒಂದೇ ಅಲ್ಲ. ಎಂಟೈರ್ ಸ್ಟೇಟ್ ಎಕ್ಸ್‌ಚೆಕರ್ ಒಂದೇ ಅಲ್ಲ ಸ್ಟೇಟ್ ಆಕ್ಟಿವಿಟೀಸ್ ಎಷ್ಟು ಡೆಡ್ ಆಗುತ್ತದೆಂಬುದರ ಬಗ್ಗೆ ತುಂಬಾ ಸೀರಿಯಸ್ ಆಗಿ ಯೋಚನೆ ಮಾಡಬೇಕೆಂಬುದನ್ನು ನಾನು ಪರ್ಸನಲ್ಲಾಗಿ ಸರಕಾರಕ್ಕೆ ಅಪೀಲ್ ಮಾಡುತ್ತೇನೆ.

ಜೆ.ಹೆಚ್. ಪಟೇಲ್: ಪಾನ ನಿಷೇಧದ ಬಗ್ಗೆ ಹಿಂದಿನ ಸದನದಲ್ಲಿ ಕೆ.ಹೆಚ್. ಶ್ರೀನಿವಾಸ್ ಅವರು ಒಂದು ಖಾಸಗಿ ನಿರ್ಣಯ ತಂದರು. ಆಗ ಸಾಕಷ್ಟು ಎತ್ತರದ ಮಟ್ಟದಲ್ಲಿ ಚರ್ಚೆಯಾಯಿತು. ಚರ್ಚೆಯಾದ ಮೇಲೆ ಆಗ ಸದನದಲ್ಲಿ ಇದಕ್ಕೊಂದು ಸಮಿತಿ ಮಾಡಬೇಕು ಎಂದು ನಿರ್ಣಯಿಸಲಾಯಿತು. ಏಕೆಂದರೆ ಪೂರ್ಣ ಪಾನನಿಷೇಧ ಪರವಾಗಿ ವಾದ ಮಾಡುವುದು ಕಷ್ಟವಾಗುತ್ತದೆ. ಪಾನನಿಷೇಧವನ್ನು ಕರಾರುವಾಕ್ಕಾಗಿ ಜಾರಿಗೆ ಕೊಟ್ಟಿರತಕ್ಕಂತಹ ಸರಕಾರ ಈ ಜಗತ್ತಿನಲ್ಲಿ ಎಲ್ಲೂ ಇಲ್ಲ. ಈ ವಿಷಯದ ಬಗ್ಗೆ ವೈಜ್ಞಾನಿಕವಾಗಿ ಮಾನ್ಯ ನಾಗೇಗೌಡರು ಹೇಳಿದ ಹಾಗೆ ಆರ್ಥಿಕ ಚಿಂತನೆ, ಸಮಾಜದ ಆರೋಗ್ಯ, ಮತ್ತು ಈಗಿರತಕ್ಕಂತಹ ಬಡ ಕುಟುಂಬಗಳ ಮೇಲೆ ಆಗುತ್ತಿರತಕ್ಕಂತಹ ಅನಾಹುತ ಇವನ್ನೆಲ್ಲಾ ಒಟ್ಟಿಗೆ ಸೇರಿಸಿ ಅದರ ರೆಸಲ್ಯೂಷನ್ ಮೇಲೆ ಚರ್ಚೆ ಮಾಡೋಣ.

Alcoholism and smoking is being reduced voluntarily. ಇಂಟರ್ ನ್ಯಾಷನಲ್ ಏರ್ ಪೋರ್ಟ್‌ಗಳಿಗೆ ಹೋಗಿ. ಅಲ್ಲಿ ಸ್ಮೋಕಿಂಗ್ ಅಂಡ್ ನಾನ್ ಸ್ಮೋಕಿಂಗ್ ಜೋನ್ ಎಂದು ಮಾಡೇ ಮಾಡಿರುತ್ತಾರೆ. ಹಾಗಾಗಿ ತಾನಾಗಿ ಸ್ಮೋಕಿಂಗ್ ಕಡಿಮೆ ಆಗುತ್ತಿದೆ.

ಇವತ್ತು ಹೆಲ್ತ್ ಕಾನ್‌ಷಸ್‌ನೆಸ್ ಪ್ರಪಂಚದ ಎಲ್ಲಾ ಕಡೆ ಬರುತ್ತಿದೆ. ಆಲ್ಕೋಹಾಲ್ ಬಗ್ಗೆ one should be more educative. ಸರಕಾರ ಕಾನೂನು ಮಾಡಿ ತಡೆಗಟ್ಟಿದ್ದೇ ಆದಲ್ಲಿ ಅದು ಕಳ್ಳಭಟ್ಟಿಗೆ ಎಡೆಮಾಡಿಕೊಡುತ್ತದೆ. ಮತ್ತೊಂದು ಕ್ರೈಮ್ಸ್ ಆಗುತ್ತದೆ. ಅದರಿಂದ ಪ್ರಯೋಜನವಾಗುವುದಿಲ್ಲ. ಜನರನ್ನು ಎಜುಕೇಟ್ ಮಾಡಬೇಕು ಅದನ್ನು ಒಪ್ಪುತ್ತೇನೆ.

ಆರ್. ಕೃಷ್ಣಪ್ಪ: ಇವತ್ತು ಇಲ್ಲಿ ಚರ್ಚೆ ಮಾಡುತ್ತಿರತಕ್ಕಂತಹ ವಿಷಯ ಬಹಳ ಒಳ್ಳೆಯ ವಿಷಯ. ಬರೀ ಸರಕಾರ ಹಣ ಬೇಕು ಹಣ ಬೇಕು ಎಂದು ಜನರಿಗೆಲ್ಲಾ ವಿಷ ಕುಡಿಸಿ ಕೊಟ್ಟಾಗ ಅದರಿಂದಾಗತಕ್ಕಂತಹ ದುಷ್ಪರಿಣಾಮದ ಬಗ್ಗೆ ಚಿಂತನೆ ಮಾಡಬೇಕಾಗುತ್ತದೆ.

ಹಳ್ಳಿಗಾಡಿನಲ್ಲಿ 5 ಗಂಟೆಯಾದ ಮೇಲೆ ಶಾಸಕರೇ ಆಗಲೀ ಯಾರೇ ಆಗಲೀ ಗೌರವಸ್ಥರು ಹೊರಗೆ ಬರಲಾಗುವುದಿಲ್ಲ. ಹಿಂದೆ ನಮ್ಮ ಹಳ್ಳಿಗಳಲ್ಲಿ ವೀರಶೈವರ ಕಾಫಿ ಕ್ಲಬ್, ಉಡುಪಿ ಬ್ರಾಹ್ಮಣರ ಕಾಫಿ ಕ್ಲಬ್ ಎಂಬ ಈ ರೀತಿಯ ಬೋರ್ಡುಗಳನ್ನು ನೋಡುತ್ತಿದ್ದೆವು. ಈಗ ಮದ್ಯ ವಸ್ತುಗಳ ಮಾರಾಟಕ್ಕೆ ಮುಕ್ತವಾಗಿ ಲೈಸೆನ್ಸ್ ಮುಂದುವರೆದದ್ದೇ ಆದರೆ ಎಲ್ಲಿ ಹೋದರೂ ಬರೀ ರಾಜಕುಮಾರ್ ಬಾರ್, ತಿರುಮಲ ಲಿಕ್ಕರ್ಸ್, ವೆಂಕಟೇಶ್ವರ ವೈನ್ ಷಾಪ್ ಎನ್ನುವ ಹೆಸರಿನ ಬಾರುಗಳೇ ಕಾಣಿಸುತ್ತವೆ. ಇದರಿಂದಾಗಿ ಸಮಾಜದಲ್ಲಿ ಪ್ರತಿ ಸಂಸಾರದ ಮೇಲೂ ಅಪಾಯಕಾರಿ ಪರಿಣಾಮವಾಗುತ್ತಿದೆ. ಮದ್ಯಪಾನ ಮಾರಾಟವನ್ನು ಹಿಡಿತಕ್ಕೆ ತರುವ ವಿಷಯದಲ್ಲಿ ಸರಕಾರಕ್ಕೆ ಎಚ್ಚರಿಕೆ ಮತ್ತು ಬೆಂಬಲ ಕೊಡಬೇಕಾದದ್ದು ಶಾಸಕರಾದ ನಮ್ಮ ಕರ್ತವ್ಯ. ಎಲ್ಲೆಲ್ಲಿ ಅನಾಹುತ-ತೊಂದರೆ ಆಗುತ್ತದೆ, ಆಗ ಇದನ್ನು ನಿಲ್ಲಿಸುವುದಕ್ಕೆ ನಾವು ಮುಂದಾಗಬೇಕು. ಸರಕಾರ ಪಾನನಿಷೇಧವನ್ನು ತರಬೇಕೆಂದು ಏನು ಉದ್ದೇಶಿಸಿದೆ ಅದನ್ನು ತಂದರೆ ಈ ರಾಜ್ಯ ಸುಭಿಕ್ಷವಾಗುತ್ತದೆ. ಮದ್ಯವಸ್ತುಗಳ ಮಾರಾಟದಿಂದ ಬರತಕ್ಕಂತಹ ಹಣ ಮುಖ್ಯವಲ್ಲ. ಜನರ ಆರೋಗ್ಯದ ಬಗ್ಗೆ, ರಾಜ್ಯದ ಶಾಂತಿ ಬಗ್ಗೆ, ಆಡಳಿತದ ಬಗ್ಗೆ ಇಂದು ನಾವೆಲ್ಲ ಯೋಚಿಸಬೇಕಾಗಿದೆ.

ಅಧ್ಯಕ್ಷರು: ಪಾರ್ಟಿ ಮೀಟಿಂಗ್‌ನಲ್ಲಿ ಸೇರಿ ಒಂದು ಒಮ್ಮತದ ತೀರ್ಮಾನಕ್ಕೆ ಬನ್ನಿ.

(ವಿಧಾನಸಭೆ ಕಲಾಪ ಮಾರ್ಚ್ 2, 1996)

## "ಪಾನನಿಷೇಧ ರಾಷ್ಟ್ರೀಯ ನೀತಿ ಆಗಲಿ" ಪ್ರಧಾನಿಗೆ ಪತ್ರ

ಸಿದ್ಧರಾಮಯ್ಯ (ಉಪಮುಖ್ಯಮಂತ್ರಿ): ಪಾನನಿರೋಧದ ಬಗೆಗೆ ಒಂದು ರಾಷ್ಟ್ರೀಯ ನೀತಿ ಬೇಕು ಎಂಬ ಸದುದ್ದೇಶವೇ ಕರ್ನಾಟಕ ಸರ್ಕಾರದ್ದು. ಕೆಟ್ಟ ವಿಚಾರದ ಬಗ್ಗೆ ಜನರಿಗೆ ಜಾಗೃತಿ ತಿಳುವಳಿಕೆ ಕೊಡುವ ಕೆಲಸಾನೇ ಮಾಡಬಾರದು ಎಂದು ನಮ್ಮ ಉದ್ದೇಶವಲ್ಲ, ಕುಡಿಯುವುದು ತಪ್ಪಪ್ಪ, ಬಿಟ್ಟುಬಿಡ್ರಿ ಎಂದು ಹೇಳುತ್ತಲೇ ಬಂದಿದ್ದೇವೆ. ಸಿಗರೇಟ್ ಮೇಲೆ Smoking is injurious to Health ಎಂದು ಬರೆದಿದ್ದರೂ ಈ ಮಾತು ಎಷ್ಟು ಆಷಾಡಭೂತಿನೋ ಹಾಗೇ ಕುಡಿಯಬೇಡಿ ಎನ್ನುವುದು ಅಷ್ಟೇ, ಬರೇ ಶುಷ್ಕ ಬೋಧನೆ. ಈ ಎಚ್ಚರಿಕೆ ನಮ್ಮ ಆರೋಗ್ಯಕ್ಕೆ ಒಳ್ಳೆಯದು, ದೇಶಕ್ಕೆ ಒಳ್ಳೆಯದು, ಆದರೆ ಇದು ಕಾರ್ಯದಲ್ಲಿ

ಸಾಧ್ಯವಾಗೊಲ್ಲವೇ? ಎಲ್ಲ ರಾಜ್ಯಗಳಿಗೂ ಹೋಗಿಬಂದ ನನ್ನ ಅನುಭವದ ಮೇಲೆ ಇದನ್ನು ಹೇಳುತ್ತಿದ್ದೇನೆ. ಕುಡಿತ ಬೇಕೇ ಬೇಕು ಎಂದು ಯಾರೂ ವಾದ ಮಾಡುವುದಿಲ್ಲ. ಪಾನನಿಷೇಧದ ಬಗ್ಗೆ ಒಂದು ರಾಷ್ಟ್ರೀಯ ನೀತಿ ರೂಪಿಸಿ. ಇದು ನಮ್ಮ ವಾದ, ನಿಲುವು. ನಮ್ಮ ಸಹಕಾರ ಅದಕ್ಕೆ ಇದೆ.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾವೋತ್ಸೆತುಂಗ್‌ಗಿಂತ ಅಧಿಕೃತವಾಗಿ ಒಂದು ರಾಷ್ಟ್ರವನ್ನು ಆಳಿದವರು ಇನ್ನೊಬ್ಬರಿಲ್ಲ. ಮಾವೋತ್ಸೆತುಂಗೆಗೆ ಚೈನಾದಲ್ಲಿ ಪಾನನಿಷೇಧ ತರಬೇಕೆಂದು ಸಲಹೆ ಕೊಡುತ್ತಾರೆ. ಆಗ ಆತ ಏನು ಹೇಳುತ್ತಾನೆ ಅಂದರೆ ಈ ದೇಶದಲ್ಲಿ ಧರ್ಮವನ್ನು ಬ್ಯಾನ್ ಮಾಡಿದ್ದೇನೆ. Religion is also becoming a most powerful intoxicant. ಅದರ ಜೊತೆಗೆ ಇದನ್ನೂ ಬ್ಯಾನ್ ಮಾಡಿದರೆ the society will not contain ಅಂಥಾ ಚೈನಾದ ಮಾವೋತ್ಸೆತುಂಗೆಗೇ ಸಾಧ್ಯವಾಗದ ಪ್ರಾಹಿಬಿಶಿನ್ ವಾಜಪೇಯಿಯವರಿಂದಾಗುತ್ತದೆ ಎಂದು ನನಗೆ ಅನ್ನಿಸುವುದಿಲ್ಲ. ಆದರೂ ಪ್ರಧಾನಿಯವರಿಗೆ ಮನ ಮುಟ್ಟುವಂತೆ ಪತ್ರ ಬರೆದಿದ್ದೇನೆ.

ನನ್ನ ಮೇಲೆ ಕೆಲವು ಮಠಾಧಿಪತಿಗಳು ಒತ್ತಡ ತಂದರು: ಪ್ರಾಹಿಬಿಷನ್ ತನ್ನಿರಿ ಎಂದು. ಈ ಸಲ ಬಜೆಟ್‌ನಲ್ಲಿ ನಿಮ್ಮ ಹಣಕಾಸು ಸಚಿವರಿಗೆ ಹೇಳಿ ಪಾನನಿಷೇಧ ಜಾರಿಗೊಳಿಸಿ ಎಂದರು. ಅದಕ್ಕೆ ನಾನು ಹೇಳಿದೆ, ಇದು ರಾಷ್ಟ್ರೀಯ ನೀತಿಯಾಗಬೇಕು. ನಾನು ಪ್ರಧಾನಿಯವರಿಗೆ ಪತ್ರ ಬರೆದಿದ್ದೇನೆ, ಇನ್ನೂ ಅವರಿಂದ ಉತ್ತರ ಬಂದಿಲ್ಲ.

ಮಲ್ಲಿಕಾರ್ಜುನ ಖರ್ಗೆ (ವಿರೋಧಪಕ್ಷದ ನಾಯಕ): ಪಟೇಲರು ಮಾವೋತ್ಸೆತುಂಗೆಗೆಂದು ಒಂದು ಬಾಂಬ್ ಹಾಕಿದರು, ಕೂತರು ಮುಗಿಯಿತು ಕತೆ.

(ವಿಧಾನಸಭೆ ಕಲಾಪ, ಮಾರ್ಚಿ 30, 1999)

## ಚೋರ ಗುರು ... ಶಿಷ್ಯ ಪಟೇಲ್!

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ನನಗೆ ಹಿಂದೆ ಸ್ವಾಮಿಗಳೊಬ್ಬರು ಗಂಟು ಬಿದ್ದರು. ಪಾಪ. ಈತ ನಿಜಕ್ಕೂ ಒಳ್ಳೆಯ ಸ್ವಾಮಿ. ತೋರಿಕೆ ಸ್ವಾಮಿ ಅಲ್ಲ. ಸಿಕ್ಕಾಗಲೆಲ್ಲಾ ಅವರು ನನಗೆ ಕುಡಿಯೋದು ಬೇಡ, ಇದು ಕೆಟ್ಟದ್ದು ಬಿಟ್ಟು ಬಿಡು, ಹೀಗೆ ಹೇಳ್ತಾನೇ ಬಂದರು. ನನ್ನ ಕಷ್ಟ ಅವ್ರಿಗೇನು ಗೊತ್ತು. ಹೇಳಿದಷ್ಟು ಸುಲಭದ ಕೆಲಸವಲ್ಲ ಅದು. ಕುಡಿಯುವುದನ್ನು ಅಭ್ಯಾಸ ಮಾಡಿಕೊಂಡ ಬಳಿಕ ಅದನ್ನು ಬಿಡು ಎಂದು ಹೇಳಲು ಸ್ವಯಂ ಅನುಭವವೇ ಬೇಕು. ಕುಡಿಯೋದನ್ನು ಬಿಡುವುದು ಎಷ್ಟು ಕಷ್ಟ ಎಂಬುದು ನಿಮಗೆಲ್ಲಿ ಗೊತ್ತು ಸ್ವಾಮಿಗಳೇ ಎಂದು ತಮಾಷೆ ಮಾಡಿದೆ. ಅಧ್ಯಕ್ಷರೇ, ಇಲ್ಲಿ ಇರುವ ಹೊಸಬರಿಗೆ ನನ್ನ ಸಲಹೆ ಹೀಗಿದೆ. ದಯಮಾಡಿ ಇದರ ಅಭ್ಯಾಸ ಮಾಡಿಕೊಳ್ಳಲು ಹೋಗಬೇಡಿ. ಇದು ನನ್ನ ಪ್ರಾರ್ಥನೆ. ವಾಟಾಳ್ ನಾಗರಾಜರಂತೂ ಕುಡಿಯೋದಕ್ಕೆ ಹೋಗಲಿಲ್ಲ. ಇದು ಬಹಳ ಜನಕ್ಕೆ ಗೊತ್ತಿದೆ.

ಎಚ್.ಎನ್. ನಂಜೇಗೌಡ: ಅಲ್ಲಾ, ಆ ಸ್ವಾಮಿಗಳ ಕಥೆ ಹೇಳ್ತಿದ್ರಲ್ಲಾ ಮುಂದೆ ಹೇಳಿ ಏನಾಯ್ತು? ಸ್ವಾಮಿಗಳಿಗೂ ಅನುಭವ ಆಗಲೀ ಅಂತ ನೀವೇನಾದರೂ ತೊಗೋಳೀ ಅಂದ್ರಾ.. ಹೇಗೆ?

ಜೆ.ಹೆಚ್. ಪಟೇಲ್: ಪಾಪ. ಸಾತ್ವಿಕ ಜೀವಿ ಆ ಸ್ವಾಮಿ. ಆದರೂ ಇರಲಿ ಅಂತ ಬೇರೆ ಮತ್ತೊಬ್ಬ ಸ್ವಾಮಿಯ ಒಂದು ಉದಾಹರಣೆ ಕೊಟ್ಟೆ.

ಒಂದು ಹಳ್ಳಿ. ಆ ಹಳ್ಳೀಲಿ ಒಬ್ಬ ಸ್ವಾಮಿ ಇದ್ದ. ಆ ಸ್ವಾಮಿ ಹಳ್ಳಿಯಲ್ಲಿ ದರ್ಬಾರ್ ನಡೆಸಿದ್ದ. ಎದುರಿಗೆ ಯಾರೋ ಒಬ್ಬ ಅಮಾಯಕ ಬಂದ. ಸರಿ ತಕ್ಷಣ ಸ್ವಾಮಿಗೆ ತನ್ನ ದೊಡ್ಡತನವನ್ನು ಜನರಿಗೆ ತೋರಿಸಬೇಕು ಎಂದು ಮನಸ್ಸಾಯಿತು.

ಎಲ್ಲರೆದುರಿಗೆ ಆ ಬಡಪಾಯಿಯನ್ನು ಸ್ವಾಮಿ ಬೈದ. "ಏನಪ್ಪಾ ಮರುಳಾ, ಜನ ಎಲ್ಲಾ ನಿನ್ನ ವಿಷಯಾನೇ ಮಾತಾಡ್ತಾ ಇದ್ದಾರಲ್ಲೋ, ತುಂಬಾ ಕುಡೀತೀಯಂತಲ್ಲೋ. ಹೌದೇನೋ?"

ಕಂಗಾಲಾದ ಆ ಬಡವ, ಏನ್ ಸ್ವಾಮಿ, ಏನ್ ಬುದ್ದಿ, ನಾನೇನ್ ಮಾಡ್ದೆ ಒಡೆಯ, ನಾನೇನೂ ಅಂಥ ತಪ್ಪು ಮಾಡಿಲ್ವಲ್ಲಾ ಮಾಸ್ವಾಮಿ ಎಂದ.

"ಥೂ ನಿನ್ನ ಬರೇ ಕುಡೀತೀಯಂತೇ," ಸ್ವಾಮಿ ಮತ್ತಷ್ಟು ಜೋರು ಮಾಡಿದ.

ಈಗ ಅಮಾಯಕ ಶಿಷ್ಯನ ಸರದಿ "ಅಯ್ಯೋ ಶಿವನೇ, ಹೋದ ಸಾರಿ ನಾನು ನಿಮ್ಮ ಜೊತೆಗೆ ಕುಡಿದಿದ್ದೇ ಕೊನೇ ಸ್ವಾಮಿ, ಆಮೇಲೆ ನಿಮ್ಮ ಆಣೆ, ಶಿವನಾಣೆ ಇವತ್ತಿನಗಂಟ ಮುಟ್ಟಿಲ್ಲ" ಎಂದು ಇರೋ ಸತ್ಯವನ್ನು ಇದ್ದಂತೆಯೇ ಹೇಳಿದ.

ಅವತ್ತಿನಿಂದ ಆ ಕಳ್ಳ ಸ್ವಾಮಿ ತುಟಿಪಿಟಿಕ್ ಎನ್ನಲಿಲ್ಲ.

ಒಂದು ಎಚ್ಚರಿಕೆ ಮಾತು: ಈ ಕಥೆ ಎಲ್ಲ ಸ್ವಾಮಿಗಳಿಗೂ ಅನ್ವಯಿಸುವುದಿಲ್ಲ.

(ವಿಧಾನ ಸಭೆ ಕಲಾಪ, ಆಗಸ್ಟ್ 7, 1996)

## ಮದ್ಯಪಾನ ಸಂಯಮ - ಪಟೇಲರು : ವಾಟಾಳ್ ಹಾಸ್ಯ

ವಾಟಾಳ್ ನಾಗರಾಜ: ಮಾನ್ಯ ಜೆ.ಹೆಚ್. ಪಟೇಲರ ಸರ್ಕಾರದ ತೀವ್ರತೆ ಬಗೆಗೆ ಹೇಳದಿದ್ದರೂ ಒಂದು ಜಾಹಿರಾತನ್ನು ತಮ್ಮ ಮುಂದೆ ಓದುತ್ತೇನೆ.

"ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ" ಪ್ರಕಟಿಸಿರುವ ಈ ಜಾಹಿರಾತಿನಲ್ಲಿ ಮಹಾತ್ಮ ಗಾಂಧಿ ಅವರ ಚಿತ್ರ, ಮಧ್ಯದಲ್ಲಿ ಶ್ರೀ ಜೆ.ಹೆಚ್. ಪಟೇಲರ ಚಿತ್ರ, ಕೊನೆಯಲ್ಲಿ ಮಂಡಳಿ ಅಧ್ಯಕ್ಷರ ಚಿತ್ರ. ಏನು ಹೇಳುತ್ತೀರಾ ತಾವು?

ಕರ್ನಾಟಕದ ಮಹಾ ಜನತೆಗೆ ಗಣರಾಜ್ಯೋತ್ಸವದ ಶುಭಾಶಯಗಳು. ದುರಭ್ಯಾಸಗಳು, ಮಾನವನ ಅಧೋಗತಿಗೆ ಕಾರಣ. ಅದರಲ್ಲೂ ಮದ್ಯಪಾನ ಮತ್ತು ಮಾದಕ ವಸ್ತುಗಳ ಇನ್ನೂ ಅಪಾಯಕಾರಿ.

ಮಾನ್ಯ ಜೆ.ಹೆಚ್. ಪಟೇಲರ ಫೋಟೋ ಇದರಲ್ಲಿ ಇದೆ. ಹೇಳಿ, ಏನಿದರ ಅರ್ಥ?

**ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ):** ಶ್ರೀ ವಾಟಾಳ್‌ರವರೆ, ಮದ್ಯಪಾನದ ಬಗ್ಗೆಯೇ ಒಂದು ದಿವಸ ಸದನದಲ್ಲಿ ಚರ್ಚೆ ಮಾಡಿದ್ದೆವು. ಆಗಲೂ ಸಹ ನಾನು ಹೇಳಿದ್ದು, ಮದ್ಯಪಾನದ ಪೂರ್ಣ ನಿಷೇಧ ಜಗತ್ತಿನಲ್ಲಿ ಎಲ್ಲೂ ಸಾಧ್ಯವಾಗಿಲ್ಲ.

ಆದರೆ ಸಂಯಮದಿಂದ ಮಾತ್ರ ಸಾಧ್ಯ. ಇವತ್ತು ಯುರೋಪಿಗೆ, ಅಮೇರಿಕಾಗೆ ಹೋಗಿ ಬಂದಿರತಕ್ಕಂತವರು ತಾವಾಗೇ ತಮ್ಮ ಕುಡಿತವನ್ನು ಕಡಿಮೆ ಮಾಡಿದ್ದಾರೆ, ತಾವಾಗೇ ತಮ್ಮನ್ನು ನಿಯಂತ್ರಿಸಿಕೊಳ್ಳುತ್ತಿದ್ದಾರೆ. ಆ ರೀತಿ ನಿಯಂತ್ರಿಸಿಕೊಳ್ಳಬೇಕು ಎನ್ನುವುದು ಕುಡಿದವರಿಗೆ ಮಾತ್ರ ಗೊತ್ತು ನಿಮ್ಮಂತಹವರಿಗೆ ಏನು ಗೊತ್ತು?

**ವಾಟಾಳ್ ನಾಗರಾಜ್:** ಸನ್ಮಾನ್ಯ ಅಧ್ಯಕ್ಷರೆ, ನಾನು ಕುಡಿಯದೇ ಇದ್ದರೂ, ಕುಡಿಯತಕ್ಕಂತಹ ಶ್ರೀ ಪಟೇಲರು, ಶ್ರೀ ನಂಜೇಗೌಡರ ಪಕ್ಕ ಕುಳಿತೂ, ಕುಳಿತೂ ಅಭ್ಯಾಸವಾಗಿ ಬಿಟ್ಟಿದೆ ಸ್ವಾಮಿ. ಹೊಸದಾಗಿ ಅಭ್ಯಾಸ ಬೇಕಾಗಿಲ್ಲ, ನಿರಂತರವಾಗಿ ಅಭ್ಯಾಸವಾಗಿದೆ. ಇದು ತಮಗೂ ಗೊತ್ತಲ್ಲ ಸ್ವಾಮಿ, ತಾವೂ ಕುಳಿತಿದ್ದೀರಿ. ಇದರಲ್ಲಿ ಮುಚ್ಚುಮರೆ ಏನೂ ಇಲ್ಲ.

(ನಗು)

**ಅಧ್ಯಕ್ಷರು (ರಮೇಶ್‌ಕುಮಾರ್):** ಶ್ರೀ ವಾಟಾಳ್ ಅವರೇ, ನನ್ನನ್ನು ನಿಮ್ಮ ಲಿಸ್ಟ್‌ಗೆ ಹಾಕಿದ್ದೀರಾ, ಇಲ್ಲ, ಅವರಿಬ್ಬರ ಲಿಸ್ಟ್‌ಗೆ ಹಾಕಿದ್ದೀರಾ?

(ವಿಧಾನಸಭೆ ಕಲಾಪ, ಜನವರಿ 27, 1998)

**ಪಟೇಲರ ಪ್ರಾಮಾಣಿಕ ವೈಚಾರಿಕತೆ**

ಮುಖ್ಯಮಂತ್ರಿ ಜೆ.ಹೆಚ್. ಪಟೇಲರು ವಿಚಾರಶೀಲರು. ಅನೇಕ ವಿಷಯಗಳನ್ನು ಓದಿ ಮನನ ಮಾಡಿಕೊಂಡವರು. ತಾವು ನಂಬಿದ ವಿಚಾರವನ್ನು ಜೀವನದಲ್ಲಿ ಆಚರಣೆಗೆ ತರುವ ವಿಚಾರನಿಷ್ಠರು. ಇದಕ್ಕಾಗಿ ಹೋರಾಟ ಮಾಡಿದವರು.

ನಾವೂ-ಪಟೇಲರೂ ಜೈಲಿನಲ್ಲಿ ಒಟ್ಟಿಗೆ ಇದ್ದೆವು. ಅವರು ಜೈಲಿಗೆ ಹೋಗುವುದನ್ನು ತಪ್ಪಿಸಿಕೊಳ್ಳಬಹುದಿತ್ತು. ವಿಚಾರನಿಷ್ಠರಾಗಿ ಅವರು ಜೈಲಿಗೆ ಹೋದರೇ ಹೊರತು ಉಳಿದ ಮಾರ್ಗ ಅನುಸರಿಸಲಿಲ್ಲ. ತುರ್ತು ಪರಿಸ್ಥಿತಿಯನ್ನು ಖಡಾಖಂಡಿತವಾಗಿ ವಿರೋಧಿಸಿದರೇ ವಿನಃ ಉಳಿದ ಕೆಲವರಂತೆ ತಿಪ್ಪೆಸಾರಿಸುವ ಪ್ರಯತ್ನ ಮಾಡಲಿಲ್ಲ. ಇದು ಪಟೇಲರ ಪ್ರಾಮಾಣಿಕ ವೈಚಾರಿಕತೆಗೆ ಜ್ವಲಂತ ನಿದರ್ಶನ.

(ಕೆ.ಎಸ್. ಈಶ್ವರಪ್ಪ (ಶಿವಮೊಗ್ಗ), ವಿಧಾನ ಸಭೆ, ಮಾರ್ಚ್ 23, 1999)

# 21

# ಪಟೇಲರು ಮತ್ತು ಚಲನಚಿತ್ರ ಜಗತ್ತು

ಬಹುಮಂದಿ ಶಾಸಕರಿಗೆ ತಿಳಿಯದ ವಿಷಯವೆಂದರೆ ರಾಜಕಾರಣದ ನಡುವೆ ಪಟೇಲರು ಚಲನಚಿತ್ರ ಕ್ಷೇತ್ರದಲ್ಲಿ ಕೈಯಾಡಿಸಿ, ಕೈಸುಟ್ಟುಕೊಂಡದ್ದು.

ಪಟೇಲರು ತಾವು ಎರಡು ಕನ್ನಡ ಚಿತ್ರಗಳನ್ನು ತೆರೆಯಲು ಸಾಹಸ ಮಾಡಿರುವುದಾಗಿ ಹೇಳುತ್ತಿದ್ದರಾದರೂ ಅವರು "ಅವಸ್ಥೆ" ಚಿತ್ರದಲ್ಲಿ ತಾವು ಪಟ್ಟ ಅವಸ್ಥೆಯನ್ನು ಮಾತ್ರ ಸದನಕ್ಕೆ ವಿವರಿಸುತ್ತಿದ್ದರು. ಡಾ: ಯು.ಆರ್. ಅನಂತಮೂರ್ತಿ ಬರೆದ 'ಅವಸ್ಥೆ' ಕಾದಂಬರಿಯಲ್ಲಿ ತಮ್ಮ ಅಚ್ಚುಮೆಚ್ಚಿನ ಹಿರಿಯ ಮಿತ್ರ ದಿ. ಗೋಪಾಲಗೌಡರ ಭವ್ಯ ವ್ಯಕ್ತಿತ್ವವನ್ನು ಕಂಡ ಪಟೇಲರಿಗೆ, ಚಿತ್ರ ನಿರ್ಮಿಸಿ ಶಾಂತವೇರಿಗೌಡರಿಗೆ ಶ್ರದ್ಧಾಂಜಲಿ ಸಲ್ಲಿಸುವ ಅಭಿಲಾಷೆಯಾಗಿತ್ತು.

ಪಟೇಲರು ಸಹಕರಿಸಿದ ಮತ್ತೊಂದು ಚಿತ್ರ "ಸಂತ ಶಿಶುನಾಳ ಷರೀಫ".

ಹೊಸ ಅಲೆಯ ಚಿತ್ರಗಳ ನಿರ್ದೇಶಕರು, ನಟ-ನಟಿಯರು, ತಯಾರಕರು, ಹಂಚಿಕೆದಾರರು, ಪ್ರದರ್ಶಕರು ಇವರ ಕಷ್ಟಕಾರ್ಪಣ್ಯಗಳ ಸಮಗ್ರ ಪರಿಚಯ ಪಟೇಲರಿಗಿತ್ತು. ಸಂಸ್ಕಾರ, ವಂಶವೃಕ್ಷ, ಗ್ರಹಣ - ಇಂತಹ ಕಲಾಪೂರ್ಣ ಚಲಚ್ಚಿತ್ರಗಳು ಇಂದಿಗೂ ಬಾಕ್ಸ್ ಆಫೀಸಿನಲ್ಲಿ ಸೋಲುವ ಕಾರಣ ಪಟೇಲರಿಗೆ ಕಲಾಪೂರ್ಣ ಅಭಿವ್ಯಕ್ತದ ಬಗೆಗೆ ಇನ್ನಿಲ್ಲದ ಅನುಕಂಪ. ಸಿನಿಮಾ ಜಗತ್ತನ್ನು ಸಮಾಜದ ಒಳಿತಿಗಾಗಿ ಸಂಪೂರ್ಣ ನಿಯಂತ್ರಿಸುವ ಶಕ್ತಿ ಶಾಸಕಾಂಗಕ್ಕಿಲ್ಲ ಎಂಬ ಅರಿವೂ ಇವರಲ್ಲಿತ್ತು.

ಸಂಸದೀಯ ವೇದಿಕೆಯಲ್ಲಿ ಸಿನಿಮಾ ಬಗೆಗೆ ಮೇಲಿಂದ ಮೇಲೆ ಚರ್ಚೆ ನಡೆಯುತ್ತಲೇ ಇರುತ್ತದೆ. ಹಣಗಳಿಕೆಯ ಸುಲಭ ಮಾರ್ಗ ಎಂಬ ಭ್ರಮೆ-ಸತ್ಯಗಳ ಉದ್ದಿಮೆ ಸಿನಿಮಾ. ಸಾಮಾನ್ಯ ಜನಕ್ಕೆ ಮನರಂಜನೆ ನೀಡುವ ನೆಪದಲ್ಲಿ ಕೀಳು ಅಭಿರುಚಿ, ಹಿಂಸೆ ಮುತ್ತಿತರ ಅಮಲನ್ನು ಹಂಚಿ

ಸಾಮಾಜಿಕ ಅಸ್ವಸ್ಥತೆಗೆ ಕಾರಣವಾದ ಚಿತ್ರಗಳೂ ನಮ್ಮಲ್ಲಿವೆ ಎಂದು ಸದನಕ್ಕೆ ವಿವರಿಸುತ್ತಿದ್ದ ಪಟೇಲರಿಗೆ ಆದರ್ಶದ ಗೀಳು ಹತ್ತಿ, ಮಸಾಲೆ ಬೆರೆಸದೆ, ಇದ್ದದ್ದನ್ನು ಇದ್ದಂತೆ ತೋರಿಸುವ ಚಿತ್ರದಿಂದ ದುಡ್ಡು ಬರುವುದಿಲ್ಲ ಎಂಬ ನೈಜ ಅನುಭವ ಇತ್ತು.

ಇಷ್ಟಾದರೂ ಇವರಿಗೆ ಸಿನಿಮಾ ಪ್ರಭುದ್ಧತೆಯ ಮುಖವಾಗಿತ್ತು. ಆಯಾಕಾಲದ ಕ್ರಿಯಾಶೀಲ ಚಿಂತನೆಯ ಅಭಿವ್ಯಕ್ತವೆನಿಸುವಷ್ಟು ಉತ್ಕೃಷ್ಟ ಕೃತಿಗಳನ್ನು ನಾಗರೀಕ ಸಮಾಜಕ್ಕೆ ಕೊಡಬಲ್ಲದು ಸಿನಿಮಾ ಎಂದು ಹೇಳುತ್ತಿದ್ದರು ಪಟೇಲರು. ಭಾರತೀಯ ಭಾಷೆಗಳ ಪೈಕಿ ಸ್ವಂತಿಕೆ, ಪ್ರತಿಭೆ ಮತ್ತು ನಾವೀನ್ಯತೆಗೆ ಮಂಚೂಣಿಯಲ್ಲಿ ನಿಂತಿರುವ ಹೆಗ್ಗಳಿಕೆ ಕನ್ನಡ ಸಿನಿಮಾ ಜಗತ್ತಿಗಿದೆ ಎನ್ನುವ ಕಾರಣಕ್ಕಾಗಿ ಪಟೇಲರಿಗೆ ಇನ್ನಿಲ್ಲದ ಸ್ವಾಭಿಮಾನ.

'ಗ್ರಹಣ' ಇಂತಹ ಕಷ್ಟವನ್ನೆದುರಿಸಿದ ಒಂದು ಚಿತ್ರ. ಇದರ ಬಗೆಗಿನ ವಿಧಾನಸಭೆಯ ಚರ್ಚೆ ಇಲ್ಲಿದೆ.

## ಗ್ರಹಣ - ಚಲನಚ್ಚಿತ್ರ

ವಿಷಯ: ಸಾರ್ವಜನಿಕ ಮಹತ್ವದ ವಿಷಯದ ಬಗೆಗೆ ಸದನದ ಗಮನ ಸೆಳೆಯುವುದು.

**ಡಿ.ಟಿ. ರಾಮು:** ಸನ್ಮಾನ್ಯ ಅಧ್ಯಕ್ಷರೇ, ಸಾರ್ವಜನಿಕ ಜೀವನದಲ್ಲಿ ತನ್ನದೇ ಆದ ಪ್ರಭಾವ ಬೀರುತ್ತಿರುವ ಚಲಚ್ಚಿತ್ರ ಜಗತ್ತಿನ ಕೆಲವು ಆಗುಹೋಗುಗಳಿಗೆ ಸಂಬಂಧಿಸಿದ ವಿಷಯವನ್ನು ಪ್ರಸ್ತಾಪಿಸಲು ತಮ್ಮ ಅನುಮತಿ ಕೇಳುತ್ತಿದ್ದೇನೆ.

"ಗ್ರಹಣ" ಇದೊಂದು ಕನ್ನಡ ಚಲನಚ್ಚಿತ್ರ. ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಕನ್ನಡ ಭಾಷೆಗೆ ಕೀರ್ತಿಯನ್ನು ತಂದಿತ್ತ ಚಿತ್ರ. ಚಲನಚ್ಚಿತ್ರ ಜಗತ್ತಿನಲ್ಲಿ ಹೊಸ ಅಲೆಯನ್ನು ಹುಟ್ಟು ಹಾಕಿದ ಇಂತಹ ಅಪೂರ್ವ ಕಲಾಕೃತಿಯಾದ ಗ್ರಹಣ ಚಲನಚ್ಚಿತ್ರವು ಇದುವರೆವಿಗೂ ಪ್ರದರ್ಶನಕ್ಕೆ ಬಿಡುಗಡೆ ಆಗದಿರುವ ದಾರುಣ ಪರಿಸ್ಥಿತಿಯನ್ನು ಸದನದ ಗಮನಕ್ಕೆ ತರಲಿಚ್ಛಿಸುತ್ತೇನೆ.

**ಆರ್. ಗುಂಡೂರಾವ್ (ಮುಖ್ಯಮಂತ್ರಿ):** ಗ್ರಹಣ ಚಲನಚ್ಚಿತ್ರಕ್ಕೆ ಸಂಬಂಧಿಸಿದಂತೆ ಪ್ರಸ್ತಾಪಿಸಿದ್ದೀರಿ.

ಗ್ರಹಣ ಚಿತ್ರವನ್ನು ಬೆಂಗಳೂರು ನಗರದಲ್ಲಿ ಪ್ರದರ್ಶಿಸಲು ಮೂವಿಲ್ಯಾಂಡ್ ಚಿತ್ರಮಂದಿರವನ್ನು ನಡೆಸುತ್ತಿರುವ ಶ್ರೀ ವೆಂಕಟೇಶ್ವರ ಎಂಟರ್‌ಪ್ರೈಸಸ್‌ನವರು ಒಪ್ಪಿದ್ದರು. ಈ ವಿಷಯವನ್ನು ನಿರ್ಮಾಪಕರಿಗೆ ತಿಳಿಸಿ ಪ್ರದರ್ಶನಕ್ಕೆ ಸೂಕ್ತ ಕ್ರಮ ತೆಗೆದುಕೊಳ್ಳಲು ಕೋರಲಾಯಿತು. ಆದರೆ ಇವರು ಈ ಚಿತ್ರವನ್ನು ಮೂವಿಲ್ಯಾಂಡ್ ಚಿತ್ರಮಂದಿರದಲ್ಲಿ ಪ್ರದರ್ಶಿಸಲು ಸಾಧ್ಯವಿಲ್ಲವೆಂದು ಚಲನಚಿತ್ರ ವಾಣಿಜ್ಯ ಮಂಡಳಿಯವರಿಗೆ ತಿಳಿಸಿ ಮೇ 1979ರಲ್ಲಿ ಒಂದು ಖಚಿತ ತಾರೀಖು ಮತ್ತು ಖಚಿತ ಚಲನ ಚಿತ್ರಮಂದಿರದಲ್ಲಿ ಪ್ರದರ್ಶಿಸಬೇಕೆಂದು ಕೇಳಿಕೊಂಡರು.

ಚಿತ್ರದ ನಿರ್ಮಾಪಕರಾದ ಶ್ರೀ ಹರ್ಷ ಚಿತ್ರ ತಯಾರಕರು ತಮ್ಮ ಚಿತ್ರ ಅಂತರರಾಷ್ಟ್ರೀಯ ಮತ್ತು ರಾಷ್ಟ್ರೀಯ ಬಹುಮಾನ ಪಡೆದ ಚಿತ್ರವಾಗಿರುವುದರಿಂದ ಇವರು ತಾರೀಖು 4.10.1979 ರಲ್ಲಿ ಸರ್ಕಾರಕ್ಕೆ ಅರ್ಜಿ ಸಲ್ಲಿಸಿ ಈ ಚಿತ್ರವನ್ನು ಅಲಂಕಾರ್, ಸವಿತ, ಸಂಪಿಗೆ, ನವರಂಗ್ ಮುಂತಾದ ಸಿನಿಮಾ ಮಂದಿರಗಳಲ್ಲಿ ಪ್ರದರ್ಶಿಸಲು ಅವಕಾಶ ಮಾಡಿಕೊಡಬೇಕೆಂದು ಕೇಳಿಕೊಂಡರು. ಇದರ ಮೇರೆಗೆ ಸರ್ಕಾರವು ಕರ್ನಾಟಕ ವಾಣಿಜ್ಯ ಮಂಡಳಿಯವರಿಗೆ ತಿಳಿಸಲಾಗಿ ಚಲನಚಿತ್ರ ವಾಣಿಜ್ಯ ಮಂಡಳಿಯವರು ಯಾವುದಾದರೂ ಒಂದು ಚಿತ್ರಮಂದಿರವನ್ನು ಸೂಚಿಸಲು ಮತ್ತು ಈ ಚಿತ್ರದ ಪಬ್ಲಿಸಿಟಿ, ಪೋಸ್ಟರ್ ಮತ್ತು ಇತರ ಸಲಕರಣೆ ಸಿದ್ಧವಿದ್ದರೆ ಚಿತ್ರಮಂದಿರವನ್ನು ಕೊಡಿಸಲು ಸಿದ್ಧವಿರುವುದಾಗಿ ತಿಳಿಸಿದರು. ಈ ವಿಷಯವನ್ನು ಸರ್ಕಾರದ 16.1.1980ರ ಪತ್ರದ ಮೂಲಕ ನಿರ್ಮಾಪಕರಿಗೆ ತಿಳಿಸಿ ಮಂಡಳಿಯನ್ನು ಸಂಪರ್ಕಿಸಬೇಕೆಂದು ತಿಳಿಸಲಾಯಿತು. ಇದಕ್ಕೆ ಪ್ರತಿ ಉತ್ತರವಿಲ್ಲದೆ ನಿರ್ಮಾಪಕರು ಪದೇ ಪದೇ ಸರ್ಕಾರಕ್ಕೆ ಮನವಿಗಳನ್ನು ಸಲ್ಲಿಸುತ್ತಿದ್ದಾರೆ. ಈ ಚಿತ್ರವು ನೆರೆ ರಾಜ್ಯಗಳಲ್ಲಿ ಕಮರ್ಷಿಯಲ್ ಸರ್ಕ್ಯೂಟ್ ಮುಖಾಂತರ ಪ್ರದರ್ಶನವಾದಂತೆ ತೋರುತ್ತಿಲ್ಲ. ಇದು ಚಲನಚಿತ್ರ ಸೊಸೈಟಿಗಳ ಮುಖಾಂತರ ಅಲ್ಲಿನ ಸದಸ್ಯರ ಉಪಯೋಗಕ್ಕೆ ಪ್ರದರ್ಶನವಾಗಿದೆಯೆಂದು ತಿಳಿದುಬಂದಿದೆ. ಬೆಂಗಳೂರಿನಲ್ಲೂ ಇದೇ ರೀತಿಯಲ್ಲಿ ಮೇಲೆ ಹೇಳಿದಂತೆ ಪ್ರದರ್ಶನಗಳು ನಡೆದಿವೆ.

ಸರ್ಕಾರವು ಸಾಧಾರಣವಾಗಿ ಚಲನಚಿತ್ರ ಪ್ರದರ್ಶನಕ್ಕೆ ಅನುಕೂಲ ಮಾಡಿಕೊಡುವುದು ರೂಢಿಯಾಗಿಲ್ಲ. ಸರ್ಕಾರವು ಇವರ ಮನವಿಗೆ ಓಗೊಟ್ಟು ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಿಗೆ ತಿಳಿಸಲಾಗಿ ಅವರು ತಿಳಿಸಿದ ರೀತಿ ಪ್ರದರ್ಶನಕ್ಕೆ ಇವರು ಒಪ್ಪಲಿಲ್ಲವೆಂದು ತಿಳಿದು ಬಂದಿದೆ. ಇವರು ಮೆಜೆಸ್ಟಿಕ್ ಸರಹದ್ದಿನಲ್ಲಿ ಪ್ರದರ್ಶನಕ್ಕೆ ಹೊರತು ಬೇರೆ ಕಡೆಗೆ ಒಪ್ಪಲಿಲ್ಲ. ಇದಕ್ಕೆ ಸರ್ಕಾರವು ಹೊಣೆಯಾಗದು. ಮತ್ತು ಚಿತ್ರ ನಿರ್ಮಾಪಕರು ಈ ಚಿತ್ರ ಪ್ರದರ್ಶನಕ್ಕೆ ಸಹಾಯ ಧನವಾಗಿ ಸರ್ಕಾರದ ವತಿಯಿಂದ ಒಂದು ಲಕ್ಷ ರೂಪಾಯಿಯನ್ನು ಕೊಡಬೇಕಾಗಿ ಕೋರಿದ್ದಾರೆ. ಆದರೆ ಈ ರೀತಿ ಸಹಾಯಧನವನ್ನು ಚಿತ್ರ ಪ್ರದರ್ಶನಕ್ಕೆ ಸರ್ಕಾರದ ವತಿಯಿಂದ ಕೊಡುವುದು ರೂಢಿಯಲ್ಲಿಲ್ಲ. ಈಗಲೂ ಸಹ ನಿರ್ಮಾಪಕರು ಚಲನಚಿತ್ರ ವಾಣಿಜ್ಯ ಮಂಡಳಿಯವರನ್ನು ಸಂಧಿಸಿದಲ್ಲಿ ಇವರ ಚಿತ್ರ ಬಿಡುಗಡೆಯಾಗಲು ಸಹಾಯ ದೊರಕುವ ಸಾಧ್ಯತೆ ಇದೆ.

ಈ ಚಿತ್ರದ ನಿರ್ಮಾಪಕರು ಇನ್ನೂ ಅರ್ಜಿ ಸಲ್ಲಿಸಿಲ್ಲವಾದುದರಿಂದ ಅವರಿಗೆ ಸರ್ಕಾರದಿಂದ ಇನ್ನೂ ಸಹಾಯಧನ ಮಂಜೂರಾಗಿರುವುದಿಲ್ಲ.

**ಡಿ.ಟಿ. ರಾಮು:** ಅಧ್ಯಕ್ಷರೇ, ಗ್ರಹಣ ಚಿತ್ರಕ್ಕೆ 1978ರಲ್ಲಿ ರಾಷ್ಟ್ರೀಯ ಬಹುಮಾನ ದೊರೆತಿದೆ. ಇದು ಹರಿಜನ ಶೋಷಣೆ ವಿರುದ್ಧ ಹೋರಾಟ ನಡೆಸತಕ್ಕಂಥಾ ಒಂದು ಚಿತ್ರ. ಲಂಡನ್ ಟೈಂಸ್ ಪತ್ರಿಕೆಯಲ್ಲಿಯೂ ಈ ವಿಚಾರ ಬಂದಿದೆ. ಇದು ಒಂದು ಭಾವೈಕ್ಯತೆ ಚಿತ್ರವಾಗಿದ್ದು ಪ್ರಶಂಸೆ ಪಡೆದಿದೆ. ನಮ್ಮ ರಾಜ್ಯದಲ್ಲಿ, ನಮ್ಮ ಕನ್ನಡ ನಾಡಿನಲ್ಲಿ, ನಮ್ಮ ಕನ್ನಡ ಭಾಷೆಯಲ್ಲಿ ತೆಗೆದಿರುವ ಚಿತ್ರ ಪೋಲೆಂಡ್, ಲಾಸ್‌ಏಂಜಲೀಸ್ ಹೀಗೆ ಪ್ರಪಂಚದ ವಿವಿಧ

ಕಡೆಗಳಲ್ಲಿ ಪ್ರದರ್ಶನಗೊಳ್ಳುತ್ತಿದೆ. ಆದರೆ ಈವೊತ್ತು ನಮ್ಮ ಕರ್ನಾಟಕದಲ್ಲಿ ಇದು ಇನ್ನೂ ಬಿಡುಗಡೆಯಾಗಿಲ್ಲ. ಇದು ಸರಿಯೇ ಎಂದು ನಾವು ಚಿಂತಿಸಬೇಕಾಗಿದೆ. ಸರ್ಕಾರ ತಕ್ಕ ಬಂದೋಬಸ್ತು ಮಾಡಿ, ಕೆಂಪೇಗೌಡ ರಸ್ತೆಯ ಚಲನಚಿತ್ರ ಮಂದಿರಗಳಲ್ಲಿಯೇ ಇದು ಪ್ರದರ್ಶನ ಆಗುವಂತೆ ವ್ಯವಸ್ಥೆ ಮಾಡಬೇಕು ಎಂದು ಕೇಳಿಕೊಳ್ಳುತ್ತೇನೆ.

**ಮೈಕೇಲ್ ಫರ್ನಾಂಡೀಸ್:** ಇದೊಂದು ಹೊಸ ಅಲೆಯ ಚಿತ್ರ. ಯುವಕರೊಬ್ಬರು ಇದನ್ನು ತೆಗೆದಿದ್ದಾರೆ. ಇವರು ಕಾರ್ಮಿಕ ವರ್ಗಕ್ಕೆ ಸೇರಿದವರು. ಇವರ ಹತ್ತಿರ ಹೆಚ್ಚಿನ ಬಂಡವಾಳ ಸಹ ಇರಲಿಲ್ಲ. ಬಹಳ ಕಷ್ಟಪಟ್ಟು ಇದನ್ನು ತೆಗೆದಿದ್ದಾರೆ. ಆದಕಾರಣ ಸರ್ಕಾರದವರು ಬೇರೆ ಚಿತ್ರಗಳನ್ನು ನೋಡುವಂತೆ ಇದನ್ನು ನೋಡುವುದು ಸರಿಯಲ್ಲ.

**ರಮೇಶ್‌ಕುಮಾರ್:** ಈಗ ನನ್ನ ಸ್ನೇಹಿತರು ಹೇಳಿದ್ದನ್ನೇ ಹೇಳಲು ನಾನು ಇಷ್ಟಪಡುವುದಿಲ್ಲ. ಮಾನ್ಯ ಮುಖ್ಯಮಂತ್ರಿಯವರ ಹೇಳಿಕೆಯನ್ನು ನಾನು ಎಚ್ಚರಿಕೆಯಿಂದ ಕೇಳಿದೆ. ಇದೊಂದು ಹೊಸ ಅಲೆಯ ಚಿತ್ರ. ಈ ಚಿತ್ರ ತೆಗೆದವರಿಗೂ ಮತ್ತು ಫಿಲಂ ಛೇಂಬರ್ ಆಫ್ ಕಾಮರ್ಸ್‌ನವರಿಗೂ ಸ್ವಲ್ಪ ಮನಸ್ತಾಪ ಬಂದಿದೆ.

**ಜೆ.ಹೆಚ್. ಪಟೇಲ್:** ಮಾನ್ಯ ಸಭಾಧ್ಯಕ್ಷರೇ, ಚಿತ್ರ ಮಂದಿರಗಳಲ್ಲಿ ಪ್ರದರ್ಶಿಸಲು ಹಣದ ಅಭಾವ ಮತ್ತು ಪ್ರದರ್ಶನ ಅವಕಾಶ ಇಲ್ಲದಿರುವ ಕಾರಣ "ಗ್ರಹಣ" ಚಿತ್ರ ರಿಲೀಸ್ ಆಗದಿರುವ ಬಗೆಗೆ ಚರ್ಚೆ ನಡೆದಿರುವುದು ನಿಜಕ್ಕೂ ಗಮನಾರ್ಹ.

ಇಲ್ಲಿಯವರೆಗೆ ಮಾನ್ಯ ಶಾಸಕ ಮಿತ್ರರು ಈ ಚಿತ್ರದ ಪ್ರಾಮುಖ್ಯತೆ ಬಗ್ಗೆ ಹೇಳಿದ್ದಾರೆ. ಇದನ್ನು ಅರ್ಥ ಮಾಡಿಕೊಳ್ಳಲು ಮಾನ್ಯ ಮುಖ್ಯಮಂತ್ರಿಗಳು ಒಂದು ಸಲ ಗ್ರಹಣ ಚಿತ್ರ ನೋಡಲಿ ಎಂದು ಅಪೇಕ್ಷೆ ಪಡುತ್ತೇನೆ.

ಇದೊಂದು ಗಂಭೀರವಾದ ಚಿತ್ರ. ಬೇರೆ ಚಿತ್ರಗಳಂತೆ ಇದು ಜನಪ್ರಿಯವಾಗುತ್ತದೆ ಎನ್ನುವ ಭ್ರಮೆ ನನಗಿಲ್ಲ. ಏಕೆಂದರೆ, ಬೇರೆ ಚಿತ್ರಗಳಲ್ಲಿ ಏನು ಒಂದು ಆಕರ್ಷಣೆ, ಮಸಾಲೆ ಇರುತ್ತವೋ, ಅದೆಲ್ಲಾ ಇದರಲ್ಲಿ ಇಲ್ಲ. ಆದರೆ ವಾಸ್ತವಿಕವಾಗಿ ಇದೊಂದು ಗಂಭೀರ ಚಿತ್ರ. ಆದಕಾರಣ ಇದನ್ನು ಸಹೃದಯಿ ಜನ ಸಪೋರ್ಟ್ ಮಾಡುತ್ತಾರೆ.

ನಮ್ಮಲ್ಲಿ ಸಾಮಾಜಿಕ ವ್ಯವಸ್ಥೆ, ಜಾತಿಯ ವ್ಯವಸ್ಥೆ ಹಾಗೂ ಮೂಢ ನಂಬಿಕೆಗಳು ಯಾವ ರೀತಿ ಇವೆ ಎಂಬ ಬಗ್ಗೆ ಇದರಲ್ಲಿ ಚಿತ್ರಿಸಲಾಗಿದೆ. ಈ ಕಾರಣದಿಂದಲೇ ಇದನ್ನು ಅಂತರರಾಷ್ಟ್ರೀಯ ಚಲನ ಚಿತ್ರೋತ್ಸವದಲ್ಲಿ ಪ್ರದರ್ಶಿಸಲಾಗುತ್ತಿದೆ. ನಮ್ಮಲ್ಲಿಯೂ ಇದು ಪ್ರದರ್ಶನಗೊಳ್ಳಲು ಸರ್ಕಾರದ ಸಹಾಯ ಬೇಕಾಗುತ್ತದೆ. ಏಕೆಂದರೆ, ನಿರ್ಮಾಪಕರ ಹತ್ತಿರ ಹಣವಿಲ್ಲದಿದ್ದರೂ ಸಹ ಕಲೆಯ ದೃಷ್ಟಿಯಿಂದ ಕಷ್ಟಪಟ್ಟು ಇದನ್ನು ತೆಗೆದಿದ್ದಾರೆ. ಇದಕ್ಕೆ ಸರ್ಕಾರದ ಬೆಂಬಲಬೇಕಾಗಿದೆ.

ಇದಕ್ಕೆ ನನ್ನ ಸಲಹೆ ಏನೆಂದರೆ ಈ ಚಿತ್ರದ ಪೋಸ್ಟರ್‌ಗಳನ್ನು ಸರ್ಕಾರದವರೇ ಅಚ್ಚುಹಾಕಿಸಲಿ, ಅದಕ್ಕೆ ಆಗುವ ಖರ್ಚನ್ನು ಈ ಚಿತ್ರದ ಪ್ರದರ್ಶನದಿಂದ ಬಂದ ಹಣದಿಂದ ಪಡೆದುಕೊಳ್ಳಬಹುದು. 'ಅರಿವು' ಚಿತ್ರಕ್ಕೆ ಈ ರೀತಿ ಮಾಡಲಾಗಿದೆ. ಅದರಂತೆ ಇದಕ್ಕೂ ಮಾಡಬೇಕೆಂದು ಹೇಳುತ್ತೇನೆ. ಮತ್ತು ಈ ಚಿತ್ರವನ್ನು ವಿಧಾನಸಭಾ ಸದಸ್ಯರಿಗೂ ತೋರಿಸಬೇಕೆಂದು ಹೇಳುತ್ತೇನೆ.

ಐ.ಪಿ.ಡಿ. ಸಾಲಪ್ಪ: ಇದು ಕಮರ್ಷಿಯಲ್ ಚಿತ್ರವಲ್ಲ. ಇದು ಒಂದು ರೀತಿಯ ಕಲೆಯಿಂದ ಕೂಡಿದ ಚಿತ್ರ. ರಾಷ್ಟ್ರ ಮಟ್ಟದಲ್ಲಿ ಪ್ರಶಸ್ತಿ ಪಡೆದ 'ಕಾಡುಕುದುರೆ' ಚಿತ್ರಕ್ಕೆ ತೆರಿಗೆ ವಿನಾಯಿತಿಯನ್ನು ನಾಲ್ಕು ವಾರಗಳ ಕಾಲಕೊಟ್ಟು ಇಡೀ ರಾಜ್ಯದಲ್ಲಿ ಅದು ಪ್ರದರ್ಶನವಾಗುವಂತೆ ಸರ್ಕಾರ ವ್ಯವಸ್ಥೆ ಮಾಡಿತ್ತು. ಅದೇ ರೀತಿ ಇದಕ್ಕೂ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ, ಏಕೆಂದರೆ, ಈ ಗ್ರಹಣ ಚಿತ್ರವು ಬಡಜನರಿಗೆ ಸಂಬಂಧಪಟ್ಟ ಚಿತ್ರ. ತೆರಿಗೆ ವಿನಾಯಿತಿ ಕೊಡಬೇಕು, ಒಳ್ಳೆಯ ಚಲನಚಿತ್ರ ಮಂದಿರಗಳಲ್ಲಿ ಬಿಡುಗಡೆ ಮಾಡಿಸಲು ವ್ಯವಸ್ಥೆ ಮಾಡಬೇಕು.

ವಿ.ವಿ. ಪತ್ತಾರ್: ಮಾನ್ಯ ಅಧ್ಯಕ್ಷರೇ, ಹರಿಜನರ ಉದ್ಧಾರ ಮಾಡಲು ಸರ್ಕಾರ ನಾನಾ ರೀತಿಯಿಂದ ಪ್ರಯತ್ನ ಮಾಡುತ್ತಿದೆ. ಈ ರಾಜ್ಯದಲ್ಲಿ ಹರಿಜನರ ಶೋಷಣೆ ಯಾವ ರೀತಿ ನಡೆಯುತ್ತಿದೆ ಎಂಬ ಬಗ್ಗೆ ಭೈರಪ್ಪನವರು ಒಂದು ಕಾದಂಬರಿ ಬರೆದಿದ್ದಾರೆ. ಅದರ ಒಂದು ಆಧಾರದ ಮೇಲೆ ಈ ಗ್ರಹಣ ಚಿತ್ರವನ್ನು ತೆಗೆಯಲಾಗಿದೆ. ಜಾತಿಯ ಬಗ್ಗೆ ಇದರಲ್ಲಿ ಮುಖ್ಯವಾಗಿ ಪ್ರಸ್ತಾಪ ಮಾಡಿದ್ದಾರೆ. ಆದಕಾರಣ ಈ ಚಿತ್ರಕ್ಕೆ ಎಲ್ಲ ರೀತಿಯ ಪ್ರೋತ್ಸಾಹವನ್ನು ಕೊಡಬೇಕು ಮತ್ತು ನಮಗೆಲ್ಲಾ ಇದನ್ನು ತೋರಿಸಬೇಕೆಂದು ಕೇಳಿಕೊಳ್ಳುವುದರ ಜೊತೆಗೆ ಇದು ಪ್ರದರ್ಶನಗೊಳ್ಳಲು ಒಂದು ಒಳ್ಳೆಯ ಥಿಯೇಟರನ್ನು ಕೊಡಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಆರ್. ಗುಂಡೂರಾವ್ (ಮುಖ್ಯಮಂತ್ರಿ): ಮಾನ್ಯ ಅಧ್ಯಕ್ಷರೇ, ಶ್ರೀಮಾನ್ ಡಿ.ಟಿ. ರಾಮು, ಜೆ.ಹೆಚ್. ಪಟೇಲ್ ಮತ್ತಿತರ ಕೆಲವು ಸ್ನೇಹಿತರು ಹೇಳಿದಂತೆ ಹಾಗೂ ನನ್ನ ವರದಿಯಲ್ಲಿ ಹೇಳಿದಂತೆ ಗ್ರಹಣ ಚಿತ್ರ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಖ್ಯಾತಿ ಗಳಿಸಿದೆ, ಹೆಸರು ಗಳಿಸಿದೆ. ಮಾನ್ಯ ರಮೇಶ್‌ಕುಮಾರ್‌ರವರು ಫಿಲ್ಮ್ ಛೇಂಬರ್ ಆಫ್ ಕಾಮರ್ಸ್ ಬಗ್ಗೆ ಹೇಳಿದರು. ಸರ್ಕಾರ ವಾಣಿಜ್ಯ ಮಂಡಳಿಯವರಿಗೆ ಪ್ರದರ್ಶನಕ್ಕೆ ಅವಕಾಶ ಮಾಡಿಕೊಡಿ ಎಂದು ತಿಳಿಸಿದೆ. ಅವರೂ ಕೂಡ ಒಪ್ಪಿದ್ದಾರೆ. ಈಗ ಏನಾಗಿದೆಯೆಂದರೆ, ದುರಾದೃಷ್ಟವಶಾತ್ ನಮ್ಮ ರಾಷ್ಟ್ರದಲ್ಲಿ ಬೇರೆ ಯಾವ ಭಾಷೆಯ ಚಿತ್ರಗಳಿಗೂ ಈ ರೀತಿಯ ಪರಿಸ್ಥಿತಿ ಬಂದಿಲ್ಲ. ಮಾನ್ಯ ಜೆ.ಹೆಚ್. ಪಟೇಲರ ಸಲಹೆ ಕೇಳಿದೆ. ಮುಖ್ಯಮಂತ್ರಿಗಳು ಮತ್ತು ಶಾಸಕರು ಆ ಚಿತ್ರವನ್ನು ನೋಡಬೇಕು ಎಂದು ಪಟೇಲರು ಹೇಳಿದರು. ಸಂತೋಷ. ಮುಖ್ಯ ಮಂತ್ರಿಯಾದವರು ಸಿನಿಮಾ ನೋಡುವುದು ಕಷ್ಟವಾಗಿಬಿಟ್ಟಿದೆ.

ಜೆ.ಹೆಚ್. ಪಟೇಲ್: ಇಡೀ ಭಾರತದಲ್ಲೇ ಸಂತೋಷಪಡುವ ವಿಷಯವೆಂದರೆ, ಕನ್ನಡ ಚಿತ್ರರಂಗದಲ್ಲಿ ಸಂಸ್ಕಾರ, ವಂಶವೃಕ್ಷ, ಗ್ರಹಣ ಇವು ಸೃಜತೆ ಮತ್ತು ಮನರಂಜನೆ

ದೃಷ್ಟಿಯಿಂದ ಪ್ರಸಿದ್ಧಿಯಾಗಿವೆ. ನ್ಯೂವೇವ್ ಅಂದರೆ ಹೊಸ ಪ್ರಯೋಗವಾಗಿ ಮಾಡಿರತಕ್ಕ ಚಿತ್ರಗಳು ಇವು. ಸತ್ಯಜಿತ್‌ರೇ ಅವರಿಗೂ ಕೂಡ ಇವು ಮೆಚ್ಚುಗೆಯಾಗಿವೆ.

**ಗುಂಡೂರಾವ್ (ಮುಖ್ಯಮಂತ್ರಿ):** ವಾಣಿಜ್ಯ ಮಂಡಲಿ ಅಧ್ಯಕ್ಷರನ್ನು ಕರೆಸಿ ಮಾತನಾಡಿ ಉಪಕಾರ ಮಾಡಲಿಕ್ಕೆ ಪ್ರಯತ್ನ ಮಾಡೋಣ. ಮನವಿ ಬಂದ ತಕ್ಷಣ, ಸಬ್ಸಿಡಿ ಎಷ್ಟು ಕೊಡಬೇಕೋ ಅದನ್ನು ಕೊಡಲಿಕ್ಕೆ ಅವಕಾಶವಾಗುತ್ತದೆ.

ಐ.ಪಿ.ಡಿ. ಸಾಲಪ್ಪ: ಟ್ಯಾಕ್ಸ್ ಎಂಗ್ಸಂಪ್‌ಷನ್ ಮಾಡಿಕೊಟ್ಟರೆ ಅನುಕೂಲವಾಗುತ್ತದೆ.

ಎಸ್.ಆರ್. ಬೊಮ್ಮಾಯಿ: ಕನ್ನಡ ಚಿತ್ರಗಳಲ್ಲಿ ಇತ್ತೀಚೆಗೆ ಗುಣಮಟ್ಟ ಕಡಿಮೆಯಾಗಿದೆ ಎಂದು ಹೇಳಿದಿರಿ. ಸಬ್ಸಿಡಿ ಒಂದು ಲಕ್ಷ ಕೊಡುತ್ತೀರಿ. ಕೆಲವರು ಸಬ್ಸಿಡಿಗಾಗಿ ಚಿತ್ರ ತೆಗೆಯತಕ್ಕ ಪರಿಸ್ಥಿತಿ ಇದೆ. ಗುಜರಾತ್, ಮಹಾರಾಷ್ಟ್ರದಲ್ಲಿ ಟ್ಯಾಕ್ಸ್ ಫ್ರೀ ಮಾಡುತ್ತಾರೆ, ಸಬ್ಸಿಡಿ ಕೊಡುವುದಿಲ್ಲ.

ಟ್ಯಾಕ್ಸ್ ಫ್ರೀ ಮಾಡುವುದರಿಂದ ಅಂಥ ಚಿತ್ರಗಳನ್ನು ಜನ ಬಂದು ನೋಡಿದಾಗ ಅವರಿಗೆ ಲಾಭ ಸಿಗುತ್ತದೆ. ಇಲ್ಲದೇ ಹೋದರೆ ಇಲ್ಲ. ಆದರೆ ನೀವು ಪ್ರತಿಯೊಂದು ಚಿತ್ರಕ್ಕೂ ಸಬ್ಸಿಡಿ ಕೊಡುತ್ತಿರುವುದರಿಂದ ಎಲ್ಲರೂ ಚಿತ್ರ ತೆಗೆಯತಕ್ಕ ಹವ್ಯಾಸಕ್ಕೆ ಇಳಿದು ಇವತ್ತು ಚಿತ್ರಗಳ ಗುಣಮಟ್ಟ ಇಳಿಯುವುದಕ್ಕೆ ಕಾರಣವಾಗಿದೆ. ಅದಕ್ಕೆ ನನ್ನ ಸಲಹೆಯನ್ನು ಕನ್‌ಸಿಡರ್ ಮಾಡುವುದಕ್ಕೆ ಆಲೋಚನೆ ಮಾಡಿನೋಡಿ. ಸಬ್ಸಿಡಿ ಕೊಡುವುದರ ಬದಲು ಒಳ್ಳೆಯ ಚಿತ್ರಗಳಿಗೆ ಟ್ಯಾಕ್ಸ್ ಫ್ರೀ ಮಾಡುವುದು ಒಳ್ಳೆಯದು.

**ಅಧ್ಯಕ್ಷರು:** ಸರ್ಕಾರಕ್ಕೆ ಗ್ರಹಣ ಚಿತ್ರದ ಮಹತ್ವದ ಅರಿವಾಗಿದೆ. ಈ ದಿಶೆಯಲ್ಲಿ ಕೈಗೊಳ್ಳಬೇಕಾದ ಕ್ರಮಗಳನ್ನು ಸರ್ಕಾರ ತಡಮಾಡದೆ ಕೈಗೊಳ್ಳುತ್ತದೆ ಎಂದು ಆಶಿಸೋಣ. ಇಲ್ಲಿಗೆ ಈ ವಿಷಯದ ಬಗೆಗಿನ ಚರ್ಚೆ ಅಂತ್ಯಗೊಳಿಸೋಣ.

(ವಿಧಾನ ಸಭೆ ಕಲಾಪ, ಜುಲೈ 21, 1980)

## ಶೀಲ–ಅಶ್ಲೀಲ ಒಂದು ಜಿಜ್ಞಾಸೆ

(ಸಂದರ್ಭ: ಗುಂಡೂರಾಯರು ಮುಖ್ಯ ಮಂತ್ರಿಯಾಗಿದ್ದ ಸಂದರ್ಭದಲ್ಲಿ ಎ ಸರ್ಟಿಫಿಕೇಟ್ ಚಲನಚಿತ್ರಗಳಿಗೆ ವಿಧಿಸಲಾಗುತ್ತಿದ್ದ ಎರಡು ಪಟ್ಟು ಮನರಂಜನಾ ತೆರಿಗೆಯನ್ನು ತೆಗೆದುಹಾಕುವ ಸಂಬಂಧ ವಿಧಾನಸಭೆಯಲ್ಲಿ ತಿದ್ದುಪಡಿ ಮಸೂದೆಯೊಂದನ್ನು ಮಂಡಿಸಿದಾಗ ನಡೆದ ಚರ್ಚೆ)

## THE KARNATAKA ENTERTAINMENT TAX (AMENDMENT) BILL, 1980

**M. Veerappa Moily (Minister for Finance and Planning):** Sir, I beg to move

"That the Karnataka Entertainments Tax (Amendment) Bill, 1980, be taken into consideration."

The question was proposed

ಎಂ. ವೀರಪ್ಪ ಮೊಯ್ಲಿ: ಮಾನ್ಯ ಅಧ್ಯಕ್ಷರೇ, ಇದು ಬಹಳ ಸರಳವಾದ ಮತ್ತು ಸಾಮಾನ್ಯವಾದ ತಿದ್ದುಪಡಿ ಮಸೂದೆ. ಹಿಂದೆ "ಎ" ಸರ್ಟಿಫಿಕೇಟಿನ ಚಲನಚಿತ್ರಗಳಿಗೆ ಎರಡು ಪಟ್ಟು ಮನರಂಜನಾ ತೆರಿಗೆಯನ್ನು ವಿಧಿಸಲಾಗಿತ್ತು. ಆದರೆ, ಅದರಿಂದಾಗಿ ಸರ್ಕಾರಕ್ಕೆ ಹೆಚ್ಚಿಗೆ ಆದಾಯ ಬರಲಿಲ್ಲ. ಎರಡನೆಯದಾಗಿ ದೇಶದ ಯಾವುದೇ ರಾಜ್ಯದಲ್ಲಿ ಇಲ್ಲದಂಥ ಹೊಸ ತೆರಿಗೆ ಇದಾಗಿದೆ. ಆದುದರಿಂದ ಮೊದಲಿದ್ದ ಸ್ಥಿತಿಯನ್ನು ಮುಂದುವರೆಸಲು ಈ ತಿದ್ದುಪಡಿ ಮಸೂದೆಯನ್ನು ತರಲಾಗಿದೆ. ಮಾನ್ಯ ಸದಸ್ಯರು ಇದಕ್ಕೆ ಒಪ್ಪಿಗೆ ಕೊಡಬೇಕೆಂದು ಪ್ರಾರ್ಥಿಸುತ್ತೇನೆ.

ಕುಮಾರಿ ಎಸ್. ಪ್ರಮೀಳಾ (ಚಾಮರಾಜಪೇಟೆ): ಮಾನ್ಯ ಅಧ್ಯಕ್ಷರೇ, ಅಶ್ಲೀಲ ಚಲನಚಿತ್ರಗಳು ಮತ್ತು ಅಶ್ಲೀಲ ಭಿತ್ತಿ ಪತ್ರಗಳ ಹಾವಳಿ ಇತ್ತೀಚೆಗೆ ಹೆಚ್ಚಾಗಿದೆ. ಪ್ರತಿದಿನ ಬೆಳಿಗ್ಗೆ ಪತ್ರಿಕೆ ನೋಡುತ್ತಿದ್ದಂತೆ, ಈ ಚಿತ್ರಗಳೇ ಕಾಣುತ್ತವೆ. ಇವುಗಳನ್ನು ತಡೆಗಟ್ಟುವ ಸಲುವಾಗಿ ಜಾಸ್ತಿ ತೆರಿಗೆಯನ್ನು ಹಾಕಬೇಕೆಂದು ನಾವು ಕೇಳಿದ್ದಕ್ಕೆ ಹಿಂದಿನ ಸರ್ಕಾರ ತೆರಿಗೆಯನ್ನು ಜಾಸ್ತಿ ವಿಧಿಸಿತ್ತು. ಮೆಜೆಸ್ಟಿಕ್ ವೃತ್ತದ ಬಳಿಯಂತೂ ನೋಡುವುದಕ್ಕಾಗುವುದಿಲ್ಲ. ನಮ್ಮ ಮಕ್ಕಳುಮರಿಗಳ ಮಾನಸಿಕ ಸ್ಥಿತಿ ಸರಿಯಾಗಿ ಇರಬೇಕು ಎಂದು ಹೇಳುತ್ತೀರೋ ಅಥವಾ ಬೇಡವೆಂದು ಹೇಳುತ್ತೀರೋ. ಇದು ಅನ್ಯಾಯ. ತೆರಿಗೆ ಕಡಿಮೆ ಮಾಡುವುದರ ಬದಲು ಮೂರು ಪಟ್ಟು ಜಾಸ್ತಿ ಮಾಡಿದರೂ ನಮ್ಮ ವಿರೋಧವಿಲ್ಲ. ಆದುದರಿಂದ, ಜಾಸ್ತಿ ಮಾಡಿರುವುದನ್ನು ಕಡಿಮೆ ಮಾಡಬಾರದೆಂತಲೂ, ಅಶ್ಲೀಲ ಚಲನಚಿತ್ರ ಮತ್ತು ಭಿತ್ತಿಪತ್ರಗಳ ಪ್ರದರ್ಶನಕ್ಕೆ ಅವಕಾಶ ಕೊಡಬಾರದೆಂತಲೂ ನಾನು ಮಾನ್ಯ ಸಚಿವರಲ್ಲಿ ಕೇಳಿಕೊಳ್ಳುತ್ತೇನೆ.

ಕೆ.ಹೆಚ್. ಶ್ರೀನಿವಾಸ್: ಮಾನ್ಯ ಅಧ್ಯಕ್ಷರೇ, ಈ ವಿಧೇಯಕಕ್ಕೆ ನಾನು ವಿರೋಧವನ್ನು ಸೂಚಿಸುತ್ತಾ ಇರುವುದಕ್ಕೆ ಕಾರಣ ತಾತ್ವಿಕವಾದುದಲ್ಲ. ಮಾನ್ಯ ಮಂತ್ರಿಗಳು ಈ ಬಗ್ಗೆ ಸಮಗ್ರ ಮಸೂದೆಯೊಂದನ್ನು ತಂದಿದ್ದರೆ ಚೆನ್ನಾಗಿರುತ್ತೆಂದು ನನ್ನ ಭಾವನೆ. ಅವರು ಹೇಳಿಕೊಳ್ಳುತ್ತಿರುವುದಕ್ಕೂ, ನೀವು ತಿದ್ದುಪಡಿ ತಂದಿರುವುದಕ್ಕೂ ತಪ್ಪು ತಿಳಿಯಲು ಅವಕಾಶವಿರುವುದರಿಂದ, ತಾವು ಈ ತಿದ್ದುಪಡಿ ಮಸೂದೆಯನ್ನು ಸ್ವಲ್ಪ ದಿವಸ ಮುಂದಕ್ಕೆ ಹಾಕಿ ಮುಂದಿನ ಅಧಿವೇಶನದಲ್ಲಿ ಸಮಗ್ರ ವಿಧೇಯಕವೊಂದನ್ನು ತನ್ನಿ.

ಡಿ.ಟಿ. ರಾಮು (ಚನ್ನಪಟ್ಟಣ): ಮಾನ್ಯ ಅಧ್ಯಕ್ಷರೇ, ಮಾನ್ಯ ಸಚಿವರು ತಂದಿರುವ ತಿದ್ದುಪಡಿ ಸ್ವಾಗತಾರ್ಹವಾದುದು. ಆದರೆ, ಕನ್ನಡ ಚಲನಚಿತ್ರಗಳ ಬೆಳವಣಿಗೆ ದೃಷ್ಟಿಯಿಂದ ಕನ್ನಡೇತರರ ಚಲನಚಿತ್ರಗಳಿಗೆ ಮಾತ್ರ ತೆರಿಗೆ ಏರಿಕೆ ಸೀಮಿತವಾಗಬೇಕೆನ್ನುವುದು ನನ್ನ ಅಭಿಪ್ರಾಯ. ರಿಯಾಯಿತಿ ಸೌಲಭ್ಯವನ್ನು ಕನ್ನಡ ಚಲನಚಿತ್ರಗಳಿಗೆ ಮಾತ್ರ ಅನ್ವಯಿಸಿದಲ್ಲಿ ಕನ್ನಡ ಚಲನಚಿತ್ರ ಮಾಧ್ಯಮ ಹೆಚ್ಚು ಅಭಿವೃದ್ಧಿಗೆ ಬರುತ್ತದೆ.

**ಕುಮಾರಿ ಎಸ್. ಪ್ರಮೀಳ**: ನಮ್ಮ ಕರ್ನಾಟಕದಲ್ಲಿ ಮಹಿಳೆಯರ ಮಾನಭಂಗ ಪ್ರಕರಣಗಳು ಹೆಚ್ಚಾಗುತ್ತಿರುವುದಕ್ಕೆ ಅಶ್ಲೀಲ ಚಿತ್ರಗಳೂ ಕಾರಣ. ಆದುದರಿಂದ, ಮಾನ್ಯ ಸಚಿವರು ಇದನ್ನು ವಾಪಸ್ಸು ತೆಗೆದುಕೊಳ್ಳಬೇಕು. ಇಲ್ಲದಿದ್ದರೆ, ಮಹಿಳಾ ಸದಸ್ಯರು ಧರಣಿ ಹೂಡುವುದಕ್ಕೂ ಸಿದ್ಧರಾಗಿದ್ದಾರೆ.

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ)**: ಮಾನ್ಯ ಅಧ್ಯಕ್ಷರೇ, ಈ ವಿಧೇಯಕ ಕುರಿತಂತೆ ಅರ್ಥಪೂರ್ಣ ಚರ್ಚೆ ನಡೆದಿದೆ. ಶೀಲ ಯಾವುದು ಅಶ್ಲೀಲ ಯಾವುದು ಎನ್ನುವ ವಿಚಾರ ಅಥವಾ ಸಮಸ್ಯೆ ಒಂದು ಪ್ರಾಂತ್ಯದ ಸಮಸ್ಯೆಯಾಗಿ ಉಳಿದಿಲ್ಲ. ಹೆಚ್ಚು ಕಡಿಮೆ ಜಗತ್ತಿನಲ್ಲಿ ಇದರ ಬಗ್ಗೆ ವಿಚಾರ ಮಾಡಲಾಗುತ್ತಿದೆ. ನಾವು ಇಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದ್ದೇನೆಂದರೆ, ಸಾಮಾನ್ಯವಾಗಿ ಜನ ಯಾವುದನ್ನು ಮೆಚ್ಚುತ್ತಾರೆ, ಅಂತಹ ಚಿತ್ರ ಮಾಡಿ, ಜನರನ್ನು ಮೆಚ್ಚಿಸಿ, ಹಣ ಬಾಚುವುದು ಇದೊಂದು ವಿಷಚಕ್ರ. ಚಲನಚಿತ್ರಗಳಲ್ಲಿ ಹಿಂಸೆ ಪ್ರಚೋದನೆ, ಲೈಂಗಿಕ ಪ್ರಚೋದನೆ ಮತ್ತು ಭಕ್ತಿಭಾವ ಪ್ರಚೋದನೆ ಎಂಬ ಮೂರು ರೀತಿಯ ಆಕರ್ಷಣೆ ಜೋಡಿಸಿರುತ್ತಾರೆ. ಈ ಮೂರೂ ಬಗೆಯನ್ನು ವಿಮರ್ಶೆ ಮಾಡುವುದಾದರೆ, ಭಕ್ತಿಭಾವ ಪ್ರಚೋದಕ ಚಿತ್ರವಾದ "ಜೈ ಸಂತೋಷಿಮಾ ಹತ್ತು ಕೋಟಿ ರೂಪಾಯಿಗಳಿಗೂ ಮೀರಿ ಹಣ ಗಳಿಸಿತು. ಅದಕ್ಕಿಂತಲೂ ಜಾಸ್ತಿ ಹಣವನ್ನು ಹಿಂಸಾಪ್ರಚೋದಕ ಚಿತ್ರವಾದ "ಶೋಲೆ" ಗಳಿಸಿತು. ಅದೇ ರೀತಿ ರಾಜಕಪೂರರ "ಬಾಬಿ" ಚಿತ್ರ ಇವೆರಡಕ್ಕಿಂತಲೂ ಮೀರಿ ಬಾಕ್ಸ್ ಆಫೀಸಿನ ದಾಖಲೆ ಮತ್ತು ಗಲ್ಲಾಪೆಟ್ಟಿಗೆ ತುಂಬಿಸಿತು. ಇದು ನಮ್ಮ ದೇಶದ ಜನರ ಮನಸ್ಸಿನಲ್ಲಿರತಕ್ಕ ಅಭಿರುಚಿಯ ಸ್ಪಷ್ಟ ಚಿತ್ರಣ. ಇಲ್ಲಿ ನಮ್ಮ ಸಂಸ್ಕೃತಿ ಅಥವಾ ಇನ್ನೊಬ್ಬರ ಸಂಸ್ಕೃತಿ ಎಂದಲ್ಲ. ನಮ್ಮವನೇ ಆದ ಕೃಷ್ಣ ಬೇರೆಯವರ ಸೀರೆ ಕದ್ದು ಮರದ ಮೇಲೆ ಏತಕ್ಕೆ ಕುಳಿತಿದ್ದ?

**ಶ್ರೀಮತಿ ಗಜಾನನ ಶರ್ಮ**: ಮಾನ್ಯ ಸದಸ್ಯರು ಈ ವಿಷಯವನ್ನು ಇಷ್ಟು ಹಗುರವಾಗಿ ತೆಗೆದುಕೊಳ್ಳಬಾರದು.

**ಜೆ.ಹೆಚ್. ಪಟೇಲ್**: ಹಾಗಾದರೆ ಅಶ್ಲೀಲವೆಂದರೆ ಯಾವುದು?

**ಎಸ್.ವಿ. ನಾಯಕ್**: ಕೃಷ್ಣ ಬಾಲಕನಾಗಿದ್ದಾಗ ಹಾಗೆ ಮಾಡಿದ.

**ಜೆ.ಹೆಚ್. ಪಟೇಲ್**: ಬಾಲಕನಾಗಿದ್ದಾಗಲೇ ಅಷ್ಟು ಮಾಡಿರಬೇಕಾದರೆ ಇನ್ನು ವಯಸ್ಸಾದ ಮೇಲೆ ಇನ್ನೆಷ್ಟು ಮಾಡಿರಬೇಕು ಲೆಕ್ಕ ಹಾಕಿ.

**ಶ್ರೀ ಅಜೀಜ್ ಸೇಠ್**: ಅದೇ ಈಗಿರುವ ವಿಷಯ

**ಜೆ.ಹೆಚ್. ಪಟೇಲ್**: ಮಾನ್ಯ ಶ್ರೀನಿವಾಸ್ ಅವರು ಹೇಳಿದಂತೆ ಸಮಗ್ರ ಮಸೂದೆ ತರೋಣ. ಅದನ್ನು ಪಾಸು ಮಾಡೋಣ. ನಮ್ಮ ಸಮಾಜದ ಮೇಲೆ ಮತ್ತು ಯುವಕರ

ಮೇಲೆ ಪರಿಣಾಮ ಬೀರುವ ಅತ್ಯಂತ ಪ್ರಭಾವಿ ಮಾಧ್ಯಮವಿದು. ಇದನ್ನು ನಾವು ಹಗುರವಾಗಿ ತೆಗೆದುಕೊಳ್ಳುವ ಹಾಗಿಲ್ಲ. ದೇವಸ್ಥಾನಗಳು ಮತ್ತು ವಿಶ್ವವಿದ್ಯಾನಿಲಯಗಳು ಜನಸಮೂಹದ ಮೇಲೆ ಮಾಡುವ ಪರಿಣಾಮಕ್ಕಿಂತ ಹೆಚ್ಚು ಪರಿಣಾಮವನ್ನು ಸಿನಿಮಾ ಮಾಧ್ಯಮ ಮಾಡುತ್ತಿದೆ. ಆದರ ಬಗ್ಗೆ ನಾವು ಆಲೋಚನೆ ಮಾಡಬೇಕು. ಆಲೋಚನೆ ಮಾಡುವಾಗ, ಯಾವುದೇ ಕಂದಾಚಾರ ಪದ್ಧತಿ ನಮ್ಮ ಚಿಂತನೆಗೆ ಅಡ್ಡಬರಬಾರದು. ಇದೇ ರೀತಿ ಮುಂದುವರೆದ ಅತಿರೇಕಗಳನ್ನೂ ಇಟ್ಟುಕೊಳ್ಳಬಾರದು. ಆದುದರಿಂದ, ಸದ್ಯಕ್ಕೆ ಈ ಮಸೂದೆಯನ್ನು ಪಾಸು ಮಾಡೋಣ.

**ಹೆಚ್. ಗಂಗಾಧರನ್:** ಮಾನ್ಯ ಅಧ್ಯಕ್ಷರೇ, ಮಾನ್ಯ ಜೆ.ಹೆಚ್. ಪಟೇಲರು ಸದ್ಯಕ್ಕೆ ಈ ಮಸೂದೆಯನ್ನು ಪಾಸು ಮಾಡೋಣವೆಂದು ಹೇಳಿದರು. ಸಮೂಹ ಮಾಧ್ಯಮವಾದ ಸಿನಿಮಾ ಇಂದು ಜನರ ಮನಸ್ಸಿನಲ್ಲಿ ಸತ್ಪರಿಣಾಮವನ್ನುಂಟು ಮಾಡುವ ಮಾಧ್ಯಮವಾಗಿ ಉಳಿದಿಲ್ಲ.

ಸಿನಿಮಾಗೆ ಹೋಗುವ ಪ್ರವೃತ್ತಿ ಅತ್ಯಂತ ಬಡವರಲ್ಲೂ ಸಹ ಹೆಚ್ಚಾಗಿ ಬೆಳೆಯುತ್ತಿದೆ. ಇದರಿಂದ ಅವರ ಹಣವೂ ಹಾಳು. ಕಾಲವೂ ಹಾಳು. ಸಿನಿಮಾದಿಂದ ಕಲಿಯುವ ದುಶ್ಚಟಗಳು ಹೆಚ್ಚು. ಆದುದರಿಂದ, ಮಾನ್ಯ ಸಚಿವರು ಇಂತಹ ಚಿತ್ರಗಳಿಗೆ ರಿಯಾಯಿತಿಯನ್ನು ಕೊಡಲಿರುವ ಈ ಮಸೂದೆಯನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

**Qamarul Islam:** Sir. It is our duty to maintain our culture and heritage which has been considered rich by every one of us. Therefore, the Government should impose more tax on films which contain sex and violence and we should see that less publicity is given thereby the producers may not be encouraged to produce such films again.

I also urge the Government of India to recensor films which have already been released and to be strict in future while according Certificate to films containing sex and violence.

**R. Gundu Rao (Chief Minister):** I quite agree with what the hon'ble Member Smt Pramila has stated about violence and sex in Indian Films. I agree that bad films will have a ugly impact on our society and will demoralise whole system. That is why we have urged Central Government to sanction a Censor Board for Karnataka Region. If we get a separate Censor Board all these aspects will be looked into and if

we get a Censor Board I will appoint Smt. Pramila as one of the Censor Board Members. Now, the present Bill has nothing to do with the suggestions made by the hon'ble Members. ಆದುದರಿಂದ, ಈಗ ಮಸೂದೆಯನ್ನು ಪಾಸು ಮಾಡೋಣ. ಮುಂದೆ ಸೆನ್ಸಾರ್ ಮಂಡಲಿ ಆದರೆ ನೋಡೋಣ. ತೆರಿಗೆಯನ್ನು ಜಾಸ್ತಿ ಮಾಡುವ ಅಥವಾ ಸಮಗ್ರ ಮಸೂದೆಯನ್ನು ತರುವ ಪ್ರಶ್ನೆ ಇಲ್ಲಿಲ್ಲ.

(ಪ್ರಸ್ತಾವನೆಯನ್ನು ಸದನ ಅನುಮೋದಿಸಿ ಧ್ವನಿಮತದಿಂದ ಮಸೂದೆಯನ್ನು ಅಂಗೀಕರಿಸಿತು)

(ವಿಧಾನಸಭೆ ಕಲಾಪ ಜುಲೈ 31, 1980)

## ಕನ್ನಡ ಚಿತ್ರಗಳ 'ಅವಸ್ಥೆ'

**ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ):** ಎಲ್ಲರೂ ಕನ್ನಡ ಚಿತ್ರಗಳನ್ನೇ ನೋಡಬೇಕೆಂದು ಸರ್ಕಾರದವರು ಕಾನೂನು ಮಾಡುವುದಕ್ಕೆ ಆಗುತ್ತದೆಯೆ?

ಈ ಪ್ರಶ್ನೆಗೆ ನಾನೇ ಉತ್ತರ ಹೇಳುತ್ತೇನೆ: ಮಾನ್ಯ ಅಧ್ಯಕ್ಷರೇ, ಕೇವಲ ಕನ್ನಡ ಭಾಷೆಯ ಚಿತ್ರಗಳನ್ನು ಮಾತ್ರ ನೋಡಬೇಕೆಂದು ಹೇಳಿದರೆ, ನಾನು ನೋಡುವುದಿಲ್ಲ ಎಂದು ಹೇಳುತ್ತೇನೆ. ಇದು ಕಾರ್ಯ ಸಾಧುವಲ್ಲದ ಮಾತು. ಮಾಲೀಕ ಥಿಯೇಟರನ್ನೂ ಮುಚ್ಚಿಕೊಳ್ಳುತ್ತಾನೆ. ಅಲ್ಲಿ ಕಸ ಹೊಡೆಯುವವನು ಎಲ್ಲೋ ಹೋಗುತ್ತಾನೆ. ಇವತ್ತು ಬೆಂಗಳೂರಿನಲ್ಲಿ ಬೇರೆ ಭಾಷೆಗಳ ಚಿತ್ರಗಳು ಓಡಿದಷ್ಟು ನಮ್ಮ ಕನ್ನಡ ಭಾಷೆಯ ಚಿತ್ರಗಳು ಓಡುವುದಿಲ್ಲ. ಇವು ಜನರ ದುಡ್ಡಿನಿಂದ ಬದುಕಬೇಕು. ಸರ್ಕಾರದ ದುಡ್ಡಿನಿಂದ ಅಲ್ಲ.

ನಾವು ಎಷ್ಟೇ ಪ್ರಯತ್ನ ಮಾಡಿ ನಮ್ಮ ಕನ್ನಡ ಭಾಷೆಯನ್ನು ಬೆಳೆಸಬೇಕು, ಒಳ್ಳೆಯ ಚಿತ್ರಗಳನ್ನು ತೆಗೆಯಬೇಕು, ನಿಮಗೆ ಸಬ್ಸಿಡಿಯನ್ನು ಕೊಡುತ್ತೇವೆ, ಟ್ಯಾಕ್ಸ್ ರಿಲೀಫ್ ಕೊಡುತ್ತೇವೆ, ಇತ್ಯಾದಿ ಏನು ಹೇಳಿದರೂ ಸಾಧ್ಯವಾಗುತ್ತಿಲ್ಲ. ಆದರೆ ನಮ್ಮಲ್ಲಿ ಅನೇಕ ಒಳ್ಳೆಯ ಕನ್ನಡ ಚಿತ್ರಗಳು ಬಂದಿವೆ. ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಪ್ರಶಸ್ತಿಯನ್ನು ತೆಗೆದುಕೊಂಡಿರುವಂಥ ಕನ್ನಡ ಚಿತ್ರಗಳು ಬಂದಿದ್ದರೂ ಅವುಗಳನ್ನು ಜನರು ನೋಡುವುದಿಲ್ಲ.

ಜನರು ನೋಡುವುದಾದರೂ ಎಂಥಾದ್ದು ಎಂದರೆ ಕೀಳು ಅಭಿರುಚಿಯ ಇಂಗ್ಲೀಷ್ ಮಲೆಯಾಳಿ, ತಮಿಳು, ಮುಂತಾದ ಚಿತ್ರಗಳನ್ನು. ಅವರು ಏತಕ್ಕೆ ನೋಡುತ್ತಾರೆಂಬುದು ತಮಗೆ ಗೊತ್ತು. ಆ ತಮಿಳು ರೀತಿಯಲ್ಲಿ ಕುಣಿಯುವುದಕ್ಕೆ ನಮ್ಮವರಿಗೆ ಬರುವುದಿಲ್ಲ. ಹಾಗಾದರೆ ನೀವು ಕುಣಿಯುವುದನ್ನು ಕಲಿಸಿ, ಅವರಂತೆಯೇ ನೀವೂ ಮಾಡಿ, ಸರ್ಕಾರವೇ ಒಂದು ಶಾಲೆಯನ್ನು ಮಾಡಿಸಿ ಎಂದು ಹೇಳಿದರೆ ಅದೆಲ್ಲಾ ಸಾಧ್ಯವಾಗುವುದಿಲ್ಲ.

**ವಾಟಾಳ್ ನಾಗರಾಜ್:** ಎಲ್ಲ ಭಾಷೆಯವರಂತೆ ಕನ್ನಡಿಗರಿಗೂ ಕುಣಿಯುವುದು ಗೊತ್ತಿದೆ. ದೇಶದಲ್ಲಿನ ಪ್ರಮುಖ ಕಲಾವಿದರನ್ನು ಮೀರಿಸುವಂಥ ಕಲಾವಿದರು ನಮ್ಮಲ್ಲಿದ್ದಾರೆ. ಒಮ್ಮೆ

ಹೇಳುತ್ತೀರಿ ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಪ್ರಶಸ್ತಿ ಪಡೆದಂಥ ಕನ್ನಡ ಚಿತ್ರಗಳನ್ನು ನೋಡಿದ್ದೇವೆಂದು. ಇನ್ನೊಂದು ಕಡೆ ಹೇಳುತ್ತೀರಿ ತಮಿಳರು ಕುಣಿದಂತೆ ನಮ್ಮವರು ಕುಣಿಯುವುದಿಲ್ಲ ಎಂದು.

ಎಂ.ಪಿ. ಪ್ರಕಾಶ್: ಮಾನ್ಯ ಅಧ್ಯಕ್ಷರೇ, ಮಾನ್ಯ ಉಪ ಮುಖ್ಯಮಂತ್ರಿಗಳು ಹೇಳಿದುದು ಬೇರೆಯವರಂತೆ ಅಶ್ಲೀಲವಾಗಿ ಕುಣಿತ, ಹಿಂಸೆ ಇಂಥಾದ್ದನ್ನೆಲ್ಲಾ ನಮ್ಮ ಕನ್ನಡ ಚಿತ್ರಗಳಲ್ಲಿ ತೋರಿಸುವುದಿಲ್ಲ; ಸೃಜನಾತ್ಮಕ ಚಿತ್ರವನ್ನು ತಯಾರಿಸುವುದು ಬಹಳ ಜವಾಬ್ದಾರಿಯುತವಾಗಿದೆ ಎನ್ನತಕ್ಕ ಮಾತನ್ನು ಹೇಳಿದರೇ ವಿನಃ ನಮ್ಮವರಿಗೆ ಕುಣಿಯುವುದಕ್ಕೆ ಬರುವುದಿಲ್ಲ ಎನ್ನುವ ಅರ್ಥದ ಮಾತನ್ನು ಅವರು ಹೇಳಲಿಲ್ಲ.

ಜೆ.ಹೆಚ್. ಪಟೇಲ್: ಅಂಥ ಉತ್ತಮ ಚಿತ್ರಗಳನ್ನು ನಮ್ಮ ಜನರು ನೋಡುವುದಿಲ್ಲ. ನಾನೇ ಎರಡು ಸಿನಿಮಾಗಳನ್ನು ತೆಗೆದೆ. ಈ ಪೈಕಿ 'ಅವಸ್ಥೆ' ಎಂಬ ಹೆಸರಿನ ಚಿತ್ರವೂ ಒಂದು. ಆದರೆ ಅದನ್ನು ಜನರು ನೋಡಲಿಲ್ಲ.

ಚಂದ್ರಕಾಂತ ಜಿ. ಬೆಲ್ಲದ್: ಕರ್ನಾಟಕದಲ್ಲಿ ಕನ್ನಡ ಉಳಿಯಬೇಕಾದರೆ ಬೆಂಗಳೂರು ಬಹಳ ಪ್ರಾಮುಖ್ಯವಾದುದು. ಚಿತ್ರಮಂದಿರದವರು ವ್ಯಾವಹಾರಿಕವಾಗಿ ತಮಗೆ ಲಾಭವಾಗುವಂಥ ರೀತಿಯಲ್ಲಿ ಇಲ್ಲಿ ಪ್ರಸ್ತಾವನೆಯನ್ನು ತರುತ್ತಾರೆ. ಕಳೆದ 50 ವರ್ಷದಿಂದ ಇಲ್ಲೇ ಇರುವವರೂ ಕನ್ನಡ ಕಲಿಯದೇ ತಮ್ಮದೇ ಭಾಷೆ ಮಾತನಾಡಿಕೊಂಡು ಬೆಳೆಯುತ್ತಿದ್ದಾರೆ. ನಾವು ನಿರಭಿಮಾನಿಗಳು. ಈ ಹಿನ್ನೆಲೆಯಲ್ಲಿ ಸರ್ಕಾರ ಕನ್ನಡ ಚಿತ್ರಗಳ ಬೆಳವಣಿಗೆಗೆ ಹೆಚ್ಚಿನ ಆದ್ಯತೆ ಕೊಡಬೇಕಾಗಿದೆ. ಕನ್ನಡವನ್ನು ಬೆಳೆಸುವುದಕ್ಕೆ, ಉತ್ತಮ ಕನ್ನಡ ಚಿತ್ರಗಳು ಬರುವುದಕ್ಕೆ ಸಹಾಯಧನ ಸಕಾಲದಲ್ಲಿ ಬೇಕು. ಈ ಬೆಂಗಳೂರು ನಗರದ ಚಲನಚಿತ್ರ ಮಂದಿರಗಳಿಗೆ ಕಡ್ಡಾಯವಾಗಿ ಕನ್ನಡ ಚಿತ್ರ ಪ್ರದರ್ಶನ ನಡೆಸುವುದಕ್ಕೆ ಆದೇಶ ಕೊಡಬೇಕು.

ಜೆ.ಬಿ. ಶಿವಕುಮಾರ್: ನಾನು ತಮ್ಮ ಮೂಲಕ ಸಲಹೆ ಕೊಡುವುದು ಇಷ್ಟೆ. ಹಿಂದೆ ವಾರದಲ್ಲಿ ಎರಡು ದಿನ ಮಾರ್ನಿಂಗ್ ಷೋ, ಮ್ಯಾಟ್ನಿ ಇರುತ್ತಿತ್ತು. ಇವತ್ತು ದುರಾದೃಷ್ಟ, ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಬೆಳಿಗ್ಗೆ 9ಕ್ಕೆ ಸಿನಿಮಾ. ಬೆಳಿಗ್ಗೆ 9ಕ್ಕೆ ನಮ್ಮ ಗ್ರಾಮಾಂತರ ಪ್ರದೇಶದ ಮಕ್ಕಳು ಬಂದೂ ಕ್ಯೂ ನಿಲ್ಲುತ್ತಾರೆ. ಬಸ್ಸನ್ನು ಇಟ್ಟಿರುವುದು ಶಾಲಾ ಕಾಲೇಜುಗಳಿಗೆ ಬರತಕ್ಕ ಮಕ್ಕಳಿಗೆ. ಆದರೆ ಅಲ್ಲಿ 90 ಭಾಗ ಬರತಕ್ಕವರು ಚಲನಚಿತ್ರಗಳಿಗೆ. ಆ ದೃಷ್ಟಿಯಿಂದ ತಮ್ಮ ಮೂಲಕ ಮಾನ್ಯ ಸಚಿವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ, ಚಲನಚಿತ್ರ ಪ್ರದರ್ಶನ ಸಂಖ್ಯೆ ಇಳಿಸುವುದಕ್ಕೆ ಸರ್ಕಾರ ಗಮನ ಕೊಡಬೇಕು. ಕೆಟ್ಟ ಪರಿಣಾಮದ ಚಿತ್ರಗಳ ಪ್ರದರ್ಶನ ಸಂಖ್ಯೆಯನ್ನು ಇಳಿಸಬೇಕು.

ಚಲನಚಿತ್ರ ಮಂದಿರ ಎಷ್ಟು ಕುಲಗೆಟ್ಟಿದೆ ಎಂದರೆ ಫ್ಯೂಮಿಗೇಷನ್ ಇಲ್ಲ. ಅಲ್ಲಿ ಲ್ಯಾವೆಟ್ರಿ ಕ್ಲೀನಾಗಿ ಇರುವುದಿಲ್ಲ, ಅಂಟು ಜಾಡ್ಯದ ವಾತಾವರಣ ಇರುತ್ತದೆ. ಸರ್ಕಾರ ಸಮಿತಿ ಮಾಡಿದಾಗ ಈ ಅಂಶಗಳತ್ತ ಗಮನ ನೀಡಬೇಕು.

ಜೆ.ಹೆಚ್. ಪಟೇಲ್: ಮಾನ್ಯ ಶಿವಕುಮಾರರ ಮಾತು ಸತ್ಯ. ಅವರ ಸಲಹೆ ಯೋಗ್ಯವಾದದ್ದು. ಭಾಷೆಯ ಅಭಿಮಾನ ನಮ್ಮೆಲ್ಲರಿಗೂ ಬೇಕೇ ಬೇಕು. ಈ ಬಗ್ಗೆ ಮಾನ್ಯ ಚಂದ್ರಕಾಂತ ಬೆಲ್ಲದ್ ರವರ ಅಭಿಪ್ರಾಯ ನಿಜಕ್ಕೂ ಒಪ್ಪತಕ್ಕದ್ದು. ಕನ್ನಡ ಭಾಷೆಯ ಬೆಳವಣಿಗೆಗೆ ಪೂರಕವಾಗಿ ನಮ್ಮ ಸರ್ಕಾರದ ವತಿಯಿಂದ ಏನು ಮಾಡಬಹುದು, ಎಷ್ಟು ದೂರದವರೆಗೆ ಹೋಗಬಹುದು, ಕಲೆ ಹೇಗೆ ಬೆಳೆಯುತ್ತದೆ, ಚಿತ್ರ ಹೇಗೆ ಆಗುತ್ತದೆ ಎಂಬುದನ್ನು ನಾನು ಈವರೆಗೆ ಹೇಳಿದೆ.

ನಾನು 'ಅವಸ್ಥೆ' ಸಿನಿಮಾವನ್ನು ತೆಗೆದಿದ್ದು ಸಹಿತ ಇದೇ ಉದ್ದೇಶದಿಂದ.

(ವಿಧಾನಸಭೆ ಕಲಾಪ, ಫೆಬ್ರವರಿ 27, 1996)

**ಮಾತಿನ ಮೋಡಿ**

ಜೆ.ಹೆಚ್. ಪಟೇಲರ ಮಾತುಗಳು ನಿಜಕ್ಕೂ ಕೇಳುವವರನ್ನು ಆಳವಾದ ಆಲೋಚನೆಗೆ ಹಚ್ಚುವಂತಹದು. ಮೇಲುನೋಟಕ್ಕೆ ಹಾಸ್ಯ ಎಂದು ಕಾಣಬಹುದು. ಆದರೆ ಅದು ಅರ್ಥಗರ್ಭಿತ.

ನನಗಿನ್ನೂ ನೆನಪಿದೆ. ಪಟೇಲರು ಆಗ ಕಂದಾಯ ಮಂತ್ರಿಗಳಾಗಿದ್ದರು. ಕಾಂಗ್ರೆಸ್ಸಿನ ಶ್ರೀ ಟಿ.ಎನ್. ನರಸಿಂಹಮೂರ್ತಿಯವರು ಮೇಲ್ಮನೆ ಪ್ರತಿಪಕ್ಷದ ನಾಯಕರು.

ಮಾತಿಗೆ ಮಾತು ಬೆಳೆದು ಯಾವುದೋ ಸಂದರ್ಭದಲ್ಲಿ ನರಸಿಂಹಮೂರ್ತಿಗಳೂ ಗುಡುಗಿದರು. ನಾವೇನು ಇಲ್ಲಿ ದನಕಾಯಕ್ಕೆ ಬಂದೀದೀವಾ?

ಒಂದು ಕ್ಷಣ ಸದನ ಸ್ತಬ್ಧವಾಗಿತ್ತು.

ಪಟೇಲರು ಎದ್ದು ನಿಂತರು. ಮಂದಹಾಸ ಬೀರಿ ಮೃದುವಾಗಿ ಉತ್ತರಿಸಿದರು.

'ಹೌದು. ಇಲ್ಲಿನ ವಾತಾವರಣ ನೋಡಿ ನನಗೂ ಹಾಗೆ ಅನ್ನಿಸಿದೆ' ಎಂದರು.

ಪಟೇಲರ ಹಾಸ್ಯ ನರಸಿಂಹಮೂರ್ತಿಯವರನ್ನಷ್ಟೇ ಏಕೆ ಇಡೀ ಸದನವನ್ನು ಕ್ಷಣಮಾತ್ರದಲ್ಲಿ ತಿಳಿಯಾಗಿಸಿತು.

ಮುಖ್ಯಮಂತ್ರಿ ಪಟೇಲರು ಉಭಯ ಸದನಗಳಲ್ಲಿ ರಚಿಸಿದ ರಸಮಯ ಸನ್ನಿವೇಶಗಳ ಬಗೆಗೆ ನೋಟ್ಸ್ ಮಾಡಿಟ್ಟುಕೊಳ್ಳುತ್ತಾ ಇದ್ದೇನೆ. ಒಂದಲ್ಲಾ ಒಂದು ದಿನ ಪುಸ್ತಕ ಬರೆಯುವ ಅಭಿಲಾಷೆ ನನ್ನದು.

(ಶ್ರೀಮತಿ ಲಲಿತಾನಾಯಕ್, ವಿಧಾನಪರಿಷತ್, ಜುಲೈ 22, 1999)

**ಆನೆ ಅಂಬಾರಿ ಬೇಡ ಅಂದವರು**

ಭಾರತದ ರಾಜ್ಯಾಂಗದಲ್ಲಿ ನಮೂದಿತವಾಗಿರುವ 14ನೆಯ ಅನುಚ್ಛೇಧದಂತೆ ಕಾನೂನಿನ ಎದುರು ಎಲ್ಲರೂ ಸಮಾನರು ಎಂದು ವಿಧಾನಮಂಡಲಕ್ಕೆ ಹಾಗೂ ಹೊರ ಜಗತ್ತಿಗೆ ತೋರಿಸಿದವರು ಪಟೇಲರು. ಪ್ರಜಾತಂತ್ರ ವ್ಯವಸ್ಥೆಯ ಆಧಾರದ ಈ ವಿಚಾರ ಚಿಂತನೆಯನ್ನು ಕೃತಿಯಲ್ಲಿ ತೋರಿಸಲು ಹೆಣಗಾಡಿದವರು ಪಟೇಲರು. ಮೈಸೂರಿನಲ್ಲಿ ಬಹು ಹಿಂದೆ ಪಟೇಲರು, ಗೋಪಾಲಗೌಡರು, ಕಾಗೋಡು ತಿಮ್ಮಪ್ಪನವರು ಇವರೇ ಮೊದಲಾದ ಸಮಾಜವಾದಿ ನಾಯಕರು ದಸರಾ ಕಾಲದಲ್ಲಿ ನಡೆಸುತ್ತಿದ್ದ ಪ್ರತಿಭಟನೆಯೇ ಇದಕ್ಕೆ ಸಾಕ್ಷಿ. ಪ್ರಜಾತಂತ್ರದಲ್ಲಿ ರಾಜಷಾಹಿ, ಆನೆ ಅಂಬಾರಿ ಬೇಡವೆಂದು ಚಳುವಳಿ ನಡೆಸಿದವರು ಇವರು.

(ಎ.ಎಸ್. ಗುರುಸ್ವಾಮಿ (ಚಾಮುಂಡೇಶ್ವರಿ), ವಿಧಾನ ಸಭೆ, ಫೆಬ್ರವರಿ 27, 2001)

# 22

# ಪತ್ರಿಕೆಗಳು ಮತ್ತು ಪಟೇಲರು

ಪಟೇಲರ ತಿಳಿವಾಸ್ಮ ಮತ್ತು ಅಭಿವ್ಯಕ್ತವನ್ನು ಓದುಗರಿಗೆ ಮನಸಾರೆ ಉಣಿಸಿದವು ಮಾಧ್ಯಮ ಮತ್ತು ಪತ್ರಿಕೆಗಳು. ಇದೇ ಪತ್ರಿಕೆಗಳು ಕಾರ್ಯರೂಪಕ್ಕೆ ಬರದ ಹಾಗೂ ಕೇವಲ ಕಲ್ಪನೆಯ ಕೂಸಾದ ಅವರ ಸಮಾಜವಾದವನ್ನು ಕಡೆಯುವರೆಗೂ ವಿಡಂಬನೆ ಮತ್ತು ಕುಚೋದ್ಯದೊಂದಿಗೇ ಕಂಡದ್ದು ನಿಜ. ಪಟೇಲರೂ ಅಷ್ಟೇ. ಪತ್ರಿಕೆಗಳಿಗೆ ವಿವರಣೆ ಕೊಡುವ ಗೋಜಿಗೇ ಹೋಗಲಿಲ್ಲ. ಇಷ್ಟರ ಮಟ್ಟಿಗೆ ಪಟೇಲರು ಛಲತೊಡದ ರಾಜಕಾರಣಿ. ತಮ್ಮ ವೈಯಕ್ತಿಕ ಪ್ರತಿಷ್ಠೆಗಿಂತಲೂ, ಅನುಷ್ಠಾನದಲ್ಲಿ ಬರಲು ಅಸಾಧ್ಯವಿದ್ದ ಸಮಾಜವಾದಿ ರಾಜಕೀಯ ಸಿದ್ಧಾಂತಗಳಿಗೆ ಮೇ[illegible]ದ ಪ್ರಚಾರವನ್ನು ಬಯಸಿದವರು.

ಪತ್ರಿಕೆಗಳೊಂದಿಗೆ ಎಷ್ಟೋ ಅಷ್ಟು ಎಂಬಂತೆ ಮಧುರ ಸಾಮರಸ್ಯವಿಟ್ಟುಕೊಂಡಿದ್ದ ಪಟೇಲರಿಗೆ ನಿಯತಕಾಲಿಕೆಗಳ ಓದು ಬಹುಪ್ರಿಯ. ಪ್ರತಿಪಕ್ಷದಲ್ಲಿದ್ದಾಗ ಅತಿ ಹೆಚ್ಚಿನ ಪತ್ರಿಕೆಗಳು ಮತ್ತು ನಿಯತಕಾಲಿಕಗಳಿಗೆ ತಾವು ಚಂದಾದಾರರಾಗಿದ್ದುದನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು ಪಟೇಲರು.

ಕರ್ನಾಟಕದ ಸಂಸದೀಯ ಇತಿಹಾಸದಲ್ಲಿ ವಿಚಾರಪೂರಿತ ಮನರಂಜನೆಯ ಜೋಕ್ಸ್‌ಗಳಿಂದ ಪತ್ರಿಕೆಗಳ ಕಾಲಂಗಳನ್ನು ಆಕ್ರಮಿಸಿದವರು ಪಟೇಲರೇ. ಉಲ್ಲಾಸ ತುಂಬಿದ ಚರ್ಚೆ, ಚಮತ್ಕಾರ (Humour, wit and spontaneously apt - Reply) ಮತ್ತು ಎದುರಾಳಿಯನ್ನು ಸೋಲಿಸುವ ಥಟ್ಟನೆಯ ಉತ್ತರಕ್ಕೆ ಹೆಸರಾಗಿದ್ದ ಪಟೇಲರಿಂದ ಸದನದಲ್ಲಿ ಹಾಜರಿರುತ್ತಿದ್ದ ವರದಿಗಾರರು ಬಹುವಾಗಿ ನಿರೀಕ್ಷಿಸುತ್ತಿದ್ದುದು 'ಬಾಕ್ಸ್‌ಐಟಂ'.

## ಪತ್ರಿಕೆಯ ಲೇಖನ; ಸಾಮಾನ್ಯ ಓದುಗ

ಕೆಲವು ಪತ್ರಿಕೆಗಳನ್ನು ನಾನು ಓದುವುದೇ ಇಲ್ಲ. ಇದಕ್ಕೆ ಕಾರಣವಿದೆ.

ಇಂತಹ ಪತ್ರಿಕೆಗಳಲ್ಲಿ ಕ್ಯಾರೆಕ್ಟರ್ ಅಸ್ಯಾಸಿನೇಷನ್ ಮಟ್ಟದ ಲೇಖನಗಳಿರುತ್ತವೆ. ನಾವು ಇವುಗಳನ್ನು ಓದದೆ ಇರಬಹುದು. ಆದರೆ ಸಾಮಾನ್ಯ ಜನ ಓದುತ್ತಾರೆ. ಬಸ್‌ಸ್ಟ್ಯಾಂಡ್‌ನಲ್ಲಿ ಹೋಟೆಲ್‌ನಲ್ಲಿ ಜನ ಓದುತ್ತಾರೆ. ಒಮ್ಮೊಮ್ಮೆ ಜನ ಓದುವುದು ಇಂಥದನ್ನೇ.

ಇಂತಹ ಲೇಖನಗಳಿಂದ ಜನ ಪ್ರಭಾವಿತರಾಗುತ್ತಾರೆ. ಪತ್ರಿಕೆಗಳಲ್ಲಿ ಬರುವುದೆಲ್ಲಾ ನಿಜವಲ್ಲ ಎಂಬ ಸಂಗತಿ ಅವರಿಗೆ ಗೊತ್ತಿರುವುದಿಲ್ಲ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ಆಗಸ್ಟ್ 26, 1997)

## ಪತ್ರಕರ್ತ-ರಾಜಕಾರಣಿ

ಪತ್ರಿಕಾ ಮಿತ್ರರು ತಮ್ಮ ಕೈಯಲ್ಲಿ ಲೇಖನಿ ಇದೆ ಎಂದು, ತಮಗೆ ತಿಳಿದಂತೆ ಬರೆಯುವುದಾಗಲೀ, ತಮಗೆ ತೋಚಿದಂತೆ ವರದಿ ಮಾಡುವುದಾಗಲೀ ಸರಿಯಲ್ಲ. ಪ್ರಜೆಗಳು ಕಳುಹಿಸಿದ್ದರಿಂದ ನಾವು ಇಲ್ಲಿದ್ದೇವೆ. ಈ ಭಯ ನಮಗಿರಬೇಕು. ಸಂಯಮ ಅವರಿಗಿರಬೇಕು.

ನಾವು ಸಂಯಮ ಮೀರಿ ವರ್ತಿಸಿದಾಗ ಪತ್ರಕರ್ತರ ಲೇಖನಿ ಕೂಡ ಬಹು ಉದ್ದುದ್ದಕ್ಕೆ ಬೆಳೆಯುತ್ತದೆ. ಇದನ್ನು ನಾವು ನೂರಾರು ಬಾರಿ ನೋಡಿದ್ದೇವೆ, ಅನುಭವಿಸಿದ್ದೇವೆ.

ಅಭಿರುಚಿಯಿಂದ ಅಭಿರುಚಿ ಬೆಳೆಯಬೇಕು. ಇದು ಇಬ್ಬರಲ್ಲಿಯೂ ಆಗಬೇಕು. ಪತ್ರಕರ್ತರಲ್ಲಿಯೂ ಪ್ರಬುದ್ಧರಿದ್ದಾರೆ, ಪಂಡಿತರಿದ್ದಾರೆ, ಅವರಿಗೆ ಸ್ವಾತಂತ್ರ್ಯವಿದೆ. ನಾವೂ ಹೀಗೆಯೇ. ಜನರ ಮನಸ್ಸನ್ನೂ ಇಬ್ಬರೂ ರೂಢಿಸಿಕೊಳ್ಳಬೇಕು. ಪ್ರಜಾನಿಷ್ಠರಾಗಿರಬೇಕು. ವಸ್ತುನಿಷ್ಠರಾಗಿರಬೇಕು.

ರಾಜಕಾರಣಿ - ಪತ್ರಕರ್ತರ ಸಂಬಂಧ ಎಷ್ಟು ಮುಖ್ಯವೋ, ಅಷ್ಟೇ ಮುಖ್ಯವಾಗಿ ಇಬ್ಬರೂ ತಮ್ಮ ಪಾಲಿನ ಜವಾಬ್ದಾರಿಯನ್ನು ನಿರ್ವಹಿಸಬೇಕು. ಇದೇ ಪರಸ್ಪರ ನಿರೀಕ್ಷೆ.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ ಜೂನ್ 29, 1982)

## ಕೀಳು ಮಟ್ಟದ ಪತ್ರಿಕೋದ್ಯಮ ಸಮಾಜಕ್ಕೆ ಹಾನಿ

ಸಂದರ್ಭ: ಕನ್ನಡದ ಪತ್ರಿಕೆಯೊಂದು ಶಾಸಕಿಯರನ್ನು ಕುರಿತಂತೆ ಆಕ್ಷೇಪಣೀಯವಾದ ಮತ್ತು ನೋವನ್ನುಂಟು ಮಾಡುವಂತಹ ಲೇಖನವೊಂದನ್ನು ಬರೆದಿದೆ ಎಂದು ಆಪಾದಿಸಿ ವಿಧಾನಸಭೆಯಲ್ಲಿ ಉದ್ವಿಗ್ನ ವಾತಾವರಣ ತಲೆದೋರಿತ್ತು. ಸದನದ ಶಾಸಕಿಯರು ನಿಯಮ 195ರ

ಅಡಿಯಲ್ಲಿ ಹಕ್ಕುಚ್ಯುತಿ ಪ್ರಸ್ತಾವನೆಯ ಮಂಡನೆಗೆ ಮುಂದಾಗಿದ್ದರು. ಈ ಸಂದರ್ಭದಲ್ಲಿ ಮುಖ್ಯಮಂತ್ರಿ ಜೆ.ಹೆಚ್ ಪಟೇಲರು ನಡೆಸಿದ ವ್ಯಾಖ್ಯಾನ ಹೀಗಿತ್ತು.

ಪತ್ರಕರ್ತರಿಗೆ ಎಲ್ಲಾ ದೇಶಗಳಲ್ಲೂ ಸಾಕಷ್ಟು ಗೌರವ, ಮನ್ನಣೆ ಇದೆ. ಅವರ ಬರಹಗಳನ್ನು ಓದಿ ಎಷ್ಟೋ ಸಾರಿ ಹೊಸ ಹೊಸ ಪ್ರೇರಣೆಗಳು, ನಾವು ರಾಜಕಾರಣಿಗಳಿಗೆ ಈಗ ದಾಸ್‌ಕ್ಯಾಪಿಟಲ್‌ನೋ ಅಥವಾ ಕಾರ್ಲ್‌ಮಾರ್ಕ್ಸ್‌ನ ಗ್ರಂಥಗಳನ್ನು ಓದುವುದಕ್ಕೆ ಪುರಸೊತ್ತು ಇರುವುದಿಲ್ಲ. ಹೇಗೋ ನಾವು ವಿದ್ಯಾರ್ಥಿಗಳಿದ್ದಾಗ ಓದಿರುತ್ತೇವೆ. ವಕೀಲರಾಗಿದ್ದವರು ಆಗ ಓದಿರುತ್ತಾರೆ.

ಪತ್ರಿಕೆಗಳಿಂದ ಇಂತಹ ಮಾರ್ಗದರ್ಶನ, ವಿಚಾರ ದರ್ಶನ ಬೇಕಾಗುತ್ತದೆ. ಸಾಮಾನ್ಯ ಜನರಿಂದ ಆರಿಸಿ ಬಂದಂಥವರು ಇವತ್ತು ದಿನಪತ್ರಿಕೆಗಳನ್ನು ಓದುವುದೇ ಸುದ್ದಿಸಂಗ್ರಹಕ್ಕೆ. ಅದರಿಂದ ಅವರ ವಿಚಾರಗಳು ಪ್ರಭಾವಿತವಾಗುತ್ತವೆ. ಸಾಮಾನ್ಯವಾಗಿ ದಿನಪತ್ರಿಕೆಗಳು ಯಾವುದೇ ಚಾರಿತ್ರ್ಯಹರಣಕ್ಕೆ ಹೋಗುವುದಿಲ್ಲ. ಸುದ್ದಿ ತಪ್ಪಾಗಬಹುದು ಅಥವಾ ಆ ಸುದ್ದಿಯು ವರದಿಗಾರನ ಇಚ್ಛೆಗೆ ತಕ್ಕಂತೆ ಆಗಿರಬಹುದು. But there is no vulgarity in it. ಇಂತಹ ಪತ್ರಿಕೆಗಳನ್ನು ನಾವೆಲ್ಲರೂ ಅತ್ಯಂತ ಗೌರವದಿಂದ ಓದುತ್ತೇವೆ. ಪ್ರಜಾವಾಣಿ, ಕನ್ನಡಪ್ರಭ, ಸಂಯುಕ್ತ ಕರ್ನಾಟಕ, ಕೆಲವು ಪತ್ರಿಕೆಗಳಿಗೆ ಅವರದ್ದೇ ಆದ ರಾಜಕೀಯ ದೃಷ್ಟಿ ಅಥವಾ ಉದ್ದೇಶ ಇರಬಹುದು. ಆದರೆ ಅವರು ಏನು ಬರೆಯುತ್ತಾರೋ ಅದನ್ನು ವಸ್ತುಸ್ಥಿತಿ ಆಧಾರದ ಮೇಲೆ ಬರೆದಿರುತ್ತಾರೆ. ಇಂಗ್ಲೀಷ್ ಪೇಪರ್ಸ್ ಪೈಕಿ ಏಷಿಯನ್ ಏಜ್, ಟೈಮ್ಸ್ ಆಫ್ ಇಂಡಿಯಾ, ಹಿಂದೂ ಅಥವಾ ಡೆಕ್ಕನ್ ಹೆರಾಲ್ಡ್ ಅವರ ಅಭಿಪ್ರಾಯಗಳು ಸರಿ ಇರಬಹುದು ಇಲ್ಲವೇ ತಪ್ಪು ಇರಬಹುದು. ಆದರೆ ಈ ಪತ್ರಿಕೆಗಳು ಕೆಳಮಟ್ಟಕ್ಕೆ ಹೋಗುವುದಿಲ್ಲ.

ಇನ್ನು ಕೀಳುಮಟ್ಟದ ಪತ್ರಿಕೋದ್ಯಮ ಹೇಗಿರುತ್ತದೆ ಎಂಬುದಕ್ಕೆ ಒಂದು ಉದಾಹರಣೆ ಹೇಳುತ್ತೇನೆ.

ಒಂದು ಊರಿನಲ್ಲಿ ಒಬ್ಬ ಪತ್ರಿಕೆ ಶುರು ಮಾಡಿದ. ಎಕ್ಸಿಕ್ಯೂಟಿವ್ ಇಂಜಿನಿಯರ್ ಶ್ರೀಧರ್ ಆಚಾರನ ಕೆಲಸಗಳು - ಮುಂದಿನ ವಾರದಲ್ಲಿ ಎಂದು ಹಾಕಿಬಿಡುವುದು. ಆ ಶ್ರೀಧರ್ ಆಚಾರನ ಮನೆಗೆ ಹೋಗುವುದು. ಆಮೇಲೆ ಮುಂದಿನ ವಾರ ಅವನೂ ಇಲ್ಲ, ಇವನೂ ಇಲ್ಲ. ಈ ಮಟ್ಟಕ್ಕೆ ಇಳಿದರೆ ಗತಿ ಏನು? ತಪ್ಪಾಗಿದ್ದರೆ ತಪ್ಪು ಎಂದು ಹೇಳಲಿ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ಆಗಸ್ಟ್ 28, 1997)

## ಪತ್ರಿಕೆ ಮತ್ತು ಓದುಗರ ನಿರೀಕ್ಷೆ

ಸಂದರ್ಭ: ಪಟೇಲರು ಪ್ರತಿಪಕ್ಷದಲ್ಲಿದ್ದಾಗ ಕನ್ನಡ ಪತ್ರಿಕೆಯೊಂದರ ಪುನರುಜ್ಜೀವನಕ್ಕಾಗಿ ಪ್ರಯತ್ನಿಸಿದ ಪ್ರಸ್ತಾಪ ಇಲ್ಲಿದೆ.

ನಾಡಿನ ಪ್ರಮುಖ ಕನ್ನಡ ಪತ್ರಿಕೆಗಳಲ್ಲಿ ಒಂದಾದ "ಸಂಯುಕ್ತ ಕರ್ನಾಟಕ" ದಿನಪತ್ರಿಕೆಯ ಆಡಳಿತ ವರ್ಗ ನಷ್ಟದ ಕಾರಣ ಮುಂದಿಟ್ಟು 1980ರ ಜನವರಿ 31 ರಂದು ತನ್ನ ಬೆಂಗಳೂರು ಆವೃತ್ತಿಯನ್ನು ಮುಚ್ಚಲು ನಿರ್ಧರಿಸಿತ್ತು.

ಅಂದಿಗೆ ಸುಮಾರು 47 ವರ್ಷಗಳ ಹಿಂದೆ ಆರಂಭವಾಗಿ ಸ್ವಾತಂತ್ರ್ಯ ಆಂದೋಲನ ಹಾಗೂ ಸ್ವಾತಂತ್ರ್ಯಾನಂತರದ ವರುಷಗಳಲ್ಲಿ ನಾಡಿನ ಓದುಗರಿಗೆ ಅಪಾರ ಸೇವೆ ಸಲ್ಲಿಸಿದ ಪತ್ರಿಕೆ ಇದು. ಕರ್ನಾಟಕ ಏಕೀಕರಣಕ್ಕೆ ಸಂಯುಕ್ತ ಕರ್ನಾಟಕ ನೀಡಿದ ಕೊಡುಗೆ ಅಪಾರ. ಈ ಪತ್ರಿಕೆಯ ಬೆಂಗಳೂರು ಕಛೇರಿ 1960ರ ಸುಮಾರಿನಲ್ಲಿ ಕಾರ್ಯಾರಂಭ ಮಾಡಿತ್ತು.

ಪಕ್ಷ ಬೇಧವನ್ನು ಮರೆತು ರಾಜ್ಯ ವಿಧಾನ ಸಭೆ ಈ ವಿಷಯವನ್ನು ಚರ್ಚಿಸಿತು. ಸರ್ವಶ್ರೀ ಎ. ಲಕ್ಷ್ಮೀಸಾಗರ್, ಜೆ.ಹೆಚ್. ಪಟೇಲ್, ಪಿ. ರಾಮದೇವ್, ಎಂ.ವಿ. ರಾಜಶೇಖರನ್, ಎಚ್.ಡಿ. ದೇವೇಗೌಡ, ಮೈಕೆಲ್ ಫರ್ನಾಂಡಿಸ್, ಎಂ. ಚಂದ್ರಶೇಖರ್, ಎಚ್. ಗಂಗಾಧರ್, ಸಿ.ಎಂ. ಆರ್ಮುಗಂ, ಬಿ.ವಿ. ಕಕ್ಕಿಲ್ಲಾಯ, ಎಸ್.ಆರ್. ಬೊಮ್ಮಾಯಿ, ಬಿ. ಸುಬ್ಬಯ್ಯಶೆಟ್ಟಿ, ಕೆ.ಹೆಚ್. ಶ್ರೀನಿವಾಸ್, ಭೀಮಣ್ಣ ಖಂಡ್ರೆ ಇತರೇ ಮೊದಲಾದವರು ಸಂಯುಕ್ತ ಕರ್ನಾಟಕ ಪತ್ರಿಕೆಯ ಬೆಂಗಳೂರು ಆವೃತ್ತಿಯ ಪುನರಾರಂಭಕ್ಕಾಗಿ ಎಲ್ಲ ರೀತಿಯ ಸಹಕಾರ, ಸಹಾಯದೊಂದಿಗೆ ಮುಂದಾಗುವಂತೆ ಸದನದಲ್ಲಿ ರಾಜ್ಯ ಸರ್ಕಾರವನ್ನು ಆಗ್ರಹಪಡಿಸಿದರು. ಅಂದಿನ ಮುಖ್ಯಮಂತ್ರಿ ಆರ್. ಗುಂಡೂರಾವ್ ಮತ್ತು ಕಾರ್ಮಿಕ ಸಚಿವರು ಸಿ.ಎಂ. ಇಬ್ರಾಹಿಂ. ಸಮಾಜದ ನಾಲ್ಕನೆಯ ಸ್ಥಂಭವಾದ ಪತ್ರಿಕೆಗೆ ಸರಕಾರ ನೆರವಾಗುವುದು ಅತ್ಯಗತ್ಯ ಎಂಬುದು ಶಾಸಕರ ಒಮ್ಮತದ ಅಭಿಪ್ರಾಯವಾಗಿತ್ತು.

ಸದನದಲ್ಲಿ ಜೆ.ಹೆಚ್. ಪಟೇಲರ ಮಾತು ಹೀಗಿತ್ತು.

"ಇದ್ದ ಮೂರು ಕನ್ನಡ ಪತ್ರಿಕೆಗಳ ಪೈಕಿ ಒಂದು ಈಗ ಮುಚ್ಚಿರುವುದು ನಾಡಿನ ಓದುಗರಿಗೆ ಕೊರತೆಯನ್ನುಂಟುಮಾಡಿದೆ. ಓದುಗರು ಹಾಗೂ ಕನ್ನಡ ಪತ್ರಿಕೋದ್ಯಮದ ದೃಷ್ಟಿಯಿಂದ ನಾಡಿನ ಸೇವೆ ಸಲ್ಲಿಸಿರುವ ಪತ್ರಿಕೆಯೊಂದು ತನ್ನ ಮುದ್ರಣ ನಿಲ್ಲಿಸುವಂತಾಗಿರುವುದು ವ್ಯಸನ ಪಡುವ ವಿಷಯ. 80 ಥಿಯೇಟರುಗಳ ಪೈಕಿ ಒಂದು ಮುಚ್ಚಲ್ಪಟ್ಟರೆ ಯಾರೂ ಯೋಚನೆ ಮಾಡುವುದಿಲ್ಲ. 100 ಹೋಟೆಲುಗಳಿದ್ದಾಗ ಒಂದು ಮುಚ್ಚಲ್ಪಟ್ಟರೆ ಹೆಚ್ಚು ಚಿಂತಿಸಬೇಕಾದುದಿಲ್ಲ. ಕೇವಲ ಮೂರು ಪತ್ರಿಕೆಗಳ ಪೈಕಿ ಒಂದು ನಿಂತರೆ ನಾಡು ಈ ಬಗೆಗೆ ಚಿಂತಿಸಲೇಬೇಕಾಗುತ್ತದೆ. ಕಾನೂನು ಮತ್ತು ಮಾನವೀಯ ದೃಷ್ಟಿಯಿಂದ ಪತ್ರಿಕೆಯ ಆವೃತ್ತಿಯ ಪುನರ್‌ಜೀವನಕ್ಕೆ ಸರ್ಕಾರ ಮತ್ತು ಸಮಾಜ ಮುಂದಾಗಬೇಕು."

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ: ಫೆಬ್ರವರಿ 28, 1980)

## ಕೃಪಲಾನಿ : ಹಕ್ಕುಚ್ಯುತಿ ಪ್ರಕರಣ

ಶಾಸಕರಿಗೆ ಅಗೌರವವಾಗುವಂತೆ, ಅಪಚಾರವೆನಿಸುವಂತೆ ಮತ್ತು ಸತ್ಯಕ್ಕೆ ದೂರವಾದ ಅಪಾದನೆಗಳನ್ನು ಪತ್ರಿಕೆಗಳು ಮಾಡಿದ್ದೇ ಆದಲ್ಲಿ, ಶಾಸಕರು ಈ ಬಗೆಗೆ ಸದನದಲ್ಲಿ ಹಕ್ಕು ಚ್ಯುತಿ ನಿರ್ಣಯ ತರಬೇಕು. ತಮ್ಮ ಕರ್ತವ್ಯಕ್ಕೆ ಧಕ್ಕೆ ಉಂಟು ಮಾಡುವ ಮಿಥ್ಯಾಪಾದನೆಗಳ ಬಗೆಗೆ ಹಕ್ಕು ಬಾಧ್ಯತೆಯ ಅವಕಾಶಗಳನ್ನು ಬಳಸಿಕೊಂಡು ಚರ್ಚೆ ನಡೆಸಬೇಕು.

ಹಿಂದೆ ಒಮ್ಮೆ ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಸಂಸತ್ ಸದಸ್ಯ ಆಚಾರ್ಯ ಜೆ.ಬಿ. ಕೃಪಲಾನಿಯವರ ಬಗೆಗೆ ಪ್ರತಿಷ್ಠಿತ ಪತ್ರಿಕೆಯೊಂದು ಅಪಾದನೆ ಮಾಡಿ ಲೇಖನಗಳನ್ನು ಪ್ರಕಟಿಸಿತ್ತು. ಮಾನ್ಯ ಕೃಪಲಾನಿಯವರು ಲೋಕಸಭೆಯಲ್ಲಿ ಈ ಬಗೆಗೆ ಹಕ್ಕು ಚ್ಯುತಿ ನಿರ್ಣಯ ತಂದು ಚರ್ಚೆನಡೆಸಿದರು. ಪತ್ರಿಕೆ ಮಾಡಿದ್ದ ಅಪಾದನೆಗಳು ನಿರಾಧಾರ ಎಂಬುದು ಸ್ಪಷ್ಟವಾಯಿತು.

ಲೋಕಸಭೆ ಪತ್ರಕರ್ತ ಕಾರಂಜಿಯಾರವರನ್ನು ಸದನಕ್ಕೆ ಕರೆಸಿ ಛೀಮಾರಿ ಹಾಕಿತು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನಸಭೆ : ಫೆಬ್ರವರಿ 11,1982)

### ಶಾಸಕ ರಾಜೇಂದ್ರನ್ ಹೇಳಿದ ಕಥೆ

ಶಾಸಕನಾಗಿ ನನಗೆ 'ಹೀರೋ' ಎಂಬಂತೆ ಕಂಡವರು ಪಟೇಲರು. ವಿಷಯವನ್ನು ಮನದಟ್ಟಾಗುವಂತೆ ವಿವರಿಸಲು ಅವರು ಹಾಸ್ಯ ಶೈಲಿಯನ್ನು ಬಳಸುತ್ತಿದ್ದರೇ ವಿನಹ ಜನ ಅಥವಾ ಸಮಾಜವನ್ನು ನೋಡಿ ನಗಬೇಕೆಂಬುದು ಅವರ ಗುರಿ ಆಗಿರಲಿಲ್ಲ.

ಅವರು ಹೇಳುತ್ತಿದ್ದ ಕೋತಿ ಕಥೆ ಇದಕ್ಕೆ ಸೂಕ್ತ ಉದಾಹರಣೆ.

ಒಂದು ಕೋತಿ. ಬಹು ಚಾಲೂಕಿ ಕೋತಿ. ಹೇಗಾದರೂ ಮಾಡಿ ಇದನ್ನು ಮೂರ್ಖನನ್ನಾಗಿ ಮಾಡುವ ಹಠ ಆಳುವವರಿಗೆ. ಸರಿ, ಆಳುವವರು ಕೋತಿ ಮುಂದೆ ನಕ್ಕರು, ಅದೂ ನಕ್ಕಿತು. ಕುಣಿದರು, ಕೋತಿಯೂ ಕುಣಿಯಿತು. ಲಾಗ ಹಾಕಿದರು, ಅದೂ ಲಾಗ ಹಾಕಿತು.

ಇದೇ ತಕ್ಕ ಸಮಯ ಎಂದು ಭಾವಿಸಿ, ಚಾಕು ಒಂದನ್ನು ತೆಗೆದುಕೊಂಡು ತಮ್ಮ ಕತ್ತಿಗೆ ಚುಚ್ಚಿಕೊಳ್ಳುವಂತೆ ನಟಿಸಿದರು. ಕೋತಿ ಹೀಗೆಯೇ ಮಾಡುತ್ತದೆ ಎಂದು ನಂಬಿದ್ದರು. ಕೋತಿ ಮಾಡಿದ್ದೇನು ಗೊತ್ತೆ? ಎದುರುಗಿದ್ದ ಪ್ರಾಜ್ಞಾತ್ಮನ ಕತ್ತಿಗೆ ಗುರಿಯಿಟ್ಟು ಕೋತಿ ಒಮ್ಮೆ ಚಾಕು ತೋರಿಸಿತು.

ಹೀಗೆ ಪಟೇಲರು ಬಹು ತೀಕ್ಷ್ಣಮತಿ.

(ವಿಧಾನ ಸಭೆಯಲ್ಲಿ ಜುಲೈ 22, 1999, ಕೆ.ಜಿ.ಎಫ್. ಶಾಸಕ ಎಸ್. ರಾಜೇಂದ್ರನ್ ಹೇಳಿದ ಕಥೆ. ಭಾವ ಶಾಸಕರದು: ಭಾವಾರ್ಥ ನಮ್ಮದು)

### ಬಿಚ್ಚು ಮನಸ್ಸಿನ ವ್ಯಕ್ತಿ

ಮಾನ್ಯ ಪಟೇಲರು ಅಜಾತಶತ್ರು. ಬಿಚ್ಚು ಮನಸ್ಸಿನಲ್ಲಿ ಅವರನ್ನು ಮೀರಿಸಿದವರಾರೂ ಇಲ್ಲ. He was a true democrat.

(ಡಾ: ಎಂ.ಆರ್. ತಂಗಾ (ವಿಧಾನ ಪರಿಷತ್) ಫೆಬ್ರವರಿ 27, 2001)

# 23

# ತತ್ವಬದ್ಧತೆಯಲ್ಲಿ ಫೇಲಾದ ಪಟೇಲರು

ತತ್ವವನ್ನು ಹೇಳುವುದು ಸುಲಭ. ಪ್ರತಿಪಕ್ಷದಲ್ಲಿದ್ದಾಗಲಂತೂ ತತ್ವವನ್ನು ಹೇಳುವುದೇ ಕೆಲವರಿಗೆ ಒಂದು ದಂಧೆ. ಅವರೇ ಹೇಳಿದ ತತ್ವವನ್ನು ಅಧಿಕಾರದಲ್ಲಿದ್ದಾಗ ಕಾರ್ಯರೂಪಕ್ಕೆ ತರುವುದು ಅತಿ ಪ್ರಯಾಸಕರ. ಕೆಲವೊಮ್ಮೆ ಅಸಾಧ್ಯ. ಪಟೇಲರು ತತ್ವಬದ್ಧತೆಯಲ್ಲಿ ವಿಫಲರಾದ ಚರ್ಚೆಯೊಂದನ್ನು ಇಲ್ಲಿ ಉದಹರಿಸಲಾಗಿದೆ.

ಸಂದರ್ಭ ಹೀಗಿತ್ತು: ರಾಜ್ಯದ ಕೃಷಿ ಉತ್ಪನ್ನಗಳ ಮಾರುಕಟ್ಟೆ ಸಮಿತಿಗಳಿಗೆ (ಎಪಿಎಂಸಿ) ಚುನಾಯಿತ ಸದಸ್ಯರುಗಳ ಜೊತೆಗೆ ಖಾಸಗಿ ವ್ಯಕ್ತಿಗಳ ನೇರ ನೇಮಕಾತಿ ನಡೆಸುವ ಆಡಳಿತ ಪಕ್ಷದ ನಿಲುವನ್ನು ವಿರೋಧಿಸಿ ಪ್ರತಿಪಕ್ಷಗಳು ವಿಧಾನ ಮಂಡಲದಲ್ಲಿ ಚಳುವಳಿ, ಧರಣಿ ನಡೆಸಿದ್ದವು. ಸಂಸದೀಯ ಜೀವನದಲ್ಲಿ ತತ್ವಬದ್ಧತೆಯನ್ನು ಓರೆ ಹಚ್ಚುವ ಸಂದರ್ಭ ಇದಾಗಿತ್ತು. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಸರ್ಕಾರದ ಹಸ್ತಕ್ಷೇಪ ಸಲ್ಲದು ಎಂಬ ತತ್ವವನ್ನು ಪ್ರತಿಪಾದಿಸಿಕೊಂಡು ಬಂದ ಪರಂಪರೆಗೆ ಸೇರಿದವರು ಪಟೇಲರು. ಪ್ರತಿಪಕ್ಷದಲ್ಲಿದ್ದಾಗ ಇವರ ಹೆಸರು ಜನಪರವಾದ ಕ್ರಾಂತಿಕಾರಕ ನಿಲುವುಗಳಿಗೆ ಪರ್ಯಾಯಪದವಾಗಿತ್ತು.

ಪಟೇಲರಿಗೆ ಆದರ್ಶವಾಗಿದ್ದ ಸಮಾಜವಾದಿ ತತ್ವಗಳನ್ನು, ಸಮೀಕ್ಷೆಯ ಸಲುವಾಗಿ, ನೆನಪಿನಲ್ಲಿಟ್ಟುಕೊಳ್ಳುವುದು ಅಗತ್ಯ. 'ಅಧಿಕಾರ ಸಂಸದೀಯ ವ್ಯಕ್ತಿಯ ಒಳದನಿಯನ್ನು ಹಿಸುಕಿ, ಸೈದ್ಧಾಂತಿಕತೆಯ ಜೀವ ಸೆಲೆಯನ್ನು ಹಿಂಡಿಹಾಕಿಬಿಡುತ್ತದೆ' ಎಂದು ಪದೇ ಪದೇ ಎಚ್ಚರಿಸಿದವರು ಡಾ: ರಾಮ ಮನೋಹರಲೋಹಿಯಾ (ಲೋಹಿಯಾರವರ "Notes and Comments" ಗ್ರಂಥದ "History and Language" ಭಾಷಣಗಳ ಮುಖ್ಯ ಸಾರಾಂಶ ಇದು) ಬಹುಜನಕ್ಕೆ ಪ್ರಿಯ ಎನ್ನುವ ನೆಪದಿಂದ ಇಲ್ಲವೇ ರಾಜಕೀಯ ಪಕ್ಷಗಳಿಗೆ ಒಳಿತು ಎಂಬ ಹುಸಿಕಾರಣಗಳನ್ನು

ಮುಂದೊಡ್ಡಿ ಸೈದ್ಧಾಂತಿಕತೆಗೆ ಬದ್ಧವಾಗಬೇಕಾದ ಮುಖಂಡರುಗಳು ಅಧಿಕಾರದ ರುಚಿಯಿಂದಾಗಿ ಹಳಿತಪ್ಪಿದ ಜಾಡನ್ನು ಬದಲಿಸಲು, ಅಧಿಕಾರದಲ್ಲಿರುವವರನ್ನು ಬಡಿದೆಬ್ಬಿಸಲು ಅಥವಾ ಸಮಷ್ಟಿಯ ಮಾರ್ಗಕ್ಕೆ ಹೊರಳಲು ವಿಫಲರಾಗುತ್ತಾರೆ ಎಂಬುದು ಡಾ: ಲೋಹಿಯಾರ ಅಭಿಪ್ರಾಯ.

ಚುನಾಯಿತ ಪ್ರತಿನಿಧಿಗಳಿರುವ ಸಂಸ್ಥೆ ಬಗೆಗೆ ಲೋಹಿಯಾರವರು ವ್ಯಕ್ತಪಡಿಸಿದ ಈ ಭಯ, ಪಟೇಲರಲ್ಲಿ ಮೂರ್ತಿರೂಪ ತಾಳಿದ್ದು ಭಾರತೀಯ ಸಮಾಜವಾದಿ ಚಳುವಳಿಯಲ್ಲಿನ ಒಂದು ದುರಂತ ಅಧ್ಯಾಯ. ಪಟೇಲರಲ್ಲಿದ್ದ ದೊಡ್ಡ ಕೊರತೆ ಎಂದರೆ ಹಿಂದೊಮ್ಮೆ ತಾವೇ ನಡೆಸಿದ ಹೋರಾಟಗಳಿಗೆ ಅಧಿಕಾರಕ್ಕೆ ಬಂದ ಬಳಿಕ ಉತ್ತರ ಕಂಡು ಹಿಡಿಯುವ ಛಲವಿಲ್ಲದ್ದು.

ವಸ್ತುನಿಷ್ಠವಾಗಿ ವಿಮರ್ಶಿಸುವುದಾದರೆ, 'ನೇರ ನೇಮಕಾತಿ' ಎನ್ನುವ ದುಷ್ಟಪದ್ಧತಿಯ ರದ್ದಿನ ಚಿಂತನೆ, ಪಟೇಲರಿಗೆ ತಾವು ನಂಬಿ, ಪ್ರತಿಪಾದಿಸುತ್ತಿದ್ದ ಸೈದ್ಧಾಂತಿಕ ನಿಲುವಿನ ಅನುಷ್ಠಾನಕ್ಕೆ ಅಪೂರ್ವ ಅವಕಾಶವಾಗಬೇಕಿತ್ತು. ಎಪಿಎಂಸಿ ಸುಧಾರಣೆಯು ಬೃಹತ್ ಪ್ರಮಾಣದ ಕ್ರಾಂತಿಯಲ್ಲದಿದ್ದರೂ ಪ್ರಾರಂಭಿಕ ಸ್ತರದ ಪ್ರಜಾತಂತ್ರ ವ್ಯವಸ್ಥೆಯ ಪುನರುಜ್ಜೀವನ. ಇದೊಂದು ಸಮಾಜವಾದದ ಮೌಲ್ಯವನ್ನು ಸಜೀವಗೊಳಿಸುವ ಸಣ್ಣ ಪ್ರಯೋಗ ಆಗಬಹುದಾಗಿತ್ತು.

ಸ್ವತಃ ಪಟೇಲರೇ ಹೇಳಿದ್ದಾರೆ, ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ನಾಮಕರಣ ಪದ್ಧತಿ ಒಂದು ಅಪಸ್ವರ.

ಹಾಗಾದಲ್ಲಿ ಈ ಪದ್ಧತಿಯನ್ನು ತೆಗೆದುಹಾಕುವ ಪ್ರಾಮಾಣಿಕತೆ ಅವರಿಗೇಕೆ ಇರಲಿಲ್ಲ?

ಪಟೇಲರೇ ಈ ಪ್ರಶ್ನೆಯನ್ನು ಉತ್ತರಿಸುತ್ತಾರೆ:

"I am not opposed to the very basic concept of democratic system. ಆಡಳಿತದಲ್ಲಿರುವ ಜನತಾದಳದ ಇಚ್ಛೆಗೋಸ್ಕರ ನಾಮಕರಣ ಮಾಡುತ್ತಿದ್ದೇನೆ. ಸತ್ಯಾಂಶ ಏನೆಂದರೆ I am bound by the interests of the party".

ನಮ್ಮ ಇಂದಿನ ಸಮಾಜದಲ್ಲಿ ಪ್ರಜಾಸತ್ತೆಯ ಸಾಮೂಹಿಕ ಅಧಿಕಾರ ವ್ಯಕ್ತಿಗತ ತತ್ವನಿಷ್ಠೆಗಿಂತ ಹೆಚ್ಚು ರುಚಿಕರ. ಈ ಹಿನ್ನೆಲೆಯಲ್ಲಿ ಅಧಿಕಾರಕ್ಕೆ ಬಂದಾಗ, ಇಂತಹ ನಾಯಕ ತಾನು ವೈಯಕ್ತಿಕವಾಗಿ ಪೋಷಿಸಿಕೊಂಡು ಬಂದ ಮೇರುತತ್ವಗಳಿಗೆ ಪಕ್ಷನಿಷ್ಠೆ ಎಂಬ ತೆರೆ ಹಿಡಿಯುತ್ತಾನೆ. ತತ್ವಬದ್ಧತೆಯ ಕರ್ತವ್ಯದಿಂದ (accountabilities) ನುಣಿಚಿಕೊಳ್ಳುವುದು ಆತನಿಗೆ ಹಿತವಾಗುತ್ತದೆ. ಪಟೇಲರದೂ ಇದೇ ಸ್ಥಿತಿಯಾಗಿತ್ತು.

ಅಧ್ಯಕ್ಷರು: ಇವತ್ತೂ ಧರಣಿ ನಡೆಸಿದ್ದೀರಿ. ಸಮಯ ವ್ಯಯಮಾಡುವುದು ಬೇಡ. 5 ನಿಮಿಷ ಸಭೆ ಮುಂದಕ್ಕೆ ಹಾಕುತ್ತೇನೆ. ಸರ್ಕಾರದ ಕಡೆಯಿಂದ ಯಾರಾದರೂ ಸಚಿವರು ಬನ್ನಿ. ವಿರೋಧಪಕ್ಷದವರೂ ಬನ್ನಿ. ಮಾತನಾಡೋಣ.

ಸದನವು 10 ಗಂಟೆ 39 ನಿಮಿಷಕ್ಕೆ ಮುಂದೂಡಲ್ಪಟ್ಟು ಮತ್ತೆ 11 ಗಂಟೆಗೆ ಸೇರಲು ನಿಶ್ಚಯಿಸಿತು.

(ಸದನವು ಪುನಃ 11.20ಕ್ಕೆ ಸಮಾವೇಶಗೊಂಡಿತು)
(ಸಭಾಧ್ಯಕ್ಷರು (ಮಾನ್ಯ ರಮೇಶ್‌ಕುಮಾರ್) ರವರು ಪೀಠವನ್ನಲಂಕರಿಸಿದರು)
(ಕಾಂಗ್ರೆಸ್ ಪಕ್ಷದ ಸದಸ್ಯರುಗಳಿಂದ ಸದನದ ಬಾವಿಯಲ್ಲಿ ಧರಣಿ)

**ಅಧ್ಯಕ್ಷರು:** ಮುಖ್ಯಮಂತ್ರಿಗಳು ನಿನ್ನೆ ಸದನದಲ್ಲಿ ಇರಲಿಲ್ಲ. ಆದ್ದರಿಂದ ನೀವು ನಿಮ್ಮ ಸ್ಥಾನಕ್ಕೆ ಬಂದು ನೀವು ಏನು ಹೇಳಬೇಕೆಂದಿದ್ದೀರಿ ಅದನ್ನು ಹೇಳಿ ನಂತರ ಮುಂದುವರಿಸಿ. ತಮ್ಮ ಸ್ಥಾನಕ್ಕೆ ಬಂದು ಹೇಳಿ. ಇದಕ್ಕೆ ಒಂದು ಪರಿಹಾರ ಹುಡುಕಲು ಪ್ರಯತ್ನಿಸೋಣ.

## (1) ಎಪಿಎಂಸಿಗಳಿಗೆ ಕೆಲವು ಸದಸ್ಯರುಗಳನ್ನು ನೇಮಕ ಮಾಡಿರುವುದನ್ನು ವಿರೋಧಿಸಿ ಧರಣಿ

**ಎಂ. ಮಲ್ಲಿಕಾರ್ಜುನ ಖರ್ಗೆ (ವಿರೋಧ ಪಕ್ಷದ ನಾಯಕರು):** ಸನ್ಮಾನ್ಯ ಅಧ್ಯಕ್ಷರೇ, ನಿನ್ನೆ ಸಾಯಂಕಾಲದಿಂದ ನಾವು ಇಲ್ಲಿ ಧರಣಿಯನ್ನು ಪ್ರಾರಂಭ ಮಾಡಿದ್ದೇವೆ. ಕಾರಣವೇನೆಂದರೆ, ಮೊನ್ನೆ ನಡೆದಂಥ ಎಪಿಎಂಸಿ ಚುನಾವಣೆಯಲ್ಲಿ, ಪಕ್ಷದ ಒಂದು ಆಧಾರದ ಮೇಲೆ ಚುನಾವಣೆ ನಡೆಯದೇ ಇದ್ದರೂ ಕೂಡ ಬಹುತೇಕ ಸದಸ್ಯರು ಯಾವ ಯಾವ ಪಕ್ಷಕ್ಕೆ ಸಂಬಂಧಪಟ್ಟಿದ್ದಾರೆ ಎನ್ನತಕ್ಕಂಥ ಐಡೆಂಟಿಫಿಕೇಷನ್ ಅಥವಾ ಮಾಹಿತಿ ಅವರ ಪಕ್ಷದಲ್ಲೂ ಇದೆ ಮತ್ತು ನಮ್ಮ ಪಕ್ಷದವರಿಂದಲೂ ಅದರ ಬಗ್ಗೆ ಮಾಹಿತಿ ಇದೆ.

ಸುಮಾರು 140 ಎಪಿಎಂಸಿ ಕಮಿಟಿಗಳಲ್ಲಿ, ಬಳ್ಳಾರಿ ಮತ್ತು ಇತ್ತೀಚೆಗೆ ನಡೆದ ಇನ್ನೊಂದೆರಡು ಚುನಾವಣೆಗಳನ್ನು ಸೇರಿಸಿಕೊಂಡರೆ ಸುಮಾರು 49 ರಷ್ಟು ಸಮಿತಿಗಳು ಕಾಂಗ್ರೆಸ್ ಪಕ್ಷಕ್ಕೆ ಸಂಬಂಧಪಟ್ಟಂಥ ಸಮಿತಿಗಳು ರಚನೆಯಾಗತಕ್ಕಂಥ ಸಾಧ್ಯತೆ ಇದೆ. ಅಷ್ಟು ಬಹುಮತವನ್ನು ಕಾಂಗ್ರೆಸ್ ಪಕ್ಷದ ಸದಸ್ಯರು ಪಡೆದಿದ್ದಾರೆ. ಹೆಚ್ಚು ಕಡಿಮೆ ಸುಮಾರು 36 ರಲ್ಲಿ ಜನತಾದಳ ಪಕ್ಷದವರು ಗೆದ್ದಿದ್ದಾರೆ.

ಈ ಚುನಾವಣೆ, ಅಗ್ರಿಕಲ್ಚರಲ್ ಪ್ರೊಡ್ಯೂಸ್ ಮಾರ್ಕೆಟಿಂಗ್ ಕಮಿಟಿಯ ಕಾನೂನಿನ ಪ್ರಕಾರ ನಡೆದಿದೆ. ಆ ಚುನಾವಣೆಯಲ್ಲೂ ಕೂಡ ಮಹಿಳೆಯರಿಗೆ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾತಿಯನ್ನು ನಮೂದು ಮಾಡಿ, ಮತಕ್ಷೇತ್ರಗಳನ್ನು ವಿಂಗಡಿಸಿ ನೇರ ಚುನಾವಣೆ ನಡೆಸಲಾಗಿದೆ. ಏಕೆಂದರೆ "ನೇರ ನೇಮಕಾತಿ ಮಾಡಬಾರದು ಅಥವಾ ನಾಮಿನೇಷನ್ (ನಾಮಕರಣ) ಮಾಡಬಾರದು. ನಾಮಿನೇಷನ್ ಕೆಟ್ಟ ಪದ್ಧತಿ" ಎಂಬ ಅಜ್ಜಿಬಾಳ ಹೆಗಡೆಯವರ ವರದಿಯ ಆಧಾರದ ಮೇಲೆ, ಅವರ ಶಿಫಾರಸ್ಸಿನ ಮೇಲೆ ಎಪಿಎಂಸಿ ಆ್ಯಕ್ಟ್‌ಗೆ ತಿದ್ದುಪಡಿಯನ್ನು ತಂದು, ಚುನಾವಣೆಗಳು ನಡೆದವು.

ಚುನಾವಣೆ ಆದಮೇಲೆ, ಯಾವಾಗ ಸರ್ಕಾರಕ್ಕೆ ಅವರ ಪಕ್ಷಕ್ಕೆ ಹೆಚ್ಚಿನ ಬಹುಮತ ಇಲ್ಲ ಎಂದು ಗೊತ್ತಾಯಿತು ಆಗ ಅವರು 21ನೇ ಮೇ 1997 ರಂದು ಒಂದು ಆರ್ಡಿನೆನ್ಸ್

ಇಷ್ಯೂ ಮಾಡಿ ಮೂರು ಜನ ಸದಸ್ಯರನ್ನು ನಾಮಾಂಕಿತ ಮಾಡಬೇಕು, ನಾಮಿನೇಟ್ ಮಾಡಬೇಕು ಎನ್ನತಕ್ಕಂಥ ಆರ್ಡಿನೆನ್ಸ್ ಅನ್ನು ಇಷ್ಯೂ ಮಾಡಿದರು. ಇದರ ವಿರುದ್ಧವಾಗಿ ನಾವು ರಾಜ್ಯಪಾಲರನ್ನು ಭೇಟಿಯಾಗಿದ್ದೇವೆ, ಮುಖ್ಯಮಂತ್ರಿಗಳಿಗೆ ಮೆಮೋರ್ಯಾಂಡಂ ಕಳುಹಿಸಿದ್ದೇವೆ ಮತ್ತು ಸಂಬಂಧಪಟ್ಟಂಥ ಮಂತ್ರಿಗಳಿಗೂ ಕೂಡ ಕಳುಹಿಸಿದ್ದೇವೆ.

ನೀವೇ ಒಪ್ಪಿಕೊಂಡ ಈ ಪ್ರಜಾಪ್ರಭುತ್ವದ ಆಧಾರದ ಮೇಲೆ, ನೀತಿಯ ಮೇಲೆ ಚುನಾವಣೆ ಮಾಡಿ, ಮೆಜಾರಿಟಿ ಬರದೇ ಇದ್ದಾಗ ಈ ಒಂದು ಆರ್ಡಿನೆನ್ಸ್ ತರುತ್ತೀರಿ, ಇದು ಸರಿಯಲ್ಲ ಎನ್ನತಕ್ಕಂಥ ವಾದವನ್ನು ಮಂಡಿಸಿದರೂ ಕೂಡ ಅವರು ಮೇ ತಿಂಗಳಿನಲ್ಲಿ ಈ ಆರ್ಡಿನೆನ್ಸ್ ಅನ್ನು ಜಾರಿಗೆ ತಂದರು. ಈಗ ಪುನಃ ಅದು ಈ ಸದನದಲ್ಲಿ ಒಂದು ಬಿಲ್ ಮುಖಾಂತರ ಅಮೆಂಡ್‌ಮೆಂಟ್‌ಗಾಗಿ, ಈ ಆರ್ಡಿನೆನ್ಸ್ ಅನ್ನು ರೀಪ್ಲೇಸ್ ಮಾಡುವುದಕ್ಕೋಸ್ಕರ ಬರಬಹುದು.

ನಿನ್ನೆ ಇಲ್ಲಿ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಇದ್ದರು. ಮತ್ತು ಸಂಬಂಧಪಟ್ಟಂಥ ಮಂತ್ರಿಗಳಾದ ಎಚ್. ನಾಗಪ್ಪನವರೂ ಕೂಡ ಇದ್ದರು. ಒಂದು ಸಲ ಈ ಕೆಟ್ಟ ಪದ್ಧತಿಯನ್ನು ತೆಗೆದುಹಾಕಬೇಕು ಎಂದು ತತ್ವಶಃ ಒಪ್ಪಿಕೊಂಡಂಥ ಜನ ಹೀಗೆ ಮಾಡುತ್ತಿದ್ದಾರೆ. ಕೋ-ಆಪರೇಟೀವ್ ಕ್ಷೇತ್ರದಲ್ಲಿ ನಾಮಿನೇಷನ್ ಮಾಡುವ ಪದ್ಧತಿ ಇತ್ತು. ಇವತ್ತೂ ನಾಮಿನೇಟ್ ಮಾಡತಕ್ಕಂಥ ಸೆಕ್ಷನ್ ಜೀವಂತವಾಗಿದೆ. ಅದಕ್ಕೆ ಏನೂ ಅಮೆಂಡ್‌ಮೆಂಟ್ ಆಗಿಲ್ಲ. ಈಗ ಅದನ್ನು ತೆಗೆದು ಹಾಕಬೇಕು ಎಂದು ಮಾಡುತ್ತಿದ್ದೀರಿ. ಆ ಮಾತು ಬೇರೆ.

ಯಾವಾಗ ಇದನ್ನು ಮಾಡಲು ಪ್ರಾವಿಷನ್ ಇತ್ತು, ಆಗ ಮಾಡಿದ್ದರೆ ಇದನ್ನು ಒಂದು ಎಕ್ಸೆಪ್ಷನ್ ಎಂದು ಅಥವಾ ಇದನ್ನು ಏಕೆ ಮಾಡಿದಿರಿ ಎಂದು ನಾವು ಆಕ್ಷೇಪಣೆ ಮಾಡುತ್ತಿರಲಿಲ್ಲ. ಆದರೆ ಪ್ರಾವಿಷನ್ ಇಲ್ಲದೇ ಇದ್ದಾಗ, ಪ್ರಾವಿಷನ್ ಹುಟ್ಟಿಸಿಕೊಂಡು, ಹೊಸ ಕಾನೂನು ತಂದು, ಹೊಸ ತಿದ್ದುಪಡಿ ತಂದು, ನೀವೇ ಒಪ್ಪಿಕೊಂಡಂಥ ಶಿಫಾರಸ್ಸಿಗೆ ಪುನಃ ತಿಲಾಂಜಲಿ ಕೊಡತಕ್ಕಂಥಾದ್ದನ್ನು ಮಾಡುತ್ತಿದ್ದೀರಲ್ಲಾ, ಇದು ಸರಿಯಲ್ಲ. ಇದು ಅನ್ಯಾಯ ಮತ್ತು ಕಾನೂನಿನಿಗೆ ವಿರುದ್ಧವಾಗಿದೆ. ಇಲ್ಲವೆಂದರೆ ನೈತಿಕವಾಗಿ ಇದನ್ನು ಮಾಡತಕ್ಕಂಥಾದ್ದು ಸರಿಯಲ್ಲ ಎನ್ನತಕ್ಕಂಥ ಮಾತನ್ನು ನಾವು ಹೇಳುತ್ತಿದ್ದೇವೆ. ಅದಕ್ಕೆ ಅವರು ಒಪ್ಪಿಕೊಳ್ಳಲಿಲ್ಲ.

ನಾವು ಮಾಡಿದ್ದನ್ನೇ ಮಾಡುತ್ತೇವೆ, ನಾವು ಮೂರು ಜನರನ್ನು ನಾಮಿನೇಟ್ ಮಾಡಬೇಕು ಎಂದು ತೀರ್ಮಾನ ಮಾಡಿದ್ದೇವೆ, ನಮ್ಮ ಪಕ್ಷದಲ್ಲೇ ತೀರ್ಮಾನವಾಗಿದೆ. ಅದಕ್ಕಾಗಿ ನಾವು ಈ ಆರ್ಡಿನೆನ್ಸ್ ತಂದಿದ್ದೇ ನಿಜ ಎನ್ನತಕ್ಕಂಥ ಮೊಂಡು ವಾದವನ್ನು ಪಟೇಲರ ಸರ್ಕಾರ ಇಟ್ಟಿದೆ. ಆದರೂ ಕೂಡ ನಾವು ಇದನ್ನು ಪುನರ್‌ಪರಿಶೀಲಿಸಿ ಎಂದು ಮನವಿ ಮಾಡಿದೆವು. ಏಕೆಂದರೆ ಇದು ರೈತರ ಚುನಾವಣೆ ಆಗಿದ್ದರಿಂದ ನೇರವಾಗಿ ಹಳ್ಳಿಯ ಜನರಿಗೆ ಸಂಬಂಧಪಟ್ಟ ಚುನಾವಣೆ. ಅದರಲ್ಲಿ ನಾವು ರಾಜಕೀಯ ಮಾಡಬಾರದು. ಪಕ್ಷಭೇದವಿಲ್ಲದೆ ಚುನಾವಣೆ ಎಂದು ನಾವು ಒಂದು ಕಡೆ ಹೇಳುತ್ತೇವೆ, ಇನ್ನೊಂದು ಕಡೆ ನಾಮಿನೇಟ್ ಮಾಡಿ ನಮ್ಮ

ಪ್ರಭುತ್ವವನ್ನು ಬೆಳೆಸುವುದಕ್ಕೆ ಅಥವಾ ಅದರಲ್ಲಿ ಹಸ್ತಕ್ಷೇಪ ಮಾಡಿ ನಮ್ಮ ವರ್ಚಸ್ಸನ್ನು ಇಟ್ಟುಕೊಳ್ಳಬೇಕು ಎಂದು ಇನ್ನೊಂದು ಕಡೆ ನಾಮಿನೇಟ್ ಮಾಡುತ್ತೇವೆ. ಇದು ಸರಿಯಲ್ಲ ಎಂದು ನಾವು ಹೇಳಿದರೂ ಸಹ ಅವರು ಕೇಳಲಿಲ್ಲ. ಕೊನೆಗೆ ನಾವು ಧರಣಿಯನ್ನು ಹೂಡಬೇಕಾಯಿತು.

ಇಲ್ಲಿಯವರೆಗೆ ನಾವು ಧರಣಿ ಕುಳಿತಿದ್ದೇವೆ. ಈಗ ತಾವು ಬಂದಿದ್ದೀರಿ. ಆದಕ್ಕಾಗಿ ಮತ್ತೊಮ್ಮೆ ಅಧ್ಯಕ್ಷರ ಮೂಲಕ ಕಳಕಳಿಯಿಂದ ಮನವಿ ಮಾಡಿಕೊಳ್ಳುತ್ತಿದ್ದೇವೆ, ಈ ಒಂದು ಆರ್ಡಿನೆನ್ಸ್ ಏನಿದೆ, ಅದನ್ನು ತೆಗೆಯಬೇಕು. ತಾವು ಅದನ್ನು ರೀಪ್ಲೇಸ್ ಮಾಡುವುದಕ್ಕೆ ಬಿಲ್ ಕೂಡ ತರುತ್ತಿದ್ದೀರಿ. ದಯವಿಟ್ಟು ಈ ಆರ್ಡಿನೆನ್ಸ್ ಅನ್ನು ಹಿಂತೆಗೆದುಕೊಳ್ಳಿ. ಇದರಿಂದ ಇಡೀ ನಿಮ್ಮ ಸರ್ಕಾರದ ಕೆಲಸ ಬುಡಮೇಲಾಗತಕ್ಕಂಥ ಪರಿಸ್ಥಿತಿ ಇಲ್ಲ. ಅಥವಾ ಯಾವುದೇ ಒಂದು ರಾಜಕೀಯ ಪಕ್ಷದ ಅಸ್ತಿತ್ವ ಬದಲಾವಣೆ ಆಗತಕ್ಕಂಥಾದ್ದು ಇಲ್ಲ. ಇದು ಒಂದು ಸಾಮಾನ್ಯ ರೈತರಿಗೆ ಸಂಬಂಧಪಟ್ಟಿರುವ ಕಾರಣ, ಇದರಲ್ಲಿ ಯಾವುದೇ ಒಂದು ರಾಜಕೀಯ ತರದೆ, ತಾವು ದೊಡ್ಡ ಮನಸ್ಸು ಮಾಡಿ ಈ ಒಂದು ಕಾನೂನನ್ನು ವಾಪಸ್ಸು ತೆಗೆದುಕೊಳ್ಳಬೇಕು ಎಂದು ನಾನು ಪುನಃ ಕಳಕಳಿಯಿಂದ ಕೇಳಿಕೊಳ್ಳುತ್ತೇನೆ.

ಅಧ್ಯಕ್ಷರೇ, ಇದಕ್ಕಿಂತ ಹೆಚ್ಚು ನಾವು ಏನು ಹೇಳುವುದು? ದಯವಿಟ್ಟು ಈ ಕೆಲಸವನ್ನು ಮಾಡಬೇಕು ಎಂದು ಪುನಃ ತಮ್ಮ ಮುಖಾಂತರ ಕೇಳಿಕೊಳ್ಳುತ್ತೇನೆ. ಇಲ್ಲವೆಂದರೆ, ನೀವು ಹೇಳಿದ್ದಕ್ಕೆ ತದ್ವಿರುದ್ಧವಾಗಿ ನಡೆದುಕೊಳ್ಳುತ್ತಿದ್ದೀರಿ ಎನ್ನುವಂಥ ಮಾತನ್ನು ನಾವು ಹೇಳಬೇಕಾಗುತ್ತದೆ.

ಬಿ.ಎಸ್. ಯಡಿಯೂರಪ್ಪ: ನಾಮಿನೇಷನ್ ಮಾಡುವಂಥಾದ್ದೇ ಒಂದು ಅನಿಷ್ಟ ಪದ್ಧತಿ ಎನ್ನುವುದು ನಮ್ಮ ಪಕ್ಷದ ಸ್ಪಷ್ಟ ನಿಲುವು. ಆದಕ್ಕಾಗಿ ನಾನು ನಿಮಗೆ ಒತ್ತಾಯ ಮಾಡುತ್ತಿದ್ದೇನೆ. ಈಗಾಗಲೇ ತಮಗೆ ಗೊತ್ತಿರುವ ಹಾಗೆ ಎಪಿಎಂಸಿ ಚುನಾವಣೆಯನ್ನು ಮುಂದುವರಿಸಿಕೊಂಡು ಹೋಗುತ್ತೀರಿ. ಹಿಂದೆ ಆಗಿದ್ದನ್ನು ಪುನಃ ಮಾಡಬಾರದು ಎಂಬ ಬದಲಾವಣೆಗೋಸ್ಕರ ಜನ ಅಧಿಕಾರವನ್ನು ನಿಮ್ಮ ಕೈಯ್ಯಲ್ಲಿ ಕೊಟ್ಟರು. ಅವರು ಮಾಡಿದ್ದನ್ನೇ ನೀವೂ ಮಾಡುವ ಹಾಗಿದ್ದರೆ ಬದಲಾವಣೆ ಮಾಡುವ ಅಗತ್ಯವಿರಲಿಲ್ಲ. ಈಗಲಾದರೂ ದಯಮಾಡಿ ತಾವು ಯೋಚನೆ ಮಾಡಿ ಮತದಾನದ ಹಕ್ಕನ್ನಾದರೂ ತೆಗೆದುಹಾಕಿ.

ವಾಟಾಳ್ ನಾಗರಾಜ್: ಮಾನ್ಯ ಅಧ್ಯಕ್ಷರೇ, ನಾಮಕರಣ ಮಾಡುವುದಿಲ್ಲ ಎಂದು ಹಿಂದೆ ಸಹಕಾರ ಸಚಿವರು ಮೈಸೂರಿನಲ್ಲಿ ಒಂದು ಸಮ್ಮೇಳನದಲ್ಲಿ ಹೇಳಿದ್ದರು. ಈ ನಾಮಕರಣ ಪದ್ಧತಿಯೆ ಒಂದು ಅನಿಷ್ಟ ಪದ್ಧತಿ, ಈ ಪದ್ಧತಿ ಹೋಗಬೇಕು ಎಂದೂ ಸಹ ಹೇಳಿದರು. ತಾವೂ ಮೈಸೂರಿನ ಆ ಒಂದು ಸಮಾರಂಭದಲ್ಲಿ ಭಾಗವಹಿಸಿದ್ದೀರಿ ಎಂದು ನನಗೆ ಜ್ಞಾಪಕವಿದೆ. ಈ ಸದನದಲ್ಲಿ ನಾಮಕರಣವನ್ನು ನಿಲ್ಲಿಸುತ್ತೇವೆ ಎನ್ನತಕ್ಕಂಥ ಸ್ಪಷ್ಟ ನಿಲುವಿನ ಬಗ್ಗೆ ಒಂದು ಮಸೂದೆ ತರುತ್ತೇವೆ ಎಂದು ಹೇಳಿದ್ದಿರಿ. ಆದರೆ ಈಗ ಅವರು ತಂದಿರುವುದನ್ನು ನೋಡಿದರೆ, ಅವರು ಹೇಳಿದ್ದಕ್ಕೆ ತದ್ವಿರುದ್ಧವಾಗಿ ನಾಮಕರಣ ಮಾಡಲೇಬೇಕು ಎನ್ನುವ ನಿರ್ಧಾರಕ್ಕೆ ತಾವು ಬಂದಿದ್ದೀರಿ.

ಎಚ್.ಎನ್. ನಂಜೇಗೌಡ: ಮಾನ್ಯ ಅಧ್ಯಕ್ಷರೇ, ಈಗ ನಾನು ಕೊಡುವ ಸಲಹೆಯನ್ನು ಬಹುಶಃ ಬೇರೆ ಮುಖ್ಯಮಂತ್ರಿಗಳು ಇದ್ದಿದ್ದರೆ ಕೊಡುತ್ತಿರಲಿಲ್ಲ. ಮಾನ್ಯ ಜೆ.ಹೆಚ್. ಪಟೇಲ್‌ರವರು ಮುಖ್ಯಮಂತ್ರಿಗಳಾದ್ದರಿಂದ ಈ ಸಲಹೆಯನ್ನು ಕೊಡುತ್ತಿದ್ದೇನೆ. ಗಾಂಧೀಜಿಯವರು ರಾಮರಾಜ್ಯದ ಕನಸನ್ನು ಕಂಡರು. ಕನಸು ಏನು ಕಂಡರು ಅಂದರೆ ಸಹಕಾರ ತತ್ವದಲ್ಲಿ ಒಬ್ಬರಿಗೊಬ್ಬರು ಸಹಕಾರ ಕೊಡುತ್ತಾ ಗ್ರಾಮಾಂತರ ಪ್ರದೇಶದಲ್ಲಿ ಆಡಳಿತ ತನ್ನಿಂದತಾನೆ ನಡೆಯಬೇಕು ಎಂದು. ಅದರ ಅರ್ಥ ಪಕ್ಷಾತೀತವಾಗಿ ಸ್ಥಳೀಯ ಸಂಸ್ಥೆಗಳು, ಸಹಕಾರ ಸಂಸ್ಥೆಗಳು ಕೆಲಸ ಮಾಡಬೇಕು ಎಂದು ನಾನು ಹೇಳುತ್ತೇನೆ. ಇದು ಕರ್ನಾಟಕದಿಂದಲೇ ಪ್ರಾರಂಭವಾಗಲಿ.

ಕೆ.ಎಸ್. ಪುಟ್ಟಣ್ಣಯ್ಯ: ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ವಿರೋಧ ಪಕ್ಷದ ನಾಯಕರು ಈ ಎಪಿಎಂಸಿ ನಾಮಕರಣದ ಬಗ್ಗೆ ವಿರೋಧ ವ್ಯಕ್ತಪಡಿಸಿ ಧರಣಿಯನ್ನು ಮಾಡುತ್ತಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳು ಸಮಾಜವಾದಿ ಹಿನ್ನೆಲೆಯಲ್ಲಿ ಬಂದವರು, ಇಂತಹ ತತ್ವವನ್ನು ಹಲವಾರು ವೇದಿಕೆಗಳಲ್ಲಿ ಇದೇ ಸದನದಲ್ಲಿ ಪ್ರತಿಪಾದಿಸಿದ ಪಟೇಲರು ಪ್ರಜಾಪ್ರಭುತ್ವದ ಬಗ್ಗೆ ಅತ್ಯಂತ ಗಂಭೀರವಾಗಿ ಚಿಂತನೆ ಮಾಡಬೇಕು. ನಾಮಕರಣ ಪದ್ಧತಿಯಿಂದ ಇಡೀ ಸಹಕಾರ ಕ್ಷೇತ್ರ ನಾಶವಾಗುವುದರ ಮೂಲಕ ಖಾಸಗೀಕರಣಕ್ಕೆ ಅವಕಾಶ ಮಾಡಿ ಕೊಡುತ್ತದೆ. ಆದ್ದರಿಂದ ಒಂದು ನಾಂದಿಯನ್ನು ಈ ನಾಮಕರಣ ಪದ್ಧತಿಯನ್ನು ರದ್ದು ಮಾಡುವುದರ ಮೂಲಕ ಶುರುಮಾಡಲಿ. ನಾಮಕರಣ ಮಾಡಲೇಕು ಎನ್ನುವುದು ತಮ್ಮ ಇಚ್ಛೆಯಾದರೆ ಎಪಿಎಂಸಿಯಾಗಿರಬಹುದು, ಯಾವುದೇ ಸಹಕಾರ ಕ್ಷೇತ್ರವಾಗಿರಬಹುದು, ಅದೊಂದು ಬಹು ಕೆಟ್ಟ ಹೆಜ್ಜೆ.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಅಧ್ಯಕ್ಷರೇ, ಮಾನ್ಯ ವಿರೋಧ ಪಕ್ಷದ ನಾಯಕರು ಶ್ರೀ ಯಡಿಯೂರಪ್ಪನವರು, ಶ್ರೀ ನಂಜೇಗೌಡರವರು, ಶ್ರೀ ವಾಟಾಳ್‌ರವರು ಹಾಗೂ ಶ್ರೀ ಪುಟ್ಟಣ್ಣಯ್ಯನವರು ಹೇಳಿದ ತತ್ವಕ್ಕೆ ನಾನು ಬದ್ಧ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ನಾಮಕರಣ ಪದ್ಧತಿ ಒಂದು ಅಪಸ್ವರ. ಆದರೆ ನಾನು ಇವತ್ತು ಪಕ್ಷದ, ಸರ್ಕಾರದ ಏರು-ಪೇರುಗಳ ಬಗ್ಗೆ ಮಾತನಾಡುತ್ತಾ ಇಲ್ಲ. ಯಾವ ಪಕ್ಷದ ಸರ್ಕಾರ ಬಂದರೂ ಮಾಡದೆ ಇರುವಂತಹ, ಹಿಂದೆ ಯಾರೇ ಏನೇ ಮಾಡಿದ್ದರೂ, ಮುಂದೆ ಯಾರೂ ಯಾವ ಕಾಲಕ್ಕೂ ನಾಮಕರಣ ಮಾಡಕೂಡದು ಎನ್ನುವ ಹಾಗೆ ಏನಾದರೂ ವ್ಯವಸ್ಥೆಯನ್ನು ತಾವು ಸೂಚಿಸುವುದಾದರೆ ಅದು ಬೇರೆ ವಿಷಯ.

ಈಗ ನಾನು ಆರ್ಡಿನೆನ್ಸ್ ಪಾಸ್ ಮಾಡಿಕೊಳ್ಳಬೇಕು. ಇದು ಸಬ್‌ಸ್ಟಿಟ್ಯೂಟಿವ್ ಬಿಲ್. ಆ ಬಿಲ್ ಮೇಲೆ ಚರ್ಚೆ ಮಾಡಲಿ. I am not opposed to the very basic concept of democratic system. ಆದರೆ ಈಗ ನಾನು ಒಂದು ಪಕ್ಷಕ್ಕೆ ಸೇರಿದವನು, ನಮ್ಮ ಸರ್ಕಾರ ಒಂದು ಪಕ್ಷದ್ದು. ಇದು ನ್ಯಾಷನಲ್ ಗೌವರ್ನ್‌ಮೆಂಟ್ ಅಲ್ಲ. ಜನತಾದಳದ

ಇಚ್ಛೆಗೋಸ್ಕರ ನಾನು ನಾಮಕರಣವನ್ನು ಮಾಡುತ್ತಿದ್ದೇನೆ ಎನ್ನುವುದು ಸತ್ಯಾಂಶ. Because I am bound by the interest of the party. ಅದರಲ್ಲಿ ಮುಚ್ಚು-ಮರೆ ಏನೂ ಇಲ್ಲ.

ಮಾನ್ಯ ಖರ್ಗೆಯವರು ಹೇಳಿದರು, ಗ್ರಾಮಾಂತರ ಪ್ರದೇಶಗಳಲ್ಲಿ ಈ ಕಮಿಟಿ ಏನು ಇವೆ ಇವು ಪಕ್ಷದ ಆಧಾರದ ಮೆಲೆ ನಡೆಯುವುದಿಲ್ಲ. ಇದು ನಿಜ. ಆದರೆ ಅವು ಈಗ ಪವರ್ ಬೇಸ್ ಆಗುತ್ತಾ ಇವೆ. ಏಕೆಂದರೆ ನಾವು ರೈತರಿಗೋಸ್ಕರ ಕೆಲಸ ಮಾಡುವಾಗ ನಮ್ಮವರನ್ನೇ ನಾವು ಆರಿಸಿಕೊಳ್ಳುತ್ತೇವೆ.

ಈಗ ಮದುವೆ ಯಾರದೇ ಇರಲಿ ನಮ್ಮ ಮಕ್ಕಳಿಗೆ ಒಂದು ಸೌಟು ತುಪ್ಪ ಜಾಸ್ತಿ ಹಾಕುತ್ತೇವಲ್ಲ ಹಾಗೆ. ಬೇಸಿಕ್ ಪ್ರಿನ್ಸಿಪಲ್‌ಗೆ ನೀವು ಹೇಳಿದ್ದಕ್ಕೆ ನಾನು ವಿರೋಧ ಮಾಡುವುದಿಲ್ಲ. ಆದರೆ ಸದ್ಯಕ್ಕೆ ನಾನು ಆಡಳಿತ ನಡೆಸುತ್ತಿದ್ದೇನೆ. ನನಗೆ ಒಂದು ಪಕ್ಷ ಇದೆ. ನಮ್ಮ ಶಾಸಕರಿಗೂ ಸಾಕಷ್ಟು ಒತ್ತಡ ಇದೆ ಅವರವರ ಕ್ಷೇತ್ರದಿಂದ. ಅದಕ್ಕೋಸ್ಕರ ಆ ಬಿಲ್ ಮೇಲೆ ಚರ್ಚೆ ಮಾಡುವಾಗ ಮಾತನಾಡಿ. ಬೇಕಾದರೆ ಮುಕ್ತವಾಗಿ ಚರ್ಚೆ ಮಾಡೋಣ.

ನಮಗೆ ಮೆಜಾರಿಟಿ ಇದೆ, ಪಾಸ್ ಮಾಡಿಕೊಳ್ಳುತ್ತೇವೆ, ಅದಕ್ಕೆ ನೀವು ಹೇಳಿದ್ದೆಲ್ಲವನ್ನು ತಳ್ಳಿಹಾಕುತ್ತೇನೆ ಎಂದು ಇದರ ಅರ್ಥ ಅಲ್ಲ. ನಮ್ಮ ಪಕ್ಷದ ಹಿತರಕ್ಷಣೆ ಮಾಡುವುದನ್ನು ನಾವು ಯೋಚನೆ ಇಟ್ಟುಕೊಂಡಿದ್ದೇವೆ. ಆಗ ನೀವು ಹೇಳುವಂತೆ ಬಹಳ ವಿಶಾಲವಾದ ರೀತಿಯಲ್ಲಿ ಹೋಗುವುದಕ್ಕೆ ಸಾಧ್ಯವಿದ್ದರೆ ಅದರ ಬಗ್ಗೆ ವಿಚಾರ ಮಾಡೋಣ. ಕೆಲವು ಲೋಕಲ್ ಬಾಡಿಸ್, ಕಲ್ಚರಲ್ ಆರ್ಗನೈಸೇಷನ್ಸ್ ಮತ್ತು ಸಾಮಾಜಿಕ ಸೇವೆಗೆ ಇರತಕ್ಕಂತಹ ಕೆಲವು ಇರುತ್ತವೆ, ಜಾತ್ಯಾತೀತವಾದಂತಹ, ಧರ್ಮಾತೀತವಾದಂತಹ ಸಂಸ್ಥೆಗಳು ಇರುತ್ತವೆ. ಅವಕ್ಕೆ ಬೇಕಾದರೆ ಆನ್ ದಿ ಮೆರಿಟ್ ನಾವು ಜನರನ್ನು ಆರಿಸುವುದಾದರೆ ಅದಕ್ಕೆ ನಮ್ಮ ಪಕ್ಷದ ವಿರೋಧ ಇಲ್ಲ. ತಾವು ತಿಳಿಸಿರುವ ಹಾಗೆ ಅಧಿಕಾರದ ವಿಕೇಂದ್ರಿಕರಣದ ಮೊದಲು ಆಲೋಚನೆ ಮಾಡಿ ರಾಜ್ಯದಲ್ಲಿ ಆಡಳಿತ ಕೊಟ್ಟವರು ನಾವು.

ನಾವು ಆಡಳಿತ ವಿಕೇಂದ್ರೀಕರಣ ಅಷ್ಟೇ ಅಲ್ಲ, representation to backward classes, women, minorities ಆ ಹಿನ್ನೆಲೆಯಲ್ಲಿ ತಾವು ಹೇಳತಕ್ಕಂತಹ ಐಡಿಯಲಿಸಂ ಏನು ಇದೆ, ಅದಕ್ಕೆ ನಾನು ಬದ್ಧ. ಆದರೆ ವ್ಯವಹಾರಿಕವಾಗಿ ನಾನು ನನ್ನ ಪಕ್ಷದ ಸರ್ಕಾರ ನಡೆಸಬೇಕು. ನಾವು ನಮ್ಮ ಜನರನ್ನು ಸಮಾಧಾನಪಡಿಸಬೇಕು. ಇದಕ್ಕೆ ಮೀರಿ ಒಂದು ವೈಡರ್ ರೇಂಜ್ ಹೋಗೋಣ ಅಂದರೆ ನನ್ನದೇನೂ ಅಭ್ಯಂತರ ಇಲ್ಲ. ಅದಕ್ಕೋಸ್ಕರ ನಾನು ದಯವಿಟ್ಟು ವಿರೋಧ ಪಕ್ಷದ ನಾಯಕರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ಚರ್ಚೆ ಮಾಡೋಣ. I am prepared. ಈಗ ಧರಣಿ ನಿಲ್ಲಿಸಬೇಕು ಎಂದು ಕೇಳುತ್ತೇನೆ. ಈ ವಿಷಯದಲ್ಲಿ ನಾಳೆ ಚರ್ಚೆಯಾಗಲಿ. ಬಿಲ್ ಇಂಟರ್‌ಡ್ಯೂಸ್ ಆಗಲಿ. ಆಗ ಇದರ ಮೇಲೆ ಚರ್ಚೆ ಮಾಡೋಣ.

**Speaker:** I think that should satisfy you as you are getting another opportunity for discussion on this matter.

ಎಂ. ಮಲ್ಲಿಕಾರ್ಜುನ ಖರ್ಗೆ: ನಾನು ಪುನಃ ಮುಖ್ಯಮಂತ್ರಿಯವರಿಗೆ ಅಪೀಲ್ ಮಾಡುತ್ತಿದ್ದೇನೆ. ಏಕೆಂದರೆ ಅವರು ಸಮಾಜವಾದಿ ತತ್ವದಲ್ಲಿ ನಂಬಿಕೆ ಇರತಕ್ಕಂಥವರು. ಗಾಂಧೀಜಿ ತತ್ವದಲ್ಲಿ ನಂಬಿಕೆ ಇರತಕ್ಕಂಥವರು, ಆಡಳಿತದಲ್ಲಿ ಟ್ರಾನ್ಸ್‌ಪರೆನ್ಸಿ ಇರಬೇಕೆಂದು ಹೇಳಿ ಮತ್ತು ಡೆಮಾಕ್ರೆಟಿಕ್ ಪ್ರಿನ್ಸಿಪಲ್ಸ್‌ಗೆ ಹೋಗುತ್ತೇವೆ ಎಂದು ಹೇಳಿಯೇ ಹೋರಾಟ ಮಾಡಿದವರು. ತುರ್ತು ಪರಿಸ್ಥಿತಿಯಲ್ಲಿ ಜೈಲಿಗೆ ಹೋಗಿದ್ದಂಥವರು ಎಂದು ಹೇಳತಕ್ಕಂಥವರು. ಆದರೆ ಈಗ ನಿಮಗೆ ಡೆಮಾಕ್ರಟಿಕ್ ಪ್ರಿನ್ಸಿಪಲ್ಸ್ ಉಳಿಸುವುದಕ್ಕೋಸ್ಕರ ನಿಮ್ಮ ಕೈಗೇ ಅಧಿಕಾರ ಬಂದಿರುವಾಗಲಾದರೂ ಈ ಕೆಲಸವನ್ನು ಮಾಡಿ. ಪಕ್ಷ ಉಳಿಸುವುದಕ್ಕೆ ಮಾಡಬೇಡಿ. ಡೆಮಾಕ್ರಟಿಕ್ ವ್ಯಾಲ್ಯೂಸ್ ಉಳಿಸುವುದಕ್ಕೋಸ್ಕರ ತಾವು ಆಲೋಚನೆ ಮಾಡಿ ಕೆಲಸ ಮಾಡಬೇಕು.

ಆ ದಿಸೆಯಲ್ಲಿ ಪುನಃ ಅಧ್ಯಕ್ಷರ ಮುಖಾಂತರ ಈ ಆರ್ಡಿನೆನ್ಸ್‌ನ್ನು ವಾಪಸ್ ತೆಗೆದುಕೊಳ್ಳಬೇಕೆಂದು ಮುಖ್ಯಮಂತ್ರಿಗಳಲ್ಲಿ ನಾನು ವಿನಂತಿ ಮಾಡಿಕೊಳ್ಳುತ್ತೇನೆ. ಬಹುಶಃ ಇದರ ಬಗ್ಗೆ ಎರಡ್ಮೂರು ದಿವಸಗಳಲ್ಲಿ ಚಿಂತನೆ ಮಾಡಿ ಅವರು ಈ ಸದನಕ್ಕೆ ಬರುತ್ತಾರೆ ಎಂದು ತಿಳಿದುಕೊಂಡು ನಾನು ನಮ್ಮ ಪಕ್ಷದ ಸದಸ್ಯರೆಲ್ಲರಿಗೂ ಮನವಿ ಮಾಡಿಕೊಳ್ಳುತ್ತೇನೆ, ಅವರು ಧರಣಿ ಬಿಟ್ಟು ತಮ್ಮ ತಮ್ಮ ಸ್ಥಾನದಲ್ಲಿ ಕುಳಿತುಕೊಳ್ಳಬೇಕು. ಮುಂದೆ ನಮ್ಮ ಹೋರಾಟದ ಬಗ್ಗೆ ಹೇಗಿರುತ್ತೆಂದು ತಮಗೆ ತಿಳಿಸುತ್ತೇವೆ. ಅಷ್ಟರಲ್ಲಿ ಅವರು ಈ ಬಗ್ಗೆ ಪರಿವರ್ತನೆಯಾದರೂ ಆಗಬಹುದು ಎಂಬುದು ನನ್ನ ಭಾವನೆ.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಅವರ ಸ್ಥಾನದಲ್ಲಿ ನಾನು ಇದ್ದಿದ್ದರೆ ನಾನು ಅದೇ ಕೆಲಸವನ್ನು ಮಾಡುತ್ತಿದ್ದೆ. ಇಲ್ಲಿ ಅವರು ಇದ್ದಿದ್ದರೆ ಅವರೂ ಇದನ್ನೇ ಮಾಡುತ್ತಿದ್ದರು.

ಎಂ. ಮಲ್ಲಿಕಾರ್ಜುನ ಖರ್ಗೆ: ಅಧ್ಯಕ್ಷರೇ, ಅವರಿಗೂ ನನಗೂ ಬಹಳ ವ್ಯತ್ಯಾಸವಿದೆ. ನಾನು ಅವರನ್ನು ಬಹಳ ಗೌರವದಿಂದ ನೋಡುತ್ತೇನೆ. Not that he is a chief Minister ಎಂದೂ ಯಾವ ಕೆಲಸಕ್ಕೂ ನಿಜಕ್ಕೂ ನಾನು ಇದುವರೆಗೂ ಹೋಗಿಲ್ಲ. ಆದರೆ ಒಂದೇನೆಂದರೆ ಅವರು ಬೆಳೆದುಬಂದಂಥ ಧಾಟಿ ಮತ್ತು ಅವರು ಏನು ಐಡಿಯಾಲಜಿಕಲ್ ಕಮಿಟ್‌ಮೆಂಟ್ ಇಟ್ಟುಕೊಂಡು ಬಂದಿದ್ದಾರೆ ಅವೆಲ್ಲಾ ಎಲ್ಲಿಗೆ ಹೋದವು ಎಂಬುದೇ ನನಗೆ ಚಿಂತೆಯಾಗಿದೆ, ಬೇರೇನೂ ಚಿಂತೆಯಿಲ್ಲ.

ಸಾಮಾಜಿಕ ಪರಿವರ್ತನೆಯಾಗಬೇಕು ಮತ್ತು ಅಡ್ಮಿನಿಸ್ಟ್ರೇಷನ್‌ನಲ್ಲಿ ಚುರುಕು ಬರಬೇಕಾದರೆ ನಾವು ಕೆಲವು ಜನರಿಂದ ಮಾತ್ರ ಅದನ್ನು ಅಪೇಕ್ಷೆ ಪಡುತ್ತೇವೆ. ಉದಾಹರಣೆಗೆ ದೇವರಾಜ ಅರಸ್‌ರವರು. ಅವರಿಗೆ ಏನು ಐಡಿಯಾಲಜಿಕಲ್ ಕಮಿಟ್‌ಮೆಂಟ್ ಇತ್ತು ಅದನ್ನು ತರತಕ್ಕಂಥ ಪ್ರಯತ್ನವನ್ನು ತಮ್ಮ ಕೈಗೆ ಅಧಿಕಾರ ಚುಕ್ಕಾಣಿ ಸಿಕ್ಕಾಗ ಅದರ ಬಗ್ಗೆ ಪ್ರಯತ್ನ ಮಾಡಿದರು.

ಅದೇ ರೀತಿ ನಮ್ಮ ಅಪೇಕ್ಷೆ ಏನೆಂದರೆ, ಜೆ.ಹೆಚ್. ಪಟೇಲ್‌ರವರು ಅಧಿಕಾರಕ್ಕೆ ಬಂದಿರುವಾಗ, ತಮ್ಮ ಕೈಗೆ ಅಧಿಕಾರ ಚುಕ್ಕಾಣಿ ಅವರು ಹೇಗೆ ತಮ್ಮ ಐಡಿಯಾಲಜಿಯನ್ನು ಆಡಳಿತದಲ್ಲಿ ತರುತ್ತಾರೆ ಮತ್ತು ಯಾವ ರೀತಿಯಾಗಿ ಅದನ್ನು ಉಪಯೋಗ ಮಾಡುತ್ತಾರೆ

ಎಂಬುದು ಬಹಳ ಮಹತ್ವವಾದ ವಿಚಾರವಾಗಿದೆ. ಅದನ್ನು ಬಿಟ್ಟು ಸುಮ್ಮನೆ ನಮ್ಮ ಜಾಗದಲ್ಲಿ ಅವರು ಎಂದು ಹೇಳುವುದು ಸರಿಯಲ್ಲ.

ಆದುದರಿಂದ ಲಘುವಾಗಿ, ನೀವು ಹೀಗೆ ಹೇಳಿದರೆ ನಾನು ಹಾಗೆ ಹೇಳುತ್ತೇನೆ ಎಂದು ಹೇಳುವುದು ಮುಖ್ಯವಲ್ಲ. ಜನರ ಅಪೇಕ್ಷೆ ಏನೆಂದರೆ ತಾವು ಅಧಿಕಾರಕ್ಕೆ ಬಂದಮೇಲೆ ಆ ಒಂದು ವಿಶಿಷ್ಟ ತತ್ವವನ್ನು ಹಿಡಿದುಕೊಂಡು ಬಂದಂಥ ಮನುಷ್ಯ. ಆಡಳಿತಕ್ಕೆ ಬಂದಮೇಲೆ ಏನು ಮಾಡುತ್ತಾರೆ ಎಂದು ನೋಡತಕ್ಕಂಥ ಜನ ಮತ್ತು ಸಮಾಜ ಇನ್ನೂ ಜೀವಂತವಾಗಿ ಈ ರಾಜ್ಯದಲ್ಲಿದೆ. ಆದುದರಿಂದ ನೀವು ಎಷ್ಟು ದಿವಸಗಳ ಕಾಲ ಅಧಿಕಾರವನ್ನು ಹೀಗೆ ಮುಂದುವರೆಸಿಕೊಂಡು ಹೋಗುತ್ತೇನೆ ಎಂಬ ಬಗ್ಗೆ ಆಲೋಚನೆ ಮಾಡಬೇಡಿ, ಪರಿವರ್ತನೆ ಮಾಡುವಾಗ.

**ವಾಟಾಳ್ ನಾಗರಾಜ್:** ಈಗ ಅವರು ಹಳೇ ಪಟೇಲರಲ್ಲ.

**ಎಂ. ಮಲ್ಲಿಕಾರ್ಜುನ ಖರ್ಗೆ:** ಹಳೆ ಪಟೇಲರಲ್ಲ, ಹಳೇ ಸಮಾಜವಾದಿ ಮುಖಂಡರಲ್ಲ ಎಂದು ನಾನು ಹೇಳುತ್ತೇನೆ. ಹಳೇ ಸಮಾಜವಾದಿ ಮುಖಂಡರು ಏನು ಅದನ್ನು ಇಲ್ಲಿಯವರೆಗೆ ಬೆಳೆಸಿಕೊಂಡು ಬಂದಿದ್ದಾರೆ ಕನಿಷ್ಟಪಕ್ಷ ಅಧಿಕಾರಕ್ಕೆ ಬಂದ ಮೇಲಾದರೂ ಸಮಾಜ ಪರಿವರ್ತನೆಯಲ್ಲಿ ಅಳವಡಿಸಿ ಸಾಧನೆ ಮಾಡಬೇಕು.

(ವಿಧಾನಸಭೆ ಕಲಾಪ, ನವೆಂಬರ್ 10, 1998)

ಸಮಕಾಲೀನ ರಾಜಕಾರಣಿಗಳು ಮತ್ತು ಇಂದಿನ ಸಂಸದೀಯ ಜಗತ್ತು ಕಂಡ ಅತಿ ಅಪರೂಪದ ಮೇರು ವ್ಯಕ್ತಿ ಎಂದರೆ ಪಟೇಲರು. ಅವರದು ಅದ್ವಿತೀಯ ಹಾಸ್ಯ ಪ್ರಜ್ಞೆ. ಬಹುಕ್ಲಿಷ್ಟ ಹಾಗೂ ಸೂಕ್ಷ್ಮ ವಿಷಯಗಳನ್ನು ಸದನದಲ್ಲಿ ಕುಳಿತ ಶಾಸಕರಿಗೆ ಮನತಟ್ಟುವಂತೆ ಮುಟ್ಟಿಸಲು ಅವರು ಅನುಸರಿಸುತ್ತಿದ್ದ ಸಂಸದೀಯ ಜಾಣ್ಮೆಯ ವಿಧಾನ ಹಾಸ್ಯ.

ಅತಿ ರಂಜನೀಯ ಮತ್ತು ಅಷ್ಟೇ ಕಟು ಸತ್ಯ ಎನ್ನುವ ಪಟೇಲರ ವ್ಯಂಗ್ಯೋಕ್ತಿಯೊಂದನ್ನು ನಿಮ್ಮೆಲ್ಲರ ಗಮನಕ್ಕೆ ತರುವ ಅಭಿಲಾಷೆಯಾಗಿದೆ.

ಒಮ್ಮೆ ಸದನದಲ್ಲಿ ರಾಜಕೀಯ ಪಕ್ಷಗಳ ಧೋರಣೆ, ರೀತಿ ನೀತಿ, ರಚನೆ, ಮೂಲ, ಅವುಗಳ ಹಿಂದಿನ ಶಕ್ತಿಗಳು - ಹೀಗೆ ಮಾತಿನಿಂದ ಮಾತು ಬೆಳೆದು ಒಂದು ಘಟ್ಟ ತಲುಪಿತ್ತು.

ಪಟೇಲರು ಪ್ರತಿಪಕ್ಷದ ನಾಯಕರನ್ನು ನೇಪಥ್ಯದಲ್ಲಿಟ್ಟುಕೊಂಡು ಇಂದಿನ ಭಾರತೀಯ ರಾಜಕೀಯ ಪಕ್ಷಗಳ ಜಾತಕವನ್ನು ಬಹು ಸ್ವಾರಸ್ಯಕರವಾಗಿ ಬಿಡಿಸಿ ಹೇಳಿದರು.

"....... ಕಾಂಗ್ರೆಸ್ಸಿನದು ಧನ ಮೂಲ;
ಮಮತಾ ಬ್ಯಾನರ್ಜಿಯದು ತೃಣಮೂಲ;
ನಮ್ಮದು (ಜನತಾದಳದ್ದು) ರಣಮೂಲ;
ಬಿಜೆಪಿಯದು (ಸ್ವಲ್ಪ) ಋಣಮೂಲ.

ಪಟೇಲರ ಮಾತಿನ ಹಿಂದಿನ ಮರ್ಮ-ಸತ್ಯ ತಿಳಿದು ಸದನ ನಗೆಗಡಲಿನಲ್ಲಿ ಮುಳುಗಿತು.

(ಸದಾನಂದಗೌಡ (ಪುತ್ತೂರು) ವಿಧಾನಸಭೆ, ಫೆಬ್ರವರಿ 27, 2001)

# 24

# "ಮದಿರೆ ಮತ್ತು ಮಾನಿನಿ"

## ಪಟೇಲರ ಚಡಪಡಿಕೆಗೆ ಸದನದ ಮೂಗೇಟು

ಪಟೇಲರ ಎಲ್ಲ ಮಾತುಗಳನ್ನೂ ಸದನ ಸ್ವೀಕರಿಸಿತೇ, ಇಲ್ಲವೇ ಎನ್ನುವ ವಿಮರ್ಶೆ ಈ ಸಮೀಕ್ಷೆಯ ವ್ಯಾಪ್ತಿ ಮೀರಿದ್ದು.

ಇದೇ ಪ್ರಶ್ನೆಯನ್ನು ಮತ್ತಷ್ಟು ಹಿಗ್ಗಿಸಿ, ಪಟೇಲರ ನಿಸ್ಸಂಕೋಚ ಭಾಷಾ ಶೈಲಿಗೆ ಹಾಗೂ ಬೆಚ್ಚನೆಯ ಮಾತುಗಳಿಗೆ ಸಮಾಜ ಪ್ರತಿಕ್ರಿಯಿಸಿದ್ದೆಂತು ಎಂದು ಚಿಂತಿಸಿದಾಗಲೂ ಸಿಗುವ ಉತ್ತರ ಗೋಜಲು ಮತ್ತು ಅಸ್ಪಷ್ಟ.

ಬದುಕಿನಲ್ಲಿ ಸ್ವಚ್ಛ, ದ್ವಂದ್ವ, ಕುತೂಹಲ, ಮಾದಕತೆ, ಚೇತಕತೆ ಎನಿಸುವ ಎಲ್ಲ ವಿಷಯಗಳ ಬಗೆಗೂ ತಿಳಿಯುವ, ತಿಳಿಸುವ ಮತ್ತು ಅನುಭವಿಸುವ ಅಪರಿಮಿತ ಆಸಕ್ತಿ ಪಟೇಲರಿಗಿತ್ತು. ಕಲೆ, ಸಾಹಿತ್ಯ, ಕ್ರೀಡೆ, ಸೌಂದರ್ಯ, ಗಂಡು-ಹೆಣ್ಣುಗಳ ಪ್ರೀತಿ, ವಸಂತ, ಮಾಗಿ, ದೇವರು, ದೆವ್ವ, ಇಹ, ಪರ - ಹೀಗೆ ಜೀವನದ ನೂರೆಂಟು ಸ್ತರಗಳನ್ನು ಕುರಿತು ಮೌಲಿಕವಾದ, ಸ್ಥಿರವಾದ ಮತ್ತು ಅನ್ವೇಷಣೆಯ ಉತ್ಸುಕತೆಯನ್ನು ಅವರಲ್ಲಿ ಕಾಣಬಹುದಾಗಿತ್ತು. ಮಡಿವಂತಿಕೆಗೆ ಕಟ್ಟುಬಿದ್ದು ಯತಾರ್ಥ ಇಲ್ಲವೇ ಕಟುಸತ್ಯವನ್ನು ಹೇಳದೆ, ಏನನ್ನೋ ಹೊಸೆದು ಮರೆಮಾಚುವ ಮೈಲಿಗೆಯ ಪದರಂಗಕ್ಕೆ ಇವರು ದಾಳವಾಗಲಿಲ್ಲ.

ಹೆಣ್ಣು, ಹೆಂಡ - ಇಂತಹ ಮಾತುಗಳನ್ನು ಸಾರ್ವಜನಿಕವಾಗಿ ಉಸಿರಿಸುವುದೇ ಮಹಾಪಾಪ ಇಲ್ಲವೇ ಮುಜಗರ ಎನ್ನುವ ಸಮಾಜದಲ್ಲಿ ಪಟೇಲರ ನೇರ ನೋಟವು ಶೀಲದ ಎಲ್ಲೆ ಮೀರಿದ ಅಸಭ್ಯ ಅನುಭವಗಳೆಂಬ ಟೀಕೆಗೆ ಒಳಗಾದದ್ದು ಸಹಜವೇ. ಪಟೇಲರ ಸೌಂದರ್ಯ ಪ್ರಜ್ಞೆ 'ದೌರ್ಬಲ್ಯ'

ಎನಿಸಿದ್ದು ಅಚ್ಚರಿಯೇನಲ್ಲ. ಅಭಿಪ್ರಾಯ ಔದಾರ್ಯ ತೋರಿದ ವರ್ಗಕ್ಕೆ ಮಾತ್ರ ಇವರ ಮಾತು ಅತಿರೇಕ ಎನಿಸಲಿಲ್ಲ.

ಲೋಕಾಭಿರಾಮವಾಗಿ ಮಾತಿನ ಶೈಲಿ ಸಿದ್ಧಿಸಿಕೊಂಡ ಪಟೇಲರಿಗೆ ಕಾಮವೆನ್ನುವುದು (ಸೆಕ್ಸ್) ಕಾಡುವ ಚಿಂತೆ (ಅಬ್ಸೆಷನ್) ಆಗಲೇ ಇಲ್ಲ.

ಸದನದಲ್ಲಿಯೂ ಹೀಗೆಯೇ ಆಯಿತು. ಮದಿರೆ ಮತ್ತು ಮಾನಿನಿ ಬಗೆಗೆ ತಮಗಿರುವ ಪ್ರಾಂಜಲ ಅನುಭಾವವನ್ನು ಪಟೇಲರು ಯಾವ ಸಂಕೋಚ, ಬಿಢೆ, ಮುಚ್ಚುಮರೆ ಇಲ್ಲದೇ ಮರ್ಯಾದಾಪುರುಷೋತ್ತಮತನ ತೋರದೆ ಒಪ್ಪಿಕೊಂಡಿದ್ದು ವಿಪರೀತಕ್ಕಿಟ್ಟುಕೊಂಡಿತು.

ಪಟೇಲರ ಈ ಪಾರದರ್ಶಕ ನಡೆನುಡಿ - ಚಿಂತನೆಗಳಿಂದಾದ ಪರಿಣಾಮವೇನು ಗೊತ್ತೇ?

ಲಜ್ಜೆಗೇಡಿ, ಅತಿಸುಖಾಪೇಕ್ಷಿ, ಹೊಣೆಗೇಡಿ, ಈಜೀ-ಗೋ-ಮ್ಯಾನ್ ಮನೋಧರ್ಮ - ಇವೇ ಮುಂತಾಗಿ ಆರೋಪ, ವ್ಯಂಗೋಕ್ತಿ, ಮಾರ್ಮಿಕ ಮಾತು, ಅಪಹಾಸ್ಯ. ಪಟೇಲರ ಸ್ವಚ್ಛಂದ ವಿಚಾರಧಾರೆಗೆ ಸಿಕ್ಕ ಪಾರಿತೋಷಕಗಳು ಇವು.

(ಈ ಅಧ್ಯಾಯದಲ್ಲಿ ಸಮೀಕ್ಷಿಸಿರುವ ಕೆಲವು ವಿಷಯಗಳು ಸೂಕ್ಷ್ಮ ಮತ್ತು ವಿವಾದಪೂರ್ಣವೆನಿಸುವ ಕಾರಣ ಪ್ರಸ್ತಾಪದ ಚರ್ಚೆಯ ಸಂದರ್ಭ ವಿವರಿಸಲಾಗಿದೆ)

## "ವುಮೆನ್ ಅಂಡ್ ವೈನ್" ಒಂದು ಚರ್ಚೆ

ತಾವು ವಿಧಾನಮಂಡಲಕ್ಕೆ ಆಯ್ಕೆಯಾದ ನಿರ್ದಿಷ್ಟ ಕಾರ್ಯಕ್ಷೇತ್ರದಲ್ಲಿ ಹಾಗೂ ಮತದಾರ ಕ್ಷೇತ್ರಗಳಲ್ಲಿ ಜನಪರ ಕಾರ್ಯಗಳು ಅನುಷ್ಠಾನಗೊಳ್ಳದಿದ್ದರೆ ಅಥವಾ ಸರ್ಕಾರ ಈ ದಿಶೆಯಲ್ಲಿ ಕಾರ್ಯಾಸಕ್ತವಾಗದಿದ್ದರೆ ಪ್ರಜಾತಂತ್ರದಲ್ಲಿ ಶಾಸಕರಿಗೆ ತಮ್ಮ ಪ್ರತಿಭಟನೆ ಮತ್ತು ಅಸಮ್ಮತಿಯನ್ನು ವ್ಯಕ್ತಪಡಿಸಲು ಅಪಾರ ಅವಕಾಶವಿದೆ.

ಇಂತಹ ಒಂದು ಸಂದರ್ಭ ಕರ್ನಾಟಕದ 10ನೆಯ ವಿಧಾನ ಸಭೆಯ ನಾಲ್ಕನೆಯ ಅಧಿವೇಶನದಲ್ಲಿ ವರದಿಯಾಯಿತು.

ಶಿವಮೊಗ್ಗ ಜಿಲ್ಲೆಯ ಹೊಸನಗರ ಮತದಾರ ಕ್ಷೇತ್ರದಿಂದ ಆಯ್ಕೆಯಾಗಿದ್ದ ಭಾರತೀಯ ಜನತಾ ಪಕ್ಷದ ಶಾಸಕ ಆಯನೂರು ಮಂಜುನಾಥರು ತಮ್ಮ ಕ್ಷೇತ್ರದಲ್ಲಿನ ಕೆಲವು ಜನಪರ ಕಾರ್ಯಯೋಜನೆಗಳನ್ನು ಜಾರಿಗೆ ತರುವಲ್ಲಿ ಸರ್ಕಾರ ಯಂತ್ರ ತೋರಿದ ಅನಾಸಕ್ತಿ ಮತ್ತು ಭ್ರಷ್ಟಾಚಾರವನ್ನು ಮುಂದಿಟ್ಟು, ಈ ವಿಷಯದಲ್ಲಿ ಸೂಕ್ತ ಭರವಸೆಯನ್ನು ಒತ್ತಾಯಿಸಿ, ತಮ್ಮದೇ ಆದ ರೀತಿಯಲ್ಲಿ ಪ್ರತಿಭಟನೆ ಸೂಚಿಸಿದರು. ಶಾಸಕರಾಗಿ ಮಂಜುನಾಥರು ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದ್ದರು. ಇದೇ ಸಂದರ್ಭದಲ್ಲಿ ಮಾತಿನ ನಡುವೆ ಮುಖ್ಯಮಂತ್ರಿ ಜೆ.ಹೆಚ್. ಪಟೇಲರ ಕಾರ್ಯವಿಧಾನ ಮತ್ತು ಚಿಂತನೆಗಳ ಬಗೆಗೆ ಮಂಜುನಾಥರು ಮಾಡಿದ ನೇರ ಟೀಕೆಗಳು

ಸದನದಲ್ಲಿ ಉಸಿರುಗಟ್ಟಿಸುವ ಸನ್ನಿವೇಶ ಮೂಡಿಸಿತು. ಸದನದಲ್ಲಿ ಹಾಜರಿದ್ದ ಪಟೇಲರು ಮಾತ್ರ ನಿರ್ಲಿಪ್ತರಂತಿದ್ದರು.

ಸದನ ಉತ್ತರ ಕೇಳುವ ಕುತೂಹಲದಲ್ಲಿತ್ತು. ಹಸ್ತಕ್ಷೇಪವಿಲ್ಲದ ಆಡಳಿತ, ಶ್ಲೇಷಮಟ್ಟದ ಮುತ್ಸದ್ಧಿತನ ಮತ್ತು ನಿಷ್ಠುರ ತರ್ಕಕ್ಕೆ ಸದನದ ಮೆಚ್ಚುಗೆ ಪಡೆದವರು ಪಟೇಲರು. ಆಯನೂರು ಮಂಜುನಾಥರ ಸವಾಲು ಅವರಿಗೆ ಅಗ್ನಿಪರೀಕ್ಷೆಯಾಯಿತು.

ಎರಡು ದಿನಗಳ ಕಲಾಪದ ನಂತರ ಪಟೇಲರು 'ಮದಿರೆ ಮತ್ತು ಮಾನಿನಿ' ಕುರಿತಂತೆ ತಮ್ಮ ದೃಷ್ಟಿಕೋನವನ್ನು ಸದನಕ್ಕೆ ವಿವರಿಸಿದರು. ಸಂಸದೀಯ ಇತಿಹಾಸದಲ್ಲಿ ಮುಖ್ಯಮಂತ್ರಿಯೋರ್ವರು ಇಂತಹ ಸೂಕ್ಷ್ಮ ವಿಷಯವನ್ನು ಕುರಿತು ವಿವರಣೆ ನೀಡಿರುವುದು ಬಹುಶಃ ಇದೇ ಮೊದಲು.

ಆಯನೂರು ಮಂಜುನಾಥ್: ಮಾನ್ಯ ಅಧ್ಯಕ್ಷರೇ ಸನ್ಮಾನ್ಯ ಜೆ.ಹೆಚ್. ಪಟೇಲರವರ ನೇತೃತ್ವದ ಜನತಾದಳ ಸರ್ಕಾರದ ಬಗೆಗೆ ಹೇಳಬಯಸುತ್ತೇನೆ.

ಪ್ರಾರಂಭದಲ್ಲಿ ತಮ್ಮ ಸರ್ಕಾರವನ್ನು "ನಮ್ಮದು ಪಾರದರ್ಶಕ ಸರ್ಕಾರವೆಂದು" ಹೇಳಿದಿರಿ. ಅಧಿಕಾರ ಪ್ರಮಾಣವಚನ ತೆಗೆದುಕೊಂಡ ಮೊದಲನೆ ವರ್ಷವಂತೂ ಅದು ಎಷ್ಟು ಪಾರದರ್ಶಕವೆಂದರೆ "ನೀರು ಪಂಚೆ ಉಟ್ಟುಕೊಂಡಷ್ಟು". ನೀರು ಪಂಚೆ ಉಟ್ಟುಕೊಂಡರೆ ಏನು ಕಾಣಬಹುದೋ ಅಂತಹ ಪಾರದರ್ಶಕ ಸರ್ಕಾರ ಎಂಬ ಸ್ಥಿತಿಗೆ ಬಂದಿದೆ.

ಒಂದು ಪಾರದರ್ಶಕ ಸರ್ಕಾರದೊಳಗೆ ಯಾವುದನ್ನು ಮುಚ್ಚಿಡಬೇಕು, ಯಾವುದನ್ನು ತೆರೆದಿಡಬೇಕು ಎಂದು ಗೊತ್ತಿಲ್ಲ. ಮಾನ್ಯ ಜೆ.ಹೆಚ್. ಪಟೇಲರು ಯಾವುದನ್ನು ಮುಚ್ಚಿಡಬೇಕೋ ಅದನ್ನು ತೆರೆದಿಡುತ್ತಾರೆ. ಆದರೆ ಸಾರ್ವಜನಿಕರು ತಿಳಿದುಕೊಳ್ಳುವಂಥ ಹಕ್ಕು ಯಾವುದು ಇದೆ. ಉದಾಹರಣೆಗೆ ಗಣಿ ಕೈಗಾರಿಕೆ ಎಲ್ಲಿ ನಡೆಯುತ್ತಿದೆ; ಎಲ್ಲಿ ಅರಣ್ಯ ನಾಶವಾಗುತ್ತಿದೆ ಎಂಬುದನ್ನು ತಿಳಿದುಕೊಳ್ಳಬೇಕೆಂದರೆ ಅದನ್ನು ಮುಚ್ಚಿಡುತ್ತಿದ್ದೀರಿ. ಇದು ಎಷ್ಟು ಸರಿ?

ಮುಚ್ಚಿಡುವುದು ಯಾವುದು, ಬಿಚ್ಚಿಡುವುದು ಯಾವುದು ಎಂಬುದರ ಬಗ್ಗೆ ಗೊತ್ತಿಲ್ಲದೆ ಇರತಕ್ಕಂಥ ಸರ್ಕಾರ ನಮ್ಮ ರಾಜ್ಯದಲ್ಲಿ ಆಳುತ್ತಿದೆಯಲ್ಲ ಅದನ್ನು ಹೊಗಳುತ್ತಿರತಕ್ಕಂಥ ರಾಜ್ಯಪಾಲರ ಭಾಷಣಕ್ಕೆ ನಾವು ವಂದಿಸಬೇಕೆ? ಕೃತಜ್ಞತೆ ಯಾರಿಗೆ? ಮುಚ್ಚಿಡುವ ವಿಚಾರವನ್ನು ದೃಷ್ಟಿಯಲ್ಲಿಟ್ಟುಕೊಂಡು ನಾನು ಹೇಳುತ್ತಿದ್ದೇನೆ.

ಮಾನ್ಯ ಜೆ.ಹೆಚ್. ಪಟೇಲರು ಒಂದು ಕಡೆ ಮಾತನಾಡುತ್ತಾ ಹೇಳಿದರು "ನನಗೆ ವುಮೆನ್ ಅಂಡ್ ವೈನ್" ಇಷ್ಟ ಎಂದರು. ಇದನ್ನು ಯಾರು ಬೇಡ ಎನ್ನುತ್ತಾರೆ. ನಿಮ್ಮ ಮನೆಯಲ್ಲಿ ನೀವು ಬಾಗಿಲು ಹಾಕಿಕೊಂಡು ಮಾಡಿಕೊಳ್ಳಿ.

ಒಂದು ಅಂಶ ಗಮನಿಸಬೇಕು. ಇದನ್ನು ಹೇಳಿದವರು ಅನುಭವಿ ಹಿರಿಯರು. ಯಜಮಾನರು. ಅವರ ಬಗ್ಗೆ ನನಗೆ ಬಹಳ ಗೌರವವಿದೆ. ಆದರೆ ಅವರ ಬಗ್ಗೆ ಈಗ ಚಿಕ್ಕವನೊಬ್ಬ ಪ್ರಶ್ನೆ ಮಾಡುವ ಸಂದರ್ಭ ಬಂತಲ್ಲವೆ?

"ವುಮೆನ್ ಅಂಡ್ ವೈನ್ ಇದರ ಬಗ್ಗೆ ನನಗೆ ಬಹಳ ಇದು ಇದೆ" ಯಾವುದು ಇದೆ? ಅದನ್ನು ನಾನು ವಿಮರ್ಶಿಸಿ ಹೇಳುವುದಿಲ್ಲ. ಅದು ಏನೇನಿದೆಯೋ ಅದು ಹೊರಗಡೆ ಗೊತ್ತಿದೆ. ಅದನ್ನು ನಾನು ಇಲ್ಲಿ ಹೇಳಿದರೆ ಅಪಶಬ್ದವಾಗುತ್ತದೆ. ಅದು ಸರಿಯಾಗುವುದಿಲ್ಲ. ಇದರೊಂದಿಗೆ ಈ ಹಿರಿಯರು ಹೇಳುವುದೇನೆಂದರೆ "ನನ್ನ ಶ್ರೀಮತಿಯವರು ನನ್ನನ್ನು ಕ್ಷಮಿಸಿದ್ದಾರೆ".

ಎನ್. ರಾಜಣ್ಣ: ಮಾನ್ಯ ಉಪಾಧ್ಯಕ್ಷರೇ, ಅದು ಮಾನ್ಯ ಮುಖ್ಯಮಂತ್ರಿಗಳ ಪರ್ಸನಲ್ ವಿಷಯ. ಪರ್ಸನಲ್ ಆಗಿ ಅವರು ಏನಾದರೂ ಮಾಡಿಕೊಳ್ಳಬಹುದು.

ಆಯನೂರು ಮಂಜುನಾಥ್: ಮಾನ್ಯ ಉಪಾಧ್ಯಕ್ಷರೇ, ನಾನು ಶ್ರೀ ರಾಜಣ್ಣವರು ಹೇಳಿದ್ದನ್ನೇ ಹೇಳುತ್ತಿದ್ದೇನೆ. ಈ ವಿಷಯ ಮುಖ್ಯಮಂತ್ರಿಗಳದ್ದು, ಪೂರ್ತಿ ಪರ್ಸನಲ್ ಎಂದು. ಅವರ ಪರ್ಸನಲ್ ಎಷ್ಟು ಇರಬೇಕೆಂದರೆ ಅವರ ಜೇಬಿನೊಳಗೆ ಇರುವ ಸಣ್ಣ ಪರ್ಸ್ ಇದ್ದ ಹಾಗೆ ಇರಬೇಕು. ಅದು ಇಡೀ ರಾಜ್ಯದ ಉದ್ದಗಲಕ್ಕೂ ಬಿಚ್ಚಿ ತೋರಿಸುವ ಹಾಗೆ ಆಗಬಾರದು.

ನಮ್ಮ ಶ್ರೀಮತಿಯವರು ಕ್ಷಮಿಸಿದ್ದಾರೆಂದು ಅವರು ಹೇಳಿದರು. ಸರಿ, ಅದಕ್ಕೆ ನಮ್ಮ ಭಿನ್ನಾಭಿಪ್ರಾಯವೇನೂ ಇಲ್ಲ. ಶ್ರೀ ಜೆ.ಹೆಚ್. ಪಟೇಲರನ್ನು ಅವರ ಮನೆಯವರು ಕ್ಷಮಿಸಿದ ಮೇಲೆ ಅದನ್ನು ಕೇಳುವುದಕ್ಕೆ ನಾವು ಯಾರು? ನಾವು ಯಾರೂ ಅದನ್ನು ಕೇಳಬಾರದು.

ಆದರೆ ಈ ರಾಜ್ಯದ ಮುಖ್ಯಮಂತ್ರಿಗಳು ಹೇಳಿದ್ದನ್ನು ಈ ರಾಜ್ಯದ ಮತದಾರರು ಕ್ಷಮಿಸಿದ್ದಾರೆಯೇ?

ಶ್ರೀ ಎನ್. ರಾಜಣ್ಣ: ಮಾನ್ಯ ಉಪಾಧ್ಯಕ್ಷರೇ, ಬಿಜೆಪಿಗೆ 28 ಸಾವಿರ ಓಟು 1994ರಲ್ಲಿ ಬಂದಿತ್ತು. ಮೊನ್ನೆ ಕೇವಲ 8 ಸಾವಿರ ಬಂದಿದೆ. ಆ ಓಟು ಅಲ್ಲಿ ಹೋಗಿರುವುದು.

(ಗೊಂದಲ)

ಆಯನೂರು ಮಂಜುನಾಥ್: ಮಾನ್ಯ ಉಪಾಧ್ಯಕ್ಷರೇ, ಮೊನ್ನೆ ಸದನ ಮುಗಿಸಿಕೊಂಡು ಹೋಗಿ ಟಿ.ವಿ. ನೋಡುತ್ತಿದ್ದೆ. ಅದರಲ್ಲಿ 'ಬಬ್ರುವಾಹನ' ಸಿನಿಮಾದ ಹಾಡು ಬರುತ್ತಿತ್ತು. ಅರ್ಜುನ ಠೀವಿಯಲ್ಲಿ ನಿಂತುಕೊಂಡು ನಾನು ಮೂರು ಲೋಕದ ಗಂಡ, ಅಪ್ರತಿಮ ಪರಾಕ್ರಮಿ, ಸೋಲರಿಯದ ವೀರ ಎಂದು ಅವನು ತನ್ನನ್ನು ತಾನೇ ಹೊಗಳಿಕೊಳ್ಳುತ್ತಿರುತ್ತಾನೆ. ಅವನ ಎದುರುಗಡೆ ಬಬ್ರುವಾಹನ ನಿಂತುಕೊಂಡಿರುತ್ತಾನೆ. ಪರಸ್ಪರ ತೆಗಳಿಕೆ ನಡೆಯುತ್ತಿರುತ್ತದೆ.

ನಮ್ಮ ಮಾನ್ಯ ಮುಖ್ಯಮಂತ್ರಿಗಳವರ ಮಾತು ಇದೇ ರೀತಿ ಆಗಿದೆ. ನಾನು ಇಂಥವನು, ನಾನು ಮೂರು ಲೋಕದ ಗಂಡ, ಅಪ್ರತಿಮ ಸಾಹಸಿ, ನಾನು ಅಸಹಾಯ ಶೂರ ನನ್ನನ್ನು ಮೀರಿಸಿದವರು ಈ ರಾಜ್ಯದಲ್ಲಿ ಯಾರು ಇಲ್ಲ" ಎಂದು ಆ ಸಿನಿಮಾದಲ್ಲಿ ಡಾ: ರಾಜಕುಮಾರ್ ಅರ್ಜುನನ ಪಾತ್ರದಲ್ಲಿ ಹೇಳುತ್ತಿರುತ್ತಾರೆ. ಅದಕ್ಕೆ ಬಬ್ರುವಾಹನನು ಸಹ ಉತ್ತರವನ್ನು ಕೊಡುತ್ತಿದ್ದ.

ಆ ಉತ್ತರವನ್ನು ಸ್ವಲ್ಪ ಬದಲಾವಣೆ ಮಾಡಿದರೆ, ಅದರಲ್ಲಿ ಬಭ್ರುವಾಹನ ಹೇಳುತ್ತಾನೆ, ಅದು ಹೇಗೆಂದರೆ 'ಯಾರು ತಿಳಿಯರು ನಿನ್ನ ಭುಜಬಲ ಪರಾಕ್ರಮ' ಎಂದು. ಅದನ್ನು ಸ್ವಲ್ಪ ಬದಲಾವಣೆ ಮಾಡಿ ಹೇಳಿದಾಗ "ಯಾರು ಅರಿಯರು ಪಟೇಲರೇ, ನಿಮ್ಮ ಮೈಮನದ ಪರಾಕ್ರಮ, ಮಾನಿನಿ ಮದಿರೆಯಾಳ್ ಅರ್ಚಿಸಿದ ಇರುಳುಗಳ ಕರ್ಮ, ಎಲ್ಲದಕು ಕಾರಣನು ಆ ಒಳಗಿರುವ ಪರಮಾತ್ಮ". ಆ ಬಭ್ರುವಾಹನ ಹಾಡಿದ ಹಾಡಿಗೆ ಒಂದು ಪದವನ್ನು ಇಲ್ಲಿ ವ್ಯತ್ಯಾಸ ಮಾಡಿಬಿಟ್ಟರೆ ಸಾಕು.

ಸಿನಿಮಾದಲ್ಲಿ ಅಪ್ಪನಿಗೆ ಮಗ ಹೇಳುವ ಪರಿಸ್ಥಿತಿ. ಇವತ್ತು ನನಗೆ ಅದೇ ಪರಿಸ್ಥಿತಿ ಬಂದಿದೆ. ಅವರು ನನ್ನ ತಂದೆ ಸ್ಥಾನದಲ್ಲಿದ್ದಾರೆ, ನಾನು ಅವರ ಮಗನ ಸ್ಥಾನದಲ್ಲಿದ್ದೇನೆ. ಆ ಕುರುಕ್ಷೇತ್ರದೊಳಗೆ ಅವನು ಹಾಗೆ ಹೇಳಿದರೆ, ಈ ರಾಜಕೀಯ ಕುರುಕ್ಷೇತ್ರದೊಳಗೆ ಪಟೇಲರು ಹೀಗೆ ಹೇಳಿದಂತಾಗಿದೆ. ನನಗೆ ಅನ್ನಿಸುತ್ತಿದೆ. ರಾಜ್ಯದ ಜನತೆ ಕ್ಷಮಿಸುವುದಿಲ್ಲ, ಈ ರಾಜ್ಯದ ಪರಂಪರೆಯೊಳಗೆ, ಈ ದೇಶದ ಪರಂಪರೆಯೊಳಗೆ ಅವರಿಗೆ ಒಂದು ಉನ್ನತ ಸ್ಥಾನ ಇದೆ. ಅದನ್ನು ಪಕ್ಕಕ್ಕೆ ಸರಿಸಿ, ನಾಲ್ಕೂವರೆ, ಐದು ಕೋಟಿ ಜನರ ಪ್ರತಿನಿಧಿಯಾಗಿ ಆಳ್ವಿಕೆಯನ್ನು ಮಾಡುವಾಗ 'ನನ್ನ ಸ್ವಂತ ಇಚ್ಛೆ, ನನ್ನ ಖಾಸಗಿ ಜೀವನ' ಎಂದು ಹೇಳಿ ತಾವು ಬೇಕಾದ್ದನ್ನು ಮಾಡುವುದಕ್ಕೆ ಬರುವುದಿಲ್ಲ.

ಎಂ.ಪಿ. ಪ್ರಕಾಶ್ (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು): ಮಾನ್ಯ ಉಪಾಧ್ಯಕ್ಷರೇ, ಮಾನ್ಯ ಮಂಜುನಾಥ್ ಅವರು ಈ ಸಂದರ್ಭದಲ್ಲಿ ಕೆಲವು ವಿಷಯಗಳನ್ನು ಪ್ರಸ್ತಾಪ ಮಾಡಿದ್ದಾರೆ. ಅವರಿಗೆ ಪ್ರಸ್ತಾಪ ಮಾಡಲಿಕ್ಕೆ ಅರ್ಹತೆ ಇದೆ. ಆ ಮಾತು ಬೇರೆ. ಮುಖ್ಯಮಂತ್ರಿ ಜೆ.ಹೆಚ್. ಪಟೇಲರು ಇಡೀ ಭಾರತ ದೇಶದ ಒಟ್ಟು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಆ ರೀತಿ ಪ್ರಸ್ತಾಪ ಮಾಡಿದ್ದಾರೆಯೇ ವಿನಹ ಸಂಕುಚಿತ ವಿಚಾರಗಳಿಗಾಗಿ ಅಲ್ಲ. ಏಕೆಂದರೆ ನೀವು ಪ್ರಸ್ತಾಪ ಮಾಡುವಂಥ ಅಪ್ಪ ಮಗ ಇದ್ದಾರೆ ಅದರಲ್ಲಿ ಒಬ್ಬನು ಬೃಹನ್ನಳೆ ಆಗಿದ್ದಂತಹವನು. ಆದ್ದರಿಂದ ಆತ ಹೇಗೆ ಮೂರು ಮದುವೆ ಮಾಡಿಕೊಂಡ?

ಎಂ. ಮಲ್ಲಿಕಾರ್ಜುನ ಖರ್ಗೆ (ವಿರೋಧ ಪಕ್ಷದ ನಾಯಕರು): ಮಾನ್ಯ ಉಪಾಧ್ಯಕ್ಷರೇ ಫರದರ್ ಎಕ್ಸಪ್ಲಾನೇಷನ್ ಶ್ರೀ ಪ್ರಕಾಶ್ ಅವರು ಕೊಡುತ್ತಿದ್ದಾರೆ. ಇದೆಲ್ಲ ನಮಗೆ ಅರ್ಥವೇ ಆಗಲಿಲ್ಲ. ಶ್ರೀ ಮಂಜುನಾಥ್ ಅವರು ಹೇಳಿದ ಹಾಗೆ 'ಪೂರ್ತಿಯಾಗಿ ಮುಚ್ಚಿಟ್ಟಿದ್ದು ಹೊರಗಡೆ ಬರಲಿಲ್ಲ' ಎಂದು ಹೇಳಿದರು.

ಎಂ.ಪಿ. ಪ್ರಕಾಶ್: ಮಾನ್ಯ ಉಪಾಧ್ಯಕ್ಷರೇ, ಇಲ್ಲಿ ಮುಚ್ಚಿಡುವುದು ಅಲ್ಲ, ಪಟೇಲರು ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಮಾತನಾಡಿದರೇ ವಿನಹ ಇನ್ನು ಬೇರೆ ಯಾವುದೇ ಅರ್ಥದಲ್ಲಿ ಅವರು ಮಾತನಾಡಲಿಲ್ಲ.

(ಗೊಂದಲ)

ಆಯನೂರು ಮಂಜುನಾಥ್: ಮಾನ್ಯ ಉಪಾಧ್ಯಕ್ಷರೇ, ನಾನು ಒಬ್ಬ ಸದಸ್ಯನಾಗಿ ನನ್ನ ಮನಸ್ಸಿಗೆ ಆದಂಥ ನೋವನ್ನು ಬೆರೆಸಿ ಪ್ರಕಟ ಮಾಡಿದ್ದೇನೆ ಅಷ್ಟೆ. ನಾವು ಬಹಳಷ್ಟು ಸಮಯದಲ್ಲಿ ವಿದೇಶಗಳಲ್ಲಿ ಇರುವಂಥ ದೊಡ್ಡ ದೊಡ್ಡವನ್ನು ಉದಾಹರಣೆಯಾಗಿ ತೆಗೆದುಕೊಳ್ಳುತ್ತೇವೆ. ಯಾವ ಸಮಾಜದಲ್ಲಿ ಸ್ವೇಚ್ಛಾಚಾರವನ್ನು ಮನ್ನಣೆ ಮಾಡಿದ್ದಾರೋ ಸೆಕ್ಸಿಗೆ ಬೆಲೆ ಇಲ್ಲವೋ, ಅಂತಹ ಒಂದು ಸಮಾಜದಲ್ಲಿ ಆಳ್ವಿಕೆ ನಡೆಸತಕ್ಕಂಥ ಉನ್ನತ ನಾಯಕನು ಒಬ್ಬ ಹೊರಗಡೆಯ ಹೆಣ್ಣಿನ ಪರಿಚಯ, ಅಸೋಸಿಯೇಷನ್ ಇದ್ದರೆ, ಬೇರೆ ಸಂದರ್ಭದಲ್ಲಿ, ರಾಜೀನಾಮೆ ಕೊಡಬೇಕಾದಂಥ ಪರಿಸ್ಥಿತಿ ಇವತ್ತು ಪ್ರಪಂಚದಲ್ಲಿದೆ. ಆದರೆ ವೈಯಕ್ತಿಕವಾದ ಜೀವನದಲ್ಲಿ ಒಂದು ಶಿಸ್ತನ್ನು, ಸಂಯಮವನ್ನು ಇಟ್ಟುಕೊಂಡಿರುವ ನಮ್ಮ ದೇಶದ ಪರಂಪರೆಯಲ್ಲಿ ಸ್ವೇಚ್ಛಾಚಾರಕ್ಕೆ ಅವಕಾಶವಿರುವುದಿಲ್ಲ.

ಇವತ್ತು ಭಾಷಣ ಮುಗಿಸಿದ ಮೇಲೆ ನಾನು ಕೂರುವುದಿಲ್ಲ. ಧರಣಿ ಕುಳಿತು ಸಭೆಗೆ ಅಡ್ಡಿ ಮಾಡುವುದಿಲ್ಲ. ನನಗೆ ಅನ್ಯಾಯವಾಗಿದೆ. ನನ್ನ ಕ್ಷೇತ್ರಕ್ಕೆ ಅನ್ಯಾಯವಾಗಿದೆ ಹೀಗಾಗಿ ಅದನ್ನು ಸಹಿಸಿಕೊಂಡು ಇರುವುದಕ್ಕೆ ಆಗುವುದಿಲ್ಲ. ಸಂಬಂಧಪಟ್ಟ ಅಧಿಕಾರಿ ಆರೋಗ್ಯ ಇಲಾಖೆಯಲ್ಲಿದ್ದಾರೆ. ಅವರನ್ನು ಕರೆಯಿರಿ. ಅಮಾನತ್ತಿನಲ್ಲಿಡಿ. ಸ್ಥಳ ತನಿಖೆ ಏತಕ್ಕೆ ಆಗಲಿಲ್ಲ? ಅಥವಾ ಅಲ್ಲೇನಾದರೂ ಬೇರೆ ಮಾಡಿದ್ದರೆ, ಅಲ್ಲಿರತಕ್ಕ ತಹಸೀಲ್ದಾರ್ ಮತ್ತು ರೆವಿನ್ಯೂ ಇನ್‌ಸ್ಪೆಕ್ಟರುಗಳನ್ನು ಅಮಾನತ್ತಿನಲ್ಲಿಡಿ. ಇದು ಆಗುವವರೆಗೆ ಇವತ್ತಿನ ಸದನ ಏಳುವವರೆಗೆ ನನಗೆ ನಾನೇ ಶಿಕ್ಷೆಯನ್ನು ವಿಧಿಸಿಕೊಳ್ಳುತ್ತಿದ್ದೇನೆ.

ನನ್ನಂಥ ಒಬ್ಬ ಶಾಸಕನ ಕ್ಷೇತ್ರದಲ್ಲಿ ಇಷ್ಟೊಂದು ಅನ್ಯಾಯ ಆಗಿಹೋಗಿದೆ. ಕಾಲೇಜಿನ ಕಟ್ಟಡ ಕಟ್ಟಲಿಲ್ಲ. ವಿದ್ಯಾರ್ಥಿಗಳು ಬೀದಿ ಪಾಲಾಗಿದ್ದಾರೆ. ಶುಗರ್ ಫ್ಯಾಕ್ಟರಿಯದು ಒಂದಂಶ ಇದೆ. ಶುಗರ್ ಫ್ಯಾಕ್ಟರಿ ಮುಚ್ಚಿ ವರ್ಷಗಟ್ಟಲೆ ಆಯಿತು. ಕಾರ್ಮಿಕರಿಗೆ ಸಂಬಳ ಕೊಟ್ಟಿಲ್ಲ. ಆ ಮಾಲೀಕನನ್ನು ಹಿಡಿದುಕೊಂಡು ಬರುವುದಕ್ಕೆ ಆಗುವುದಿಲ್ಲವೇ? ಕಬ್ಬಿನ ಬೆಳೆಗಾರರಿಗೆ ದುಡ್ಡು ಕೊಡಲಿಲ್ಲ. ಇದೆಲ್ಲಕ್ಕೋಸ್ಕರ ಈ ಸರ್ಕಾರದಲ್ಲಿ ಕೇವಲ ಕಂಠಶೋಷಣೆ ಮಾಡಿಕೊಳ್ಳುವ ಬದಲು ಈ ಕ್ಷೇತ್ರದ ಶಾಸಕನಾಗಿ ಇವೆಲ್ಲವನ್ನು ಇನ್ನೂ ಪರಿಹರಿಸುವುದಕ್ಕೆ ಸಾಧ್ಯವಾಗಲಿಲ್ಲ. ನಾನು ವಿಫಲನಾಗಿದ್ದೇನಲ್ಲ ಎಂಬ ನೋವಿನಿಂದ ಒಂಟಿ ಕಾಲಿನ ಶಿಕ್ಷೆಯನ್ನು ಇವತ್ತಿನ ದಿವಸ ಸದನ ಏಳುವವರೆಗೆ ನನಗೆ ನಾನೇ ವಿಧಿಸಿಕೊಳ್ಳುತ್ತಿದ್ದೇನೆ. ಇಷ್ಟು ಮಾತನಾಡುವುದಕ್ಕೆ ಅವಕಾಶಕೊಟ್ಟ ತಮಗೆ ಧನ್ಯವಾದಗಳು. ನಮಸ್ಕಾರ.

ಅರಗ ಜ್ಞಾನೇಂದ್ರ: ಸ್ವಾಮಿ ಅಧ್ಯಕ್ಷರೇ, ರೆವಿನ್ಯೂ ಮಿನಿಸ್ಟರ್ ಇಲ್ಲೇ ಇದ್ದಾರೆ. ಇದಕ್ಕೆ ಸ್ಪಷ್ಟೀಕರಣವನ್ನು ದಯಮಾಡಿ ಅವರು ಕೊಡಬೇಕು. ಏಕೆಂದರೆ ಇಡೀ ಶಿವಮೊಗ್ಗ ಜಿಲ್ಲೆಯಲ್ಲಿ ಈ ಪರಿಸ್ಥಿತಿ ಇದೆ.

ಉಪಾಧ್ಯಕ್ಷರು: ಮತ್ತೊಬ್ಬರಿಗೆ ಅವಕಾಶ ಸಿಗುವಾಗ ನೀವು ಈ ರೀತಿ ಎದ್ದುನಿಂತು ಮಾತನಾಡುವುದು ಸರಿಯಲ್ಲ. ಮತ್ತೊಬ್ಬರ ಅವಕಾಶವನ್ನು ತೆಗೆದುಕೊಂಡು ಮಾತನಾಡುವುದು ಸರಿಯಲ್ಲ. ಹಾಗೆ ಮಾಡಬಾರದು ತಾವು.

ಆರಗ ಜ್ಞಾನೇಂದ್ರ: ನಮ್ಮ ಜನರ ನೋವನ್ನು ಹೇಳಿಕೊಳ್ಳುವುದು ಎಲ್ಲಿ? ಯಾವ ವೇದಿಕೆಯಿಂದ ಮಾತನಾಡಬೇಕು.

ಉಪಾಧ್ಯಕ್ಷರು: ತಾವು ದಯಮಾಡಿ ಕುಳಿತುಕೊಳ್ಳಿ.

(ಈ ಹಂತದಲ್ಲಿ ಮಾನ್ಯ ಸದಸ್ಯರಾದ ಶ್ರೀ ಆಯನೂರು ಮಂಜುನಾಥ್ ಅವರು ತಮ್ಮ ಸ್ಥಾನದಲ್ಲಿ ನಿರ್ಗಮಿಸಿ ಮಾನ್ಯ ಸಭಾಧ್ಯಕ್ಷ ಪೀಠಕ್ಕೆ ಎದುರಿನ ಏಯ್ಲಿನಲ್ಲಿ (AISLE) ಒಂಟಿ ಕಾಲಿನಲ್ಲಿ ನಿಂತರು)

ಉಪಾಧ್ಯಕ್ಷರು: ಮಂಜುನಾಥ್ ಅವರೇ ತಾವು ದಯಮಾಡಿ ತಮ್ಮ ಸ್ಥಾನದಲ್ಲಿ ಕುಳಿತುಕೊಳ್ಳಿ. ಅವರು ಉತ್ತರ ಹೇಳುತ್ತಾರೆ.

ಕೆ.ಎಸ್. ಈಶ್ವರಪ್ಪ: ಅವರಿಗೆ ಹೇಳುವುದಕ್ಕೆ ಅವಕಾಶ ಕೊಡಿ.

ಉಪಾಧ್ಯಕ್ಷರು: ಇಲ್ಲಿಯವರೆಗೆ ಚೆನ್ನಾಗಿ ಮಾತನಾಡಿದ್ದೀರಿ. ಒಳ್ಳೆಯ ರೀತಿಯಿಂದ ಪ್ರತಿಪಾದನೆ ಮಾಡಿದ್ದೀರಿ. ಅವರು ಉತ್ತರ ಹೇಳುತ್ತಾರೆ. ದಯಮಾಡಿ ಕೂಡಿ.

ರಮೇಶ್ ಸಿ. ಜಿಗಣಗಿ: ಮಾನ್ಯ ಸಭಾಪತಿಯವರೆ, ಹೊಸ ಅಧ್ಯಾಯ ಪ್ರಾರಂಭ ಮಾಡುವುದು ಬೇಡ.

ಉಪಾಧ್ಯಕ್ಷರು: ವೈ. ರಾಮಕೃಷ್ಣ ಅವರೇ, ಇದು ಸರಿಯಲ್ಲ ಎಂದು ತಾವು ದಯಮಾಡಿ ತಮ್ಮ ಸದಸ್ಯರಿಗೆ ಹೇಳಿ. ಅವರ ಸೀಟಿನಲ್ಲಿ ಕೂರುವುದಕ್ಕೆ ಹೇಳಿ.

ವೈ. ರಾಮಕೃಷ್ಣ: ಜಿಲ್ಲಾ ಮಂತ್ರಿಗಳಿದ್ದಾರೆ.

ಜಿ. ಬಸವಣ್ಣಪ್ಪ: ಮಾನ್ಯ ಅಧ್ಯಕ್ಷರೇ.

ಉಪಾಧ್ಯಕ್ಷರು: ಅವರು ಕೂರುವವರೆಗೂ ದಯಮಾಡಿ ಹೇಳಬೇಡಿ. ನಿಮಗೆ ಸಮಾಧಾನ ಆಗದಿದ್ದರೆ ಮತ್ತೆ ಕೇಳಿ. ತಮ್ಮಲ್ಲಿ ವಿನಂತಿ ಮಾಡುತ್ತೇನೆ. ಉತ್ತರದಿಂದ ಸಮಾಧಾನ ಆಗದಿದ್ದರೆ ಮತ್ತೆ ಬೇಕಾದರೆ ನಿಲ್ಲಿ. ಈಗ ದಯಮಾಡಿ ಕೂಡಿ.

ವೈ. ರಾಮಕೃಷ್ಣ: ಸಮಾಧಾನ ಆಗದಿದ್ದರೆ ಮತ್ತೆ ಕರೆಯುತ್ತಾರಂತೆ. ಬನ್ನಿ ಮಂಜುನಾಥ್ ಅವರೇ.

ಉಪಾಧ್ಯಕ್ಷರು: ಆಹಾರ ಮಂತ್ರಿಗಳೇ, ಉತ್ತರ ಹೇಳಿ.

ಜಿ. ಬಸವಣ್ಣಪ್ಪ (ಆಹಾರ ಮತ್ತು ನಾಗರಿಕ ಸರಬರಾಜು ಮಂತ್ರಿಗಳು): ಮಾನ್ಯ ಉಪಾಧ್ಯಕ್ಷರೇ, ಶಾಸಕರಾದ ಶ್ರೀ ಆಯನೂರ್ ಮಂಜುನಾಥ್ ಅವರ ವಾಕ್‌ಚಾತುರ್ಯ ಚೆನ್ನಾಗಿದೆ. ಅವರು ಚೆನ್ನಾಗಿ ಮಾತನಾಡಿದರು.

(ವರದಿ, ವಿಧಾನಸಭೆ ಕಲಾಪ : ಫೆಬ್ರವರಿ 25, 1997)

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಸನ್ಮಾನ್ಯ ಅಧ್ಯಕ್ಷರೇ, ಕಳೆದ ಐದಾರು ದಿನಗಳಿಂದ ಸರ್ಕಾರದ ಕಾರ್ಯಕ್ರಮಗಳನ್ನು ಕುರಿತು ಸದನದಲ್ಲಿ ಚರ್ಚೆ ನಡೆದಿದೆಯಷ್ಟೆ. ಈ ಬಗ್ಗೆ ಒಂದು, ಪಬ್ಲಿಕ್ ಇಂಪ್ರೆಷನ್ ಏನು ಇದೆ, ಎಂದರೆ ಸದನದ ಗಮನ ಸೆಳೆಯುವುದಕ್ಕಾಗಿ ಶ್ರೀ ಆಯನೂರು ಮಂಜುನಾಥ್‌ರವರು ಒಂಟಿ ಕಾಲಿನಲ್ಲಿ ನಿಂತರು. ಪೇಪರ್‌ನಲ್ಲಿ ಇದು ದೊಡ್ಡದಾಗಿ ಬಾಕ್ಸ್ ಒಳಗೆ ಬಂತು. ಇಂದು ಮಾನ್ಯ ಮಂಜುನಾಥ್‌ರವರ ಹೆಸರು ಬಾಕ್ಸ್ ಐಟಂನಲ್ಲಿ ಬಂತು ಎಂದು ನಾಳೆ ಯಾರಾದರೂ ಶಿರಶಾಸನ ಹಾಕಿದರೆ? ಶಿರಶಾಸನ ಹಾಕುವುದಿಲ್ಲ ಎಂದು ಹೇಗೆ ಹೇಳುತ್ತೀರಿ?

ಮಾನ್ಯ ಯಡಿಯೂರಪ್ಪನವರೇ, ಸದನದಲ್ಲಿ ಏನು ಚರ್ಚೆಯಾಯಿತು, ಯಾವ ಕಾನೂನು ಏನು ಹೇಳುತ್ತದೆ? ನಿನ್ನೆಯ ದಿವಸ ನಮ್ಮ ಆಯನೂರು ಮಂಜುನಾಥ್‌ರವರು ಒಂಟಿ ಕಾಲಿನಲ್ಲಿ ನಿಂತುಕೊಂಡರು. ಹಿಂದೆ ಒಂಟಿ ಕಾಲಿನಲ್ಲಿ ನಿಲ್ಲುತ್ತಿದ್ದರು ಎಂದರೆ ತಪಸ್ಸು ಮಾಡುವ ಸಲುವಾಗಿ ಬಹಳ ದೊಡ್ಡ ಋಷಿಗಳು ಹಾಗ ಮಾಡುತ್ತಿದ್ದರು.

ನಾನು ಯಾವುದೋ ಟಿ.ವಿ.ಯಲ್ಲಿ ಹೇಳಿದೆ ಎಂಬ ವಿಷಯವನ್ನು ಗಮನದಲ್ಲಿಟ್ಟುಕೊಂಡು ಅಂದರೆ ಮದಿರೆ ಮತ್ತು ಮಾನಿನಿಯ ಬಗ್ಗೆ ಮುಖ್ಯಮಂತ್ರಿಗಳು ಈ ತರಹ ಹೇಳಬಹುದೇ ಎಂದರು.

ನಾನು ಹೇಳಿರುವುದನ್ನು ಸದನದ ಸದಸ್ಯರು ದಯಮಾಡಿ ಒಂದು ಸಾರಿ ಟಿ.ವಿ. ಯನ್ನು ನೋಡಿಬಿಡಿ. ಆತ ನನ್ನನ್ನು ಏನು ಕೇಳಿದ? ಒಂದು ಕಡೆ ಒಂದು ಸಾರಿ ಎಲ್ಲಾದರು I have to bury this hatchet ಎಲ್ಲರೂ ಹಗಲೆಲ್ಲ ಅದನ್ನೇ ಮಾತನಾಡುವುದು. ಹೇಗೆಂದರೆ, "ಒಬ್ಬ ಗುರುಗಳು ತಮ್ಮ ಜೊತೆಗೆ ಒಬ್ಬ ಶಿಷ್ಯನನ್ನು ಕರೆದುಕೊಂಡು ಹೋಗುತ್ತಿದ್ದರು. ಅವರ ಶಿಷ್ಯ ಒಬ್ಬ ಯುವಕ. ಒಂದು ಹೊಳೆ ಅಡ್ಡ ಬಂತು. ಇನ್ನೇನು ಆ ಹೊಳೆಯನ್ನು ದಾಟಬೇಕು ಎಂದಾಗ ಒಬ್ಬ ಯುವತಿ ಎದುರಾಗಿ ಹೊಳೆಯನ್ನು ದಾಟಿಸಬೇಕಲ್ಲ ಗುರುಗಳೇ ಎಂದು ಕೇಳಿಕೊಂಡಳು. ಈ ಯುವಕ ಆ ಯುವತಿಯನ್ನು ಹೆಗಲಮೇಲೆ ಕುಳ್ಳರಿಸಿಕೊಂಡು ಹೊಳೆ ದಾಟಿಸಿ ಆ ಕಡೆ ಇಳಿಸಿದ.

ಗುರು ಕೇಳಿದ, ನೀನು ಬ್ರಹ್ಮಚಾರಿ ಅಲ್ವೇನಪ್ಪ. ಹೌದು ಎಂದ ಶಿಷ್ಯ. ನಂತರ ಐದು ಮೈಲಿ ನಡೆದವರು, ಮತ್ತೆ ಗುರು ಪ್ರಶ್ನಿಸಿದ. ನೀನು ಆಕೆಯನ್ನು ಸ್ಪರ್ಶ ಮಾಡಿದೆ ಅಲ್ಲೇನಪ್ಪಾ, ಹೌದು ಎಂದ ಶಿಷ್ಯ.

ಇನ್ನೂ ಕೊಂಚ ಸಮಯ ಇನ್ನೂ ಮೌನವಾಗಿ ನಡೆದರು. ನಿನ್ನ ಹೆಗಲಮೇಲೆ ಕುಳಿತಾಗ ಅವಳ ದೇಹ ಮೆತ್ತಗಿತ್ತೋ ಹೇಗಿತ್ತು ಎಂದ ಗುರು. ಇಲ್ಲ ಬುದ್ಧಿ ನಾನು ನೋಡುವುದಕ್ಕೆ ಹೋಗಲಿಲ್ಲ ಎಂದ ಶಿಷ್ಯ.

ಇನ್ನೂ ಸ್ವಲ್ಪ ದೂರ ನಡೆದ ನಂತರ ಮತ್ತೆ ಆಕೆಯ ಕಾಲು ನಿನ್ನ ಎದೆಗೆ ತಾಗುತ್ತಿತ್ತಿಲ್ಲ ನಿನಗೇನೆನಿಸಿತು ಎಂದ ಗುರು. ಹೀಗೆ ಗುರು ಮೇಲಿಂದ ಮೇಲೆ ಶಿಷ್ಯನನ್ನು ಕೇಳುತ್ತಲೇ

ಕೇಳುತ್ತಲೇ ಇದ್ದ. ಸುಮಾರು 5-6 ಗಂಟೆ ಕಳೆಯಿತು. ತಡೆಯಲಾರದೆ ಆ ಶಿಷ್ಯ ಹೇಳಿದ, ಏನು ಗುರುನಪ್ಪಾ ನೀನು? ನಾನು ಆಕೆಯನ್ನು ಐದು ನಿಮಿಷ ಹೆಗಲ ಮೇಲೆ ಕುಳ್ಳರಿಸಿಕೊಂಡಿದ್ದೆ. ನೀವು ಐದು ಗಂಟೆ ಆಕೆಯನ್ನು ತಲೆಯ ಮೇಲೆ ಕುಳ್ಳರಿಸಿ ಕೊಂಡಿದ್ದೀಯಾ, ನಿನಗೆ ಬುದ್ಧಿ ಇದೆಯಾ; ಆಕೆ ನಿನ್ನನ್ನು ಗಂಟೆ ಗಂಟೆಗೆ ಕಾಡುತ್ತಿದ್ದಾಳೆ ಎಂದು ಛೀಮಾರಿ ಹಾಕಿದ.

ಹಾಗೆ ನಾನು ಟಿ.ವಿ. ಯಲ್ಲಿ ಐದು ನಿಮಿಷ ಹೇಳಿದ್ದನ್ನು ಇವರೆಲ್ಲ ಮಹಾನುಭಾವರು, ಏನು ವ್ಯಾಖ್ಯಾನ? ಏನು ಕಥೆ? ಸುಮಾರು ತಿಂಗಳಗಟ್ಟಲೆ ಮಾಡುತ್ತಲೇ ಇದ್ದಾರೆ. ತಮಾಷೆ ಏನೆಂದರೆ...

ಎಂ. ಮಲ್ಲಿಕಾರ್ಜುನ ಖರ್ಗೆ: ಎಲ್ಲಾ ಮಹತ್ವದ ಕೆಲಸ ಐದು ನಿಮಿಷದಲ್ಲೆ ನಡೆಯುತ್ತದೆ.

ಹೆಚ್.ಎನ್. ನಂಜೇಗೌಡ: ಇನ್ನೊಂದು ವಿಚಾರವೇನೆಂದರೆ, ನಾನು ಎಲ್ಲರನ್ನೂ ಕೇಳಿಕೊಂಡು ಬಂದಿದ್ದೇನೆ, ನೀವು ಮಾಡಿದ್ದು ತಪ್ಪೆಂದು ಇದುವರೆವಿಗೂ ಯಾರೂ ಹೇಳಿಲ್ಲ, ಮಾತು ಹೇಳಬಾರದಿತ್ತು ಎನ್ನುತ್ತಾರೆಯೇ ಹೊರತು, ತಪ್ಪೆಂದು ಹೇಳಿಲ್ಲ.

ವಾಟಾಳ್ ನಾಗರಾಜ್: ತಪ್ಪು ಎಂದು ಹೇಳುತ್ತಿರುವವರು ಯಾರು ಗೊತ್ತೇನು ಅದನ್ನು ಮಾಡಿರುವವರೇ.

ಜೆ.ಹೆಚ್. ಪಟೇಲ್: ಎಲ್ಲಾದರೂ ಒಂದು ಕಡೆ ನಮಗೆ ಮುಚ್ಚುಮರೆ ಎನ್ನುವುದು ಬೇಕು. ಇದನ್ನು ನಾನೂ ಒಪ್ಪುತ್ತೇನೆ. ಆದರೂ ವಿಚಾರವಿರಬೇಕು, ಮುಕ್ತತೆ ಇರಬೇಕು. ಅದಕ್ಕೆ ದಾರ್ಶನಿಕ - ಚಿಂತಕ ಬರ್ಟನ್ಡ್‌ರಸಲ್‌ರವರ ಆ ಒಂದು ಪುಸ್ತಕವನ್ನು ತರುವುದಕ್ಕೆ ಹೇಳಿದ್ದೆ. ಬೇರೆ ಯಾವುದೋ ಪುಸ್ತಕವನ್ನು ತೆಗೆದುಕೊಂಡು ಬಂದಿದ್ದಾರೆ. ಹೋಗಲಿ ಬಿಡಿ.

ವಾಟಾಳ್ ನಾಗರಾಜ್‌ರವರೇ, ಬರ್ಟನ್ಡ್‌ರಸೆಲ್ ತೊಂಬತ್ತನಾಲ್ಕನೇ ವಯಸ್ಸಿನಲ್ಲಿ ಎಂಭತ್ತೊಂಬತ್ತು ವಯಸ್ಸಿನ ಮಹಿಳೆಯನ್ನು ಮದುವೆಯಾಗುತ್ತಾನೆ. ಏಕೆಂದರೆ, ಒಂದು ಹೆಣ್ಣು ಗಂಡಿನ ಸಂಬಂಧ ಕೇವಲ ಕಾಮವಲ್ಲ, ಕೇವಲ ಲೈಂಗಿಕತೆಯಲ್ಲ ಅಥವಾ ಸೌಂದರ್ಯದ ಉಪಾಸನೆಯಲ್ಲ. ಕೇವಲ ಲಂಟಪಟತನವಲ್ಲ. ಕೀಳು ಮಟ್ಟದ್ದೂ ಅಲ್ಲ. ಈ ಸಂಬಂಧ ಬಹಳ ಎತ್ತರದ ಮಟ್ಟಕ್ಕೂ ಹೋಗಬಹುದು.

ಈ ಹಂತದಲ್ಲಿ ಬರ್ಟನ್ಡ್‌ರಸೆಲ್ ಏನು ಹೇಳುತ್ತಾನೆ, ಎಂದರೆ ನನಗೆ ಇನ್ನೇನು ಇಲ್ಲಪ್ಪ I am against boring life. Alone I am bored. So I want to share my time with another heart. ಇದು ಹೆಣ್ಣು ಗಂಡಿನ ಸಂಬಂಧದ ಬಹಳ ಸೂಕ್ಷ್ಮ ವಿಷಯ. ಅಂತೆಯೇ ಈತರನಾದ ವಿಚಾರಗಳಲ್ಲೂ ಸೂಕ್ಷ್ಮತೆಗಳಿರಬೇಕು. ಸಾಧಾರಣ ಮಾತುಗಳನ್ನು ನಾನು ರಾಮಕೃಷ್ಣ ಪರಮಹಂಸರು, ವಿವೇಕಾನಂದರಂತೆ ನನಗೆ ಹೀಗೇಕೆ ಮಾತನಾಡಿದೆ ಎಂದು ಅರ್ಥ ಗೊತ್ತಾಗುತ್ತದೆ. ಅದಕ್ಕೆ ಮನಸ್ಸು ಶುದ್ಧಿ ಇರಬೇಕು. ನಾವು ಇನ್ನೊಬ್ಬರಿಗೆ ತೊಂದರೆ ಮಾಡಬಾರದು. ಹಿಂಸೆ ಮಾಡಬಾರದು. ನಾವು ನಿಚ್ಚಳ ಮನಸ್ಸಿನಿಂದ ಕೂಡಿದ್ದಲ್ಲಿ ಮಾತ್ರ

ಇಂತಹ ಮಾತುಗಳು ತಿಳಿಯುತ್ತವೆ. ಅದನ್ನು ಮಹಾತ್ಮಗಾಂಧೀಜಿಯವರು ಬಹಳ ಉತ್ತಮವಾದ ಭಾಷೆಯಲ್ಲಿ ಹೇಳಿದ್ದಾರೆ.

"I do not seek redemption from the consequences of my sin. I seek to be redeemed from the sin itself or rather from the very thought of sin"

ನನಗೆ ಸಿನ್ ಕಾನ್ಸಸ್ ಗೊತ್ತಿಲ್ಲದಿದ್ದರೂ. Thought of sin is haunting so many people from so many months. ನನ್ನನ್ನು ಒಬ್ಬಾತ ಪ್ರಶ್ನಿಸಿದ.

Sir, coming from a socialist background, you are reputed to be a lover of art, literature and you are great friend of many men of letters like Gopalkrishna Adiga, U.R. Ananta Murthy and others. We have also heard that you are very close to wine and women.

Then I said. Yes. I like good things in my life, but I am not a drunkard. I am not a womaniser, but I am not Mahatma Gandhi also. I may be like Nehru. That is what I have said. ಹೀಗಿದೆ ನನ್ನ ಮಾತು ಮತ್ತು ಅದರ ಅರ್ಥ. ಅದಕ್ಕೆ ಕಥೆಯನ್ನು ಕಟ್ಟಿಕೊಂಡು ಹೇಳುತ್ತಾರೆ, ಹೇಳುತ್ತಾರೆ, ಎಲ್ಲರೂ ಉಪದೇಶ ಮಾಡುವವರೇ, ತಿನ್ನುವುದು ಬದನೆಕಾಯಿ. ಅದಕ್ಕೆ ಮಾನ್ಯ ಉಪಾಧ್ಯಕ್ಷರೇ, ಅವರವರ ಹಿತದೃಷ್ಟಿಯಿಂದಲೇ ಹೇಳುತ್ತಿದ್ದೇನೆ. ದಯವಿಟ್ಟು ಇದನ್ನು ಯಾರೂ ಪ್ರಸ್ತಾಪ ಮಾಡುವುದು ಬೇಡ. ಇಲ್ಲದಿದ್ದರೆ ಯಾರ್‍ಯಾರು ಏನೇನು ಮಾಡಿದ್ದಾರೆಂದು ವಿಚಾರಣೆ ಮಾಡಿಸುತ್ತೇನೆ.

ವಾಟಾಳ್ ನಾಗರಾಜ್: ಒಂದು ಆಯೋಗ ರಚನೆ ಮಾಡಿ, ಅದಕ್ಕೆ ನಾನೇ ಅಧ್ಯಕ್ಷನಾಗುತ್ತೇನೆ. ಈಗ ನನ್ನ ಅಧ್ಯಕ್ಷತೆಯಲ್ಲಿ ಒಂದು ಆಯೋಗವನ್ನು ರಚನೆ ಮಾಡುವುದಾದರೆ ಎಲ್ಲರದ್ದನ್ನೂ ಬಯಲುಮಾಡಿಬಿಡೋಣ.

(ವಿಧಾನಸಭೆ ಕಲಾಪ, ಫೆಬ್ರವರಿ 27, 1997)

## ನೋಡುವ ಕಣ್ಣು 'ಎಕ್ಸರೇ' ಆಗಬಾರದು

ಎಕ್ಸರೇ ತೆಗೆಯುವ ಮೆಷಿನ್ ಇರತ್ತಲ್ಲಾ ಆ ಯಂತ್ರದ ಮುಂದೆ ಒಬ್ಬ ಸುಂದರಿಯನ್ನು ನಿಲ್ಲಿಸಿದರೆ ಫೋಟೋ ಬರುವುದು ಬರೇ ಎಲುಬು. ಅದೇ ರೀತಿ ದೊಡ್ಡ ಪೈಲ್‌ವಾನ್‌ನನ್ನು ನಿಲ್ಲಿಸಿದರೂ ಅದೇ ಎಲುಬೇ. ಹೀಗೆ ಎಕ್ಸರೇ ಕಣ್ಣು ಬರೇ ಎಲುಬುಗಳನ್ನು ಮಾತ್ರ ತೋರಿಸುತ್ತದೆ. ಹೀಗಾಗಿ ಸೌಂದರ್ಯವನ್ನು ನೋಡಲು ನಿಮಗೆ ಆಗುವುದಿಲ್ಲ.

ನೀವುಗಳು ಸೌಂದರ್ಯವನ್ನು ನೋಡುವುದನ್ನು ಕಲಿತುಕೊಳ್ಳಿ. ದೋಷವನ್ನು ಹೇಳಿ. ಬರೇ ಎಕ್ಸರೇ ಕಣ್ಣುಗಳು ನಿಮ್ಮದ್ದಾದರೆ ಜೀವನವೇ ಬಲು ಕಷ್ಟವಾಗುತ್ತೆ. ನಿಮ್ಮಿಂದ ಯಾರನ್ನೂ ನೋಡುವುದಕ್ಕೆ ಆಗುವುದಿಲ್ಲ.

ಆದರೆ ಎಕ್ಸರೇ ಕೂಡ ಬೇಕು, ಬೇಡ ಎಂದು ನಾನು ಹೇಳುವುದಿಲ್ಲ. ಎಲ್ಲೋ ಆಳವಾದ ರೋಗಗಳು ಇದ್ದರೆ ಅದನ್ನು ಪತ್ತೆ ಹಚ್ಚಲು ಸ್ಕ್ಯಾನಿಂಗ್, ಎಕ್ಸರೇ ಮುಂತಾಗಿ ಎಲ್ಲವೂ ಬೇಕು. ಆದರೆ ಎಲ್ಲಾ ಸಮಯದಲ್ಲಿ ಅದನ್ನು ಉಪಯೋಗಿಸಿದರೆ ನಿಮ್ಮ ಜೀವನದ ರಸವೇ ಹೊರಟುಹೋಗುತ್ತದೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, 10ನೇ ನವೆಂಬರ್, 1998)

## ಮಾಕ್ದಲಿನ್ ಮತ್ತು ಕರುಣಾಮಯಿ ಕ್ರಿಸ್ತ

ಮಾನ್ಯ ಅಧ್ಯಕ್ಷರೇ ಗಂಡು ಹೆಣ್ಣಿನ ಸಂಬಂಧದ ಬಗೆಗೆ ಯಾವುದೇ ಸಂಸದೀಯ ಸದನದಲ್ಲಿ ಸಾಮಾನ್ಯ ಸಂದರ್ಭಗಳಲ್ಲಿ ಚರ್ಚಿಸಲು ಬರುವುದಿಲ್ಲ.

ಇಂತಹ ಸಂಬಂಧದಿಂದ ರಾಷ್ಟ್ರದ ಹಿತಕ್ಕೆ, ರಾಷ್ಟ್ರದ ರಕ್ಷಣೆಗೆ ಧಕ್ಕೆ ಬರುತ್ತದೆ ಎಂಬ ಸಂಶಯ ಬಂದಾಗ ಮಾತ್ರ ಅಂತಹ ವಿಷಯ ಚರ್ಚೆಗೆ ಬರಬಲ್ಲದು.

ಹೆಣ್ಣಿನ ಬಗೆಗೆ ಲಘುವಾಗಿ ಮಾತನಾಡುವುದು ಮಹಾಪರಾಧ. ಇದಕ್ಕೆ ನಿದರ್ಶನವಾಗಿ ನನಗೆ ಮಾಕ್ದಲಿನ್‌ಳ ಕಥೆ ಜ್ಞಾಪಕಕ್ಕೆ ಬರುತ್ತದೆ.

ಇದು ದಯಾಮಯಿ ಏಸುಕ್ರಿಸ್ತನ ಕಾಲದ ಕಥೆ. ಮ್ಯಾಕ್ದಲಿನ್ ಎಂಬ ಹೆಣ್ಣು ಮಗಳೊಬ್ಬಳನ್ನು ಅಂದಿನ ಸಮಾಜ ಕೆಟ್ಟವಳು ಎಂದು ನಿರ್ಧರಿಸುತ್ತದೆ. ಕೆಟ್ಟವರನ್ನು ಕಲ್ಲಿನಿಂದ ಹೊಡೆದುಕೊಲ್ಲುವುದು ಅಂದಿನ ಪದ್ಧತಿ. ಅನೈತಿಕ ಕಾರ್ಯದಲ್ಲಿ ತೊಡಗಿದ ಅಪರಾಧಿನಿ ಎನ್ನುವ ಕಾರಣಕ್ಕೆ ಮ್ಯಾಕ್ದಲಿನ್‌ಗೆ ಶಿಕ್ಷೆ ಕೊಡಲು ಸಮಾಜ ಸಿದ್ಧವಾಗುತ್ತದೆ.

ಇವಳನ್ನು ಅನೈತಿಕ ವ್ಯವಹಾರಕ್ಕೆ ತೊಡಗಿಸುವಲ್ಲಿ ತನ್ನದೂ ಪಾತ್ರವಿದೆ ಎಂಬುದನ್ನು ಅವಳಷ್ಟೇ ಪಾಪಿ ಸಮಾಜ ಮರೆತುಬಿಡುತ್ತದೆ. ತಾವು ಪರಿಶುದ್ಧರ ಮೊಮ್ಮಕ್ಕಳು ಎನ್ನುವಂತಹ ಧೂರ್ತತನ ಇವರಲ್ಲಿರುತ್ತದೆ.

ಆಗ ಕರುಣಾಮಯಿ ಜೀಸಸ್ ಕ್ರೈಸ್ಟ್ ಜನಕ್ಕೆ ಹೇಳುತ್ತಾನೆ. ಆ ಹೆಣ್ಣು ಮಗಳಿಗೆ ಹಿಂಸೆ ಕೊಡಬೇಡಿ. ಮೊದಲು ನೀವು ನಿಮ್ಮ ಜೀವನದಲ್ಲಿ ಏನೂ ಪಾಪ ಮಾಡಿಲ್ಲವೇ ಎಂಬುದನ್ನು ಕುರಿತು ಕ್ಷಣ ಕಾಲಯೋಚಿಸಿ. ಒಂದು ವೇಳೆ ನೀವು ಯಾವ ಪಾಪವನ್ನೂ ಮಾಡದ ವ್ಯಕ್ತಿಯೇ ಆಗಿದ್ದಲ್ಲಿ ಅಂತಹವರು ಆಕೆಯನ್ನು ಶಿಕ್ಷಿಸಿ ಎನ್ನುತ್ತಾನೆ ಆ ಮಹಾನುಭಾವ.

ನನಗೂ, ನಿಮಗೂ ಈ ನೀತಿ ಅನ್ವಯಿಸುತ್ತದೆ. ನಾವು ಎಷ್ಟು ಸತ್ಯಸಂಧರು ಎನ್ನುವ ಆತ್ಮಾವಲೋಕನ ಮೊದಲು ನಮಗೆ ಇರಬೇಕು. ಆ ನಂತರ ಪ್ರಪಂಚವನ್ನು ಆಳೆಯೋಣ.

(ಜೆ.ಹೆಚ್. ಪಟೇಲ್ (ಕೈಗಾರಿಕೆ ಖಾತೆ ಮಂತ್ರಿ) ವಿಧಾನಸಭೆ : ಏಪ್ರಿಲ್ 9, 1985)

## ಘನತೆಗೆ ಕಡಿಮೆಯಾದ ಮಾತು

ಸಂದರ್ಭ: ಸಾರ್ವಜನಿಕ ಸಭೆಯೊಂದರಲ್ಲಿ ಮಾತನಾಡುವಾಗ, ಮಾತಿನ ರಭಸದಲ್ಲಿ ಪಟೇಲರು ಶಾಸಕ ಕೆ. ಮಾದೇಗೌಡರ (ಬನ್ನೂರು) ಬಗೆಗೆ ಟೀಕಿಸಿದ್ದರು. ಕನ್ನಡ ದಿನಪತ್ರಿಕೆ ಈ ವರದಿಯನ್ನು ಪ್ರಕಟಿಸಿತ್ತು. ರಾಜ್ಯಪಾಲರ ಭಾಷಣದ ಮೇಲಿನ ಚರ್ಚೆ ಸಂದರ್ಭದಲ್ಲಿ ಸದನದಲ್ಲಿ ಶ್ರೀ ಮಾದೇಗೌಡರು ಇದರ ಪ್ರಸ್ತಾಪ ಮಾಡಿದರು. ಪಟೇಲರ ಬಗೆಗೆ ತೀವ್ರ ಅಸಮಾಧಾನ ವ್ಯಕ್ತಪಡಿಸಿದರು. ಈ ಟೀಕೆಯನ್ನು ತಾವು ವೈಯಕ್ತಿಕವಾಗಿ ಹೇಳಲಿಲ್ಲ, ರಾಜಕೀಯ ಸಿದ್ಧಾಂತಕ್ಕೆ ಅಂಟಿಕೊಂಡ ಮಾತಿನ ಒಂದು ಹಂತದಲ್ಲಿ ತಾವು ಈ ರೀತಿ ಹೇಳಿದುದಾಗಿ ಪಟೇಲರು ಸಮಜಾಯಿಷಿ ನೀಡಿದರೂ ಮಾದೇಗೌಡರಿಗೆ ಸಮಾಧಾನವಾದಂತೆ ಕಾಣಲಿಲ್ಲ.

ಸೈದ್ಧಾಂತಿಕ ವಿಶ್ಲೇಷಣೆಯ ತೀವ್ರತೆ ಹೆಚ್ಚಿದಾಗ ಪಟೇಲರು ಪ್ರಾಸಂಗಿಕವಾಗಿ ಯಾವುದಾದರೊಂದು ಪಕ್ಷವನ್ನು ಆ ಪಕ್ಷದ ನಾಯಕ, ನಾಯಿಕೆ, ಅಧ್ಯಕ್ಷ ಇಲ್ಲವೇ ಶಾಸಕನನ್ನು ಹೆಸರಿಸುವ ಮೂಲಕ ವಿಮರ್ಶೆ ಮಾಡುತ್ತಿದುದ್ದು ಅವರ ಶೈಲಿ. ಇದರಿಂದ ಪಟೇಲರಿಗೆ ಲಾಭವೇನೂ ಆಗುತ್ತಿರಲಿಲ್ಲ; ಕೆಟ್ಟ ಹೆಸರು ಮಾತ್ರ ಖಚಿತವಾಗುತ್ತಿತ್ತು.

**ಕೆ. ಮಾದೇಗೌಡ:** ಮಾನ್ಯ ಸಭಾಧ್ಯಕ್ಷರೇ, ಮೊನ್ನೆ ಪ್ರಜಾವಾಣಿ ಪತ್ರಿಕೆಯಲ್ಲಿನ ವರದಿಯೊಂದು ನನ್ನ ಗಮನಕ್ಕೆ ಬಂತು. ನುರಿತ ರಾಜಕಾರಣಿಗಳೂ, ತಮ್ಮದೇ ಆದ ರಾಜಕೀಯ ಘನತೆ - ಗೌರವಗಳಿಗೆ ಹೆಸರಾದವರೂ ಆದ ಶ್ರೀ ಜೆ.ಹೆಚ್. ಪಟೇಲರು ನನ್ನ ಬಗ್ಗೆ ಬಹು ಹಗುರವಾಗಿ ಮಾತನಾಡಿದುದಾಗಿ ವರದಿ ತಿಳಿಸಿದೆ. ಈ ರೀತಿ ಅವರು ಹೇಳಬಾರದಿತ್ತು. ಅವರ ಧಾಟಿ ನನಗೆ ಹಿಡಿಸಲಿಲ್ಲ. ರಾಜಕೀಯ ಪ್ರಜ್ಞೆ, ಸಿದ್ಧಾಂತ ಇಲ್ಲವೇ ನಿಲುವು ಪ್ರತಿಯೊಬ್ಬ ರಾಜಕಾರಣಿಯ ಸ್ವಭಾವ ಜನ್ಮ ಹಕ್ಕು. ಮತ್ತೊಬ್ಬ ರಾಜಕಾರಣಿಯನ್ನು ಸಿಲುಕಿಸಿ ಮಾತನಾಡತಕ್ಕಂತಹದು ಬಹುಶಃ ಅವರಿಗೆ ಸಲ್ಲತಕ್ಕದಲ್ಲ.

**ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ):** ನಾನು ಯಾರ ಮೇಲೂ ಪ್ರತಿಬಂಧಕ ಹೇರುವುದಾಗಲೀ, ಉಪದೇಶ ಮಾಡುವುದಾಗಲೀ ಮಾಡಿಲ್ಲ. ಅವರು ತಪ್ಪು ಗ್ರಹಿಸಿದ್ದಾರೆ. ಇಚ್ಛಾನುಸಾರ ಪ್ರತಿವ್ಯಕ್ತಿ ರಾಜಕಾರಣ ಮಾಡುವುದು ಸರಿಯೇ. ಹಾಗೆಯೇ ನನಗೆ ಅನ್ನಿಸಿದುದನ್ನು ನಾನು ಅಂದಿದ್ದೇನೆ. ದುರಾದೃಷ್ಟ. ನಾನೇನು ಮಾಡಲಿ ಅವರ ಪಾರ್ಟಿಯನ್ನು ಶ್ರೀಮತಿ ಇಂದಿರಾಗಾಂಧಿ ಉಳಿಸಿದರು. ಹೀಗಾಗಿ ಶ್ರೀಮತಿ ಇಂದಿರಾಗಾಂಧಿಯವರ ಬಗೆಗೆ ಹಿಂದಿನ ಕಲ್ಪನೆ ಬದಲಾವಣೆ ಆಗಿರಬೇಕು. ಡೆಮೋಕ್ರಾಟಿಕ್ ಸ್ಪಿರಿಟ್ ಹೋಗಿಬಿಟ್ಟಿದೆ. ಇದರಲ್ಲಿ ನನ್ನ ತಪ್ಪೇನೂ ಇಲ್ಲ.

**ಮಾದೇಗೌಡ:** ಈ ಪ್ರಕರಣದಲ್ಲಿ ಶ್ರೀ ದೇವರಾಜ ಅರಸು ಉತ್ತರಿಸಿದ್ದರೆ ಸರಿ ಇರುತ್ತಿತ್ತು. ಆದರೆ ಅವರ ಹೊಗಳುಭಟ್ಟರಂತೆ ಪಟೇಲರು ವಕೀಲಿ ಮಾಡಿದರು ಎಂಬುದೇ ನನ್ನ ವ್ಯಥೆ.. ಬಿಡಿ. ಇದು ಸಮಯವಲ್ಲ. ಮುಂದೆ ಎಂದಾದರೂ ಈ ಬಗ್ಗೆ ಚರ್ಚಿಸೋಣ.

(ವಿಧಾನಸಭೆ ಕಲಾಪ : ಮಾರ್ಚಿ 8, 1980)

## ಚುಚ್ಚುಮಾತು ಸಾಕಪ್ಪಾ : ನಾಗರತ್ನಮ್ಮ

**ಜೆ.ಹೆಚ್. ಪಟೇಲ್:** ಮಾನ್ಯ ಸದಸ್ಯರ ಮಾತನ್ನು ಕೇಳಿದರೆ ನನಗೆ ಒಬ್ಬ ಕವಿಯ ಜ್ಞಾಪಕ ಬರುತ್ತದೆ. ಆತ ಹೇಳುತ್ತಾನೆ, ತನಗೆ ಅತ್ಯಂತ ಘೋರ ಶಿಕ್ಷೆಯಾವುದೆಂದರೆ "ಅರಸಿಕಂಗೆ ಕಾವ್ಯಂ ಪೇಳ್ವುದು" ಎಂದು. ಇಂಥವರಿಗೆ ಬೋಧನೆ ಹೇಳುವ ಶಿಕ್ಷೆ ಏಕೆ? ಇವರಿಗೆ ಅರ್ಥಶಾಸ್ತ್ರ ಗೊತ್ತಿಲ್ಲ, ಕಾನೂನು ಗೊತ್ತಿಲ್ಲ.

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ:** ಕೆಲವಾರು ವರ್ಷಗಳಿಂದಲೂ ನೋಡುತ್ತಿದ್ದೇನೆ. ಈ ಜೆ.ಹೆಚ್. ಪಟೇಲರು ಇನ್ನೊಬ್ಬರ ಬಗ್ಗೆ ಚುಚ್ಚು ಮಾತು ಆಡುವುದನ್ನು ಚೆನ್ನಾಗಿ ಕಲಿತಿದ್ದಾರೆ. ಇದನ್ನು ಬಿಟ್ಟುಬಿಡಿ. ನಮಗೆಲ್ಲ ಸಾಕಷ್ಟು ವಯಸ್ಸಾಗಿದೆ. ಚುಚ್ಚು ಮಾತು ಬಳಸಲು ನಮಗೂ ಬರುತ್ತದೆ.

**ಅಧ್ಯಕ್ಷರು:** ಎರಡೂ ಕಡೆಯವರು ಚುಚ್ಚು ಮಾತು ಬಳಸುವುದು ಬೇಡ.

**ರಾಮಕೃಷ್ಣ ಹೆಗಡೆ (ಮುಖ್ಯಮಂತ್ರಿ):** ಚುಚ್ಚು ಮಾತು ಹೇಳಿದ್ದರಿಂದ ಯಾವ ಅಪರಾಧವೂ ಆಗಿಲ್ಲ.

(ವಿಧಾನಸಭೆ ಕಲಾಪ, ಮಾರ್ಚಿ 27, 1985)

## ಹಾರಿಕೆ ಉತ್ತರಗಳು ಬೇಡ – ಪಟೇಲರೇ

**ಕೆ.ವಿ. ರವೀಂದ್ರನಾಥ ಬಾಬು:** ಬರಗಾಲದ ಪರಿಸ್ಥಿತಿಯಿಂದ ರೈತರು ಎತ್ತುಗಳನ್ನು ಕಳೆದುಕೊಂಡು ಸಂಕಷ್ಟದಲ್ಲಿದ್ದಾರೆ. ಅವರಿಗೆ ಸರ್ಕಾರ ಯಾವ ರೀತಿ ಸಹಾಯ ಮಾಡಬೇಕು ಎಂಬುದನ್ನು ಸ್ವಲ್ಪ ತಿಳಿಸಬೇಕಾಗುತ್ತದೆ. ಈಗಾಗಲೇ ಬರಗಾಲದ ಮಧ್ಯೆ ಬೋರ್‌ವೆಲ್ ಇಂಡೆಂಟ್ ಹಾಕುತ್ತೇವೆ. ಟೆಂಡರ್ ಕಾಲ್‌ಫಾರ್ ಮಾಡುತ್ತೇವೆ ಎನ್ನುತ್ತಿದ್ದಾರೆ. ಆಗ ರೈತರುಗಳಿಗೆ ಎತ್ತುಗಳು ಬೇಕಾದರೆ ಡೆನ್ಮಾರ್ಕ್‌ನಿಂದ ತರಿಸುತ್ತೇವೆ ಎನ್ನುವಂತೆ ಆಗಬಾರದು. ಆದುದರಿಂದ ಅದಕ್ಕೆ ಏನಾದರೂ ಕ್ರಮ ತೆಗೆದುಕೊಂಡಿದ್ದೀರಾ?

**ಜೆ.ಹೆಚ್. ಪಟೇಲ್:** ಮಾನ್ಯ ಅಧ್ಯಕ್ಷರೇ, ಮೊದಲು ಮಳೆ ಬರಲಿ. ಆಮೇಲೆ ಕ್ರಮ ಏನುಬೇಕಾದರೂ ತೆಗೆದುಕೊಳ್ಳೋಣ.

**ಎಂ. ರಾಮಪ್ಪ:** ಇಂತಹ ಹಾರಿಕೆ ಉತ್ತರಗಳಿಂದ ನಮಗೆ ಸಮಾಧಾನವಾಗುವುದಿಲ್ಲ.

**ಕೆ.ವಿ. ರವೀಂದ್ರನಾಥ ಬಾಬು:** ಈ ರೀತಿ ತೆನಾಲಿ ರಾಮಕೃಷ್ಣನ ತರಹದ ಉತ್ತರಗಳು ಬೇಕಾಗಿಲ್ಲ. ನೇರವಾಗಿ ಉತ್ತರ ಕೊಡಬೇಕು.

**ಜೆ.ಹೆಚ್. ಪಟೇಲ್:** ಇವರು ಮಹಾಪಂಡಿತರು ಎನ್ನುವುದು ನನಗೂ ಗೊತ್ತು. ಮಳೆ ಬಂದರೆ, ಆಗ ಎತ್ತುಗಳು ಬೇಕಾದರೆ ಏನು ಮಾಡುತ್ತೀರಿ ಎಂದು ತಾನೆ ನೀವು ಪ್ರಶ್ನೆ ಕೇಳಿದ್ದು.

ಸಂಸದೀಯ ವ್ಯವಹಾರದ ರೀತಿಯಲ್ಲಿಯೇ ಮಾನ್ಯ ಸದಸ್ಯರಿಗೆ ಹೇಳಬಯಸುತ್ತೇನೆ. ಮಾನ್ಯರೇ ಸರ್ಕಾರ ಪೂರ್ವ ಭಾವಿಯಾಗಿ...

ಪಟಮಕ್ಕಿ ರತ್ನಾಕರ್: ತಾವು ಇಷ್ಟು ಸಿಟ್ಟಾಗಬಾರದು. ಸಂಸದೀಯ ವ್ಯವಹಾರಗಳಲ್ಲಿ ತಮಗೆ ಅಪಾರ ಅನುಭವವಿದೆ. ಸಂಸದೀಯ ಕೌಶಲ್ಯಕ್ಕೆ ಹೆಸರಾದವರು ನೀವು. ಹೊಸ ಸದಸ್ಯರು ತಪ್ಪಾಗಿ ಕೇಳಿದರೆ ತಿದ್ದಬೇಕಾದದ್ದು ಹಿರಿಯರಾದ ನಿಮ್ಮ ಧರ್ಮ. ಈ ರೀತಿ ನೀವು ಸಿಟ್ಟಾದರೆ ನಮ್ಮ ಸ್ಫೂರ್ತಿ ಕುಗ್ಗತ್ತೆ.

ಆರ್.ಎಲ್. ಜಾಲಪ್ಪ: ತಿಳುವಳಿಕೆ ಇರುವ ನೀವುಗಳು ಅವರಿಗೂ ಹೇಳಿಕೊಡಿ.

(ವಿಧಾನಸಭೆ ಕಲಾಪ : 1986)

## ಪಟೇಲರೇ, ಉತ್ತರಿಸುವಾಗ ಎಚ್ಚರವಿರಲಿ

ಜಿ.ಹೆಚ್. ಅಶ್ವತ್ಥರೆಡ್ಡಿ: ಮಾನ್ಯ ವಿದ್ಯುತ್ ಖಾತೆ ಸಚಿವರು ಬೇಡ್ತಿ ಯೋಜನೆ ಬಗ್ಗೆ ಏನೂ ಹೇಳಲಿಲ್ಲ?

ಜೆ.ಎಸ್. ದೇಶಮುಖ್ (ವಿದ್ಯುತ್ ಖಾತೆ ಸಚಿವರು): ಬೇಡ್ತಿ ಯೋಜನೆ ಬಗ್ಗೆ ವಾದವಿವಾದಗಳಿವೆ. ಅದರ ಬಗ್ಗೆ ಇನ್ನೂ ಏನೂ ತೀರ್ಮಾನ ತೆಗೆದುಕೊಂಡಿಲ್ಲ.

ಜಿ.ಹೆಚ್. ಅಶ್ವತ್ಥರೆಡ್ಡಿ: ಬೇಡ್ತಿ ಯೋಜನೆಯ ಬಗ್ಗೆ ತಜ್ಞರ ಸಮಿತಿ ನೇಮಕ ಮಾಡಿ ಮೂರು ವರ್ಷಗಳಾಯಿತು. ಇನ್ನೂ ಅದರ ಬಗ್ಗೆ ತೀರ್ಮಾನವಿಲ್ಲ ಎಂದರೆ ಹೇಗೆ? ದಯಮಾಡಿ ತಿಳಿಸಿ.

ಜೆ.ಹೆಚ್. ಪಟೇಲ್ (ಕೈಗಾರಿಕಾ ಸಚಿವರು): ಬೇಡ್ತಿ ಯೋಜನೆಯು ಮಾನ್ಯ ಅಶ್ವತ್ಥರೆಡ್ಡಿಯವರ ಕಾಲದಿಂದಲೂ ತಜ್ಞರ ಅಭಿಪ್ರಾಯಕ್ಕಾಗಿ ಕಾಯುತ್ತಿದೆ. ಈಗಲೇ ಅಂತಿಮವಾಗಿ ತಿಳಿಸುವುದು ಅಸಾಧ್ಯ. ತಜ್ಞರ ವರದಿ ಬಂದ ಮೇಲೆ ಅದನ್ನು ಪ್ರಕಟ ಮಾಡುತ್ತೇವೆ.

ಜಿ.ಹೆಚ್. ಅಶ್ವತ್ಥರೆಡ್ಡಿ: ತಜ್ಞರ ವರದಿ ಈಗಾಗಲೇ ಸಿದ್ಧವಾಗಿದೆ, ಅದನ್ನು ಕೇಳುವುದಕ್ಕೆ ನೀವು ತಯಾರಾಗಿಲ್ಲ.

ಜೆ.ಹೆಚ್. ಪಟೇಲ್: ತಜ್ಞರು ತಮ್ಮ ವರದಿಯನ್ನು ಮಾನ್ಯ ಅಶ್ವತ್ಥರೆಡ್ಡಿಯವರಿಗೆ ಕೊಟ್ಟಿರಬಹುದು. ನಮಗೆ ಇನ್ನೂ ಕೊಟ್ಟಿಲ್ಲ.

ಜಿ.ಹೆಚ್. ಅಶ್ವತ್ಥರೆಡ್ಡಿ: ಮಾನ್ಯ ಸಭಾಧ್ಯಕ್ಷರೇ, ಇದು ಸರಿಯಲ್ಲ. ಮಾನ್ಯ ಪಟೇಲರು ವ್ಯಂಗ್ಯವಾಗಿ ಮಾತನಾಡುವುದಕ್ಕೆ ಹೆಸರುವಾಸಿಯಾಗಿದ್ದಾರೆ. ಮೂರು ವರ್ಷದಿಂದ ತಜ್ಞರು ಮಾಡಿದ್ದಾದರೂ ಏನು? ನೋಡಬಾರದೇ? ಮಲಗಿಕೊಂಡವರನ್ನು ಖಾಯಂ ಆಗಿ ಮಲಗೇ ಇರಿ ಎಂದು ಹೇಳಲಾದೀತೇ. ಮಾನ್ಯ ಸಚಿವರೇ ಸ್ವಲ್ಪ ಸರಿಯಾಗಿ ಉತ್ತರ ಹೇಳಿ.

ಜೆ.ಹೆಚ್. ಪಟೇಲ್: ಆಯಿತು. ವರದಿ ತಲುಪಿದ ಕೂಡಲೇ ಅದನ್ನು ಸಂಪೂರ್ಣ ಪರಿಶೀಲಿಸಿ ಸದನದ ಗಮನಕ್ಕೆ ತರುತ್ತೇವೆ.

(ವಿಧಾನಸಭೆ ಕಲಾಪ, ಸೆಪ್ಟೆಂಬರ್ 9, 1985)

## ಪಟೇಲರಿಗೆ 'ಕೆ.ಹೆಚ್' ಹಿತವಚನ

ಕೆ.ಹೆಚ್. ಪಾಟೀಲ್: ವಿದ್ಯುತ್ ಇಲಾಖೆಯಲ್ಲಿ ಬಿಗಿ ಆಡಳಿತ ಬೇಕಾಗಿದೆ. ಈ ಇಲಾಖೆಯ ಅಧಿಕಾರಿಗಳು ಆಡಳಿತ ಸುಧಾರಣೆ ಕಡೆ ಗಮನ ಹರಿಸುವುದನ್ನು ಬಿಟ್ಟು ಹಣ ದೋಚುವುದರಲ್ಲಿ ಮಗ್ನರಾಗಿದ್ದಾರೆ. ಮಾನ್ಯ ಪಟೇಲರಂತಹವರು ಈ ಬಗೆಗೆ ಗಮನ ಹರಿಸಬೇಕು. ಹಾಲಿ ಈಗ 80 ಪರ್‌ಸೆಂಟ್ ವಿದ್ಯುತ್ ಖೋತಾ ಅನುಭವಿಸಬೇಕಾಗಿದೆ.

ಜೆ.ಹೆಚ್. ಪಟೇಲ್: ಮಾನ್ಯ ಅಧ್ಯಕ್ಷರೇ 1982ನೇ ಇಸವಿಯಲ್ಲಿ ಆಡಳಿತದಲ್ಲಿದ್ದ ಕಾಂಗ್ರೆಸ್ ಸರ್ಕಾರ 100 ಪರ್‌ಸೆಂಟ್ ವಿದ್ಯುತ್ ಕಡಿತ ಮಾಡಿದ್ದುದು ಎಲ್ಲರಿಗೂ ನೆನಪಿದೆ.

ಕೆ.ಹೆಚ್. ಪಾಟೀಲ್: ಹೌದು. ಹೀಗಾದಾಗ ಮಾನ್ಯ ದೇವೇಗೌಡರು ನಮಗೆ ಹಿತವಚನ ಹೇಳಿದ್ದೂ ಸಹಿತ ನೆನಪಿದೆ. ಕೂಡಲೇ ನಾವು 100 ಪರ್‌ಸೆಂಟ್ ಖೋತ ಸಹಿತ ತೆಗೆದಿದ್ದೆವು.

ಜೆ.ಹೆಚ್. ಪಟೇಲ್: ಈಗಿರುವ ಪರಿಸ್ಥಿತಿಯಲ್ಲಿ ಯಾರಿದ್ದರೂ ಇಷ್ಟು ಕಡಿತ ಮಾಡಲೇಬೇಕಾಗುತ್ತದೆ.

ಕೆ.ಹೆಚ್. ಪಾಟೀಲ್: ನಾನು ಹೇಳುತ್ತಿರುವುದು ಇಲಾಖೆಯ ಸುಧಾರಣೆ ಇಲಾಖೆಯಲ್ಲಿ ಹಲವು ಅಪ್ರಮಾಣಿಕರು ನಡೆಸಿರುವ ಅವ್ಯವಹಾರದ ಬಗೆಗೆ ಮಾನ್ಯ ಸಚಿವರು ಗಮನ ಹರಿಸಬೇಕೆಂಬುದು ನನ್ನ ಒತ್ತಾಯ.

ಜೆ.ಹೆಚ್. ಪಟೇಲ್: ಮಾನ್ಯ ಅಧ್ಯಕ್ಷರೇ Electricity is not that kind of energy like coal or water. It cannot be stored.

ಕೆ.ಹೆಚ್. ಪಾಟೀಲ್: ಮಾನ್ಯ ಅಧ್ಯಕ್ಷರೇ, ಇದು ಸರಿಯಾದ ಉತ್ತರವಲ್ಲ. ಇವರ ರೀತಿ ಸರಿಯಲ್ಲ. ಹೀಗೆ ಚುಚ್ಚು ಮಾತನಾಡುವುದು ಬೇಡ. ವಿದ್ಯುತ್ತನ್ನು ಶೇಖರಿಸಲು ಸಾಧ್ಯವೇ, ಇಲ್ಲವೇ, ಈ ವಿವೇಚನೆ ನನಗೂ ಇದೆ. ಶಾಸಕನಾಗಿ ನನಗೂ ಅನುಭವವಿದೆ.

ಜೆ.ಹೆಚ್. ಪಟೇಲ್: ದಯಮಾಡಿ ಮಾನ್ಯ ಕೆ.ಹೆಚ್. ಪಾಟೀಲರು ನಮ್ಮ ಬೋನೋಫೈಡ್ಸ್ ಪ್ರಶ್ನಿಸುವುದು ಬೇಡ. ಖಂಡಿತಾ ಅವರಿಗೆ ಭರವಸೆ ಕೊಡುತ್ತೇನೆ.

ಕೆ.ಹೆಚ್. ಪಾಟೀಲ್: ಸಂತೋಷ. ಮಾನ್ಯ ಜೆ.ಹೆಚ್. ಪಟೇಲರು ಪುನರಪಿ ಆಶ್ವಾಸನೆ ನೀಡಿದ್ದಾರೆ.

(ವಿಧಾನಸಭೆ ಕಲಾಪ ಏಪ್ರಿಲ್ 4, 1985)

## CIA ಏಜೆಂಟ್!

**ಕೆ.ಎನ್. ನಾಗೇಗೌಡ:** ಮಾನ್ಯ ಸಭಾಪತಿಗಳೇ ಎಇಜಿ ಮತ್ತು ಎನ್‌ಜಿಇಎಫ್ ಹಗರಣಗಳಿಗೆ ಸಂಬಂಧಿಸಿದಂತೆ ಹಲವಾರು ವಿಷಯಗಳ ಪ್ರಸ್ತಾಪ ನಡೆದಿರುವಾಗ ಮಾನ್ಯ ಹಿರಿಯ ಸಚಿವರಾದ ಜೆ.ಹೆಚ್. ಪಟೇಲರು ನನ್ನನ್ನು ಸಿ.ಐ.ಎ. ಏಜೆಂಟ್ ಇರಬೇಕೆಂದು ಟೀಕಿಸಿದರಂತೆ. ನನ್ನ ಆತ್ಮೀಯರಾದ ಜಯದೇವಣ್ಣನವರು ಹೀಗೇಕೆ ಹೇಳಿದರೋ ತಿಳಿಯಲಿಲ್ಲ. ಅವರ ಬಳಿ ಪೊಲೀಸ್ ಇದೆ. ತನಿಖಾದಳ ಇದೆ. ಯಾವುದೇ ವಿಧವಾದ ತನಿಖೆಗೂ ನಾನು ಸಿದ್ಧ.

**ಜೆ.ಹೆಚ್. ಪಟೇಲ್ (ಕೈಗಾರಿಕಾ ಸಚಿವ):** ಸನ್ಮಾನ್ಯ ಸಭಾಪತಿಗಳೇ, ಇಲ್ಲೆಲ್ಲೋ ಕಮ್ಯುನಿಕೇಷನ್ ಕೊರತೆ ಉಂಟಾಗಿದೆ. ನಾನು ಸನ್ಮಾನ್ಯ ನಾಗಣ್ಣನನ್ನು ಕುರಿತು ಎಂದೂ ಹಾಗೆಲ್ಲಾ ಆರೋಪ ಹೊರೆಸಿಲ್ಲ, ಅಪವಾದ ಮಾಡಿಲ್ಲ. ನಾನು ಆ ಸಂದರ್ಭದಲ್ಲಿ ಏನು ಹೇಳಿದೆ ಅಂದರೆ ಸನ್ಮಾನ್ಯ ರಾಮಕೃಷ್ಣ ಹೆಗಡೆಯವರಿಗೆ ಮಸಿ ಬಳಿಯುವ ಪ್ರಯತ್ನ ರಾಷ್ಟ್ರಮಟ್ಟದಲ್ಲಿ ನಡೆದಿದ್ದು, ಇಂತಹ ಕ್ರಿಯೆಯಲ್ಲಿ ಅಂತಾರಾಷ್ಟ್ರೀಯ ಸಂಘ-ಸಂಸ್ಥೆಗಳ ಪಾತ್ರವೂ ಇರಲಿಕ್ಕೆ ಸಾಕು ಎಂದಿದ್ದೆ. ನಾನು ಎಂದೂ ನಿಮ್ಮನ್ನು ಸಿಐಎ ಏಜೆಂಟ್ ಎಂದಿದ್ದಿಲ್ಲ. ದಯಮಾಡಿ ಅರ್ಥ ಮಾಡಿಕೊಳ್ಳಿ.

**ಕೆ.ಎನ್. ನಾಗೇಗೌಡ:** ತುಂಬಾ ವಂದನೆಗಳು.

(ವಿಧಾನ ಪರಿಷತ್ ಕಲಾಪ ಸೆಪ್ಟೆಂಬರ್ 9, 1987)

## ಸಂಕುಚಿತ ಎಂಬಂತೆ ಕಂಡ ಪಟೇಲರ ವ್ಯಾಖ್ಯಾನ

ಸಂದರ್ಭ: ದೊರೆಯನ್ನು ಅಥವಾ ಆಡಳಿತದಲ್ಲಿರುವವರನ್ನು ಓಲೈಸಿಕೊಂಡು ಸದಾಕಾಲ ಸುಖದಿಂದಿರುವ ವರ್ಗವನ್ನು ಕೆಲವು ಇತಿಹಾಸ ಮತ್ತು ಸಮಾಜಶಾಸ್ತ್ರ ಅಭ್ಯಾಸಕಾರರು 'ಪುರೋಹಿತಶಾಹಿ' ಎಂದು ವರ್ಗೀಕರಿಸಿರುವುದುಂಟು. ಪಟೇಲರು ಈ ಸಾಮಾಜಿಕ ಬೆಳವಣಿಗೆಯ ಚಿಂತನೆಯಿಂದ ಪ್ರಭಾವಿತರಾದಂತೆ ಕಾಣುತ್ತದೆ.

ಸದನದಲ್ಲಿ ಇಂತಹ ವಿಚಾರಧಾರೆಯನ್ನು ಪಟೇಲರು ವ್ಯಕ್ತಪಡಿಸಿದ ಎರಡು ಸಂದರ್ಭಗಳನ್ನು ಈ ಅಧ್ಯಾಯದಲ್ಲಿ ಕಾಣಬಹುದು.

ಮೊದಲನೆಯ ಸಂದರ್ಭ: 1979ರಲ್ಲಿ ಪಟೇಲರು ಪ್ರತಿಪಕ್ಷದ ಶಾಸಕರಾಗಿದ್ದ ಕಾಲದಲ್ಲಿ ಹೇಳಿದ ಮಾತುಗಳು

ಸದನದೊಳಗೆ ಜಾತೀಯತೆಯನ್ನು ನಿಷ್ಪಕ್ಷವಾಗಿ ಖಂಡಿಸುತ್ತಿದ್ದ ಪಟೇಲರ ನಿಲುವಿಗೆ ಅಂದಿನ ವಿಶ್ಲೇಷಣೆ ಅಪವಾದವೆನಿಸಿತ್ತು. ಸಾಮಾನ್ಯವಾಗಿ ಕೇಳಿಬರುತ್ತಿದ್ದ ಅವರ ಜಾತ್ಯಾತೀತ ನಂಬಿಕೆಗೆ ಈ ಅಭಿಪ್ರಾಯಗಳು ಕೊಂಚ ದೂರವಾಗಿದ್ದವು. ಸಹೋದ್ಯೋಗಿ ರಾಜಕಾರಣಿಯೊಬ್ಬರನ್ನು ಜಾತಿ ಆಧರಿಸಿ

ಪಟೇಲರು ಅಳಿದದ್ದು ಅದೇ ಮೊದಲು. ಸದನದ ಒಳಗೆ ಅಂದು ಪಟೇಲರು ವ್ಯಕ್ತಪಡಿಸಿದ ರಾಜಕೀಯ ಸಮೀಕ್ಷೆ ಹೀಗಿತ್ತು:

ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ): ಶ್ರೀ ಗುಂಡೂರಾಯರ ನೇತೃತ್ವದಲ್ಲಿ ಈಗಿರುವ ಸರ್ಕಾರ ಅಕ್ರಮವಾಗಿ ಹುಟ್ಟಿರುವ ಒಂದು ಶಿಶು. ಇದೀಗ ಮುಕ್ತಾಯಗೊಂಡ ಲೋಕಸಭಾ ಚುನಾವಣೆಯಲ್ಲಿ ಮತದಾರರು ಶ್ರೀಮತಿ ಇಂದಿರಾಗಾಂಧಿಯುವರು ಪ್ರಧಾನಮಂತ್ರಿಯಾಗಲಿ ಎಂದು ಓಟು ಕೊಟ್ಟರೇ ವಿನಹ ಕರ್ನಾಟಕದಲ್ಲಿ ದೇವರಾಜ ಅರಸರು ಬೇಡ, ಗುಂಡೂರಾಯರು ಮುಖ್ಯಮಂತ್ರಿ ಆಗಲಿ ಎಂದು ಮತ ಹಾಕಲಿಲ್ಲ.

ಇಲ್ಲಿ ಸಹಿತ ಚುನಾವಣೆ ನಡೆಯುವಂತೆಯೇ ಕಾಣಿಸಿತು. ವಿಧಾನಸಭೆ ವಿಸರ್ಜನೆಯಾಗುವಂತಿತ್ತು. ಇಲ್ಲಿಯೂ ಪುಕ್ಕಲು ಶಾಸಕರಿದ್ದರು. ಹೊಸ ಚುನಾವಣೆ ಎದುರಿಸುವ ಭಯಉಂಟಾಯಿತು. ಎಂತಹದೋ ಒಂದು ಕುರುಡೋ, ಕುಂಟೋ, ಕಿವುಡೋ, ಹೇಗಿದ್ದರಾಗಲಿ ಒಂದು ಸರ್ಕಾರ ಇದ್ದರೆ ಸಾಕೆಂದು ರಾಯರ ಸರ್ಕಾರ ಹಿಡಿದುಕೊಂಡರು.

ಶ್ರೀಮತಿ ಇಂದಿರಾಗಾಂಧಿಯವರ ತಂದೆಯಾದ ಶ್ರೀ ಪಂಡಿತ ಜವಾಹರಲಾಲ ನೆಹರೂರವರ 18 ವರ್ಷದ ಆಡಳಿತ ಪರಿಹರಿಸಲಾಗದ ದೇಶದ ಆರ್ಥಿಕ ಸಮಸ್ಯೆಯನ್ನು ಎರಡೂವರೆ ವರುಷದ ಜನತಾ ಸರ್ಕಾರ ಹಾಗೂ ಆರು ತಿಂಗಳ ಶ್ರೀಮಾನ್ ಚರಣಸಿಂಗರ ಸರ್ಕಾರ ಪರಿಹರಿಸಬಲ್ಲದೇ? ಶ್ರೀಮತಿ ಇಂದಿರಾಗಾಂಧಿಯವರ ಸರ್ಕಾರ ಮತ್ತು ಕಾರ್ಯಕ್ರಮಗಳಿಂದ ಹುಟ್ಟಿದ ಆರ್ಥಿಕ ವಿಷವನ್ನು ನುಂಗಲು ಸಾಧ್ಯವಾಗದೆ ಈ ಸರ್ಕಾರಗಳು ಬಿದ್ದುಹೋದವು.

ಇಂದು ಗುಂಡೂರಾಯರ ಕೈಯಲ್ಲಿ ಅಧಿಕಾರ ಸಿಕ್ಕಿದೆ. ಈ ದೇಶದಲ್ಲಿ ಮತ್ತೆ ದ್ವಿಜರ ಕೈಗೆ ಹೋಗಿದೆ. ಕೆಲವು ತಿಂಗಳುಗಳ ಕಾಲ ಯಾರು ಅಧಿಕಾರದಿಂದ ದೂರ ಇದ್ದರೋ ಅವರೇ ಮತ್ತೆ ಜುಬ್ಬ ತೊಟ್ಟು, ಪಂಚೆ ಉಟ್ಟು, ನೀಟಾದ ಟೋಪಿ ಹಾಕಿ ಮತ್ತೆ ಅಧಿಕಾರಕ್ಕೆ ಬಂದಿದ್ದಾರೆ. ಅವರ ಜನಗಳೇ ಈ ಸೆಕ್ರೆಟೇರಿಯಟ್‌ನಲ್ಲಿ ಹಾಗೂ ಎಲ್ಲ ಕಡೆ ಕುಳಿತಿದ್ದಾರೆ.

ಒಟ್ಟಿನಲ್ಲಿ ಹೇಳಬೇಕು ಎಂದರೆ ಅಧಿಕಾರ ಇವತ್ತು ಮೇಲ್ಜಾತಿಯವರ ಕೈಗೆ ಹೋಗಿದೆ. ಇದು ಕರ್ನಾಟಕ ರಾಜ್ಯದಲ್ಲಿ ಇರಬಹುದು. ಆಂಧ್ರದಲ್ಲಿ ಇರಬಹುದು. ದೆಹಲಿಯಲ್ಲಂತೂ ನಿಷ್ಠಾವಂತ ಆಫೀಸರ್‌ಗಳು ಈ ಮೇಲ್ಜಾತಿಯವರ ಅಧಿಕಾರದ ಸುಳಿಯಲ್ಲಿ ಸಿಕ್ಕಿಕೊಂಡು ತತ್ತರಿಸಿ ಹೋಗುತ್ತಿದ್ದಾರೆ.

ನಾನು ದ್ವಿಜರು ಎಂದು ಹೇಳಿದೆ. ಅಂದರೆ ಅದರಲ್ಲಿ ಬ್ರಾಹ್ಮಣರು ಬಂದರು. ಜನಿವಾರದವರು ಬಂದರು ಮತ್ತು ಆಸ್ತಿ ಇರತಕ್ಕವರು ಬಂದರು. ಅದರೊಳಗೆ ವಿಶೇಷವಾಗಿ ಶ್ರೀಮತಿ ಇಂದಿರಾಗಾಂಧಿಯವರು ಏನು ಮಾಡಿದರು ಅದು ಜಾತೀಯತೆ ಅಲ್ಲವೇನು?

ಮೊನ್ನೆ ಬಸವಲಿಂಗಪ್ಪನವರು ಮೊಗಮ್ಮಾಗ್ಗಿ ಹೇಳಿದರು. ಮಾನ್ಯ ಎಂ.ಸಿ. ಬಸಪ್ಪನವರು, ಮಾನ್ಯ ಶ್ರೀಕಂಠಯ್ಯನವರು, ಮಾನ್ಯ ಪ್ರಭಾಕರ್‌ರವರು ಇರತಕ್ಕಂಥ ಈ ರಾಜ್ಯದಲ್ಲಿ ಮಾನ್ಯ

ಗುಂಡೂರಾಯರು ಚೀಫ್ ಮಿನಿಸ್ಟರ್ ಆಗುವುದು ಹೇಗೆ? ಲಿಂಗಾಯಿತರಾಗಲೀ, ಒಕ್ಕಲಿಗರಾಗಲಿ ಮುಖ್ಯ ಮಂತ್ರಿ ಆಗದೆ ಒಬ್ಬ ಬ್ರಾಹ್ಮಣರು ಮುಖ್ಯಮಂತ್ರಿಯಾದರು ಎಂದು ಹೇಳಲಾರದೆ ಸುತ್ತಿ ಬಳಸಿ ಹೇಳಿದರು. ಶ್ರೀಮಾನ್ ಬಂಗಾರಪ್ಪನವರು, ಶ್ರೀಮಾನ್ ವೀರಪ್ಪಮೊಯ್ಲಿಯವರು ಅವರ ಜೊತೆಯಲ್ಲಿದ್ದಾರೆ. ಮಾನ್ಯ ಬಂಗಾರಪ್ಪನವರು ತೊಂದರೆಯಲ್ಲಿದ್ದಾರೆ. ಅವರ ಜಿಲ್ಲೆಯಲ್ಲೇ ಮಾನ್ಯ ಮುಖ್ಯಮಂತ್ರಿಗಳಿಗೆ ಸನ್ಮಾನ ಮಾಡಿದರು. ಬಂಗಾರಪ್ಪನವರನ್ನೇ ಬಿಟ್ಟುಬಿಡುವುದೇ? ಅವರು ಪ್ರಾದೇಶಿಕ ಅಧ್ಯಕ್ಷರು. ಈಗ ಅವರ ಅಧ್ಯಕ್ಷಗಿರಿಯನ್ನು ತೆಗೆಯುತ್ತಾರೆ ಎಂದು ಮಾನ್ಯ ಬಸವಲಿಂಗಪ್ಪನವರು ಹೇಳುತ್ತಾ ಇದ್ದರು.

ಹೀಗಾಗಿ ಅಧ್ಯಕ್ಷರೇ, ಇವತ್ತು ಗಂಭೀರವಾದ ಪರಿಸ್ಥಿತಿ ಉಂಟಾಗಿದೆ. ನಮ್ಮ ರಾಜ್ಯದ ಆಡಳಿತ ಕುಸಿದು ಬೀಳುತ್ತಿದೆ. ಕೆಲವೇ ಜನ ದ್ವಿಜರ ಕೈಲಿ ಆಡಳಿತ ಸಿಕ್ಕಿ ಹಾಕಿಕೊಂಡಿದೆ. ಅದನ್ನು ಸಾಬೀತು ಪಡಿಸಿ ಹೇಳಬಲ್ಲೆ. ಇವತ್ತು ತಾಲ್ಲೂಕ್ ಲೆವೆಲ್‌ನಲ್ಲಿ ಹಿಂದುಳಿದ ಜಾತಿಯ ಅಧಿಕಾರಿಗಳು ಯಾರಿದ್ದಾರೆ ಅವರಿಗೆ ಒಂದು ರೀತಿಯ ಸೆನ್ಸ್ ಆಫ್ ಇನ್‌ಸೆಕ್ಯೂರಿಟಿ, ಅಭದ್ರ ಮನಸ್ಸು ಉಂಟಾಗಿದೆ. ಏನು ಮಾಡಿದರೆ ಏನಾಗುತ್ತದೆಯೋ ಎನ್ನುವ ಭಯ ಉಂಟಾಗಿದೆ.

ಇವತ್ತು ಸುಭದ್ರ ಸರ್ಕಾರಗಳಿಲ್ಲದಿದ್ದರೂ ಚಿಂತಿಲ್ಲ, ಸುಭದ್ರ ಸಮಾಜವಿರಬೇಕು. ಪ್ರಧಾನ ಮಂತ್ರಿಗಳನ್ನು ಎರಡು ಮೂರು ವರ್ಷಗಳಿಗೊಮ್ಮೆ ಬದಲಾವಣೆ ಮಾಡುವುದಕ್ಕೆ ಆಗದಿದ್ದರೂ ಪರವಾಗಿಲ್ಲ, ಎರಡು-ಮೂರು ವರ್ಷಕ್ಕೊಮ್ಮೆ ಮುಖ್ಯಮಂತ್ರಿಗಳನ್ನು ಬದಲಾವಣೆ ಮಾಡುವಂತಹ ಪರಿಸ್ಥಿತಿ ಬಂದಿದೆ.

ಇವತ್ತು ಏನಾಗಿದೆ ಎಂದರೆ ಮೂಲೆ ಹಿಡಿದು ಕುಳಿತಿದ್ದ ಜನ ಯಾರಿದ್ದರು, ಅವರು ಪುನಃ ಚೀಲ ಬಿಚ್ಚಿ, ತಮ್ಮ ಹೊಸ ಅಂಗಡಿಗಳನ್ನು ತೆಗೆದು ಕುಳಿತಿದ್ದಾರೆ. ಯಾವುದೋ ಹೊಸ ಶಕ್ತಿಯಲ್ಲಿ ಬ್ರಾಹ್ಮಣ ಗುಂಡೂರಾಯರು ಮುಖ್ಯಮಂತ್ರಿಗಳಾಗಿ ಬಂದಿದ್ದಾರೆ. ಆದರೆ ಜನತೆ ಮತ್ತು ಮಾನ್ಯ ಮಂತ್ರಿಗಳವರು ಎಚ್ಚೆತ್ತುಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಹೇಗೆ ಬೊಮ್ಮನ ಹಳ್ಳಿಯ ಕಿಂದರಜೋಗಿ ಜೊತೆಯಲ್ಲಿಯೇ ಇಲಿಗಳು ಹಳ್ಳಕ್ಕೆ ಬಿದ್ದವೋ ಹಾಗೆ ಬೀಳಬೇಕಾದ ಪರಿಸ್ಥಿತಿ ಬಂದೀತು.

(ಜೆ.ಹೆಚ್. ಪಟೇಲ್ (ಪ್ರತಿಪಕ್ಷದ ಶಾಸಕ) ವಿಧಾನ ಸಭೆ : ಮಾರ್ಚಿ 6, 1979)

## ಎರಡನೆಯ ಬಾರಿ 'ಜಾತಿ' ವಿಶ್ಲೇಷಣೆ

### ಸಂದರ್ಭ: 19 ವರ್ಷಗಳ ನಂತರ

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ನಾನು ಬ್ರಾಹ್ಮಣರ ಬಗ್ಗೆ ಹೀಯಾಳಿಸಿ ಮಾತನಾಡಿದೆ ಎಂದು ಕೆಲವು ಪತ್ರಿಕೆಯಲ್ಲಿ ಬಂದಿದೆ. ಮೊದಲಿನಿಂದ ಲರ್ನೆಡ್ ರಾಕ್ಷಸರು ಬ್ರಾಹ್ಮಣರು. ರಾವಣ ಬ್ರಾಹ್ಮಣ. ಒಬ್ಬ ಕ್ಷತ್ರಿಯ ಅಥವ ಒಬ್ಬ ಸಾಮಾನ್ಯ ಮನುಷ್ಯ ತಮಗಿಂತ ದೊಡ್ಡವನಾಗುತ್ತಿದ್ದಾನೆ ಎಂದರೆ ಇವರಿಗೆ ತಡೆದುಕೊಳ್ಳುವುದಕ್ಕೆ ಆಗುವುದಿಲ್ಲ.

ನಾನು ಆ ಕಾರಣದಿಂದಲೇ ಮಾನ್ಯ ಯಡಿಯೂರಪ್ಪನವರಿಗೆ ಮತ್ತು ನಂಜೇಗೌಡರಿಗೆ ಏನು ಹೇಳುತ್ತಿದ್ದೇನೆಂದರೆ ಈ ರೀತಿಯ ವ್ಯವಸ್ಥೆಯಲ್ಲಿ ನೀವು ಉಳಿಯುವುದಿಲ್ಲ. ಏಕೆಂದರೆ ದೇವೇಗೌಡರ ಸರ್ಕಾರವು ಬಂದರೆ ಏನೋ ಒಂದು ರೀತಿಯ ಕಸಿವಿಸಿ ಹೊಟ್ಟೆಯಲ್ಲಿ ಆಗುತ್ತದೆ. ಅದೇ ರೀತಿ ಪಟೇಲ್ ಸರ್ಕಾರ ಬಂದರೆ ಏನೋ ಒಂದು ರೀತಿ ಜ್ವರ ಬಂದುಬಿಡುತ್ತದೆ.

ಏಕೆ ಆ ರೀತಿಯಾಗಬೇಕು? ನಮಗೇನು ರಾಜ್ಯ ಮತ್ತು ಈ ದೇಶವನ್ನು ಆಳುವುದಕ್ಕೆ ಬರುವುದಿಲ್ಲವೇ? ನಿಮಗೆ ಬರುವುದೇ ಇಲ್ಲ ಎಂದು ಯಾರು ಹೇಳುತ್ತಾರೆ ಅಂಥವರ ಬಗ್ಗೆ ನಾನು ಅಂದು ಮಾತನಾಡಿದ್ದು. ಬ್ರಾಹ್ಮಣರು ಎಂದಾಗ ಎಲ್ಲಾ ಬ್ರಾಹ್ಮಣರ ಬಗ್ಗೆ ಎಂದು ತಿಳಿದುಕೊಳ್ಳಬಾರದು. ಆ ರೀತಿಯಲ್ಲಿ ನಾನು ಹೇಳಿಯೇ ಇಲ್ಲ.

ಬರೆಯುವಾಗ ಏನೆಂದು ಬರೆಯುತ್ತಾರೆ ಗೊತ್ತೇ? 20 ಸಾವಿರ ಜನರನ್ನು ಮೀಟಿಂಗ್‌ಗೆ ಬರುವ ವ್ಯವಸ್ಥೆ ಮಾಡಿದ್ದೀನಿ, ಜನರೆಲ್ಲ ವಾಪಸ್ ಹೋದರು ಎಂದು ಬರೆಯುತ್ತಾರಲ್ಲ ಅದಕ್ಕಿಂತ ನೀಚತನ ಇನ್ನಾವುದಿದೆ ಹೇಳಿ. ಅವರು ಯಾವುದೇ ಜಾತಿಯವರಾಗಲಿ. ನಾನು ಅದಕ್ಕೋಸ್ಕರ ಹೇಳಿದ್ದು.

ವಿಭೂತಿ, ಜನಿವಾರ, ನಾಮ, ಇವುಗಳಲ್ಲಿ ಯಾವುದನ್ನೇ ಹಾಕಿಕೊಂಡು ಬಂದರೂ ಕೂಡ ಈ ದೇಶದ ಒಳತಳಕ್ಕೆ ಕೈ ಹಾಕತಕ್ಕಂಥ ಜನರುಗಳು ಯಾರಿದ್ದಾರೆ ಅವರ ಬಗ್ಗೆ ಹುಷಾರಾಗಬೇಕು. ಅಂಥವರು ಯಾರೇ ಬರಲಿ. ಈಗ ಕಲ್ಯಾಣ್‌ಸಿಂಗ್ ಉತ್ತರ ಪ್ರದೇಶದಲ್ಲಿ ಮುಖ್ಯಮಂತ್ರಿಗಳಾಗಿದ್ದಾರೆ. ಒಂದು ಕಡೆ ದ್ವಿಜಶಕ್ತಿ ಮತ್ತು ಇನ್ನೊಂದು ಕಡೆ ಶೂದ್ರ ಶಕ್ತಿ. ಇವೆರಡು ಶಕ್ತಿಗಳ ನಡುವೆ ಸಂಘರ್ಷ ಸಾವಿರಾರು ವರ್ಷಗಳಿಂದ ನಡೆದುಕೊಂಡು ಬಂದಿದೆ. ಯಾವಾಗ ಶೂದ್ರಶಕ್ತಿ ಮೇಲೇರುತ್ತದೆ ಆಗ ದೇವತೆಗಳೂ ಸಹ ಕೂಡಿಕೊಂಡು, ಅವನು ಹರಿಶ್ಚಂದ್ರ ಆದರೂ ಕೂಡ ಅವನನ್ನು ಏನಾದರೂ ಮಾಡಿ ದಾರಿ ತಪ್ಪಿಸಬೇಕು ಎಂದು ಬಂದವರೇ ಈ ಮಹಾಪುರುಷರುಗಳು.

ಯಾರು ಸತ್ಯವಂತನಾಗುತ್ತಾನೆ, ಯಾರು ಲೋಕಕ್ಕೆ ಕಲ್ಯಾಣ ಮಾಡುತ್ತಾನೆ ಅವನನ್ನು ಮುಗಿಸುವುದಕ್ಕೆ ಏನೆಲ್ಲಾ ಮಾಡಬೇಕು ಅಂಥ ಕುತಂತ್ರಗಳನ್ನು ಮಾಡುವುದು ಇವರ ಜಾಯಮಾನ. ಅದಕ್ಕೆ ಪಾಪ ನಮ್ಮ ಖರ್ಗೆಯವರನ್ನು ಈ ವ್ಯವಸ್ಥೆಯಲ್ಲಿ ಸೇರಿಸಿದ್ದಾರೆ. ಈ ವ್ಯವಸ್ಥೆಯಲ್ಲಿ ಏನು ಕರಾಳ ಶಕ್ತಿಗಳಿವೆ ಅದರ ಬಗ್ಗೆ ಅರ್ಥವಾಗುವುದು ಇನ್ನೂ ಕಷ್ಟ ಮತ್ತು ಅದರ ಬಗ್ಗೆ ಹೋರಾಟ ಮಾಡುವುದೂ ಮತ್ತಷ್ಟು ಕಷ್ಟ.

ಎಂ. ಮಲ್ಲಿಕಾರ್ಜುನ ಖರ್ಗೆ: ಸಮುದ್ರದಲ್ಲಿ ಯಾವಾಗಲೂ ದೊಡ್ಡ ಮೀನು ಸಣ್ಣ ಮೀನನ್ನೇ ನುಂಗುತ್ತದೆ. ಅದೇ ರೀತಿಯಲ್ಲಿ ನೀವೂ ನುಂಗುವವರೇ ಆಗಿದ್ದೀರಿ.

ಜೆ.ಹೆಚ್. ಪಟೇಲ್: ಆದರೆ ನೀವು ಯಾರಿಂದಲೂ ನುಂಗಿಸಿಕೊಳ್ಳಬೇಡಿ. ಈ ರೀತಿಯಲ್ಲಿ ನಾನು ಹೇಳಿದ ಮಾತನ್ನು ಇನ್ನೊಂದು ರೀತಿಯಲ್ಲಿ ತಿರುಚಿ ಬರೆದರು.

ಇನ್ನು ಸೋನಿಯಾಗಾಂಧಿ ಬಗ್ಗೆ ಏನು ಮಾತನಾಡಿದೆ ಎಂಬುದು ಪತ್ರಿಕೆಯಲ್ಲಿ ಬಂದಿದೆ. ಆ ಮಾತನ್ನು ನಾನು ಆಡಿಯೇ ಇಲ್ಲ. ಆದರೆ ಸೋನಿಯಾಗಾಂಧಿ ಬಗ್ಗೆ ಮತ್ತು ಮಹಿಳೆಯರ ಬಗ್ಗೆ ಏನೇನೋ ಮಾತನಾಡಿದರು ಎಂದು ಕಾಂಗ್ರೆಸ್‌ನವರು ಬರೆಸಿಕೊಂಡರು. ಆದರೆ ನಾನು ಯಾವುದೋ ಒಂದು ಉದಾಹರಣೆಯನ್ನು ಅವರ ಬಗ್ಗೆ ಕೊಡುತ್ತಾ She belongs to a family of giants. This was the word used. She belongs to a family of giants. But, now she is surrounded by pigmies. ಈ ರೀತಿಯಲ್ಲಿ ಹೇಳಿದ್ದುದು ನಿಮಗೆ ಅರ್ಥವಾಗಲಿಲ್ಲವೇ? ನಾನು ಇದನ್ನು ಅವರಿಗೆ ಏಕೆ ಹೇಳುವುದಕ್ಕೆ ಹೋಗಲಿ. ಪಾಪ ಅವರು ನಮ್ಮ ದೇಶಕ್ಕೆ ಬೀಗತನ ಮಾಡಿಕೊಂಡು ಬಂದವರು.

**ಮಲ್ಲಿಕಾರ್ಜುನ ಖರ್ಗೆ (ಪ್ರತಿಪಕ್ಷದ ನಾಯಕರು):** ಯಾವುದು ಅನವಶ್ಯಕವೋ ಅದನ್ನು ಹೇಳುತ್ತಿದ್ದಾರೆ. You are also surrounded by pigmies. You may be a great man, philosopher.

ಜೆ.ಹೆಚ್. ಪಟೇಲ್: ಓ.ಕೆ. ಯಾರು ಬೇಕಾದರೂ ಅನ್ನಲಿ ಬಿಡಿ. ನಾನೇನೂ ಬೇಡ ಎನ್ನಲಿಲ್ಲ.

ಎಂ. ಮಲ್ಲಿಕಾರ್ಜುನ ಖರ್ಗೆ: ಆದ್ದರಿಂದಲೇ ನಾನು ಹೇಳುತ್ತಿರುವುದು. ಸುಮ್ಮನೇ ಡೀವಿಯೇಟ್ ಮಾಡಿ ಮಾತುಗಳನ್ನು ಬೆಳೆಸಬಾರದು.

ಜೆ.ಹೆಚ್. ಪಟೇಲ್: ನಾನು ಅವೊತ್ತು ಹೇಳಿದ್ದನ್ನೇ ಹೇಳಿದೆ. ಆದರೆ ಅದಕ್ಕೆ ಬೇರೆ ಏನನ್ನೋ ವ್ಯಾಖ್ಯಾನ ಮಾಡಿದರು. ಆದುದರಿಂದ ಇವೊತ್ತು ಈ ವ್ಯವಸ್ಥೆಯಲ್ಲಿ ಏನಾದರೂ ಮಾಡಿ ಕಾಪಾಡಿಕೊಂಡು ಬರಬೇಕೆಂದು ಹಗಲು ರಾತ್ರಿ ಯೋಚನೆ ಮಾಡಿ ಇಂಗ್ಲೀಷ್ ಬಲ್ಲವರು, ದುಡ್ಡು ಉಳ್ಳವರು ಮತ್ತು ಮೇಲ್ಜಾತಿಯವರು. ಈ ಮೂರು ಕಾಂಬಿನೇಷನ್ ಏನಿದೆ this is most dangerous combination and they will never allow this country to grow. They don't want this country to grow. They don't. ಅದರ ರಹಸ್ಯವನ್ನು ತಿಳಿದುಕೊಳ್ಳಿರಪ್ಪ, ನಾವೆಲ್ಲಾ ಸೇರಿ ಕೆಲಸ ಮಾಡೋಣ ಎಂದು ಹೇಳಿದರೆ ಅದನ್ನು ಯಾರೂ ಮಾಡಲಿಲ್ಲ. ಅದರ ಬದಲು ಮಕ್ಕಳಾಟಿಕೆ ಮಾಡಿದರು. ಇನ್ನಾದರೂ ಕೂಡ ಆ ರಿತಿ ಮಾಡಬಾರದು.

ಉತ್ತರ ಪ್ರದೇಶದ ಸುಮಾರು 65 ಸಾವಿರ ಹಳ್ಳಿಗಳಲ್ಲಿ ಶಾಲೆ ಇಲ್ಲ. ಕುಡಿಯುವುದಕ್ಕೆ ನೀರೂ ಕೂಡ ಇಲ್ಲ. ಹೀಗಿದ್ದರೂ ನಾವು ಹೇಳಿಕೊಳ್ಳುತ್ತೇವೆ, ಮೇರಾ ಭಾರತ್ ಮಹಾನ್ ಹೈ ಎಂದು. ತಂದಿರುವ ಸಾಲಕ್ಕೆ ಬಡ್ಡಿ ಕಟ್ಟುವುದಕ್ಕೂ ಕೂಡ ಆಗುತ್ತಿಲ್ಲ. That is how we are trapped in a financial-cum-economic trap. ಇಂಡೋನೇಶಿಯಾದ ಹಣ ಒಂದು ಡಾಲರ್‌ಗೆ 4 ಸಾವಿರ ಇದ್ದದ್ದು ಈಗ 16 ಸಾವಿರಕ್ಕೆ ಬಂದಿದೆ. ಇದರ ಜೊತೆಗೆ ಸಂಪತ್ತುಳ್ಳ ದೇಶಗಳ ಕಿರಿಕ್ ಬೇರೆ. ಅವರು ಸಣ್ಣವರನ್ನು ನುಂಗಿಕೊಳ್ಳುತ್ತಾರೆ. ಅಂದರೆ

ಖರ್ಗೆಯವರು ಹೇಳಿದಂತೆ ದೊಡ್ಡ ಮೀನು ಸಣ್ಣ ಮೀನನ್ನು ನುಂಗಿದ ಹಾಗೆ. ಅದರ ಅರಿವು ನಮಗಿಲ್ಲ. ಇದೆಲ್ಲದರ ಸಂಗಡ ನಮ್ಮ ದೇಶದ ಒಳಗಡೆ ಇರತಕ್ಕಂಥ ಅಂತರ್ಗತ ಸಂಚು ಬೇರೆ. ಉದಾಹರಣೆಗೆ ನಮ್ಮ ಕೈಗೆ ಮುಳ್ಳು ಒಳಹೊಕ್ಕಿದ್ದರೆ ಆ ಮುಳ್ಳನ್ನು ಹೊರಹಾಕುವುದಕ್ಕೆ ಆಂಟಿಬಾಡಿ ಎನ್ನುತ್ತಾರೆ. ಆ ಮುಳ್ಳನ್ನು ಹೊರಹಾಕದಿದ್ದಲ್ಲಿ ರಕ್ತದಲ್ಲಿ ಕೀವು ಬರುತ್ತದೆ. ಹೀಗಾಗಿ ಆ ಮುಳ್ಳನ್ನು ಹೊರಹಾಕಲೇಬೇಕಾಗುತ್ತದೆ. ಆ ರೀತಿಯಲ್ಲಿ ನೀವು ಎಲ್ಲಾದರೂ ಒಂದು ಕಡೆ ಈ ದೇಶದ ವ್ಯವಸ್ಥೆಯಲ್ಲಿ ಸಿಕ್ಕಿಹಾಕಿಸಿದರೆ ನಿಮ್ಮನ್ನು ತೆಗೆಯುವುದಕ್ಕೆ ನಿಮ್ಮವರನ್ನೇ ಉಪಯೋಗಿಸಿಕೊಳ್ಳುತ್ತಾರೆ.

ನಿಮ್ಮವರಿಂದಲೇ ನೀವು ರಸಾತಲಕ್ಕೆ ಹೋಗುತ್ತೀರಿ. ಅವರು ಬರೇ ಬ್ರಾಹ್ಮಣರಲ್ಲ, ದ್ವಿಜಶಕ್ತಿ, ಇದರಲ್ಲಿ ಎಲ್ಲರೂ ಇರುತ್ತಾರೆ. ಆ ವ್ಯವಸ್ಥೆಯನ್ನು ಕಾಪಾಡಿಕೊಂಡು ಉಳಿಸಿಕೊಂಡು ಹೋಗಬೇಕು ಎನ್ನತಕ್ಕಂಥ ಜನರ ಸಂಚಿನಲ್ಲಿ ಎಲ್ಲಾ ಕ್ಯಾಪಿಟಲಿಸ್ಟ್‌ಗಳಿದ್ದಾರೆ, ಎಲ್ಲಾ ಪ್ರೆಸ್‌ಗಳ ಮಾಲೀಕರಿದ್ದಾರೆ, ಬರೆಯುವವರೂ ಇದ್ದಾರೆ ಮತ್ತು ಅದನ್ನು ತಿಳಿದುಕೊಳ್ಳುವವರೂ ಕೂಡ ಇದ್ದಾರೆ. ಇಲ್ಲ ಎಂದು ಹೇಳುವುದಿಲ್ಲ. ಆದುದರಿಂದ ನಾನು ಹೇಳುವುದೇನೆಂದರೆ, ಆ ವ್ಯವಸ್ಥೆ ಬಗ್ಗೆ ಮಾತನಾಡುವಾಗ ಯಾವುದೋ ಪರ್ಟಿಕ್ಯುಲರ್ ಕಮ್ಯುನಿಟಿ ಬಗ್ಗೆ ಮಾತನಾಡಿದೆ ಎಂದು ಹೇಳುವುದು ಸರಿಯಲ್ಲ.

(ವಿಧಾನಸಭೆ ಕಲಾಪ, ಜನವರಿ 27, 1998)

## ಪಟೇಲರ ಹಣೆಯಲ್ಲಿ ವಿಭೂತಿ; ಕುಂಕುಮ!

ಶಾಸಕಾಂಗದ ಉಭಯ ಸದನಗಳಲ್ಲಿ ನಿತ್ಯಜೀವನದ ರಸಮಯ ಸನ್ನಿವೇಶಗಳನ್ನು ಕುರಿತು ಏನಾದರೊಂದು ಮಾತು ಬರುತ್ತಲೇ ಇರುತ್ತವೆ. ಶಾಸಕರಿಗೆ ಪರಸ್ಪರ ತಮ್ಮ ನಡೆನುಡಿ, ವೇಷ-ಭೂಷಣ, ಹವ್ಯಾಸ, ಅತಿರೇಕದ ಗುಣಗಳು, ಒಳ್ಳೆಯತನ, ಸಣ್ಣತನ, ದೇವರು-ದಿಂಡರಲ್ಲಿ ಆಸಕ್ತಿ ಇವೇ ಮೊದಲಾದ ಮನದೊಳಗಿನ ಭಾವನೆಗಳನ್ನು ವ್ಯಕ್ತಪಡಿಸಲು ಇದು ಸುಸಂದರ್ಭ. ಸಾಮಾನ್ಯವಾಗಿ ಸಭಾಧ್ಯಕ್ಷರಾಗಲೀ, ಸಭಾಪತಿಗಳಾಗಲೀ ಇಂತಹ ಸರಸ ಸಂದರ್ಭಗಳನ್ನು ಮೊಟಕು ಮಾಡುವುದಿಲ್ಲ. ಲಘು ಹಾಸ್ಯವನ್ನು ಜೀವನದ ಒಂದು ಅಂಗ ಎಂದು ತಿಳಿದಿದೆ ನಮ್ಮ ಸದನ.

ನಗೆ ಚಾಟಿಕೆಯ ಸಂದರ್ಭಗಳಲ್ಲಿ ಪಟೇಲರದೇ ಮೇಲುಗೈ. ತೀರಾ ಸಹಜವಾಗಿ ನಗೆ ಚೆಲ್ಲುವುದು ಅವರ ಗುಣ. ಮಾತನಾಡುವಾಗ ತಾವೇ ಸ್ವತಃ ಕಡಿಮೆ ನಕ್ಕು, ಉಳಿದವರು ಉರುಳುರುಳಿ ನಗುವಂತೆ ಮಾಡುತ್ತಿದ್ದರು ಪಟೇಲರು.

ನಮ್ಮ ಸಮಾಜದ ಆಚಾರ ವಿಚಾರಗಳಲ್ಲಿ ಆಮೂಲಾಗ್ರ ಬದಲಾವಣೆ ಆಗಬೇಕು ಎಂದು ಜೀವನದುದ್ದಕ್ಕೂ ಉಪದೇಶ ಮಾಡಿದವರು ಪಟೇಲರು. ದೇವರು ದಿಂಡರು ಮನೆಯಲ್ಲಿರಲಿ; ಜಾತಿಯ ಬಹಿರಂಗ ಪ್ರದರ್ಶನತರವಲ್ಲ

ಎಂಬುದು ಇವರ ವಾದ. ಇಂತಹ ಪಟೇಲರೇ ಜೀವಿತ ಕಾಲದ ಸಂಧ್ಯಾ ದಿನಗಳಲ್ಲಿ ರಾರಾಜಿಸುವಂತೆ ಹಣೆ ತುಂಬಾ ವಿಭೂತಿ, ಕುಂಕುಮ, ಗಂಧ, ಬೊಟ್ಟು, ಚಂದನ ಧರಿಸಿದರೆ ಹೇಗಿರುತ್ತೆ? ಇದು ಸದನ ಕಂಡ ಒಗಟು.

## ಪ್ರಳಯ: ಪಟೇಲರ ಹಣೆಯಲ್ಲಿ ಕುಂಕುಮ!

ವಾಟಾಳ್ ನಾಗರಾಜ್: ನಮ್ಮ ಮುಖ್ಯಮಂತ್ರಿ ಜೆ.ಹೆಚ್. ಪಟೇಲರ ನಡೆ, ನುಡಿ, ಅವರ ನಂಬಿಕೆ, ಆಚಾರ, ವಿಚಾರ, ಅವರ ತತ್ವಸಿದ್ಧಾಂತಗಳು ಇವೇ ಮೊದಲಾದ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ ಈಗ ನಮ್ಮ ದೇಶದಲ್ಲಿ ಪ್ರಳಯವೇ ಆಗಿ ಬಿಟ್ಟಿದೆ.

ಒಬ್ಬ ಶಾಸಕರು: ಹಾಗಂದರೆ ಏನು ಸ್ವಾಮಿ?

ವಾಟಾಳ್ ನಾಗರಾಜ್: ಪ್ರಳಯ ಅಂದರೆ ಭೂಮಿ ಸೀಳಬೇಕಾಗಿಲ್ಲ. ಪ್ರವಾಹ ಬರಬೇಕಾಗಿಲ್ಲ. ನಾವು ನೋಡುತ್ತ, ಕೇಳುತ್ತ ಬಂದಿದ್ದ ಕೆಲವು ಘಟನೆಗಳು ನಮಗರಿವಿಲ್ಲದಂತೆ ಬದಲಾದರೆ ಅದೇ ಪ್ರಳಯ.

ಉದಾಹರಣೆಗೆ, ಕಾಂಗ್ರೆಸ್ ಪಕ್ಷದ ಪ್ರಚಾರಕ್ಕಾಗಿ ಶ್ರೀಮತಿ ಸೋನಿಯಾ ಗಾಂಧಿಯವರು ಬಂದಿದ್ದು ಒಂದು ರೀತಿಯ ಪ್ರಳಯ. ಕುಮಾರಿ ಜಯಲಲಿತ ಬಿ.ಜೆ.ಪಿ. ಜೊತೆ ಸೇರಿರುವುದು, ಅದೂ ಒಂದು ರೀತಿಯ ಮಹಾ ಪ್ರಳಯವೆ.

ಮಾನ್ಯ ಮಾಜಿ ಪ್ರಧಾನಮಂತ್ರಿಯವರು ಎಂದೂ ದೇವರನ್ನು ಬಿಟ್ಟು, ಗಳಿಗೆ, ಗುಳಿಗೆಯನ್ನು ಬಿಟ್ಟು ನಾಮಪತ್ರವನ್ನು ಹಾಕಿದವರಲ್ಲ. ಆದರೆ ಅವರು ರಾಹುಕಾಲದಲ್ಲಿ ತಮ್ಮ ನಾಮಪತ್ರವನ್ನು ಹಾಕಿದರು. ಇದು ಒಂದು ರೀತಿಯ ಪ್ರಳಯ ಅಲ್ಲವೇ?

ದೇವರ ಪ್ರಾರ್ಥನೆಯನ್ನೇ ಮಾಡದೆ ಇರತಕ್ಕಂತಹ ಶ್ರೀಮಾನ್ ಜೆ.ಹೆಚ್. ಪಟೇಲರ ಮನೆಯಲ್ಲಿ ಪೂಜೆ; ಇದು ಪ್ರಳಯವಲ್ಲವೆ?

ಪಟೇಲರು ಎಂದೂ ಅವರ ಹಣೆಗೆ ಕುಂಕುಮ ಇಟ್ಟುಕೊಂಡಿರಲಿಲ್ಲ. ಅಂತಹವರಲ್ಲಿ ಯಾರೋ ಕೆಲವರು ಅವರ ಸುತ್ತಾ-ಮುತ್ತಾ ಸೇರಿಕೊಂಡು ಸ್ವಾಮಿ, ನೀವು ದೇವಸ್ಥಾನಕ್ಕೆ ಹೋಗಿ, ಹಣೆಗೆ ದೇವರ ಕುಂಕುಮ ಇಟ್ಟುಕೊಳ್ಳಿ, ಪೂಜೆ ಮಾಡಿಸಿ, ಮಂಗಳಾರತಿ ಮಾಡಿಸಿ, ಅಕ್ಷತೆ ಹಾಕಿಸಿಕೊಳ್ಳಿ, ಶಬರಿ ಮಲೆಗೆ ಹೋಗಿ ಎಂದು ಹೇಳಿದರು. ಅವರಿವರ ಒತ್ತಾಯಕ್ಕೆ ಕಟ್ಟುಬಿದ್ದು ಹೋಗಿ ಬಂದರು. ಇದೂ ಪ್ರಳಯವೇ.

ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್: ಶ್ರೀಮಾನ್ ವಾಟಾಳ್ ನಾಗರಾಜ್ ಅವರು ಸದನದಲ್ಲಿ ಇಷ್ಟು ವ್ಯವಸ್ಥಿತವಾಗಿ ಮಾತನಾಡುತ್ತಿರುವುದು, ಇದು ಒಂದು ರೀತಿಯ ಪ್ರಳಯವಲ್ಲವೇ ಸ್ವಾಮಿ?

**ವಾಟಾಳ್ ನಾಗರಾಜ್:** ಮಾನ್ಯ ಅಧ್ಯಕ್ಷರೆ, ನಮ್ಮ ರಾಜ್ಯದ ಹಿರಿಯ ಮುಖಂಡರಾದಂತಹ ಶ್ರೀಮಾನ್ ರಾಮಕೃಷ್ಣ ಹೆಗಡೆಯವರು, ಭಾರತೀಯ ಜನತಾ ಪಕ್ಷ ಸರಿ ಇಲ್ಲ, ಅದು ಜಾತಿ ವಾದಿ, ಈ ಪಕ್ಷ ಬರಬಾರದು ಎಂದು ಹಗಲು-ರಾತ್ರಿ ನಿರಂತರವಾಗಿ ಮಾತನಾಡಿದಂತಹವರು ಇವತ್ತು ಬಿ.ಜೆ.ಪಿ. ಜೊತೆ ಸೇರಿಕೊಂಡಿರುವುದನ್ನು ನೋಡಿದರೆ, ಇದು ಒಂದು ರೀತಿಯ ಪ್ರಳಯ, ಶ್ರೀ ಬಿ.ಎಸ್. ಯಡಿಯೂರಪ್ಪನವರು ಮತ್ತು ಡಾ: ಜೀವರಾಜ ಆಳ್ವರವರು ಹೇಗಿದ್ದರು ಅಂದರೆ, ಒಬ್ಬರಿಗೊಬ್ಬರು ಕಟ್ಟಾ ವೈರಿಗಳು ಹಾಗೆ ಇದ್ದರು. ಆದರೆ ಇವತ್ತಿನ ದಿವಸ ಇವರಿಬ್ಬರ ಆಲಿಂಗನ, ಇದು ಒಂದು ರೀತಿಯ ಪ್ರಳಯ.

ಏನ್ ಸ್ವಾಮಿ ಪಟೇಲರೆ, ಏನಂತೀರ?

**ಜೆ.ಹೆಚ್. ಪಟೇಲ್:** ನಗುವೇ ನನ್ನ ಉತ್ತರ.

(ಸದನದಲ್ಲೂ ಅಷ್ಟೆ ನಗು, ನಗು)

(ವಿಧಾನಸಭೆ ಕಲಾಪ, ಜನವರಿ 27, 1998)

### ಆದರ್ಶ ರಾಜಕಾರಣಿ

ಸ್ನೇಹಜೀವಿ ಪಟೇಲರು ಆದರ್ಶ ರಾಜಕಾರಣಿ. ತಮ್ಮ ಸಚಿವ ಸಂಪುಟದ ಎಲ್ಲ ಮಂತ್ರಿಗಳಿಗೂ, ಅದರಲ್ಲಿಯೂ ಪ್ರಮುಖವಾಗಿ ಕಿರಿಯರಿಗೆ ಅವರು ಕೊಡುತ್ತಿದ್ದ ಗೌರವ ಮತ್ತು ಸ್ವಾತಂತ್ರ್ಯ ಸಂಸದೀಯ ಇತಿಹಾಸದಲ್ಲಿಯೇ ಒಂದು ಅಧ್ಯಾಯ. ಮುಖ್ಯಮಂತ್ರಿ ಆಗಿದ್ದ ಪಟೇಲರು ಜನರನ್ನು ಮೆಚ್ಚಿಸಲು ಒಂದು ದಿನವಾದರೂ "ತಾವು ಕಟ್ಟಾ ಪ್ರಜಾತಂತ್ರವಾದಿ" ಎಂದು ಹೇಳಿಕೊಂಡವರಲ್ಲ. ಎಂದೂ ಸಹಿತ ನಾನು ಮಾಡಿದೆ ಎಂದು ಮೆರೆದವರಲ್ಲ; ಎಲ್ಲವೂ ನಾನೇ ಎಂದವರಲ್ಲ. I believe in my team. It is collective work of my team ಎಂದೇ ಹೇಳುತ್ತಿದ್ದರು. ಕೂಡು ಜವಾಬ್ದಾರಿಯ ಕಾರ್ಯ ನಿರ್ವಹಣೆಯ ಸಮಾಜವಾದಿ ತತ್ವದ ಮೂಲ ಸ್ವರೂಪ ಎಂದು ತೋರಿಸಿದ ಕ್ರಿಯಾಶೀಲ ತತ್ವವಾದಿ ಈತ. ರಾಷ್ಟ್ರ ಕಂಡ ಅಪೂರ್ವ ರಾಜಕಾರಣಿ ಪಟೇಲರು.

(ಪಿ.ಜಿ.ಆರ್. ಸಿಂಧ್ಯಾ (ಕನಕಪುರ), ವಿಧಾನಸಭೆ, ಫೆಬ್ರವರಿ 27, 2001)

### ನಿಜ ಹೇಳುತ್ತಿದ್ದ ಹಾಸ್ಯ ಜೀವಿ

ಸಮಾಜವಾದಿ ಧುರೀಣ ಜೆ.ಹೆಚ್. ಪಟೇಲರು ಸದನದಲ್ಲಿ ಎಂತಹದೇ ಗಹನವಾದ ವಿಷಯವಿದ್ದರೂ ಸವಿರು ಹಾಸ್ಯದಿಂದ ಸುಮಧುರ ವಾತಾವರಣ ಕಲ್ಪಿಸುತ್ತಿದ್ದರು ಎಂಬುದು ನಿಜ. ಆದರೆ ಈ ಎಲ್ಲ ಸಂದರ್ಭಗಳಲ್ಲಿಯೂ ಅವರು ಹಾಸ್ಯದೊಂದಿಗೆ ಸತ್ಯವನ್ನೇ ನುಡಿಯುತ್ತಿದ್ದರು. ನಿಜವನ್ನೇ ಹೇಳುತ್ತಿದ್ದರು. ಇದನ್ನು ನಾವಾರೂ ಮರೆಯುವಂತಿಲ್ಲ. ನಿಶ್ಚಲ ಸತ್ಯ ಪ್ರಜ್ಞೆ ಅವರದು.

ಅವರ ಸತ್ಯಶೀಲ ಹಾಸ್ಯಕ್ಕೆ ಒಂದು ಉದಾಹರಣೆ. ವಿಶ್ವಸುಂದರಿ ಸ್ಪರ್ಧೆ ವಿಷಯ ಬಂದಾಗ ಅವರು ಶಾಸಕ ಮಿತ್ರರೊಬ್ಬರಿಗೆ ಹೇಳಿದ ಮಾತು ಹೀಗಿತ್ತು.

ಒಬ್ಬ ವಿಶ್ವಸುಂದರಿಯನ್ನು ನೀವು ವಿಶ್ವಸುಂದರಿಯಾಗಿ ನೋಡಬೇಕೇ ವಿನಹ ಆಕೆಯನ್ನು ಎಕ್ಸರೇಯಲ್ಲಿ ನೋಡಬಾರದು.

(ಸಿ. ಬೈರೇಗೌಡ (ವೇಮಗಲ್), ವಿಧಾನಸಭೆ, ಫೆಬ್ರವರಿ 27, 2001)

### ಮಹಿಳೆಯರ ಬಗೆಗೆ ಗೌರವ

"ಪಟೇಲರೇ ಹೆಣ್ಣಿನ ಬಗೆಗೆ ನಿಮ್ಮ ಸ್ವಚ್ಛಂದ ಅಭಿಪ್ರಾಯ ಕುರಿತು ವಿಧವಿಧವಾದ ಟೀಕೆ ಕೇಳಿ ಬರುತ್ತದೆ. ಆದರೆ ಸದನದಲ್ಲಿ ನಮ್ಮೆಲ್ಲರನ್ನೂ ಸೋದರಿಯರಂತೆ ಕಾಣುವ ನಿಮ್ಮನ್ನು ಕಂಡು ನನಗೆ ಗೌರವ ಎನಿಸುತ್ತಿದೆ"- ಹೀಗೆ ಒಮ್ಮೆ ನೇರವಾಗಿ ನನ್ನ ಅನಿಸಿಕೆ ತಿಳಿಸಿದೆ.

ಥಟ್ಟನೆ ಪಟೇಲರು ಉತ್ತರವಿತ್ತರು.

ನೋಡವ್ವಾ ತಂಗೀ....... "No Women is ugly. Some are more beautiful than others......."

(ಶ್ರೀಮತಿ ಸರಿತಾ ಕುಸುಮಾಕರ ದೇಸಾಯಿ (ವಿಧಾನ ಪರಿಷತ್) ಫೆಬ್ರವರಿ 27, 2001)

### ಧೈರ್ಯವಂತ ಸಾಹಸಿಗ

ಪಟೇಲರ ಬಗೆಗೆ ಒಂದೇ ಮಾತಿನಲ್ಲಿ ಹೇಳಬಹುದಾದರೆ - "He was a philosopher king", ಭಾರಿ ಧೈರ್ಯವಂತ, ಸಾಹಸಿಗ, ಏಳು ಹೊಸ ಜಿಲ್ಲೆಗಳನ್ನು ಹೇಗೆ ಮಾಡಿದರೋ, ಅದೇ ರೀತಿ ಯತ್‌ಕಚಿತ್ ರೀತಿಯಲ್ಲಿ ಅತಿ ಸಾಮಾನ್ಯನಂತೆ, ಪರಿಶಿಷ್ಟ ಜಾತಿಗೆ ಸೇರಿದ MLA, MLC, ಎರಡೂ ಆಗಿರದ ನನ್ನನ್ನು ಮಂತ್ರಿಯಾಗಿ ನೇಮಿಸಿಕೊಂಡ ಧೀರ ನಾಯಕ ಈತ.

(ಕೆ.ಬಿ. ಶಾಣಪ್ಪ (ವಿಧಾನ ಪರಿಷತ್) ಫೆಬ್ರವರಿ 27, 2001)

### ಆದರ್ಶ ವೇದಾಂತಿ

ಜೆ.ಹೆಚ್. ಪಟೇಲರು ಮುಖ್ಯಮಂತ್ರಿಯಾಗಿದ್ದರು ಎಂದು ಹೇಳುವುದಕ್ಕಿಂತ ಹೆಚ್ಚಾಗಿ ಅವರು ಸಮಾಜದ ಸುಧಾರಣೆಗಾಗಿ ಶ್ರಮಿಸಿದ ವ್ಯಕ್ತಿ ಎಂದು ಹೇಳಿದರೆ ಸರಿಯಾದೀತು. ವಿರೋಧ ಪಕ್ಷದಲ್ಲಿದ್ದಾಗ ಭ್ರಷ್ಟಾಚಾರದ ವಿರುದ್ಧ ಸಮರ್ಥ ಹೋರಾಟ ನಡೆಸಿದವರು. ಇಷ್ಟಾದರೂ ಸಹಿತ ಪಟೇಲರು ತಮ್ಮ ತತ್ವ ಆದರ್ಶಗಳನ್ನು ಹಲವಾರು ಕಾರಣಗಳಿಗಾಗಿ ಬದಿಗಿಡಬೇಕಾಯಿತು. ನಿಜಕ್ಕೂ ಅವರೊಬ್ಬ ಫಿಲಾಸಫರ್.

(ಯು.ಆರ್. ಸಭಾಪತಿ (ಉಡುಪಿ), ವಿಧಾನಸಭೆ, ಆಗಸ್ಟ್ 7, 1996)

### ಏಳು ಜಿಲ್ಲೆಗಳ ಜನಕ

ರಾಜ್ಯದ ಹಿತದೃಷ್ಟಿ ಮತ್ತು ಆಡಳಿತದಲ್ಲಿ ಸಮನ್ವಯತೆಯ ದೃಷ್ಟಿಯಿಂದ ಒಂದೇ ದಿನದಲ್ಲಿ ಏಳು ಜಿಲ್ಲೆಗಳನ್ನು ಪುನರ್‌ರಚನೆ ಮಾಡಿದ ಜೆ.ಹೆಚ್. ಪಟೇಲರಿಗೆ ಯಾರ್‍ಯಾರೂ ಸಾಟಿ ಇಲ್ಲ ಎಂದೇ ನನ್ನ ಅನಿಸಿಕೆ. ಜಿಲ್ಲೆಗಳ ಪುನರ್‌ವಿಂಗಡಣೆ ಬಲು ಪ್ರಯಾಸದ ಕೆಲಸ. ಜೇನು ಹಟ್ಟಿಗೆ ಕೈಹಾಕಿದಂತೆ. ಈ ವಿಷಯದಲ್ಲಿ ಪಟೇಲರು ಧೀರ ಆಡಳಿತಗಾರ.

(ಬಿ.ಎಸ್. ಹೊರಟ್ಟಿ (ವಿಧಾನ ಪರಿಷತ್) ಫೆಬ್ರವರಿ 27, 2001)

### ಸಾಹಸಿ ರಾಜಕಾರಣಿ

ಅವರು ರಾಜಕಾರಣ ಮಾಡಲಿಲ್ಲ ಎಂದರೆ ನಾನು ಒಪ್ಪುವುದಿಲ್ಲ. ಯಾವ ಸಮಯಕ್ಕೆ ಏನು ಮಾಡಬೇಕು ಅದನ್ನು ಚತುರತೆಯಿಂದ ಮಾಡುತ್ತಿದ್ದ ಸಾಹಸಿ ರಾಜಕಾರಣಿ ಇವರು.

ಅವತ್ತು ಅವರು ಮುಖ್ಯಮಂತ್ರಿ ಆಗುವ ದಿನ ಸುಮ್ಮನೆ ಹೋಗಿ ಮಲಗಿಕೊಂಡಿರಲಿಲ್ಲ. ನನ್ನನ್ನು ಮುಖ್ಯಮಂತ್ರಿಯನ್ನಾಗಿ ಮಾಡಲಿಲ್ಲ ಎಂದರೆ ಮುಂದಿನ ಪರಿಸ್ಥಿತಿ ಎದುರಿಸಬೇಕಾಗುತ್ತೆ. ಹುಷಾರಾಗಿರಿ ಎಂದು ಹೇಳಿಯೇ ಮಲಗಿಕೊಂಡಿದ್ದರು.

(ಬಸವರಾಜ ಬೊಮ್ಮಾಯಿ (ವಿಧಾನ ಪರಿಷತ್) ಫೆಬ್ರವರಿ 27, 2001)

### ಧೈರ್ಯವಾಗಿ ನಿಜ ಹೇಳಿದಾತ

ಸಮಾಜದ ನೂರೆಂಟು ದೋಷಗಳನ್ನು ಅರಿತೂ, ಅರಿತೂ ರಾಜಕಾರಣಿಗಳು ಜನರನ್ನು ಮೆಚ್ಚಿಸಲು ಆಡುವ ಮಾತು ಒಂದಿದೆ. ಇದೇ ಪಾನನಿಷೇಧ. ಸತ್ಯವನ್ನು ಹೇಳಿ, ಸಮಾಜದ ನ್ಯೂನತೆಯನ್ನು ಧೈರ್ಯವಾಗಿ ಬಿಚ್ಚಿಟ್ಟ ರಾಜಕಾರಣಿ ಪಟೇಲರೊಬ್ಬರೇ.

ಇವರಲ್ಲಿ ಆ ಜಾತಿ - ಈ ಜಾತಿ ಎಂಬ ಬೇಧವೇ ಇರಲಿಲ್ಲ. ಹೃದಯವಂತಿಕೆ ಯಾರಲ್ಲಿದೆಯೋ ಅವರೆಲ್ಲಾ ಪಟೇಲರ ಪಾರ್ಟಿ ಎನ್ನುವಷ್ಟು ಸಹಜ ನಡವಳಿಕೆ ಅವರಲ್ಲಿತ್ತು.

(ಕೆ. ಶ್ರೀನಿವಾಸಗೌಡ (ಕೋಲಾರ) ವಿಧಾನಸಭೆ, ಫೆಬ್ರವರಿ 27, 2001)

### ಪಕ್ಷಾತೀತವಾಗಿ ದುಡಿದಾತ

ಶಾಸಕನಾಗಿ ಆಯ್ಕೆಯಾದ ಕೂಡಲೇ ಎಲ್ಲರಿಗೂ ಸಂಸದೀಯ ವೇದಿಕೆಯಲ್ಲಿ ಪರಿಣಾಮಕಾರಿಯಾಗಿ, ಪ್ರಭಾವಶಾಲಿಯಾಗಿ ಮಾತನಾಡಲು ಸಾಧ್ಯವಾಗುವುದಿಲ್ಲ. ಹೀಗೆ ಧಾವಿಸಿ ಮಾತನಾಡುವುದೂ ತಪ್ಪು. ಇದೊಂದು ಮುಜುಗರದ ಪರಿಸ್ಥಿತಿ.

ಪಟೇಲರು ಇಂತಹ ಸಂದರ್ಭಗಳಲ್ಲಿ ಹೃದಯವಂತಿಕೆಯನ್ನು ತೋರುತ್ತಿದ್ದರು. ಸಮೀಪ ಕರೆದು ಮಾತನಾಡಲು ಪ್ರೋತ್ಸಾಹಿಸುತ್ತಿದ್ದರು. ತಿಳುವಳಿಕೆ ಕೊಡುತ್ತಿದ್ದರು. ಪಕ್ಷಾತೀತವಾಗಿ ಕೆಲಸ ಮಾಡಿಕೊಡುತ್ತಿದ್ದರು. ಈ ಗುಣವಂತೂ ಪಟೇಲರ ಬಹು ದೊಡ್ಡ ಸಂಪತ್ತು.

(ಸಿ. ಚೆನ್ನಿಗಪ್ಪ (ಕೊರಟಗೆರೆ) ವಿಧಾನಸಭೆ, ಫೆಬ್ರವರಿ 27, 2001)

# 25

# ಸದನದಲ್ಲಿ ಕವನ, ತೀರ್ಪು, ವಿಮರ್ಶೆ

ಕೂಡಲು ಕೋಣೆ ಇಲ್ಲದ,
ನೋಡಲು ಫೈಲು ಇಲ್ಲದ,
ಮಾಡಲು ಕೆಲಸವಿಲ್ಲದ ಈ
ಸಚಿವರ ದಂಡು, ಒಂದು ಹಿಂಡು

- ಎಚ್.ಕೆ. ಪಾಟೀಲ

ಕಥೆ ಹೇಳಿ, ಮಾತ ಮರುಳು ಮಾಡಿ,
ಕೊನೆಗೆ ನೀವು ಸಾಧಿಸಿದ್ದೇನು?

- ಖರ್ಗೆ

"ತಿನ್ನದಿದ್ದರೂ ತೇಗುತಿರುವ
ಒದೆಯದೆ, ಹಾಯದೆ, ಕುರಿಗಳು ಸಾರ್"
ನಿಸ್ಸಾರರು ಹೇಳಿದ್ದು ನಿಜವಾಯ್ತಲ್ಲಾ ಪಟೇಲರೇ?

- ವಾಟಾಳ್ ನಾಗರಾಜ್

ನಿಮ್ಮ ಚಿಂತನೆ ಸಮಸ್ಯೆಯ ಮೂಲ ತಿಳಿಯುವ
ಪ್ರಯತ್ನವಾಗಬೇಕು; ಗಾಯಕ್ಕೆ ಅಂಟಿಸುವ
"ಬ್ಯಾಂಡ್ಐಡ್" ಫಿಲಾಸಫಿ ಆಗಬಾರದು

- ಸುರೇಶ್‌ಕುಮಾರ್

"ಬೇರೆಯವರು ಕುದುರೆ; ಪಟೇಲರು ಲಾಳ"

- ನಂಜೇಗೌಡ

ಚೆಂದದ ಚಿಂತನೆಯ ಜಾಣ ಈತ, ಪಟೇಲ
- ಶಂಕರಲಿಂಗೇಗೌಡ

ಅಡಿಗರು ಹೇಳಿರುವಂತೆ "........... ಕಟ್ಟುವೆವು ನಾವು
ಹೊಸ ನಾಡೊಂದನ್ನು, ರಸದ ಬೀಡೊಂದನ್ನು....."
- ಪಟೇಲ್

## ಪಟೇಲ್ ಆಡಳಿತ : ಹೆಚ್.ಕೆ. ಪಾಟೀಲರ ಕವನ

**ಹೆಚ್.ಕೆ. ಪಾಟೀಲ್ (ಪ್ರತಿಪಕ್ಷದ ನಾಯಕರು):** ಪಟೇಲರ ನಾಯಕತ್ವದಲ್ಲಿನ ರಾಜ್ಯ ಸರ್ಕಾರಕ್ಕೆ ಜನರ ಬೆಂಬಲ ಇಲ್ಲ, ಮತ್ತೊಂದು ಕಡೆ ಧನ ಬಲ ಇಲ್ಲ. ಎಲ್ಲವೂ ಸಹಾ ಸಾಲದ ಮೇಲೆಯೇ ಅವಲಂಬಿತ. ಮನೋಬಲ ಸಹಿತ ಇಲ್ಲ. ನೀವು ಆಂತರಿಕ ಜಗಳದಿಂದ ಕಿತ್ತಾಟದಿಂದ ತತ್ತರಿಸಿ ಹೋಗಿದ್ದೀರಿ. ಇವತ್ತು ನಿರ್ಜೀವ ಸರ್ಕಾರವನ್ನು ಇಟ್ಟುಕೊಂಡಿದ್ದೀರಿ.

ರಾಜ್ಯಪಾಲರ ಭಾಷಣಕ್ಕೆ ವಂದನೆ ನಿರ್ಣಯವನ್ನು ಸಲ್ಲಿಸುವ ಈ ಸಂದರ್ಭದಲ್ಲಿ ನಾನೇ ರಚಿಸಿದ ಕವನವೊಂದರ ಕೆಲವು ಸಾಲುಗಳನ್ನು ಓದುವುದಕ್ಕೆ ತಮ್ಮ ಪರವಾನಗಿಯನ್ನು ಕೇಳುತ್ತೇನೆ.

"ಈ ರಾಜ್ಯ ಸಚಿವ ಸಂಪುಟದಲ್ಲಿ
ಮಾಡಲು ಕೆಲಸವಿಲ್ಲದ,
ಕೂಡಲು ಕೋಣೆ ಇಲ್ಲದ,
ನೋಡಲು ಫೈಲುಗಳು ಇಲ್ಲದ,
ಆದೇಶಿಸಲು ಕಾರ್ಯದರ್ಶಿ ಇಲ್ಲದ,
ಕಾನೂನಾತ್ಮಕ ಜವಾಬ್ದಾರಿಯನ್ನು ನಿರ್ವಹಿಸಲು ಮನಸ್ಸೇ
ಇಲ್ಲದ ಸಚಿವರ ದಂಡು, ಒಂದು ಹಿಂಡಾಗಿದೆ.
ಪ್ರತೀಕಾರದಲ್ಲಿ ಸುಡುತ್ತಿರುವ,
ಅಹಂಕಾರದಲ್ಲಿ ಬೇಯುತ್ತಿರುವ
ದ್ವೇಷ, ಮತ್ಸರದಲ್ಲಿ ಬಸಾಲೆಯಲ್ಲಿ ಬೆಂಡಿರುವ ಸಚಿವರ ಗುಂಪು.
ಇಂದು ಮಂಕಾಗಿದೆ.
ಸಂಪುಟದಲ್ಲಿ ವಿಶ್ವಾಸ ಇಲ್ಲ,
ಮಂತ್ರಿಗಳಲ್ಲಿ ಪ್ರೀತಿ ಇಲ್ಲ,
ಪರಸ್ಪರ ಗೌರವ ಇಲ್ಲ,
ಕರ್ತವ್ಯದ ಪ್ರಜ್ಞೆ ಇಲ್ಲ,
ಆದರೂ ಒಂದು ಸರ್ಕಾರ ಇದೆ.
ನಿಜ ಹೇಳಬೇಕೆಂದರೆ, ಸರ್ಕಾರದ ಅಣಕ ಇದೆ."

(ವಿಧಾನ ಪರಿಷತ್ತು, ಮಾರ್ಚಿ 27, 1999)

## ಆಡಳಿತದ ಕೀಲಿಕ್ಕೈ ಕಳೆದುಕೊಂಡ ಪಟೇಲ್ - ಸುರೇಶ್‌ಕುಮಾರ್

ಎಸ್. ಸುರೇಶ್‌ಕುಮಾರ್: ಮಾನ್ಯ ಮುಖ್ಯಮಂತ್ರಿ ಜೆ.ಹೆಚ್. ಪಟೇಲರು ಬಹಳ ಬುದ್ಧಿವಂತರು. ಅನೇಕ ವರ್ಷಗಳ ಕಾಲದ ರಾಜಕೀಯ ಅನುಭವವನ್ನು ಪಡೆದವರು. ತುರ್ತು ಪರಿಸ್ಥಿತಿಯ ಕಷ್ಟ ಕಂಡವರು. ಸೋಷಿಯಲಿಸಂ ಕನಸು ಹೊತ್ತವರು. ರಾಮ್‌ಮನೋಹರ್ ಲೋಹಿಯಾ, ಗೋಪಾಲಗೌಡರವರಂತಹವರನ್ನು ಸಮೀಪದಿಂದ ನೋಡಿದವರು. ನಿಮ್ಮ ಕಾಲದಲ್ಲಾದರೂ ಜನರಿಗೆ ಒಂದು ವಿಶ್ವಾಸ ಬರುವ ವಾತಾವರಣವು ಬರುತ್ತದೆ ಎಂದು ನಾನು ಅಂದುಕೊಂಡಿದ್ದೆ.

ಪ್ರಾಯಶಃ ನನಗನ್ನಿಸುತ್ತದೆ. ನೀವು ಜನರ ಮತಗಳನ್ನು ತೆಗೆದುಕೊಂಡು ಬಂದಮೇಲೆ, ಎಲ್ಲೋ you have lost the initiative. ಪಟೇಲರ ಇಂದಿನ ಸ್ಥಿತಿಗೆ ಅನ್ವಯಿಸುವ ಒಂದು ಉಪಮೇಯವನ್ನು ಹೇಳಲೇಬೇಕಾಗಿದೆ. ಹೇಳುತ್ತಿದ್ದೇನೆ ಕೇಳಿ.

15 ಜನ ಯುವಕರು ಜಪಾನ್ ದೇಶವನ್ನು ನೋಡುವುದಕ್ಕೆ ಹೋದರಂತೆ. ಅಲ್ಲಿನ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವ ಸಲುವಾಗಿ ಹೋಗಿದ್ದರು.

ಕಾಕತಾಳೀಯ ನ್ಯಾಯ ಅಂದರೆ, ಅಲ್ಲಿಗೆ ಹೋದವರು 15 ಜನರು. ಅವರಿಗೆ ವಸತಿಗೃಹದಲ್ಲಿ ಸಿಕ್ಕಿದ ದೊಡ್ಡ ಹಾಲಿನಂತೆ ಇರುವ ರೂಮು 15ನೇ ಮಹಡಿಯಲ್ಲಿತ್ತು.

ಜಪಾನ್ ನೋಡಲಿಕ್ಕಾಗಿಯೇ ಹೋದವರು ಬೆಳಗಾದ ಕೂಡಲೇ ಪ್ರೇಕ್ಷಣೀಯ ಸ್ಥಳಗಳಿಗೆ ಹೋದರು. ದಿನವೆಲ್ಲಾ ಅಂಥ ಸ್ಥಳಗಳಲ್ಲಿ ಕುಣಿದು, ಕುಪ್ಪಳಿಸಿ, ಎಲ್ಲಾ ಕಡೆ ಸುತ್ತಾಡಿ ರಾತ್ರಿಯ ಹೊತ್ತಿಗೆ ಲಾಡ್ಜ್‌ಗೆ ಹಿಂತಿರುಗಿದರು.

ಎಲ್ಲರಿಗೂ ನೀರಡಿಕೆ, ಹೊಟ್ಟೆ ಹಸಿವು, ದಣಿವು. ಮಲಗಿದರೆ ಸಾಕು ಎನ್ನುವ ಸ್ಥಿತಿಗೆ ತಲುಪಿದ್ದರು. ಅವರು ಲಾಡ್ಜ್‌ಗೆ ಬಂದಾಗ ಬೆಂಗಳೂರಿನ ಕರೆಂಟ್‌ನ ಸ್ಥಿತಿಯೇ ಅಲ್ಲಿಯೂ ಇತ್ತು. ಲಾಡ್ಜ್‌ನಲ್ಲಿ ಕರೆಂಟ್ ಇದ್ದಿರಲಿಲ್ಲ. ಕರೆಂಟ್ ಇಲ್ಲದ ಕಾರಣ ಲಿಫ್ಟ್ ಕೆಲಸ ಮಾಡುತ್ತಿರಲಿಲ್ಲ. ಲಿಫ್ಟ್ ಇಲ್ಲದ ಕಾರಣ 15 ಮಹಡಿಗಳನ್ನು ಹತ್ತಿ ಮೇಲಕ್ಕೆ ಹೋಗಲೇಬೇಕು.

They entered into an agreement.

ಒಂದೊಂದು ಮಹಡಿಯನ್ನು ಹತ್ತುವಾಗ ಒಬ್ಬೊಬ್ಬರು ಒಂದೊಂದು ಜೋಕ್, ಕಥೆ ಅಥವಾ ನಗುತಂದಂತ ಪ್ರಸಂಗ ಹೇಳಬೇಕು. ಅಗ್ರಿಮೆಂಟ್ ಪ್ರಕಾರವೇ ಮೊದಲನೇ ಮಹಡಿ ಹತ್ತಿದರು, ಎರಡನೇ ಮಹಡಿ ಹತ್ತಿದರು, ಮೂರನೇ ಮಹಡಿ ಹತ್ತಿದರು. ಹೀಗೇ ಒಂದೊಂದು ಮಹಡಿ ಹತ್ತುತ್ತಲೇ ಇದ್ದರು. ಒಬ್ಬೊಬ್ಬರು ಒಂದೊಂದು ಜೋಕ್ ಇಲ್ಲವೇ ಕಥೆ ಹೇಳುತ್ತಾ ಇದ್ದರು. ಒಬ್ಬ ರೋಮಾಂಚಕ ಜೋಕ್ ಹೇಳಿದರೆ, ಇನ್ನೊಬ್ಬ ಭಯಾನಕ ಕಥೆಯನ್ನು ಹೇಳಿದ. ಪತ್ತೆದಾರಿ ಕಥೆ ಹೇಳಿದ ಮತ್ತೊಬ್ಬ.

ಹೀಗೆ ಕಥೆಗಳನ್ನು ಹೇಳುತ್ತಾ ಎಲ್ಲರೂ 14ನೇ ಮಹಡಿವರೆಗೆ ಹತ್ತಿ ಬಂದರು. ಇನ್ನುಳಿದುದು 15ನೇ ಮಹಡಿ. ಆದರ ಸರದಿ ಬಂದವನು ನಾನು ಜೋಕ್ ಹೇಳಲೇ ಬೇಕೇ ಎಂದು ಉಳಿದವರನ್ನು ಪ್ರಶ್ನಿಸಿದ. ಅದನ್ನು ಕೇಳಿ ಉಳಿದ 14 ಜನರಿಗೆ ಸಿಟ್ಟು ಬಂತು. ಈತನಿಗೇನು ಕ್ಯಾತೆ? ನಾವೆಲ್ಲರೂ ಹೇಳಿಲ್ಲವೇ? ಇವನೂ ಜೋಕ್ ಹೇಳಲೇಬೇಕು ಎಂದು ಹಠತೊಟ್ಟರು.

ಅದಕ್ಕೆ 15ನೆಯವನು ನಾನು ಜೋಕ್ ಅಥವಾ ಕಥೆ ಹೇಳಿದರೆ ಕೇಳಿದ ಯಾರೂ ಕೂಡ ನನ್ನನ್ನು ಹೊಡೆಯಬಾರದು ಎಂದ. ಇದನ್ನು ಕೇಳಿದವರಿಗೆ ಅರ್ಥವಾಗಲೇ ಇಲ್ಲ. ಹೊಡೆಯುವುದಿಲ್ಲ ಎಂದರು. ನಾನು ವಾಸ್ತವಿಕವಾಗಿ ಒಂದು ಜೋಕ್ ಹೇಳಿದರೆ ಯಾರೂ ಕೂಡ ಮೂರ್ಛೆ ಹೋಗಬಾರದು ಎಂದೂ ಶರತ್ತು ಹಾಕಿದ.

ಇವನೇನೋ ದೆವ್ವದ ಕಥೆ ಹೇಳುತ್ತಿರಬಹುದು ಎಂದುಕೊಂಡು ಇಲ್ಲ, ನಾವ್ಯಾರೂ ಮೂರ್ಛೆ ಹೋಗುವುದಿಲ್ಲ ಎಂದರು.

ಹಾಗಾದರೆ ನೀವು ಹೇಳಿದಂತೆ ನನ್ನ ಕಥೆ ಹೇಳುತ್ತೇನೆ. ಅದು ಸೂಪರ್ ಜೋಕ್ ಆಗಿದೆ. ನಾವೆಲ್ಲಾ ಮಲಗುವ ಹಜಾರದ ಬೀಗದ ಕೈಯನ್ನು ಕೆಳಗಡೆಯೇ ಮರೆತು ಬಿಟ್ಟು ಬಂದಿದ್ದೇನೆ. ಇದೇ ನನ್ನ ದೊಡ್ಡ ಕಥೆ ಎಂದ.

ಮಾನ್ಯ ಪಟೇಲರೇ ನೀವೂ ಕೂಡ ನಿಮ್ಮ ಆಡಳಿತದ ಬೀಗದ ಕೈಯನ್ನು ಎಲ್ಲೋ ಮರೆತು ಬಿಟ್ಟಿದ್ದೀರಿ.

You cannot go back and trace it. ನಾನು ಈ ಮಾತನ್ನು ಬಹಳ ದುಃಖದಿಂದ ಹೇಳುತ್ತಿದ್ದೇನೆ. Not to score a debating point. ಇವೊತ್ತು ಮಾನ್ಯ ಅಧ್ಯಕ್ಷರು ಹೇಳಿದಂತೆ we have a long way to go. ಅಬ್‌ಸರ್ಡ್ ಮಾಡಿ, ಮಾತನಾಡಿ. ನಾವು ಈ ಸ್ಥಿತಿಗೆ ಬಂದಿದ್ದೇವೆ.

ನಿನ್ನೆ ಮಾನ್ಯ ಈಶ್ವರಪ್ಪನವರು ಮಾತನಾಡುವಾಗ ಒಂದು ವಿಚಾರ ಬಂತು. ಇವೊತ್ತು ನಾವು ಬ್ಯಾಂಡ್‌ಏಡ್ ಫಿಲಾಸಫಿಗೆ ಬಂದು ತಲುಪಿದ್ದೇವೆ ಎಂದು ಮಾನ್ಯ ಅಧ್ಯಕ್ಷರು ಹೇಳಿದರು. ಏನೇ ಗಾಯ ಆದರೂ ಕೂಡ ಬ್ಯಾಂಡ್‌ಏಡ್ ಹಾಕುವುದು. ಗಾಯದ ಮೇಲೆ ಬ್ಯಾಂಡ್‌ಏಡ್ ಹಚ್ಚುವುದು. ಅದನ್ನು ಬಿಟ್ಟು ಒಳಗಡೆ ಗಾಯಕ್ಕೆ ಕಾರಣವಾದ ವಿಚಾರವನ್ನು ಮರೆಯುವುದು. ಹಾಗೆ ಆಗಬಾರದು. ವಾಸ್ತವ ವಿಚಾರಕ್ಕೆ ಚಾಲನೆ ಕೊಡುವ ಕೆಲಸವನ್ನು ಇವೊತ್ತಿನಿಂದ ಮಾಡೋಣ. ಅದನ್ನು ಮಾಡಬೇಕು.

ಜೆ.ಹೆಚ್. ಪಟೇಲ್: ನೀವು ಕಥೆ ಹೇಳಿ ನಮ್ಮ ದೇಶದ ಸ್ಥಿತಿಯನ್ನು ವಿವರಿಸಿದ್ದೀರಿ. ರೂಮಿನ ಕೀಲಿಕೈ ಕೆಳಗೆ ಬಿಟ್ಟು ಈಗ 15ನೇ ಮಹಡಿಗೆ ಬಂದಿದ್ದೇವೆ. ಮುಂದೇನು ಮಾಡುವುದು ಹೇಳಿ.

ಎಸ್. ಸುರೇಶ್‌ಕುಮಾರ್: ಮಾನ್ಯ ಅಧ್ಯಕ್ಷರೇ, ಮುಖ್ಯಮಂತ್ರಿಯವರು ಅವರ ಸಂಪೂರ್ಣ ಜ್ಞಾನವನ್ನು, ಅನುಭವವನ್ನು ಈ ರೀತಿಯಲ್ಲಿ ಲೈಟರ್ ಟಾಕ್ಸ್‌ನಲ್ಲಿಯೇ ತೆಗೆದುಕೊಂಡು ಹೋಗಿರುವುದರಿಂದ ಹೀಗೆ ಆಗಿದೆ ಎಂದು ಖಂಡಿತವಾಗಿ ಹೇಳುತ್ತೇನೆ.

Integrity without knowledge is lame and dumb. Knowledge without integrity is dangerous and disastrous. We want you to be a man of knowledge and integrity. ತಾವುಗಳು ಸ್ವಲ್ಪ ಯೋಚನೆ ಮಾಡಿ.

ನಾನು ಈ ದೇಶದ ವಿಚಾರದ ಬಗ್ಗೆ ಮಾತನಾಡುತ್ತಿದ್ದೇನೆ. ಇಡೀ ದೇಶದಲ್ಲಿ ಕೆಲವು ಕ್ರಾಂತಿಗಳು ಆಗುತ್ತ ಇವೆ. ಈ ಬಾರಿಯ ಬಿಸಿನೆಸ್ ವರ್ಲ್ಡ್‌ನಲ್ಲಿನ ಒಂದು ವಾರ್ತೆ ನೋಡಿ. ಪಕ್ಕದ ಆಂಧ್ರಪ್ರದೇಶದ ಮುಖ್ಯಮಂತ್ರಿ, ಮಧ್ಯಪ್ರದೇಶದ ಮುಖ್ಯಮಂತ್ರಿ, ತಮ್ಮ ತಮ್ಮ ಸೀಮಿತ ಅವಕಾಶದಲ್ಲಿ ಯಾವ ರೀತಿಯಲ್ಲಿ ಒಂದು ರೀತಿಯ ಬದಲಾವಣೆಯತ್ತ ಹೋಗುತ್ತಿದ್ದಾರೆ ಎಂದು ಕುರಿತು ಒಂದು ಚಿತ್ರಣವನ್ನು ಅದರಲ್ಲಿ ಕೊಟ್ಟಿದ್ದಾರೆ.

Comparison may be odious for you. ತುಂಬಾ ಹತಾಶೆ ಪಟ್ಟುಕೊಳ್ಳುವ ಸ್ಥಿತಿಯಲ್ಲಿ ನಾವಿಲ್ಲ. ಎಲ್ಲಾ ಆಗಿ ಹೋಯಿತು ಇನ್ನು ನಾವೇನೂ ಮಾಡುವುದಕ್ಕೆ ಆಗುವುದಿಲ್ಲ ಎಂದು ಕೈಕಟ್ಟಿ ಕುಳಿತುಕೊಳ್ಳಬೇಕಾಗಿಲ್ಲ. We should do. If not us. Who else? If not now. when? ಅದನ್ನು ಈವಾಗ ನಾವು ಮಾಡಲು ಪ್ರಾರಂಭ ಮಾಡಬೇಕು. ಮಾನ್ಯ ಅಧ್ಯಕ್ಷರೇ, ಇಂಥ ಪರಿಸ್ಥಿತಿಯಲ್ಲಿಯೂ ನಮ್ಮ ರಾಜ್ಯದಲ್ಲಿ ನಾನು ಎರಡು ಕಡೆಗಳಲ್ಲಿ ಸ್ವಲ್ಪ ಹಸಿರು ವಾತಾವರಣವನ್ನು ನೋಡಿದ್ದೇನೆ. Reasons for hope ಎಂದು ಕರೆಯುತ್ತಾರೆ ಎನ್ನಬಹುದು.

ಮೊದಲನೆಯದು, ಲಂಚ ಕೊಡುವುದು ಕೂಡ ಅಪರಾಧ. ಕಾರಣ, ತಾವೊಬ್ಬ ಗೌರವಾನ್ವಿತ ನಾಗರೀಕರಾಗಿರುವುದರಿಂದ ಲಂಚ ಕೊಡುವಂಥ ಅಪರಾಧವನ್ನು ತಾವು ಮಾಡುವುದಿಲ್ಲ ಎಂದು ನಂಬಿರುತ್ತೇನೆ. ಒಂದು ವೇಳೆ ಸರ್ಕಾರದ ವಿವಿಧ ಇಲಾಖೆಯ ಯಾವುದೇ ನೌಕರರು ಲಂಚ ಕೇಳಿದಲ್ಲಿ, ಕಿರುಕುಳ ನೀಡಿದಲ್ಲಿ ಪತ್ರದ ಮೂಲಕ ಅಥವಾ ನೇರವಾಗಿ ನಮ್ಮ ಗಮನಕ್ಕೆ ತನ್ನಿ. ತಮ್ಮ ಕೆಲಸಗಳು ವಿಳಂಬವಿಲ್ಲದೆ ನಿಯಮಗಳ ಪ್ರಕಾರ ಆಗುವಂತೆ ನೋಡಿಕೊಳ್ಳುತ್ತೇನೆ ಎಂದು ನೀವು ಹೇಳಬೇಕು. "It requires that guts". ಇಂಥ ಬಹಳಷ್ಟು ಹದಗೆಟ್ಟು ಹೋಗಿರುವಂಥ ಸ್ಥಿತಿಯಲ್ಲಿ ರಾಜಕೀಯ ಇಚ್ಛಾಶಕ್ತಿ ಪ್ರಬಲ ಮತ್ತು ಶಕ್ತಿ ಪೂರ್ಣವಾಗಿ ಆಗಿದ್ದಲ್ಲಿ ಮಾತ್ರ ಪರಿಣಾಮ ನೆಟ್ಟಗಾಗಬಲ್ಲದು.

ಸರ್ಕಾರವನ್ನು ಸಾಧ್ಯವಾದಷ್ಟು ನೀವು ಪಾರದರ್ಶಕ ಮಾಡಿ. Make it transparent. ಜನಕ್ಕೆ ಗೊತ್ತಾಗಬೇಕು. ಶ್ರೀರಾಮರೆಡ್ಡಿಯವರ ಉದಾಹರಣೆ ಜ್ಞಾಪಕಕ್ಕೆ ಬರುತ್ತದೆ. ಒಬ್ಬ ಶಾಸಕ ತನ್ನ ಕ್ಷೇತ್ರದಲ್ಲಿ ಒಂದು ಮಿನಿ ವಿಧಾನಸೌಧ ಮಾಡಬೇಕೆನ್ನುವುದಕ್ಕಾಗಿ ಪಡುತ್ತಿರುವ ಕಷ್ಟ, ಆ ಫೈಲ್ ಎಲ್ಲಿದೆ ಎಂಬುದು ಗೊತ್ತಾಗದೇ ಕೊನೆಗೆ ಹೈಯೆಸ್ಟ್ ಅಥಾರಿಟಿ ಮುಖ್ಯಮಂತ್ರಿಗಳು

ಡೈರೆಕ್ಷನ್ ಕೊಡುತ್ತಾರೆ. ಇನ್ನು ಮೂರು ದಿವಸದಲ್ಲಿ ಆ ಫೈಲ್ ಬರಬೇಕು ಎಂದು. ಬಂತಾ ಇದುವರೆಗೂ? How many days it took because there is no transparency.

ಅದಕ್ಕೆ ಈ ಸರ್ಕಾರಕ್ಕೆ ಒಂದು ಸಲಹೆ ಕೊಡುತ್ತೇನೆ. Bangalore is the Cyber Capital, Information Technology ಇರುವ ಜಾಗ. ನಾವು ಇಲ್ಲಿಂದ ಪ್ರಾರಂಭಿಸೋಣ. ನನ್ನ ಪ್ರಕಾರ Gangothri of State corruption is Vidhana Soudha and M.S. Building. ಅಲ್ಲಿ ಏನಾದರೂ ನಾವು ನಿಜವಾಗೂ ಪಾರದರ್ಶಕತೆ ತಂದರೆ it will cost you hardly 15-20 crores ನೀವು ಮಾಡಿ. ಜನಕ್ಕೆ ಗೊತ್ತಾಗಲಿ. ಆ ರಿಸೆಪ್ಷನ್ ಹತ್ತಿರ ಒಬ್ಬ ಬರಲಿ ತನ್ನ ಫೈಲ್ ಯಾರ ಹತ್ತಿರ ಹೋಗಿದೆ ಎಷ್ಟು ದಿವಸ ಯಾರಿಟ್ಟುಕೊಂಡಿದ್ದಾರೆ ಎಂಬುದು ಗೊತ್ತಾಗಲಿ ಅವನಿಗೆ. ಟ್ರಾನ್ಸ್‌ಪರೆನ್ಸಿಯಿಂದ ಈ ಜನ ನಗ್ನರಾಗಿ ನಿಲ್ಲಲಿ. ಈ ರೀತಿ ಒಂದು ಪ್ರಯೋಗವನ್ನು ನಾವು ಮಾಡಿದರೆ Here is a Government that cares for the people ಎಂಬ ಮೆಸೇಜ್ ಹೋಗುತ್ತದೆ.

ಈ ದೃಷ್ಟಿಯಿಂದ ನಾನು ಏನು ಕ್ರೂಸೇಡ್ ಮಾಡಬೇಕೆಂದು ಇದ್ದೇನೆ ಇದನ್ನು ಎಂದಿನಂತೆ ನೀವು ಹಾಸ್ಯವಾಗಿ ತೆಗೆದುಕೊಳ್ಳದೆ, ಎಂದಿನಂತೆ ಟೀಕೆ ಮಾತೆಂದು ತೆಗೆದುಕೊಳ್ಳದೆ ರಾಜ್ಯದ ಐದು ಕೋಟಿ ಜನಕ್ಕೆ ಕನಿಷ್ಠ ಇದನ್ನು ಮಾಡಬೇಕಾಗಿದೆ. We will not tolerate this, ಆ ಬಡವ ಏನಿದ್ದಾನಲ್ಲಾ ಅವನು ನಮ್ಮ ಫೋಕಸ್ ಎಂದು ತೋರಿಸುವುದಕ್ಕಾಗಿ ಈ ಕೆಲಸಗಳನ್ನು ಮಾಡಬೇಕು.

ನಾನು ಆಗಲೇ ಹೇಳಿದಂತೆ Imagination, Initiative, Drive and Implementation ಏನು ಮಾಡಬೇಕಾಗಿತ್ತು ಬಜೆಟ್‌ನಲ್ಲಿ ಅದು ಮಾಡುವುದಕ್ಕಾಗಿಲ್ಲ. We neither have visionary nor missionary. ಅವರೆಡೂ ಇರಬೇಕು. ಇದ್ಯಾವುದೂ ಆಗದಿರುವುದರಿಂದ ನಿಮಗೆ ಬಂದ ಈ ಸುವರ್ಣಾವಕಾಶ ನೀವು ಕಳೆದುಕೊಂಡಿದ್ದೀರೆಂದು ಹೇಳುತ್ತಿದ್ದೇನೆ.

ಜೆ.ಹೆಚ್. ಪಟೇಲ್: ಸುರೇಶ್ ಹೇಳಿರುವ ಮಾತುಗಳನ್ನು ನಾನು ಗಂಭೀರವಾಗಿ ತೆಗೆದುಕೊಳ್ಳುತ್ತೇನೆ. ಈ ಕೆಲಸಗಳನ್ನು ಜಾರಿಗೆ ತರುವುದು ಎಷ್ಟು ಕಷ್ಟ ಎಂದು ಗೊತ್ತಿದೆ. ಒಂದು ನಿದರ್ಶನ ಕೊಡುತ್ತೇನೆ. ನೀವು ಹೇಳಿದ್ದು ಹಾಸ್ಯದ ಮಾತು ಅಲ್ಲ.

ಜೋಗೇರು ಗುಡಿ ಕಟ್ಟಿದ ಹಾಗೆ. ಎಲ್ಲಾ ಭಿಕ್ಷಕ್ಕೆ ಹೋಗುತ್ತಿದ್ದರು. ಊರೆಲ್ಲಾ ತಿರುಗುವುದು, ರಾತ್ರಿ ಬಂದು ಗುಡಿಯಲ್ಲಿ ಉಳಿದುಕೊಳ್ಳುವುದು. ರಾತ್ರಿ ಮಳೆ ಬಂದ ತಕ್ಷಣ ಆ ಗುಡಿಯೆಲ್ಲಾ ಸೋರ ಹತ್ತಿತ್ತು. ಸೋರುವಾಗ ಅವರು ರಾತ್ರಿಯೆಲ್ಲಾ ತೂಕಡಿಸಿಕೊಂಡು ಬೆಳಿಗ್ಗೆ ಏನಾದರೂ ಮಾಡಿ ನಾವು ಗುಡಿ ಕಟ್ಟಬೇಕು ಅನ್ನೋದು. ಬೆಳಿಗ್ಗೆ ಎದ್ದು ಎಲ್ಲರೂ ಅವರವರ ಭಿಕ್ಷೆಗೆ ಹೋಗುತ್ತಿವುದು. ಹಾಗಾಗಿದೆ ನಮ್ಮ ದೇಶದ ಸ್ಥಿತಿ ಇವತ್ತು. ಗುಡಿ ಕಟ್ಟಬೇಕೆನ್ನುವ ನಿಮ್ಮ ಮಾತನ್ನು ಸಂಪೂರ್ಣ ಒಪ್ಪುತ್ತೇನೆ. ಆದರೆ ನಮ್ಮ ಚುನಾವಣಾ ಪದ್ಧತಿ, ಈ ದುರವಸ್ಥೆ ಬ್ಯೂರಾಕ್ರಸಿ,

People get the Government they deserve. That Government is the best Government which governs least ಇವೆಲ್ಲಾ ತತ್ವಗಳಾಗಿವೆ, I am prepared to take these things very seriously. Let the House also consider it. I agree with you Mr. Suresh Kumar.

(ವಿಧಾನಸಭೆ ಕಲಾಪ, ಮಾರ್ಚ್ 24, 1999)

## "ಕುರಿಗಳು ಸಾರ್ ......." ಅಂಕಿ ಅಂಶಗಳ ಮುಂದೆ ಸಪ್ಪೆಯಾದ ಪಟೇಲರು

**ವಾಟಾಳ್ ನಾಗರಾಜ್ (ಚಾಮರಾಜನಗರ):** ಮಾನ್ಯ ಅಧ್ಯಕ್ಷರೇ, ಇವತ್ತು ಐದು ವರ್ಷದ ಕೊನೆಯ ದಿನ. ಸಾಮಾನ್ಯ ಚರ್ಚೆಯಾದ ಮೇಲೆ ಅದರ ಗಾಂಭೀರ್ಯತೆ ಹೊರಟು ಹೋಯಿತು. ಹಳ್ಳಿಯಲ್ಲಿ ಒಂದು ಗಾದೆ ಇದ್ದಂತೆ, ಹಬ್ಬಕ್ಕಿಂತ ಮುಂಚೆಯಾಗುವ ಸಂತೆ, ಬಹಳ ಚೆನ್ನಾಗಿರುವ ಸಂತೆ, ಒಳ್ಳೆಯ ವ್ಯಾಪಾರವಾಗುತ್ತದೆ. ಹಬ್ಬವಾದ ಮೇಲೆ ಆಗುವುದು ಮೈಲಿಗೆ ಸಂತೆ. ಮುಂದಿನ ಚುನಾವಣೆ ಆದ ಬಳಿಕ ಜೂನ್ ತಿಂಗಳಲ್ಲಿ ಮತ್ತೆ ಅಧಿವೇಶನ ಸೇರತಕ್ಕಂಥದ್ದು. ವಂದನಾರ್ಪಣೆ ಇದ್ದಂತೆ.

ನಾನು ಇವತ್ತು ಬಹಳ ನಿರಾಶನಾದೆ. ಮುಖ್ಯಮಂತ್ರಿಗಳಾದ ಜೆ.ಹೆಚ್. ಪಟೇಲರು ಬಹಳ ಪುಸ್ತಕಗಳನ್ನು ತಂದಿದ್ದಾರೆ, ಯಾವುದಾದರೂ ಕವಿತೆಯನ್ನು ಹೇಳುತ್ತಾರೆ, ಅವರ ಭಾಷಣ ಇವತ್ತು ಸ್ವಾರಸ್ಯವಾಗಿರುತ್ತದೆ, ಚೆನ್ನಾಗಿರುತ್ತದೆ, ಹೀಗೆಂದುಕೊಂಡು ಮುಖ್ಯಮಂತ್ರಿಗಳ ಭಾಷಣಕ್ಕಾಗಿ ದಿನ ತಳ್ಳುತ್ತಿದ್ದೆ.

ತಾವು ನಮ್ಮನಾಡಿನ ಶ್ರೇಷ್ಠ ಕವಿಯಾದ ನಿಸಾರ್ ಅಹಮ್ಮದ್‌ರವರ ಒಂದು ಕವಿತೆಯನ್ನು ಓದಬಹುದಿತ್ತು. ಅವರು ಬರೆದ ಕುರಿಗಳು ಸಾರ್ ನಾವು ಕುರಿಗಳು ಎಂಬ ಕವಿತೆ ಬಹಳ ಅರ್ಥಪೂರ್ಣ. ಎಲ್ಲರೂ ಓದತಕ್ಕಂಥದ್ದು. ಈ ದೇಶದಲ್ಲಿ ಯಾವುದೇ ಸರ್ಕಾರ ಬಂದರೂ ಜನರನ್ನು ಕುರಿಗಳಾಗಿ ಮಾಡಿದ್ದಾರೆಯೇ ಹೊರತು, ಜನರು ಮೇಲೆ ಬರುವುದಕ್ಕೆ ಸಾಧ್ಯ ಇಲ್ಲವೆನ್ನುವ ಮಾತನ್ನು ನಿಸ್ಸಾರರು ಎಷ್ಟು ಚೆನ್ನಾಗಿ ಕವಿತೆಯಲ್ಲಿ ಹೇಳಿದ್ದಾರೆ.

ಶಾಸಕರ ಅನುದಾನದ ವಿಷಯ ಪ್ರಸ್ತಾಪಿಸುತ್ತೇನೆ. ಈ ಬಗ್ಗೆ ಅನೇಕ ಬಾರಿ ವೈಯಕ್ತಿಕವಾಗಿ ತಮಗೆ ಹೇಳಿದ್ದೇನೆ. ಜೆ.ಹೆಚ್. ಪಟೇಲರು ಮುಖ್ಯಮಂತ್ರಿಯಾಗಿದ್ದಾಗ, ನಿಮ್ಮ ಕಾಲದಲ್ಲಿ, ಶಾಸಕರಿಗೆ ಅವರದೇ ವಿವೇಚನೆ ಅನುದಾನವಾಗಿ ಕನಿಷ್ಠ ಒಂದು ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಿದರೆ, ನಿಮ್ಮ ಕಾಲದಲ್ಲಿ ಈ ಕೆಲಸ ಆಯಿತು ಎನ್ನುವ ಕೀರ್ತಿ ಬರಲಿ ಎನ್ನುವ ಉದ್ದೇಶದಿಂದ ಒತ್ತಾಯ ಮಾಡಿದೆ. ಅದರ ಬಗ್ಗೆ ತಾವು ಉತ್ತರ ಕೊಡಲಿಲ್ಲ, ಶಾಸಕರಿಗಷ್ಟೇ ಏಕೆ ಮಂತ್ರಿಗಳಿಗೂ ಇದು ಬೇಕಾಗಿದೆ, ಮುಂದೆ ಅವರು ಮಾಜಿಯಾಗಬಹುದು,

ಶಾಸಕರಾಗಬಹುದು. ಒಂದೇ ರೂಪಾಯಿಯಾದರೂ ಸರಿ. ನೀವು ಹಾಗೂ ಉಪ ಮುಖ್ಯಮಂತ್ರಿಗಳು ಸೇರಿ ತೀರ್ಮಾನಕ್ಕೆ ಬನ್ನಿ. ನಿಮ್ಮ ಕಾಲದಲ್ಲಿ ಆರಂಭವಾಗಿದೆ ಎನ್ನು ಪ್ರಕಟಣೆಯನ್ನು ಮಾಡಿ. ಇವತ್ತು, ನಗಿಸುವಂತಹ ಮಾಧುರ್ಯ, ಕವಿತೆ ಹೇಳತಕ್ಕಂಥದ್ದೆಲ್ಲಾ ಬರಲಿಲ್ಲ, ಏನೋ ಗೊಂದಲದಲ್ಲಿದ್ದೀರೆಂದು ನನಗನಿಸುತ್ತದೆ; ಸಾಮಾನ್ಯವಾಗಿ ನೀವು ಯಾವ ಗೊಂದಲಕ್ಕೂ ಸಿಗುವಂತಹವರಲ್ಲ, ಆಕಾಶ ಕೆಳಗೆ ಬಿದ್ದರೂ ನೀವು ತಲೆ ಕೆಡಿಸಿಕೊಳ್ಳುವವರಲ್ಲ. ಆದರೆ ಇವತ್ತು ಏಕೆ ತಾವು ಈ ರೀತಿ ಎಂದು ಕೇಳುತ್ತಿದ್ದೇನೆ. ಮಾನ್ಯ ಪಟೇಲರ ಸಲುವಾಗಿ ಅವರೇ ಸದನದಲ್ಲಿ ಹೇಳಿದ ನಿಸ್ಸಾರರ ಪದ್ಯ ಹೇಳುತ್ತೇನೆ, ಕೇಳಿ ಕುರಿಗಳು..... ಸಾರ್.... ಕುರಿಗಳು

ಎಡದಿಕ್ಕಿಗೆ ಬಲದಿಕ್ಕಿಗೆ,
ಒಮ್ಮೆ ದಿಕ್ಕುಪಾಲಾಗಿ,
ಒಮ್ಮೆ ಅದೂ ಕಳೆದುಕೊಂಡು
ತಾಟಸ್ಥದಿ ದಿಕ್ಕೆಟ್ಟು,
ಹೇಗೆ ಹೇಗೋ ಏಗುತ್ತಿರುವ,
ಬರೀ ಕಿರುಚಿ ರೇಗುತ್ತಿರುವ,
ನೊಣಕೂತರೆ ಬಾಗುತ್ತಿರುವ,
ತಿನ್ನದಿದ್ದರೂ ತೇಗುತ್ತಿರುವ,
ಹಿಂದೆ ಬಂದರೆ ಒದೆಯದ,
ಮುಂದೆ ಬರಲು ಹಾಯದ,
ಅವರು, ಇವರು, ನಾವುಗಳು
ಕುರಿಗಳು ಸಾರ್, ಕುರಿಗಳು.

ನಾವು, ನೀವು, ಅವರು, ಇವರು
ಕುರಿಗಳು ಸಾರ್, ಕುರಿಗಳು
ಮಚ್ಚಿನ ಆ ಮೆಚ್ಚಿನಲ್ಲಿ
ಅದರಾಳದ ಕಿಚ್ಚಿನಲ್ಲಿ
ಮನೆ ಮಾಡಿವೆ ಹುಚ್ಚಿನಲ್ಲಿ
ನಮ್ಮೆಲ್ಲರ ಗುರಿಗಳು
ಕುರಿಗಳು ಸಾರ್, ಕುರಿಗಳು".

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿಗಳು): ಕುರಿಗಳು ಸಾರ್, ನಾವು ಕುರಿಗಳು ಎಂದು ಆ ಕವಿ, ಸಾಮಾನ್ಯ ಜನ ನಾಯಕರುಗಳ ಬಗ್ಗೆ ಅನುಕಂಪದ ಭಾವನೆ ವ್ಯಕ್ತಪಡಿಸಿರುವುದು ಸರಿಯಾಗಿಯೇ ಇದೆ.

ಹಿಂದೆ ಒಂದು ಸಾರಿ ಆ ಕಡೆ ಇದ್ದಾಗ, ಇಲ್ಲಿ ಪಶುಸಂಗೋಪನಾ ಮಂತ್ರಿಗಳಿದ್ದರು. ಅವರಿಗೆ ಯಾರೋ ಒಬ್ಬರು ಈ ರಾಜ್ಯದಲ್ಲಿ ಕುರಿಗಳು ಎಷ್ಟಿದ್ದಾವೆಂದು ಪ್ರಶ್ನೆಯನ್ನು ಕೇಳಿದರು. ಅದಕ್ಕೆ ಉತ್ತರವಾಗಿ ಇಪ್ಪತ್ತು ಲಕ್ಷದ ಮೂವತ್ತಾರು ಸಾವಿರದ ಮುನ್ನೂರು ಎಂದು ಹೇಳಿದರು.

ಆಗ ನಾನು ನಿಮ್ಮ ಹಿಂದಿರುವವರನ್ನು ಸೇರಿಸಿಕೊಂಡಿದ್ದೀರಾ ಎಂದು ಹೇಳಿದ್ದೆ.

ಆಗ ಅವರಿಗೆ ಸಿಟ್ಟು ಬಂತು. ವಾಟಾಳರೇ ಮಾತಿನ ಮಧ್ಯೆ ಆಯವ್ಯಯ ಅಂಕಿಅಂಶಗಳು ಬಂದರೆ ಮಾತಿನಲ್ಲಿ punch ಇರುವುದಿಲ್ಲ. ಏಕೆಂದರೆ ಎಲ್ಲಾ ಅಂಶಗಳ ಬಗೆಗೂ ನಾವು ಮಾಡಿರುವ ಕಾರ್ಯಕ್ರಮಗಳು, ನಮ್ಮ ಖರ್ಚು, ವೆಚ್ಚ ಇತ್ಯಾದಿ ವಿವರ ಹೇಳಲೇಬೇಕಾಗುತ್ತದೆ. ಪುನಃ ತಿಳಿಹಾಸ್ಯ ಬಳಸುವುದು ಸರಿಯಲ್ಲ ಎಂದು ಸುಮ್ಮನಾದೆ. ಅಂಕಿ ಅಂಶದ ಮುಂದೆ ಒಮ್ಮೊಮ್ಮೆ ಹಾಸ್ಯವೂ ತೆಪ್ಪಗೆ ಮಲಗಿಕೊಂಡುಬಿಡುತ್ತೆ. (ಸಭೆಯಲ್ಲಿ ನಗೆ)

(ವಿಧಾನಸಭೆ ಕಲಾಪ, ಮಾರ್ಚ್ 3, 1999)

## "ಬೇರೆಯವರ ಕುದುರೆ; ಪಟೇಲರು ಲಾಳ ಮಾತ್ರ"

**ಹೆಚ್.ಎನ್. ನಂಜೇಗೌಡ:** ನೀವು ಇನ್‌ಫ್ಲೂಯೆನ್ಸ್ ಮಾಡುವುದಕ್ಕೆ ನಿಮ್ಮ ಅಧಿಕಾರವನ್ನು ಸಾಕಷ್ಟು ಉಪಯೋಗಿಸಿದ್ದೀರಿ. ನಾನು ಶಾಸಕನಾದಾಗ ಹೇಳಿದ ಮಾತಿಗೂ ಶಾಸಕನಾಗದೇ ಇರುವಾಗ ಹೇಳುವ ಮಾತಿಗೂ ವ್ಯತ್ಯಾಸ ಇರುವುದಿಲ್ಲವೆ? ಒಬ್ಬ ಮುಖ್ಯಮಂತ್ರಿಗಳು ಹೇಳುವ ಮಾತಿಗೂ ಬೇರೆಯವರು ಹೇಳುವ ಮಾತಿಗೂ ವ್ಯತ್ಯಾಸ ಇರುವುದಿಲ್ಲವೇ?

(ಗೊಂದಲ)

**M.P. Prakash:** You are not sound in your argument, therefore, we want you to stop it.

**ಹೆಚ್.ಎನ್. ನಂಜೇಗೌಡ:** ನಾನು ಆಪಾದನೆ ಮಾಡಲಿಲ್ಲ. ಈ ಸಾಧನೆ ಹೇಳಿ ಎಂದೆ. 1983 ರಿಂದ 1989 ರವರೆಗೆ ಇರುವಾಗ ಆಯಿತಲ್ಲ. ಇದರ ಬಗ್ಗೆ ಜಂಬ ಕೊಚ್ಚಿಕೊಳ್ಳಿ.

(ಗೊಂದಲ)

ನನಗೆ ಶ್ರೀ ಜೆ.ಹೆಚ್. ಪಟೇಲರನ್ನು ಕಂಡರೆ ಒಂದು ತಾಪತ್ರಯ. ಈ ಸಂದರ್ಭದಲ್ಲಿ ಅವರ ಒಂದು ಭಾಷಣ ನೆನಪಿಗೆ ಬರುತ್ತದೆ. ಲಾಳ ಯಾರು, ಕುದುರೆ ಯಾರು ಎಂದು. ಖರ್ಗೆಯವರೆ ನೀವು ಇದನ್ನು ತಿಳಿದುಕೊಳ್ಳಬೇಕು. ಒಂದು ದಿನ ಮಾನ್ಯ ಜೆ.ಹೆಚ್. ಪಟೇಲರು ಭಾಷಣ ಮಾಡಿದರು. ಲಾಳಕ್ಕೆ ಏನಪ್ಪ ಕೆಲಸ? ಕುದುರೆ ಇದ್ದರೆ ಲಾಳಕ್ಕೆ ಕೆಲಸ, ಕುದುರೆ ಇಲ್ಲದಿದ್ದರೆ? ನಾನು ಕುದುರೆ, ಈ ಲಾಳಕ್ಕೆ ಏನು ಕೆಲಸ ಎಂದರು. ಇವತ್ತು ಅವರೇ ಲಾಳ

ಆಗಿದ್ದಾರೆ. ಕುದುರೆ ಬೇರೆಯವರು ಆದರು. ಅದು ಇರಲಿ. ಆ ಬಗ್ಗೆ ಹೆಚ್ಚಿಗೆ ವಿಡಂಬನೆ ಮಾಡುವುದಕ್ಕೆ ಹೋಗುವುದಿಲ್ಲ.

ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ): ಕುದುರೆ ಚೆನ್ನಾಗಿ ಓಡಿದರೆ ಸಾಕು.

(ವಿಧಾನಸಭೆ ಕಲಾಪ, ಮಾರ್ಚ 25, 1995)

## ಮಾರ್ಕ್ಸ್, ಡಿವಿಜಿ, ಜೋಕ್ಸ್ - ಇಷ್ಟೇ ಪಟೇಲರ ಜಾಣ್ಮೆ

ಮಲ್ಲಿಕಾರ್ಜುನ ಖರ್ಗೆ (ಪ್ರತಿಪಕ್ಷದ ನಾಯಕರು): ಮಾನ್ಯ ಅಧ್ಯಕ್ಷರೇ, ಮುಖ್ಯಮಂತ್ರಿ ಜೆ.ಹೆಚ್. ಪಟೇಲರು ಸದನದಲ್ಲಿ ಚರ್ಚೆಗೆ ಹೇಗೆ ಉತ್ತರಿಸುತ್ತಾರೆ ಎನ್ನುವುದು ಒಂದು ಸ್ವಾರಸ್ಯಕರ ವಿಷಯ. ಇದು ಇಡೀ ರಾಜ್ಯದ ಜನತೆಗೆ ತಿಳಿದ ವಿಷಯವೇ.

ಒಂದು 15 ನಿಮಿಷ ಡಿ.ವಿ. ಗುಂಡಪ್ಪನವರದ್ದು. ಒಂದು 15 ನಿಮಿಷ ಕಾರ್ಲ್ ಮಾರ್ಕ್ಸ್‌ದ್ದು. ಯಾವ್ಯಾವುದು ತಮಗೆ ಅನುಕೂಲ ಇರುತ್ತವೆ ಅದನ್ನು ಕೋಟ್ ಮಾಡುವುದು, ಇನ್ನೊಂದು 15 ನಿಮಿಷ ತಮಗೆ ಬೇಕಾದಂತಹ ಜೋಕ್ಸ್ ಹೇಳುವುದು, ಇನ್ನೊಂದು 15 ನಿಮಿಷ ವಿರೋಧಪಕ್ಷದವರಿಗೆ ಯಾವ್ಯಾವ ಟಾಂಟ್ ಹೊಡೆಯ ಬಹುದು, ಅಂಥಾದ್ದು ಸಂಗ್ರಹಿಸಿ ಹೇಳತಕ್ಕಂಥಾದ್ದು, ಇನ್ನು ಅರ್ಧ ಗಂಟೆಯಲ್ಲಿ ಇರತಕ್ಕಂಥ ಅಂಕಿ ಅಂಶಗಳನ್ನು ಓದಿ ಇದಕ್ಕೆ ನಾನು ರಾಜೀನಾಮೆ ಕೊಡಬೇಕೇ ಎಂದು ಹೇಳಿ ತಮ್ಮ ಭಾಷಣವನ್ನು ಮುಕ್ತಾಯ ಮಾಡುವುದು.

ಕರ್ನಾಟಕದ ಜನತೆ ಜೆ.ಹೆಚ್. ಪಟೇಲರಂತ ಅನುಭವಿ, ಮುತ್ಸದ್ದಿ, ರಾಜಕಾರಣಿಯಿಂದ ಬಯಸಿದ್ದಾದರೂ ಏನು? ಸಮಾಜವಾದಿ ನಾಯಕರು ಈ ರಾಜ್ಯದ ಮುಖ್ಯಮಂತ್ರಿಗಳಾಗಿದ್ದಾರೆ. ಅದಕ್ಕಾಗಿ ಏನಾದರೂ ರ್‍ಯಾಡಿಕಲ್ ಬದಲಾವಣೆ ತರುತ್ತಾರೆ ಎನ್ನತಕ್ಕಂಥ ಅಪೇಕ್ಷೆ ಇತ್ತು. ಆದರೆ ಇವತ್ತು ಆಗಿದ್ದೇನೆಂದರೆ, ಎಲ್ಲಾ ಪುಸ್.

ಚೆಂದವಾಗಿ ಮಾತನಾಡಬಹುದು. ಕಥೆ ಹೇಳಬಹುದು, ಪುರಾಣ ಹೇಳಬಹುದು, ಬುದ್ಧಿಜೀವಿಗಳು ಅಥವಾ ಓದಿದಂತಹ ಅನೇಕ ಮಾತುಗಳನ್ನು ಉದ್ಧರಿಸಬಹುದು, ಅವುಗಳನ್ನು ಹೇಳಿ ಮರುಳುಗೊಳಿಸಬಹುದು. ಆದರೆ ಅಧಿಕಾರ ಸಿಕ್ಕಾಗ ನೀವೇನು ಮಾಡುತ್ತೀರಿ ಎಂಬುದು ಬಹಳ ಮುಖ್ಯ. ಆ ಕೆಲಸ ನೀವು ಮಾಡಿಲ್ಲ. ಇದಕ್ಕಾಗಿ ಜನತೆಗೆ ದುಃಖ ಇದೆ, ವ್ಯಥೆ ಇದೆ. ನೀವು 40-50 ವರ್ಷಗಳ ಕಾಲ ಸತತವಾಗಿ ಉನ್ನತ ತತ್ವದಲ್ಲಿ ಬೆಳೆದ ಮನುಷ್ಯ. ಈ ವ್ಯಕ್ತಿ, ಇಂತಹ ವ್ಯಕ್ತಿ ಅಧಿಕಾರಕ್ಕೆ ಬಂದರೆ ಏನಾದರೂ ಹೊಸ ಚೈತನ್ಯ, ಮಾರ್ಗದರ್ಶನ, ಬದಲಾವಣೆ ಬರುತ್ತದೆ ಎಂದು ಕನಸು ಕಂಡರು ಜನ. ಅಂಕಿ ಅಂಶಗಳನ್ನು ಓದಿ ಹೇಳುವುದಕ್ಕೆ ತಾವೇ ಬೇಕೇ? ಪಟೇಲರೇ ಅದನ್ನು ಯಾರಾದರೂ ಓದಿ ಹೇಳಬಹುದು.

ಸನ್ಮಾನ್ಯ ಸಭಾಧ್ಯಕ್ಷರೇ, ಒಂದು ಅಂಶವನ್ನು ನಾವೆಲ್ಲರೂ ನೆನಪಿನಲ್ಲಿಡಬೇಕು. ಮುಖ್ಯಮಂತ್ರಿ ಪಟೇಲರು ಶಾಸಕರಾಗಿ ಅಪಾರ ಅನುಭವ ಗಳಿಸಿದವರು. ತತ್ವನಿಷ್ಠೆ ಪ್ರತಿಪಾದಕರು. ಅಂದು ಅವರು ಪ್ರತಿಪಕ್ಷದಲ್ಲಿದ್ದಾಗ ಆಡಿದ ಮಾತಿಗೂ, ಇಂದು

ಮುಖ್ಯಮಂತ್ರಿಯಾಗಿ ಆಡಳಿತ ಸೂತ್ರ ಹಿಡಿದಿರುವ ಪಟೇಲರಿಗೂ ಅಜಗಜಾಂತರ ವ್ಯತ್ಯಾಸ ಕಾಣುತ್ತಿದೆ. ಅವರು ಹಿಂದೆ ಹೇಳಿದಂತಹ ಕಥೆಯನ್ನು ಅವರಿಗೇ ಹೇಳಬಯಸುತ್ತೇನೆ.

ಇದು 1978 ರಲ್ಲಿ ಪಟೇಲರು ಹೇಳಿದ ನಿದರ್ಶನ. ಆಗ ಅವರು ಪ್ರತಿಪಕ್ಷದ ಶಾಸಕ. (ಪುಟ ಸಂಖ್ಯೆ 384) ಅವರು ಹೇಳಿದ ಕಥೆ ಹೀಗಿತ್ತು. ಗಂಗಾ ನದಿಗೆ ಕೆಲವು ನಾವಿಕರು ಹೋದರು. ದೋಣಿಯಲ್ಲಿ ಕುಳಿತುಕೊಂಡರು. ನದಿಯಲ್ಲಿ ಇಡೀ ರಾತ್ರಿ ಹುಟ್ಟು ಹಾಕಲು ಆರಂಭಿಸಿದರು. ಬೆಳಕು ಹರಿಯುವವರೆಗೂ ಹುಟ್ಟು ಹಾಕುತ್ತಲೇ ಇದ್ದರು. ಬೆಳಗಾದ ಮೇಲೆ ದಂಡೆ ಮುಟ್ಟಿದ್ದೇವೆಂದು ತಿಳಿದು ನೋಡಿದರು. ಆದರೆ ದೋಣಿ ದಡದಲ್ಲಿ ಇದ್ದಲ್ಲೇ ಇತ್ತು. ಇದು ಏತಕ್ಕೆ ಈ ರೀತಿಯಾಯಿತು ಎಂದು ನೋಡಿದರು. ದೋಣಿಯನ್ನು ಹಗ್ಗದಲ್ಲಿ ಕಟ್ಟಿ ಹಾಕಿದ್ದರು. ಆ ಹಗ್ಗವನ್ನು ಬಿಚ್ಚಿರಲಿಲ್ಲ.

ಹೀಗೆ ನಿಮ್ಮ ದೋಣಿ ದಡವನ್ನಂತೂ ಸೇರಲಿಲ್ಲ. ಸಮಾಜವನ್ನು ಬದಲು ಮಾಡಲು ನಿಮ್ಮ ದಿಕ್ಕು ಏನು ಎಂದು ಗೊತ್ತಾಗಲಿಲ್ಲ.

ಅವತ್ತು ಈ ಮಾತನ್ನು ಮಾನ್ಯ ಜೆ.ಹೆಚ್. ಪಟೇಲ್‌ರವರು ಮಾನ್ಯ ದೇವರಾಜ ಅರಸರಿಗೆ ಹೇಳಿದ್ದರು. ಈಗ ಏನಾಗಿದೆ. ನಿಮ್ಮ ದೋಣಿ ಎಲ್ಲಿದೆಯೋ ಅಲ್ಲೇ ಇದೆ, ಹಗ್ಗ ನೀವೂ ಬಿಚ್ಚಿಲ್ಲ, ರಾತ್ರಿ ಬೆಳಗೂ ನೀವೂ ಹುಟ್ಟು ಹಾಕಿದ್ದೀರಿ, ಏನೂ ಪ್ರಗತಿ ಆಗಿಲ್ಲ, ಅದಕ್ಕಾಗಿ ತಾವು ಕೊಟ್ಟಂತಹ ಉದಾಹರಣೆ ಏನಿದೆ, ಅದನ್ನು ತಾವು ಸಮರ್ಥಿಸಿಕೊಳ್ಳುತ್ತೀರಿ ಎಂದು ನಾನು ನಂಬುತ್ತೇನೆ. ಇದರಲ್ಲಿ ತಪ್ಪಾಗಿದೆ ಎಂದು ನೀವು ಹೇಳಿದರೆ ನಾನು ಅದನ್ನು ಒಪ್ಪಿಕೊಳ್ಳುತ್ತೇನೆ.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಮಾನ್ಯ ಖರ್ಗೆಯವರು ಹೇಳಿದ್ದನ್ನು ನಾನು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ದೋಣಿ ನಮ್ಮದು, ಹಗ್ಗ ಅವರದು.

ಮಲ್ಲಿಕಾರ್ಜುನ ಖರ್ಗೆ: ಹಗ್ಗ ನಮ್ಮದು ಎಂದು ಅವರು ಹೇಳುತ್ತಿದ್ದಾರೆ. ಅವರು ಈ ಮಾತು ಹೇಳಿದ್ದು ಆ ಪುಸ್ತಕದಲ್ಲಿ ಇದೆ. ಅವರದೇ ಹಗ್ಗ, ಅವರೇ ರಾತ್ರಿ ಎಲ್ಲಾ ಹುಟ್ಟುಹಾಕಿದ್ದು, ಆ ದೋಣಿ ಎಲ್ಲಿದೆಯೋ ಅಲ್ಲೇ ನಿಂತಿದೆ, ಆ ಪ್ರಗತಿಯ ದೋಣಿಯು ಸಾಗಲಿಲ್ಲ, ಗಂಗಾ ಪಾರು ಆಗಲಿಲ್ಲ, ಎಲ್ಲರನ್ನೂ ಕೂಡ ನಿಜವಾಗಿಯೂ ನೀವು ಮುಳುಗಿಸುತ್ತೀರಿ. ಅವರು ಹೇಳಿದ ಹಾಗೆ ನೀವೇ ತೂತು ಹೊಡೆಯುತ್ತೀರೋ ಏನೋ ನನಗೆ ಗೊತ್ತಿಲ್ಲ. ಅದಕ್ಕಾಗಿ.

ಅಧ್ಯಕ್ಷರು (ರಮೇಶ್‌ಕುಮಾರ್): ಅವರು ಹೇಳಿದ್ದು, ಅವತ್ತು ದೋಣಿ ಹಗ್ಗ ಎರಡೂ ಅಲ್ಲಿ ಇರುವವರದ್ದೇ ಆಗಿತ್ತು. ಇವತ್ತು ಹಗ್ಗ ಒಬ್ಬರದು, ದೋಣಿ ಒಬ್ಬರದಾಗಿದೆ ಎಂದು ಹೇಳುತ್ತಿದ್ದಾರೆ.

ಮಲ್ಲಿಕಾರ್ಜುನ ಖರ್ಗೆ: ಕಾಶಿಗೆ ಹೋಗಿ ಬದಲಾಗದಿದ್ದರೆ ಹೇಗೆ? ನಿಮ್ಮ ಮಾತನ್ನು ನಿಮಗೇ ಕೊಟ್ಟಾಗಲೂ ಕೂಡ ನೀವು ಅದನ್ನು ಸಮರ್ಥನೆ ಮಾಡಿಕೊಳ್ಳುವುದಿಲ್ಲ ಎಂದರೆ ಹೇಗೆ?

(ವಿಧಾನಸಭೆ ಕಲಾಪ, ನವೆಂಬರ್ 10, 1998)

## ಮುಚ್ಚು ಮರೆಯಿಲ್ಲದ ಮಾತುಗಳು : ಇದರಲ್ಲಿ ತಪ್ಪೇನು?

ವಾಟಾಳ್ ನಾಗರಾಜ್: ಜೀ ಟೀವಿಯಲ್ಲಿ ಪಟೇಲರು ಆಡಿದ ಮಾತುಗಳ ಬಗ್ಗೆ ಈ ಸದನದಲ್ಲಿ ಚರ್ಚೆ ಆಗುತ್ತಿದೆ ಅಲ್ಲವೇ? ಇಂಥ ಮಾತುಗಳನ್ನು ಇನ್ನು ಯಾರಾದರೂ ಹೇಳುವುದಕ್ಕೆ ಸಾಧ್ಯವಿದೆಯೇ? ಗಟ್ಟಿತನ ಮತ್ತು ವ್ಯಾಖ್ಯಾನಿಸುವ ಸಾಮರ್ಥ್ಯ ಇರುವ ಪಟೇಲರಿಂದ ಮಾತ್ರ ಇಂಥ ಮಾತುಗಳು ಬರಲು ಸಾಧ್ಯ. ಜೀ ಟಿವಿ ವ್ಯಾಖ್ಯಾನದ ಬಗೆಗೆ ಬಹಳ ಕಡೆಯಿಂದ ಬಹಳ ಟೀಕೆಗಳು ಬಂದಿವೆ.

ಅವರು ಏನು ಹೇಳಿದರು? ಪಟೇಲರು ಹೇಳಿದ್ದು ಸತ್ಯ. ಹಾಗೆ ಹೇಳಿದರು, ಹಾಗೆ ಹೇಳಬಾರದು ಎಂದು ಕೆಲವರು ಆಡಿಕೊಂಡರು. ಆದರೆ ಪಟೇಲರು ಅಸತ್ಯವನ್ನು ಎಲ್ಲೋ ಮುಚ್ಚಿಟ್ಟುಕೊಂಡು ಹೇಳಲಿಲ್ಲ. ಇದ್ದುದನ್ನು ಇದ್ದ ಹಾಗೆ ಹೇಳಿದರು. ಮದ್ಯ ಮತ್ತು ಮಾನಿನಿಯ ಬಗ್ಗೆ ಅವರು ಹೇಳಿದ ಮಾತು ಇಡೀ ಪ್ರಪಂಚ ಒಪ್ಪುವಂತಿದೆ. ಅನೇಕರು ಇಂಥ ಸತ್ಯವನ್ನು ಹೇಳಲು ಹಿಂಜರಿಯುತ್ತಾರೆ.

ಪಟೇಲರ ಜೀವನಶೈಲಿಯೇ ವಿಶೇಷತರವಾದದ್ದು. ಅವರ ಮಾತು ಮತ್ತು ಕೃತಿ ರಮ್ಯತೆಯಿಂದ ಕೂಡಿದೆ.

ನಾವು ಪಟೇಲರನ್ನು ಟೀಕೆ ಮಾಡಿಯೇ ಮಾಡುತ್ತೇವೆ ಎಂದು ಲೆಕ್ಕಕ್ಕೆ ಇಟ್ಟುಕೊಳ್ಳೋಣ.

ಅವರು ರಾಜಕೀಯದಿಂದ ದೂರ ಸರಿಯಲಿ ಎಂದು ನಾವು ಯಾರಾದರೂ ಹೇಳುತ್ತೇವೆಯೇ?

ಇಲ್ಲ.

ರಾಜ್ಯಸಭೆಗೋ ಅಥವಾ ರಾಜ್ಯಪಾಲರಾಗುವುದೋ ನಮಗ್ಯಾರಿಗೂ ಇಷ್ಟವಿಲ್ಲ.

ಪಟೇಲರು ಆಡಳಿತ ಕ್ಷೇತ್ರದಲ್ಲಿ ಇತಿಹಾಸ ಮಾಡಿದ್ದಾರೆ. ನಿಮಗೆ ಗೊತ್ತೇನು? ಗಂಟೆಗಟ್ಟಲೆ ಮಾತನಾಡದೆ, ದಿನಗಟ್ಟಲೆ ವಾದ ಮಾಡದೆ, ತಿಂಗಳು ಗಟ್ಟಲೆ ಖರ್ಚು ಮಾಡದೆ ಒಂದೇ ಒಂದು ನಿಮಿಷದಲ್ಲಿ ಅವರು ರಾಜ್ಯದಲ್ಲಿ ಹೊಸದಾಗಿ ಏಳು ಜಿಲ್ಲೆಗಳನ್ನು ಮಾಡಿತೋರಿಸಿದ್ದಾರೆ.

ಬೇರೆಯಾವ ಬ್ರಹ್ಮ ಬಂದಿದ್ದರೂ ಈ ಕೆಲಸ ಆಗುತ್ತಿರಲಿಲ್ಲ.

(ವಿಧಾನ ಸಭೆ ಕಲಾಪ, ನವೆಂಬರ್ 10, 1998)

## 'ನಾನು ಲಿಂಗಾಯಿತ'

ಇನ್ನು ಜಾತಿ-ಮತದ ವಿಷಯ: ಸಮಾಜವಾದಿಯಾದ ಪಟೇಲರು ಜಾತಿ ಪದ್ಧತಿಯ ಕಟ್ಟಾದ್ವೇಷಿ. ಆದರೆ ಇಂದಿನ ಅನಿವಾರ್ಯತೆ ಎನ್ನುವ ಕಾರಣಕ್ಕಾಗಿ ಜಾತಿಯಷ್ಟು ಮುಖ್ಯವಾದದ್ದು ಮತ್ತಾವುದೂ ಇಲ್ಲ; ವ್ಯಕ್ತಿಯ ಕೌಶಲ್ಯ, ಅಂತಸ್ತು, ಬದುಕಿನ ದೃಷ್ಟಿಕೋನ ಮತ್ತು ಲೋಕಾಕಾರವನ್ನು ಕಟ್ಟಿಕೊಡುವುದು ಜಾತಿಯೇ ಎಂದು ತೀರ್ಮಾನಿಸಿದ್ದರು ಪಟೇಲರು.

ಮಾನ್ಯ ಅಧ್ಯಕ್ಷರೇ, ನಮ್ಮ ಸಮಾಜ ಜಾತಿ ಭಾವನೆಗಳಿಂದ ಮುಕ್ತವಾಗಿಲ್ಲ. ನಾವೆಲ್ಲರೂ ಒಂದು ರೀತಿ ಈ ವ್ಯವಸ್ಥೆಯ ಬಂದಿಗಳೇ ನಾನೂ ಅಷ್ಟೆ. ಮಾನ್ಯ ಬೊಮ್ಮಾಯಿಯವರೂ ಅಷ್ಟೆ.

ಈಗ ನಾನು ಲಿಂಗಾಯಿತ ಅಲ್ಲ ಎಂದರೆ ಯಾರು ಅದನ್ನು ನಂಬುತ್ತಾರೆ? ನನ್ನ ಸಮಾಧಾನಕ್ಕೆ ನಾನು ಹೇಳಬಹುದು. ಚೀಪ್ ಪಾಪ್ಯುಲಾರಿಟಿಗೆ ಹೇಳಬಹುದು. ನಾನು ಲಿಂಗಾಯತ ಅಲ್ಲ ಎಂದರೆ, ನೀನು ಲಿಂಗಾಯತನೇ, ಬೇರೆ ಅಲ್ಲ. ಕುರುಬ ಅಲ್ಲ. ತಳವಾರ ಅಲ್ಲ ಎಂದು ಜನ ಹೇಳುತ್ತಾರೆ. ಈ ಪರಿಸ್ಥಿತಿ ಇದೆ, ವೈಚಾರಿಕವಾಗಿ ಬಂಧನಗಳಿಂದ ನಮ್ಮನ್ನು ನಾವು ಬಿಡಿಸಿಕೊಳ್ಳುವುದಕ್ಕೆ ಪ್ರಯತ್ನಪಡಬೇಕೆ ಹೊರತು ಬೇರೆ ರೀತಿಯಿಂದಲ್ಲ.

(ಜೆ.ಹೆಚ್. ಪಟೇಲ್, (ಕೈಗಾರಿಕಾ ಮಂತ್ರಿ) ವಿಧಾನಸಭೆ, ಫೆಬ್ರವರಿ 20, 1989)

## 'ಲಿಂಗಾಯತ' ಎಂದು ಓಟು ಕೇಳಿದೆ?

ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿ): ಇತ್ತೀಚೆಗೆ ಲಿಂಗಾಯತರು ಒಂದು ಸಮ್ಮೇಳನಕ್ಕೆ ನನ್ನನ್ನು ಕರೆದರು. ಆಗ ನಾನು 'ನಿಜವಾಗಿಯೂ ನೀವುಗಳೆಲ್ಲರೂ ಬಸವಣ್ಣನವರ ತತ್ವವನ್ನು ಒಪ್ಪುವುದಾದರೆ ಜನತಾ ದಳಕ್ಕೆ ಓಟು ಕೊಡಿ, ಬಿ.ಜೆ.ಪಿ.ಗೆ ಓಟು ಕೊಡಬೇಡಿ' ಎಂದು ಹೇಳಿದೆ. ಇದರಲ್ಲಿ ತಪ್ಪೇನಿದೆ?

ಬಿ.ಎಸ್. ಯಡಿಯೂರಪ್ಪ: ಮೆಡಿಕಲ್ ಕಾಲೇಜ್ ಕೊಡುತ್ತೇವೆ ಓಟು ಕೊಡಿ, ರೆಸಿಡೆನ್ಸಿಯಲ್ ಸ್ಕೂಲೇ ಕೊಡುತ್ತೇವೆ, ಓಟು ಕೊಡಿ ಎಂದು ಏಕೆ ಕೇಳಿರಬಾರದು?

ಶ್ರೀಮತಿ ಪ್ರಮೀಳಾ ನೇಸರ್ಗಿ: ಸನ್ಮಾನ್ಯ ಉಪಮುಖ್ಯಮಂತ್ರಿಗಳಾಗಿ ಹೇಳಿದ್ದಾರೆ ಅದು ತಪ್ಪಿಲ್ಲ. ಆದರೆ, ಜೆ.ಹೆಚ್. ಪಟೇಲರಾಗಿ 'ನಾನು ಲಿಂಗಾಯುತ, ನೀವೆಲ್ಲರೂ ಲಿಂಗಾಯತರಾಗಿರುವುದರಿಂದ ಓಟು ಕೊಡಿ' ಎಂದರೆ ತಪ್ಪು.

ವಾಟಾಳ್ ನಾಗರಾಜ್: ಬಸವಣ್ಣನವರ ತತ್ವವನ್ನು ಯಾರು ಒಪ್ಪಿದ್ದಾರೋ ಅವರೆಲ್ಲರೂ ಜನತಾ ದಳಕ್ಕೆ ಮತ ಕೊಡಬೇಕೆಂದು ಹೇಳಿದಂತಿದೆ ಪಟೇಲರ ಮಾತು. ಬಸವಣ್ಣನವರ ತತ್ವವನ್ನು ಪಟೇಲರು ಪಾಲಿಸುತ್ತಿದ್ದಾರೆ.

ಬಿ.ಎಸ್. ಯಡಿಯೂರಪ್ಪ: ಜೆ.ಹೆಚ್. ಪಟೇಲರು ತಾವು ಉಪ ಮುಖ್ಯಮಂತ್ರಿ ಎಂದು, ಲಿಂಗಾಯತರೆಂದು, ಬಸವಣ್ಣನವರ ಹೆಸರನ್ನು ಹೇಳಿ ಲಿಂಗಾಯತರಿಂದ ಓಟು

ತೆಗೆದುಕೊಂಡು ಅವರು ಉದ್ಧಾರವಾಗಲಿಲ್ಲ. ಬಂಗಲೆ, ಮಹಲುಗಳನ್ನು ಕಟ್ಟಿಕೊಂಡು ಮೆರೆಯುವವರು; ರಸ್ತೆಯಲ್ಲಿ ತಿರುಗಾಡುವಂಥ ಭಿಕಾರಿಗಳು, ಕೋಟ್ಯಾಧಿಪತಿಗಳಾದ ರಾಜಕಾರಣಿಗಳು, ಅವರ ಬಗ್ಗೆ ಏನು ಬದಲಾವಣೆಯಾಯಿತು.

(ವಿಧಾನಸಭೆ ಕಲಾಪ, ಆಗಸ್ಟ್ 8, 1995)

## ಸಮಾಜವಾದ ಹತ್ತು ಮುಖಗಳು

ಸಮಾಜವಾದದ ಬಗೆಗೆ ಒಂದೆರಡು ವಿವರಣೆ ನೀಡುವ ಅಗತ್ಯವಿದೆ.

ಸಂಪನ್ಮೂಲಗಳೆಲ್ಲವೂ ಸರ್ಕಾರದ ಕೈಯಲ್ಲಿಯೇ ಇದ್ದಾಗ ಇರುವ ಸಮಾಜವಾದವೇ ಬೇರೆ.

ಸಾಹುಕಾರರುಗಳಿರುವಾಗ ಇರಬಹುದಾದ ಸಮಾಜವಾದ ಮತ್ತೊಂದು ರೀತಿಯದು.

ರಾಜ್ಯ ಸರ್ಕಾರದ ಸ್ವಾಮ್ಯದಲ್ಲಿ ಕೆಲವು ಕಾರ್ಖಾನೆಗಳು ಇವೆ ಎಂದು ಭಾವಿಸಿ; ಈ ಸ್ಥಿತಿಯಲ್ಲಿನ ಸಮಾಜವಾದ ಭಿನ್ನ ರೀತಿಯದು.

ಮಹಾರಾಜರ ಕಾಲದಲ್ಲಿ ಭದ್ರಾವತಿ ಕಬ್ಬಿಣ ಕಾರ್ಖಾನೆ ಸ್ಥಾಪನೆ ಆಗಿತ್ತು. ದೇಶದಲ್ಲಿಯೇ ಮೊದಲು ಎನ್ನಬಹುದಾದ ಸರ್ಕಾರಿ ಸ್ವಾಮ್ಯದ ಮೈಸೂರು ಬ್ಯಾಂಕ್ ಇತ್ತು - ಹೀಗೆಂದ ಮಾತ್ರಕ್ಕೆ ಮಹಾರಾಜರು ಸಮಾಜವಾದಿ ಎಂದು ಹೇಳಲಾಗದು.

ರಾಷ್ಟ್ರದ ಆರ್ಥಿಕ ನೀತಿಯನ್ನು ಅವಲಂಬಿಸಿ ನಮ್ಮ ಸಮಾಜವಾದದ ನೆಲೆಯನ್ನು ನಾವು ಬೆಳೆಸಿಕೊಳ್ಳಬೇಕಾಗುತ್ತದೆ.

(ಜೆ.ಹೆಚ್. ಪಟೇಲ್ (ಕೈಗಾರಿಕಾ ಮಂತ್ರಿ) ವಿಧಾನ ಪರಿಷತ್ ಏಪ್ರಿಲ್ 3, 1987)

## ಪಟೇಲರಿಂದ ನಾನೇಕೆ ದೂರ : ಕಾಗೋಡು

ಸಮಾಜವಾದಿ ಚಿಂತನೆಯ ಪಂಥಕ್ಕೆ (Socialist School of thought) ಅಂಟಿಕೊಂಡವರೆಂದೇ ಗುರುತಿಸಲಾಗುತ್ತಿರುವ ಕೆಲವು ಪ್ರಬುದ್ಧ ಜೀವಿಗಳು ಇಂದಿಗೂ ಕರ್ನಾಟಕದಲ್ಲಿದ್ದಾರೆ. ಸಾಮಾಜಿಕ ಜೀವನದ ಆರಂಭದ ದಿನಗಳಲ್ಲಿ ಸಮಾಜವಾದಿ ತತ್ವಗಳನ್ನು ಮೈತುಂಬಿಕೊಂಡು ಬೆಳೆದವರು ಇವರು. ಈ ಗ್ರಂಥದ ಕಥಾನಾಯಕ ಜೆ.ಹೆಚ್. ಪಟೇಲರಂತೂ ಜೀವನದ ಕೊನೆಯುಸಿರಿರುವವರೆಗೂ ಸಮಾಜವಾದಿ ಎಂದೇ ಕರೆಸಿಕೊಳ್ಳಲು ಇಚ್ಛಿಸಿದವರು.

ನಮ್ಮ ಸಮಾಜವಾದಿಗಳ ಮತ್ತೊಂದು ವಿಶೇಷ ಗುಣವೆಂದರೆ ಇವರೆಲ್ಲರೂ ಒಟ್ಟಿಗೆ ಸೇರಿ ಸಂಘಟನೆಗಾಗಿ ಹಾತೊರೆದದ್ದು ಕಡಿಮೆ. ಇದೊಂದು ಸ್ವತಂತ್ರ ಪ್ರಾವಿರ್ಭಾವದ ವಿಚಿತ್ರ ನಿದರ್ಶನ.

ಉದಾಹರಣೆ ಎಂದು ಇಲ್ಲೊಂದು ಮಾತಿನ ಕಾಳಗ ಉಲ್ಲೇಖಿಸಲಾಗುತ್ತಿದೆ. ಪಟೇಲರ ಸಮಾಜವಾದಿ ಚಿಂತನೆಯ ಚಾವಡಿಯಿಂದ ದೂರ ಸರಿಯಲು ಶಿವಮೊಗ್ಗ ಜಿಲ್ಲೆಯ ಮತ್ತೋರ್ವ ಸಮಾಜವಾದಿ ಶಾಸಕ ಕಾಗೋಡು ತಿಮ್ಮಪ್ಪ ಕೊಟ್ಟ ಕಾರಣ ಇಲ್ಲಿದೆ.

ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ): ಕಾವೇರಿ ವಿಷಯದಲ್ಲಿ ಹೇಳುವುದಾದರೆ ಈಗಿರತಕ್ಕಂಥ ಸಂಬಂಧ ಹಿಂದೆ ಯಾವ ಶತಮಾನದಲ್ಲೂ ಇರಲಿಲ್ಲ, ಮುಂದಿನ ಶತಮಾನದಲ್ಲಿ ಬರುತ್ತದೆಯೋ ಅಥವಾ ಇಲ್ಲವೋ ಹೇಳುವುದು ಕಷ್ಟ. ಈಗ ನಮ್ಮವರೇ ಪ್ರಧಾನಿಯಾಗಿದ್ದಾರೆ, ಅವರ ಹಿಂದೆ ಇರತಕ್ಕಂಥ ಪೊಲಿಟಿಕಲ್ ಫೋರ್ಸ್‌ನಲ್ಲಿ ನಾವೆಲ್ಲಾ ಭಾಗಿಗಳಾಗಿದ್ದೇವೆ. ಇಂಥ ಸಂದರ್ಭದಲ್ಲಿ ಕಾವೇರಿ ಸಮಸ್ಯೆಯನ್ನು ಬಗೆಹರಿಸಿಕೊಳ್ಳದಿದ್ದರೆ, ಇನ್ನು ಯಾವಾಗಲೂ ಕೂಡ ಆಗುವುದಿಲ್ಲ. ಹೀಗೆಂದು ತಿಳಿದೇ ಈಗ ಸಂಬಂಧ ಮಾಡಬೇಕಾಗಿದೆ.

ಉದಾಹರಣೆಗೆ ಹೇಳುತ್ತೇನೆ:

ನಿಮ್ಮ ಮನೆಯ ಹೆಣ್ಣನ್ನು ತರಬೇಕು, ತನ್ಮೂಲಕ ಸಂಬಂಧ ಬೆಳೆಸಬೇಕು ಎಂದು ನನಗೆ ಇಚ್ಛೆ ಇದ್ದರೆ, ನಾನು ವಿಳ್ಳೇದೆಲೆ ಹೂವು ಹಣ್ಣು ಮುಂತಾದವುಗಳನ್ನು ತೆಗೆದುಕೊಂಡು ಬರುತ್ತೇನೆ. ಮೊದಲನೇ ಬಾರಿಗೇ ಹೋಗಿ 11 ಟಿ.ಎಂ.ಸಿ. ನೀರನ್ನು ಕೊಡುವುದಿಲ್ಲ. ಮೊದಲು ಒಳ್ಳೆಯ ಸದ್ಭಾವನೆ ಆಗಲಿ ಎನ್ನುವುದು ನಮ್ಮ ಇಚ್ಛೆ. ಇದನ್ನೂ ಸಹಿತ ನೀವು ಅನುಮಾನದಿಂದ ನೋಡುತ್ತಾ ಹೋದರೆ ಹೇಗೆ? ಸಂಬಂಧ ಮಾಡಿ ಎಂದು ಹೇಳುತ್ತೀರಿ, ಸಮಸ್ಯೆಯನ್ನು ಬಗೆಹರಿಸಿ ಎಂದು ನೀವು ಹೇಳುತ್ತೀರಿ. ಮತ್ತೆ ಅವನು ಕಳ್ಳ ಇದ್ದಾನೆ, ಹುಷಾರು ಎಂದೂ ಹೇಳುತ್ತೀರಿ.

ಕಾಗೋಡು ತಿಮ್ಮಪ್ಪ: ನೀವು ಕಾವೇರಿ ವಿವಾದದ ವಿಷಯದಲ್ಲಿ ಏನೆಲ್ಲಾ ಪ್ರಯತ್ನ ಮಾಡಿದರೂ ಅಷ್ಟೊಂದು ಸುಲಭವಾಗಿ ಬಗೆ ಹರಿಯುವ ವಿಚಾರ ಇದಲ್ಲ ಎನ್ನುವುದನ್ನು ಅನೇಕ ವರ್ಷಗಳಿಂದ, ಇತಿಹಾಸದಿಂದ ನಾವು ನೋಡುತ್ತಾ ಬಂದಿದ್ದೇವೆ. ಆದರೆ ಈಗ ನೀವೇನೋ ಹೇಳಬಹುದು. ಈಗ ನಮ್ಮವರೇ ಪ್ರಧಾನಮಂತ್ರಿಗಳಾಗಿದ್ದಾರೆ, ಅವರ ಬೆಂಬಲ ಕೂಡ ಇರುವ ಕಾರಣಕ್ಕಾಗಿ ಒಂದೇ ಪಕ್ಷವಾದ ಕಾರಣ ಒಂದೇ ಒಗ್ಗಟ್ಟಿನಿಂದ ಸರ್ಕಾರ ನಡೆಸುತ್ತಿರುವುದರಿಂದ ಸಮಸ್ಯೆ ಬಗೆಹರಿಸುವುದಕ್ಕೆ ಸುಲಭವಾಗುತ್ತದೆ ಎನ್ನುತ್ತೀರಿ. ಆದರೆ ಹಿಂದೆ ಇದ್ದದ್ದಕ್ಕಿಂತ ರಾಜಕೀಯ ಬಿಕ್ಕಟ್ಟು ಇವೊತ್ತು ಇನ್ನೂ ಹೆಚ್ಚು ಎನ್ನತಕ್ಕಂಥ ಮಾತನ್ನು ಮಾತ್ರ ನೀವು ನೆನಪಿನಲ್ಲಿಟ್ಟುಕೊಳ್ಳಿ. ಏಕೆಂದರೆ ನಾವು ಇವೊತ್ತೇ ಇದನ್ನು ಪೂರೈಸುವುದಕ್ಕೆ ಆಗುವುದಿಲ್ಲ. ನಾವು ಇನ್ನೂ ಇರುತ್ತೇವಲ್ಲ. ಆದ್ದರಿಂದ ಈ ಎಚ್ಚರಿಕೆಯನ್ನು ನೀವು ಇಟ್ಟುಕೊಂಡು ನಮ್ಮ ಕರ್ನಾಟಕದ ಹಿತವನ್ನು ದಯವಿಟ್ಟು........

ಅಧ್ಯಕ್ಷರು: ಕಾಗೋಡು ತಿಮ್ಮಪ್ಪನವರೇ, ಇಷ್ಟು ವರ್ಷದ ಗೆಳೆತನದಲ್ಲಿ ಪಟೇಲರ ವಿಚಾರ ನಿಮಗೆ ಇಷ್ಟೇನಾ ಗೊತ್ತಿರುವುದು. ಅವರು ನಿಮಗೆ ಉದಾಹರಣೆಯನ್ನು ಕೂಡ ಹೇಳಿದರು.

ಜಾತಿ, ಮತ ಭೇದಗಳ ಕಂದಕವು ಸುತ್ತಲೂ
ದುರ್ಭೇದ್ಯವೆನೆ ಕೋಟೆಗಳು ಕೊತ್ತಲು
ರೂಢಿ ರಾಕ್ಷಸನ ಅಸುರುಗ್ಯೆಯುವ
ತೋಳ್ ತಟ್ಟಿ, ತೊಡೆತಟ್ಟಿ ಕರೆಯುವನು ಸಂಗ್ರಾಮಕೆ
ಕೋಟೆ ಗೋಡೆಗೆ ನಮ್ಮ ಹೆಣಗಳೇ ಮೆಟ್ಟಿಲು
ನಮ್ಮ ಸಾವು, ನೋವು ಹೊಸ ನಾಡ ತೊಟ್ಟಿಲು

ಆದಾವು ಅಂಜುವೆದೆ ನಮ್ಮದಲ್ಲ
ಸೋಲುವೆದೆ ವೀರನಿಗೆ ಸಲ್ಲ ಬಲ್ಲ
ಇರುವುದೆಲ್ಲವನು ಎಲ್ಲಾ ಜನಕೆ ತೆರವಾಗಿಸುವ
ಸಮ ಬಗೆಯ ಸಮಸುಖದ, ಸಮದುಃಖದ
ಸಾಮರಸ್ಯದ ಸಾಮಾಗಾನ ಲಹರಿಯ ಮೇಲೆ
ತೇಲಿ ಬರಲಿದೆ ನೋಡು ನಮ್ಮ ನಾಡು

ಕೊಟ್ಟೆವಿದೆಯೋ ವೀಳ್ಯೆವ ನಿಮ್ಮೆಲ್ಲರನು
ತೊಡೆದು ನಿಮ್ಮ ಮಸಣದ ಮೇಲೆ
ಕಟ್ಟುವೆವು ನಾವು ಹೊಸ ನಾಡೊಂದನ್ನು

ಇದಕ್ಕೆ ಈಗ ನೀವು ಏನು ಹೇಳುತ್ತೀರಿ ಹೇಳಿ.

**ಹೆಚ್.ಎನ್. ನಂಜೇಗೌಡ:** ಮಾನ್ಯ ಅಧ್ಯಕ್ಷರೇ, ಡಿ.ವಿ.ಜಿ. ರವರ ಒಂದು ಕವನ ನೆನಪಿಗೆ ಬರುತ್ತದೆ. ಅದನ್ನು ಮಾನ್ಯ ಮುಖ್ಯಮಂತ್ರಿಯವರಿಗೆ ಜ್ಞಾಪಿಸುತ್ತೇನೆ.

"ಸರಕಾರ ಹರಿಗೋಲು ತೆರೆಸುಳಿಗಳು ಅತ್ತಿತ್ತ
ಸುರೆ ಕುಡಿದವರು ಕೆಲವರು ಹುಟ್ಟಹಾಕುವರು
ಜನವೆದ್ದು ಕುಣಿಯುವುದು, ಬಿರುಗಾಳಿ ಬೀಸುವುದು
ಮುಳುಗುವುದೇನಚ್ಚರಿಯೋ ಮಂಕುತಿಮ್ಮ

(ವಿಧಾನಸಭೆ ಜನವರಿ 27, 1998)

## "ಸರಕಾರ ಹರಿಗೋಲು" ಮಂಕುತಿಮ್ಮ

ನಾಡಿನ ಹಿರಿಯ ಚಿಂತಕ ಡಿ.ವಿ. ಗುಂಡಪ್ಪನವರು ಸರಕಾರ ಅಂದರೆ ಹೇಗೆ, ಏನು ಎಂಬ ಬಗ್ಗೆ ಬರೆದಿದ್ದಾರೆ. ಅವರು ಯಾವ ವರ್ಷದಲ್ಲಿ ಎಷ್ಟು ವರ್ಷದ ಕೆಳಗೆ ಬರೆದಿದ್ದಾರೋ ಏನೋ? ಬಹುಶಃ ಆಗ ಯಾರ ಸರಕಾರವು ಇತ್ತು ಎಂಬುದೂ ಕೂಡ ನನಗೆ ಗೊತ್ತಿಲ್ಲ.

ಸರಕಾರ ಹರಿಗೋಲು
ತೆರೆ ಸುಳಿಗಳ್ ಆತ್ತಿತ್ತ
ಸುರೆ ಕುಡಿದ ಕೆಲವರು ಹುಟ್ಟು ಹಾಕುವರು
ಬಿರುಗಾಳಿ ಬೀಸುವುದು
ಜನರೆದ್ದು ಕುಣಿಯುವರು
ಉರುಳದಿರುವುದು ಬಹುದಾಶ್ಚರ್ಯ ಮಂಕುತಿಮ್ಮ

ಭಾರತಕ್ಕಿಂತ ಶಕ್ತಿವಂತ ದೇಶಗಳು ಒಡೆದು ಚೂರುಚೂರಾದವು. ಆದರೂ ಈ ದೋಣಿ ಮುಳುಗಿಲ್ಲ. ಈ ರಾಷ್ಟ್ರದ ಸಮಗ್ರ ಸಂಸ್ಕೃತಿ ಏನಿದೆ ಅದರಲ್ಲಿ ಎಲ್ಲೋ ಒಂದು ಕಡೆ ಆ ಅಂತಃಶಕ್ತಿ ಇದೆ. ಆದರಿಂದ ಉಳಿದಿದ್ದೇವೆ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ನವೆಂಬರ್ 10, 1998)

ಏಳು ಹೊಸಜಿಲ್ಲೆಗಳ ಸರದಾರ

ರಾಜ್ಯಕ್ಕೆ ಹಿತ ಎನಿಸುವಂತಹ ಕಾರ್ಯಕ್ರಮಗಳನ್ನು ಯಾರೇ ವಿರೋಧಿಸಿ ಅಡ್ಡಿ ಬಂದರೂ ಛಲದಿಂದ ಮಾಡಿ ಮುಗಿಸುತ್ತಿದ್ದ ಧೈರ್ಯ-ಸಾಹಸಿ ಪಟೇಲರು. ಉದಾಹರಣೆಗೆ ಹೊಸ ಜಿಲ್ಲೆಗಳ ರಚನೆಯ ವಿಷಯವನ್ನೇ ತೆಗೆದುಕೊಳ್ಳಿ.

ನಮ್ಮ ರಾಜ್ಯದಲ್ಲಿ ಹಲವಾರು ಘಟಾನುಘಟಿಗಳು ಮುಖ್ಯಮಂತ್ರಿಗಳಾಗಿ ಬಂದು ಹೋದರು. ಕೆಲವರ ಕಾಲದಲ್ಲಂತೂ ಆಡಳಿತ ಪಕ್ಷದ ಸಂಖ್ಯೆ ಶಾಸನಸಭೆಯಲ್ಲಿ 180-190 ರವರೆಗೂ ಮುಟ್ಟಿತ್ತು. ಇಷ್ಟಾದರೂ ಜಿಲ್ಲೆಗಳ ವಿಂಗಡಣೆ ಕಾರ್ಯಕ್ಕೆ ಅವರು ಮುಂದಾಗಲಿಲ್ಲ. ಅತಿ ಜರೂರಾದರೂ ಈ ಕೆಲಸದ ಬಗೆಗೆ ಹೆದರುತ್ತಿದ್ದ ನಾಯಕರೇ ನಮ್ಮಲ್ಲಿ ಹೆಚ್ಚು ಮಂದಿ. ಜಿಲ್ಲೆ ವಿಂಗಡಣೆಗೆ ಕೈ ಹಾಕಿದರೆ ಕೆಟ್ಟೆವು ಎಂದು ಅಂಜಿ, ಸಮಿತಿಗಳ ಮೇಲೆ ಸಮಿತಿ ಮಾಡಿ, ಜವಾಬ್ದಾರಿಯನ್ನು ಮುಂದಕ್ಕೆ ಹಾಕುತ್ತಿದ್ದರು.

ಧೀರ ರಾಜಕಾರಣಿ ಪಟೇಲರು ಧೈರ್ಯಕ್ಕೆ ಹೆಸರಾದವರು. ಒಂದಲ್ಲ ಎರಡಲ್ಲ, ಏಳು ಹೊಸ ಜಿಲ್ಲೆಗಳನ್ನು ರಚಿಸಿ ಸೈ ಎನಿಸಿಕೊಂಡರು.

(ಎಂ.ಸಿ. ನಾಣಯ್ಯ, ವಿಧಾನ ಪರಿಷತ್ತು, ಫೆಬ್ರವರಿ 27, 2001)

# 26

# ನಾನೊಂದು ಶೂನ್ಯ : ಶ್ರೀ ಜೆ.ಹೆಚ್. ಪಟೇಲ್

## ಸ್ವಗತ ಸಂಭಾಷಣೆ

ಸಹಜತೆ- ಇದು ಪಟೇಲರ ಜೀವನ ಸಿದ್ಧಾಂತ. ಇದ್ದದ್ದನ್ನು ಇರುವಂತೆ ಹೇಳುವ ಮಣ್ಣಿಗೆ ಸಮೀಪದ ಗುಣವಿದು.

ನಾವು ಇರುವಂತೆಯೇ ಇರೋಣ. ಶಾಸಕ ಅಥವಾ ಮಂತ್ರಿಯಾದ ಕೂಡಲೇ ನಮಗೆ ಅಲೌಕಿಕವಾದ ಶಕ್ತಿ, ಗುಣ ಇಲ್ಲವೇ ಅವಕಾಶ ಲಭಿಸಿದೆ ಎಂದು ಉಬ್ಬುವುದು ತರವಲ್ಲ ಎಂದು ನಡೆ-ನುಡಿಯಲ್ಲಿ ತೋರಿಸಿದವರು ಪಟೇಲರು. ಎರವಲು ಚಿಂತನೆ, ನಾಜೂಕಯ್ಯತನ, ಡಾಂಭಿಕ ಶ್ರೀಮಂತಿಕೆ, ಇಂಗ್ಲೀಷ್ ಮಿಶ್ರಿತ ಡೊಂಕು ಪಾಂಡಿತ್ಯ - ಇದಾವುದನ್ನೂ ಧರಿಸದವರು.

ನಾಲ್ಕು ದಶಕಗಳಿಗೂ ಮೀರಿದ ಸಂಸದೀಯ ಬದುಕು ಇವರದು. ಇವರು ಕಟ್ಟಿಕೊಂಡ ಕನಸುಗಳು ನೂರಾರು; ಪಟೇಲರೇ ಹೇಳಿದಂತೆ ಸಾಧಿಸಿದ್ದು ಬೆರಳೆಣಿಕೆಯಷ್ಟು.

ಸಾಧಿಸಲಾಗದುದರ ಬಗೆಗೆ ಪಟೇಲರು ಸದಾ ಜಾಗ್ರತರಾಗಿದ್ದರು ಎಂಬುದಕ್ಕೆ ಸದನದಲ್ಲಿನ ಅವರ ಮಾತುಗಳೇ ಸಾಕ್ಷಿ. ಅವರ ಹೆಚ್ಚಿನ ಮಾತುಗಳು ಸಂಸದೀಯ ವೇದಿಕೆ ಮೇಲೆ ಹೇಳಿರುವುದೇ ಆದರೂ ಅವು ಸ್ವಗತ ಸಂಭಾಷಣೆ (soliloqy) ಎಂದರೆ ತಪ್ಪಿಲ್ಲ.

ತಮ್ಮ ಚಿಂತನೆಗಳು ಮುಂದಿನ ತಲೆಮಾರಿಗೆ ಸಮಾಜವಾದಿಯೊಬ್ಬನ ಸಂದೇಶವಾಗಲಿ ಎನ್ನುವ ಅರಿವು ಮತ್ತು ಆಶಯ ಅವರಿಗಿದ್ದಿರಬೇಕು.

ವಿರಮಿಸುವ ಮುನ್ನ ಸದನದಲ್ಲಿ ಅವರೇ ಹೇಳಿದ ಮಾತುಗಳೊಂದಿಗೆ ಕನ್ನಡನಾಡು ಕಂಡ ಸಂಸದೀಯ ಗಾರುಡಿಗ ಶ್ರೀ ಜೆ.ಹೆಚ್. ಪಟೇಲರ ಈ ಕಥೆ ದಡಮುಟ್ಟುತ್ತದೆ.

## ದೇವರು ಮೆಚ್ಚುವಂತೆ ಕೆಲಸ ಮಾಡಿದ್ದೇನೆ

ಇವತ್ತು ಸದನದಲ್ಲಿ ದೇವರು ಮತ್ತು ನಂಬಿಕೆ ಎನ್ನುವ ವಿಷಯ ಪ್ರಸ್ತಾಪಕ್ಕೆ ಬಂದಿದೆ.

ಮಾನ್ಯ ನಂಜೇಗೌಡರು ಮಾತನಾಡುತ್ತಾ, ನಿಮಗೆ ನಿಜವಾಗಿಯೂ ದೇವರಲ್ಲಿ ನಂಬಿಕೆ ಇದ್ದರೆ ಎಂಬ ಪದ ಬಳಸಿದ್ದಾರೆ. ಈ ಪ್ರಶ್ನೆ ಎತ್ತಿದಾಗ ತಾವು ಯಾವ ದೇವರಲ್ಲಿ ಇರುವ ನಂಬಿಕೆ ಬಗ್ಗೆ ಕೇಳಿದಿರಿ ಹೇಳಿ ಸ್ವಾಮಿ?

ಹಿಂದೂಗಳ ದೇವರೇ, ಕ್ರೈಸ್ತರ ದೇವರೇ, ಮುಸಲ್ಮಾನರ ದೇವರೇ ಅಥವ ಹಿಂದೂಗಳಲ್ಲೇ ಇರತಕ್ಕಂಥ 36 ಸಾವಿರ ದೇವರುಗಳೇ?

ದೇವರು ಎಂಬ ಬಗ್ಗೆ ನಮ್ಮ ಕಾನ್‌ಸೆಪ್ಟ್ ಏನು? ನಮ್ಮ ಮನಸ್ಸಿನಲ್ಲಿರುವಂತಹ ನಿಜವನ್ನು ಯಾರನ್ನು ಕುರಿತು ಹೇಳಿದರೂ, ಅವರು ದೇವರೇ.

ಗಾಂಧೀಜಿಯವರು ಒಂದು ಕಡೆ ಏನು ಹೇಳುತ್ತಾರೆ ಎಂದರೆ, ನನ್ನನ್ನು ಎಲ್ಲರೂ ಮಹಾತ್ಮಾ ಎಂದು ಕರೆದು ನನ್ನನ್ನು ದೇವರ ಮಟ್ಟಕ್ಕೆ ತೆಗೆದುಕೊಂಡು ಹೋಗುತ್ತಾರೆ, ನಾನು ದೇವರ ಮಟ್ಟಕ್ಕೆ ಹೋಗಿಲ್ಲ, ನಾನು ಪಾಲಿಟಿಷಿಯನ್, I am trying to become a shine. But I am not a sun.

ಗಾಂಧೀಜಿಯವರಿಗೇ ಈ ರೀತಿಯ ಅಭಿಪ್ರಾಯ ಇರುವಾಗ, ಅವರ ಮುಂದೆ ನಾವೆಲ್ಲಾ ಬಹಳ ಅಲ್ಪರು. ನನಗೂ ದೇವರಲ್ಲಿ, ಮಾನವನಿಗೆ ಮೀರಿದ ಒಂದು ಶಕ್ತಿಯಲ್ಲಿ ವಿಶ್ವಾಸ ಇದೆ. ಅದನ್ನು ಮೆಚ್ಚಿಸುವುದಕ್ಕೋಸ್ಕರ ನಾವು ಏನೆಲ್ಲಾ ಮಾಡುತ್ತೇವೆ. ಈಗ ನಾವು ಪ್ರತಿಯೊಂದರಲ್ಲೂ ದೇವರು ಮೆಚ್ಚುವ ಹಾಗೆ ಕೆಲಸ ಮಾಡಬೇಕು ಎಂದು ಹೇಳುತ್ತೇವೆ.

ನೀವೂ ಕೂಡ ಅದೇ ಮಾತನ್ನು ಹೇಳಿದ್ದು ಎಂದು ನಾನು ನಂಬುತ್ತೇನೆ. ಇದರೊಳಗೆ ದೇವರು ಮೆಚ್ಚದೇ ಇರುವಂತಾದ್ದು ಏನಿದೆ? ಹೋಗಲಿ, ನನಗೇನಾದರೂ ಅಳುಕು ಇದ್ದರೆ, ನನ್ನ ಸರ್ಕಾರದಲ್ಲಿ ಯಾರಿಗಾದರೂ ಇದರೊಳಗೆ ಏನಾದರೂ ನಾವು ತಪ್ಪು ಮಾಡಿದ್ದೇವೆ ಎಂತಿದ್ದರೆ, ಆ ಕ್ಷಣ ನಾವು ಈ ಸರ್ಕಾರದಲ್ಲಿ ಇರುವುದಿಲ್ಲ. ನಾವು ಅಷ್ಟು ಶುದ್ಧವಾಗಿ ಆಲೋಚನೆ ಮಾಡಿ ಪ್ರತಿ ನಿರ್ಣಯ ಮತ್ತು ನಿರ್ಧಾರ ತೆಗೆದುಕೊಂಡಿದ್ದೇವೆ.

ಆದುದರಿಂದ ಒಂದು ಮಾತು ಹೇಳುತ್ತೇನೆ. ಎಲ್ಲದರಲ್ಲಿಯೂ ಸಂಶಯ ಪಡಬಾರದು. ಹೀಗೆ ಸಂಶಯವೇ ಹೆಚ್ಚಾದಾಗ ನಿಮಗೆ ಎಲ್ಲಿ ನೋಡಿದರೂ ದೆವ್ವ, ಭೂತಗಳೇ ಕಾಣುತ್ತವೆ. ಏಕೆಂದರೆ, you can see the devils everywhere even though they don't

exist. You can see the devils, ಹಾಗೆ ನೋಡಬಾರದು. ಸರ್ಕಾರದ ಯಾವುದೇ ನಿಲುವು ತಪ್ಪಾಗಿದ್ದರೆ ಅದಕ್ಕೆ ನಿಮ್ಮ ಬಳಿ ರುಜುವಾತುಗಳಿದ್ದರೆ, ಅದಕ್ಕೆ ಸಾಕಷ್ಟು ಆಧಾರಗಳಿದ್ದರೆ, ಬೇಕಾದರೆ ಎನ್‌ಕ್ವೈರಿ ಮಾಡಿಸಿ, ಕೋರ್ಟ್‌ನಲ್ಲಿ ಕೇಸ್ ಹಾಕಿ. ಬೇಕಾದರೆ ಜಾಮೀನಿನ ಮೇಲೆ ಓಡಾಡುವ ಹಾಗೆ ಮಾಡಿ.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ, ಏಪ್ರಿಲ್ 3, 1999)

## ದೇಶವನ್ನು ದುಸ್ಥಿತಿಗೆ ತಂದ ನಾವು-ನೀವು

ಈ ರಾಜ್ಯದಲ್ಲಿ ಸುಮಾರು ಮೂರು-ನಾಲ್ಕು ದಶಕಗಳ ದೀರ್ಘ ಸಾಮಾಜಿಕ ಸೇವೆ ಸಲ್ಲಿಸಿದ ಬಳಿಕ ನನ್ನ ಮನಸ್ಸಿನಲ್ಲಿ ಬಂದಿರುವ ಭಾವನೆಗಳನ್ನು ಹೇಳಬಯಸುತ್ತೇನೆ. ಇದು ಕೇವಲ ನನ್ನ ಅನಿಸಿಕೆ ಅಷ್ಟೇ ಇಲ್ಲ. ನಿಮ್ಮ ಮನಸ್ಸಿನ ಭಾವನೆಯೂ ಆಗಬಹುದು. ಇವೊತ್ತು ನಾವು ಕಾಣತಕ್ಕಂಥ ಹಲವಾರು ದೃಶ್ಯಗಳು, ನಮಗೆ ಸ್ವಾತಂತ್ರ್ಯ ಬಂದ ಐವತ್ತು ವರ್ಷಗಳ ಬಳಿಕ ಹೇಗಿದ್ದೇವೆ ಎನ್ನುವುದಕ್ಕೆ ಒಬ್ಬ ಕವಿ ಹೀಗೆ ಹೇಳುತ್ತಾನೆ:

ಕನ್ನಡಿಯಲ್ಲಿರುವುದನ್ನು ನಂಬಿ ಮಗನ ಬಲಿಗೊಡುವ ತಂದೆ,
ಎರಡನೆಯದೂ ಹೆಣ್ಣಾಯಿತೆಂದು ಆತ್ಮಹತ್ಯೆಗೆ ಚಿಂತಿಸುವ ತಾಯಿ,
ಕರ್ತವ್ಯ ವಿಮುಖನಾಗಿ ದುರಾಚಾರದಲ್ಲಿ ತೊಡಗುವ ಗುರು,
ಅಭ್ಯಸಿಸದೆ ಜಯ ಬಯಸುವ ವಿದ್ಯಾರ್ಥಿ,
ಸ್ವಾರ್ಥ, ಸ್ವಜನ ಪಕ್ಷಪಾತದಲ್ಲಿ ಮುಳುಗಿದ ರಾಜಕಾರಣಿ,
ದುಡಿಯದೆ ದೇಶವನ್ನು ದುಸ್ಥಿತಿಗೆ ತಳ್ಳುತ್ತಿರುವ ಪ್ರಜೆ,
ಬದುಕಿನ ಮಾರ್ಗವನ್ನರಿಯದೆ ವಿಕಾರಕ್ಕೊಳಗಾದ ಯುವಪೀಳಿಗೆ
ಹೀಗಾದಲ್ಲಿ ಈ ದೇಶದ ಉದ್ಧಾರವೆಂತಯ್ಯಾ?

ನಾವೇಕೆ ಈ ಸ್ಥಿತಿಗೆ ಬಂದೆವು? ಬರೀ ಟೀಕೆ-ಟಿಪ್ಪಣಿ ಮಾಡಿಕೊಂಡು ಅವರು ಹಾಗೆ ಹೇಳಿದರು, ನಾವು ಹೀಗೆ ಹೇಳಿದೆವು ಎಂಬುದು ದೊಡ್ಡ ವಿಷಯವಲ್ಲ. ನಾವು ಎಲ್ಲರೂ ಸೇರಿ ಏನು ಮಾಡಬೇಕೆಂದನ್ನು ಚಿಂತಿಸಬೇಕು.

ಸರ್ಕಾರದ ಪಾಲಿಸಿ ಮತ್ತು ಪ್ರೋಗ್ರಾಂ ಇದೆಯಲ್ಲ, ಪಾಲಿಸಿ ಎಂದರೇನು? ಪಾಲಿಸಿ ಈಸ್ ಎ ಲಾಂಗ್ ಟರ್ಮ್ ಪ್ರೋಗ್ರಾಂ. ಪ್ರೋಗ್ರಾಂ ಎಂದರೆ ಶಾರ್ಟ್ ಟರ್ಮ್ ಪಾಲಿಸಿ. ಪ್ರಾರಂಭದಲ್ಲಿ ನಾವು ಪಾಲಿಸಿಯನ್ನು ಸರಿಯಾಗಿ ಮಾಡಿಕೊಳ್ಳಲಿಲ್ಲ. ಮೊದಲೇ ನಾವು ಪಾಲಿಸಿಯಲ್ಲಿ ತಪ್ಪಿದ್ದರಿಂದ ಈಗ ನಮ್ಮ ಪ್ರೋಗ್ರಾಂಗಳೂ ಕೂಡ ತಪ್ಪಿದವು.

(ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ಏಪ್ರಿಲ್ 3, 1999)

## ಲೀಡರ್ ಯಾರು? ನಾನಂತೂ ಅಲ್ಲ

ನಮ್ಮ ಸಾಧನೆಗಳು ನಿಮ್ಮ ಕಣ್ಣಿಗೆ (ಮುಖ್ಯವಾಗಿ ವಿರೋಧ ಪಕ್ಷಗಳಿಗೆ) ಕಾಣದಿದ್ದರೆ ನಾನೇನು ಮಾಡಲಿ? ಜೇಬಿನಲ್ಲಿಟ್ಟುಕೊಂಡು ಓಡಾಡಲೇ?

ಮೊದಲನೆಯದಾಗಿ ಮಾನ್ಯ ವಿರೋಧ ಪಕ್ಷದ ನಾಯಕರಿಗೆ ವಿನಂತಿ ಮಾಡಿಕೊಳ್ಳುವುದೇನೆಂದರೆ ಇಲ್ಲಿ ಗಾಳಿ ಇದೆ, ಗಾಳಿ ಇದೆ ಎಂದರೆ ಎಲ್ಲಿ ಗಾಳಿ ತೋರಿಸು ಅಂದರೆ ಹೇಗೆ? ಗಾಳಿಯನ್ನು ಹೇಗೆ ತೋರಿಸಲಿ? ಚರ್ಮ ಇದ್ದರೆ ನಿಮಗೆ ಗಾಳಿ ಗೊತ್ತಾಗುತ್ತದೆ. ಸ್ಪರ್ಶದಿಂದ ಗಾಳಿ ಗೊತ್ತಾಗುತ್ತದೆ. ನೋಡುವುದರಿಂದ ಅಲ್ಲ. ಹಾಗೆಯೇ ಕೆಲವು ಸ್ಪರ್ಶದಿಂದ ಗೊತ್ತಾಗುತ್ತದೆ. ಕೆಲವು ದೃಶ್ಯದಿಂದ ಗೊತ್ತಾಗುತ್ತವೆ. ನಾಲಿಗೆಯ ಮೇಲೆ ಇಟ್ಟರೆ ಸಕ್ಕರೆಯ ರುಚಿ ಗೊತ್ತಾಗುತ್ತದೆ. ಅದನ್ನು ನೋಡಿದರೆ ಗೊತ್ತಾಗುವುದಿಲ್ಲ. ಸಕ್ಕರೆ ಅಂದರೆ ಹೀಗೆ ಇರುತ್ತದೆ, ಬೆಳ್ಳಗೆ ಇರುತ್ತದೆ ಎಂದು ಹೇಳಿದರೆ ಅದರ ಸಿಹಿ ತಿಳಿಯುವುದಿಲ್ಲ. ಸಕ್ಕರೆಯ ಸಿಹಿ ಗೊತ್ತಾಗಬೇಕಾದರೆ ಅದನ್ನು ನಾಲಿಗೆಯ ಮೇಲೆಯೇ ಇಡಬೇಕು. ಬೆಂಕಿ ಸುಡುತ್ತದೆ ಎಂದು ಗೊತ್ತಾಗಬೇಕಾದರೆ ಅದನ್ನು ಮುಟ್ಟಿ ನೋಡಬೇಕು.

### ಸುರೇಶ್‌ಕುಮಾರರ ವಿಷಯ

Suresh Kumar is one of the most intelligent members of this House ಇರಲಿ. ಮತ್ತೊಂದು ವಿಷಯ ಏನೆಂದರೆ ರಾಜ್ಯಪಾಲರ ಭಾಷಣ ಪ್ರಸ್ತಾಪಿಸಿದ ಸಂದರ್ಭದಲ್ಲಿ ನನ್ನ ಆತ್ಮೀಯ ಸ್ನೇಹಿತರು ಕೆಲವರು ಬಹಳ ಮರ್ಸಿಫುಲ್ ಆಗಿ ಮಾತನಾಡಿದ್ದಾರೆ. ಮಾನ್ಯ ನಂಜೇಗೌಡರು ಎಂದೂ ನನ್ನ ಬಗ್ಗೆ ಹಾಗೆ ಮಾತನಾಡುವವರೇ ಅಲ್ಲ. ಅವರು ನೀವು ಲೀಡರೇ ಅಲ್ಲ ಎಂದರಂತೆ.

ಆಗಲಿ, ನಾನು ಲೀಡರ್ ಅಲ್ಲ. ಲೀಡರ್ ಎಂದರೆ ಯಾರು? ಗಾಂಧೀಜಿ ಹೋದ ನಂತರ ಮತ್ತೆ ಯಾರೂ ಲೀಡರ್ ನಮ್ಮ ದೇಶಕ್ಕೆ ಬಂದಿಲ್ಲ. ನೀವು ನೋಡಿರುವ ಲೀಡರ್‌ಗಳೂ ಲೀಡರ್ ಅಲ್ಲ. ನಾನಂತೂ ಅಲ್ಲ. ನಾನು ಇಲ್ಲಿ ಕೇವಲ ಸಭಾ ನಾಯಕ. ಜನತಾದಳ ಮುಖಂಡ ಅಷ್ಟೇ.

**ಶ್ರೀ ಮಲ್ಲಿಕಾರ್ಜುನ ಖರ್ಗೆ (ಪ್ರತಿಪಕ್ಷದ ನಾಯಕರು - ಗುರು ಮಿಠ್ಕಲ್ ಕ್ಷೇತ್ರ): ಇಷ್ಟೆಲ್ಲಾ ಗುಟ್ಟು ಗೊತ್ತಿದೆ ಎಂದರೆ ಯಾರು ಲೀಡರ್ ಎಂದು ಹೇಳಿ ನೋಡೋಣ.**

ಜೆ.ಹೆಚ್. ಪಟೇಲ್: ನಾನು ಹೇಳಿದ್ದು ಅದಕ್ಕೇ, ಗಾಂಧೀಜಿ ಅವರು ಹೋದ ಮೇಲೆ ಈ ದೇಶಕ್ಕೆ ಲೀಡರ್ ಇಲ್ಲ.

(ವಿಧಾನ ಸಭೆ ಕಲಾಪ, ಏಪ್ರಿಲ್ 3, 1999)

## ನಾನೊಂದು ಶೂನ್ಯ : ಶ್ರೀ ಜೆ.ಹೆಚ್ ಪಟೇಲ್

ಸನ್ಮಾನ್ಯ ಅಧ್ಯಕ್ಷರೇ, ಒಮ್ಮೊಮ್ಮೆ ನನಗನ್ನಿಸುತ್ತದೆ. ನಾನು ಈವರೆಗೆ ಸಾಧಿಸಿದ್ದಾದರೂ ಏನು? ಈ ಪ್ರಶ್ನೆ ನನಗಷ್ಟೇ ಅಲ್ಲ ಇಡೀ ರಾಜಕಾರಣಿಗಳ ಸಮುದಾಯಕ್ಕೆ ಅನ್ವಯಿಸುತ್ತದೆ. ಪ್ರತಿಯೊಬ್ಬನೂ ಚಿಂತಿಸಬೇಕಾದ ವಿಷಯ ಇದು. ನಾನು ನನ್ನ ಸಹೋದ್ಯೋಗಿ ಸಚಿವ ಎಂ.ಪಿ. ಪ್ರಕಾಶ್, ಕೆ.ಎಚ್. ಶ್ರೀನಿವಾಸ್, ನಂಜೇಗೌಡರು, ವಾಟಾಳರು, ಅನಂತಮೂರ್ತಿ - ಹೀಗೆ ಹಲವಾರು ಮಂದಿಯೊಡನೆ ಚರ್ಚಿಸಿದ್ದುಂಟು. ವಿರೋಧ ಪಕ್ಷದ ನಾಯಕರುಗಳಾದ ಮಾನ್ಯ ಯಡಿಯೂರಪ್ಪ - ಮಲ್ಲಿಕಾರ್ಜುನ ಖರ್ಗೆಯವರುಗಳು ಕೇಳಿದ್ದಕ್ಕಾಗಿ ಹೇಳುತ್ತಿದ್ದೇನೆ.

### 'ಪಟೇಲರ ಸಾಧನೆ ಶೂನ್ಯ'

ಶೂನ್ಯ ಸಾಧನೆ ಅಂದರೆ, ಅಧ್ಯಕ್ಷರೇ ಅದಕ್ಕಿಂತ ಎತ್ತರದ ಸಾಧನೆಯೇ ಇಲ್ಲ. ಇದು ವೀರಶೈವ ಸಿದ್ಧಾಂತವೋ ಅಥವಾ ಬೇರೆ ಧರ್ಮಗಳು ಇದನ್ನೇ ಹೇಳುತ್ತವೆಯೋ ನನಗೆ ತಿಳಿಯದು. ಇದನ್ನು ಶಂಕರ ಭಗವತ್ಪಾದರು ಹೇಳಿರಬೇಕು ಎಂದು ನಂಬುತ್ತೇನೆ.

"ಪೂರ್ಣಂ ಅದು ಪೂರ್ಣಂ
ಇದು ಪೂರ್ಣದಿಂ ಪೂರ್ಣವೈತಂದು
ಪೂರ್ಣದಲ್ಲಿ ಪೂರ್ಣವ ಕಳೆದೊಡೆ
ಉಳಿವುದೆ ಪೂರ್ಣವೆಂದರಿತ
ನೀವೇ ಪರಿಪೂರ್ಣ".

ಹೀಗೆಂದು ಶಂಕರರು ದೇವರನ್ನು ಪ್ರಾರ್ಥಿಸುತ್ತಾರೆ.

ಆ ತರಹ ನಾನೂ ಒಂದು ಶೂನ್ಯ. ಅದು ಯಾವ ರೀತಿಯ ಶೂನ್ಯ, ಆದಿಶೂನ್ಯವೋ, ಅಂತ್ಯಶೂನ್ಯವೋ? ಈವರೆಗೂ ಗೊತ್ತಾಗಿಲ್ಲ. ಒಟ್ಟಿನಲ್ಲಿ ಶೂನ್ಯದ ಎತ್ತರಕ್ಕೆ ಹೋದರೆ ಈ ಮುಖ್ಯಮಂತ್ರಿಗಿರೀನೂ ಬೇಡ, ಈ ಸರ್ಕಾರವೂ ಬೇಡ, ಯಾವುದೂ ಸಹಿತ ಬೇಡ ಎನ್ನಿಸುತ್ತೆ.

(ಶ್ರೀ ಜೆ.ಹೆಚ್. ಪಟೇಲ್ (ಮುಖ್ಯಮಂತ್ರಿ) ವಿಧಾನಸಭೆ ಸೆಪ್ಟೆಂಬರ್ 4, 1997)

ನಿಷ್ಠುರ ಸಿದ್ಧಾಂತದ ವ್ಯಕ್ತಿತ್ವ

ಪಟೇಲರು ಮತ್ತು ನಾನು ಮಹಾರಾಜಾ ಕಾಲೇಜಿನ ವಿದ್ಯಾರ್ಥಿಗಳು. ಒಟ್ಟಿಗೆ ಓದಿದವರು.

ಅಖಂಡ ತ್ಯಾಗ, ಹೋರಾಟ ಮತ್ತು ನಿಷ್ಠುರ ಸೈದ್ಧಾಂತಿಕ ಚಿಂತನೆಗಳ ಮೂರ್ತಿ ಅವರು. ಸಮಾಜವಾದಿ ಸಿದ್ಧಾಂತದ ಮೂಸೆಯಿಂದ ಎದ್ದು ಬಂದವರು.

ರಾಜಕಾರಣದಲ್ಲಿ ತಮ್ಮದೇ ಆದ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವದ ಛಾಪನ್ನು ಬಿಟ್ಟು ಹೋದವರು.

ಕರ್ನಾಟಕಕ್ಕೆ ಪಟೇಲರು ಸಲ್ಲಿಸಿದ ಸೇವೆ ಅನುಪಮ. ಅವರ ಆತ್ಮಕ್ಕೆ ಭಗವಂತ ಶಾಂತಿಯನ್ನೀಯಲಿ.

(ಎಸ್.ಎಂ. ಕೃಷ್ಣ (ಮುಖ್ಯಮಂತ್ರಿ) (ಮದ್ದೂರು ಕ್ಷೇತ್ರ) ವಿಧಾನಸಭೆ, ಫೆಬ್ರವರಿ 27, 2001)

## 2002 – 2003 ನೇ ಸಾಲಿನ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ ಸದಸ್ಯರು

ಶ್ರೀಯುತರುಗಳಾದ :

| | | |
|---|---|---|
| 1. | ಬಿ. ಎಲ್. ಶಂಕರ್ | ವಿಧಾನ ಪರಿಷತ್ತಿನ ಸಭಾಪತಿಯವರು ಹಾಗೂ ಸಮಿತಿಯ ಅಧ್ಯಕ್ಷರು |
| 2. | ಎಂ. ವಿ. ವೆಂಕಟಪ್ಪ | ವಿಧಾನ ಸಭೆಯ ಸಭಾಧ್ಯಕ್ಷರು ಹಾಗೂ ಸಮಿತಿ ಸದಸ್ಯರು |
| 3. | ಬಿ. ಬಿ. ಶಿವಪ್ಪ | ವಿಧಾನ ಸಭಾ ಸದಸ್ಯರು ಹಾಗೂ ಸಮಿತಿ ಸದಸ್ಯರು |
| 4. | ಪಿ. ರಮೇಶ್ | - " - |
| 5. | ಡಾ. ಭಾರತಿ ಶಂಕರ್ | - " - |
| 6. | ಡಿ. ಆರ್. ಪಾಟೀಲ್ | - " - |
| 7. | ಕೆ. ಬಿ. ಚಂದ್ರಶೇಖರ್ | - " - |
| 8. | ರಾಮಚಂದ್ರೇಗೌಡ | ವಿಧಾನ ಪರಿಷತ್ ಸದಸ್ಯರು ಹಾಗೂ ಸಮಿತಿ ಸದಸ್ಯರು |
| 9. | ಡಾ. ಎಂ. ಪಿ. ನಾಡಗೌಡ | - " - |
| 10. | ಎಂ. ಎಸ್. ಸಿದ್ದರಾಜು | - " - |

## 2002 – 2003ನೇ ಸಾಲಿನ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿ ಸದಸ್ಯರು

ಶ್ರೀಯುತರುಗಳಾದ:

| | | |
|---|---|---|
| (1) | ಬಿ.ಬಿ. ಶಿವಪ್ಪ | ವಿಧಾನಸಭೆ ಸದಸ್ಯರು ಹಾಗೂ ಅಧ್ಯಕ್ಷರು |
| (2) | ಪಿ. ರಮೇಶ್ | ವಿಧಾನಸಭಾ ಸದಸ್ಯರು ಹಾಗೂ ಸಮಿತಿ ಸದಸ್ಯರು |
| (3) | ಕೆ.ಬಿ. ಚಂದ್ರಶೇಖರ್ | -"- |
| (4) | ಡಾ: ಭಾರತೀಶಂಕರ್ | -"- |
| (5) | ಡಿ.ಆರ್. ಪಾಟೀಲ್ (ದಿನಾಂಕ: 29.4.2003 ರವರೆಗೆ) | -"- |
| (6) | ರಾಮಚಂದ್ರಗೌಡ | ವಿಧಾನ ಪರಿಷತ್ ಸದಸ್ಯರು ಹಾಗೂ ಸಮಿತಿ ಸದಸ್ಯರು |
| (7) | ಡಾ: ಎಂ.ಪಿ. ನಾಡಗೌಡ | -"- |
| (8) | ಎಂ.ಎಸ್. ಸಿದ್ದರಾಜು (ದಿನಾಂಕ: 1.12.2002 ರವರೆಗೆ) | -"- |
| (9) | ಬಿ.ಎಸ್. ಯಡಿಯೂರಪ್ಪ (ದಿನಾಂಕ: 30.4.2003 ರಿಂದ) | -"- |
| (10) | ಬೋತ ಸಚ್ಚಿದಾನಂದ (ದಿನಾಂಕ: 30.4.2003 ರಿಂದ) | -"- |

## 2003 – 2004 ನೇ ಸಾಲಿನ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ ಸದಸ್ಯರು

ಶ್ರೀಯುತರುಗಳಾದ :

| | | |
|---|---|---|
| 1. | ಬಿ. ಎಲ್. ಶಂಕರ್ | ವಿಧಾನ ಪರಿಷತ್ತಿನ ಸಭಾಪತಿಯವರು ಹಾಗೂ ಅಧ್ಯಕ್ಷರು |
| 2. | ಎಂ. ವಿ. ವೆಂಕಟಪ್ಪ | ವಿಧಾನ ಸಭೆಯ ಸಭಾಧ್ಯಕ್ಷರು ಹಾಗೂ ಸಮಿತಿ ಸದಸ್ಯರು |
| 3. | ಬಿ. ಬಿ. ಶಿವಪ್ಪ | ವಿಧಾನ ಸಭಾ ಸದಸ್ಯರು ಹಾಗೂ ಸಮಿತಿ ಸದಸ್ಯರು |
| 4. | ಎಸ್. ಕೆ. ಬೆಳ್ಳುಬ್ಬಿ | - " - |
| 5. | ಬಿ. ಜಿ. ಗೋವಿಂದಪ್ಪ | - " - |
| 6. | ಷಡಾಕ್ಷರಿ .ಕೆ | - " - |
| 7. | ಗೋಪಾಲಕೃಷ್ಣ ಎನ್. ವೈ. | - " - |
| 8. | ಯಡಿಯೂರಪ್ಪ ಬಿ. ಎಸ್. | ವಿಧಾನ ಪರಿಷತ್ ಸದಸ್ಯರು ಹಾಗೂ ಸಮಿತಿ ಸದಸ್ಯರು |
| 9. | ಡಾ: ಎಂ. ಪಿ. ನಾಡಗೌಡ | - " - |
| 10. | ಖೋತ ಸಚ್ಚಿದಾನಂದ | - " - |

## 2003–04 ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿ ಸದಸ್ಯರು

ಶ್ರೀಯುತರುಗಳಾದ :

| | | |
|---|---|---|
| 1. | ಬಿ.ಬಿ. ಶಿವಪ್ಪ | ವಿಧಾನ ಸಭಾ ಸದಸ್ಯರು ಹಾಗೂ ಅಧ್ಯಕ್ಷರು |
| 2. | ಎಸ್.ಕೆ. ಬೆಳ್ಳುಬ್ಬಿ | ವಿಧಾನ ಸಭಾ ಸದಸ್ಯರು ಹಾಗೂ ಸದಸ್ಯರು |
| 3. | ಬಿ.ಜಿ. ಗೋವಿಂದಪ್ಪ | -- " -- |
| 4. | ಕೆ. ಷಡಾಕ್ಷರಿ | -- " -- |
| 5. | ಎನ್.ವೈ. ಗೋಪಾಲಕೃಷ್ಣ | -- " -- |
| 6. | ಬಿ.ಎಸ್. ಯಡಿಯೂರಪ್ಪ | ವಿಧಾನ ಪರಿಷತ್ ಸದಸ್ಯರು ಹಾಗೂ ಸದಸ್ಯರು |
| 7. | ಡಾ ಎಂ.ಪಿ. ನಾಡಗೌಡ | -- " -- |
| 8. | ಖೋತ ಸಚ್ಚಿದಾನಂದ | -- " -- |

# 2004-05 ರ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ ಸದಸ್ಯರು

| | | |
|---|---|---|
| 1. | ಶ್ರೀ ವಿ.ಆರ್. ಸುದರ್ಶನ್<br>ಮಾನ್ಯ ಸಭಾಪತಿಗಳು,<br>ಕರ್ನಾಟಕ ವಿಧಾನ ಪರಿಷತ್ತು | ಅಧ್ಯಕ್ಷರು |
| 2. | ಶ್ರೀ ಕೃಷ್ಣ<br>ಮಾನ್ಯ ಸಭಾಧ್ಯಕ್ಷರು,<br>ಕರ್ನಾಟಕ ವಿಧಾನ ಸಭೆ | ಸದಸ್ಯರು |
| 3. | ಶ್ರೀ ಜಿ.ಎಸ್. ಗಡ್ಡದೇವರ ಮಠ<br>ವಿಧಾನ ಸಭಾ ಸದಸ್ಯರು | – ” – |
| 4. | ಶ್ರೀ ಆರ್. ಧ್ರುವನಾರಾಯಣ್<br>ವಿಧಾನ ಸಭಾ ಸದಸ್ಯರು | – ” – |
| 5. | ಶ್ರೀ ವಿಶ್ವನಾಥ್ ಪಾಟೀಲ್ ಹೆಬ್ಬಾಳ್<br>ವಿಧಾನ ಸಭಾ ಸದಸ್ಯರು | – ” – |
| 6. | ಶ್ರೀ ಕಳಕಪ್ಪ ಜಿ. ಬಂಡಿ<br>ವಿಧಾನ ಸಭಾ ಸದಸ್ಯರು | – ” – |
| 7. | ಡಾ. ವೀರಬಸವಂತರೆಡ್ಡಿ ಮುದ್ನಾಳ್<br>ವಿಧಾನ ಸಭಾ ಸದಸ್ಯರು | – ” – |
| 8. | ಡಾ. ವಿ.ಎಸ್. ಆಚಾರ್ಯ<br>ವಿಧಾನ ಪರಿಷತ್ತಿನ ಸದಸ್ಯರು | – ” – |
| 9. | ಡಾ. ಎಲ್. ಹನುಮಂತಯ್ಯ<br>ವಿಧಾನ ಪರಿಷತ್ತಿನ ಸದಸ್ಯರು | – ” – |
| 10. | ಡಾ. ಚಂದ್ರಶೇಖರ ಬಿ. ಕಂಬಾರ<br>ವಿಧಾನ ಪರಿಷತ್ತಿನ ಸದಸ್ಯರು | – ” – |

# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹ ಮಾಲಿಕೆ

## ಸಂಪಾದಕ ವರ್ಗ

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

ಶ್ರೀಯುತರುಗಳಾದ :

| | | |
|---|---|---|
| 1. | ಕೆ. ಜಯಶಂಕರಮೂರ್ತಿ | ಕಾರ್ಯದರ್ಶಿ (ಪ್ರ) |
| 2. | ವಿ. ಶ್ರೀಶ್ | ಸಭಾಪತಿಯವರ ಕಾರ್ಯದರ್ಶಿ |

### ಕರ್ನಾಟಕ ವಿಧಾನ ಸಭೆ ಸಚಿವಾಲಯ

| | | |
|---|---|---|
| 1. | ಟಿ. ರಾಜಣ್ಣ | ಕಾರ್ಯದರ್ಶಿ |
| 2. | ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| 3. | ಟಿ.ಎನ್. ಧ್ರುವಕುಮಾರ್ | ಜಂಟಿ ಕಾರ್ಯದರ್ಶಿ |
| 4. | ಕೆ.ಎನ್. ಪ್ರಭಾಕರ್‌ರಾವ್ | ಜಂಟಿ ಕಾರ್ಯದರ್ಶಿ (ಪ್ರ) |
| 5. | ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| 6. | ಕೆ. ಚಿನ್ನಸ್ವಾಮಿ | ಉಪ ಕಾರ್ಯದರ್ಶಿ |
| 7. | ಎಸ್. ಬಸವರಾಜ | ಉಪ ಕಾರ್ಯದರ್ಶಿ (ಪ್ರ) |
| 8. | ಮಿರ್ಜಾ ಮೆಹ್ದಿ | ಅಧೀನ ಕಾರ್ಯದರ್ಶಿ |
| 9. | ಹೆಚ್.ಎಸ್. ಜಗನ್ನಾಥ್ | ಅಧೀನ ಕಾರ್ಯದರ್ಶಿ |
| 10. | ಎ. ರಂಗಸ್ವಾಮಿ | ಶಾಖಾಧಿಕಾರಿ |
| 11. | ಅನಸೂಯ ಎನ್. ದೇವಗಿರಿ | ಸಹಾಯಕ ಗ್ರಂಥಪಾಲಕಿ |

## ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆಯಲ್ಲಿ ಬಿಡುಗಡೆಗೊಂಡಿರುವ ಪುಸ್ತಕಗಳು

| ಕ್ರ.ಸಂ. | ಪುಸ್ತಕಗಳು | | ದರ ರೂ. |
|---|---|---|---|
| 1. | ಕೆ. ಹನುಮಂತಯ್ಯ | - | 20-00 |
| 2. | ಎಸ್. ನಿಜಲಿಂಗಪ್ಪ | - | 15-00 |
| 3. | ಶಾಂತವೇರಿ ಗೋಪಾಲಗೌಡ | - | 15-00 |
| 4. | ವೈಕುಂಠ ಬಾಳಿಗಾ | - | 20-00 |
| 5. | ವೀರೇಂದ್ರ ಪಾಟೀಲ್ | - | 20-00 |
| 6. | ಕಡಿದಾಳ್ ಮಂಜಪ್ಪ | - | 15-00 |
| 7. | ಜಿ.ವಿ. ಹಳ್ಳಿಕೇರಿ | - | 15-00 |
| 8. | ಶ್ರೀಮತಿ ಕೆ.ಎಸ್. ನಾಗರತ್ನಮ್ಮ | - | 15-00 |
| 9. | ಡಿ. ದೇವರಾಜ ಅರಸು | - | 15-00 |
| 10. | ಕೆ.ಟಿ. ಭಾಷ್ಯಂ | - | 15-00 |
| 11. | ಟಿ.ಸಿದ್ದಲಿಂಗಯ್ಯ | - | 20-00 |
| 12. | ಕೆ. ಪುಟ್ಟಸ್ವಾಮಿ | - | 15-00 |
| 13. | ಜಗಳೂರು ಇಮಾಂ | - | 15-00 |
| 14. | ಕೆ.ಸಿ. ರೆಡ್ಡಿ | - | 20-00 |
| 15. | ಬಿ.ವಿ. ಕಕ್ಕಿಲ್ಲಾಯ | - | 20-00 |
| 16. | ಜೆ.ಬಿ. ಮಲ್ಲಾರಾಧ್ಯ | - | 15.00 |
| 17. | ಹೆಚ್.ಎಂ. ಚನ್ನ ಬಸಪ್ಪ | - | 20.00 |
| 18. | ಎಂ. ನಾಗಪ್ಪ | - | 15.00 |
| 19. | ಬಿ. ರಾಚಯ್ಯ | - | 20.00 |
| 20. | ಗಂಗಾಧರ ನಮೋಶಿ | - | 15.00 |
| 21. | ಬಿ.ಡಿ. ಜತ್ತಿ | - | 15.00 |
| 22. | ಆರ್. ಗುಂಡೂರಾವ್ | - | 20.00 |
| 23. | ಕೆ.ಎಚ್. ಪಾಟೀಲ್ | - | 15.00 |
| 24. | ಅಜೀಜ್ ಸೇಠ್ | - | 15.00 |
| 25. | ಸಿ.ಎಂ. ಆರ್ಮುಗಂ | - | 15.00 |

# ಭಾಷಾಂತರ ಪುಸ್ತಕಗಳು

| ಕ್ರ.ಸಂ. | ರಚಿತ ಪುಸ್ತಕಗಳು | | ದರ ರೂ. |
|---|---|---|---|
| (1) | ಡಾ: ಬಿ.ಆರ್. ಅಂಬೇಡ್ಕರ್ | - | 20.00 |
| (2) | ಡಾ: ರಾಮ ಮನೋಹರ ಲೋಹಿಯಾ | - | 15.00 |
| (3) | ವಿ.ಕೆ. ಕೃಷ್ಣಮೆನನ್ | - | 20.00 |
| (4) | ಡಾ: ಶ್ಯಾಂ ಪ್ರಸಾದ್ ಮುಖರ್ಜಿ | - | 20.00 |
| (5) | ಶೇಖ್ ಅಬ್ದುಲ್ಲಾ | - | 20.00 |
| (6) | ಡಾ: ರಾಜೇಂದ್ರ ಪ್ರಸಾದ್ | - | 20.00 |
| (7) | ಭೂಪೇಶ್ ಗುಪ್ತ | - | 20.00 |
| (8) | ಅನಂತಶಯನಂ ಅಯ್ಯಂಗಾರ್ | - | 20.00 |
| (9) | ಶ್ರೀಮತಿ ರಾಜಕುಮಾರಿ ಅಮೃತ್‌ಕೌರ್ | - | 20.00 |
| (10) | ಡಾ: ಚಿಂತಾಮಣಿ ಡಿ. ದೇಶಮುಖ್ | - | 20.00 |
| (11) | ಪಾನಂಪಲ್ಲಿ ಗೋವಿಂದ ಮೆನನ್ | - | 15.00 |
| (12) | ಎಸ್.ಎಂ. ಜೋಷಿ | - | 15.00 |
| (13) | ಜೈ ಸುಖಲಾಲ್ ಹಾಥಿ | - | 15.00 |

ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು. ಕಾ.ಸೂ.ಸಂ. ........../DPAL/C-8

